# “ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನ”

## (೫ನೇ ಶತಮಾನದಿಂದ ೧೮ನೇ ಶತಮಾನದ ವರೆಗೆ)

ಪಿ.ಎಚ್.ಡಿ. ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ


**ಸಂಶೋಧಕರು**

ಆರ್. ಯುವರಾಜು.

ಕನ್ನಡ ಅಧ್ಯಯನ ಕೇಂದ್ರ

ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು – ೫೬೦೦೫೬.

**ಮಾರ್ಗದರ್ಶಕರು**

ಡಾ. ಬಸವರಾಜ ಸಿ. ಕಲ್ಲುಡಿ

ಪ್ರಾಧ್ಯಾಪಕರು

ಕನ್ನಡ ಅಧ್ಯಯನ ಕೆಂದ್ರ

ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು – ೫೬೦೦೫೬.






ಕನ್ನಡ ಅಧ್ಯಯನ ಕೇಂದ್ರ,

ಜ್ಞಾನಭಾರತಿ ಆವರಣ ಬೆಂಗಳೂರು ವಿಶ್ವವಿದ್ಯಾಲಯ

ಬೆಂಗಳೂರು – ೫೬೦೦೫೬.

**೨೦೨೦**

# ಸಂಶೋಧಕರ ಪ್ರಮಾಣ ಪತ್ರ

"ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನ" (೫ನೇ ಶತಮಾನದಿಂದ ೧೮ನೇ ಶತಮಾನದ ವರೆಗೆ) ಎಂಬ ಸಂಶೋಧನಾ ಮಹಾಪ್ರಬಂಧವನ್ನು ಡಾ.ಬಸವರಾಜ ಸಿ.ಕಲ್ಗುಡಿ ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧ ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು ಈ ಮೊದಲು ಇದನ್ನು ಯಾವುದೇ ಪದವಿ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ : ಬೆಂಗಳೂರು

ಸಂಶೋಧನಾ ವಿದ್ಯಾರ್ಥಿ

ಆರ್. ಯುವರಾಜು

## ಮಾರ್ಗದರ್ಶಕರ ಪ್ರಮಾಣ ಪತ್ರ

"ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನ" (೫ನೇ ಶತಮಾನದಿಂದ ೧೮ನೇ ಶತಮಾನದ ವರೆಗೆ) ಎಂಬ ವಿಷಯವನ್ನು ಕುರಿತು ಸಂಶೋಧನಾ ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಆರ್.ಯುವರಾಜು ಅವರು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧವನ್ನು ಇದಕ್ಕಿಂತ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ನಾನು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ಮಾರ್ಗದರ್ಶಕರು

ಸ್ಥಳ : ಬೆಂಗಳೂರು ಡಾ.ಬಸವರಾಜ ಸಿ. ಕಲ್ಗುಡಿ

## ಕೃತಜ್ಞತೆಗಳು

**“ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನ” (೫ನೇ ಶತಮಾನದಿಂದ ೧೮ನೇ ಶತಮಾನದ ವರೆಗೆ)** ಎಂಬ ವಿಷಯವನ್ನು ಸಂಶೋಧನೆ ಮಾಡಲು ಮತ್ತು ಶಾಸನಗಳ ಮೇಲಿನ ನನ್ನ ಆಸಕ್ತಿಗೆ ನೀರೆರೆದು ಬೌದ್ಧಿಕ ಚಿಂತನೆಗೆ ಸಾರ ತುಂಬಿ, ಜ್ಞಾನದ ಬೆಳಕನ್ನು ಮೂಡಿಸಿ ನನ್ನಲ್ಲಿನ ಬುದ್ಧಿಯನ್ನು ಚುರುಕುಗೊಳಿಸಿ, ಹಾರೈಸಿ ನನಗೆ ಸ್ಫೂರ್ತಿ ನೀಡಿದ ನನ್ನ ಗುರುಗಳು ಮತ್ತು ಮಾರ್ಗದರ್ಶಕರಾದ **ಡಾ.ಬಸವರಾಜ ಸಿ. ಕಲ್ಗುಡಿ** ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಇವರಿಗೆ ಮೊದಲ ಹೃದಯಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಹಾಗೇಯೇ ನನ್ನ ಅಧ್ಯಯನಕ್ಕೆ ಪ್ರೋತ್ಸಾಹಿಸಿದ ಮತ್ತು ಸೂಕ್ತ ಸಲಹೆಗಳನ್ನು ನೀಡಿ ಸಹಕರಿಸಿದ ಗುರುಗಳಾದ **ಡಾ.ಕೆ.ಕೃಷ್ಣಪ್ಪ, ಕೆ.ಆರ್.ಗಣೇಶ್, ಪ್ರೊ.ಕೆ.ಆರ್.ನರಸಿಂಹನ್, ಕೆ.ಧನಪಾಲ್, ಡಾ.ದೇವರಕೊಂಡಾರೆಡ್ಡಿ, ಡಾ.ಪಿ.ವಿ.ಕೃಷ್ಣಮೂರ್ತಿ, ಡಾ.ಎಂ.ಜಿ.ನಾಗರಾಜ್ ಮತ್ತು ಡಾ.ಶಶಿಕಲಾ** (ಸಹ ಪ್ರಾಧ್ಯಾಪಕರು ಕನ್ನಡ ಅಧ್ಯನ ಕೇಂದ್ರ, ಬೆಂಗಳೂರು ವಿ.ವಿ.) ಇವರುಗಳಿಗೆ ಮತ್ತು ಕ್ಷೇತ್ರಕಾರ್ಯದಲ್ಲಿ ನನ್ನ ಜೊತೆಗಿದ್ದು ಪ್ರೀತಿಯಿಂದ ಸಹಕರಿಸಿದ ಸ್ನೇಹಿತರಾದ **ವಿಜಯಕುಮಾರ್.ಎಸ್, ಎಂ.ಜಿ.ಭೈರಪ್ಪ ಇವರಿಗೆ ಹೃದಯಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.**

ನನ್ನ ಸಂಶೋಧನೆಯ ಬಗ್ಗೆ ಸದಾ ಕಾಳಜಿಯನ್ನು ತೋರಿ ನನ್ನ ಅಧ್ಯಯನಕ್ಕೆ ಸಂಬಂಧಿಸಿದ ಉಪಯುಕ್ತ ಮಾಹಿತಿಗಳನ್ನು ನೀಡುತ್ತಿದ್ದ ಗೆಳೆಯರ ವೃಂದ ಮತ್ತು ನನ್ನ **ತಾಯಿ ಗೌರಮ್ಮ** ಹಾಗೂ ಕುಟುಂಬವರ್ಗಕ್ಕೆ ಜೊತೆಗೆ ಟೈಪಿಂಗ್ ಕಾರ್ಯದಲ್ಲಿ ಸಹಕರಿಸಿದ ಶ್ರೀಮತಿ **ಆಶಾರಾಣಿ.ಬಿ** ಇವರುಗಳಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಂಶೋಧನೆಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಕರಿಸಿದ ಎಲ್ಲಾ ಹಿರಿಯ–ಕಿರಿಯರಿಗೂ, ಅಧ್ಯಯನಕ್ಕೆ ಪೂರಕವಾದ ಗ್ರಂಥಗಳನ್ನು ಒದಗಿಸಿದ ಮಿಥಿಕ್‌ಸೊಸೈಟಿ ಮತ್ತು ಐ.ಸಿ.ಹೆಚ್.ಆರ್. ಗ್ರಂಥಾಲಯಗಳ ಸಿಬ್ಬಂದಿ ವರ್ಗದವರಿಗೆ ಮತ್ತು ನಮ್ಮ ಕನ್ನಡ ಅಧ್ಯಯನ ಕೇಂದ್ರದ ಎಲ್ಲಾ ಅಧ್ಯಾಪಕರು, ಎಲ್ಲಾ ಸಿಬ್ಬಂದಿವರ್ಗಕ್ಕೆ ಹಾಗೂ ಉತ್ತಮ ಮಾಹಿತಿ ಒದಗಿಸಿದ ಎಲ್ಲಾ ಅಂತರ್ಜಾಲ ವೆಬ್‌ಸೈಟ್‌ಗಳ ನಿರ್ವಾಹಕರಿಗೆ ಧನ್ಯವಾದಗಳನ್ನು ತಿಳಿಸುತ್ತೇನೆ.

**ಆರ್.ಯುವರಾಜು..**

# ಪರಿವಿಡಿ

# KEY TO ABBREVIATIONS

ಎ.ಕ – ಎಪಿಗ್ರಾಫಿಯ ಕನಾಟಿಕ

ಕ.ಸಾ.ಪ – ಕನ್ನಡ ಸಾಹಿತ್ಯ ಪರಿಷತ್ತು

ಇ.ದ.ಸಂ – ಇತಿಹಾಸ ದರ್ಶನ ಸಂಪುಟ

ಎಂ.ಎ.ಆರ್ – ಮೈಸೂರು ಆರ್ಕೆಲಾಜಿಕಲ್ ರಿಪೋರ್ಟ್

ಬೆಂ.ತಾ. – ಬೆಂಗಳೂರು ತಾಲ್ಲೂಕು

ನೆ.ತಾ. – ನೆಲಮಂಗಲ ತಾಲ್ಲೂಕು

ದೊ.ತಾ. – ದೊಡ್ಡಬಳ್ಳಾಪುರ ತಾಲ್ಲೂಕು

ದೇ.ತಾ. – ದೇವನಹಳ್ಳಿ ತಾಲ್ಲುಕು

ಹೊ.ತಾ. – ಹೊಸಕೋಟೆ ತಾಲ್ಲೂಕು

ಆ.ತಾ. – ಆನೇಕಲ್ ತಾಲ್ಲೂಕು

ಚ.ತಾ. – ಚನ್ನಪಟ್ಟಣ ತಾಲ್ಲೂಕು

ರಾ.ತಾ. – ರಾಮನಗರ ತಾಲ್ಲೂಕು

ಮಾ.ತಾ. – ಮಾಗಡಿ ತಾಲ್ಲೂಕು

ಚಿ.ತಾ. – ಚಿಕ್ಕ ಬಳ್ಳಾಪುರ ತಾಲ್ಲೂಕು

ಮು.ತಾ. – ಮುಳಬಾಗಿಲು ತಾಲ್ಲೂಕು

ಮಾ.ತಾ. – ಮಾಲೂರು ತಾಲ್ಲೂಕು

ಗೌ.ತಾ. – ಗೌರಿಬಿದನೂರು ತಾಲ್ಲೂಕು

ಶಿ.ತಾ. – ಶಿಡ್ಲಘಟ್ಟ ತಾಲ್ಲೂಕು

ಚಿಂ.ತಾ. – ಚಿಂತಾಮಣಿ ತಾಲ್ಲೂಕು

## ಅಧ್ಯಾಯ – ೧ ಪ್ರಸ್ತಾವನೆ

ಅ) ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆ) ಇದುವರೆಗೆ ನಡೆದಿರುವ ಅಧ್ಯಯನಗಳು

ಇ) ಅಧ್ಯಯನದ ಮಹತ್ವ

ಈ) ಅಧ್ಯಯನದ ಸ್ವರೂಪ

ಬೆಂಗಳೂರಿನ ಪ್ರಾಗೈತಿಹಾಸ ಹನ್ನೆರಡು ಸಾವಿರ ವರ್ಷಗಳಷ್ಟು ಪ್ರಾಚೀನವಾದದ್ದು, ಪ್ರಾಚೀನ ಕಾಲದಿಂದಲೂ ಜಿಲ್ಲೆಯು ಜನವಸತಿಯಿಂದ ಕೂಡಿತ್ತು ಎಂಬುದಕ್ಕೆ ಸೂಕ್ಷ್ಮಶಿಲಾಯುಗಕ್ಕೆ ಸೇರಿದ ಹಲವಾರು ಆಯುಧಗಳನ್ನು ರೇಸ್‌ಕೋರ್ಸ್, ಜಾಲಹಳ್ಳಿ ಮತ್ತು ಹೆಚ್.ಎ.ಎಲ್.ಗಳಲ್ಲಿ ೧೯೮೬ ರಲ್ಲಿ ಕಿನ್‌ಕೇಡೆಂರವರು ಕಂಡು ಹಿಡಿದಿದ್ದರು.

ಬೃಹತ್ ಶಿಲಾಯುಗಕ್ಕೆ ಸೇರಿದ ಕಲ್ಲುಗೋರಿಗಳು, ಸಮಾಧಿಗಳು ರೇಖಾಚಿತ್ರಗಳು ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯ ಕಣ್ಣೂರು, ಜಾಲಹಳ್ಳಿ, ಭೈರಸಂದ್ರ, ಬೇಗೂರು, ಚಿಕ್ಕಜಾಲ, ದೊಡ್ಡಜಾಲ, ಬೆಳ್ಳಂದೂರು, ಹುಳಮಾವು, ಬನ್ನೇರುಘಟ್ಟ, ಚೌಡಸಂದ್ರ, ಬೂದಿಹೊಲ ಮುಂತಾದ ಸ್ಥಳಗಳಲ್ಲಿ ದೊರೆತಿದೆ. ಅದು ಅಲ್ಲದೆ ಕ್ರಿ.ಪೂ.೧೦೦೦ ವರ್ಷಗಳಂದ ಮಾನವನು ಕೃಷಿಯಲ್ಲಿ ನಿರತನಾಗಿದ್ದನು ಎಂಬುದಕ್ಕೆ ಜಡಿಗೇನಹಳ್ಳಿಯಲ್ಲಿ ಮತ್ತು ಕಣ್ಣೂರಿನಲ್ಲಿ ದೊರೆತ ಭತ್ತದ ಹೊಟ್ಟು ಕುರುಹುಗಳಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಅಪೂರ್ವ ನೆಲೆಗಳು ಸಾವನದುರ್ಗದ ಇಟ್ಟಿಗೆಬೈಲು, ಹೂಜಿಗಲ್ಲು, ಸೋಲೂರು ಹೋಬಳಿಯ ಕಲ್ಯಾಣಪುರ, ನೆಲಮಂಗಲ ತಾಲ್ಲೂಕಿನ ಆಲದಹಳ್ಳಿ, ಮೈಲನಹಳ್ಳಿ, ಎಲೆಕ್ಯಾತನಹಳ್ಳಿ, ಬಂಡಿಚಿಕ್ಕನಹಳ್ಳಿ, ಶ್ರೀನಿವಾಸಪುರ, ಮಹದೇವಪುರ, ದೊಡ್ಡಬಳ್ಳಾಪುರ ತಾಲ್ಲೂಕಿನ ಸಾಸಲು ಹೋಬಳಿಯ ಉಜ್ಜನಿ, ಹೊಸಹಳ್ಳಿ, ಜಾಲಗೆರೆ, ಸೋಲುಕುಂಟೆ, ಹಾಲುಚಿಲುಮೆ, ಬೆನಕಿನಮಡಗು, ಕಲ್ಕುಂಟೆ, ಆಲಪನಹಳ್ಳಿ, ಭಕ್ತರಹಳ್ಳಿ, ಏಳಟ್ಟಿ, ಮಾಡೇಶ್ವರ, ಕನಕೇನಹಳ್ಳಿ, ಸಾಸಲು, ಬೂಚನಹಳ್ಳಿ, ಬೊಮ್ಮನಹಳ್ಳಿ, ಭೈರಾಪುರ, ಮಾಕಳ, ಸೊಣ್ಣೇನಹಳ್ಳಿ, ತೂಬಗೆರೆ ಹೋಬಳಿಯ ಲಗುಮೇನಹಳ್ಳಿ, ಕಲ್ಲುಕೋಟೆ, ಮೆಳೆಕೋಟೆ, ಗುಂಜೂರು, ಕಸಬಾ ಹೋಬಳಿಯ ಅರಳುಮಲ್ಲಿಗೆ, ಜಕ್ಕಸಂದ್ರ, ದೇವನಹಳ್ಳಿ ತಾಲ್ಲೂಕಿನ ಅರದೇಶನಹಳ್ಳಿ, ಕೊಯಿರಾ, ಚಿಕ್ಕಜಾಲ, ಜ್ಯೋತಿಪುರ, ಬ್ಯಾಡರಹಳ್ಳಿ, ಮನಗೊಂಡನಹಳ್ಳಿ, ಹೊಸೂರು ಹಾಗೂ ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ ಮುಂತಾದ ಸ್ಥಳಗಳಲ್ಲಿ ನೂರಾರು ಬೃಹತ್ ಶಿಲಾಯುಗದ ಅವಶೇಷಗಳಾದ ವಿಭಿನ್ನ ಮಾದರಿಯ ಸಮಾಧಿಗಳ ಜೊತೆಗೆ ನಿಲುಸುಗಲ್ಲುಗಳು, ದೊರೆತಿರುತ್ತದೆ. ರಾಮನಗರದ ಹತ್ತಿರವಿರುವ ಬಸವಪುರ, ಗಂಗರಾಜರಹಳ್ಳಿ, ಕೆಂಚಿಗರಹಳ್ಳಿ, ವಡೇರಹಳ್ಳಿ, ಅರಳೀಮರದದೊಡ್ಡಿ ಮುಂತಾದ ಸ್ಥಳಗಳಲ್ಲಿ ನೂರಾರು ಬೃಹತ್ ಶಿಲಾಯುಗದ ವಿಭಿನ್ನ ಮಾದರಿಯ ಸಮಾಧಿಗಳ ಜೊತೆಗೆ ನಿಲುಸುಗಲ್ಲುಗಳು ಹೇರಳವಾಗಿದ್ದು, ರೇಖಾಚಿತ್ರಗಳು ಬೆಳಕಿಗೆ ಬಂದಿದೆ. ಬೃಹತ್ ಶಿಲಾಯುಗದ ಕಾಲದಲ್ಲಿ ಕಬ್ಬಿಣದ ಆಯುಧಗಳು ಸಮಾಧಿಗಳಲ್ಲಿ ದೊರೆಯುವುದು ಸಾಮಾನ್ಯವಾದ ಸಂಗತಿ, ಆದರೆ

ಈ ಪ್ರದೇಶಗಳಲ್ಲಿ ಕಬ್ಬಿಣದ ಆಯುಧಗಳಿಗೆ ಬದಲಾಗಿ ಕಬ್ಬಿಣದ ಉಂಡೆಗಳು ಕಾಣಬರುತ್ತದೆ. ಬಹುಶಃ ಮಾದಿಪುರ ಲೋಹದ ವಸ್ತುಗಳ ತಯಾರಿಕಾ ಕೇಂದ್ರವಾಗಿತ್ತೆಂದೆನಿಸುತ್ತದೆ.

ಕ್ರಿ.ಪೂ.ದಲ್ಲೆ ಜನವಸತಿ ಪ್ರದೇಶವಾಗಿದ್ದು, ವ್ಯಾಪಾರಾಭಿವೃದ್ಧಿ ಚಟುವಟಿಕೆಗಳು ನಡೆಯುತ್ತಿದ್ದವು ಎಂಬುದಕ್ಕೆ ೧೮೯೫–೯೬ ರಲ್ಲಿ ಯಶವಂತಪುರ, ಹೆಚ್.ಎ.ಎಲ್ ನಲ್ಲಿ ರೋಮನ್ ಸಾಮ್ರಾಜ್ಯದ ಚಕ್ರವರ್ತಿಯಾದ ಆಗಸ್ಟನ್, ಟೈಬೀರಿಯಸ್, ಕಾಲಿಗುಲಾ (ಕ್ರಿ.ಶ ೩೭–೪೧) ದ ೨೯೦ ಬೆಳ್ಳಿ ನಾಣ್ಯಗಳು ದೊರೆತಿದೆ.

## ಬೆಂಗಳೂರು ನಾಮ ನಿಷ್ಪತ್ತಿ

ಬೆಂಗಳೂರು ಸ್ಥಳನಾಮ ನಿಷ್ಪತ್ತಿ ಬಗ್ಗೆ ಹಲವಾರು ಐತಿಹ್ಯಗಳು ಹಾಗೂ ಹಲವು ವಿದ್ವಾಂಸರು ಹಲವಾರು ರೀತಿಯ ಅಭಿಪ್ರಾಯಗಳನ್ನು ನೀಡಿದ್ದಾರೆ. ಬೆಂದಕಾಳೂರಿಂದ ಬೆಂಗಳೂರು ಆಯಿತು ಎಂಬ ಐತಿಹ್ಯದಲ್ಲಿ ಒಮ್ಮೆ ಹೊಯ್ಸಳ ದೊರೆ ಬಲ್ಲಾಳ ದೇವನು ಅಶ್ವರೂಢನಾಗಿ ತಿರುಗಿ ತಿರುಗಿ ದಣಿದು ಹಸಿವು ಬಾಯಾರಿಕೆಗಳನ್ನು ತಾಳಲಾರದೆ ಒಂದು ಗುಡಿಸಲಿನಲ್ಲಿದ್ದ ಮುದುಕಿಯ ಬಳಿಗೆ ಬಂದು ತಿನ್ನಲು ಏನಾದರೂ ತಿಂಡಿಯನ್ನು, ನೀರನ್ನು ಕೊಡುವಿರಾ ಎಂದು ಕೇಳಿದನು. ಆಗ ಆ ಮುದುಕಿಯು ತನ್ನಲಿದ್ದ ಬೆಂದಕಾಳನ್ನು, ನೀರನ್ನು ಕೊಟ್ಟು ಉಪಚರಿಸಿದಳಂತೆ ಅದಕ್ಕೆ ರಾಜನು ಸಂತುಷ್ಟನಾಗಿ ಆ ಮುದುಕಿಗೆ ವಿಶೇಷ ಬಹುಮಾನ ನೀಡಿ ಆ ಗುಡಿಸಲಿದ್ದ ಹಳ್ಳಿಗೆ ಬೆಂದಕಾಳೂರು (ಬೆಂದಕಾಳು + ಊರು) ಎಂದು ಹೆಸರಿಟ್ಟನು. ನಂತರ ಬೆಂದಕಾಳೂರು ಬೆಂಗಳೂರು ಆಯಿತೆಂದು, ಇದೇ ಕಥೆಯು ಎಲ್ಲ ಕಡೆ ಹೆಚ್ಚು ಪ್ರಸಿದ್ಧಿಯಾಗಿದೆ. ಇದೇ ಬೆಂದಕಾಳೂರು ಕಥೆಯು ಮಾಗಡಿ ಸುತ್ತ ಮುತ್ತ ಪ್ರದೇಶಗಳಲ್ಲಿ ಕೆಂಪೇಗೌಡನ ಹೆಸರಿನಲ್ಲಿ ಚಾಲ್ತಿಯಲ್ಲಿದೆ. ವಾಸ್ತವವಾಗಿ ಈ ಕಥೆಗೆ ಯಾವ ಪುರಾವೆಗಳು ಇಲ್ಲ. ಹೊಯ್ಸಳರ ಯಾವ ಶಾಸನಗಳಲ್ಲೂ ಬೆಂದಕಾಳೂರು ಉಲ್ಲೇಖವಿಲ್ಲ. ಕ್ರಿ.ಶ.೧೨೬೭ ರ ಹೊಯ್ಸಳರ ಶಾಸನದಲ್ಲಿ ನೇರವಾಗಿ ಬೆಂಗಳೂರು (ವೆಂಗಳೂರು) ಎಂದೇ ಉಲ್ಲೇಖವಾಗಿದೆ.

ಇನ್ನೊಂದು ಕಥೆಯಂತೆ ಬೆಂಗಳೂರು ನಗರ ಸ್ಥಾಪನೆಗೆ ಮೊದಲು ಹಿರಿಯ ಕೆಂಪೇಗೌಡನು ಆ ಪ್ರದೇಶದಲ್ಲಿದ್ದ ದೊಡ್ಡಕಾಡನ್ನು ಕಾಡಿನ ಮರಗಳನ್ನು ಕಡಿದು ಸುಡಿಸಿದನಂತೆ ಬಯಲು ಪ್ರದೇಶವನ್ನು ನಿರ್ಮಿಸಿ, ಹೊಸ ಪಟ್ಟಣವನ್ನು ಕಟ್ಟಿಸಿದನಂತೆ ಆಗ ಜನ ಈ ಹೊಸ ಪಟ್ಟಣವನ್ನು ಬೆಂದಕಾಡೂರು ಎಂದು ಕರೆಯ ತೊಡಗಿದಂತೆ ಬೆಂದಕಾಡೂರು ದಿನ ಕಳೆದಂತೆ ಬೆಂಗಾಡೂರು ಆಗಿ ಮುಂದೆ ಬೆಂಗಳೂರು ಆಯಿತಂತೆ.

ಬೆಂಗಳೂರು ನೆಲೆಗೊಂಡಿರುವ ಪ್ರದೇಶವು ಬೆಣಚ ಕಲ್ಲುಗಳಿಂದ ಕೂಡಿರುವಂತಾಗಿ ಹೇರಳವಾಗಿ ಬೆಣಚು ಕಲ್ಲುಗಳು ದೊರೆಯುತಿದ್ದರಿಂದ ಬೆಣಚುಕಲ್ಲಿನೂರು, ಬೆಣಚು ಕಲ್ಲೂರು ಎಂದಾಗಿ ಕ್ರಮೇಣ ಬೆಣಚುಕಲ್ ಎಂಬುದು ಬೆನಗಲ್ ಎಂದಾಗಿ, ಬೆನಗಲ್ಲೂರು, ಬೆಂಗಳೂರು ಆಗಿರಬಹುದು ಎಂದು ಒಂದು ವಾದವಾದರೆ.

ಬೆಂಗಳೂರು ಪರಿಸರದಲ್ಲಿ ರಕ್ತ ಹೊನ್ನೆ ಮರಗಳು ಹೇರಳವಾಗಿದ್ದು, ಹಳಗನ್ನಡದಲ್ಲಿ ಬೇಂಗ, ಬೆಂಗ ತಮಿಳುನಾಡಿನಲ್ಲಿ ವೆಂಗ, ಬೇಂಗ ಅಥವಾ ರಕ್ತ ಹೊನ್ನೆ ಎಂಬ ಸಸ್ಯದಿಂದ ಬೇಂಗ ಊರು ಆಗಿ ಬೆಂಗಳೂರು ಆಗಿರಬೇಕು. ಸಾಮಾನ್ಯವಾಗಿ ವ್ಯಕ್ತಿ ಅಥವಾ ಸ್ಥಳ ನಾಮಗಳು ಆರಂಭದ ಅಕ್ಷರದ ದೀರ್ಘವು ನಂತರ ಸೊನ್ನೆ ಬಂದಾಗ ಆಡುಮಾತಿನಲ್ಲಿ ಕಣ್ಮರೆಯಾಗಿ ಬೇಂಗ, ಬೆಂಗ ಎಂದು ಆಗಿದೆ. ಎಂಬ ವಾದ ಒಂದಾದರೆ,

ಮತ್ತೊಂದು ವಾದದ ಪ್ರಕಾರ ಗಂಗರು ಬೆಂಗಾವಲಿಗೊಸ್ಕರ ನಿರ್ಮಿಸಿದ ಊರು ಬೆಂಗಾವಲೂರು ಆಗಿ ಮುಂದೆ ಬೆಂಗಳೂರು ಆಯಿತು ಎಂದು, ವೆಂಕಟ ಎಂಬುದರಿಂದ ಬೆಂಗಳೂರು ಆಯಿತು ಎಂಬ ವಾದವಿದ್ದರು[೧]. ವೆಂಕಡನನ್ನು ಬೆಂಕಡ ಅಥವಾ ಬೆಂಗಡ ಎಂದು ಕನ್ನಡದಲ್ಲಿ ಎಲ್ಲೂ ಕರೆದಿಲ್ಲ. ಬೆಂದಕಾಳೂರಿನ ಐತಿಹ್ಯವಾಗಲಿ, ಬೆಂಗ ಅಥವಾ ರಕ್ತ ಹೊನ್ನಮರದ ನಿಷ್ಪತ್ತಿಯಾಗಲಿ, ವೆಂಗ ಪದಗಳ ಉತ್ಪತ್ತಿಗಳು ಈ ಎಲ್ಲಾ ವಾದಗಳು ಬೆಂಗಳೂರು ಸ್ಥಳನಾಮ ಉತ್ಪತ್ತಿಗೆ ಸಮೀಪದಲ್ಲಿರೂ ಇನ್ನು ನಿಖರವಾದ ಮಾಹಿತಿ / ವಾದ ಬೇಕೆನ್ನಿಸುತ್ತದೆ.

ಪ್ರಚಲಿತವಾಗಿರುವ ವೀರ ಬಲ್ಲಾಳನ ಬೆಂದಕಾಳೂರಿನ ಕಥೆಗಿಂತ ಸುಮಾರು ೨ ಶತಮಾನಗಳ ಹಿಂದೆಯೇ ಹಾಗೂ ಹೊಸ ಬೆಂಗಳೂರು ನಗರ ರೂಪುಗೊಳ್ಳುವ ಮುಂಚೆ ಬೆಂಗಳೂರು ಹೆಸರಿನ ಊರು ಅಸ್ಥಿತ್ವದಲ್ಲಿತ್ತು ಎಂಬುದಕ್ಕೆ ಗಂಗರಸರ ಮಾಂಡಲೀಕನಾಗಿದ್ದ ನಾಗರತ್ತರನು ಬೆಂಪೂರು-೧೨ ರ ಪ್ರಾಂತ್ಯಾಧಿಕಾರಿಯಾಗಿ ಬೇಗೂರಿನಲ್ಲಿ ಕಟ್ಟಿಸಿದ ನಾಗೇಶ್ವರ ದೇವಾಲಯದ ಮುಂಭಾಗದ ಗೋಡೆಯ ಮೇಲಿನ ಬುಟ್ಟಣಶೆಟ್ಟಿ ಎಂಬ ಸೈನಿಕನ ವೀರ ಮರಣದ ಸ್ಮಾರಕಶಿಲೆಯಾದ ಏಳು ಸಾಲುಗಳುಳ್ಳ ವೀರಗಲ್ಲು ಕನ್ನಡ ಶಾಸನದಲ್ಲಿ ಆನೇ ಸಾಲಿನಲ್ಲಿ ಬೆಂಗಳೂರ ಎಂಬ ಪದ ಉಲ್ಲೇಖವಾಗಿದ್ದು, ಕ್ರಿ.ಶ.೮೯೦ ರ ಅವಧಿಯಲ್ಲಿ ಬೆಂಗಳೂರು ಎಂಬ ಊರು ಅಸ್ತಿತ್ವದಲ್ಲಿತ್ತು ಎಂಬುದನ್ನು ತಿಳಿಸುತ್ತದೆ. ಬೆಂಗಳೂರು ನಾಮ ಉಲ್ಲೇಖದ ಈ ಶಾಸನದ ಪಾಠ :-

೧. ಶ್ರೀಮತ್ ನಾಗತ

---

[೧] ಎಂ.ಜಿ. ಮಂಜುನಾಥ :- ಬೆಂಗಳೂರು ಸ್ಥಳನಾಮ ನಿಷ್ಪತ್ತಿ, ಬೆಂಗಳೂರು ದರ್ಶನ, ಸಂ.೧, ಪು.ಸಂ-೧೭.

೨. ರನ ಮನೆವಗ

೩. ತಿ ಪೆರ್ವೊಣ ಶೆಟ್ಟಿ

೪. ಬೆಂಗಳೂರ ಕಾಳೆ

೫. ಗದೊಳ್ ನಾಗ

೬. ತರನ ಮಗಂ ಬುಟ್ಟಣ

೭. ಪತಿ ಸತ್ತಂ[೨] ಎಂಬ ಈ ಶಾಸನದ ಪಾಠವನ್ನು ಆರ್. ನರಸಿಂಹಚಾರ್‌ರವರು ಎಂ.ಎ.ಆರ್. **(ಚಿತ್ರ ಸಂಖ್ಯೆ – ೧)** ನಲ್ಲಿ ಮತ್ತು ಬಿ.ಆರ್. ಗೋಪಾಲರವರು ಎಪಿಗ್ರಾಫಿಯಾ ಕರ್ನಾಟಿಕ ಬೆಂಗಳೂರು ಸಂಪುಟ ೯ ರ ಅನುಬಂಧದಲ್ಲಿ ಸಹ ಬೆಂಗಳೂರು ಎಂದೇ ಉಲ್ಲೇಖಿಸಿದ್ದಾರೆ. ಆದರೆ ಮೂಲ ಶಾಸನವನ್ನು **(ಚಿತ್ರ ಸಂಖ್ಯೆ – ೨)** ಗಮನಿಸಿದರೆ ಬೆಂಗುಳೂರು ಎಂದಿರುವುದನ್ನು ವಿದ್ವಾಂಸರು ಯಾಕೆ ಬೆಂಗಳೂರು ಎಂದು ಹೇಳಿದ್ದರು ಅನ್ನೋ ಅನುಮಾನಗಳು ಕಾಡುತ್ತದೆ.

ಹಾಗೇಯೇ ಮಡಿಮಾಳದ ಸೋಮೇಶ್ವರ ದೇವಾಲಯದ ತಳಪಾದದ ಕಲ್ಲಿನ (ಚಿತ್ರ ಸಂಖ್ಯೆ – ೩) ಮೇಲೆ ಹೊಯ್ಸಳರ ಕಾಲದ ಕ್ರಿ.ಶ.೧೨೬೭ರ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿದ ಮಾಹಿತಿಯ ತಮಿಳು ಶಾಸನದಲ್ಲಿ ವೆಂಗಳೂರು ಉಲ್ಲೇಖವಿದೆ[೩]. ತಮಿಳಿನಲ್ಲಿ ಬಕಾರದ ಬದಲಾಗಿ ವಕಾರ ಬಳಸುತ್ತಾರೆ. ಬೇಗೂರು ಮತ್ತು ಮಡಿವಾಳ ಶಾಸನದಲ್ಲಿ ಉಲ್ಲೇಖವಾಗಿರುವ ಬೆಂಗಳೂರು, ವೆಂಗಳೂರು ಎರಡು ಒಂದೇ ಆಗಿರಬಹುದು.

ಇದರ ಜೊತೆಗೆ ವಿಜಯನಗರದ ಅರಸ ಸಾಳ್ವ ನರಸಿಂಹನ ಆಳ್ವಿಕೆಯಾವಧಿಯ ಕ್ರಿ.ಶ.೧೪೦೨ ರ ತಮಿಳುನಾಡಿನ ಡೆಂಕಣಕೋಟೆ ತಾಲ್ಲೂಕಿನ ಗುಮ್ಮಳಾಪುರದ ತಾಮ್ರಶಾಸನದಲ್ಲಿ ಬೆಂಗಳೂರು ಸ್ಥಳದ ವಳಿತವಾದ ಗುಮ್ಮಳಾಪುರ ಹೋಬಳಿಗೆ ಸೇರುವ ರಾಮಸಮುದ್ರ ಮತ್ತು ತಮ್ಮಪುರ ಗ್ರಾಮಗಳನ್ನ ದಾನ ನೀಡಿರುವ ಉಲ್ಲೇಖವಿದ್ದು, ಈ ಗುಮ್ಮಳಾಪುರವು ಬೆಂಗಳೂರು ವಳಿತಕ್ಕೆ ಅಂದರೆ ಆಡಳಿತಕ್ಕೆ ಸೇರಿತ್ತೆಂದರೆ ಬೆಂಗಳೂರು ಕ್ರಿ.ಶ.೧೪೦೨ ರ ವೇಳೆಗೆ ವಿಸ್ತಾರವಾದ ದೊಡ್ಡ ಊರಾಗಿದ್ದು, ಆಡಳಿತದ ಕೇಂದ್ರವಾಗಿತ್ತೆನಿಸುತ್ತದೆ.

ದಿ.ಕರ್ಲಮಂಗಲ ಶ್ರೀಕಂಠಯ್ಯನವರ ಕೆಂಪೇಗೌಡರ ಜಯಪ್ರಶಸ್ತಿ ಎಂಬ ಗ್ರಂಥದಲ್ಲಿ ಈಗ ಬೆಂಗಳೂರಿನಲ್ಲಿ ಉಳಿದಿರುವ ಕೋಟೆಗೆ ಹೊಂದಿಸಿ ಕಟ್ಟುವಾಗಲೇ ಜೋಡಿಸಿರುವ ಹೊಯ್ಸಳ

---

[೨] ಎಮ್.ಎ.ಆರ್. ೧೯೧೫, ಪು.ಸಂ-೪೧ ಮತ್ತು ಎ.ಕ-೯, ಅನುಬಂಧ, ಬೆಂ.೧೭೪, ಕ್ರಿ.ಶ.೮೯೦, ಬೇಗೂರು.

[೩] ಎ.ಕ-೯, ಬೆಂ.೬೮, ಕ್ರಿ.ಶ.೧೨೬೭, ತಮಿಳು, ಮಡಿವಾಳ.

ಲಾಂಛನವಾದ ಸಳನು ಹುಲಿಯನ್ನು ತಿವಿದು ಕೆಡುವುತ್ತಿರುವ ವಿಗ್ರಹವನ್ನು ನೋಡಿದರೆ ಈ ಕೋಟೆಯನ್ನು ಹೊಯ್ಸಳರ ಆಡಳಿತದಲ್ಲಿ ಕಟ್ಟಿರಬೇಕೆಂದು ಯಾರಿಗಾದರೂ ಗೊತ್ತಾಗುವುದು ಎಂದಿದ್ದಾರೆ. ವಾಸ್ತವವಾಗಿ ಅದೊಂದು ಹುಲಿಬೇಟೆ ವೀರಗಲ್ಲಾಗಿದೆ. ವೀರನ ಕಾಲ ಬಳಿ ನಾಯಿಯ ಚಿತ್ರವನ್ನು ಕಾಣಬಹುದು. ಕ್ರಿ.ಶ.೧೧೮೯ ರಲ್ಲಿ ಹೊಯ್ಸಳ ನರಸಿಂಹ ದೇವನಾಳ್ವಿಕೆಯಲ್ಲಿ ಯಲಹಂಕದ ನೆಲೆವೀಡಿನಲ್ಲಾಳುತ್ತಿದ್ದ ಮಹಾಮಂಡಳೇಶ್ವರ ದೇಚರಸನು ಬೆಂಗಳೂರು ಕೋಟೆಯನ್ನು ಕಟ್ಟಿದ್ದು, ಅದರ ಹಳೆಯ ಹೆಸರು ದೇವರಾಯ ಪಟ್ಟಣದ ಪ್ರತಿನಾಮ ಬೆಂಗಳೂರೆಂದು. ಆದರೆ ಈ ವಿವರಗಳಿಗೆ ಯಾವುದೇ ನಿಖರವಾದ ಆಧಾರಗಳಿಲ್ಲ. ಬೆಂಗಳೂರು ಕೋಟೆಯ ನೆರೆಹೊರೆಯಲ್ಲಿ ಹೊಯ್ಸಳ ಕಾಲದ ಯಾವುದೇ ವಾಸ್ತುಶಿಲ್ಪ ಇಲ್ಲದೇ ಇರುವುದು ಆಶ್ಚರ್ಯದ ಸಂಗತಿ ಆದರೆ ಹೊಸ ಬೆಂಗಳೂರು ನಗರವು ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಅಸ್ತಿತ್ವಕ್ಕೆ ಬಂದಿರುತ್ತದೆ. ಹಾಗೂ ಬೆಂಗಳೂರಿನ ಕಲ್ಲಿನ ಕೋಟೆಯನ್ನು ಕಟ್ಟಿಸಿದವನು ಹೈದರಲಿಖಾನ್.

ದೇವರಾಯನಿಗೆ ಆಯುರಾರೋಗ್ಯ, ಐಶ್ವರ್ಯವೃದ್ಧಿಯಾಗಲೆಂದು ಕ್ರಿ.ಶ.೧೪೩೧ ರಲ್ಲಿ ಸೋಮದೇವರಿಗೆ ದಾನ ನೀಡಿದ ಕೊಡಿಗೆಹಳ್ಳಿ ಶಾಸನದಲ್ಲಿ ಉಲ್ಲೇಕವಾದ ದೇವರಾಯಪುರಕ್ಕೆ[೪] ಪ್ರತಿನಾಮ ಬೆಂಗಳೂರು ಎಂಬ ವಾದವಿದೆ. ಆದರೆ ಕೋಲಾರದ ತಾಮ್ರ ಶಾಸನದಲ್ಲಿ ಬೆಂಗಳೂರು ದ್ಯಾವರಾಯಪಟ್ಟಣ[೫] ಎಂಬ ಉಲ್ಲೇಖದ ಪ್ರಕಾರ ಬೆಂಗಳೂರಿಗೆ ಸೇರಿದ ಅಥವಾ ಬೆಂಗಳೂರು ಸನಿಹದಲ್ಲಿ ದೇವರಾಯ ಪಟ್ಟಣವೆಂಬ ಊರುಯಿದ್ದು, ದೇವರಾಯ ಪಟ್ಟಣವೇ ಬೆಂಗಳೂರಾಗಿಲ್ಲ, ಬೆಂಗಳೂರು ಬೇರೆ, ದೇವರಾಯ ಪಟ್ಟಣವೇ ಬೇರೆ ಬೇರೆಯಾಗಿದೆ.

ಇದಲ್ಲದೆ ಹಿರಿಯ ಕೆಂಪೇಗೌಡನು ಕ್ರಿ.ಶ.೧೫೩೭ ರಲ್ಲಿ ಹೊಸ ನಗರ ನಿರ್ಮಾಣ ಮಾಡಿದಕ್ಕೆ ಅಚ್ಯುತರಾಯನು ದಾನ ಕೊಟ್ಟ ಹೋಬಳಿಗಳಲ್ಲಿ ಹಳೇ ಬೆಂಗಳೂರು ಉಲ್ಲೇಖವಿರುವುದನ್ನ ಗಮನಿಸಿದರೇ ಕೆಂಪೇಗೌಡನು ಬೆಂಗಳೂರು ನಗರ ನಿರ್ಮಾಣಕ್ಕೆ ಮೊದಲೇ ಹೋಬಳಿ ಮಟ್ಟದ ಊರಾದ ಬೆಂಗಳೂರು ಇರುವುದನ್ನ ಖಚಿತಪಡಿಸಿ ಕೊಳ್ಳಬಹುದು.

ಹಾಗಾದರೇ ಶಾಸನೋಕ್ತವಾಗಿರುವ ಬೆಂಗಳೂರು ಎಲ್ಲಿತ್ತು ಎಂಬ ಬಗ್ಗೆ ಅನೇಕ ವಿದ್ವಾಂಸರು ಹಲವಾರು ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ದೇ.ಜ.ಗೌ ರವರು ಬೆಂಗಳೂರು ಕೆಂಪೇಗೌಡ ಎಂಬ ತಮ್ಮ ಕೃತಿಯಲ್ಲಿ ಹಿರಿಯ ಕೆಂಪೇಗೌಡನ ಪತ್ನಿ ಚೆನ್ನಾಂಬೆಯ ಊರಾದ ಬೆಂಗಳೂರು

[೪] ಎ.ಕ-೯, ಬೆಂ.೧೨೭, ಕ್ರಿ.ಶ.೧೪೩೧, ಕೊಡಿಗೆಹಳ್ಳಿ.
[೫] ಎ.ಕ-೧೦, ಕೋ.ತಾ.೨೫೮, ಕ್ರಿ.ಶ ೧೭೬೧, ತಾಮ್ರಶಾಸನ, ಕೋಲಾರ.

ಯಲಹಂಕಕ್ಕೆ ಎಂಟು ಮೈಲಿ ದೂರದಲ್ಲಿತ್ತು. ಹೆಬ್ಬಾಳದ ಒಳಗೆರೆಗೆ ದಕ್ಷಿಣದಲ್ಲಿದ್ದ ಆ ಊರು ಒಂದು ಸಣ್ಣ ಹಳ್ಳಿ ಅದೇನೂ ಹಣವಂತರ ಹಳ್ಳಿಯಾಗಿರಲಿಲ್ಲ ಎಂದಿದ್ದಾರೆ. ಮುಂದೆ ಕೆಂಪೇಗೌಡನು ನಗರ ಸ್ಥಾಪನೆ ಮಾಡಿದ ನಂತರ ತಾನು ಕಟ್ಟಿದ ಊರನ್ನು ಶಿವನಸಮುದ್ರವೆಂದು ಕರೆಯಲು ಇಷ್ಟವಿರದೆ ತನ್ನ ತಾಯಿ, ಪತ್ನಿ, ಸೊಸೆ ಆ ಮೂರು ಜೀವಗಳಲ್ಲಿ ಭಾಗ್ಯ ದೇವತೆಯ ಬೇರೆ ಬೇರೆ ರೂಪಗಳನ್ನು ಕಂಡಿದ್ದನು. ಬಡ ಹಳ್ಳಿಯಾದ ಆ ಬೆಂಗಳೂರು ಆ ಮೂವರು ತ್ರಿಮೂರ್ತಿಗಳಿಗೂ ತವರೂರಾಗಿದ್ದರಿಂದ ಅದೇ ಹೆಸರನ್ನು ಹೊಸ ಊರಿಗೆ ಇಟ್ಟು ಬೆಂಗಳೂರಾಯಿತು ಎಂದು.

ಎಸ್.ಕೆ.ನರಸಿಂಹಯ್ಯರವರು ಮಾಗಡಿ ಕೆಂಪೇಗೌಡ ಎಂಬ ಗ್ರಂಥದಲ್ಲಿ ಶಿವನಸಮುದ್ರವೆಂಬ ಗ್ರಾಮಕ್ಕೆ ವಾಯುವ್ಯ ಮೂಲೆಯಲ್ಲಿ ಹೆಬ್ಬಾಳದ ಒಳಗೆರೆಗೆ ದಕ್ಷಿಣದಲ್ಲಿ ಅಂದರೆ ಈಗಿನ ಕೊಡಿಗೆಹಳ್ಳಿ ಗ್ರಾಮವಿರುವ ಸ್ಥಳದಲ್ಲಿ ಕಾಡಿನ ಮಧ್ಯೆ ಬೆಂಗಳೂರೆಂಬ ಒಂದು ಸಣ್ಣ ಹಳ್ಳಿ ಇದ್ದಿತು. ಹಳೇ ಬೆಂಗಳೂರು ಎಂಬ ಒಂದು ಚಿಕ್ಕ ಗ್ರಾಮವು ಹೆಬ್ಬಾಳ–ಕೊಡಿಗೇನಹಳ್ಳಿ ಪರಿಸರದಲ್ಲಿದ್ದು, ತಾವರೆಕೆರೆ (ಬಿ.ಟಿ.ಎಂ) ವರೆಗೂ ವಿಸ್ತರಿಸಿರ ಬಹುದು. ಸಿ.ಹಯವದನರಾವ್ ರವರು ಮೈಸೂರು ಗ್ಯಾಸೆಟಿಯರ್ ನಲ್ಲಿ "ಓಲ್ಡ್ ಬೆಂಗಳೂರು ಸಿಟುಏಟೆಡ್ ಟು ನಾರ್ಥ್ ಆಫ್ ಕೊಡಿಗೆಹಳ್ಳಿ"[೬] ಎಂದು ಅದೇ ಕೆಂಪೇಗೌಡ ಹೊಸ ನಗರಕ್ಕೆ ಬೆಂಗಳೂರು ಹೆಸರಿಟ್ಟ ಮೇಲೆ ಮೊದಲಿನ ಬೆಂಗಳೂರಿಗೆ ಹಳೇ ಬೆಂಗಳೂರು ಎಂದು ಹೆಸರಿಟ್ಟನು. ಯಲಹಂಕದ ದಕ್ಷಿಣ ಭಾಗದಲ್ಲಿ ಹಳೇ ಬೆಂಗಳೂರು ಇದ್ದಿರಬಹುದು.

ಹೆಚ್.ಎಸ್.ಗೋಪಾಲರಾವ್‌ರವರು ಬೇಗೂರಿನ ಶಾಸನದಲ್ಲಿ ಉಲ್ಲೇಖಿತ ಬೆಂಗಳೂರು, ಕೊಡಿಗೇನಹಳ್ಳಿ ಸಮೀಪದ ಹಳೆಯ ಬೆಂಗಳೂರು, ಕ್ರಿ.ಶ.೧೫೩೭ ರಲ್ಲಿ ಹಿರಿಯ ಕೆಂಪೇಗೌಡ ನಿರ್ಮಿಸಿದ ಬೆಂಗಳೂರು ಹೀಗೆ ಬೆಂಗಳೂರು ಹೆಸರಿನ ೩ ಊರು ಅಸ್ತಿತ್ವದಲ್ಲಿದ್ದವು[೭] ಎಂದು. ದಾಸರಹಳ್ಳಿಯ ಕ್ರಿ.ಶ.೧೫೩೨ ರ ಶಾಸನದಲ್ಲಿ ವಿಜಯನಗರ ಅರಸ ಅಚ್ಯುತರಾಯ ಮಹಾರಾಯರು ಕೆಂಪ ದೇವರಸನ ನಾಯಕತನಕ್ಕೆ ಯಲಹಂಕ ರಾಜ್ಯಕ್ಕೆ ಸಲ್ಲುವ ಶಿವನಸಮುದ್ರ ಸೀಮೆಯನ್ನು ಬಿಟ್ಟು ಕೊಟ್ಟರು[೮]. ಕೆಂಪದೇವರಸರು ನಂಮ ಸ್ವಾಮಿ ಅಚ್ಯುತರಾಯರಿಗೆ ಧರ್ಮವಾಗಬೇಕೆಂದು ದೇವಸ್ಥಾನಕ್ಕೆ ದಾನ ನೀಡಿದ ಈ ಶಾಸನದಿಂದ ವಿಜಯನಗರ ಅರಸ ಅಚ್ಯುತರಾಯರು ಕ್ರಿ.ಶ.೧೫೩೨ರ ವೇಳೆಗೆ ಕೆಂಪೇಗೌಡ ವಂಶಸ್ತರಿಗೆ ಮೊದಲಿಗೆ ಶಿವನಸಮುದ್ರ ಸೀಮೆಯ ನಾಯಕತನವನ್ನು ಪಾಲಿಸಿ ನಂತರ ಸಾಮಂತರನ್ನಾಗಿ ಮಾಡಿಕೊಂಡ ಮೇಲೆ ಯಲಹಂಕನಾಡನ್ನು ದಯಪಾಲಿಸಿದರು ಎಂಬುದನ್ನು ಸಹ

[೬] ಸಿ.ಹಯವದನರಾವ್ :- ಮೈಸೂರು ಗ್ಯಾಸೆಟಿಯರ್ ಸಂ.೫, ಪು.ಸಂ-೯೩.

[೭] ಎಂ.ಹೆಚ್. ಕೃಷ್ಣಯ್ಯ ಮತ್ತು ಡಾ.ದೇವರಕೊಂಡಾರೆಡ್ಡಿ :- ಬೆಂಗಳೂರು ಕೆಂಪೇಗೌಡನ ವಂಶಸ್ಥರು, ಪು.ಸಂ-೨೫.

[೮] ಎ.ಕ-೯, ಬೆಂ.೫೭, ಕ್ರಿ.ಶ.೧೫೩೨, ದಾಸರಹಳ್ಳಿ.

ಈ ಶಾಸನದಲ್ಲೇ ಕಾಣಬಹುದು. ಸಾಮಂತ ಸ್ಥಾನಮಾನ ಲಭ್ಯವಾದ ಮೇಲೆ ಕ್ರಿ.ಶ.೧೫೩೭ ರಲ್ಲಿ ಹಿರಿಯ ಕೆಂಪೇಗೌಡರು ಬೆಂಗಳೂರು ನಗರ ನಿರ್ಮಾಣ ಮಾಡಿ ತನ್ನ ರಾಜಧಾನಿಯನ್ನು ಯಲಹಂಕದಿಂದ ಬೆಂಗಳೂರಿಗೆ ವರ್ಗಾಹಿಸಿದನು.

ಕೆಂಪೇಗೌಡನು ಬೆಂಗಳೂರು ನಗರವನ್ನು ನಿರ್ಮಿಸಿದ ಮೇಲೆ ಆರ್ಥಿಕಾಭಿವೃದ್ಧಿಗಾಗಿ ಹಲವು ಪೇಟೆಗಳನ್ನು ನಿರ್ಮಿಸಿ ವಿವಿಧ ವೃತ್ತಿಯ ವ್ಯಾಪಾರಿಗಳನ್ನು ಆಹ್ವಾನಿಸಿ, ವಾಸ್ತವ್ಯಕ್ಕೆ ಅವಕಾಶ ನೀಡಿದನು. ವೃತ್ತಿಗನುಗುಣವಾಗಿ ಹಲವು ಪೇಟೆಗಳಾದ ಅಕ್ಕಿಪೇಟೆ, ಅರಳೇಪೇಟೆ. ಅಂಚೇಪೇಟೆ, ಬಳೇಪೇಟೆ, ಚಿಕ್ಕಪೇಟೆ, ದೊಡ್ಡಪೇಟೆ (ಈಗಿನ ಅವಿನ್ಯೂ ರಸ್ತೆ), ಗಾಣಿಗರಪೇಟೆ, ಹಲಸೂರು, ಹುರಿಯೋ, ಕೋಮಾಟಿ, ಕುಂಬಾರಪೇಟೆ, ಮನವರ್ತಿ, ಮುತ್ಯಾಲಪೇಟೆ, ನಗರ್ತಪೇಟೆ, ಪಾಟ್ನೂಲ್‌ಪೇಟೆ, ರಾಗಿಪೇಟೆ, ಸುಣ್ಣಕಲ್ಲುಪೇಟೆ, ತರಗುಪೇಟೆ. ತಿಗಳರಪೇಟೆ, ಉಪ್ಪಾರಪೇಟೆ, ಟಿ.ಆರ್.ಮಿಲ್ಸ್ ಮುಂಭಾಗ ಗೌಡರಪೇಟೆ (ಚಾಮರಾಜಪೇಟೆ) ಅದಕ್ಕೆ ಹೊಂದಿಕೊಂಡಂತೆ ಕುರುಬರಪೇಟೆ ಎಂದು (ಆದರೆ ಕುರುಬರಪೇಟೆ ಈಗ ಇಲ್ಲ) ಇತ್ಯಾದಿಯಾಗಿ ಹಿರಿಯ ಕೆಂಪೇಗೌಡರು ೬೪ ಪೇಟೆಗಳನ್ನು ನಿರ್ದಿಷ್ಟ ಜಾತಿ ಪಂಗಡಗಳಿಗೆ ನಿರ್ಮಾಣ ಮಾಡಿದ ಮೇಲೆ ಪೂರ್ವಕ್ಕೆ ಹಲಸೂರಿನಿಂದ ಪಶ್ಚಿಮಕ್ಕೆ ಅರಳೇಪೇಟೆ, ಉತ್ತರಕ್ಕೆ ಯಲಹಂಕ ಬಾಗಿಲಿನಿಂದ ದಕ್ಷಿಣಕ್ಕೆ ಕಾನಕಾನಹಳ್ಳಿ ಉಪದ್ವಾರದವರೆಗೆ ಮುಖ್ಯ ರಸ್ತೆಯಾಗಿತ್ತು.

ಪೇಟೆಗಳ ನಿರ್ಮಾಣವಾದ ಮೇಲೆ ಅವುಗಳ ರಕ್ಷಣೆಗಾಗಿ ಕೆಂಪೇಗೌಡನು ವಿಜಯನಗರದ ಅರಸರ ಅನುಮತಿ ಪಡೆದು ಪೇಟೆಗಳ ಸುತ್ತಲೂ ಭದ್ರವಾದ ಮಧ್ಯಭಾಗದಲ್ಲಿ ಗಟ್ಟಿ ಮುಟ್ಟಾದ ವೃತ್ತಾಕಾರದ ಸುಮಾರು ೪ ಸುತ್ತಳತೆಯ ಮಣ್ಣಿನ ಕೋಟೆಯನ್ನು ನಿರ್ಮಿಸಿ, ದೇವರಾಯಪಟ್ಟಣ ಎಂದು ನಾಮಕರಣ ಮಾಡಿದರು, ಕೋಟೆಯ ಒಳಗೆ ಪೂರ್ವ ಪಶ್ಚಿಮ ಹಾಗೂ ಉತ್ತರ ದಕ್ಷಿಣ ಕ್ಕೆ ಹಾಯ್ದು ಹೋದ ಮುಖ್ಯ ರಸ್ತೆಗಳು ಕೂಡುವ ಸ್ಥಳದಲ್ಲಿ (ಚಿಕ್ಕಪೇಟೆ ವೃತ್ತ) ಅರಮನೆಯಿತ್ತು. ಈ ಮಣ್ಣಿನ ಕೋಟೆಯ ನಾಲ್ಕು ದಿಕ್ಕಿಗೂ ಮಹಾದ್ವಾರಗಳನ್ನು ಮತ್ತು ಐದು ಉಪದ್ವಾರಗಳು ಸೇರಿ ಒಂಭತ್ತು ಬಾಗಿಲುಗಳನ್ನು ನಿರ್ಮಿಸಿದನು[೬]. ಅವುಗಳೆಂದರೆ :–

೧). ಪೂರ್ವಕ್ಕೆ ಹಲಸೂರು ಹೆಬ್ಬಾಗಿಲು.(ಈಗ ಸ್ಥಳದಲ್ಲಿ ಹಲಸೂರು ಗೇಟ್ ಪೋಲೀಸ್ ಠಾಣೆ ಇದೆ.)

೨). ಪಶ್ಚಿಮಕ್ಕೆ ಸೊಂಡೇಕೊಪ್ಪ ಹೆಬ್ಬಾಗಿಲು. (ಈಗಿನ ರೈಲ್ವೇ ಸೇತುವೆ ಬಳಿ, ಗೂಡ್ಸ್ ರಸ್ತೆ)

೩). ಉತ್ತರಕ್ಕೆ ಯಲಹಂಕ ಹೆಬ್ಬಾಗಿಲು. (ಇಂದಿನ ಮೈಸೂರು ಬ್ಯಾಂಕ್ ವೃತ್ತ)

[೬] ಬ ನ. ಸುಂದರರಾಯ :- ಬೆಂಗಳೂರಿನ ಇತಿಹಾಸ, ಪು.ಸಂ-೧೭.

೪). ದಕ್ಷಿಣಕ್ಕೆ ಆನೇಕಲ್ ಹೆಬ್ಬಾಗಿಲು. (ಈಗಿನ ಕಲಾಸಿಪಾಳ್ಯ ಪೋಲೀಸ್ ಠಾಣೆ ಹಿಂಭಾಗ, ಬಸಪ್ಪ ವೃತ್ತ)

೫). ಯಶವಂತಪುರ ಉಪದ್ವಾರ. (ದೆಹಲಿದ್ವಾರ, ಈಗಿನ ಉಪ್ಪಾರಪೇಟೆ ಪೋಲೀಸ್ ಠಾಣೆ, ಬಳೇಪೇಟೆ ಪ್ರವೇಶ & ಲಕ್ಷ್ಮಿನರಸಿಂಹ ಗುಡಿ ಇರುವ ಸ್ಥಳ)

೬). ಕೆಂಗೇರಿ ಉಪದ್ವಾರ. (ಮೈಸೂರು ರಸ್ತೆ ಬಿನ್ನಿಮಿಲ್ ಕೆರೆ ಪಕ್ಕ & ಬೇಲಿಮಠವಿರುವ ಪ್ರದೇಶ.)

೭). ಕಾನಕಾನಹಳ್ಳಿ (ಕನಕಪುರ) ಉಪದ್ವಾರ. (ಈಗಿನ ಕೆಂಪೇಗೌಡ ವೈದ್ಯಕೀಯ ಮಹಾವಿದ್ಯಾಲಯದ ಬಳಿ, ಮಕ್ಕಳ ಕೂಟ)

೮). ಸರ್ಜಾಪುರ ಉಪದ್ವಾರ. (ಶಿವಾಜಿ ಟಾಕೀಸ್ ಹಿಂಭಾಗದ ಪ್ರದೇಶ.)

೯). ವರ್ತೂರು ಉಪದ್ವಾರ. (ಹಲಸೂರು & ಸರ್ಜಾಪುರ ದ್ವಾರಗಳ ಮಧ್ಯ, ಇಂದಿನ ಟೌನ್‌ಹಾಲ್)

ಸಾಮಂತನ ಈ ಸಾಹಸಕ್ಕಾಗಿ ಅಚ್ಯುತರಾಯನು ೩೦,೦೦೦ ಪಗೋಡ (ವರಹ) ಬರುತ್ತಿದ್ದ ೧೨ ಹೋಬಳಿಗಳಾದ ಹಳೇ ಬೆಂಗಳೂರು. ವರ್ತೂರು ಹೋಬಳಿ, ಯಲಹಂಕನಾಡು, ಬೇಗುರು ಹೋಬಳಿ, ಹಲಸೂರು ಹೋಬಳಿ, ತೆಂಗರ (ಕೆಂಗೇರಿ) ಹೋಬಳಿ, ತಲಘಟ್ಟಪುರ ಹೋಬಳಿ, ಜಿಗಣಿ ಹೋಬಳಿ, ಕುಂಬಳಗೊಡು ಹೋಬಳಿ, ಕನ್ನೆಲಿ ಹೋಬಳಿ, ಬಾಣಾವರ ಹೋಬಳಿ, ಹೆಸರುಘಟ್ಟ ಹೋಬಳಿಗಳನ್ನು ಕೊಟ್ಟು ಹಾಗೂ ಮಹಾನವಮಿಯ ದಸರಾ ಕಾಲದಲ್ಲಿ ಕೆಂಪೇಗೌಡನನ್ನು ವಿಜಯನಗರಕ್ಕೆ ಕರೆಸಿಕೊಂಡು ಸನ್ಮಾನಿಸಿದನು[೧೦].

ಕೋಟೆ ಬಾಗಿಲು ನಿರ್ಮಾಣಕ್ಕೆ ಒಂದು ದಂತಕತೆ ಪ್ರಚಲಿತದಲ್ಲಿದೆ. ಹೊಸನಗರದ ಕೋಟೆ ಪೂರ್ಣವಾದ ಮೇಲೆ ಆನೆ ಬಾಗಿಲನ್ನು ನಿಲ್ಲಿಸುವಾಗ ರಾತ್ರಿ ನಿಲ್ಲಿಸಿದಾಗೆಲ್ಲಾ ಬೆಳಗ್ಗೆಯಾಗುವಷ್ಟರಲ್ಲಿ ಮತ್ತೆ ಮತ್ತೆ ಉರಳುತ್ತಿದ್ದು, ಗರ್ಭಿಣಿ ಸ್ತ್ರೀಯೊಬ್ಬಳ ರಕ್ತದಿಂದ ಭೂತವು ತೃಪ್ತಿಯಾಗುವುದು ಎಂದು ಜ್ಯೋತಿಷಿಗಳು ಹಿರಿಯ ಕೆಂಪೇಗೌಡರಿಗೆ ಸಲಹೆ ನೀಡಿದರು, ಆಗ ವೀರಣ್ಣಗೌಡರ ನೇತೃತ್ವದಲ್ಲಿ ಕೋಟೆಯ ಬಳಿ ಯಾರು ನುಸುಳದಂತೆ ಕಾವಲು ಹಾಕಿಸಿದರೂ ಲಕ್ಷ್ಮೀದೇವಿಯು (ಬಹುಶಃ ಈ ಲಕ್ಷ್ಮಿದೇವಿಯು ಕೆಂಪೇಗೌಡರ ಬಳಗದ ಕೋರಮಂಗಲ ಭಾಗದ ವಂಶಸ್ಥರ ಮಗಳು ಇರಬೇಕು) ಮಧ್ಯರಾತ್ರಿಯಲ್ಲಿ ಪತಿಯ ಪಾದಗಳಿಗೆ ನಮಸ್ಕರಿಸಿ, ತನ್ನ ಮಗುವಿಗೆ ಆಶೀರ್ವದಿಸಿ, ಹಿರಿಯ ಗೌಡರ ಚಿಂತೆ ದೂರ ಮಾಡಲು ಕೋಟೆಯ ಬಾಗಿಲ ಬಳಿ ಬಂದು ಸ್ವಯಿಚ್ಛೆಯಿಂದ ಕೊಡಲಿಯಿಂದ ತನ್ನ ರುಂಡವನ್ನು ಕತ್ತರಿಸಿಕೊಂಡು ದ್ವಾರಕ್ಕೆ ರಕ್ತಾಭಿಷೇಕವಾದ ನಂತರ ದ್ವಾರವು ಸುಭದ್ರವಾಗಿ ನಿಂತ್ತಿತ್ತು ಎಂಬ ದಂತಕಥೆಯು ಪ್ರಚಲಿತದಲ್ಲಿದೆ. ನಂತರ ಕೋರಮಂಗಲದಲ್ಲಿ ಲಕ್ಷ್ಮೀದೇವಿಯ ಸಮಾಧಿಗೆ

---

[೧೦] ಡಾ.ತುಳಸಿರಾಮ ನಾಯಕ್ :- ಬೆಂಗಳೂರಿನ ಸಂಕ್ಷಿಪ್ತ ಇತಿಹಾಸ, ಪು.ಸಂ-೨೮.

ದೇವಾಲಯವನ್ನು ಕಟ್ಟಿಸಿದರಂತೆ. ಕೋಟೆಯ ಒಳಗೆ ಧರ್ಮರಾಯಸ್ವಾಮಿ, ಕಾಳಮ್ಮ, ಅಂಜನೇಯಸ್ವಾಮಿ, ಚೌಡೇಶ್ವರಿ, ವೆಂಕಟೇಶ್ವರ, ನರಸಿಂಹಸ್ವಾಮಿ, ಚೆನ್ನಿಗರರಾಯಸ್ವಾಮಿ, ಕೇಶವಸ್ವಾಮಿ, ರಂಗನಾಥ, ಶ್ರೀಕೃಷ್ಣ, ಕಾಶಿ ವಿಶ್ವೇಶ್ವರಯ್ಯ, ಬಸವೇಶ್ವರ ದೇವಸ್ಥಾನಗಳನ್ನು ನಿರ್ಮಾಣ ಮಾಡಿದ್ದರು. ಹಾಗೇಯೇ ನಗರಕ್ಕೆ ಕುಡಿಯುವ, ವ್ಯವಸಾಯಕ್ಕೆ ನೀರಿನ ವ್ಯವಸ್ಥೆಗಾಗಿ, ಅನೇಕ ಕೆರೆಗಳನ್ನು ಕಟ್ಟಿಸಿದನು. ಅವುಗಳೆಂದರೆ :-

೧). ಕೆಂಪಾಂಬುದಿ ಕೆರೆ. (ಹಲಸೂರುನಲ್ಲಿ, ತಮ್ಮ ಕುಲದೇವತತೆಯಾದ ಕೆಂಪಾಂಬಿಕೆಯ ಹೆಸರಿನಲ್ಲಿ)

೨). ಧರ್ಮಾಂಬುದಿ ಕೆರೆ. (ಈಗಿನ ಬಿ.ಎಂ.ಟಿ.ಸಿ & ಕೆ.ಎಸ್.ಆರ್.ಟಿ.ಸಿ ಬಸ್ ನಿಲ್ದಾಣ)

೩). ಸಂಪಂಗಿಕೆರೆ ಮತ್ತು ಕಾರಂಜಿಕೆರೆ. (ಕೆರೆ ಈಗ ಚಿಕ್ಕದಾಗಿದ್ದು, ಕೆರೆಯ ಉಳಿದ ಭಾಗವನ್ನು ಕಂಠೀರವ ಕ್ರೀಡಾಂಗಣವನ್ನು ನಿರ್ಮಿಸಲಾಗಿದೆ.)

೪). ಕೆಂಪಾಪುರದ ಅಗ್ರಹಾರದ ಕೆರೆ. (ಈಗ ಮನೆಗಳನ್ನು ಕಟ್ಟಿಕೊಳ್ಳಲಾಗಿದೆ.)

೫). ಸಿದ್ದಿಕಟ್ಟೆ. (ಕೆ.ಆರ್.ಮಾರುಕಟ್ಟೆ ಬಳಿ, ರಾಣಿಯರಲ್ಲಿ ಒಬ್ಬಳಾದ ಸಿದ್ದಮ್ಮನ ಹೆಸರಲ್ಲಿ)

೬). ಸಿದ್ದಾಪುರದ ಕೆರೆ (ಈಗಿನ ಲಾಲ್‌ಬಾಗ್ ಕೆರೆ)

೭). ಹಲಸೂರಿನ ಕೆರೆ. (ಹಾಗೇಯೆ ಇದೆ)

೮). ಗಂಧದ ಕೋಠಿ. (ಸ್ಯಾಂಕಿ ಕೆರೆ)

೯). ಗಿಡ್ಡಪ್ಪನ ಕೆರೆ (ಬಿನ್ನಿಮಿಲ್ ಹಿಂಭಾಗ ಪ್ರದೇಶ,)

ಇದರ ಜೊತೆಗೆ ಕೆಂಪೇಗೌಡನ ಸೋದರ ಮಾವನ ಮಗಳಾದ ಚನ್ನಮ್ಮ ಪಟ್ಟದರಸಿಯ ಹೆಸರಿನಲ್ಲಿ ಚನ್ನಮ್ಮನ ಕೆರೆಯನ್ನು[೧೧] ನಿರ್ಮಿಸಿದರು. ಕೋಟೆಯ ಉತ್ತರದಲ್ಲಿನ ವೃಷಭಾವತಿ ನದಿ ಹುಟ್ಟುವ ಸ್ಥಳವಾದ ಬಂಡೆಯ ಮೇಲಿನ ಬಸವನಗುಡಿ ದೇವಾಲಯದ ವಿಸ್ತರಣೆ, ಹಲಸೂರಿನ ದೇವಾಲಯಗಳ ಪೂಜೆ ಕಾರ್ಯಗಳು ನಡೆಯಲೆಂದು ದಾನಗಳು ನೀಡಿದ್ದಾರೆ.

ಕೋಟೆಯ ಬಳಿ ಯಾರು ಸುಳಿಯದಂತೆ ಇಮ್ಮಡಿ ಕೆಂಪೆಗೌಡನು ವೆಂಕಟಪತಿದೇವ ಮಹಾರಾಯನ ಅವಧಿಯಲ್ಲಿ ನಾಲ್ಕು ಕಾವಲು ಗೋಪುರಗಳನ್ನು ನಿರ್ಮಿಸಿದನು. ಪೂರ್ವದ ಹಲಸೂರಿನ ಕೆರೆಯ ಹತ್ತಿರ (ಸೇನಾ ನೆಲೆಯ ಒಳಗೆ), ಪಶ್ಚಿಮದಲ್ಲಿ ಕೆಂಪಾಂಬುದಿ ಕೆರೆ ದಂಡೆಯ ಮೇಲೆ, ಉತ್ತರಕ್ಕೆ ಮೇಕ್ರಿ ಸರ್ಕಲ್ ಬಳಿ (ವೈಯಲಿ ಕಾವಲ್ – ಅಶ್ವಪಡೆಗೆ ಕಾದಿಟ್ಟ ಕಾವಲು, ರಮಣಾಶ್ರಮದ ಬಳಿ), ದಕ್ಷಿಣಕ್ಕೆ ಲಾಲ್‌ಬಾಗ್ ಬಂಡೆಯ ಮೇಲೆ ಕಾವಲು ಗೋಪುರಗಳನ್ನು

[೧೧] ಪಿ.ಕನ್ಯಾಕುಮಾರ್ :- ಯಲಹಂಕ ನಾಡ ಪ್ರಭುಗಳ ರಾಣಿಯರು, ಪು.ಸಂ-೨೭೮.

ನಿರ್ಮಿಸಿದನು. ಈ ನಾಲ್ಕು ಗೋಪುರಗಳಲ್ಲಿ ಲಾಲ್‌ಬಾಗ್‌ನಲ್ಲಿನ ಗೋಪುರ ಸುಸ್ಥಿತಿಯಲ್ಲಿದೇ ಉಳಿದವು ಕಣ್ಮರೆಯಾಗಿದೆ.

ಹೀಗೆ ಶಾಸನೋಕ್ತವಾಗಿರುವ ಬೆಂಗಳೂರೇ ಬೇರೆ, ಕೆಂಪೇಗೌಡನು ಕಟ್ಟಿಸಿದ ಬೆಂಗಳೂರು ನಗರನೇ ಬೇರೆ. ಹೊಸದಾಗಿ ನಗರಗಳನ್ನು (ಬಡಾವಣೆ) ಊರಿನ ಹೊರಗೆ ನಿರ್ದಿಷ್ಟ ಅಂತರದಲ್ಲಿ ನಿರ್ಮಾಣ ಮಾಡಿ ಅದಕ್ಕೊಂದು ಹೆಸರಿಡುತ್ತಿದ್ದರು. ಅದರಂತೆ ಕೆಂಪೇಗೌಡನು ಜನವಸತಿ ಸ್ಥಳದಿಂದ ದೂರದಲ್ಲಿ ಆಯ್ದ ಸ್ಥಳವಾದ ನಿರ್ದಿಷ್ಟ ಪ್ರದೇಶದಲ್ಲಿ ಪೇಟೆಗಳ ನಿರ್ಮಾಣ ಮಾಡಿ ಅದಕ್ಕೆ ಕೋಟೆ ಕಟ್ಟಿಸಿ, ಕೋಟೆಯ ಮದ್ಯಭಾಗದಲ್ಲಿನ ಅರಮನೆಯಲ್ಲಿದ್ದನು. ಈಗಿನ ಕೆ.ಆರ್.ಮಾರುಕಟ್ಟೆ, ಮೆಜೆಸ್ಟಿಕ್, ಟೌನ್‌ಹಾಲ್, ಚಾಮರಾಜಪೇಟೆ, ಹಲಸೂರು, ಬಸವನಗುಡಿಯನ್ನು ಒಳಗೊಂಡ ಪ್ರದೇಶದಲ್ಲಿ ನಗರ ನಿರ್ಮಾಣ ಮಾಡಿರಬಹುದು ಏಕೆಂದರೆ ಕೆಂಪೇಗೌಡನು ನಿರ್ಮಿಸಿದ ಕೆರೆಗಳು, ಪೇಟೆಗಳು, ದೇವಾಲಯಗಳು, ಕೋಟೆ, ದೇವಾಲಯಗಳಿಗೆ ನೀಡಿದ ದಾನಗಳಾಧರ ಮೇಲೆ ಜೊತೆಗೆ ಕಾವಲು ಗೋಪುರಗಳು ಮತ್ತು ಕೋಟೆಯ ದ್ವಾರಗಳು ಕೆಂಪೆಗೌಡನು ನಿರ್ಮಿಸಿದ ಬೆಂಗಳೂರು ನಗರ ವ್ಯಾಪ್ತಿಯನ್ನು ನಿರ್ಧರಿಸುತ್ತದೆ. ವಿಜಯನಗರದ ಅರಸು ಅಚ್ಯುತರಾಯನ ಕಾಲದಲ್ಲಿ ಕೆಂಪೇಗೌಡನಿಗೆ ಎಲಹಂಕರಾಜ್ಯದ ನಾಯಕತನವನ್ನು ನೀಡಿದಾಗ ಆತನು ಮೊದಲೇ ನಗರೀಕರಣದ ಹಾದಿಯಲ್ಲಿದ್ದ ಬೆಂಗಳೂರು ಸ್ಥಳದಲ್ಲಿ ಒಂದು ವ್ಯವಸ್ಥಿತ ಕೋಟೆ, ಪೇಟೆ ಮುಂತಾದವುಗಳನ್ನು ಇನ್ನಷ್ಟು ವ್ಯವಸ್ಥಿತವಾಗಿ ಕಟ್ಟುವುದರ ಮೂಲಕ ನಗರವನ್ನಾಗಿ ರೂಪಿಸುವಲ್ಲಿ ಕಾರ್ಯ ಪ್ರವೃತ್ತನಾದ ಕಾಲಮಾನ ಸಮಯದಲ್ಲಿ ದಕ್ಷಿಣ ಭಾರತದ ಮಧ್ಯ ಸ್ಥಾನವನ್ನು ಅಲಂಕರಿಸಿರುವ ಈ ನಗರದ ಮೂಲಕವೇ ಬಹು ಪ್ರಾಚೀನ ಕಾಲದಿಂದಲೂ ವಾಣಿಜ್ಯ ಮಾರ್ಗಗಳು ಹಾದು ಹೋಗುತ್ತಿದ್ದವು. ಉತ್ತರದಿಂದ ಹತ್ತಿ ಮೊದಲಾದ ಸರಕುಗಳು, ಪಶ್ಚಿಮದಿಂದ ಮಸಾಲೆ ಪದಾರ್ಥಗಳು ಹಾಗೂ ಸಂಸ್ಕರಿಸಿದ ಗಿಡ ಮೂಲಿಕೆಗಳು ಮೊದಲಾದ ಪದಾರ್ಥಗಳು ಬಂದು ಸೇರುತ್ತಿದ್ದು, ಮಾರಾಟ ಪರಸ್ಪರ ವಿನಿಮಯ ಕೇಂದ್ರವಾಗಿ ಬೆಂಗಳೂರು ಬಹು ಪ್ರಾಚೀನ ಕಾಲದಲ್ಲಿ ರೂಪುಗೊಂಡಿರ ಬಹುದು. ಆ ಪದಾರ್ಥಗಳ ವಹಿವಾಟುಗಳಿಗೆ ಬಂದಂತಹ ವರ್ತಕರಿಗೆ ಊಟ, ವಸತಿ ಇತ್ಯಾದಿಗಳಿಗೆ ಅನೂಕೂಲವಾಗುವಂತೆ ಕೆರೆಗಳು, ಕೊಳಗಳು, ಛತ್ರಗಳು, ಪೂಜಾಪುನಾಸ್ಕಾರಗಳಿಗೆ ದೇವಾಲಯ ಹೀಗೆ ಮುಂತಾದ ಸೌಕರ್ಯಗಳು ಬೆಂಗಳೂರಿನಲ್ಲಿ ರೂಪುಗೊಳ್ಳಲು ಕೆಂಪೇಗೌಡನ ವಂಶಿಯರು ಪೂರಕವಾಗಿದ್ದರು[೧೨].

---

[೧೨] ಎಲಹಂಕ ರಾಜ್ಯದ ಪ್ರಭುಗಳಾದ ಬೆಂಗಳೂರು ಕೆಂಪೇಗೌಡರು, ಇ.ದರ್ಪಣ.೨೦೧೧, ಪು.ಸಂ-೪೪.

ಜಿಲ್ಲೆಯ ಶ್ರೀನಿವಾಸಪುರ, ಎಂಟಗಾನಹಳ್ಳಿ, ಬಿನ್ನಮಂಗಲ, ಓಬಳಾಪುರ, ಗೊಲ್ಲಹಳ್ಳಿ, ಶಿವಗಂಗೆ, ಅಪ್ಪೇರಹಳ್ಳಿ, ಹ್ಯಾಡಾಳು, ಮೈಲನಹಳ್ಳಿ, ಚಿಕ್ಕಮಾರನಹಳ್ಳಿ, ಸೊಂಪುರ ಮುಂತಾದ ಗ್ರಾಮಗಳಲ್ಲಿ ಬಯಲಾಟ ತಂಡಗಳಿದ್ದರೇ, ಅರ್ಜುನಬೆಟ್ಟಹಳ್ಳಿ, ತೊರೆಕೆಂಪನಹಳ್ಳಿ, ಶಿವಗಂಗೆ, ನರಸೀಪುರದಲ್ಲಿ ಭಜನಕಾರರಿದ್ದಾರೆ.

ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನೆಲಮಂಗಲ ತಾಲ್ಲೂಕಿನಲ್ಲಿ ಸೈಗೊಟ್ಟ ಶಿವಮಾರನು (೭೮೮–೮೧೬) ಗಜಶಾಸ್ತ್ರವನ್ನು, ಗುಬ್ಬಿಯ ಮಲ್ಲಾಚಾರ್ಯರು ಕ್ರಿ.ಶ.೧೫೧೩ ರಲ್ಲಿ ಭಾವಚಿಂತಾರತ್ನ ಮತ್ತು ವೀರಶೈವಾಮೃತ ಪುರಾಣಗಳನ್ನು, ಶಿವಗಂಗೆಯ ಬಸವಲಿಂಗರವರು ಕೊಟ್ಟೂರು ಬಸವೇಶ್ವರ ಪುರಾಣ & ಗಂಗಾ–ಗಿರಿಜಾಕಲ್ಯಾಣ ಯಕ್ಷಗಾನ ಪ್ರಸಂಗವನ್ನು, ಕಮ್ಮಸಂದ್ರದ ಲಕ್ಷ್ಮೀನರಸಿಂಹ ಶಾಸ್ತ್ರಿಯವರು ನಕ್ಷತ್ರಮಾಲಿಕೆ & ದುರ್ಗಪಂಚರತ್ನವನ್ನು, ೧೬ನೇ ಶತಮಾನದಲ್ಲಿ ಹೆಗ್ಗುಂದದ ಶೇಷರಾಮಯ್ಯನವರು ನೀಲಧ್ವಜನಕಾಳಗವನ್ನು, ಕ್ರಿ.ಶ.೧೮೭೬ ರಲ್ಲಿ ಹೆಸರುಘಟ್ಟದ ಲಕ್ಷ್ಮಿನರಸಿಂಹ ಶಾಸ್ತ್ರಿಯವರು ಸಂಸ್ಕೃತದಲ್ಲಿ ಮನೆದೇವರು, ೧೮ನೇಯ ಶತಮಾನದಲ್ಲಿ ಕವಿ ಕಳಲೆನಂಜರಾಜನು ಕಕುದ್ಗಿರಿಮಹಾತ್ಮೆ ಕಾವ್ಯವನ್ನು, ವಿಜಯವೆಂಕಟರಮಣ ಕವಿಯು ವಾರ್ಧಕ ಷಟ್ಪದಿಯಲ್ಲಿ ಭಗವಚ್ಚರಿತ್ರೆಯನ್ನು, ದೊಡ್ಡಬಳ್ಳಾಪುರ ತಾಲ್ಲೂಕಿನ ಚಿಕ್ಕಹೆಜ್ಜಾಜಿಯ ವೆಂಕಟರಮಣನು ಧೃವನ ಕತೆಯನ್ನು, ಮುಮ್ಮುಡಿ ಕೃಷ್ಣರಾಜ ಒಡೆಯರ್ ಆಸ್ಥಾನದಲ್ಲಿನ ಯಾದವರು ಕಲಾವತಿ ಪರಿಣಯವನ್ನು, ಕೊಡಿಗೆಹಳ್ಳಿಯ ಕವೀಶ್ವರ ನರಸಪ್ಪನು ಮುಕ್ತಿದರ್ಪಣವನ್ನು, ಸೋಬನೆ ರಂಗದಾಸರು ಷಟ್ಪದಿಯಲ್ಲಿ ಕೃಷ್ಣರಾಜದೇಶೋತ್ಸವಚರಿತ್ರೆಯನ್ನು, ಶ್ರೀವೆಂಕಟಾಚಾರ್‌ರವರು ಪಂಚವಟಿರಾಮಾಯಣವನ್ನು, ತಿರು ವೆಂಕಟಾಜೀಯವರು ಕರಿಭಟಂನಕಾಳಗವನ್ನು, ಹೆಚ್.ಎಸ್.ಸುಬ್ಬರಾಯಪ್ಪನವರು ಮಯೂರಧ್ವಜ, ತಾಮ್ರಧ್ವಜನಕಾಳಗ, ಸುಧನ್ವನಕಥೆ ಹಾಗೂ ಬಬ್ರುವಾಹನಕಾಳಗ ಎಂಬ ಯಕ್ಷಗಾನ ಕೃತಿಗಳನ್ನು, ದೇವನಹಳ್ಳಿ ತಾಲ್ಲೂಕಿನಲ್ಲಿ ಕ್ರಿ.ಶ.೧೬೯೦ ರಲ್ಲಿ ಜೈನ ಕವಿಯಾದ ಚಿಕ್ಕರಸರು ಸಾಂಗತ್ಯದಲ್ಲಿ ಸೊಣ್ಣಭೈರೇಗೌಡಚರಿತ್ರೆಯನ್ನು, ಕುಂದಾಣದ ವೆಂಕಟಾಚಲಯ್ಯನು ಕಂದಪದ್ಯದಲ್ಲಿ ಕಳಿಧರ್ಮ ಶತಕವನ್ನು, ಬಾಗಲೂರು ರಾಮಸ್ವಾಮಿ ಕವಿಯು ಕಂದ, ವೃತ್ತ, ಷಟ್ಪದಿ ವಚನಗಳನ್ನೊಳಗೊಂಡ ವಸಿಷ್ಟರಾಮಾಯಣವನ್ನು, ಕೃಷ್ಣಸ್ವಾಮಿಅಯ್ಯಂಗಾರ್‌ರವರು ಗಣಿತ ಸಂಜೀವಿನಿ, ರಾಮರಾವ್ ಕೆಲವು ನೆನಪುಗಳು ಎಂಬ ಕೃತಿಗಳನ್ನು, ತಿಪ್ಪಯಾರ್ಯರವರು ಹನುಮದ್ವಿಲಾಸ ಎಂಬ ಯಕ್ಷಗಾನ ಪ್ರಸಂಗವನ್ನು, ಹೊಸಕೋಟೆಯ ಸುಗಟೂರು ಮುಮ್ಮಡಿತಮ್ಮೇಗೌಡರು ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಪರಿಣಿತನಾಗಿ, ಕನ್ನಡದಲ್ಲಿ ೪೦೦೦ ಷಟ್ಪದಿಗಳಿಂದ ಕೂಡಿದ ಶಂಕರಸಂಹಿತೆ ಎಂಬ ಅನರ್ಘ ಗ್ರಂಥವನ್ನು, ನಂದಿನಾಥಚರಿತ್ರೆ ಎಂಬ ಯಕ್ಷಗಾನವನ್ನು, ತೆಲುಗಿನಲ್ಲಿ ಸೌಂದರೇಶಚರಿತೆಮು, ರಾಜೇಂದ್ರ

ಚೋಳಚರಿತ್ರೆಮು, ಕುಮಾರಾರ್ಜುನೀಯ, ಸಂಸ್ಕೃತದಲ್ಲಿ ಕೌಮುದೀವ್ಯಾಖ್ಯಾನ, ರಸಿಕಮನೋರಂಜನಿ ಎಂಬ ಕೃತಿಗಳನ್ನು, ನಂದಪ್ಪರು ಪ್ರಭುಚರಿತ್ರೆ ಎಂಬ ಯಕ್ಷಗಾನವನ್ನು ಹಾಗೂ

ಹೊಸಗನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನೆಲಮಂಗಲ ತಾಲ್ಲೂಕಿನ ಡಾ. ಡಿ.ಎಲ್.ನರಸಿಂಹಾಚಾರ್, ಡಾ.ಎಸ್.ಶ್ರೀಕಂಠಮೂರ್ತಿ, ಎನ್.ಲಕ್ಷ್ಮಿನಾರಾಯಣರಾವ್, ದೊಡ್ಡಬೆಲೆ ಲಕ್ಷ್ಮಿಚಾರ್, ಪ್ರೊ.ಜಿ.ಆರ್.ರಂಗಸ್ವಾಮಯ್ಯ, ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್, ಅರಿಶಿನಕುಂಟೆಯ ಡಾ.ಹೆಚ್.ಎಸ್.ಗೋಪಾಲ್ ರಾವ್, ಟಿ.ಬೇಗೂರಿನ ಡಾ.ರಾಮಲಿಂಗಪ್ಪ, ದೊಡ್ಡಬಳ್ಳಾಪುರ ತಾಲ್ಲೂಕಿನ ಡಾ.ಡಿ.ಎಸ್,ಶಿವಪ್ಪ, ಡಾ.ಅನುಪಮ ನಿರಂಜನ, ಅರಳುಮಲ್ಲಿಗೆಯ ಡಾ.ಪಾರ್ಥಸಾರಥಿ, ಡಿ.ಆರ್. ನಾಗರಾಜ್, ಎಲ್.ಹನುಮಂತಯ್ಯ, ಡಾ.ಸಿ.ವೀರಣ್ಣ, ದೊಡ್ಡಹೆಜ್ಜಾಜಿಯ ಪ್ರೊ.ನಾ.ಗೀತಾಚಾರ್ಯ, ಡಾ. ಹೆಚ್.ಎಸ್.ಪುಷ್ಪ, ಡಾ.ಕೆ.ಆರ್.ಗಣೇಶ್, ಡಾ.ಟಿ.ಗೋವಿಂದರಾಜು. ದೇವನಹಳ್ಳಿ ತಾಲ್ಲೂಕಿನ ಡಾ.ಡಿ.ವಿ.ಗುಂಡಪ್ಪ, ಪ್ರೊ.ಎ.ಸೀತಾರಾಮಯ್ಯ, ಪ್ರೊ.ಕೆ.ಎಸ್.ನಿಸಾರ್ ಅಹಮ್ಮದ್, ಡಾ.ಕಮಲಾ ಹಂಪನಾ, ವೇಣುಗೋಪಾಲ ಸೊರಬ, ವಿಜಯಪುರದ ಸಿ.ಎಂ.ವೀರಣ್ಣ, ಹೊಸಕೋಟೆ ಕೃಷ್ಣಶಾಸ್ತ್ರಿಯವರು, ಸಂಪಂಗಿರಾಮಯ್ಯ, ಸಮೇತನಹಳ್ಳಿಯ ರಾಮರಾಯ, ಕಣ್ಣೂರಳ್ಳಿಯ ಜಿ. ನಾರಾಯಣ ಸ್ವಾಮಿ, ನಾಗಭೂಷಣ, ಕೆ.ರಾಜೇಶ್ವರಿ ಇತ್ಯಾದಿ ಸಾಹಿತಿಗಳು ಸಾಹಿತ್ಯ ಕ್ಷೇತ್ರಕ್ಕೆ ಹಲವಾರು ಕೊಡುಗೆಗಳನ್ನು ನೀಡಿದ್ದಾರೆ.

**ಅಧ್ಯಾಯ-೧ ಪ್ರಸ್ತಾವನೆ**

ಯಾವುದೇ ಒಂದು ವಿಷಯವನ್ನು ತಿಳಿಸುವ ಮೊದಲು ಆ ವಿಷಯಕ್ಕೆ ಸಂಬಂಧಿಸಿದಂತೆ ಪೂರ್ವಾಭಾವಿ ಮಾಹಿತಿಯನ್ನು ಕಲೆ ಹಾಕುವುದು ತುಂಬಾ ಅವಶ್ಯಕವಾಗಿದೆ. ಜೊತೆಗೆ ಹೇಳಬೇಕಾಗಿರುವ ವಿಷಯವನ್ನು ನಿಖರವಾಗಿ ತಿಳಿಸಲು ನೆರವು ನೀಡುತ್ತದೆ. ಆದ್ದರಿಂದ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಪೀಠಿಕೆ, ಉದ್ದೇಶ, ವ್ಯಾಪ್ತಿ, ಇದುವರೆಗೆ ನಡೆದಿರುವ ಅಧ್ಯಾಯನವನ್ನು ಹೇಳಲಾಗಿದೆ.

೧೯೨೮ ರಲ್ಲಿ ಬೆಂಗಳೂರಿನಿಂದ ಚನ್ನಪಟ್ಟಣ ಮತ್ತು ಕ್ಲೋಸ್‌ಪೇಟೆ ಎಂಬ ೨ ತಾಲ್ಲೂಕುಗಳನ್ನಾಗಿ ವಿಂಗಡಿಸಲಾಯಿತು. ೧೯೪೯ ರಲ್ಲಿ ಕಾನಕಾನಹಳ್ಳಿ ಮತ್ತು ಕ್ಲೋಸ್‌ಪೇಟೆಗಳನ್ನು ಕ್ರಮವಾಗಿ ಕನಕಪುರ, ರಾಮನಗರಗಳೆಂದು ನಾಮಕರಣ ಮಾಡಲಾಯಿತು. ನಂತರದಲ್ಲಿ ಹೋಬಳಿಗಳು ತಾಲ್ಲೂಕುಗಳಾಗಿ ಮಾರ್ಪಾಟಾಯಿತು. ೧೯೪೬ ರಲ್ಲಿ ಆಡಳಿತದ ಅನುಕೂಲಕ್ಕಾಗಿ ಬೆಂಗಳೂರುನಲ್ಲಿ ಉತ್ತರ ಮತ್ತು ದಕ್ಷಿಣ ತಾಲ್ಲೂಕುಗಳೆಂದು ವಿಭಾಗಿಸಲಾಯಿತು. ೧೯೫೬ ರಲ್ಲಿ ವಿಶಾಲ ಮೈಸೂರು ರಾಜ್ಯ

ರಚನೆಯಾಗಿ ೧೯ ಜಿಲ್ಲೆಗಳು ಅಸ್ತಿತ್ವಕ್ಕೆ ಬಂದವು. ಬೆಂಗಳೂರು ನಗರ ಬೆಳೆದಂತೆ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳೆಂದು ವಿಭಾಗಿಸುವ ಕ್ರಿಯೆ ೧೯೩೮ ರಲ್ಲಿ, ೧೯೬೨ ರಲ್ಲಿ ಆಗಿದ್ದುಂಟು. ೧೯೬೬ ರಲ್ಲಿ ಮರಳಿ ಒಂದುಗೂಡಿಸಿದ ಜಿಲ್ಲೆಯನ್ನು ಅಂತಿಮವಾಗಿ ಬೆಂಗಳೂರು ದಕ್ಷಿಣ ತಾಲ್ಲೂಕಿನ ವರ್ತೂರು, ಕೃಷ್ಣರಾಜಪುರ, ಬಿದರಹಳ್ಳಿ ಹೋಬಳಿ ಪ್ರದೇಶಗಳನ್ನು ಒಳಗೊಂಡಂತೆ ಬೆಂಗಳೂರು ಪೂರ್ವ ತಾಲ್ಲೂಕು ಎಂಬ ಹೊಸ ತಾಲ್ಲೂಕು ಡಿಸೆಂಬರ್, ೧೨, ೨೦೦೧ ನೇ ತಾರೀಕಿನಲ್ಲಿ ಉದಯವಾಯಿತು. ಪೂರ್ವ ತಾಲ್ಲೂಕಿನ ಕೇಂದ್ರ ಭಾಗ ಕೃಷ್ಣರಾಜಪುರವು ಹಳೇ ಮದ್ರಾಸ್ ಎನ್.ಹೆಚ್.೪ ರಸ್ತೆಯಲ್ಲಿದೆ. ಬಿದರಹಳ್ಳಿ ಹೋಬಳಿಯು ೧೯೮೬ ರ ಹಿಂದೆ ಹೊಸಕೋಟೆ ತಾಲ್ಲೂಕಿನಲ್ಲಿತ್ತು. ಪ್ರಸ್ತುತ ಬೆಂಗಳೂರು ನಗರ ಜಿಲ್ಲೆಯು ಉತ್ತರ, ದಕ್ಷಿಣ, ಪೂರ್ವ, ಆನೇಕಲ್ ತಾಲ್ಲೂಕುಗಳಿಂದ ಕೂಡಿದೆ.

ವಿಶಾಲವಾದ ಬೆಂಗಳೂರು ಜಿಲ್ಲೆಯನ್ನು ಆಡಳಿತದ ಅನುಕೂಲಕ್ಕಾಗಿ ಆಗಸ್ಟ್, ೧೫, ೧೯೮೬ ರಲ್ಲಿ ಬೆಂಗಳೂರನ್ನು ಕೇಂದ್ರವಾಗಿಟ್ಟುಕೊಂಡು ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಮತ್ತು ಆನೇಕಲ್ ತಾಲ್ಲೂಕುಗಳನ್ನು ಒಳಗೊಂಡ ಬೆಂಗಳೂರು ನಗರ ಜಿಲ್ಲೆ ಹಾಗೂ ಬೆಂಗಳೂರು ನಗರದ ಸುತ್ತಲಿನ ವೃತ್ತಾಕಾರವಾಗಿ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ಕನಕಪುರ, ರಾಮನಗರ, ಚನ್ನಪಟ್ಟಣ, ಮಾಗಡಿ ತಾಲ್ಲೂಕುಗಳನ್ನು ಸೇರಿಸಿ ಒಟ್ಟು ೮ ತಾಲ್ಲೂಕುಗಳನ್ನು ಒಳಗೊಂಡ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ರಚನೆಯಾಯಿತು.

ನಂತರ ಆಗಸ್ಟ್, ೨೩, ೨೦೦೭ ರಲ್ಲಿ ಗ್ರಾಮಾಂತರ ಜಿಲ್ಲೆಯಲ್ಲಿನ ೪ ತಾಲ್ಲೂಕುಗಳಾದ ಕನಕಪುರ, ರಾಮನಗರ, ಚನ್ನಪಟ್ಟಣ, ಮಾಗಡಿ ತಾಲ್ಲೂಕುಗಳನ್ನು ಸೇರಿಸಿ ರಾಮನಗರ ಜಿಲ್ಲೆಯೆಂದು ಹೊಸ ಜಿಲ್ಲೆಯನ್ನು ರಚಿಸಿದ ನಂತರ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ಎಂಬ ೪ ತಾಲ್ಲೂಕುಗಳನ್ನು ಒಳಗೊಂಡ ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ದಕ್ಷಿಣ ಕರ್ನಾಟಕದ ನೈರುತ್ಯ ಭಾಗದಲ್ಲಿದ್ದು, ಸಮುದ್ರ ಮಟ್ಟದಿಂದ ಸರಾಸರಿ ೯೦೦ ಮೀಟರ್ ಎತ್ತರದಲ್ಲಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯ ಪ್ರದೇಶಗಳು ಪ್ರಾಚೀನ ಕಾಲದಿಂದಲೂ ತನ್ನದೆ ಆದ ವಿಶಿಷ್ಟ ಐತಿಹಾಸಿಕ ಹಾಗೂ ರಾಜಕೀಯ ಹಿನ್ನೆಲೆಯನ್ನು ಹೊಂದಿರುವ ಜಿಲ್ಲೆಯಲ್ಲಿ ಹಲವಾರು ರಾಜಮನೆತನಗಳ ಜೊತೆಗೆ ಸಣ್ಣಪುಟ್ಟ ಮನೆತನಗಳಿಂದ ಹಿಡಿದು ಪಾಳೇಯಗಾರರು, ನಾಯಕರು, ನಾಡಪ್ರಭುಗಳು, ಸಾಮಂತಾರಸರ ರಾಜಕೀಯ ಏಳು-ಬೀಳುಗಳ ಜೊತೆ ಜೊತೆಗೆ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ವಿವಿಧ ಹಂತಗಳಲ್ಲಿ ಅಭಿವೃದ್ಧಿಯನ್ನು ಹೊಂದಿರುವುದನ್ನು ಹಾಗೂ

ಅವರು ಕೊಡುಗೆಗಳಾಗಿ ನಿರ್ಮಿಸಿರುವ ದೇವಾಲಯಗಳು, ಕೆರೆಗಳು, ಕಟ್ಟೆಗಳು, ಮಂಟಪಗಳು, ಸ್ಮಾರಕಶಿಲೆಗಳು, ಕೋಟೆಗಳನ್ನು ಕಾಣಬಹುದು.

ಕ್ರಿ.ಶ.೫ನೇ ಶತಮಾನದಿಂದ ೧೮ನೇ ಶತಮಾನದ ಅವಧಿಯಲ್ಲಿ ಪ್ರಸ್ತುತ ಇರುವ ಗ್ರಾಮಾಂತರ ಜಿಲ್ಲೆಯು ಒಂದು ಘಟಕವಾಗಿರದೇ ವಿವಿಧ ಕಾಲಘಟ್ಟದಲ್ಲಿ ಬೇರೆ ಬೇರೆ ಮನೆತನಗಳ ಅರಸರು ಆಡಳಿತಗೋಸ್ಕರ ಹಲವಾರು ಘಟಕಗಳಾಗಿ ವಿಭಾಗಿಸಿಕೊಂಡು ಆಡಳಿತ ನಡೆಸಿದ್ದರೆ, ಕೆಲವು ಮನೆತನಗಳಿಗೆ ರಾಜಧಾನಿಯಾಗಿದ್ದರೇ, ಇನ್ನು ಕೆಲವು ಮನೆತನಗಳ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಗಂಗರ ಕಾಲದಲ್ಲಿ ಇಡೀ ಜಿಲ್ಲೆಯು ಕ್ರಿ.ಶ.೮೭೦ರ ವರೆಗೆ ಗಂಗ ಆರುಸಾಸಿರ, ನಂತರ ಕ್ರಿ.ಶ.೮೯೦ ರಲ್ಲಿ ಗಂಗರ ಪೂರ್ಣಪ್ರದೇಶವಾದ ಗಂಗವಾಡಿ ೯೬೦೦೦ ಎಂಬ ಪ್ರದೇಶದಲ್ಲಿ ಲೀನವಾಗಿತ್ತು. ಚೋಳರ ಆಳ್ವಕೆಯಲ್ಲಿ ಚತುರ್ವೇದಿಮಂಗಲ, ಚೋಳಮಂಡಲ, ನಾಡುಗಳ ರಚನೆಯಾಗಿ, ಜಿಲ್ಲೆಯು ವಿಕ್ರಮ ಚೋಳಮಂಡಲದಲ್ಲಿ ನೆಲಮಂಗಲ ಕೇಂದ್ರವಾದ ಕುಕ್ಕನೂರುನಾಡು, ನೆಲಮಂಗಲ ತಾಲ್ಲೂಕಿನ ಪೂರ್ವ ಭಾಗದಲ್ಲಿ ಮಣ್ಣೆಯನ್ನು ಕೇಂದ್ರವಾಗಿಟ್ಟು ಕೊಂಡ ಮಣ್ಣೆನಾಡು, ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕಿನ ಕೆಲವು ಭಾಗಗಳನ್ನು ಒಳಗೊಂಡ ಸಣ್ಣೆನಾಡುಗಳು ಸಮಾವೇಶಗೊಂಡಿದ್ದವು. ನಿಗರಿಲಿ ಚೋಳ ಮಂಡಲದಲ್ಲಿ ಮಣ್ಣೆನಾಡು, ರಾಜೇಂದ್ರ ಚೋಳ ವಳನಾಡುವಿನಲ್ಲಿ ಹೊಸಕೋಟೆ ತಾಲ್ಲೂಕಿನ ಕೆಲವು ಭಾಗಗಳನ್ನು ಒಳಗೊಂಡ ಕೈವಾರನಾಡು, ಹುಲ್ಲೂರುನಾಡು, ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲ್ಲೂಕಿನ ದಕ್ಷಿಣ ಭಾಗಗಳು ಇಲ್ಯೈಪಾಕ್ಕನಾಡು (ಯಲಹಂಕನಾಡು) ವ್ಯಾಪ್ತಿಯಲ್ಲಿ ಇದ್ದವು.

ಚೋಳರ ನಂತರ ಹೊಯ್ಸಳರು ಮಂಡಲ, ವಳನಾಡು, ನಾಡುಗಳ ವಿಭಾಗದಲ್ಲೇ ಆಡಳಿತ ಮುಂದುವರೆಸಿದರು ಯಾವುದೇ ಬದಲಾವಣೆಗಳನ್ನು ಮಾಡಲಿಲ್ಲ. ವಿಜಯನಗರ ಅರಸರು ವಿಶಾಲವಾದ ಸಾಮ್ಯಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ಅನೇಕ ರಾಜ್ಯಗಳಾಗಿ ವಿಂಗಡಿಸಿ, ಅರಸು ಮನೆತನದವರನ್ನೆ ಅಧಿಕಾರಿಗಳಾಗಿ ನೇಮಿಸುತ್ತಿದ್ದರು. ದೇವನಹಳ್ಳಿ, ಹೊಸಕೋಟೆ, ಚಿಕ್ಕಬಳ್ಳಾಪುರ ತಾಲ್ಲೂಕಿನ ಸುತ್ತ-ಮುತ್ತಲಿನ ಪ್ರದೇಶಗಳು ಸಾದಲಿ ರಾಜ್ಯಕ್ಕೆ ಒಳಪಟ್ಟಿದ್ದರೆ, ನೆಲಮಂಗಲ, ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಲವು ಭಾಗಗಳು ಪೆನುಗೊಂಡ ರಾಜ್ಯಕ್ಕೆ ಒಳಪಟ್ಟಿತ್ತು ಎಂಬುದನ್ನು ಶಾಸನಗಳಿಂದ ಗುರುತಿಸ ಬಹುದು.

**೧.೧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

**ಅಧ್ಯಯನದ ಉದ್ದೇಶ :-**

ಭೌಗೋಳಿಕವಾಗಿ ಸಮೃದ್ಧವಾದ ಪ್ರದೇಶವಾಗಿದ್ದು, ನೈಸರ್ಗಿಕವಾದ ಬೆಟ್ಟ, ಗುಡ್ಡ, ಕಾಡುಗಳಿಂದ ಕೂಡಿರುವ ವಿಶಾಲವಾದ ಭೂ ಪ್ರದೇಶವು ಹೊಂದಿರುವ ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಗಂಗರು, ರಾಷ್ಟ್ರಕೂಟರು, ನೊಳಂಬರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಕುಕ್ಕಲನಾಡ ಪ್ರಭುಗಳು, ಮರಾಠರು, ಯಲಹಂಕನಾಡ ಪ್ರಭುಗಳು, ಮೈಸೂರು ಒಡೆಯರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದಕ್ಕೆ ಈ ಪ್ರದೇಶಗಳಲ್ಲಿ ದೊರೆಯುವ ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಈ ಅರಸು ಮನೆತನಗಳ ಕೊಡುಗೆಗಳಾದ ಕೆರೆಗಳು, ಕಟ್ಟೆಗಳು, ಕೋಟೆಗಳು, ದೇವಸ್ಥಾನಗಳು, ಅಗ್ರಹಾರಗಳು, ಮಂಟಪಗಳು, ಛತ್ರಗಳು ಇತ್ಯಾದಿಗಳ ಅವಶೇಷಗಳು ಮಾತ್ರ ಉಳಿದು ಕೊಂಡಿರುವುದನ್ನು ಕಾಣಬಹುದು.

ಜಿಲ್ಲಾ ವ್ಯಾಪ್ತಿಯಲ್ಲಿ ಆಳ್ವಿಕೆಯ ಕುರುಹುಗಳು ಗಂಗರ ಶಾಸನದಿಂದ ಪ್ರಾರಂಭವಾಗುತ್ತದೆ. ದೀರ್ಘಾಕಾಲದವರೆಗೆ ಆಳ್ವಿಕೆ ನಡೆಸಿದ ಗಂಗರು ತಮ್ಮ ಸಾಮ್ರಾಜ್ಯಕ್ಕೆ ಗಂಗವಾಡಿ ೯೬೦೦೦ ಎಂದು ಕರೆಯಲ್ಪಡುತ್ತಿದ್ದು, ಗ್ರಾಮಾಂತರ ಜಿಲ್ಲೆಯು ಗಂಗವಾಡಿ ೯೬೦೦೦ ವ್ಯಾಪ್ತಿಯಲ್ಲಿ ಒಳಪಟ್ಟಿತ್ತು. ಚನ್ನಪಟ್ಟಣ ತಾಲ್ಲೂಕಿನ ಮಾಕುಂದವನ್ನು, ನೆಲಮಂಗಲ ತಾಲ್ಲೂಕಿನ ಮಣ್ಣೆಯನ್ನು, ಗಂಗರು ರಾಜಧಾನಿಯನ್ನಾಗಿ ಮಾಡಿಕೊಂಡು, ಚಾಲುಕ್ಯರು, ರಾಷ್ಟ್ರಕೂಟರ ಮಹಾಸಾಮಂತರಾಗಿ, ತಮ್ಮ ಪ್ರಭುಗಳ ಪ್ರಮುಖ ಶತ್ರುಗಳಾದ ಪಲ್ಲವರು ಮತ್ತು ಚೋಳರೊಡನೆ ಯುದ್ಧ ಮಾಡಲು ಈ ಪ್ರದೇಶವನ್ನು ಯುದ್ಧ ಭೂಮಿಯಾಗಿ ಮಾಡಿಕೊಂಡಿರ ಬಹುದು.

ಒಂದು ಪ್ರಾಂತ್ಯದ ಅಧ್ಯಯನವು ಆಳಿದ ಅರಸರಿಗಿಂತ ಅಲ್ಲಿ ಬದುಕು ನಡೆಸಿದ ಜನರ ಸಮಗ್ರದ ಅಧ್ಯಯನವಾಗಿದ್ದು, ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ, ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ ಜನತೆಯ ಜೀವನವನ್ನು ಕುರಿತಾದ ಇತಿಹಾಸವನ್ನು ತಿಳಿಯುವುದು ಶಾಸನಗಳ ಅಧ್ಯಯನದಿಂದ ಮಾತ್ರ ಸಾದ್ಯವಾಗುತ್ತದೆ.

ಶಾಸನಗಳು ಚರಿತ್ರೆಯನ್ನು ಕಟ್ಟುವ ಮೂಲ ಆಕರಗಳಾಗಿವೆ. ಒಂದು ಪ್ರದೇಶದ ಒಂದು ರಾಜ್ಯದ ಸಾಮಾಜಿಕ, ಆಡಳಿತ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಸುವಲ್ಲಿ ಶಾಸನಗಳು ಮಹತ್ವದ ದಾಖಲೆಗಳಾಗಿವೆ. ಇತ್ತೀಚೆಗೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದದಲ್ಲಿ ದೊರೆತಿರುವ ಶಾಸನವು ನಮ್ಮ ಕನ್ನಡ ನಾಡಿನ ಚರಿತ್ರೆಯನ್ನು ಸುಮಾರು ೧೦೦ ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ಯುತ್ತದೆ. ವಜಿನಾಗ ಎಂಬ ಅಂಬಿಗನಿಗೆ ಕದಂಬ ದೊರೆ ಭೂಮಿಯನ್ನು ಇನಾಮು ನೀಡುವ

ವಿಷಯವನ್ನು ಹೇಳುವ ಈ ಶಾಸನವು ೭ ಸಾಲುಗಳಿಂದ ಕೂಡಿದ್ದು, ಇದರ ಕಾಲ ಕ್ರಿ.ಶ.ಸುಮಾರು ೩೬೦ ರಿಂದ ೪೫೦ ಇರಬಹುದು ಎಂದು ಭಾರತೀಯ ಪುರಾತತ್ವ ಇಲಾಖೆಯವರು ತಮ್ಮ ಅಂತರ್ಜಾಲ ಪುಟದಲ್ಲಿ ತಿಳಿಸಿದ್ದಾರೆ. ಈ ಹಿಂದೆ ಹಾಸನ ಜಿಲ್ಲೆಯ ಕ್ರಿ.ಶ.೪೫೦ ಹಲ್ಮಿಡಿ ಶಾಸನವನ್ನು ಕನ್ನಡದ ಮೊದಲ ಶಾಸನ ಎನಿಸಿಕೊಂಡಿದ್ದು, ಒಂದು ಚರಿತ್ರೆಯನ್ನು ಪುನಃ ಕಟ್ಟುವಲ್ಲಿ ಈಗ ತಾಳಗುಂದ **(ಚಿತ್ರ ಸಂಖ್ಯೆ – ೫)** ಶಾಸನ ನಾಂದಿ ಹಾಡಿದೆ. ಇಂತಹ ಹಲವಾರು ಶಾಸನಗಳು ಮಣ್ಣಾಗಿ ಮರೆಯಾಗಿದ್ದು, ಶೋಧನೆ ಕಾರ್ಯದಿಂದ ಬೆಳಕಿಗೆ ತಂದಷ್ಟು ನಮ್ಮ ಚರಿತ್ರೆಗೆ ಪುಷ್ಟಿ ನೀಡಿದಂತಾಗುತ್ತದೆ.

ಹಾಗೇಯೇ ಜಿಲ್ಲೆಯಲ್ಲಿನ ಶಾಸನಗಳು ರಾಜ್ಯ ಇತಿಹಾಸಕ್ಕೆ ಯಾವ ರೀತಿಯಲ್ಲಿ ಪ್ರಾಮುಖ್ಯತೆಯನ್ನು ನೀಡಿದೆ ಮತ್ತು ವಿಶೇಷವಾಗಿದೆ ಎಂಬುದಕ್ಕೆ ಹಲವಾರು ಶಾಸನಗಳು ಸಾಕ್ಷಿಯಾಗಿದೆ. ಕರ್ನಾಟಕದಲ್ಲಿಯೇ ಮೊಟ್ಟಮೊದಲ ಬಾರಿಗೆ ಭೂಕಂಪನವಾದ ಮಾಹಿತಿಯನ್ನು ನೆಲಮಂಗಲ ತಾಲ್ಲೂಕಿನ ಬಿಲ್ಲಿನಕೋಟೆಯ ಬಂಡೆಯ ಮೇಲಿನ **(ಚಿತ್ರ ಸಂಖ್ಯೆ – ೪)** ಶಾಸನದಲ್ಲಿ ದಾಖಲಿಸಿದ್ದಾರೆ. ವಿಜಯನಗರ ಆರಸರ ಆಳ್ವಿಕೆಯಲ್ಲಿ ಕ್ರಿ.ಶ.೧೫೦೭ ರಲ್ಲಿ ಕಲಿವರುಷ ೪೬೦೮ನೇ ಪ್ರಭಾವ ಸಂವತ್ಸರದ ಶ್ರಾವಣ ಶುದ್ಧ ೬ ಅಂದರೆ ೧೫ ಜುಲೈ ೧೫೦೭ರ ಗುರುವಾರ ದಿನ ಭೂಮಿ ನಡುಗಿತ್ತು. ಕಮ್ಮಾರ ಕೆಲಸ ಮಾಡುವ ವೀರಯ್ಯನ ಮಗ ದೊಡ್ಡವೀರಯ್ಯನು ಶಾಸನದ ಲಿಪಿಕಾರನಾಗಿದ್ದು[೧೩], ಬಿ.ಎಲ್. ರೈಸ್ ರವರು ೧೯೦೫ರ ಹಿಂದೆಯೇ ಈ ಶಾಸನವನ್ನು ಶೋಧಿಸಿದ್ದಾರೆ.

ಬೌದ್ಧ ಧರ್ಮದ ನೆಲೆಗಳು ದಕ್ಷಿಣ ಕರ್ನಾಟಕದಲ್ಲಿ ಕೋಲಾರದ ನಂತರ ದೊಡ್ಡಬಳ್ಳಾಪುರ ರಾಜಘಟ್ಟದಲ್ಲಿ ದೊರೆತಿದೆ. ಕರ್ನಾಟಕದ ಬಹತೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟ ಜಿಲ್ಲೆಯಲ್ಲಿ ಇದಷ್ಟು ಸಣ್ಣ–ಪುಟ್ಟ ಮನೆತನಗಳು ಬೇರೆ ಯಾವ ಜಿಲ್ಲೆಯಲ್ಲೂ ಇಲ್ಲ. ಬುಕ್ಕರಾಯನ ಕಾಲದಲ್ಲಿ ಜೈನ–ವೈಷ್ಣವ ಧರ್ಮದ ನಡುವೆ ದೊಡ್ಡ ಸಂಘರ್ಷನೇ ನಡೆದಿತ್ತು. ೧೨ನೇ ಶತಮಾನದಲ್ಲಿ ಶಂಕರಾಚಾರ್ಯರು ಶಿವಗಂಗೆ ಬೇಟಿ ನೀಡಿದರ ಪ್ರಯುಕ್ತ ಶಿವಗಂಗೆಯಲ್ಲಿ ಶಂಕರ ಮಠ ಸ್ಥಾಪನೆಯಾಯಿತ್ತು. ಕ್ರಿ.ಪೂ.ದಲ್ಲೇ ಅಂತರಾಷ್ಟ್ರೀಯ ವ್ಯಾಪಾರ ಮಾಡಿರುವ ಕುರುವುಗಳಾಗಿ ರೋಮನ್ ದೇಶದ ನಾಣ್ಯಗಳು ದೊರೆತಿದೆ. ಭೂಮಿ ಜಗಳ & ಅದರ ನಿವಾರಣೆ ಸಂಬಂಧದ ಶಾಸನವನ್ನು ಹೊಸಕೋಟೆಯಲ್ಲಿ ಕಾಣಬಹುದು. ಒಬ್ಬರಾಜ ಮತ್ತೊಂದು ಮನೆತನದ ಮೇಲೆ ಆಕ್ರಮಣ ಮಾಡಿ ವಿಜಯ ಸಾದಿಸಿದಾಗ ಏನೆಲ್ಲ ದೌರ್ಜನ್ಯವಾಗುತ್ತದೆ ಎಂಬುದಕ್ಕೆ ಚೋಳ ರಾಜೇಂದ್ರನ ತಮಿಳು ಶಾಸನವನ್ನು ನೆಲಮಂಗಲದಲ್ಲಿ ಕಾಣಬಹುದು. ಸಾಗುವಳಿದಾರರು ಯಾರೇಸತ್ತರು ಅವರಿಗೆ ಮಕ್ಕಳಿಲ್ಲದಿದ್ದರೆ ಅವರ ಆಸ್ತಿಯು ಯಾರಿಗೆ

[೧೩] ಎ.ಕ-೯, ನೆ.ತಾ.೭೧, ಕ್ರಿ.ಶ.೧೫೦೭, ಬಿಲ್ಲಿನಕೋಟೆ.

ಸೇರಬೇಕು ಎಂಬ ವಿಚಾರವನ್ನು ಸವಿ ವಿಸ್ತಾರವಾಗಿ ಹೇಳಿರುವ ಶಾಸನವನ್ನು ನೆಲಮಂಗಲ ತಾಲ್ಲೂಕಿನ ಕಿತ್ತನಲ್ಲಿ ಗ್ರಾಮದ ಶಾಸನದಲ್ಲಿ ಕಾಣಬಹುದು. ನೆಲಮಂಗಲ ತಾಲ್ಲೂಕಿನ ಮಣ್ಣೆಯು ಗಂಗರ ೩ನೇ ರಾಜಧಾನಿಯಾಗಿದ್ದು, ಮಾರಸಿಂಹನಿಗೆ ಯುವರಾಜ ಪಟ್ಟ ಕಟ್ಟಿದ್ದು, ಮಾರಸಿಂಹನು ಮರಣ ಹೊಂದಿದ್ದು ಇದೇ ಮಣ್ಣೆಯಲ್ಲಿ ಎಂಬುದಕ್ಕೆ ಕಪಿಲೇಶ್ವರ ದೇವಾಲಯದ ಬಳಿ ಮಾರಸಿಂಹನ ವೀರಗಲ್ಲುವಿದೆ. ಹೀಗೆ ಇನ್ನು ಹತ್ತು ಹಲವಾರು ಶಾಸನಾಧರಗಳು ಲಭಿಸುತ್ತದೆ.

ಜಿಲ್ಲೆಯ ಕೆಲವು ಭಾಗಗಳು ಗಡಿ ಭಾಗಗಳಾಗಿದ್ದು, ದ್ವಿಭಾಷಿಕತೆ, ತ್ರಿಭಾಷಿಕತೆಯಿಂದ ಕೂಡಿರುವ ಪ್ರದೇಶವಾಗಿದ್ದು, ಕನ್ನಡ ಶಾಸನಗಳ ಜೊತೆಗೆ ತಮಿಳು ಭಾಷೆಯ ಶಾಸನಗಳು ೨ನೇ ಸ್ಥಾನದಲ್ಲಿದ್ದು, ತೆಲುಗು, ಪಾರ್ಸಿ ಭಾಷೆಯ ಶಾಸನಗಳು ಲಭಿಸಿದೆ. ಜಿಲ್ಲೆಯು ಚಾರಿತ್ರಿಕ ಮಾತ್ರವಲ್ಲದೆ ಪೌರಾಣಿಕವಾಗಿ ಭೌಗೋಳಿಕವಾಗಿಯು ಹಲವಾರು ವಿಶೇಷತೆಯನ್ನು ಹೊಂದಿದೆ, ರಾಮಾಯಣ, ಮಹಾಭಾರತದಲ್ಲಿ ಬರುವ ಹಲವಾರು ಸ್ಥಳಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹೊಂದಿದೆ. ರಾಮಾಯಣದಲ್ಲಿ ರಾಮ ಮತ್ತು ಸೀತೆ ವನವಾಸದಲ್ಲಿದ್ದಾಗ ಈ ಪ್ರದೇಶದಲ್ಲಿ ಹೆಚ್ಚು ವಾಸಿಸಿದ್ದಾರೆ. ಅದರ ಹಿನ್ನೆಲೆಯಲ್ಲಿ ಶ್ರೀರಾಮನಹಳ್ಳಿ, ಭಕ್ತರಹಳ್ಳಿ, ಸೀತಹಳ್ಳಿ, ರಾಮಾಪುರ ಹಾಗೇಯೇ ಮಹಾಭಾರತದಲ್ಲಿನ ಪಾಂಡವರು ವನವಾಸ ಹಾಗೂ ಅಜ್ಞಾತವಾಸದ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ವಾಸಿಸುತ್ತಿದ್ದರಂತೆ ಚಪ್ಪರಕಲ್ಲು, ಧರ್ಮಪುರ, ಐವರುಕಂಡಪುರದ ಹೆಸರು ಬರಲು ಕಾರಣವಾಗಿದೆ.

ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟ ಪ್ರದೇಶವು ಶಾತವಾಹನನ ಆಳ್ವಿಕೆಗೆ ಒಳಪಟ್ಟಿದ್ದು, ಬೌದ್ಧಧರ್ಮದ ಕೇಂದ್ರವಾಗಿರುವುದಕ್ಕೆ ಅಲ್ಲಿ ದೊರೆತಿರುವ ಚೈತ್ಯಾಲಯದ ತಳ ವಿನ್ಯಾಸ, (ಅಡಿಪಾಯ) ಬುದ್ಧನ ವಿಗ್ರಹಗಳು, ಹರಕೆಯ ಸ್ತೂಪಗಳು ಇತ್ಯಾದಿಯಿಂದಾಗಿ ಜಿಲ್ಲೆಯ ಇತಿಹಾಸ ಕ್ರಿ.ಪೂ.ದಿಂದ ಪ್ರಾರಂಭವಾಗುತ್ತದೆ. ಇದಲ್ಲದೆ ಬೃಹತ್ ಶಿಲಾಯುಗದ ಸಂಸ್ಕೃತಿಗೆ ಸೇರಿದ ಅಪೂರ್ವ ನೆಲೆಗಳು, ವಿಭಿನ್ನ ಸಮಾಧಿಗಳು, ನಿಲಸ್ಸು ಕಲ್ಲುಗಳು ಹೇರಳವಾಗಿ ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿರುತ್ತದೆ. ನೆಲಮಂಗಲ ತಾಲ್ಲೂಕಿನ ಬಂಡಿಚಿಕ್ಕನಹಳ್ಳಿ, ಮಹದೇವಪುರ, ದೊಡ್ಡಬಳ್ಳಾಪುರ ತಾಲ್ಲೂಕಿನ ಸೋಲುಕುಂಟೆ, ಕಲ್ಕುಂಟೆ, ರಾಜಘಟ್ಟ, ಭೈರಾಪುರ, ಜಾಲಗೆರೆ, ಅಕ್ಕತಮ್ಮನಹಳ್ಳಿ, ಶ್ರೀರಾಮನಹಳ್ಳಿ, ದೇವನಹಳ್ಳಿ ತಾಲ್ಲೂಕಿನ ಕೊಯಿರಾ, ಹೊಸೂರು, ಜ್ಯೋತಿಪುರ, ಬ್ಯಾಡರಹಳ್ಳಿ, ಹರುವನಹಳ್ಳಿ, ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ ಮುಂತಾದ ಸ್ಥಳಗಳಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ಹಾಗೂ ಬೃಹತಾಕಾರದ ನಿಲುವು ಕಲ್ಲುಗಳು ದೊರೆತಿವೆ. ಹಾಗೆಯೇ ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲುಕಡಿಬೆಟ್ಟ, ಮಾಕಳಿದುರ್ಗ, ಉಜ್ಜೈನಿಬೆಟ್ಟಗಳ ಆವರಣದಲ್ಲಿ ಕಲ್ಲಿನ ಮಂಟಪಗಳಿವೆ.

ಶಾಸನಗಳನ್ನು ಒಂದು ಪಠ್ಯ ಪಾಠ ಮಾಡಿ ವಿಶ್ಲೇಷಿಸುವುದು. ಈ ಸಂಪ್ರಬಂಧದ ಉದ್ದೇಶವಲ್ಲ. ಶಾಸನಗಳು ರೂಪುಗೊಳ್ಳಲು ಕಾರಣಗಳು ಒದಗಿರುವ ಪ್ರೇರಣೆಗಳು, ಅವುಗಳ ಅನುಸಂದಾನದಿಂದ ಒದಗಿ ಬರುವ ಪ್ರಸ್ತುತ ಚಾರಿತ್ರಿಕ ಸಂದರ್ಭದ ಮುಖಾಮುಖಿಯ ಬಗೆಗಳು, ಜನ ಸಮುದಾಯದ ಸಂಸ್ಕೃತಿ, ಆಚಾರ ವಿಚಾರಗಳು ಜೀವನ ಪದ್ಧತಿಯನ್ನು ಅರಿಯುವುದು ಆದ್ದರಿಂದ ಈಗಿನ ಕಾಲಕ್ಕೆ ಇಂದಿನ ಸಮಾಜಕ್ಕೆ ಯಾವ ರೀತಿ ಉಪಯೋಗಕ್ಕೆ ಬರುವುದು ಎಂಬ ವಿಷಯವನ್ನು ಚರ್ಚಿಸಿ, ತಿಳಿಯುವುದು ಹಾಗೇಯೇ ಶಾಸನಗಳಿಂದಾಗಿ ಗ್ರಾಮಾಂತರ ಜಿಲ್ಲೆಯಲ್ಲಿನ ಅಂದಿನ ರಾಜಕೀಯ, ಧಾರ್ಮಿಕ, ಸಾಮಾಜಿಕ ಸ್ಥಿತಿಗಳ ಅವಲೋಕನ ಜೊತೆಗೆ ಆಳರಸರ ಕೊಡುಗೆಗಳಾದ ಸ್ಮಾರಕ ಶಿಲೆಗಳನ್ನು ಶೋಧನೆಗಳ ಮುಖಾಂತರ ಬೆಳಕಿಗೆ ತರುವುದು ಹಾಗೂ ಅವುಗಳನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ಉಡುಗೊರೆಯಾಗಿ ನೀಡುವುದು. ನನ್ನ ಅಧ್ಯಾಯನದ ಮುಖ್ಯ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ :-**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ೨,೨೨೭.೪ ಚದರ ಕಿಲೋ ಮೀಟರ್ ವಿಸ್ತೀರ್ಣ ವ್ಯಾಪ್ತಿಯಲ್ಲಿ ೪ ತಾಲ್ಲೂಕುಗಳಿವೆ. ೨೪೩ ಹಳ್ಳಿಗಳುಳ್ಳ ನೆಲಮಂಗಲ ತಾಲ್ಲೂಕು, ೨೯೯ ಹಳ್ಳಿಗಳ ದೊಡ್ಡಬಳ್ಳಾಪುರ ತಾಲ್ಲೂಕು, ೨೨೦ ಹಳ್ಳಿಯ ದೇವನಹಳ್ಳಿ ತಾಲ್ಲೂಕು, ೨೯೯ ಹಳ್ಳಿಗಳನ್ನು ಒಳಗೊಂಡ ಹೊಸಕೋಟೆ ತಾಲ್ಲೂಕ್ಕಳದ್ದು, ಪ್ರಸ್ತುತ ತಾಲ್ಲೂಕುಗಳಾದ ನೆಲಮಂಗಲ ತಾಲ್ಲೂಕಿನಿಂದ ದಾಸನಪುರ ಹೋಬಳಿಯನ್ನು, ದೇವನಹಳ್ಳಿ ತಾಲ್ಲೂಕಿನಿಂದ ಜಾಲ ಹೋಬಳಿಯನ್ನು ಬೆಂಗಳೂರು ಉತ್ತರ ತಾಲ್ಲೂಕಿಗೆ, ಹೊಸಕೋಟೆ ತಾಲ್ಲೂಕಿನಿಂದ ಬಿದರಹಳ್ಳಿ ಹೋಬಳಿಯನ್ನು ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ೧೯೮೬ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ರಚನೆಯಾದಾಗ ವಿಲೀನಗೊಳಿಸಿದರು. ನನ್ನ ಸಂಶೋಧನೆಯಲ್ಲಿ ದಾಸನಪುರ ಹೋಬಳಿ, ಜಾಲ ಹೋಬಳಿ, ಬಿದರಹಳ್ಳಿ ಹೋಬಳಿಗಳನ್ನು ಒಳಗೊಂಡ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸಂಬಂಧಿಸಿದಂತೆ ಶಾಸನ ಸಂಪುಟವಾದ ಬಿ.ಎಲ್.ರೈಸ್ ಸಂಪಾದಿಸಿರುವ ಎಪಿಗ್ರಾಫಿಯಾ ಕರ್ನಾಟಕ ಸಂಪುಟ-೯, ಇದರ ಜೊತೆಗೆ ಅನುಬಂಧ, ಎಮ್.ಎ.ಆರ್. ಸಂಪುಟಗಳು, ಇತಿಹಾಸ ದರ್ಶನ ಸಂಪುಟಗಳು, ಇತಿಹಾಸ ದರ್ಪಣ ಸಂಪುಟಗಳು, ಪರಿಷತ್ ಪತ್ರಿಕೆಗಳು, ಮಿಥಿಕ್ ಸೊಸೈಟಿಯ ನಿಯತ ಕಾಲಿಕೆಗಳಿಂದ ಸಂಗ್ರಹವಾದ ಕನ್ನಡ, ತಮಿಳು, ತೆಲುಗು, ಪಾರ್ಸಿ, ಸಂಸ್ಕೃತ ಭಾಷೆಯಲ್ಲಿ ಪ್ರಕಟವಾದ ಸುಮಾರು ೬೦೦ ಶಾಸನಗಳನ್ನು ಹಾಗೂ ಅಪ್ರಕಟಿತವಾದ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಸಂಪ್ರಬಂಧ ಕಾರ್ಯವನ್ನು ಮಾಡಿರುತ್ತೇನೆ.

**೧.೨ ಇದುವರೆಗೆ ನಡೆದಿರುವ ಅಧ್ಯಯನ**

"ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನಕ್ಕೆ" ಸಂಬಂಧಿಸಿದಂತೆ ಇದುವರೆಗೆ ಶಾಸನಗಳ ಹಿನ್ನೆಲೆಯಲ್ಲಿ ಪ್ರತ್ಯೇಕವಾದ ಅಧ್ಯಯನಗಳು ನಡೆದಿಲ್ಲ ಎನ್ನಬಹುದು. ಅವಿಭಾಜಿತ ಬೆಂಗಳೂರು ಜಿಲ್ಲೆಯ ಬಗ್ಗೆ ೨೦೦೯ರಲ್ಲಿ ಕೆಂಪರಾಜುರವರು "ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.೩೫೦–೧೭೦೦ರವರಗೆ)" ಎಂಬ ಮಹಾ ಪ್ರಬಂಧವನ್ನು ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ, ಮತ್ತು ಹೆಚ್. ಗುಡ್ಡೆದೇಶ್ವರಪ್ಪರವರು ೨೦೧೦ ರಲ್ಲಿ "ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಮಹಾ ಪ್ರಬಂಧವನ್ನು ಮಾನಸ ಗಂಗೋತ್ರಿ, ಮೈಸೂರು ವಿಶ್ವ ವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲಿ, ಹಾಗೂ ಎಂ.ಜಿ.ಭೈರಪ್ಪನವರು ೨೦೧೭ ರಲ್ಲಿ "ಬೆಂಗಳೂರು ಜಿಲ್ಲೆಗಳ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ" ಎಂಬ ವಿಷಯದ ಮೇಲೆ ಮಾನಸ ಗಂಗೋತ್ರಿ, ಮೈಸೂರು ವಿಶ್ವ ವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲಿ, ಡಿ.ಕೆ.ನಟರಾಜು ರವರು ೨೦೦೮ ರಲ್ಲಿ "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು ಒಂದು ಅಧ್ಯಯನ" ಎಂಬ ವಿಷಯದ ಮೇಲೆ ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಪ್ರೌಢ ಪ್ರಬಂಧಗಳು ನಡೆದಿದ್ದು, ಇದರ ಜೊತೆಗೆ ಕೆಲವು ನಿಯತಕಾಲಿಕೆಗಳು, ಅಭಿನಂದನ ಗ್ರಂಥಗಳು, ಸ್ಮರಣ ಸಂಚಿಕೆಗಳಲ್ಲಿ ಬಿಡಿ ಬಿಡಿ ಲೇಖನಗಳು ಪ್ರಕಟಗೊಂಡಿರುತ್ತದೆ.

**೧.೩ ಅಧ್ಯಯನದ ಮಹತ್ವ**

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಶಾಸನಗಳು ಸ್ಥಿರಸ್ಥಾಯಿಯಾಗಿದ್ದು, ಅವುಗಳ ಸಂಶೋಧನೆ ಮತ್ತು ಕ್ರಮಬದ್ಧ ಅಧ್ಯಾಯ ಪ್ರಸ್ತುತ ಬಹುಮುಖ್ಯವಾಗಿದೆ. "ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನ" ಎಂಬ ವಿಷಯವನ್ನು ಸಂಶೋಧನ ಕಾರ್ಯಕ್ಕೆ ಆಯ್ಕೆ ಮಾಡಿಕೊಂಡಿರುವುದರಿಂದ ಸಂಶೋಧನಾ ವಿಧಾನ ಸಂಪೂರ್ಣವಾಗಿ ಕ್ಷೇತ್ರಕಾರ್ಯವನ್ನು ಆಧರಿಸಿರುವುದಾಗಿದೆ.

ಪ್ರಥಮ ಆಕಾರಗಳಾಗಿ ಬಿ.ಎಲ್.ರೈಸ್‌ರವರ 'ಎಪಿಗ್ರಾಫಿಯ ಕರ್ನಾಟಿಕ', ಸಂಪುಟ–೯, ೧೯೦೫. ಹಾಗೂ ಗೋಪಾಲ್.ಬಿ.ಆರ್.ರವರು ಸಂಪಾದಿಸಿರುವ ಬೆಂಗಳೂರು ಜಿಲ್ಲೆಯ ಅನುಬಂಧ, ೧೯೭೩. ಮತ್ತು ಕೆ.ವಿ.ರಮೇಶ್‌ರವರ 'ಇನ್ಸ್‌ಕ್ರಿಪ್ಷನ್ ಆಫ್ ದಿ ವೆಸ್ಟ್ರನ್ ಗಂಗಾಸ್', ಇತಿಹಾಸ ದರ್ಶನ ಸಂಪುಟಗಳು, ಇತಿಹಾಸ ದರ್ಪಣ ಸಂಪುಟಗಳು ಹಾಗೂ 'ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್', ಇವುಗಳಲ್ಲಿ ಜಿಲ್ಲೆಗೆ ಸಂಬಂಧಿಸಿದಂತೆ ಕೆಲವು ಬಿಡಿ ಲೇಖನಗಳು ಪ್ರಕಟಗೊಂಡಿವೆ. ಈ

ಗ್ರಂಥಗಳಲ್ಲಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸಂಬಂಧಿಸಿದ ಶಾಸನಗಳ ಸಂಗ್ರಹಣೆ, ಅಧ್ಯಯನ, ವಿಶ್ಲೇಷಣೆ ಮಾಡಿ ಪ್ರಥಮ ಆಕಾರವಾಗಿ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಇದರ ಜೊತೆಗೆ ಪೂರಕವಾಗಿ

ಡಾ.ಸೂರ್ಯನಾಥ್ ಕಾಮತ್ ರವರ 'ಕರ್ನಾಟಕ ರಾಜ್ಯ ಗೆಜಿಟಿಯರ್ ಬೆಂಗಳೂರು ಗ್ರಾಮಂತರ ಜಿಲ್ಲೆ' ಗ್ರಂಥದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಭೌಗೋಳಿಕ ವಿಭಾಗ, ದೇವಾಲಯಗಳು, ನದಿಗಳು, ಕೆರೆಗಳು, ಅರಸುಮನೆತನಗಳ ವಿಚಾರಗಳು ನನ್ನ ಅಧ್ಯಯನಕ್ಕೆ ಪೂರಕವಾಗಿವೆ.

ಡಾ. ಚಿದಾನಂದ ಮೂರ್ತಿರವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" (ಕ್ರಿ.ಶ.೪೫೦-೧೧೫೦) ದಲ್ಲಿ ದೇವಾಲಯಗಳಲ್ಲಿನ ಆಚರಣೆಗಳು, ತೆರಿಗೆ ಪದ್ಧತಿ, ಶಿಕ್ಷಣ, ಅಗ್ರಹಾರಗಳು ಮುಂತಾದ ಮಾಹಿತಿಗಳು ಲಭ್ಯವಿದೆ.

ಡಾ. ದೇವರಕೊಂಡಾರೆಡ್ಡಿಯವರ ಗಂಗರ ದೇವಾಲಯಗಳು ಒಂದು ಅಧ್ಯಯನ ಎಂಬ ಕೃತಿಯಲ್ಲಿ ಸಮಗ್ರ ಕರ್ನಾಟಕದಲ್ಲಿ ದೊರೆತಿರುವ ಗಂಗರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು, ಗಂಗರ ಕಾಲದ ಪ್ರತಿಯೊಂದು ದೇವಾಲಯಗಳನ್ನು ವಿಶ್ಲೇಷಿಸುವ ಹಾಗೂ ದೇವಾಲಯಗಳನ್ನು ದಾಖಲಿಸುವ ಪ್ರಯತ್ನವನ್ನು ಈ ಗ್ರಂಥದಲ್ಲಿ ಮಾಡಲಾಗಿದೆ.

ಡಾ. ಐ.ಕೆ. ಶರ್ಮರವರ 'ದ ಟೆಂಪಲ್ ಆಫ್ ದ ಗಂಗಾಸ್ ಆಫ್ ಕರ್ನಾಟಕ' ಎಂಬ ಗ್ರಂಥದಲ್ಲಿ ಜಿಲ್ಲೆಯಲ್ಲಿ ಉತ್ತಮ ಸ್ಥಿತಿಯಲ್ಲಿರುವ ಗಂಗರ ದೇವಾಲಯಗಳನ್ನು ಮಾತ್ರವೇ ಉಲ್ಲೇಖಿಸಿದ್ದು, ಪಾಳುಬಿದ್ದಿರುವ ಹಾಗೂ ಜೀರ್ಣೋದ್ಧಾರಗೊಂಡಿರುವ ದೇವಾಲಯಗಳನ್ನು ದಾಖಲಿಸಲಾಗಿದೆ.

ಶೇಷಶಾಸ್ತ್ರೀಯವರ 'ಕರ್ನಾಟಕದ ವೀರಗಲ್ಲುಗಳು' ಎಂಬ ಕೃತಿಯಲ್ಲಿನ ವೀರಗಲ್ಲಗಳ ಸ್ವರೂಪ, ವಿವಿಧ ಅರಸು ಮನೆತನಗಳ ವೀರಗಲ್ಲುಗಳ ಲಕ್ಷಣಗಳನ್ನು ತಿಳಿಸಿದ್ದಾರೆ.

ಲಕ್ಷ್ಮೀನಾರಾಯಣ ರಾವ್ ಮತ್ತು ಪಂಚಮುಖಿ. ಆರ್.ಎಸ್ ರವರು 'ಕರ್ನಾಟಕದ ಅರಸು ಮನೆತನಗಳು' ಎಂಬ ಕೃತಿಯಲ್ಲಿ ಕರ್ನಾಟಕದ ರಾಜಕೀಯ ಇತಿಹಾಸವನ್ನು ಶಾಸನಗಳ ಆಧಾರದ ಮೇಲೆ ರಚಿಸಿದ್ದಾರೆ.

ಡಾ.ಎಂ.ಜಮುನ ರವರು ಸಂಪಾದಿಸಿರುವ 'ಯಲಹಂಕ ನಾಡಪ್ರಭುಗಳು ಜಾನಪದ ಸಂಪುಟ'ದಲ್ಲಿ ಬೆಂಗಳೂರಿಗೆ ಸಂಬಂಧಿಸಿದಂತೆ ಹೆಸರನ್ನು ಕುರಿತಾದ ಐತಿಹ್ಯ, ಬೆಂಗಳೂರು ನಾಮ ನಿಷ್ಪತ್ತಿ ಬಗ್ಗೆ, ಬೆಂಗಳೂರು ಪ್ರಾಚೀನತೆ ಬಗ್ಗೆ ಮತ್ತು ಯಲಹಂಕ ನಾಡಪ್ರಭುಗಳು ವಾಸ್ತುಶಿಲ್ಪ-

ಶಿಲ್ಪಕಲೆಯಲ್ಲಿ ಜಿಲ್ಲಾ ವ್ಯಾಪ್ತಿಯಲ್ಲಿ ನಾಡಪ್ರಭುಗಳು ಜೀರ್ಣೋದ್ಧಾರ ಮಾಡಿರುವ ದೇವಾಲಗಳು, ದೇವಾಲಯಗಳಿಗೆ ನೀಡಿರುವ ದಾನ ದತ್ತಿಗಳ ವಿವರಗಳಿವೆ.

ಆರ್. ಶೇಷಶಾಸ್ತ್ರಿರವರ 'ಶಾಸನ ಪರಿಚಯ' ಕೃತಿಯಲ್ಲಿ ಶಾಸನದ ಭಾಷೆ, ಲಿಪಿಯ ಸ್ವರೂಪ ಐತಿಹಾಸಿಕ ದಾಖಲೆಗಾಗಿ ಶಾಸನಗಳು, ಅರಸು ಮನೆತನದ ವಂಶಾವಳಿಯ ನಕ್ಷೆಯು ಗಂಗರಿಂದ ವಿಜಯನಗರ ಕಾಲದವರೆಗೆ ದೊರೆಯುತ್ತದೆ.

ಎಂ.ಜಿ.ಮಂಜುನಾಥ ಮತ್ತು ಜಿ.ಕೆ.ದೇವರಾಜಸ್ವಾಮಿ ರವರ 'ಕನ್ನಡ ಲಿಪಿಶಾಸ್ತ್ರ'ದಲ್ಲಿ ಅರಸು ಮನೆತನದ ಲಿಪಿ ಬೆಳವಣಿಗೆಯನ್ನು ಹಂತ ಹಂತವಾಗಿ ಕಾಣಬಹುದು. ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಗಂಗರ, ರಾಷ್ಟ್ರಕೂಟರ, ಹೊಯ್ಸಳರ, ವಿಜಯನಗರ ಅರಸರುಗಳ ಲಿಪಿಗಳು ಉಪಯುಕ್ತವಾಗಿದೆ.

ಬಸವರಾಜ ಸಿ. ಕಲ್ಗುಡಿರವರ 'ಮಹಾಸತಿ ಆಚರಣೆ ಒಂದು ಅಧ್ಯಯನ' ಎಂಬ ಗ್ರಂಥದಲ್ಲಿ ಮಹಾ ಸತಿಯ ಆಚರಣೆಗಳು, ಜನಪದ ಸತಿಗೀತೆಗಳು, ವಿಧಗಳು, ಶಿಲ್ಪಗಳಲ್ಲಿನ ಬಗೆಗಳು ಮುಂತಾದ ಉಪಯುಕ್ತ ಮಾಹಿತಿಗಳಿವೆ.

ವಸು.ಎಂ.ವಿ.ರವರು ಸಂಪಾದಿಸಿದ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು' ಈ ಕೃತಿಯಲ್ಲಿ ಜಿಲ್ಲೆಗೆ ಸಂಬಂಧಿಸಿದಂತೆ ಪಾಳೇಯಗಾರರು, ನಾಡಪ್ರಭುಗಳು, ಸಾಮಂತಾಧಿಪತಿಗಳ ಬಗ್ಗೆ ಮಾಹಿತಿ ಇದೆ.

ಸೂರ್ಯನಾಥ ಕಾಮತ್‌ರವರ 'ಕರ್ನಾಟಕದ ಸಂಕ್ಷಿಪ್ತ ಇತಿಹಾಸ' ಎಂಬ ಕೃತಿಯಲ್ಲಿನ ರಾಜಕೀಯ ಇತಿಹಾಸವು ಉಪಯುಕ್ತವಾಗಿದೆ. ಈ ದ್ವಿತೀಯ ಆಕಾರಗಳನ್ನು ಪರಿಶೀಲಿಸಿ ಎಚ್ಚರಿಕೆಯಿಂದ ಗಮನಿಸಿ ಸೂಕ್ತ ನಿರ್ಧಾರಗಳನ್ನು, ಕ್ಷೇತ್ರ ಕಾರ್ಯದಲ್ಲಿ ಸಂದರ್ಭದಲ್ಲಿ ಸಂಗ್ರಹಿಸಿರುವ ಮಾಹಿತಿಯನ್ನು ಆಧರಿಸಿ, ದೇವಾಲಯಗಳು, ಸ್ಮಾರಕಶಿಲೆಗಳು, ಮೂರ್ತಿಶಿಲ್ಪಗಳು, ಶಾಸನಗಳನ್ನು ಮೂಲ ಆಕಾರಗಳನ್ನಾಗಿ ಬಳಸಿ ಕೊಂಡಿರುವುದರ ಜೊತೆಗೆ ದ್ವಿತೀಯ ಆಕರಗಳನ್ನು ಪೂರಕವಾಗಿ ಬಳಸಿಕೊಂಡು ಈ ಪ್ರೌಢಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**೧.೪ ಅಧ್ಯಯನದ ಸ್ವರೂಪ**

ಶಾಸನವೆಂಬುದು ಕೇವಲ ರಾಜಾಜ್ಞೆ, ಕೊರೆಯಲ್ಪಟ್ಟ ಬರಹ ಆಗಿರದೆ, ಚಿದಾನಂದಮೂರ್ತಿರವರು ಹೇಳುವಂತೆ ದೇಶವೆಂದರೆ ರಾಜ, ಅಧಿಕಾರ, ಮಣ್ಣು, ಸಂಪತ್ತು ಅಲ್ಲ, ದೇಶವೆಂದರೆ ಅಲ್ಲಿನ ಜನರ

ಸಾಂಸ್ಕೃತಿಕ ಬದುಕನ್ನು ಹೇಳುವಂತೆ ಶಾಸನವು ಜನರಿಗೋಸ್ಕರವೇ ಜನರ ಆಚಾರ, ವಿಚಾರಗಳನ್ನು ಒಳಗೊಳ್ಳುವ ಚರಿತ್ರೆಯನ್ನೂ ಶಾಸನಗಳು ಕೇವಲ ಒಬ್ಬರಿಗೆ ಮಾತ್ರ ಸಂಬಂಧಿಸಿರದೆ ಸಾಮಾಜಿಕ ವ್ಯವಸ್ಥೆಯಲ್ಲಿನ ಎಲ್ಲಾ ವ್ಯಕ್ತಿಗಳಿಗೂ ಅಂದರೆ ರಾಜರಿಂದ ಹಿಡಿದು ಸಾಮಾನ್ಯ ವ್ಯಕ್ತಿಯವರೆಗೂ ಎಲ್ಲರಿಗೂ ಸಂಬಂಧಿಸಿದ್ದಾಗಿದೆ. ಸಾಮಾಜಿಕ, ಜನಜೀವನ ಚಿತ್ರಣ, ಆಯಾ ಕಾಲ ಘಟ್ಟದ ರಾಜಕೀಯ ಚಿತ್ರಣ, ರಾಜರ ಧರ್ಮ ಪ್ರೋತ್ಸಾಹ, ದಾನದ ಗುಣಗಳು, ಸಾರ್ವಜನಿಕರ ಶೌರ್ಯ, ರಾಜನಿಷ್ಠೆ, ಮಹಿಳೆಯರ ಸಾಮಾಜಿಕ ಕರ್ತವ್ಯವನ್ನು ಶಾಸನಗಳಿಂದ ತಿಳಿಯಬಹುದು. ರಾಜರನ್ನು ಪ್ರಶ್ನಿಸುವ, ಶಾಸನಗಳನ್ನು ಅಳಿಸುವ, ದಾನವನ್ನು ಹಾಳು ಮಾಡುವ ಸಾರ್ವಜನಿಕರನ್ನು ಹದ್ದು ಬಸ್ತಿನಲ್ಲಿಡುವಂತೆ ಶಾಪಾಶಯಗಳನ್ನು ಹಲವಾರು ಆಯಾಮಗಳಲ್ಲಿ ಶಾಸನಗಳ ಕೊನೆಯಲ್ಲಿ ಕಂಡರಿಸುತ್ತಿದ್ದರು. ಒಟ್ಟಾರೆಯಾಗಿ ಶಾಸನಗಳಲ್ಲಿನ ಚಾರಿತ್ರ್ಯಾತ್ಮಕ, ಸಾಂಸ್ಕೃತಿಕ ಸಂಬಂಧದ ನೆಲೆಗಳನ್ನು ಪ್ರಬಂಧದಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ಸಂಶೋಧನೆಯ ಅನುಕೂಲಕ್ಕಾಗಿ ಹಾಗೂ ನಿಬಂಧನೆಯನ್ನು ಮತ್ತಷ್ಟು ವಿಸ್ತೀರ್ಣಗೊಳಿಸಲು ಈ ಕೆಳಕಂಡತೆ ಅಧ್ಯಾಯಗಳಾಗಿ ವಿಭಾಗಿಸಿಕೊಂಡು, ಅಧ್ಯಾಯಗಳಿಗೆ ಸಂಬಂಧಿಸಿದ ಫಲಕಗಳನ್ನು ಟಿಪ್ಪಣಿ ಮಾಡಿಕೊಂಡು, "ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಯನ"' ಎಂಬ ಶೀರ್ಷಿಕೆಯಡಿಯಲ್ಲಿ ೮ ಅಧ್ಯಾಯಗಳ ಅಧ್ಯಯನ ಕ್ರಮದಲ್ಲಿಯೇ ಸಂಶೋದನಾ ಪ್ರಬಂಧವನ್ನು ಮುಂದುವರೆಸಿಕೊಂಡು, ಆಳರಸರ ಕೊಡುಗೆಗಳನ್ನು ಸಮಗ್ರವಾಗಿ ಜಿಲ್ಲೆಗೆ ಸಂಬಂಧಿಸಿದಂತೆ ಅಂದಿನ ಸಮಾಜದ ರಾಜಕೀಯ ಇತಿಹಾಸ, ಸಾಮಾಜಿಕ, ಧಾರ್ಮಿಕ ಬದುಕನ್ನು ಬಿಂಬಿಸಲಾಗಿದೆ.

**ಅಧ್ಯಾಯ-೧ ಪ್ರಸ್ತಾವನೆ**

ಅಧ್ಯಾಯನದ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ಮಹತ್ವ, ಸ್ವರೂಪ ಹಾಗೂ ಇದುವರೆಗೆ ನಡೆದಿರುವ ಅಧ್ಯಯನಗಳ ವಿವರಗಳನ್ನು ಈ ಅಧ್ಯಯದಲ್ಲಿ ನೀಡುವ ಪ್ರಯತ್ನ ಮಾಡಲಾಗಿದೆ. ಜೊತೆಗೆ ಜಿಲ್ಲೆಯ ಬಗ್ಗೆ ವಿಶಿಷ್ಟವಾದ ಮಾಹಿತಿಯನ್ನು, ಬೆಂಗಳೂರು ಪದ ನಿಷ್ಪತ್ತಿಯನ್ನು ತಿಳಿಸಲಾಗಿದೆ.

**ಅಧ್ಯಾಯ-೨, ಭೌಗೋಳಿಕ ಹಿನ್ನೆಲೆ ಮತ್ತು ಪುರಾತತ್ವ ನೆಲೆಗಳು**

ಪ್ರಸ್ತುತ ಕರ್ನಾಟಕದ ೩೦ ಜಿಲ್ಲೆಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಒಂದು. ಪ್ರಸ್ತುತ ಜಿಲ್ಲೆಯು ೪ ತಾಲ್ಲೂಕುಗಳು, ೨೦ ಹೋಬಳಿಗಳು, ೧೦೬೫ ಹಳ್ಳಿಗಳು, ೫ ನಗರಗಳು, ೬೬ ಗ್ರಾಮ ಪಂಚಾಯಿತಿಗಳು, ೨೦೧೧ನೇ ಜನಸಂಖ್ಯೆ ೯,೯೦,೯೨೩, ೨೨೨೨.೪ ಚದರ ಕಿಲೋಮೀಟರ್ ವಿಸ್ತೀರ್ಣ

ಹೊಂದಿರುವ ಜಿಲ್ಲೆಯು ಬೆಟ್ಟಗುಡ್ಡಗಳಿಂದ ಕೂಡಿದ್ದು, ನೆಲಮಂಗಲ ತಾಲ್ಲೂಕಿನ ಮಹಿಮರಂಗಪುರ, ಶಿವಗಂಗೆ, ರೈಲ್ವೆಗೊಲ್ಲಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕಿನ ಮಧುರೆ, ಮಾಕಳಿದುರ್ಗ, ಉಜ್ಜೈನಿದುರ್ಗ, ದೇವನಹಳ್ಳಿ ತಾಲ್ಲೂಕಿನ ದೇವನಹಳ್ಳಿಯ ಕೋಟೆ, ತಿಮ್ಮರಾಯಿಸ್ವಾಮಿ ಬೆಟ್ಟ ಮುಂತಾದ ಹಲವಾರು ಐತಿಹಾಸಿಕ ಮತ್ತು ಪೌರಾಣಿಕ ಸ್ಥಳಗಳನ್ನು ಜಿಲ್ಲಾ ವ್ಯಾಪ್ತಿಯಲ್ಲಿ ಕಾಣಬಹುದು.

ಕ್ರಿ.ಶ.೧೫೦೧ರಲ್ಲಿ ಮಲ್ಲಭೈರೇಗೌಡನು ದೇವನಹಳ್ಳಿ ಮತ್ತು ದೊಡ್ಡಬಳ್ಳಾಪುರದಲ್ಲಿ ಕೋಟೆ ನಿರ್ಮಿಸಿದರೆ, ಕ್ರಿ.ಶ.೧೫೪೫ ರಲ್ಲಿ ಸುಗಟೂರಿನ ಪ್ರಭು ತಮ್ಮೇಗೌಡರು ಹೊಸಕೋಟೆಯನ್ನು ಕಟ್ಟಿಸಿದನು. ಸುಮಾರು ೭ನೇ ಶತಮಾನದ ಅವಧಿಯಲ್ಲಿ ನೆಲಮಂಗಲ ತಾಲ್ಲೂಕಿನ ಮಾನ್ಯಪುರ (ಮಣ್ಣೆ)ಯನ್ನು ಗಂಗರು ರಾಜಧಾನಿಯನ್ನಾಗಿ ಮಾಡಿಕೊಂಡು ಪ್ರಭುತ್ವವನ್ನು ಸಾಧಿಸಿದರು. ಹುಲುಕಡಿಬೆಟ್ಟವನ್ನು ಕೇಂದ್ರವಾಗಿ ಹುಲುಕಡಿ ಪ್ರಭುಗಳು, ಆವತಿಯನ್ನು ಆವತಿ ಪಾಳೆಯಗಾರರು, ಹೊಸಕೋಟೆಯನ್ನು ಸುಗಟೂರು ಪ್ರಭುಗಳು ಕೇಂದ್ರವಾಗಿ ತಮ್ಮ ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದನು.

ಈ ಅಧ್ಯಾಯದಲ್ಲಿ ಭೌಗೋಳಿಕ ಹಿನ್ನೆಲೆಯ ಜೊತೆಗೆ ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿರುವ ಪುರಾತತ್ವ ನೆಲೆಗಳಾದ ಬೃಹತ್ ಶಿಲಾಯುಗದ ಸಮಾಧಿಗಳು, ನಿಲುಸುಗಲ್ಲುಗಳು ಹೇರಳವಾಗಿ ದೊರೆತಿರುವುದನ್ನು ಸಹ ದಾಖಲಿಸಲಾಗಿದೆ.

**ಅಧ್ಯಾಯ –೩, ರಾಜಕೀಯ ಇತಿಹಾಸ**

ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಕೇಂದ್ರವಾಗಿ ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳನ್ನು ವಿಶೇಷವಾಗಿ ಆಧಾರವನ್ನಾಗಿ ಮಾಡಿಕೊಂಡು, ಜಿಲ್ಲೆಗೆ ಸಂಬಂಧಿಸಿದಂತೆ ರಾಜಕೀಯ ಇತಿಹಾಸವನ್ನು ರಚಿಸಲಾಗಿದೆ. ಜಿಲ್ಲಾ ವ್ಯಾಪ್ತಿಯಲ್ಲಿ ಮೊದಲು ಶಾಸನ ದೊರೆಯುವುದೇ ಗಂಗರಸರಿಂದ ಪ್ರಾರಂಭವಾಗಿ ರಾಷ್ಟ್ರಕೂಟರು, ನೊಳಂಬರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮರಾಠರು, ಮೈಸೂರು ಒಡೆಯರು ಮತ್ತು ನಾಡಪ್ರಭುಗಳು, ಸಾಮಂತರಾಗಿ ಆವತಿ ನಾಡಪ್ರಭುಗಳು, ಸುಗಟೂರು ಪ್ರಭುಗಳು, ಯಲಹಂಕನಾಡ ಪ್ರಭುಗಳು, ಕುಕ್ಕಲನಾಡ ಪ್ರಭುಗಳು, ಹುಲುಕಡಿ ಪ್ರಭುಗಳವರೆಗಿನ ರಾಜಕೀಯ ಇತಿಹಾಸವನ್ನು ತಿಳಿಸುವುದರ ಜೊತೆಗೆ ವಿವಿಧ ಕಾಲಘಟ್ಟದಲ್ಲಿ ಪ್ರತಿಯೊಂದು ರಾಜವಂಶವು ತನ್ನ ಸಂಸ್ಕೃತಿಯನ್ನು ಜಿಲ್ಲಾದ್ಯಂತ ಸ್ಥಿರಗೊಳಿಸಿರುವುದನ್ನು, ಆಳರಸರ ದಾನಗಳು, ಆಡಳಿತ, ಅವರ ಏಳು–ಬೀಳುಗಳು, ಕೊಡುಗೆಗಳು, ರಾಜಕೀಯ ಸ್ಥಿರತೆಯನ್ನು ಈ ಅಧ್ಯಾಯದಲ್ಲಿ ಕಾಣಬಹುದು.

## ಅಧ್ಯಾಯ-೪ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿ

ಈ ಅಧ್ಯಾಯದಲ್ಲಿ ಧಾರ್ಮಿಕ & ಸಾಮಾಜಿಕ ಸ್ಥಿತಿಗತಿಯನ್ನು ಚರ್ಚಿಸಲಾಗಿದೆ. ದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿ ಜೊತೆಗೆ ಸಾಮಾಜಿಕ ಬದುಕಿಗೆ ನೆರವಾಗುತಿತ್ತು. ಧಾರ್ಮಿಕವಾಗಿ ಬೌದ್ಧ, ಜೈನ, ಶೈವ, ವೀರಶೈವ, ವೈಷ್ಣವ ಧರ್ಮಗಳು ಬೆಳೆದು ಬಂದ ಪರಂಪರೆಯನ್ನು ವಿವರಿಸಲಾಗಿದೆ. ಜಿಲ್ಲೆಯಲ್ಲಿ ಮೊದಲ ಧಾರ್ಮಿಕ ನೆಲೆಯಾಗಿ ಬೌದ್ಧ ಧರ್ಮದ ಕುರುಹುಗಳಾಗಿ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟದಲ್ಲಿ ನಡೆದ ಉತ್ಖನನದಿಂದಾಗಿ ಚೈತ್ಯಾಲಯ ಮತ್ತು ವಿಹಾರಗಳಿರುವುದಕ್ಕೆ ಅವಶೇಷದ ದಾಖಲೆಗಳು ದೊರೆತಿರುವುದರಿಂದ ಈ ಭಾಗದಲ್ಲಿ ಬೌದ್ಧ ಭಿಕ್ಷುಗಳು ವಾಸವಾಗಿದ್ದು, ಧಾರ್ಮಿಕ ಚಟುವಟಿಕೆಗಳು ನಡೆಸುತ್ತಿದ್ದರು ಎನ್ನುವುದಕ್ಕೆ ಸಹ ಈ ಸ್ಥಳದಲ್ಲಿ ನೂರಾರು ಸಂಖ್ಯೆಯಲ್ಲಿ ಮಣ್ಣಿನಲ್ಲಿ ಮಾಡಿದ ಹರಕೆಯ ಸ್ತೂಪಗಳು ದೊರೆತಿರುವುದು ಎಂತಹವರನ್ನು ಬೆರಗುಗೊಳಸುತ್ತದೆ.

ಜೈನ ಧರ್ಮವು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದೂ ಅದನ್ನು ರಾಜರುಗಳು ಪೋಷಿಸುತ್ತಿದ್ದರು ಎನ್ನುವುದಕ್ಕೆ ಗಂಗರಸರ ಮಾರಸಿಂಹ ಕಾಲದಲ್ಲಿ ಶ್ರೀವಿಜಯನು ಜೀನೇಂದ್ರ ಭವವನ್ನು ಮಣ್ಣೆಯಲ್ಲಿ ನಿರ್ಮಿಸಿದನು. ಗಂಗರಸರು ಶೈವಧರ್ಮ, ವೈಷ್ಣವ ಧರ್ಮವನ್ನು ಸಹ ಪ್ರೋತ್ಸಾಹಿಸುತ್ತಿದ್ದರು. ನಂತರ ಚೋಳರು ಶೈವಧರ್ಮಕ್ಕೆ ಹೆಚ್ಚಿನ ಆಧ್ಯತೆಯನ್ನು ನೀಡುವುದರೊಂದಿಗೆ ಶೈವ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಮಾಡಿದ್ದರು.

ಹೊಯ್ಸಳರು ಶೈವಧರ್ಮಕ್ಕಿಂತ ವೈಷ್ಣವಧರ್ಮಕ್ಕೆ ಹೆಚ್ಚಿನ ಒಲವನ್ನು ನೀಡಿದರು. ಬಹುಶಃ ಶಂಕರಾಚಾರ್ಯ, ಮದ್ವಾಚಾರ್ಯರ ಪ್ರಭಾವದಿಂದಲೊ ವೈದಿಕಧರ್ಮ ಹೆಚ್ಚು ಪ್ರಚಲಿತವಾದ ಧರ್ಮವಾಯಿತ್ತು. ನಂತರ ವೈಷ್ಣವಧರ್ಮವು ಕದಂಬ, ಗಂಗಅರಸ ಕಾಲದಿಂದ ಚಾಲ್ತಿಯಲ್ಲಿದ್ದ ಧರ್ಮವು ಹೊಯ್ಸಳ ಕಾಲಕ್ಕಿಂತ ವಿಜಯನಗರ ಕಾಲದಲ್ಲಿ ಹೆಚ್ಚು ಪ್ರಸಿದ್ಧಿ ಪಡೆದ ರಾಜಧರ್ಮವಾಯಿತು. ವಿಜಯನಗರ ನಂತರ ಮೈಸೂರು ಒಡೆಯರು ಸಹ ವೈಷ್ಣವ ಧರ್ಮ ಅವಲಂಬಿಯಾಗಿದ್ದರು ಎಂಬುದಕ್ಕೆ ಜಿಲ್ಲಾ ವ್ಯಾಪ್ತಿಯಲ್ಲಿ ಅವರ ಕೊಡುಗೆಗಳಾಗಿ ಕಾಣಿಸುವ ದೇವಾಲಯಗಳೇ ಸಾಕ್ಷಿಯಾಗಿದೆ.

ಹಾಗೇಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಗಂಗರಸರಿಂದ ಹಿಡಿದು ಮೈಸೂರು ಒಡೆಯರು ವರೆಗಿನ ಕ್ರಿ.ಶ.೫ನೇ ಶತಮಾನದಿಂದ ೧೮ನೇ ಶತಮಾನದವರೆಗೆ ವಿವಿಧ ಕಾಲಘಟ್ಟಗಳಲ್ಲಿನ ವರ್ಣವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ದೇವದಾಸಿ ಪದ್ಧತಿ, ಮಠಗಳು, ಅರವಟಿಕೆ, ಛತ್ರಗಳು, ಉಡುಪು & ಆಭರಣಗಳು, ಕೆರೆಗಳು, ತೆರಿಗೆಗಳು, ಕೋಟೆಗಳು ಇತ್ಯಾದಿಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು.

ಬ್ರಾಹ್ಮಣರು ಸಮಾಜದಲ್ಲಿ ಗಣ್ಯಸ್ಥಾನವನ್ನು ಹೊಂದಿದ್ದರು ಎನ್ನಬಹುದು. ಸಾಕಷ್ಟು ವೃತ್ತಿ ಆಧಾರಿತ ಜಾತಿಗಳನ್ನು ಶಾಸನದಲ್ಲಿ ಕಾಣಬಹುದು. ಅಗ್ರಹಾರಗಳು ಬ್ರಾಹ್ಮಣರ ನೆಲೆಯಾಗಿವುದರ ಜೊತೆಗೆ ಪ್ರಾಚೀನ ಅಧ್ಯಾಯನ ಕೇಂದ್ರಗಳಾಗಿದ್ದವು. ಚೋಳರ ಕಾಲದಲ್ಲಿ ಗ್ರಾಮಗಳನ್ನು ಚತುರ್ವೇಧಿ ಮಂಗಲಗಳನ್ನಾಗಿ ಮಾಡಿ ಬ್ರಾಹ್ಮಣರಿಗೆ ದಾನ ನೀಡುತ್ತಿದ್ದರು. ದೇವಾಲಯಗಳು, ಮಠಗಳು ವಿದ್ಯೆಯನ್ನು ಕಲಿಸುವ ಕೇಂದ್ರಗಳಾಗಿ ಸ್ತ್ರೀಯರಿಗೂ ವಿದ್ಯೆ ಕಲಿಯಲು ಅವಕಾಶಗಳನ್ನು ಕಲ್ಪಿಸಿದ್ದರು. ಕೃಷಿಯು ಪ್ರಧಾನ ಉದ್ಯೋಗವಾಗಿದ್ದು, ಪಶು ಸಂಗೋಪನೆಯು ಉಪ ಕಸುಬಾಗಿತ್ತು. ವಿವಿಧ ವೃತ್ತಿಯರು, ವರ್ತಕರ ಸಮೂಹಗಳು ಆರ್ಥಿಕ ವ್ಯವಸ್ಥೆಗೆ ಸಾಕಷ್ಟು ಕೊಡುಗೆಗಳನ್ನು ನೀಡಿದ್ದರು.

ದೇವನಹಳ್ಳಿಯ ಕೋಟೆ, ತೋಡಲುಬಂಡೆಯ ಕೋಟೆಯನ್ನು ಬಿಟ್ಟರೇ ಊಳಿದಂತೆ ನೆಲಮಂಗಲ ತಾಲ್ಲೂಕಿನ ಬಿಲ್ಲನಕೋಟೆ, ಮೊದಲಕೋಟೆ, ನಿಜಗಲ್ಲನಕೋಟೆ, ದೊಡ್ಡಬಳ್ಳಾಪುರ ತಾಲ್ಲೂಕಿನ ಮಾಕಳಿದುರ್ಗ, ಹುಲುಕಡಿಬೆಟ್ಟ, ದೊಡ್ಡಬಳ್ಳಾಪುರದ ಕೋಟೆ, ದೇವನಹಳ್ಳಿ ತಾಲ್ಲೂಕಿನ ಆವತಿ, ಕುಂದಾಣ, ನಲ್ಲೂರು, ಹೊಸಕೋಟಿ ಮುಂತಾದ ಸ್ಥಳಗಳಲ್ಲಿನ ಕೋಟೆಯ ಅವಶೇ಼ಷಗಳನ್ನು ಮಾತ್ರ ಕಾಣ ಬಹುದು.

## ಅಧ್ಯಾಯ – ೫ ದೇವಾಲಯಗಳು

ಈ ಅಧ್ಯಾಯದಲ್ಲಿ ಶಾಸನೋಕ್ತ ಮತ್ತು ಶಾಸನೋಕ್ತವಲ್ಲದ ದೇವಾಲಯಗಳ ಬಗ್ಗೆ ಅಧ್ಯಯನ ನಡೆಸಲಾಗಿದೆ. ದೇವಾಲಯಗಳು, ಚೈತ್ಯಾಲಯ, ಬಸದಿಗಳ ರಚನೆಗಳೇ ಆಳರಸರ ಸಾಂಸ್ಕೃತಿಕ ಕೊಡುಗೆಗಳಾಗಿ ಕಣ್ಣಿಗೆ ಕಾಣುವುದು. ಆಳರಸರು ವಿವಿಧ ಕಾಲಘಟ್ಟದಲ್ಲಿ ತಮ್ಮ ಅಗತ್ಯತೆಗೆ ಅಥವಾ ಪ್ರಜೆಗಳ ಹಿತಾಸಕ್ತಿಗೆ ಅನುಗುಣವಾಗಿ ದೇವಾಲಯಗಳನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದು. ಗಂಗರು ಪ್ರಾರಂಭದಲ್ಲಿ ಗುಹೆಗಳಲ್ಲಿ ತಮ್ಮ ಇಷ್ಟ ದೇವರನ್ನು ಇಟ್ಟು ಪೂಜಿಸುತಿರುವುದನ್ನು ಶಿವಗಂಗೆ, ಗವಿ ಗಂಗಾಧರೇಶ್ವರ, ಕಲ್ಯಾ, ಹೂಜಿಗಲ್ಲುಗಳಲ್ಲಿ ಕಾಣಬಹುದು.

ನಂತರ ಶಿಲಾ ಸಮಾದಿಗಳ ರಚನೆಯನ್ನು ಹೋಲುವ ರೀತಿಯ ದೇವಾಲಯಗಳನ್ನು ನಿರ್ಮಿಸಲು ಪ್ರಾರಂಭಿಸಿರುವುದನ್ನು ಕಣ್ವ ಜಲಾಶಯದ ಹಿಂಭಾಗದಲ್ಲರುವ ೪ ಕಂಬಗಳ ಮೇಲೆ ಕಲ್ಲಿನ ಹೊದಿಕೆಯನ್ನು ಹಾಕಿ ಶಿವಲಿಂಗ ಮತ್ತು ನಂದಿಯನ್ನು ಪ್ರತಿಷ್ಟಾಪಿಸಿ ಪೂಜಿಸುವ ಹಂತದ ನಂತರ ಚಿಕ್ಕದಾದ ಗರ್ಭಗುಡಿ, ತೆರೆದ ಅಂತರಾಳದ, ನವರಂಗ ರಚನೆಗಳ ಆರಂಭವನ್ನು ನೆಲಮಂಗಲ ತಾಲ್ಲೂಕಿನ ಶಿವಗಂಗೆ ಸಮೀಪದ ಬಾಣವಾಡಿಯ ಕೆರೆಯ ಒಳಗೆ ಪಾಳು ಬಿದ್ದಿರುವ ಪ್ರಾಣೇಶ್ವರ ದೇವಾಲಯವು ನಿರ್ಲಕ್ಷಕ್ಕೆ ಒಳಗಾಗಿದ್ದು, ಲಿಂಗವಿಲ್ಲ ಆದರೆ ದೊಡ್ಡದಾದ ಪಾಣಿಪೀಠ ಮತ್ತು ಬಸವವಿದೆ.

ಯಾವುದೇ ಅಧಿಸ್ಥಾನ, ಭಿತ್ತಿ, ಶಿಖರವನ್ನಾಗಲಿ ಹೊಂದಿಲ್ಲ. ಅನಂತರ ಏಕಶಿಲ ಶಿಖರದ ರಚನೆಯನ್ನು ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರ ಸೋಮೇಶ್ವರ ದೇವಾಲಯಗಳಲ್ಲಿ ಕಾಣಬಹುದು. ಈ ದೇವಾಲಯಗಳು ಪಾದ, ಅಧಿಸ್ಥಾನ, ಭಿತ್ತಿಯಲ್ಲಿ ಅರೆಗಂಭಗಳನ್ನು ಹೊಂದಿದೆ. ನಂತರ ದೇವಾಲಯಗಳನ್ನು ಅಲಂಕರಣೆ ಮಾಡಲು ಪ್ರಾರಂಭಿಸಿದರು ಎಂಬುದನ್ನು ನೆಲಮಂಗಲ ತಾಲ್ಲೂಕಿನ ಮಣ್ಣೆ, ದೊಡ್ಡ ಬಳ್ಳಾಪುರ ತಾಲ್ಲೂಕಿನ ಗಂಡರಾಜಪುರ ದೇವಾಲಯ ಮತ್ತು ದೇವನಹಳ್ಳಿ ತಾಲ್ಲೂಕಿನ ಗಂಗವಾರದ ಸೋಮೇಶ್ವರ ದೇವಾಲಯಗಳಲ್ಲಿ ಕಾಣಬಹುದು. ಗಂಗರ ಬಹುತೇಕ ದೇವಾಲಯಗಳಲ್ಲಿನ ನವರಂಗದ ವಿನ್ಯಾಸಗಳಲ್ಲಿ ವೃತ್ತಾಕಾರದ ಕಮಲದ ಉಬ್ಬು ರಚನೆಯನ್ನು ಸಾಮಾನ್ಯವಾಗಿ ಕಾಣಬಹುದಾಗಿದೆ. ಗಂಗರಸರು ದೇವಾಲಯಗಳ ರಚನೆಯಲ್ಲಿ ಯಾರನ್ನು ಅನುಸರಿಸದೆ ತಮ್ಮದೆ ಆದ ಶೈಲಿಯಲ್ಲಿ ಹೊಸ ಆವಿಷ್ಕಾರಗಳೊಂದಿಗೆ ದೇವಾಲಯಗಳನ್ನು ನಿರ್ಮಿಸಿದ್ದನು.

ಶೈವ ದೇವಾಲಯಗಳನ್ನು ಊರಿನ ಹೊರಗೆ, ಕೆರೆ ಕೋಡಿ ಬಳಿಯೇ ಏಕೆ ನಿರ್ಮಿಸುತ್ತಿದ್ದರು ಎಂಬುದನ್ನು ಹಾಗೆಯೇ ದೇವಾಲಯಗಳ ರಚನೆಯನ್ನು ಸಹ ತಿಳಿಸಲಾಗಿದೆ. ಗಂಗರ ನಂತರ ಚೋಳರು ಸಹ ಶೈವಾಲಂಬಿಯಾಗಿದ್ದು, ಶೈವ ದೇವಾಲಯಗಳಿಗೆ ಹೆಚ್ಚಿನದಾಗಿ ಕೊಡುಗೆಗಳನ್ನು ನೀಡಿದ್ದಾರೆ. ಚೋಳರು ಪ್ರಾರಂಭದಲ್ಲಿ ಗಂಗಶೈಲಿಯ ಕೆಲವೊಂದು ಅಂಶಗಳನ್ನು ಅಳವಡಿಸಿಕೊಂಡು ದೇವಾಲಯಗಳನ್ನು ನಿರ್ಮಾಣ ಮಾಡಿರುವುದಕ್ಕೆ ನೆಲಮಂಗಲದಲ್ಲಿನ ಬಿನ್ನಮಂಗಲದ ಮುಕ್ತಿನಾಥೇಶ್ವರ, ಸೋಲದೇವನಹಳ್ಳಿಯ ಸಿದ್ದೇಶ್ವರ ದೇವಾಲಯವನ್ನು ಕಾಣಬಹುದು. ದುರದೃಷ್ಟವೆಂಬಂತೆ ಸಿದ್ದೇಶ್ವರ ದೇವಾಲಯವೇ ಇಲ್ಲವಾಗಿದೆ. ಸಿದ್ದೇಶ್ವರ ದೇವಾಲಯ ನಿರ್ಮಾಣದ ಉಲ್ಲೇಖವಿರುವ ಶಾಸನವು ಮೈಸೂರು ಓರಿಯೆಂಟಲ್ ವಸ್ತು ಸಂಗ್ರಹಾಲಯದಲ್ಲಿ ಸಂರಕ್ಷಿಸಲಾಗಿದೆ. ಚೋಳರು, ಗಂಗರು ನಿರ್ಮಿಸಿದ್ದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿರುವುದರಿಂದ ಇಂದಿಗೂ ಆ ದೇವಾಲಯಗಳನ್ನು ಚೋಳರು ನಿರ್ಮಿಸಿದರು ಎಂದು ಸ್ಥಳೀಯರು ಹೇಳುತ್ತಿರುವುದನ್ನು ಗಮನಿಸಬಹುದು. ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು ಶೈವ ದೇವಾಲಯಗಳಿಗಿಂತ ವೈಷ್ಣವ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಮತ್ತು ಹೆಚ್ಚಿನ ಆದ್ಯತೆಗಳನ್ನು ನೀಡಿರುವುದನ್ನು ಹಾಗೂ ಆಳರಸರ ದೇವಾಲಯಗಳ ಜೊತೆಗೆ ಜಿಲ್ಲಾ ವ್ಯಾಪ್ತಿಯಲ್ಲಿರುವ ದೇವಾಲಯಗಳಿರುವ ಸ್ಥಳಗಳ ಮಾಹಿತಿಯನ್ನು ದೇವಾಲಯದ ಆವರಣದಲ್ಲಿನ ಮೂರ್ತಿ ಶಿಲ್ಪಗಳನ್ನು ದಾಖಲಿಸುವುದರ ಜೊತೆಗೆ ದೇವಾಲಯಕ್ಕೆ ದಾನ ನೀಡಿರುವ ಶಾಸನಗಳ ಸ್ಥಳ ವಿವರಣೆಯನ್ನು ಸಹ ಈ ಅಧ್ಯಾಯದಲ್ಲಿ ನೀಡಲಾಗಿದೆ. ಸೂರ್ಯ, ಭೈರವ, ಸಪ್ತಮಾತೃಕೆಯರು, ಮಹಿಷಮರ್ಧಿನಿಯರ

ಮೂರ್ತಿಶಿಲ್ಪಗಳು ದೊರೆತಿರುವುದನ್ನು ಗಮನಿಸಿದರೆ ಈ ಪ್ರದೇಶದಲ್ಲಿ ಹೆಚ್ಚಾಗಿ ಅಂದಿನ ಕಾಲದ ಜನರು ಮೂರ್ತಿಯ ಆರಾಧಕರಾಗಿದ್ದರು ಎಂದು ಊಹಿಸಬಹುದು.

## ಅಧ್ಯಾಯ – ೩ ಸ್ಮಾರಕ ಶಿಲೆಗಳು

ಜಿಲ್ಲಾ ವ್ಯಾಪ್ತಿಯಲ್ಲಿ ಆಳರಸರ ಪ್ರಮುಖ ಕೊಡುಗೆಗಳೊಂದಾದ ಸ್ಮಾರಕಶಿಲೆಗಳಲ್ಲಿ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಆತ್ಮಬಲಿದಾನಗಳನ್ನು ಕಾಣಬಹುದು. ಶಿಲ್ಪಗಳ ನಿರ್ಮಾಣ, ಹಿಂದಿನ ಉದ್ದೇಶ, ಲಕ್ಷಣದೊಂದಿಗೆ ವಿವರಿಸಲಾಗಿದೆ. ವೀರಗಲ್ಲುಗಳಲ್ಲಿ ಯುದ್ಧ ವೀರಗಲ್ಲುಗಳು, ತುರುಗೋಳ್, ಪೆಣ್ಬುಯ್ಯಲ್, ಊರಳಿವುನ ವೀರಗಲ್ಲುಗಳನ್ನು, ಮಾಸ್ತಿಗಳಲ್ಲಿ ಒಕ್ಕೈಮಾಸ್ತಿ, ಇಕ್ಕೈಮಾಸ್ತಿಗಳನ್ನು ಕಾಣಬಹುದು. ಶಾಸನ ವೀರಗಲ್ಲುಗಳ ಜೊತೆ ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿರುವ ಶಿಲ್ಪ ವೀರಗಲ್ಲುಗಳನ್ನು ಸಹ ಈ ಅಧ್ಯಾಯದಲ್ಲಿ ದಾಖಲಿಸಿರುತ್ತೇನೆ.

ವೀರಗಲ್ಲುಗಳಲ್ಲಿ ಗಂಗರು, ನೊಳಂಬರು, ಸ್ವರ್ಗಲೋಕದ ಕಲ್ಪನೆಯನ್ನು, ಹೊಯ್ಸಳರು, ವಿಜಯನಗರ ಅರಸರುಗಳಲ್ಲಿ ಐಕ್ಯರಾದ ಕಲ್ಪನೆಗಳನ್ನು ಕಾಣಬಹುದು. ಶೈವ ಧರ್ಮೀಯರಾದರೆ ಲಿಂಗ, ಬಸವ, ಡಮರುಗಗಳ ಉಬ್ಬು ಶಿಲ್ಪಗಳಿರುತ್ತದೆ. ವೈಷ್ಣವ ಧರ್ಮೀಯರಾದರೆ ಶಂಖ, ಚಕ್ರ, ಗರುಡ ಉಬ್ಬು ಶಿಲ್ಪಗಳನ್ನು ವೀರಗಲ್ಲುಗಳಲ್ಲಿ ಕಾಣಬಹುದು. ವೀರಗಲ್ಲುಗಳ ವಿಸ್ತಾರ, ಎತ್ತರ, ವೈವಿಧ್ಯತೆಗಳು ಆಗಿನ ಯುದ್ಧ ಭೂಮಿ, ರಣರಂಗದ ಚಿತ್ರಣವನ್ನೇ ನೀಡುವುದನ್ನು ಬೇಗೂರು, ಕೊಯಿರ, ಕೋಲಾರ, ನಂಬಿಹಳ್ಳಿ ಮತ್ತು ವೆಂಕಟಗಿರಿಕೋಟೆಯ (ಅಪ್ರಕಟಿತ ವೀರಗಲ್ಲು) ಹೊಸ ವೀರಗಲ್ಲುಗಳಲ್ಲಿ ಕಾಣಬಹುದು. ಒಂದು ಯುದ್ಧದ ಸಂಪೂರ್ಣ ಚಿತ್ರಣದ ಜೊತೆಗೆ ಭೀಭತ್ಸವನ್ನು ಕಣ್ಮುಂದೆ ತೆರೆದಿಡುತ್ತದೆ. ಶಿಲ್ಪಿಯು ತಾನು ರಣರಂಗದಲ್ಲಿ ಕಂಡ ಸನ್ನಿವೇಶವನ್ನು ಹಾಗೆಯೇ ಕೆತ್ತಿರುವುದರಲ್ಲಿ ಪ್ರೇತ ರಕ್ತವನ್ನು ಕುಡಿಯುವುದು, ಶವಗಳನ್ನು ಎತ್ತಿಕೊಂಡು ಹೊಗುವುದು, ರಣಭೈರವಿ ಕುಣಿಯುವುದು, ಸ್ವರ್ಗಾರೋಹಣ ಮುಂತಾದ ಕಾಲ್ಪನಿಕ ಅಂಶಗಳನ್ನು ಕಾಣಬಹುದು. ಗಾಯಗೊಂಡ ವ್ಯಕ್ತಿಗಳನ್ನು ಸ್ಟ್ರೆಚರ್ ಮೇಲೆ ತೆಗೆದುಕೊಂಡು ಹೋಗುತ್ತಿರುವ ದೃಶ್ಯ ಅಂದಿನ ವೈದ್ಯಕೀಯ ಪದ್ಧತಿಯ ಬೆಳವಣಿಗೆಯನ್ನು ತೋರಿಸುತ್ತದೆ. ಯುದ್ಧದಲ್ಲಿ ಸತ್ತ ಸೈನಿಕರ ಕಣ್ಣನ್ನು ಕಾಗೆ ಕೀಳುತ್ತಿರುವುದು, ನಾಯಿ ತಲೆಬುರುಡೆಯನ್ನು ಎತ್ತಿಕೊಂಡು ಹೋಗುತ್ತಿರುವ ದೃಶ್ಯಗಳನ್ನು ಬೇಗೂರಿನ ವೀರಗಲ್ಲಿನಲ್ಲಿ ಕಂಡು ಬಂದರೆ, ಆನೆಗಳು ಯುದ್ಧದಲ್ಲಿ ಎದುರಾಳಿಗಳಿಗೆ ಅತಿ ಹೆಚ್ಚು ನಷ್ಟ, ಹಾನಿಯುಂಟು ಮಾಡುತ್ತಿದ್ದು, ಆನೆಗಳ ಶಕ್ತಿ ಹೆಚ್ಚು ಅಡಗಿರುವುದು ಅದರ ಸೊಂಡಿಲಿನಲ್ಲಿ ಆದ್ದರಿಂದ ಸೊಂಡಿಲನ್ನು ಮೊದಲು ಕಡಿದರೆ

ಯುದ್ಧದಲ್ಲಿ ಸಂಭವಿಸುವ ಅಪಾರ ಪ್ರಾಣ ಹಾನಿಯನ್ನು ತಪ್ಪಿಸಬಹುದೆಂದು ವೀರನು ಆನೆಯ ಸೊಂಡಿಲನ್ನು ಕತ್ತಿಸಿರುವುದನ್ನು ಕೊಯಿರ ವೀರಗಲ್ಲಿನಲ್ಲಿ ಕಾಣಬಹುದು.

**ಅಧ್ಯಾಯ-೭, ಸ್ಥಳನಾಮಗಳು ಮತ್ತು ಐತಿಹ್ಯಗಳು**

ಸ್ಥಳನಾಮಗಳ ಅಧ್ಯಯನ ಇತ್ತೀಚೆಗೆ ಹೆಚ್ಚು ಪ್ರಸಿದ್ಧಿಯಾಗಿದ್ದು, ಬೆಟ್ಟ, ನದಿ, ಕುಂಟೆ, ಹಳ್ಳ, ಊರಿನ ಹೆಸರುಗಳ ಹಿನ್ನೆಲೆಯಾದ ಪ್ರಾಕೃತಿಕವಾಗಿ, ಐತಿಹಾಸಿಕವಾಗಿ, ಪೌರಾಣಿಕವಾಗಿ ಹೆಸರುಗಳನ್ನು ಹೊಂದಿರುವ ಗ್ರಾಮನಾಮಗಳನ್ನು ಕಾಣಬಹುದು. ಇವುಗಳ ಜೊತೆಗೆ ಶಾಸನಗಳಲ್ಲಿ ಉಕ್ತವಾಗಿರುವ ಸ್ಥಳನಾಮಗಳನ್ನು ಕೇಂದ್ರವಾಗಿಟ್ಟು ಕೊಂಡು, ಈ ಅಧ್ಯಾಯದಲ್ಲಿ ಮಾಹಿತಿಯನ್ನು ಕಲೆಹಾಕಲಾಗಿದೆ. ಆಳರಸರ ದಾನದಿಂದ ಅಥವಾ ದಾನಕ್ಕಾಗಿ ಗ್ರಾಮನಾಮಗಳ ಹುಟ್ಟು ಅಥವಾ ಗ್ರಾಮಗಳಿಗೆ ಪರ್ಯಾಯ ಹೆಸರುಗಳಟ್ಟುರುವುದನ್ನು ಶಾಸನಗಳಲ್ಲಿ ಕಾಣಬಹುದು.

ಹಾಗೆಯೇ ಐತಿಹ್ಯಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಜಿಲ್ಲಾ ವ್ಯಾಪ್ತಿಯಲ್ಲಿನ ಪ್ರಮುಖ ದೇವಾಲಯಗಳಿಗೆ, ಸ್ಥಳಗಳಿಗೆ, ವೀರಗಲ್ಲುಗಳಿಗೆ ಸಂಬಂಧಿಸಿದಂತೆ ಜನರ ಬಾಯಿಯಲ್ಲಿ ದಂತಕತೆಯ ರೂಪದಲ್ಲಿ ಕಂಡ ಐತಿಹ್ಯಗಳನ್ನು ಈ ಅಧ್ಯಾಯದಲ್ಲಿ ದಾಖಲಿಸಿರುತ್ತೇನೆ.

**ಅಧ್ಯಾಯ-೮ ಉಪಸಂಹಾರ**

ಯಾವುದೇ ಒಂದು ಸಂಶೋಧನೆಗೆ ಅದರ ಉದ್ದೇಶ ಮತ್ತು ವ್ಯಾಪ್ತಿ ಎಷ್ಟು ಮುಖ್ಯವೋ ಉಪಸಂಹಾರವು ಅಷ್ಟೆ ಮುಖ್ಯವಾಗಿರುತ್ತದೆ. ನನ್ನ ಸಂಶೋಧನೆಯ ಎಲ್ಲಾ ವಿಷಯಗಳನ್ನು ವಿವರಣಾತ್ಮಕವಾಗಿ ವಿವರಿಸಿದ ನಂತರ ಅವುಗಳ ಒಟ್ಟಾರೆ ಫಲಿತಾಂಶವನ್ನು ದಾಖಲಿಸುವ ಕಾರ್ಯವನ್ನು ಕೊನೆಯ ಅಧ್ಯಾಯವಾದ ಉಪಸಂಹಾರದಲ್ಲಿ ವಿವರಿಸಲಾಗಿದೆ. ಮಣ್ಣಲ್ಲಿ ಹೂತು ಹೋಗಿರುವ ಸ್ಮಾರಕಶಿಲೆಗಳನ್ನು ಹೊರ ತೆಗೆಯುವ ಹಾಗೂ ಸಂರಕ್ಷಿಸುವ ಪ್ರಯತ್ನವನ್ನು ಮಾಡಲಾಗುತಿದೆ. ಉಪಸಂಹಾರದ ನಂತರ ಕೊನೆಯಲ್ಲಿ ಅನುಬಂಧಗಳಿದ್ದು ಅದರಲ್ಲಿ ಶೋಧಿಸಿದ ಹೊಸ ಶಾಸನಗಳ ಪಾಠ, ಮಾಹಿತಿ, ವಿಶ್ಲೇಷಣೆಯನ್ನು ಅನುಬಂಧ ೧ ರಲ್ಲಿ ನೀಡಿದ್ದೇನೆ. ಜೊತೆಗೆ ಪರಾಮರ್ಶನ ಗ್ರಂಥಗಳು, ನಕ್ಷೆಗಳು ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ.

# ಅಧ್ಯಾಯ – ೨

## ಭೌಗೋಳಿಕ ಹಿನ್ನೆಲೆ ಮತ್ತು ಪುರಾತತ್ವ ನೆಲೆಗಳು

**ಭೌಗೋಳಿಕ ಹಿನ್ನೆಲೆ**

ಕರ್ನಾಟಕ ರಾಜ್ಯದ ಆಗ್ನೇಯ ದಿಕ್ಕಿನಲ್ಲಿರುವ ಪ್ರಸ್ತುತ ೩೦ ಜಿಲ್ಲೆಗಳಲ್ಲಿ ಒಂದಾದ ರಾಜ್ಯದಲ್ಲಿ ೧೬ನೇ ಸ್ಥಾನದಲ್ಲಿದ್ದು, ಭೂವಿಸ್ತೀರ್ಣದಲ್ಲಿ ೩.೨%ರಷ್ಟು ಪ್ರದೇಶವನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ೧೨.೧೫° ದಿಂದ ೧೩.೩೫° ಅಕ್ಷಾಂಶ ಮತ್ತು ೭೭.೦೫° ದಿಂದ ೭೮° ರೇಖಾಂಶಗಳ ನಡುವೆ ಭೌಗೋಳಿಕ ಪ್ರದೇಶವನ್ನು ಹರಡಿಕೊಂಡಿರುವ ಜಿಲ್ಲೆಯು ಸಮುದ್ರ ಮಟ್ಟದಿಂದ ೬೨೯ ರಿಂದ ೯೫೦ ಮೀಟರ್ ಎತ್ತರದಲ್ಲಿರುವ ಜಿಲ್ಲೆಯು ೨೨೫೯ ಚದರ ಕಿಲೋಮೀಟರ್ ವಿಸ್ತೀರ್ಣದಲ್ಲಿ ೪ ತಾಲ್ಲೂಕುಗಳು, ೨೦ ಹೋಬಳಿಗಳು, ೧೭೧೩ ಹಳ್ಳಿಗಳು, ೫ ನಗರಗಳು, ೯ ಪಟ್ಟಣಗಳು, ೨೨೯ ಗ್ರಾಮ ಪಂಚಾಯಿತಿಗಳನ್ನು ಹೊಂದಿರುವ ಜಿಲ್ಲೆಯು ಪೂರ್ವ ದಿಕ್ಕಿನಲ್ಲಿ ಕೋಲಾರ ಮತ್ತು ತಮಿಳುನಾಡು, ಪಶ್ಚಿಮ ದಿಕ್ಕಿನಲ್ಲಿ ತುಮಕೂರು ಮತ್ತು ರಾಮನಗರ, ಉತ್ತರ ದಿಕ್ಕಿನಲ್ಲಿ ತುಮಕೂರು, ಚಿಕ್ಕಬಳ್ಳಾಪುರ, ಕೋಲಾರ, ದಕ್ಷಿಣ ದಿಕ್ಕಿನಲ್ಲಿ ಬೆಂಗಳೂರು ನಗರ ಜಿಲ್ಲೆಯೊಂದಿಗೆ ಗಡಿಯನ್ನು ಹಂಚಿಕೊಂಡಿದೆ.

೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೯,೮೭,೩೫೬, ಜನಸಂಖ್ಯೆಯಲ್ಲಿ ಪುರುಷರು ೫,೦೭,೪೮೬, ಮಹಿಳೆಯರು ೪,೭೯,೭೭೧ ರಷ್ಟಿದ್ದು, ಲಿಂಗಾನುಪಾತ ೯೪೫, (ಪ್ರತೀ ೧೦೦೦ ಪುರುಷರಿಗೆ ಮಹಿಳೆಯರು ೯೪೫) ಮಳೆಯು ೭೯೦ ಮಿ.ಮೀ ಇರುತ್ತದೆ. ಇದರ ಜೊತೆಗೆ ಜಿಲ್ಲೆಯಲ್ಲಿ ರಾ.ಹೆ.೪,೭,೪೮,೨೦೯, ಹಾಯ್ದು ಹೋಗಿದೆ.

ಬೆಂಗಳೂರಿನಿಂದ ೨೩ ಕಿ.ಮೀ. ದೂರದಲ್ಲಿನ ನೆಲಮಂಗಲ ತಾಲ್ಲೂಕು ಉತ್ತರ ಅಕ್ಷಾಂಶ ೧೩.೦೭° ದಿಂದ ಪೂರ್ವ ರೇಖಾಂಶ ೭೭.೨೮° ನಡುವೆ, ಸಮುದ್ರ ಮಟ್ಟದಿಂದ ೮೮೨ ಮೀಟರ್ ಎತ್ತರದಲ್ಲಿದೆ, ೧ ಪುರಸಭೆ, ೧ ಪಟ್ಟಣ ಪಂಚಾಯಿತಿ, ೧೦ ಮಂಡಲ ಪಂಚಾಯಿತಿಗಳನ್ನು, ಕಸಬಾ ಹೋಬಳಿಯಲ್ಲಿ ೯೫ ಗ್ರಾಮಗಳು, ಸೋಂಪುರ ಹೋಬಳಿಯಲ್ಲಿ ೭೪ ಗ್ರಾಮಗಳು, ತ್ಯಾಮಗೊಂಡ್ಲು ಹೋಬಳಿಯಲ್ಲಿ ೭೪ ಗ್ರಾಮಗಳು ೩ ಹೋಬಳಿಗಳಿಂದ ಒಟ್ಟು ೨೪೩ ಹಳ್ಳಿಗಳನ್ನು, ೫೦೬ ಚದರ ಕಿ.ಮೀ.ಯಲ್ಲಿ ಬಸವನಹಳ್ಳಿ, ಯಂಟಗಾನಹಳ್ಳಿ, ಟಿ.ಬೇಗೂರು, ತ್ಯಾಮಗೊಂಡ್ಲು, ದೊಡ್ಡಬೆಲೆ, ಮಣ್ಣೆ, ಎಲೆಕ್ಯಾತನಹಳ್ಳಿ, ಸೋಂಪುರ, ಕುಲುವನಹಳ್ಳಿ, ಶಿವಗಂಗೆಯಲ್ಲಿ ಮಂಡಲ ಪಂಚಾಯಿತಿಗಳಿವೆ.

ತಾಲ್ಲೂಕಿನ ಬಹುತೇಕ ಭಾಗ ಬಯಲು ಪ್ರದೇಶ ಎತ್ತರದ ಪ್ರದೇಶಗಳಲ್ಲಿ ಕುರುಚಲು ಗಿಡ-ಗಂಟಿಗಳು ಬೆಳೆಯುತ್ತದೆ. ಕನಕಪುರದಿಂದ ನಿಜಗಲ್ಲುವರೆಗೆ ಒಂದೇ ಗಿರಿಶ್ರೇಣಿಯಿದೆ. ೧೩೮೦ ಮೀಟರ್ ಎತ್ತರವಾಗಿದ್ದು ಕಕುದ್ಗಿರಿ ಎಂದು ಕರೆಸಿಕೊಂಡು ಶಂಕುವಿನಾಕೃತಿಯ ಶಿವಗಂಗೆ, ೮೮೪ ಮೀಟರ್ ಎತ್ತರದ ಶೂರಗಿರಿ ಎನ್ನುವ ನಿಜಗಲ್ಲು ಬೆಟ್ಟಗಳನ್ನು ಒಳಗೊಂಡಿದೆ. ೧೯೮೭ ರಲ್ಲಿ ತಾಲ್ಲೂಕಿನಲ್ಲಿ ೧೮೫ ಕೆರೆಗಳಿದ್ದು, ೨೦೦೭-೮ ರಲ್ಲಿ ೨೧ ಕೆರೆಗಳಿವೆ.

ಬೆಂಗಳೂರಿನಿಂದ ೪೧ ಕಿ.ಮೀ. ದೂರದಲ್ಲಿನ ದೊಡ್ಡಬಳ್ಳಾಪುರ ತಾಲ್ಲೂಕು ಉತ್ತರ ಅಕ್ಷಾಂಶ ೧೩.೨೯° ರಿಂದ ೭೭.೫೪° ಪೂರ್ವ ರೇಖಾಂಶದ ನಡುವೆ, ಸಮುದ್ರ ಮಟ್ಟದಿಂದ ೮೮೦ ಮೀಟರ್ ಎತ್ತರದಲ್ಲಿದೆ. ಸಾಸಲು ಹೋಬಳಿಯಲ್ಲಿ ೬೦ ಗ್ರಾಮಗಳು, ತೂಬಗೆರೆ ಹೋಬಳಿಯಲ್ಲಿ ೬೮ ಗ್ರಾಮಗಳು, ದೊಡ್ಡಬೆಳವಂಗಲ ಹೋಬಳಿಯಲ್ಲಿ ೬೬ ಗ್ರಾಮಗಳು, ಕಸಬಾ ಹೋಬಳಿಯಲ್ಲಿ ೭೨ ಗ್ರಾಮಗಳು, ಮಧುರೆ ಹೋಬಳಿಯಲ್ಲಿ ೪೨ ಗ್ರಾಮಗಳು ಒಟ್ಟು ೫ ಹೋಬಳಿಗಳಿಂದ ೩೦೮ ಹಳ್ಳಿಗಳನ್ನು ಹೊಂದಿದೆ.

ಬೆಂಗಳೂರಿನಿಂದ ೩೭ ಕಿ.ಮೀ. ದೂರದಲ್ಲಿನ ದೇವನಹಳ್ಳಿ ತಾಲ್ಲೂಕು ಉತ್ತರ ರೇಖಾಂಶ ೧೩.೨೩° ದಿಂದ ೭೭.೭° ದ ನಡುವೆ ೨೧೯ ಹಳ್ಳಿಗಳನ್ನು, ಕುಂದಾಣ, ವಿಜಯಪುರ, ಕಸಬಾ, ಚನ್ನರಾಯಪಟ್ಟಣ, ಹೋಬಳಿಗಳನ್ನು ಹೊಂದಿದೆ.

ಬೆಂಗಳೂರು ನಗರದ ಪೂರ್ವಕ್ಕೆ ೨೭ ಕಿ.ಮಿ. ದೂರದಲ್ಲಿ ಬೆಂಗಳೂರು ಮತ್ತು ಕೋಲಾರ ರಾಷ್ಟ್ರೀಯ ಹೆದ್ದಾರಿಯಲ್ಲಿನ ಹೊಸಕೋಟೆಯು ೫೪೮ ಕಿ.ಮೀ. ವಿಸ್ತೀರ್ಣವನ್ನು, ಕಸಬಾ ಹೋಬಳಿಯಲ್ಲಿ ೪೧ ಗ್ರಾಮಗಳು, ಸೂಲಿಬೆಲೆ ಹೋಬಳಿಯಲ್ಲಿ ೬೯ ಗ್ರಾಮಗಳು, ನಂದಗುಡಿ ಹೋಬಳಿಯಲ್ಲಿ ೭೨ ಗ್ರಾಮಗಳು, ಜಡಿಗೇನಹಳ್ಳಿ ಹೋಬಳಿಯಲ್ಲಿ ೭೫ ಗ್ರಾಮಗಳು, ಅನುಗೊಂಡನಹಳ್ಳಿ ಹೋಬಳಿಯಲ್ಲಿ ೪೨ ಗ್ರಾಮಗಳು ಒಟ್ಟು ೫ ಹೋಬಳಿಗಳಿಂದ ೨೯೯ ಹಳ್ಳಿಗಳನ್ನು, ೧)ಸೂಲಿಬೆಲೆ, ೨) ಬೆಂಡಿಗಾನಹಳ್ಳಿ, ೩)ನಂದಗುಡಿ, ೪) ತಾವರೆಕೆರೆ, ೫)ಶಿವನಾಪುರ, ೬)ಮುಗಬಾಳ, ೭)ಅಲಪ್ಪನಹಳ್ಳಿ, ೮)ಜಡಿಗೇನಹಳ್ಳಿ, ೯)ಮಲ್ಲಸಂದ್ರ, ೧೦)ವಾಗಟ, ೧೧)ದೇವನಗುಂದಿ, ೧೨)ಅನುಗೊಂಡನಹಳ್ಳಿ ಎಂಬ ಹನ್ನೆರಡು ಗ್ರಾಮ ಪಂಚಾಯಿತಿಗಳು, ಒಂದು ನಗರ ಸಭೆಯನ್ನು, ೧೯೮ ಕೆರೆಗಳನ್ನು ಹೊಂದಿದೆ. ಹೊಸಕೋಟೆಗೆ ಪೂರ್ವದಲ್ಲಿ ಕೊಲಾರ ಮತ್ತು ಮಾಲೂರು ತಾಲ್ಲೂಕು, ಪಶ್ಚಿಮದಲ್ಲಿ ಆನೇಕಲ್ ತಾಲ್ಲೂಕು ಮತ್ತು ತಮಿಳುನಾಡು ಹೊಸೂರು, ಉತ್ತರದಲ್ಲಿ ದೇವನಹಳ್ಳಿ ತಾಲ್ಲೂಕು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕು, ದಕ್ಷಿಣಕ್ಕೆ ಬೆಂಗಳೂರು ನಗರ ಜಿಲ್ಲೆ ಇದೆ.

ಕೃಷಿ ಇಲಾಖೆಗೆ ಸಂಬಂಧಿಸಿದಂತೆ ಬೆಂಗಳೂರು ಗ್ರಾಮಾಂತರ ಉಪ ನಿರ್ದೇಶಕರು, ನೆಲಮಂಗಲ ತಾಲ್ಲೂಕು ಸಹಾಯಕ ನಿರ್ದೇಶಕರು, ದೊಡ್ಡಬಳ್ಳಾಪುರ ತಾಲ್ಲೂಕು ಸಹಾಯಕ ನಿರ್ದೇಶಕರು, ದೇವನಹಳ್ಳಿ ತಾಲ್ಲೂಕು ಸಹಾಯಕ ನಿರ್ದೇಶಕರು, ಹೊಸಕೋಟೆ ತಾಲ್ಲೂಕು ಸಹಾಯಕ ನಿರ್ದೇಶಕರುಗಳು ಇದ್ದು, ದೊಡ್ಡಬಳ್ಳಾಪುರ ತಾಲ್ಲೂಕಿನ ಹಾಡೋನಹಳ್ಳಿಯಲ್ಲಿ ಕೃಷಿ ವಿಜ್ಞಾನ ಕೇಂದ್ರವಿದೆ. ಕೃಷಿ ಉತ್ಪನ್ನ ಮಾರುಕಟ್ಟೆಗೆ ಸಂಬಂಧಿಸಿದಂತೆ ನೆಲಮಂಗಲ, ತೂಬಗೆರೆ, ದೇವನಹಳ್ಳಿ, ವಿಜಯಪುರ, ಹೊಸಕೋಟೆಯಲ್ಲಿ ಉಪಸಮಿತಿಗಳಿವೆ. ದೊಡ್ಡಬಳ್ಳಾಪುರ ಮತ್ತು ವಿಜಯಪುರದಲ್ಲಿ ಹಾಲು ಶೀಥಲ ಕೇಂದ್ರವಿದೆ. ದೇವನಹಳ್ಳಿಯಲ್ಲಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣ, ನೆಲಮಂಗಲ, ಹೊಸಕೋಟೆ ಯೋಜನಾ ಪ್ರಾಧಿಕಾರಗಳಿವೆ. ದೊಡ್ಡಬಳ್ಳಾಪುರ, ನೆಲಮಂಗಲ, ದೇವನಹಳ್ಳಿ, ವಿಜಯಪುರ ಹೊಸಕೋಟೆಗಳಲ್ಲಿ ನಗರ ಸಭೆಗಳಿವೆ.

ನೆಲಮಂಗಲ ತಾಲ್ಲೂಕಿನಲ್ಲಿ ನೆಲಮಂಗಲ, ದಾಬಸ್ಪೇಟೆ, ಮಾದನಾಯಕನಹಳ್ಳಿ, ತ್ಯಾಮಗೊಂಡ್ಲು, ಶಿವಗಂಗೆ ಹೊರ, ನೆಲಮಂಗಲ ಗ್ರಾಮಾಂತರ ಪೋಲೀಸ್ ಠಾಣೆಗಳು, ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ದೊಡ್ಡಬಳ್ಳಾಪುರ ನಗರ, ಗ್ರಾಮಾಂತರ, ದೊಡ್ಡಬೆಳವಂಗಲ, ಹೊಸಹಳ್ಳಿ, ಎಸ್.ಎಸ್.ಘಾಟಿ ಹೊರ, ಸಾಸಲು ಹೊರ, ದೊಡ್ಡಬಳ್ಳಾಪುರ ರೈಲ್ವೆ ಪೋಲೀಸ್, ದೊಡ್ಡಬಳ್ಳಾಪುರ ನಗರ ಸಂಚಾರಿ ಹೊರ, ರಾಜಾನಕುಂಟೆಗಳಲ್ಲಿ ಪೋಲೀಸ್ ಠಾಣೆಗಳು, ಹೊಸಕೋಟೆ ತಾಲ್ಲೂಕಿನಲ್ಲಿ ಸೂಲಿಬೆಲೆ, ತಿರುಮಲ ಶೆಟ್ಟಿಹಳ್ಳಿ, ಹೊಸಕೋಟೆ ನಂದಗುಡಿಗಳಲ್ಲಿ ಪೋಲೀಸ್ ಠಾಣೆಗಳಿವೆ.

ಹಲವಾರು ಬೆಟ್ಟ–ಗುಡ್ಡ, ಕಾಡು, ನದಿಗಳಿಂದ ಸುತ್ತುವರೆದಿರುವ ಜಿಲ್ಲೆಯು ನೈಸರ್ಗಿಕವಾಗಿ ಉತ್ತಮ ಹವಾಗುಣವನ್ನು ಹೊಂದಿದೆ. ನೆಲಮಂಗಲ ತಾಲ್ಲೂಕಿನ ಮಹಿಮರಂಗಪುರ, ಶಿವಗಂಗೆ, ರೈಲ್ವೆಗೊಲ್ಲಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕಿನ ಮಧುರೆ, ಮಾಕಳಿದುರ್ಗಾ, ಉಜ್ಜೈನಿ ದುರ್ಗಾ, ದೇವನಹಳ್ಳಿ ತಾಲ್ಲೂಕಿನ ದೇವನಹಳ್ಳಿ ಕೋಟೆ, ತಿಮ್ಮರಾಯಸ್ವಾಮಿಬೆಟ್ಟ ಮುಂತಾದ ಹಲವಾರು ಪ್ರೇಕ್ಷಣೀಯ ಸ್ಥಳಗಳನ್ನು ಜಿಲ್ಲಾ ವ್ಯಾಪ್ತಿಯಲ್ಲಿ ಕಾಣಬಹುದು.

ನಂದಿಯಿಂದ ಕನಕಪುರದವರೆಗೆ ಮುಖ್ಯ ಪರ್ವತ ಶ್ರೇಣಿಯಿದ್ದು, ನಂದಿಯ ಪರ್ವತ ಶ್ರೇಣಿಯಲ್ಲಿ ದಿವ್ಯಗಿರಿ, ಬ್ರಹ್ಮಗಿರಿ, ವಿಷ್ಣುಗಿರಿ, ನಂದಿಗಿರಿ, ಸ್ಕಂದಗಿರಿಗಳಿದ್ದರೆ, ಜಿಲ್ಲಾ ವ್ಯಾಪ್ತಿಯಲ್ಲಿ ಆ ಪರ್ವತ ಶ್ರೇಣಿಯ ಮಾಕಳಿದುರ್ಗ, ಹುಲುಕಡಿಬೆಟ್ಟ, ಉಜ್ಜೈನಿಬೆಟ್ಟ, ಸಿದ್ದದೇವರಬೆಟ್ಟ, ನಿಜಗಲ್ಲು, ಶಿವಗಂಗೆ ಬೆಟ್ಟಗಳಿವೆ.

ನಂದಿ ಬೆಟ್ಟದಿಂದ ಶಿವಗಂಗೆವರೆಗೂ ಹಬ್ಬಿದ ಪರ್ವತ ಶ್ರೇಣಿಯಲ್ಲಿ ಮಾಕಳಿಬೆಟ್ಟ, ಉಜ್ಜನಿಬೆಟ್ಟ, ಸಿದ್ಧರಬೆಟ್ಟ, ಶಿವಗಂಗೆ, ನಿಜಗಲ್ಲು ಇತ್ಯಾದಿ ಬೆಟ್ಟಗಳಿದ್ದು, ಮಾಕಳಿ, ಉಜ್ಜನಿ ಅರಣ್ಯ ಪ್ರದೇಶವಾಗಿದ್ದು, (ದೊಡ್ಡಬಳ್ಳಾಪುರ, ಹೊಸಕೋಟೆಯಲ್ಲಿ ಮೀಸಲು ಅರಣ್ಯ ಪ್ರದೇಶಗಳಿವೆ.) ಜಿಂಕೆ, ಕರಡಿ, ಚಿರತೆ, ಕಾಡುಹಂದಿ, ನವಿಲು ಮುಂತಾದ ಪ್ರಾಣಿ ಪಕ್ಷಿಗಳು ಕಂಡು ಬರುತ್ತದೆ. ತಾಲ್ಲೂಕಿನ ಬಹುಭಾಗದ ಭೂಮಿ ಏರು ತಗ್ಗುಗಳಿಂದ ಕೂಡಿದ್ದು, ಇಲ್ಲಿನ ಜನರು ಕುಲ ಕಸುಬಾಗಿ ವ್ಯವಸಾಯದಲ್ಲಿ ರಾಗಿ, ಭತ್ತವನ್ನು ಬೆಳೆಯುತ್ತಿದ್ದು, ವಾಣಿಜ್ಯ ಬೆಳೆಗಳಾಗಿ (ನೀರಾವರಿ ಪ್ರದೇಶದಲ್ಲಿ) ರೇಷ್ಮೆ, ತೆಂಗು, ಬಾಳೆ, ಅಡಕೆ, ದ್ರಾಕ್ಷಿ, ದಾಳಿಂಬೆ, ಹೂವು, ವೀಳೆದೆಲೆ ಇತ್ಯಾದಿಗಳು ಹಾಗೆಯೇ ಹೊಸಕೋಟೆಯಲ್ಲಿ ಹೆಚ್ಚಾಗಿ ಹೂ ತೋಟಗಳು, ನರ್ಸರಿಗಳು ವಾಣಿಜ್ಯವಾಗಿದೆ. ಇದರ ಜೊತೆಗೆ ಹಾಲು, ಕೈಮೊಗ್ಗಗಳು ಸಹ ವ್ಯವಸಾಯೊತ್ತರ ಉಪ ಕಸುಬಾಗಿದೆ.

ಬೆಟ್ಟಗುಡ್ಡಗಳಿಂದ ಕೂಡಿರುವ ಜಿಲ್ಲಾ ಪ್ರದೇಶದಲ್ಲಿ ಮಳೆಯಾಧಾರಿತ ದಕ್ಷಿಣ ಪಿನಾಕಿನಿ, ಅರ್ಕಾವತಿ ನದಿಗಳು ಕಂಡುಬರುತ್ತದೆ. ಅದರಲ್ಲಿ ದಕ್ಷಿಣ ಪಿನಾಕಿನಿ ನದಿಯು ನಂದಿಬೆಟ್ಟದ ಚನ್ನಕೇಶವ ಬೆಟ್ಟದಲ್ಲಿ ಹುಟ್ಟಿ ದೇವನಹಳ್ಳಿ, ಹೊಸಕೋಟೆ, ಕೋಲಾರ ಜಿಲ್ಲೆಯ ಜಂಗಮಕೋಟೆಗೆ ನೀರುಣಿಸುವ ನದಿಯಾಗಿದ್ದು, ಸುಮಾರು ೧೦-೧೫ ವರ್ಷಗಳಿಂದ ಕಣ್ಮರೆಯಾಗಿ ಕೆರೆಗಳು ಕಾಲುವೆಗಳು ಒಣಗಿ ಬತ್ತಿ ಹೋಗಿದೆ. ದಕ್ಷಿಣ ಪೆನ್ನಾರ್, ಪೊನ್ನೈಯಾರ್, ತಮಿಳನಲ್ಲಿ ತೆನ್‌ದೆನ್ನೈ ಎಂದು ಕರೆಯುವ ದಕ್ಷಿಣ ಪಿನಾಕಿನಿಯು ಸುಮಾರು ೬೦ ಕಿ.ಮೀ.ವ್ಯಾಪ್ತಿಯಲ್ಲಿ ಪೂರ್ವಾಭಿಮುಖಿಯಾಗಿ ಹರಿಯುತ್ತಾ ಮೊದಲಿಗೆ ಕಂದವಾರಕೆರೆ (ಚಿಕ್ಕಬಳ್ಳಾಪುರ) ತುಂಬಿ ಚದುಲುಪುರ, ಕಣಿತಹಳ್ಳಿ, ಮುತ್ತೂರು, ಮಳ್ಳೂರು, ಭಕ್ತರಹಳ್ಳಿ, ಚೊಕ್ಕಂಡಹಳ್ಳಿ, ನಾಗಮಂಗಲ, ಹೊಸಪೇಟೆ, ಜಂಗಮಕೋಟೆ, ಚನ್ನರಾಯಪಟ್ಟಣ, ಮಲ್ಲೆಪುರ, ನಲ್ಲೂರು ಕೆರೆಗಳು ತುಂಬಿದ ಮೇಲೆ ಬೂದಿಗೆರೆ ಕೆರೆಯು ತುಂಬಾ ವಿಶಾಲವಾಗಿದ್ದು, ಕೆರೆಯ ಪೂರ್ವ, ಪಶ್ಚಿಮ ಎರಡು ದಿಕ್ಕುಗಳಲ್ಲಿನ ೮ ಗ್ರಾಮಗಳಲ್ಲಿನ ೮ ಕೆರೆಗಳಿಗೆ ನೀರು ತುಂಬಿಸುತ್ತದೆ. (ಪೂರ್ವಕ್ಕೆ ಜ್ಯೋತಿಪುರ, ಮಂಡೂರು, ಹಂಚರಹಳ್ಳಿ, ಬೊಮ್ಮನಹಳ್ಳಿ, ಪಶ್ಚಿಮಕ್ಕೆ ತಿಮ್ಮಸಂದ್ರ, ಲಕ್ಕೊಂಡನಹಳ್ಳಿ, ಆಲಪನಹಳ್ಳಿ, ಉಪ್ಪಾರಹಳ್ಳಿಯ ಕೆರೆಗಳು) ಬೂದಿಗೆರೆ ಕೆರೆಯ ನಂತರ ಹೊಸಕೋಟೆಯ ಅಮಾನಿಕೆರೆ, ಕಾಡುಗೋಡಿ, ಕಣ್ಣಮಂಗಲ, ವರ್ತೂರು, ಸರ್ಜಾಪುರ, (ಆನೇಕಲ್ ತಾಲ್ಲೂಕು) ಕೆರೆಗಳು ತುಂಬಿದ ನಂತರ ಹೊಸೂರು ಮುಖಾಂತರ ತಮಿಳುನಾಡು ಪ್ರವೇಶಿಸಿ ಕಡಲೂರಿನಲ್ಲಿ ಬಂಗಾಳಕೊಲ್ಲಿಗೆ ಸೇರುತ್ತದೆ.

ನದಿ ಹರಿಯದ ಸ್ಥಳಗಳಲ್ಲಿನ ದೂರದ ಕೆರೆಗಳಿಗೆ ಕಾಲುವೆ ಮುಖಾಂತರ ಮತ್ತೊಂದು ಕೆರೆಯನ್ನು ತುಂಬಿಸಿರುವ ಕೆಲಸವನ್ನು ಸಹ ಕಾಣಬಹುದು. ಚದಲುಪುರ ಕೆರೆಯಿಂದ ಕೊಂಡೆನಹಳ್ಳಿ

ಕೆರೆಗೆ, ಮಲ್ಲೆಪುರ ಕೆರೆಯಿಂದ ಬಾಲೆಪುರದ ಕೆರೆಗೆ, ನಲ್ಲೂರು ಕೆರೆಯಲ್ಲಿ ೨ ಕಾಲುವೆಗಳನ್ನು ನಿರ್ಮಿಸಿ ಒಂದು ಕಾಲುವೆ ಮುಖಾಂತರ ಸೂಲಿಬೆಲೆ ಹತ್ತಿರ ಇರುವ ಶಾಸನೋಕ್ತ ಕೆರೆಗೆ (ಇರುವಿಗತ್ತ ಕೆರೆ) ಮತ್ತೊಂದು ಕಾಲುವೆಯಲ್ಲಿ ಎನಕುಂಟೆಕೆರೆಗೆ ನೀರು ಹಾಯಿಸಿದರೆ, ನಲ್ಲೂರಿನಿಂದ ಬೂದಿಗೆರೆಗೆ ಹೋಗುವ ಮಾರ್ಗದಲ್ಲಿನ ಗಂಗವಾರದ ಕಾಲುವೆ ಮುಖಾಂತರ (ಚೌಡಪ್ಪನಹಳ್ಳಿ ದಾಟಿ) ಹಸಿಗಾಳ ಕೆರೆಗೆ, ಸುಗಟೂರಿನಿಂದ ಬಂಡಿಗನಹಳ್ಳಿ ನಂತರ ಚನ್ನರಾಯಪಟ್ಟಣ ಕೆರೆಗೆ ಹಾಗೆಯೇ ಕಣ್ಣಮಂಗಲದಿಂದ ಅವಲಹಳ್ಳಿ ನಂತರ ಭಟ್ರಹಳ್ಳಿ, ಕೆ.ಆರ್.ಪುರಂ ಕೆರೆಗೆ ಕೊನೆಗೊಳಿಸಿ. ಈ ೩ ಕೆರೆಗಳು ತುಂಬಿದ ನಂತರ ಪುನಃ ವರ್ತೂರು ಕೆರೆಗೆ ಸೇರಿ ಕೊಳ್ಳುತ್ತದೆ.

ಕಂದವಾರದಿಂದ ಮತ್ತೊಂದು ಮಾರ್ಗದಲ್ಲಿ ಪಾಪಾಗ್ನಿ (ಸ್ಕಂದಗಿರಿಬೆಟ್ಟ) ನದಿ ಜೊತೆ ಸೇರಿ ಮುಂದೆ ಚಿತ್ರಾವತಿ (ಬಾಗೇಪಲ್ಲಿಯ ಚಿತ್ರಾವತಿ ಬೆಟ್ಟದಲ್ಲಿ) ನದಿ ಸೇರಿ ಮುಂದೆ ಸಾಗುತ್ತಾ ಉತ್ತರ ಪಿನಾಕಿನಿ ಎಂದು ಸಹ ಕರೆಯಲಾಗುತ್ತದೆ. ಮುಷ್ಟೂರು, ಮಂಚನಬೆಲೆ, ವರದೇನಹಳ್ಳಿ, ಅಜ್ಜವಾರ, ಕೇಶವಾರ, ಹೊಸಉಡ್ಯ, ಅಮಾನಿಕೆರೆ (ಶಿಡ್ಲಘಟ್ಟ), ಅನೂರು, ಚೀಮಂಗಲ, ಇಂಡಿಗಾಲ (ಹೆಚ್.ಕ್ರಾಸ್), ನಂದಗುಡಿ, ಶಿವನಾಪುರ ಮುಖಾಂತರ ಜಡಿಗೇನಹಳ್ಳಿಯ ಮಾರ್ಗವಾಗಿ ತಮಿಳುನಾಡಿನ ಆರ್ಕಾಟ್ ಜಿಲ್ಲೆಯನ್ನು ಪ್ರವೇಶಿಸಿ ಕೊನೆಗೆ ಬಂಗಾಳಕೊಲ್ಲಿಯಲ್ಲಿ ಸಂಗಮಿಸುತ್ತದೆ.

ಇದಲ್ಲದೆ ಮಳೆಯಿಂದಾಗಿ ಕೊಂಡ್ರಹಳ್ಳಿ, ತಾವರೆಕೆರೆ, ಚಿಕ್ಕನಹಳ್ಳಿ, ಶಿವನಾಪುರದ ಕೆರೆ ತುಂಬಿ ಕೆಂಗನಹಳ್ಳಿ ಮತ್ತು ಮುಗಬಾಳ ಕೆರೆಗಳು ತುಂಬಿದ ನಂತರ ದೊಡ್ಡನಲ್ಲೂರು, ಚನ್ನಾಪುರದ ಮಧ್ಯದ ಕೆರೆ ತುಂಬಿ ಅಟ್ಟೂರು ಕಟ್ಟೆಯ ನಂತರ ದಾಸರಹಳ್ಳಿ, ದೊಡ್ಡಹುಲ್ಲೂರು, ಅಮಾನಿಕೆರೆ (ಕೆರೆಯ ಸುತ್ತ ೧೧ ಊರುಗಳಿವೆ) ತುಂಬಿ, ಹೊಸಕೋಟೆಯ ದೊಡ್ಡ ಕೆರೆಯ ಮೂಲಕ ದಕ್ಷಿಣ ಪಿನಾಕಿನಿ ನದಿಗೆ ಈ ಕೆರೆಗಳ ನೀರು ಸೇರುತ್ತದೆ. ದಕ್ಷಿಣ ಪಿನಾಕಿನಿ ನದಿಯು ವರ್ತೂರಿನಲ್ಲಿ ಮತ್ತೆ ಎರಡು ಭಾಗವಾಗಿ ಒಂದು ಸರ್ಜಾಪುರದ ಕಡೆಗೆ ಸಾಗಿದರೆ ಮತ್ತೊಂದು ಕವಲು ಅನುಗೊಂಡನಹಳ್ಳಿ, ಚಿಕ್ಕತಿರುಪತಿಯ ಮಾರ್ಗವಾಗಿ ತಮಿಳುನಾಡು ಮುಖಾಂತರ ಬಂಗಾಳಕೊಲ್ಲಿಗೆ ಸೇರುತ್ತದೆ.

ದಕ್ಷಿಣಪಿನಾಕಿನ ಹರಿಯುವ ಕೆರೆ ದಂಡೆಯ ದಕ್ಷಿಣ ಭಾಗದಲ್ಲಿ ಊರುಗಳು ನಿರ್ಮಾಣವಾಗಿರುವುದು ವಿಶೇಷ ಎಂದರೆ ನದಿಯ ಬಲಭಾಗದಲ್ಲಿ ಮಾತ್ರ ಊರುಗಳಿದ್ದು, ಎಡ ಭಾಗದಲ್ಲಿ ಹೊಲ, ಗದ್ದೆ, ತೋಟಗಳಿವೆ. ಈಗ ಪೂರ್ಣವಾಗಿ ಕಲುಶಿತಗೊಂಡ ಹೊಸಕೋಟೆ ಕೆರೆಗೆ ಪುನಶ್ಚೇತನ ಕೊಡಲು "ಪುನರ್ ವಸುಂಧರಾ" ಹೆಸರಿನಡಿ ಬೆಂಗಳೂರಿನ ಭಗೀರಥರು ಹೊಸಕೋಟೆಯ ದತ್ತಾತ್ರೇಯ ಟ್ರಸ್ಟ್ ಮುಖಾಂತರ ಹೊಸಕೋಟೆ ಕೆರೆಯನ್ನು ತ್ಯಾಜ್ಯ ತೆರವುಗೊಳಿಸಿ, ಕಲ್ಲುಗಳನ್ನು

ಮರುಜೋಡಿಸಿ ಜೀರ್ಣೋದ್ಧಾರ ಮಾಡಲು ಮುಂದಾಗಿದ್ದಾರೆ. ಕೆರೆ ತುಂಬಿದರೆ ರೈತರು ವ್ಯವಸಾಯ ಪುನರ್ ಸ್ಥಾಪಿಸಿ ಕೊಳ್ಳುತ್ತಾರೆ. ಇದರ ಜೊತೆಗೆ ಹೊಸಕೋಟೆಯ ಜೀವ ನದಿಯಾದ ದಕ್ಷಿಣ ಪಿನಾಕಿನಿ ನದಿಯು ಪುನರುಜ್ಜೀವನಗೊಂಡರೆ ಎಲ್ಲಾ ಕೆರೆಗಳಿಗೆ ಮತ್ತೆ ಜೀವ ಬರುತ್ತದೆ.

ಕಾವೇರಿ ನದಿಯ ಉಪನದಿಯಾದ ಅರ್ಕಾವತಿ ನದಿಯು ಪಂಚ ನದಿಗಳ ಉಗಮಸ್ಥಾನವಾದ ನಂದಿಬೆಟ್ಟದಲ್ಲಿ ಹುಟ್ಟಿ, ಪಶ್ಚಿಮ ದಿಕ್ಕಿನಲ್ಲಿ ಸಾಗಿ ಚಿಕ್ಕಬಳ್ಳಾಪುರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಜಿಲ್ಲೆಗಳ ಮೂಲಕ ಹರಿದು ಸುಮಾರು ೮೫ ಕಿ.ಮೀ. ದೂರ ಸಾಗಿ ಮೇಕೆದಾಟಿನ ಸಂಗಮದಲ್ಲಿ ಕಾವೇರಿ ನದಿಯನ್ನು ಸೇರುತ್ತದೆ. ಅರ್ಕಾವತಿ ನದಿಗೆ ಘಾಟಿಯಲ್ಲಿ ಸರ್.ಎಂ.ವಿಶ್ವೇಶ್ವರಯ್ಯ ಅಣೆಕಟ್ಟು, (ಎಸ್.ಎಸ್.) ತಿಪ್ಪಗೊಂಡನಹಳ್ಳಿಯಲ್ಲಿ ಚಾಮರಾಜಸಾಗರ, ಮೆಂಚನಬೆಲೆಯಲ್ಲಿ ನೀರಾವರಿ ಅಣೆಕಟ್ಟುಗಳನ್ನು ನಿರ್ಮಿಸಲಾಗಿದೆ.

ಅರ್ಕಾವತಿ ನದಿಯು ದೊಡ್ಡಬಳ್ಳಾಪುರದ ನಾಗರಕೆರೆ (ನಾಗಪ್ಪನ ಕೆರೆ ಇಂದಿನ ನಾಗನ ಕೆರೆ ವಿಜಯನಗರ ಅರಸರ ಕೊಡುಗೆ), ಶಿವಪುರದ ದಮನಿಕೆರೆ, ರಾಜಾನುಕುಂಟೆ, ಅಮಾನಿಕೆರೆ, ಕಮ್ಮಸಂದ್ರ ಕೆರೆ, ವರ್ತೂರು ಕೆರೆ, ಬಸಶೆಟ್ಟಿಹಳ್ಳಿ ಕೆರೆ, ನಾಗನಹಳ್ಳಿ ಕೆರೆ, ದೊಡ್ಡತುಮಕೂರು ಕೆರೆ, ಸೊಣ್ಣೇನಹಳ್ಳಿ ಕೆರೆ, ಕಾಕೋಳು ಕೆರೆ, ಬ್ಯಾತ ಕೆರೆ, ಮಧುರೆ ಕೆರೆ, ಹೆಸರುಘಟ್ಟ ಕೆರೆ (ಕ್ರಿ.ಶ.೧೫೩೩ ಅಚ್ಯುತರಾಯ ಕಾಲದಲ್ಲಿ ಅರ್ಕಾವತಿ ನದಿಗೆ ಅಡ್ಡಲಾಗಿ ಹೆಸರುಘಟ್ಟದಲ್ಲಿನ ಕಟ್ಟೆಗೆ ಕೆರೆಯನ್ನು ಕಟ್ಟಿಸುತ್ತಾರೆ.), ರಾವುತ್ತನಹಳ್ಳಿ ಕೆರೆ, ವರಾಹಸಂದ್ರಕೆರೆ, ಸೊಂಡೇಕೊಪ್ಪದ ಕೆರೆ, ಮಲ್ಲಸಂದ್ರದ ಕೆರೆ, ವರ್ತೂರು ಹೊಳೆ (ಅರ್ಕಾವತಿ), ಗಂಗಮ್ಮನ ಕೆರೆ, (ತಾವರೆಕೆರೆ) ಬಂಗಲಿಕೆರೆ, ಬೈಚಗುಪ್ಪೆಕೆರೆ, ದೇವಮಾಚೋಹಳ್ಳಿ ಕೆರೆಗಳ ನೀರು ತಿಪ್ಪಗೊಂಡನಹಳ್ಳಿಯ ಜಲಾಶಯಕ್ಕೆ ಸೇರುತ್ತದೆ. ತಿಪ್ಪಗೊಂಡನಹಳ್ಳಿ ಜಲಾಶಯದಿಂದ ಮುಂದೆ ಹರಿಯುವ ಅರ್ಕಾವತಿ ನದಿಯು ಹಲವಾರು ಕೆರೆ ಕಟ್ಟೆಗಳ ಜೀವ ನದಿಯಾಗಿದೆ. ಆದರೆ ಈಗ ಎಲ್ಲಾ ಕೆರೆಗಳನ್ನು, ಹೊಳೆಗಳನ್ನು ಒತ್ತುವರಿ ಹಾಗೂ ಗಣಿಗಾರಿಕೆ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದು, ಅರ್ಕಾವತಿ ನದಿ ಹರಿಯುವುದಕ್ಕೆ ಕಂಟಕವಾಗಿದೆ.

ಮಂಚನಬೆಲೆ ನೀರಾವರಿ ಯೋಜನೆ ಸ್ವಚ್ಛವಾಗಿದೆ ಆದರೆ ಬ್ಯಾಲಾಳುನಲ್ಲಿ ಇಸ್ರೋ ಕೇಂದ್ರ ಸ್ಥಾಪನೆಯಾಗಿದ್ದು, ಅದರ ಸುತ್ತಮುತ್ತ ವಸತಿ ಯೋಜನೆಗಳು ನಿರ್ಮಾಣವಾಗುತ್ತಿರುವುದರಿಂದ ಮಂಚನಬೆಲೆ ಹಾಗೂ ಸುತ್ತಮುತ್ತಲಿನ ಕೆರೆಗಳು ಕಲುಷಿತವಾಗುವ ಮುನ್ಸೂಚನೆಗಳು ಕಾಣಿಸುತ್ತದೆ. ಮಂಚನಬೆಲೆಯ ಅಳಿದುಳಿದ ನೀರು ಹಳ್ಳ ಕೊಳ್ಳಗಳು ಸೇರಿಕೊಂಡು ಕೆರೆ, ಕಟ್ಟೆಗಳನ್ನು ತುಂಬಿಸಿ, ಕಣ್ವ ಜಲಾಶಯವನ್ನು ಸೇರುತ್ತದೆ.

ಅರ್ಕಾವತಿಯು ರಾಮನಗರದ ಶಿವಗಿರಿ, ರಾಮಗಿರಿಗಳಲ್ಲಿ ಹಾದು ಹೋಗಿ ರಾಮನಗರದಿಂದ ಬರುವ ಕಲುಷಿತ ನೀರನ್ನು ಸೇರಿ ರೇವಣಸಿದ್ದೇಶ್ವರ ಬೆಟ್ಟದ ಹೊಳೆಗಳೊಂದಿಗೆ ಹರಿದು ಸುಮಾರು ಕೆರೆಕಟ್ಟೆಗಳಿಗೆ ನೀರುಣಿಸಿ ಮುಂದೆ ಭೈರಮಂಗಲದ ಹತ್ತಿರ ವೃಷಭಾವತಿಪುರದಲ್ಲಿ ಕಲುಷಿತವಾಗಿರುವ ವೃಷಭಾವತಿಯೊಂದಿಗೆ, ಸುವರ್ಣಮುಖಿ, ಅಂತರಗಂಗೆ, ಬಸವನಹೊಳೆ, ಕೊಟ್ಲೆ ಹೊಳೆಗಳು ಕನಕಪುರದ ಬಳಿ ಅರ್ಕಾವತಿಗೆ ಸೇರುತ್ತದೆ.

ರಾಮನಗರ ಪಟ್ಟಣದ ನಂತರ ಕನಕಪುರ ತಾಲ್ಲೂಕಿನ ೩೪೦೦ ಅಡಿ ಎತ್ತರದಲ್ಲಿರುವ ಬಿಳಿಕಲ್ಲು ಬೆಟ್ಟದ ಪಶ್ಚಿಮದಲ್ಲಿ ಹುಟ್ಟುವ ಹೊಳೆಗಳೆಲ್ಲವು ಅರ್ಕಾವತಿ ನದಿಗೆ ಸೇರಿ ದೊಡ್ಡ ಪ್ರಮಾಣದಲ್ಲಿ ಹರಿಯುತ್ತದೆ. ಹಾರೋಗದ್ದೆ ಕಡೆಯಿಂದ ಜಿಗಣಿ ಹೊಳೆ ಹರಿದು ಕನಕಪುರ ಬಳಿಯ ಬಲದಂಡೆಯಿಂದ ಅರ್ಕಾವತಿಯಲ್ಲಿ ಸಂಗಮವಾಗುತ್ತದೆ. ಕನಕಪುರ ತಾಲ್ಲೂಕಿನ ಈಶಾನ್ಯದಿಂದ ಬರುವ ಕೊಟ್ಲೆ ಹೊಳೆಯು ಮೂರು–ನಾಲ್ಕು ಕೆರೆಗಳಿಗೆ ನೀರುಣಿಸಿದ ನಂತರ ಅರ್ಕಾವತಿಯನ್ನು ಸೇರುತ್ತದೆ. ಸಾತನೂರು ಹೊಳೆಯು ಸುತ್ತಮುತ್ತಲಿನ ಬೆಟ್ಟಗುಡ್ಡಗಳಿಂದ ಬರುವ ನೀರನ್ನು ಸಂಗ್ರಹಿಸುತ್ತಾ ಕೆರೆ ಕಟ್ಟೆಗಳನ್ನು ತುಂಬಿಸಿ ಉತ್ತರದಿಂದ ಅರ್ಕಾವತಿ ನದಿಯನ್ನು ಸೇರುವ ಹೊಳೆಗೆ ಸಾತನೂರು ಬಳಿ ಅಣೆಕಟ್ಟೆಯೊಂದನ್ನು ನಿರ್ಮಿಸಿಲಾಗಿದೆ. ಕನಕಪುರದ ಬೆಟ್ಟ ಸಾಲುಗಳಿಂದ ಬರುವ ನೀರಿನಿಂದ ಅಂತರಗಂಗೆಯಾಗಿ ಸಣ್ಣ ಪುಟ್ಟ ಕೆರೆಗಳಿಗೆ ನೀರು ತುಂಬಿದ ಮೇಲೆ ಈಶಾನ್ಯಕ್ಕೆ ಹರಿಯುವ ಅಂತರಗಂಗೆ ಅರ್ಕಾವತಿಯಲ್ಲಿ ಸೇರ್ಪಡೆಯಾಗುತ್ತಾಳೆ. ಅರ್ಕಾವತಿಯು ಮೇಕೆದಾಟುವಿನಲ್ಲಿ ಕಾವೇರಿ ನದಿಯನ್ನು ಸೇರುವ ಮೊದಲು ಕನಕಪುರದಿಂದ ೩೦ ಕಿ.ಮೀ.ದೂರವಿರುವ ಚುಂಚಿ ಗ್ರಾಮದ ಬಳಿ ೧೫೦ ಅಡಿ ಆಳಕ್ಕೆ ಧುಮುಕಿ ಜಲಪಾತವನ್ನು ಸೃಷ್ಟಿಸಿದೆ.

ಆನೇಕಲ್ ತಾಲ್ಲೂಕಿನ ಪಶ್ಚಿಮ ಭಾಗವಾಗಿ ಪಾಲಾರ್ ನದಿ ಜಲಾಶಯ ಪ್ರದೇಶಕ್ಕೆ ಹರಿದು ಮುಂದೆ ಕಣಿವೆ ಪ್ರದೇಶದಲ್ಲಿ ಆನೇಕಲ್ಲಿಗೆ ೪–೫ ಕಿ.ಮೀ. ದೂರದಲ್ಲಿರುವ ಮುತ್ಯಾಲಮಡುವುನಲ್ಲಿ ಸೇರುತ್ತದೆ. ಆನೇಕಲ್ ತಾಲ್ಲೂಕಿನ ಹಾರೋಬೆಲೆ ಗ್ರಾಮದಲ್ಲಿ ೧೯೭೫ ರಲ್ಲಿ ಜಗಜೀವನ್ ರಾಮ್ ರ ಪ್ರಭಾವದಿಂದ ಕರ್ನಾಟಕದ ಮುಖ್ಯಮಂತ್ರಿಗಳಾದ ಮಾನ್ಯ ದೇವರಾಜ್ ಅರಸ್‌ರವರು ಜಲಾಶಯ ನಿರ್ಮಾಣಕ್ಕೆ ಅಡಿಗಲ್ಲು ಹಾಕಿದ್ದು ಅಂದಿನಿಂದ ಸುಮಾರು ೩೦ ವರ್ಷಗಳ ಕಾಲ ಕುಂಟುತ್ತಾ ಸಾಗುತ್ತಾ ೨೦೦೭ ರಲ್ಲಿ ಗರಿಷ್ಟ ನೀರಿನ ಮಟ್ಟವು ಮೂರು ಹಳ್ಳಿಗಳ ಮುಳುಗಡೆ ಭೀತಿಯಿಂದ ೧೫ ಕೀ.ಮೀ.ಗೆ ಮಿತಿಗೊಳಿಸಲಾಗಿತ್ತು. ಆದರೂ ಕೂತುಗನಹಳ್ಳಿ ಎಂಬ ಗ್ರಾಮವು ಮುಳುಗಡೆಯಾಯಿತ್ತು. ಎರಡು ದಂಡೆಯಲ್ಲಿ ನಾಲೆಗಳಿದ್ದು, ನೀರಾವರಿ ಮೂಲಕ ಅಕ್ಕ ಪಕ್ಕದ ಗ್ರಾಮಗಳಿಗೆ ಕೃಷಿಗೆ ನೀರೊದಗಿಸುತ್ತದೆ.

ಹೀಗೆ ಅರ್ಕಾವತಿ ನದಿಯು ಅಲ್ಲಲ್ಲಿ ಕಲುಷಿತ ನೀರನ್ನು, ಅಲ್ಲಲ್ಲಿ ಶುದ್ಧ ನೀರನ್ನು ಸೇರಿಸಿಕೊಂಡು, ಅನೇಕ ನದಿ, ಉಪನದಿ, ಹೊಳೆ, ಹಳ್ಳ-ಕೊಳ್ಳಗಳನ್ನು ತನ್ನ ಒಡಲಿಗೆ ಸೇರಿಸಿಕೊಂಡು ಹರಿಯುತ್ತಾ ಚಿಕ್ಕಬಳ್ಳಾಪುರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಜಿಲ್ಲೆಗಳ ಜೀವನದಿಯಾದ ಅರ್ಕಾವತಿಯು ಉಪನದಿಗಳು, ಹೊಳೆಗಳು, ಕಾಲುವೆಗಳು ಇತ್ತೀಚೆಗೆ ಕಲುಷಿತಗೊಳ್ಳಲಾರಂಭಿಸುತ್ತಿದೆ. ಕಾರಣ ಯೋಜನೆಯಿಲ್ಲದ ನಗರೀಕರಣ, ಕಾನೂನು ಪಾಲಿಸದ ಕೈಗಾರಿಕೀಕರಣ, ನೈತಿಕ ಅನೈತಿಕ ಗಣಿಗಾರಿಕೀಕರಣ ಇದರ ಜೊತೆಗೆ ಒತ್ತುವರಿದಾರರು ಹೀಗೆ ಸರ್ಕಾರದ ನಿರ್ಲಕ್ಷ, ಅವ್ಯವಸ್ಥೆ, ಅರಾಜಕತೆಯೇ ಇದಕ್ಕೆ ಪ್ರಮುಖ ಕಾರಣವಾಗಿದೆ. ಜನ ಜಾನುವಾರುಗಳು ಮುಂದಿನ ಪೀಳಿಗೆಯು ಆರೋಗ್ಯಕರ ಸಮಾಜದಲ್ಲಿ ಬದುಕ ಬೇಕಾದರೆ ಅರ್ಕಾವತಿಯನ್ನು ಪುನರು ಚೇತನಗೋಳಿಸಬೇಕು.

## ಹೆಸರುಘಟ್ಟ

೧೯ನೇ ಶತಮಾನದ ಅಂತ್ಯಕ್ಕೆ ಬೆಂಗಳೂರು ನಗರಕ್ಕೆ ಧರ್ಮಾಂಬುದಿ, ಸಂಪಂಗಿ, ಅಲಸೂರು, ಸ್ಯಾಂಕಿ ಕೆರೆಗಳ ನೀರಿನ ಕೊರತೆಯಾದ ಸಂದರ್ಭದಲ್ಲಿ ಮೈಸೂರು ೧೦ನೇ ಚಾಮರಾಜೇಂದ್ರ ಒಡೆಯರ್ ೧೮೧೯ರಲ್ಲಿ ಅರ್ಕಾವತಿ ನದಿ ಜೊತೆಗೆ ಸುಮಾರು ೬೦ಳ ಚದರ ಕಿಲೋಮೀಟರ್ ವ್ಯಾಪ್ತಿಯಲ್ಲಿ ತಮ್ಮಸಂದ್ರ, ಮತ್ತೂರು, ಬ್ಯಾತ, ದೊಡ್ಡತುಮಕೂರು, ಕಾಕೋಳ, ಅರದೇಶನಹಳ್ಳಿ, ಕೊಳತೂರು, ಮಧುರೆ, ಮತ್ತು ಇತರೆ ೧೯೭ ಕೆರೆ, ಕುಂಟೆಗಳೇ ಪ್ರಮುಖ ನೀರಾಧರಗಳಾದ ಹೆಸರುಘಟ್ಟ ಕೆರೆಯಲ್ಲಿ ಜಲಾಶಯ ನಿರ್ಮಿಸಲು ಆದೇಶಿಸಿದರು. ಆಗಿನ ದಿವಾನ್ ಕೆ.ಶೇಷಾದ್ರಿ ಅಯ್ಯರ್ ೧೮೯೪ರಲ್ಲಿ ಮೈಸೂರು ರಾಜ್ಯದ ಮುಖ್ಯ ಇಂಜಿನಿಯರ್ ಎಂ.ಸಿ.ಹಚಿನ್ಸನ್ ತಾಂತ್ರಿಕ ನೆರೆವಿನಿಂದ ಹೆಸರುಘಟ್ಟ ಕೆರೆಯಿಂದ ನೀರೂಣಿಸುವ ಯೋಜನೆ ಪ್ರಾರಂಭವಾಗಿ ೧೮೯೬ ಆಗಸ್ಟ್ ೭ನೇ ತಾರೀಕಿನಲ್ಲಿ ಯೋಜನೆ ಸಿದ್ಧವಾಯಿತು. ೧೮೯೪ರಲ್ಲಿ ಚಾಮರಾಜ ವಾಟರ್ ವರ್ಕ್ಸ್ ಮೂಲಕ ಕಾರ್ಯ ಆರಂಭಿಸಿ, ಇಟ್ಟಿಗೆಗಳಿಂದ ನಿರ್ಮಿಸಿದ ಕಾಲುವೆ ಮೂಲಕ ಹೆಸರುಘಟ್ಟನಿಂದ ತರಬನಹಳ್ಳಿಗೆ ಬರುತ್ತಿದ್ದ ನೀರನ್ನು ಶೋಧಿಸಿ, ಕ್ಲೋರಿನ್ ಬೆರೆಸಿ ೪೨ ಅಗಲ ಹೋಂ ಪೈಡ್ ಮೂಲಕ ಸೋಲದೇವನಹಳ್ಳಿಯ ಚಾಮರಾಜ ವಾಟರ್ ವರ್ಕ್ಸ್‌ಗೆ ನೀರು ಪೂರೈಕೆಯನ್ನು ೧೮೯೬ ರಲ್ಲಿ ಆರಂಭಿಸಿ ಅಲ್ಲಿಂದ ೩ ಸಿಡಿ ಪೈಪುಗಳ ಮೂಲಕ ನೀರನ್ನು ಸಂಸ್ಕರಣೆಗಾಗಿ ಮಲ್ಲೇಶ್ವರಂನಲ್ಲಿ ಕಂಬೈಂಡ್ ಜುಯಲ್ಸ್ ಪೀಲ್ಟರ್ (ಸಿ.ಜೆ.ಎಫ್) ಗೆ ಪಂಪ್ ಮಾಡಲಾಯಿತು. ಅಲ್ಲಿಂದ ನಗರ ವಾಸಿಗಳಿಗೆ ಪ್ರತಿನಿತ್ಯ ೩೬ ದಶಲಕ್ಷ ಲೀಟರ್ ನೀರನ್ನು ಸರಬರಾಜು

ಮಾಡಲಾಗುತಿತ್ತು. ೧೯೨೪,೨೫,೨೬ ಈ ಮೂರು ವರ್ಷಗಳ ಮಾನ್ಸೂನ್ ವೈಫಲ್ಯದಿಂದ ನೀರಿನ ಶೇಖರಣೆ ಕಡಿಮೆಯಾಗಿತ್ತು.

೧೮೯೪ರಲ್ಲಿ ನಿರ್ಮಾಣವಾದ ಹೆಸರುಘಟ್ಟ ಕೆರೆಯ ಸುತ್ತಳತೆ ೨೦ ರಿಂದ ೨೨ ಕಿಲೋಮೀಟರ್ ೭೧ ಅಡಿ ಆಳದ ಜಲಾಶಯವನ್ನು ನಿರ್ಮಿಸಲಾಗಿತ್ತು. ಇದೀಗ ಕೆರೆ ೧೬೨೦ ಹೆಕ್ಟೇರ್ನಷ್ಟಿದೆ. ನೀರಿನ ಸಾಮರ್ಥ್ಯ ೧೬೫೩ ಎಂ.ಸಿ.ಯು.ಎಂ ಅಣೆಕಟ್ಟು ೮೪ ಹೆಕ್ಟೇರ್ ಜಲಾಯನ ಪ್ರದೇಶವಾದ (೩೦ ರಿಂದ ೩೭ ಚದುರ ಕಿಲೋಮೀಟರ್) ಹೆಸರುಘಟ್ಟ ಕೆರೆ ಶತಮಾನಗಳ ಕಾಲ ದೊಡ್ಡಬಳ್ಳಾಪುರ, ನೆಲಮಂಗಲ ತಾಲ್ಲೂಕಿನ ಸಾವಿರಾರು ಎಕರೆ ಕೃಷಿ ಭೂಮಿಗೆ ನೀರುಣಿಸುತ್ತಿದ್ದ ಭದ್ರವಾಗಿರುವ ಹೆಸರುಘಟ್ಟ ಕೆರೆಗೆ ಪ್ರಸ್ತುತ ನೀರು ಇಲ್ಲದೆ, ನೀರು ಸರಬರಾಜು ಮಾಡುವ ಕಾರ್ಯಗಳೆಲ್ಲಾ ಸ್ಥಗಿತಗೊಂಡು ಮೂಲೆ ಗುಂಪಾಗಿದೆ.

**ತಿಪ್ಪಗೊಂಡನಹಳ್ಳಿ**

೧೯೧೮ ರಲ್ಲಿ ಬೆಂಗಳೂರಿನ ಜನ ಕುಡಿಯುವ ನೀರಿನ ವ್ಯತ್ಯಯವಾದಾಗ ೧೦ನೇ ಚಾಮರಾಜೇಂದ್ರ ಒಡೆಯರ್ ಕುಡಿಯುವ ನೀರಿನ ಮೂಲವಾಗಿ ತಿಪ್ಪಗೊಂಡನಹಳ್ಳಿ ಸಮೀಪ ಹರಿಯುತ್ತಿರುವ ಅರ್ಕಾವತಿ ನದಿಗೆ ಅಣೆಕಟ್ಟಿನ ಯೋಜನೆಯನ್ನು ಸರ್.ಎಂ. ವಿಶ್ವೇಶ್ವಯ್ಯರವರು ಕಾರ್ಯದಕ್ಷತೆಯಿಂದಾಗಿ ೧೯೩೩ ಹೊತ್ತಿಗೆ ಜಲಾಶಯ ನಿರ್ಮಾಣದ ಕಾರ್ಯ ಪೂರ್ಣವಾಗಿ ಚಾಮರಾಜಸಾಗರ ಎಂದು ನಾಮಕರಣ ಮಾಡಲಾಯಿತು. ಬೆಟ್ಟ ಗುಡ್ಡಗಳಂದ ಆವೃತವಾಗಿರುವ ಈ ಪ್ರದೇಶದಲ್ಲಿರುವ ೪೮೪ ಕೆರೆ, ಕಟ್ಟೆ, ಹಳ್ಳಗಳು ಹಾಗೂ ನಂದಿ ಬೆಟ್ಟದಿಂದ ಹರಿಯುವ ಅರ್ಕಾವತಿ ಮತ್ತು ಶಿವಗಂಗೆ ಬೆಟ್ಟದಿಂದ ಹರಿಯುವ ಕುಮುದ್ವತಿ ನದಿಗಳು ಜಲಾಶಯಕ್ಕೆ ನದಿ ಮೂಲವಾಗಿದೆ.

ಈ ಜಲಾಶಯವು ಸಮುದ್ರ ಮಟ್ಟದಿಂದ ೨೫೮೦ ಅಡಿಗಳ ಎತ್ತರ, ಜಲಾಶಯದ ವಿಸ್ತೀರ್ಣ ೫೩೨ ಚದರ ಮೈಲಿ, ೪೮೦ ಕೊಳಗಳು ಸೇರಿಕೊಳ್ಳುತ್ತವೆ. ನದಿಯ ಶೇಖರಣಾ ಸಾಮರ್ಥ್ಯವು ೨೫೭೪ ಅಡಿಗಳಿರುತ್ತದೆ. ೧೯೩೩ ರಲ್ಲಿ ೫೭ ಸೆಂಟಿಮೀಟರ್ ಮಳೆಯಾಗಿತ್ತು. ಕೆಳಮಟ್ಟದಿಂದ ಅಣೆಕಟ್ಟೆಯ ಎತ್ತರ ೧೭೦ ಅಡಿಗಳು ಆದರೆ ಅಡಿಪಾಯದಿಂದ ೧೬೫ ಅಡಿಗಳು, ನದಿ ಪಾತ್ರದಿಂದ ೧೦೨ ಅಡಿಗಳು ಕೆಳ ಮಟ್ಟದಲ್ಲಿ ೧೪೦ ಅಡಿಗಳು ಅಣೆಕಟ್ಟೆಯನ್ನು ನಿರ್ಮಾಣ ಮಾಡಲು ೨೧.೮ ಲಕ್ಷ ರೂಪಾಯಿಗಳು, ಜಲಾಶಯದ ೪ ಪ್ರತಿ ಬಾಗಿಲಿನ ಅಳತೆ ೧೦ ಅಡಿ ಅಗಲ, ೨೦ ಅಡಿ ಎತ್ತರ, ಹೊರ ಬರುವ ನೀರಿನ ಗರಿಷ್ಟ ಪ್ರಮಾಣ ೯ ಸಾವಿರ ಕ್ಯೂಸೆಕ್ಸ್, ಈ ಕಾರ್ಯಗಳನ್ನು ವಿದ್ಯುತ್ಛಕ್ತಿ ಹಾಗೂ ದೈಹಿಕ ಶಕ್ತಿಯಿಂದ ನಿಯಂತ್ರಿಸಬಹುದು, ಈ ಬಾಗಿಲುಗಳ ತಯಾರಿಕಾ ಕಂಪನಿ ರಾನ್ ಸೋಮ್ ವ್ಯಾಪಿಯರ್ಸ್

(ಇಂಗ್ಲೆಂಡ್) ಮೇಲ್ಭಾಗದಲ್ಲಿ ಕೇಸ್ಟಗೇಟ್ ಲಂಭಕೋನದಲ್ಲಿರುವ ೭ ಕಬ್ಬಿಣದ ಬಾಗಿಲುಗಳಿಂದ ಹೊರಬರುವ ನೀರಿನ ಗರಿಷ್ಟ ಪ್ರಮಾಣ ೭೫೦ ಕ್ಯೂಸೆಕ್ಸ್, ಈ ನೀರು ೨೦ ಅಡಿ ಅಗಲದಲ್ಲಿ ೮ ಅಡಿ ಎತ್ತರದಲ್ಲಿ ಹರಿಯುತ್ತದೆ. ೧೯೪೨ರಲ್ಲಿ ಜಲಾಶಯದ ಸಂಗ್ರಹವನ್ನು ಮತ್ತಷ್ಟು ಏರಿಸಲಾಯಿತು ಆಗ ೪ ಫಿಲ್ಟರ್ ಮತ್ತು ಪಂಪ್ ಹೌಸ್‌ಗಳನ್ನು ಸೇರ್ಪಡಿಸಲಾಯಿತು. ಕ್ಲೋರಿನ್ ಮೂಲಕ ಶುದ್ಧವಾದ ನೀರನ್ನು ತಾವರೆಕೆರೆ ಮಧ್ಯಾಂತರ ಜಲ ಮಂಡಲಿಯ ಮೂಲಕ (ಹೆಚ್ಚಿನ ನೀರನ್ನು ಸಂಗ್ರಹಿಸಲು ತಾವರೆಕೆರೆಯಲ್ಲಿ ಎರಡು ನೀರು ಸಂಗ್ರಹ ಕೊಳಗಳಿವೆ.) ೧೯೪೨ ಮತ್ತು ೧೯೫೧ ರ ಅವಧಿಯಲ್ಲಿ ತಿಪ್ಪಗೊಂಡನಹಳ್ಳಿಯ ಜಲಾಶಯದಿಂದ ಪ್ರತಿನಿತ್ಯ ೧೦.೮ ದಶಲಕ್ಷ ಗ್ಯಾಲನ್ ನೀರನ್ನು ಬೆಂಗಳೂರು ನಗರಕ್ಕೆ ಸರಬರಾಜು ಮಾಡಲಾಗುತ್ತಿತ್ತು. ೧೯೫೩-೫೪ ರಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯದ ಪೂರ್ಣ ಪ್ರಮಾಣದ ನೀರನ್ನು ಅಂದರೆ ३೦३೮ ಮಿಲಿಯನ್ ಕ್ಯೂಸೆಕ್ಸ್ ನೀರನ್ನು ಸಂಗ್ರಹಕ್ಕೆ ಸರ್ಕಾರ ಒಪ್ಪಿಗೆ ನೀಡಿ ೧೯೫೯ ರಲ್ಲಿ ಕಾಮಗಾರಿ ಆರಂಭವಾಗಿ ೧೯೬೦ ರಲ್ಲಿ ನಗರಕ್ಕೆ ಪ್ರತಿನಿತ್ಯ ೨೫ ಮೆಗಾಗ್ಯಾಲನ್ ನೀರನ್ನು ಸರಬರಾಜು ಮಾಡಲಾಯಿತು.

೧೦೦ ಕ್ಕೂ ಹೆಚ್ಚು ಮನೆಗಳನ್ನು ನೌಕರರಿಗೆ ಮೂಲ ಸೌಕರ್ಯಗಳಿಗೆ ನಿರ್ಮಾಣ ಮಾಡಿ ಇದರ ಜೊತೆಗೆ ನೀರು, ಶೈಕ್ಷಣಿಕ ವ್ಯವಸ್ಥೆಗಾಗಿ ಶಾಲೆ, ಮನೊರಂಜನೆಗಾಗಿ ಉದ್ಯಾನವನ, ಸಮುದಾಯ ಭವನ, ದೇವಸ್ಥಾನ ಇತ್ಯಾದಿಗಳು ನಿರ್ಮಾಣವಾದವು. ಸರ್.ಎಂ.ವಿಶ್ವೇಶ್ವರಯ್ಯನವರು ವಾಸವಿದ್ದ ವಸತಿ ಗೃಹವನ್ನು ಕಾಣಬಹುದು. ಜಲಾಶಯದಲ್ಲಿ ಮೀನೂಗಾರಿಕೆಗೂ ಪರವಾನಿಗೆಗಳು ಸಿಕ್ಕಿದೆ. ಜಲಾಶಯವು ೧೯೮೧, ೧೯೯೪ ರಲ್ಲಿ ಪೂರ್ಣ ತುಂಬಿದ್ದು, ಇತ್ತೀಚೆಗೆ ೨೦೧೭ ರಲ್ಲಿ ೭೪ ಅಡಿ ಭರ್ತಿಯಾಗಿ ನೀರು ಹೊರ ಬಿಡುವಾಗ ಗೇಟ್ ಎತ್ತಿದ್ದು, ಗೇಟ್ ಸಮಸ್ಯೆಯಿಂದಾಗಿ ಕೆಳಗೆ ಇಳಿಯಲೇಯಿಲ್ಲ. ೨೦ ವರ್ಷಗಳಿಂದೀಚೆಗೆ ನೀರು ಹರಿಯುವ ಪ್ರದೇಶಗಳಲ್ಲಿ ಚೆಕ್ ಡ್ಯಾಮುಗಳು, ಹಳ್ಳ ಕೊಳ್ಳಗಳು, ರಾಜಕಾಲುವೆಗಳು ದುಃಸ್ಥಿತಿಯಲ್ಲಿರುವುದು, ಭೂಕಬಳಿಕೆಯಿಂದಾಗಿ ಒಳ ಹರಿವು ಇಲ್ಲದಂತಾಗಿದೆ. ಜಲಾಶಯ ಭರ್ತಿಯಾದರೆ ೨ ವರ್ಷ ನಗರಕ್ಕೆ ಪ್ರತಿ ದಿನಕ್ಕೆ ೧३೫ ದಶಲಕ್ಷ ಲೀಟರ್ (ಎಂ.ಎಲ್.ಡಿ) ನೀರು ಸರಬರಾಜು ಮಾಡಬಹುದು. ೭೪ ಅಡಿ ಎತ್ತರದ ಜಲಾಶಯದಲ್ಲಿ ಹೂಳು ಪ್ರಮಾಣವೇ ಹೆಚ್ಚಾಗಿದೆ. ೨೦೧೬ರಲ್ಲಿ ಮಾಸ್ತಿಗುಡಿ ಚಿತ್ರಿಕರಣ ಸಂದರ್ಭದಲ್ಲಿ ಹೂಳಿಗೆ ಸಿಕ್ಕಿ ಇಬ್ಬರು ಖಳನಾಟರಾದ ಅನಿಲ್ ಮತ್ತು ಉದಯ್ ಮರಣ ಹೊಂದಿದ್ದರು. ನೆಲಕದರೆನಹಳ್ಳಿ, ನಾಗಸಂದ್ರ, ಮಾಕಳಿ, ಮಾದವಾರ, ಲಕ್ಷ್ಮೀಪುರಗಳಲ್ಲಿ ಕಾರ್ಖಾನೆಗಳಿಂದ ಹೊರಬರುವ ತ್ಯಾಜ್ಯ, ವಿಷಪೂರಿತ ನೀರು ತಿಪ್ಪಗೊಂಡನಹಳ್ಳಿ ಜಲಾಶಯಕ್ಕೆ ಸೇರಿ ವಿಷಯುಕ್ತವಾಗಿದೆ.

ಕುಣಿಗಲ್ನಿಂದ ಹೇಮಾವತಿ ನೀರನ್ನು ವಿವಿಧ ಹಂತಗಳಲ್ಲಿ ತಿಪ್ಪಗೊಂಡನಹಳ್ಳಿ ತರುವ ಪ್ರಯತ್ನ ನಡೆಯುತ್ತಲೇ ಇದೆ. ಇತ್ತೀಚೆಗೆ ಜಲಾಶಯವನ್ನು ಜೀರ್ಣೋದ್ಧಾರ ಮಾಡಲು ಪೂರ್ತಿ ನೀರನ್ನು ಹೋರ ಬಿಟ್ಟ ಮೇಲಂತೂ ೨೦೧೯ನೇ ಬೇಸಿಗೆ ಕಾಲದಲ್ಲಿ ೧೦ ಕೀ.ಮೀ. ಸುತ್ತಳಾತೆಯಲ್ಲಿ ಅಂತರ್ಜಲ ಮಟ್ಟ ಕುಸಿದ್ದು, ನೀರಿಗೆ ಹಾಹಕಾರದ ಪರಿಸ್ಥಿತಿ ಒದಗಿತ್ತು.

## ಮೆಂಚನಬೆಲೆ

ತಿಪ್ಪಗೊಂಡನಹಳ್ಳಿಯ ಜಲಾಶಯದಿಂದ ಹೋರ ಬಿಟ್ಟ ನೀರನ್ನು ಸಂಗ್ರಹಿಸಲು ಶವಣದುರ್ಗ, ರಾಮಗಿರಿ, ಶಿವಗಿರಿ ಕಾಡುಗಳ ಮಧ್ಯ ಮೆಂಚನಬೆಲೆ ಜಲಾಶಯ ನಿರ್ಮಾಣವಾಗಿದೆ. ಜಲಾಶಯದ ನೀರನ್ನು ನೀರಾವರಿಗೆ ಬಳಸುತ್ತಿದ್ದು, ವ್ಯವಸಾಯಕ್ಕೆ ಅನುಕೂಲವಾಗಿಲ್ಲ. ಮಳೆಗಾಲದಲ್ಲಿ ಅನೇಕ ಕೆರೆ ತೊರೆಗಳಿಂದ ೩೫೦೦ ರಿಂದ ೫೦೦೦ ಕ್ಯೂಸೆಕ್ಸ್ ನೀರು ಹರಿಯುವ ಸಾಧ್ಯತೆ ಇದೆ. ಈ ಜಲಾಶಯ ನಿರ್ಮಾಣವಾಗಿರುವುದರಿಂದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅಂತರ ಜಲ ಚೆನ್ನಾಗಿದೆ.

೫ನೇ ಶತಮಾನದಿಂದ ೧೮ನೇ ಶತಮಾನದ ಅವಧಿಯಲ್ಲಿ ಪ್ರಸ್ತುತ ಇರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಒಂದು ಘಟಕವಾಗಿರದೇ ವಿವಿಧ ಕಾಲಘಟ್ಟದಲ್ಲಿ ಬೇರೆ ಬೇರೆ ಮನೆತನಗಳ ಅರಸರುಗಳು ಆಡಳಿತವನ್ನು, ಸರಳವಾಗಿ, ಸುಲಭವಾಗಿ, ತೃಪ್ತಿಕರವಾಗಿ, ಸಮರ್ಪಕವಾಗಿ, ನಿರ್ವಹಿಸಲು ಒಂದು ಸಾಮ್ರಾಜ್ಯವನ್ನು ಶ್ರೇಣಿಕೃತವಾಗಿ ರಾಜ್ಯ, ನಾಡು, ಮಂಡಲ, ವಿಷಯ, ಸೀಮೆ, ಗ್ರಾಮ ಮುಂತಾದ ಘಟಕಗಳಾಗಿ ವಿಭಜಿಸಿಕೊಂಡು ಆಡಳಿತವನ್ನು ನಡೆಸಿರುವುದನ್ನು ಶಾಸನಾಧಾರಗಳಿಂದ ತಿಳಿಯಬಹುದು. ಇದಲ್ಲದೆ ಜಿಲ್ಲೆಯು ಹಲವು ಮನೆತನಗಳಿಗೆ ರಾಜಧಾನಿಯಾಗಿತ್ತು.

ರಾಜಧಾನಿಯ ಸುತ್ತಮುತ್ತಲಿನ ಪ್ರದೇಶವನ್ನು ರಾಜನೇ ನೇರವಾಗಿ ಆಳುತ್ತಿದ್ದು, ಉಳಿದ ಭಾಗವನ್ನು ಹಲವು ಮಂಡಲಗಳಾಗಿ ವಿಂಗಡಿಸಿ, ಒಂದೊಂದು ಮಂಡಲಕ್ಕೂ ಮಾಂಡಲೇಶ್ವರನನ್ನು ಅಥವಾ ಸಾಮಂತಾಧಿಕಾರಿಗಳನ್ನು ನೇಮಿಸುತ್ತಿದ್ದರು. ನಂತರ ಒಂದೊಂದು ಮಂಡಲವನ್ನು ಹಲವಾರು ನಾಡುಗಳಾಗಿ ವಿಂಗಡಿಸಿ ಆ ನಾಡಿಗೆ ನಾಡಪ್ರಭು ಅಥವಾ ನಾಡಗಾವುಂಡಗಳನ್ನು ನೇಮಿಸುತ್ತಿದ್ದರು. ನಾಡಪ್ರಭುಗಳ ಅಧೀನದಲ್ಲಿ ಊರ ಗಾವುಂಡರು ಇದ್ದರು. ಈ ಕ್ರಮದಲ್ಲಿನ ಅಧಿಕಾರಗಳ ವರ್ಗೀಕರಣ ವ್ಯವಸ್ಥೆ ಚಾಲ್ತಿಯಲ್ಲಿತ್ತು. ನಾಡು ಎಂಬುದಕ್ಕೆ ಕಾಡಲ್ಲದೆ ಜನವಸತಿಯುಳ್ಳ ಪ್ರದೇಶದ ಭೂ ಭಾಗ ಎಂದು, ನಾಡು ಪದವು ದೇಶ ಎಂಬ ಅರ್ಥದಲ್ಲಿ ಕವಿರಾಜಮಾರ್ಗದಲ್ಲಿ ಕಾವೇರಿ ಮತ್ತು ಗೋದಾವರಿ ನದಿಗಳ ನಾಡು ಕನ್ನಡ ನಾಡಾಗಿತ್ತು ಎಂದು ಹೇಳಲಾಗಿದೆ. ಅರ್ಕಾವತಿ ನದಿಯು ಕುಕ್ಕಲನಾಡು, ಕೆಳಗಲಿನಾಡು,

ಕೆಳಲೆನಾಡು, ಸಿಂಗಲ್ ನಾಡುಗಳ ಮೂಲಕ ಹರಿದು ಕಾವೇರಿ ನದಿಯನ್ನು ಸೇರಿದರೆ, ದಕ್ಷಿಣ ಪಿನಾಕಿನಿ ನದಿಯು ಎಡದಂಡೆಯಲ್ಲಿನ ತೊರವಳನಾಡು, ಸಳ್ಳೆ-೩೦೦ ಪ್ರದೇಶಕ್ಕೆ ನೀರಿನ ತಾಣವಾಗಿದೆ.

ಜಿಲ್ಲಾ ವ್ಯಾಪ್ತಿಯಲ್ಲಿ ಮೊದಲಿಗೆ ಅಧಿಕಾರವನ್ನು ಪ್ರಾರಂಭಿಸಿದ್ದ ಗಂಗರು ಮೊದಲಿಗೆ ಪಲ್ಲವರ ಮಾಂಡಲಿಕರಾಗಿ ಕೊವಳಾಲವನ್ನು ಕ್ರಿ.ಶ.೩೫೦ ರಿಂದ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ಆರಂಭಿಸಿದರು. ದಕ್ಷಿಣ ಕರ್ನಾಟಕದ ಬಹು ಭಾಗಗಳ ಜೊತೆಗೆ ತಮಿಳುನಾಡಿನ ಕೃಷ್ಣಗಿರಿ, ಧರ್ಮಪುರಿ, ಸೇಲಂ. ಈರೋಡ್, ಕೊಯಮತ್ತೂರು ಜಿಲ್ಲಾ ಪ್ರದೇಶಗಳು ಸಹ ಸೇರಿದವು.

ಭೂ ವಿಕ್ರಮನ ಆಳ್ವಿಕೆ ಕಾಲದಲ್ಲಿ ಚನ್ನಪಟ್ಟಣ ತಾಲ್ಲೂಕಿನ ಮಾಕುಂದವನ್ನು ರಾಜಧಾನಿ ಮಾಡಿಕೊಂಡು, ನಂತರ ಶ್ರೀಪುರುಷನ ಕಾಲದಲ್ಲಿ ನೆಲಮಂಗಲ ತಾಲ್ಲೂಕಿನ ಮಾನ್ಯಪುರವು ನಾಲ್ಕನೇಯ ರಾಜಧಾನಿಯಾಗಿತ್ತು. ಗಂಗರ ಕಾಲದಲ್ಲಿ ಈಡೀ ಜಿಲ್ಲೆಯು ಕ್ರಿ.ಶ.೮೭೦ ರ ವರೆಗೆ ಗಂಗ ಆರುಸಾಸಿರ[೧], ನಂತರ ಕ್ರಿ.ಶ.೮೯೦ ರಲ್ಲಿ ಗಂಗರ ಪೂರ್ಣಪ್ರದೇಶವಾದ ಗಂಗವಾಡಿ ೯೬೦೦೦[೨] ಎಂಬ ಪ್ರದೇಶದಲ್ಲಿ ಲೀನವಾಗಿತ್ತು.

ಕ್ರಿ.ಶ.೧೧ನೇ ಶತಮಾನದ ಆರಂಭದಲ್ಲಿ ಜಿಲ್ಲೆಯು ಚೋಳರ ವಶವಾಗುವುದರೊಂದಿಗೆ, ಚರ್ತುವೇದಿಮಂಗಲ, ಚೋಳಮಂಡಲ, ವಳನಾಡು, ನಾಡು, ಗ್ರಾಮ ಎಂಬ ಕ್ರಮದಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಭಾಗಿಸಿ ಕೊಂಡು ಆಡಳಿತವನ್ನು ನಡೆಸಿದ್ದಾರೆ. ಗಂಗರ ಕಾಲದ ದಡಿಗಾವಳಿ ಪ್ರದೇಶವನ್ನು ಚೋಳರು ವಿಕ್ರಮಚೋಳ ಮಂಡಲವನ್ನಾಗಿ ನಂತರ ನಿಗರಿಲಿ ಚೋಳಮಂಡಲವನ್ನಾಗಿ ಪರಿವರ್ತಿಸಿಕೊಂಡರು. ಕ್ರಿ.ಶ.೧೦೪೬ರಲ್ಲಿ ವಿಕ್ರಮ ಚೋಳಮಂಡಲ[೩] (ದೇವನಹಳ್ಳಿ ಭಾಗ) ಕ್ರಿ.ಶ.೧೧೧೦ರಲ್ಲಿ ರಾಜೇಂದ್ರ ಚೋಳವಲನಾಡು[೪] ನಂತರ ಕ್ರಿ.ಶ.೧೧೪೫ರಲ್ಲಿ ನಿಗಿರಿಲಿ ಚೋಳಮಂಡಲ[೫] ಮೊದಲಾದ ನಾಡು, ಒಳನಾಡುಗಳಲ್ಲಿ ಜಿಲ್ಲೆಯು ಐಕ್ಯವಾಗಿತ್ತು. ಮುಡಿಗೊಂಡ ಚೋಳಮಂಡಲದಲ್ಲಿ ರಾಜೇಂದ್ರ ಚೋಳವಳನಾಡು, ಕರಿಕಾಲ ಚೋಳವಳನಾಡುಗಳು ಅಂತರ್ಗತವಾಗಿದ್ದವು, ವಿಕ್ರಮ ಚೋಳಮಂಡಲದಲ್ಲಿ ಸಣ್ಣೆನಾಡು, (ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕಿನ ಕೆಲವು ಭಾಗಗಳನ್ನು ಒಳಗೊಂಡ ಪ್ರಾಂತ್ಯ.) ಕುಕ್ಕನೂರುನಾಡು, (ನೆಲಮಂಗಲ ಕೇಂದ್ರವಾದ ಕುಕ್ಕನೂರುನಾಡು, ಬೆಂಗಳೂರು ಉತ್ತರ ತಾಲ್ಲೂಕಿನ ಪಶ್ಚಿಮ ಭಾಗ, ಮಾಗಡಿ ತಾಲ್ಲೂಕಿನ ಪೂರ್ವ ಭಾಗ, ಬೆಂಗಳೂರು

---

[೧] ಎ.ಕ-೯, ಹೊ.ತಾ.೯, ಕ್ರಿ.ಶ.೮೭೦, ಜೋಡಿದಳಸಿಗೆರೆ.
[೨] ಎ.ಕ-೯, ಬೆಂ.೮೩, ಕ್ರಿ.ಶ.೮೯೦, ಬೇಗೂರು.
[೩] ಎ.ಕ-೯, ದೇ.ತಾ.೭೫, ಕ್ರಿ.ಶ.೧೦೪೬, ತಮಿಳು, ಗಂಗವಾರ.
[೪] ಎ.ಕ-೯, ಬೆಂ.೮೫ಸಿ, ಕ್ರಿ.ಶ.೧೧೧೦, ತಮಿಳು, ಬೇಗೂರು.
[೫] ಎ.ಕ-೯, ಹೊ.ತಾ.೪೦, ಕ್ರಿ.ಶ.೧೧೪೫, ತಮಿಳು, ವೋಬಳಹಳ್ಳಿ.

ದಕ್ಷಿಣ ತಾಲ್ಲೂಕಿನ ಕೆಲವು ಭಾಗಗಳನ್ನು ಒಳಗೊಂಡ ಪ್ರದೇಶ.) ಮಣ್ಣೆನಾಡು (ನೆಲಮಂಗಲ ತಾಲ್ಲೂಕಿನ ಪೂರ್ವ ಭಾಗದಲ್ಲಿ ಮಣ್ಣೆಯನ್ನು ಕೇಂದ್ರವಾಗಿಟ್ಟು ಕೊಂಡ ಪ್ರದೇಶ) ಮತ್ತು ನಿಗರಿಲಿ ಚೋಳಮಂಡಲದಲ್ಲಿ ಮಣ್ಣೆನಾಡು, ರಾಜೇಂದ್ರ ಚೋಳವಳನಾಡು, (ರಾಜೇಂದ್ರ ಚೋಳವಳನಾಡುವಿನಲ್ಲಿ ಹೊಸಕೋಟೆ ತಾಲ್ಲೂಕಿನ ಕೆಲವು ಭಾಗಗಳನ್ನು ಒಳಗೊಂಡ ಕೈವಾರನಾಡು) ಹುಲ್ಲೂರುನಾಡು, ಇಲೈಪಾಕ್ಕನಾಡು, (ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲ್ಲೂಕಿನ ದಕ್ಷಿಣ ಭಾಗಗಳನೊಳಗೊಂಡ ಯಲಹಂಕನಾಡು) ವೆಪ್ಪುರುನಾಡು (ಬೇಗೂರುನಾಡು) ಮುಂತಾದ ನಾಡುಗಳು ಸಮಾವೇಶಗೊಂಡಿದ್ದವು.

ಚೋಳರ ನಂತರ ಹೊಯ್ಸಳರು ಮಂಡಲ, ವಳನಾಡು, ನಾಡುಗಳ ವಿಭಾಗದಲ್ಲೇ ಆಡಳಿತ ಮುಂದುವರೆಸಿದರು ಯಾವುದೇ ಬದಲಾವಣೆಗಳನ್ನು ಮಾಡಲಿಲ್ಲ. ವೀರಬಲ್ಲಾಳನ ಹೆಸರ್ ಕುಂದಾಣಿ ರಾಜ್ಯದಲ್ಲಿ ವಿರಿವಿನಾಡು, ಮಾಸಂದಿನಾಡು, ಮೊರಸುನಾಡು, ಪೆನ್ನೈಯಂದರಮನಾಡು, ಎಲವೂರುನಾಡು, ಕೈವಾರನಾಡು, ಕುವಲಾಲನಾಡು, ಸೊಂಕನಾಯರ್ಪರು, ಐಂಬುಲುಗುರುನಾಡು, ಇಲೈಪಕ್ಕನಾಡು ಇನ್ನು ಮುಂತಾದ ಚಾಲ್ತಿಯಲ್ಲಿದಂತಹ ಹಲವಾರು ನಾಡುಗಳಾದ ಬಗ್ಗೆ ವಿವರವನ್ನು ಗುಂಜೂರಿನ ಸೋಮೇಶ್ವರ ದೇವಾಲಯದಲ್ಲಿನ ಕ್ರಿ.ಶ.೧೩೦೧ರ ಶಾಸನದಲ್ಲಿ[೬] ಕಾಣಬಹುದು.

ಚೋಳರ ಕಾಲದಲ್ಲಿ ಅನೇಕ ಗ್ರಾಮಗಳನ್ನು ಚತುರ್ವೇದಿ ಮಂಗಲಗಳನ್ನಾಗಿ / ಅಗ್ರಹಾರಗಳನ್ನಾಗಿ ಬ್ರಾಹ್ಮಣರಿಗೆ ದಾನವಾಗಿ ನೀಡಿರುವ ಪದ್ಧತಿಯನ್ನು ಹೊಯ್ಸಳರ ಕಾಲದಲ್ಲಿ ಮುಂದುವರೆಸಿರುವುದು. ದಾನವಾಗಿ ನೀಡಿರುವ ಗ್ರಾಮಕ್ಕೆ ಪ್ರತಿನಾಮವೊಂದನ್ನು ನೀಡಿರುವುದು. ಹಾಗೆಯೇ ಗಂಗರ ಕಾಲದಲ್ಲಿ ಪ್ರಚಲಿತವಿದ್ದ ಅನೇಕ ನಾಡುಗಳಾದ ಮೊರಸುನಾಡು, ಕೈವಾರನಾಡು, ಸಣ್ಣೆನಾಡು, ಮಣ್ಣೆನಾಡು ಮುಂತಾದವುಗಳು ಚೋಳ, ಹೊಯ್ಸಳ ಕಾಲದಲ್ಲೂ ಅದೇ ಹೆಸರಿನಿಂದ ಮುಂದುವರೆದಿರುವುದನ್ನು ಕಾಣಬಹುದು.

ವಿಜಯನಗರ ಅರಸರು ವಿಶಾಲವಾದ ಸಾಮ್ರಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ಅನೇಕ ರಾಜ್ಯಗಳಾಗಿ ವಿಂಗಡಿಸಿ, ಅರಸು ಮನೆತನದವರನ್ನೇ ಅಧಿಕಾರಿಗಳಾಗಿ ನೇಮಿಸುತ್ತಿದ್ದರು. ಬೆಂಗಳೂರು ಜಿಲ್ಲಾ ಪ್ರದೇಶದಲ್ಲಿ ದೊರೆತಿರುವ ಶಾಸನಾಧಾರಗಳ ಮೇಲೆ ರಾಜ್ಯ, ಚಾವಡಿ / ವೇಂಠೆ, ನಾಡು/ಸೀಮೆ, ಸ್ಥಳ, ಗ್ರಾಮ ಎಂಬುದಾಗಿ ಇದಲ್ಲದೆ ಪಟ್ಟಣ, ಅಗ್ರಹಾರ, ವೃತ್ತಿಯಾಗಿ ನೀಡಲಾಗಿದ್ದ ಸ್ಥಳಗಳು ಆಡಳಿತ ಘಟಕಗಳಾಗಿದ್ದುವೆಂದು ರಾಜವಂಶಕ್ಕೆ ಸೇರಿದ ವ್ಯಕ್ತಿಗಳನ್ನು ರಾಜ್ಯಗಳ ಪ್ರಾಂತ್ಯಾಧಿಕಾರಿಗಳನ್ನಾಗಿ

---

[೬] ಎ.ಕ-೯, ಬೆಂ.೫೧, ಕ್ರಿ.ಶ.೧೩೦೧, ತಮಿಳು, ಗುಂಜೂರು.

ನೇಮಿಸುತ್ತಿದ್ದರು. ಈ ಪ್ರಾಂತ್ಯಾಧಿಕಾರಿಗಳನ್ನು ಒಡೆಯ ಅಥವಾ ಒಡೆಯರ್ ಎಂಬ ಬಿರುದಿನಿಂದ ಸಹ ಕರೆಯುತ್ತಿದ್ದರು. ಮೊದಲನೇ ಹರಿಹರನು ಸಾಮ್ರಾಟನಾಗಿ ವಿಜಯನಗರವನ್ನು(ಹಂಪಿ), ಕಂಪಣ್ಣನು ಉದಯಗಿರಿ ರಾಜ್ಯವನ್ನು, ಒಂದನೇ ಬುಕ್ಕನು ದ್ವಾರಸಮುದ್ರದ ಸುತ್ತಲಿನ ಪ್ರದೇಶವನ್ನು, ಮಾರಪ್ಪನು ಮಲೆ ರಾಜ್ಯ ಎನಿಸಿದ ಚಂದ್ರಗುತ್ತಿಯನ್ನು, ಮುದ್ದಪ್ಪನು ಮುಳಬಾಗಿಲು ಸುತ್ತಲಿನ ಪ್ರದೇಶವನ್ನು ಆಳುತ್ತಿದ್ದರು. ಸಾಳುವ ಇಮ್ಮಡಿ ನರಸಿಂಹನು ವಿಜಯನಗರದ ದೊರೆಯಾಗಿದ್ದಾಗ ಅವನು ಕುಲಪುತ್ರ ಸಾಳುವ ದೇವಪ್ಪನಾಯಕನು ತಿಪ್ಪೂರು ಸೀಮೆಯ ಪ್ರಾಂತ್ಯಾಧಿಕಾರಿಯಾಗಿದ್ದನು ಎಂಬುದನು ಶಾಸನದಲ್ಲಿ ಕಾಣಬಹುದು.

ಮುಳಬಾಗಿಲು ರಾಜ್ಯ ಮತ್ತು ಹೊಯ್ಸಳ ರಾಜ್ಯಗಳು ವಿಜಯನಗರ ಸಾಮ್ರಾಜ್ಯದ ಪ್ರಾರಂಭ ಕಾಲದಿಂದ ತುಳುವ ವಂಶದ ಆಳ್ವಿಕೆಯ ಕಾಲದವರೆಗೂ ಹೆಚ್ಚು ಪ್ರಬಲ ರಾಜ್ಯಗಳಾಗಿ ಈ ಪ್ರದೇಶದಲ್ಲಿನ ನಾಡು/ಸೀಮೆಗಳು ಮೇಲೆ ಅಧಿಕಾರವನ್ನು ಪಡೆದಿದ್ದವು. ಮುಳುಬಾಗಿಲು ರಾಜ್ಯದಲ್ಲಿ ಮುಳುಬಾಗಿಲು, ಮಾಲೂರು, ಹೊಸಕೋಟೆ, ಆನೇಕಲ್ಲು ತಾಲ್ಲೂಕುಗಳ ಪ್ರದೇಶಗಳ ಜೊತೆಗೆ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಅನೇಕ ಭಾಗಗಳು ಅಂತರಗತವಾಗಿದ್ದವು, ಬೇಹೂರುನಾಡು & ತುರ್ಯೆವಳನಾಡುಗಳಗೆ ಸಾರಕ್ಕಿ, ಬೇಹೂರು(ಬೇಗೂರು), ಬೇಲೂರು, ಬೆಟ್ಟದಹಳ್ಳಿ, ವೊಗಟ್ಟ (ವಾಗಟ) ಮುಂತಾದ ಗ್ರಾಮಗಳು ಸೇರಿದವು.

ಪೊಯಸಣನಾಡು ಅಥವಾ ಹೊಯಿಸಣನಾಡೆಂದು ಕರೆಯಲ್ಪಟ್ಟರುವ ಹೊಯ್ಸಳ ದೇಶದಲ್ಲಿ ಬೆಂಗಳೂರು ಜಿಲ್ಲೆಯ ಪಶ್ಚಿಮ ದಿಕ್ಕಿನ ಚನ್ನಪಟ್ಟಣ, ರಾಮನಗರ, ಮಾಗಡಿ ತಾಲ್ಲೂಕಿನ ಭಾಗಗಳ ಸೇರಿದ್ದವು. ತಮಿಳುನಾಡಿನ ಹಲವು ಭಾಗಗಳು ಸಹ ಸೇರಿದ್ದವು. ವಿಜಯನಗರ ಕಾಲದ ಆಡಳಿತ ವಿಭಾಗಗಳಲ್ಲಿ ಹೊಯ್ಸಳ ರಾಜ್ಯವು ಬಹು ವಿಸ್ತಾರವಾಗಿದ್ದ ಪ್ರಾಂತ್ಯವಾಗಿತ್ತು.

ದೇವನಹಳ್ಳಿ, ಹೊಸಕೋಟೆ, ಚಿಕ್ಕಬಳ್ಳಾಪುರ ತಾಲ್ಲೂಕಿನ ಸುತ್ತ ಮುತ್ತಲಿನ ಪ್ರದೇಶಗಳು ಸಾದಲಿ ರಾಜ್ಯಕ್ಕೆ ಒಳಪಟ್ಟಿದ್ದರೆ, ಕ್ರಿ.ಶ.೧೫೩೫ ರ ನಂತರ ಪೆನುಗೊಂಡೆ ರಾಜ್ಯದ ಪ್ರಸ್ತಾಪ ಕಂಡು ಬರುತ್ತದೆ[೭]. ತುಮಕೂರು ಜಿಲ್ಲೆಯ ಸಿರಾ, ಪಾವಗಡ ತಾಲ್ಲೂಕು, ಕೋಲಾರ ಜಿಲ್ಲೆಯ ಬಾಗೇಪಲ್ಲಿ, ಆಂಧ್ರಪ್ರದೇಶದ ಪೆನುಗೊಂಡೆಯು ಸೇರಿದಂತೆ ಅನಂತಪುರ ಜಿಲ್ಲೆಯ ಭಾಗಗಳು, ನೆಲಮಂಗಲ, ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಲವು ಭಾಗಗಳು ಪೆನುಗೊಂಡ ರಾಜ್ಯಕ್ಕೆ ಒಳಪಟ್ಟಿತ್ತು ಎಂಬುದನ್ನು ಶಾಸನಗಳಂದ ಗುರುತಿಸ ಬಹುದು. ತ್ಯಾಮಗೊಂಡ್ಲು, ಗಂಡನಹಳ್ಳಿ, ವಿಶ್ವನಾಥಪುರ, ಜಖನಹಳ್ಳಿ, ಹರಿವೇಸಂದ್ರ,

[೭] ಎ.ಕ-೯, ನೆ.ತಾ.೨, ಕ್ರಿ.ಶ.೧೫೩೫, ಬಿನ್ನಮಂಗಲ.

ಕೋಡಿಹಳ್ಳಿ, ತಿಲಗಟ್ಟ ಶ್ರೀನಿವಾಸಪುರವೆಂಬ ನೃಸಿಂಹ್ಯಪುರ ಗ್ರಾಮ, ಬಿಲನಕೋಟೆ, ಹೊಸಹಳ್ಳಿ (ದೇವರ ಹೊಸಹಳ್ಳಿ) ಬಿನ್ನಮಂಗಲ ಮುಂತಾದ ಗ್ರಾಮಗಳು ಪೆನುಗೊಂಡೆ ರಾಜ್ಯದಲ್ಲಿ ಅಂತರ್ಗತವಾಗಿದ್ದವು. ಕ್ರಿ.ಶ.೧೫೫೧ ರಲ್ಲಿ ಪೆನುಗೊಂಡೆ ರಾಜ್ಯದಲ್ಲಿ[೮] ಮರುಗುಳನಾಡು, ಗೂಳೂರು ಸೀಮೆಗಳು ಸೇರಿತ್ತು.

ಹೊಸಕೋಟೆ ಮತ್ತು ನೆಲಮಂಗಲ ತಾಲ್ಲೂಕಿನ ಕೆಲವು ಶಾಸನಗಳಲ್ಲಿ ರಾಜ್ಯದ ನಂತರ ನಾಡಿನ ಮೇಲಿನ ಸ್ತರದಲ್ಲಿ ಚಾವಡಿ ಪದ ಬಳಕೆಯಾಗಿದೆ. ಪಟ್ಟಡಿ ಎಂಬ ಆಡಳಿತ ವಿಭಾಗವು ಸಣ್ಣ ಪ್ರಾದೇಶಿಕ ವಿಭಾಗ, ಪಟ್ಟ ಎಂಬ ಪದವು ಪಟ್ಟವಾಡಿ, ಪಟ್ಟಡಿ ಆಗಿರಬೇಕೆಂದು. ಹೊಸಕೋಟೆ ಸೀಮೆಯ, ಹುಲ್ಲೂರು ಪಟ್ಟಡಿಯ ಮುಗುಬಾಳು ಎಂಬ ಗ್ರಾಮಕ್ಕೆ ಪ್ರತಿನಾಮವಾದ ವೀರಭದ್ರಪುರ ಗ್ರಾಮ[೯]. ಸೀಮೆ ಅಥವಾ ನಾಡುಗಳು ವೆಂಠೆಯದೊಳಗೆ ಅಂತರ್ಗತವಾಗಿರುತ್ತದೆ. ಕ್ರಿ.ಶ.೧೧೪೦ ರ ದೊಮ್ಮಲೂರಿನ ಶಾಸನದಲ್ಲಿ ಸೊಂಡೆಕೊಪ್ಪ ವೇಂಠೆಯ[೧೦] ಪ್ರಸ್ತಾಪವಿದೆ. ನಾಡು ಅಥವಾ ಸೀಮೆಯ ಕೆಳಸ್ತರದಲ್ಲಿ ಅಂದರೆ ಸ್ಥಳಕ್ಕೆ ಸಮಾನ ಸ್ತರದಲ್ಲಿ ಪ್ರಯೋಗವು ಕ್ರಿ.ಶ.೧೬೮೬ ನಂತರ ಅವಧಿಗೆ ಸೇರಿದವಾಗಿದೆ.

ಗಂಗ, ಚೋಳ, ಹೊಯ್ಸಳರ ಕಾಲದಿಂದಲೂ ಎಲಹಂಕನಾಡು, ಕಿಳಲೈನಾಡು, ಕುಕ್ಕಲನಾಡು, ಕೈವಾರನಾಡು, ಪುಲ್ಲಿಯೂರುನಾಡು, ತುರೈವಳನಾಡು, ವೆಪ್ಪೂರುನಾಡು, ಮೊರಸುನಾಡು, ಸೀಗಲನಾಡು, ಹೊಂಮ್ಮಳಗೆನಾಡು, ಸಣ್ಣೆನಾಡು, ಮಣ್ಣೆನಾಡು, ನಲ್ಲೂರುನಾಡು, ಹುಲುಕಡಿನಾಡು ಮುಂತಾದ ನಾಡುಗಳು ಪ್ರಚಲಿತದಲ್ಲಿದ್ದವು, ಸೀಮೆ ಎಂಬುದು ತೆಲುಗು ಪ್ರದೇಶಗಳಲ್ಲಿ ಹೆಚ್ಚು ಪ್ರಚಲಿತವಿದ್ದ ಪ್ರಾದೇಶಿಕ ವಿಭಾಗ ಸೀಮೆ ಎಂಬುದು ಸಂಸ್ಕೃತದ ಸೀಮಾ ಪದವೇ ನಾಡು ಅಥವಾ ಸೀಮೆಯಾರ್ಥದಲ್ಲಿ ಬಳಕೆಯಾಗಿರುವುದಕ್ಕೆ ೧೪೦೦ ರ ನಂತರ ಶಾಸನಗಳಲ್ಲಿ ವಿಜಯನಗರದ ಅಧೀಕಾರವಧಿಯಲ್ಲಿ ಹೊಸದಾಗಿ ರಚನೆಯಾದ ನಾಡುಗಳು ಹಾಗೂ ಕೆಲವೊಂದು ಹಳೇನಾಡುಗಳನ್ನು ಸೀಮೆಯಾಗಿ ಬದಲಾಯಿಸಿದ್ದರು. ಹೊಯ್ಸಳ ಕಾಲದ ಮಣ್ಣೆನಾಡು ವಿಜಯನಗರ ಕಾಲಕ್ಕೆ ಮಣ್ಣೆಸೀಮೆಯಾಗಿ ಮಾರ್ಪಟಾಯಿತ್ತು. ಇದರ ಜೊತೆಗೆ ಹಣಬೆಸೀಮೆ, ನೆಲಮಂಗಲಸೀಮೆ, ಹೆಜ್ಜಾಜಿಸೀಮೆ, ಹೊಸಕೋಟೆಸೀಮೆ, ತಿಪ್ಪೂರುಸೀಮೆ, ಗೂಳೂರುಸೀಮೆ, ನೆಲವಾಗಿಲುಸೀಮೆ ಮುಂತಾದ ಸೀಮೆಗಳು ಜಿಲ್ಲೆಯಲ್ಲಿ ಅಸ್ಥಿತ್ವದಲ್ಲಿದ್ದವು.

ಸೀಮೆ ಕೆಳಸ್ತರದಲ್ಲಿ ಸ್ಥಳ ಮತ್ತು ಗ್ರಾಮಗಳು ಬರುತ್ತದೆ. ಅನೇಕ ಗ್ರಾಮಗಳ ಸಮೂಹವೇ ಸ್ಥಳ ಅಥವಾ ಅಷ್ಟಗ್ರಾಮ ಸೀಮೆಯಾಗಿರುತ್ತದೆ. ಕಾಳೋಳುಸ್ಥಳ, ಕೂಡಲೂರುಸ್ಥಳ, ನಿಜಗಲ್ಲುಸ್ಥಳ,

[೮] ಎ.ಕ-೯, ನೆ.ತಾ.೪೨, ಕ್ರಿ.ಶ.೧೫೫೧, ಬೂದಿಹಾಳು.
[೯] ಎ.ಕ-೯, ಹೊ.ತಾ.೯೪, ಕ್ರಿ.ಶ.೧೫೬೪, ಮುಗಬಾಳ.
[೧೦] ಎ.ಕ-೯, ಬೆಂ.೮, ಕ್ರಿ.ಶ.೧೧೪೦, ಚೊಕ್ಕನಾಥ ದೇವಸ್ಥಾನದ ಮುಂದೆ, ದೊಮ್ಮಲೂರು.

ನಂಜಿಗುಳಸ್ಥಳ, ಬಾಣವಾಡಿಸ್ಥಳ, ಹಲಸೂರುಸ್ಥಳ ಇತ್ಯಾದಿ ಸ್ಥಳಗಳನ್ನು ಜಿಲ್ಲಾಂದ್ಯಾಂತ ಕಾಣಬಹುದು. ವಿಜಯನಗರ ಅರಸರ ಆಡಳಿತದ ಕೊನೆಯ ಅವಧಿಯಲ್ಲಿ ಸ್ಥಳೀಯ ಮುಖಂಡರು ತಲೆಯೆತ್ತಿ ಕೆರೆಕಟ್ಟೆಗಳ ರಚನೆ ಮುಂತಾದ ಕೃಷಿ–ವಾಣಿಜ್ಯಕ್ಕೆ ಪೂರಕವಾದ ಕಾರ್ಯಗಳಲ್ಲಿ ತೊಡಗಿಸಕೊಂಡ ವಿವರ ವ್ಯಕ್ತವಾಗಿದೆ.

ವಿಜಯನಗರ ಆಡಳಿತದ ವಿಭಾಗಗಳನ್ನು ಜಿಲೆಯ ಶಾಸನಗಳಲ್ಲಿನ ನೋಡುವುದಾದರೆ, ಕ್ರಿ.ಶ.೧೪೯೩ರಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಪಶ್ಚಿಮ ಮತ್ತು ನೈರುತ್ಯ ಭಾಗದಲ್ಲಿನ ಹೆಜ್ಜಾಜಿ, ವರದೋಹಳ್ಳಿ, ಬಯಿರಪುರ ಗ್ರಾಮಗಳು ತಿಪ್ಪೂರಸ್ಥಳದ ಹುಲುಕಡಿನಾಡುವಿನಲ್ಲಿ[೧೧], ಕ್ರಿ.ಶ.೧೪೯೫ರಲ್ಲಿ ನೆಲಮಂಗಲ ತಾಲ್ಲೂಕಿನ ದಕ್ಷಿಣ ಭಾಗದಲ್ಲಿನ ಕೆಂಪಬಸವಯ್ಯನಹಳ್ಳಿ, ಕಾಚುಹಳ್ಳಿ, ಹಾರೋಹಳ್ಳಿ, ಬಸಹಳ್ಳಿ, ಗಂಗಾಧರಪುರ, ಗೊಂಗಡಿಹಳ್ಳಿ, ತಿಂಮಣರಾಜಪುರ ಗ್ರಾಮಗಳು ಕಂನೆಲ್ಲಿಸ್ಥಳದ ಕುಕ್ಕಲನಾಡುವಿನಲ್ಲಿ[೧೨], ಕ್ರಿ.ಶ.೧೪೯೯ರಲ್ಲಿ ಎಳಸಿಗೆ, ಕೋಡಂಬಳ್ಳಿ ಗ್ರಾಮಗಳು ನಿಟ್ಟೂರು ಭಟ್ಟವೃತ್ತಿಯಸ್ಥಳದ, ಕೋಂಡಬಳ್ಳಿ ಸೀಮೆಯು, ಪೆನುಗೊಂಡೆಯ ಚನ್ನಪಟ್ಟಣ ರಾಜ್ಯದಲ್ಲಿ[೧೩], ಕ್ರಿ.ಶ.೧೫೦೬ರಲ್ಲಿ ಹೊಸಕೋಟೆ ತಾಲ್ಲೂಕಿನ ದಕ್ಷಿಣ ಭಾಗದಲ್ಲಿನ ಹನ್ನೆರಡುಹಳ್ಳಿ ವೊಳಗಾದ ಸಿದಮುಂದೂರಸ್ಥಳದ ಕೊಳಾಲು ಚಾವಡಿಯಲ್ಲಿ[೧೪], ಕ್ರಿ.ಶ.೧೫೩೫ರಲ್ಲಿ ನೆಲಮಂಗಲ ತಾಲ್ಲೂಕಿನ ಪೂರ್ವ ಭಾಗದಲ್ಲಿನ ಕಾಕೋಳು ಗ್ರಾಮವು ಕಾಕೋಳಸ್ಥಳದ, ಶಿವಸಮುದ್ರಸೀಮೆಯ, ಎಲಹಂಕನಾಡಿನ, ಬೇಲೂರು ಚಾವಡಿಯಲ್ಲಿ[೧೫], ಕ್ರಿ.ಶ.೧೫೩೩ರಲ್ಲಿ ನೆಲಮಂಗಲ ತಾಲ್ಲೂಕಿನ ದಕ್ಷಿಣ ಭಾಗದಲ್ಲಿನ ಹಾರೋಕೇತನಹಳ್ಳಿಯು ಸೊಂಡೆಕೊಪ್ಪಸ್ಥಳ, ಸೊಂಡೇಕೊಪ್ಪ ವೇಂಠೆಯಲ್ಲಿ[೧೬], ಕ್ರಿ.ಶ.೧೫೪೭ರಲ್ಲಿ ನೆಲಮಂಗಲ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿನ ರಾಮಾಪುರವು ಬಾಣವಾಡಿಸ್ಥಳದಲ್ಲಿ[೧೭], ಕ್ರಿ.ಶ.೧೫೪೯ರಲ್ಲಿ ಓಬಳಹಳ್ಳಿಗೆ ಪ್ರತಿನಾಮವಾದ ತಿಪ್ಪಸಮುದ್ರವು ನೆಲವಾಗಿಲ ಸೀಮೆಯ ಎರ್ಡನಾಡೋಳಗಣದಲ್ಲಿ ಬೇಲೂರು ಚಾವಡಿಗೆ[೧೮], ಕ್ರಿ.ಶ.೧೫೫೯ರಲ್ಲಿ ಹೊಸಕೋಟೆ ತಾಲ್ಲೂಕಿನ ಉತ್ತರ ಭಾಗದಲ್ಲಿನ ವಿಟ್ಟಸಂದ್ರ ಗ್ರಾಮವು ನಂಜಿಗುಳಯಸ್ಥಳದಲ್ಲಿ[೧೯], ಕ್ರಿ.ಶ.೧೬೨೦ರಲ್ಲಿ ಹೊಸಕೋಟೆ ತಾಲ್ಲೂಕಿನ ಉತ್ತರ ಭಾಗದಲ್ಲಿನ

---

[೧೧] ಎ.ಕ-೯, ದೊ.ತಾ ೪೨ & ೪೫, ಕ್ರಿ.ಶ.೧೪೯೩, ಪುಟ್ಟೈಯನ ಆಗ್ರಹಾರ.
[೧೨] ಎ.ಕ-೯, ಬೆಂ.೧೨೩, ಕ್ರಿ.ಶ.೧೪೯೫, ಗೊಂಗಡಿಪುರ.
[೧೩] ಎ.ಕ-೯, ಚ.ತಾ.೫೨, ಕ್ರಿ.ಶ.೧೪೯೯, ಕೊಡಂಬಳ್ಳಿ.
[೧೪] ಎ.ಕ-೯, ಹೊ.ತಾ.೧೨೧, ಕ್ರಿ.ಶ.೧೫೦೬, ಜ್ಯೋತಿಪುರ.
[೧೫] ಎ.ಕ-೯, ನೆ.ತಾ.೩೧, ಕ್ರಿ.ಶ.೧೫೩೫, ಹೆಸರುಘಟ್ಟ.
[೧೬] ಎ.ಕ-೯, ನೆ.ತಾ.೧೦, ಕ್ರಿ.ಶ.೧೫೩೩, ಹಾರೋಕ್ಯಾತನಹಳ್ಳಿ & ಬೆಂ.೮, ದೊಮ್ಮಲೂರು.
[೧೭] ಎ.ಕ-೯, ಮಾ.ತಾ.೭೪, ಕ್ರಿ.ಶ.೧೫೪೭, ಬಾಣವಾಡಿ.
[೧೮] ಎ.ಕ-೯, ಹೊ.ತಾ.೩೯, ಕ್ರಿ.ಶ.೧೫೪೯, ವೊಬಳಹಳ್ಳಿ.
[೧೯] ಎ.ಕ-೯, ಹೊ.ತಾ.೨, ಕ್ರಿ.ಶ.೧೫೫೯, ನಂದಗುಡಿ.

ಅನುಪುಹಳ್ಳಿಯು ನೆಲುವಾಗಿಲಸ್ಥಳ, ನೆಲುವಾಗಿಲಸೀಮೆಯಲ್ಲಿ[೨೦], ಕ್ರಿ.ಶ.೧೭೬೩ರಲ್ಲಿ ನೆಲಮಂಗಲ ತಾಲ್ಲೂಕಿನ ದಕ್ಷಿಣ ಭಾಗದಲ್ಲಿನ ಸೊಂಡೆಕೊಪ್ಪ, ದಾಬನಾಯಕನಹಳ್ಳಿ, ಮಟ್ಟನಕುರುಚಿ ಗ್ರಾಮಗಳು ನೆಲವಂಗಲಸ್ಥಳದ, ನೆಲವಂಗಲ ಸೀಮೆ[೨೧]ಯಲ್ಲಿಲೀನವಾಗಿತ್ತು. ವಿಜಯನಗರ ಕಾಲದಲ್ಲಿ ಸೊಂಡೆಕೊಪ್ಪವು ಸ್ಥಳ ಮತ್ತು ವೇಂಠೆಯಾಗಿದ್ದು, ಮೈಸೂರು ಒಡೆಯರ ಕಾಲದಲ್ಲಿ ಸಾಮನ್ಯ ಗ್ರಾಮವಾಗಿ ನೆಲವಂಗಲ ಸ್ಥಳ, ಸೀಮೆಯಲ್ಲಿ ವಿಲೀನವಾಗಿದೆ.

ಅರಸು ಮನೆತನದ ಹೆಸರಿನೊಂದಿಗೆ ಅವರ ರಾಜ್ಯವನ್ನು ಗುರುತಿಸುವ ಪದ್ಧತಿಯು ಪ್ರಾಚೀನ ಕಾಲದಲ್ಲಿ ಜಾರಿಯಲ್ಲಿರುವು ಜಿಲ್ಲಾ ವ್ಯಾಪ್ತಿಯಲ್ಲಿ ಕಾಣಬಹುದು. ಗಂಗವಾಡಿ-೧೦೦೦, ಗಂಗವಾಡಿ-೬೦೦೦, ಗಂಗವಾಡಿ-೯೬೦೦೦, ನೊಳಂಬವಾಡಿ-೩೨೦೦೦ ಈ ತೆರನಾದ ಅಂಕಿಗಳನ್ನು ಬಳಸುವುದು ಕನ್ನಡ ಅರಸು ಮನೆತನಗಳ ಒಂದು ಪ್ರಧಾನ ಅಂಶವಾಗಿದ್ದು, ಊರುಗಳ ಮುಂದೆ ಇರುವ ಸಂಖ್ಯೆಗಳು ಆ ಆಡಳಿತ ಪ್ರಾಂತ್ಯದ ವ್ಯಾಪ್ತಿಗೆ ಒಳಪಟ್ಟ ಗ್ರಾಮಗಳ ಸಂಖ್ಯೆಯಾಗಿದ್ದು, ಈ ಸಂಖ್ಯಾಗಳು ಸಾಮ್ರಜ್ಯದ ವಿಸ್ತಾರಣೆ ಹಾಗೂ ಆದಾಯಗಳನ್ನು ಗಣನೆಗೆ ತೆಗೆದುಕೊಳ್ಳಲು ನೆರವಾಗುತಿತ್ತು. ಹಾಗೇಯೆ ಪ್ರತಿಯೊಂದು ನಾಡುಗಳು ಹಲವಾರು ಉಪವಿಭಾಗಗಳನ್ನು ಹೊಂದಿದ್ಧು, ಒಂದೊಂದು ವಿಭಾಗದಲ್ಲಿ ನಿರ್ದಿಸ್ಟ ಪ್ರಮಾಣದ ಹಳ್ಳಿಗಳನ್ನು ಹೊಂದಿರುತಿತ್ತು.

**ಗಂಗ ಅರುಸಾಸಿರ (೬೦೦೦)**

ದೇವನಹಳ್ಳಿ ತಾಲ್ಲೂಕಿನ ಗಂಗವಾರ ಗ್ರಾಮವೇ ಗಂಗ-೬೦೦೦ ವಿಭಾಗದ ಮುಖ್ಯ ಪಟ್ಟಣವಾಗಿದ್ದು, ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯು ಆರಂಭದಲ್ಲಿ ನೊಳಂಬವಾಡಿಗೆ ಸೇರಿತ್ತು, ನಂತರ ಇದರ ಕೆಲವು ಭಾಗ, ರಾಜೇಂದ್ರಚೋಳವಳನಾಡಿನ ಭಾಗವೆಂದು ಬೆಂಗಳೂರು, ರಾಮನಗರ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ, ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪುಂಗನೂರು ಮತ್ತು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಅನೇಕ ಪ್ರಾಚೀನ ಶಾಸನಗಳಲ್ಲಿ ಗಂಗ ೬೦೦೦ ಪ್ರದೇಶದ ಉಲ್ಲೇಖವಿದೆ.

ಜಿಲ್ಲೆಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಗಂಗ ಆರು ಸಾಸಿರ ಒಂದು ದೊಡ್ಡ ಪ್ರಾದೇಶಿಕ ವಿಭಾಗವಾಗಿದ್ದು, ಕುಂದನಾಡು-ಎಪ್ಪತ್ತು, ಕುಣುಂಗಿ-೫೦೦, ಕುಣಿಗಲ್ಲುನಾಡು, (ಇಡಿಗೂರು ವಿಷಯ, ಏಳುನಾಡು, ದೇವಗುಂಡನಾಡು ಮಳೆಗಳನಾಡು) ಕೊಳಾಲನಾಡು-೩೦೦ (ಅವನಿನಾಡು-೩೦,

[೨೦] ಎ.ಕ-೯, ಹೊ.ತಾ ೭೩, ಕ್ರಿ.ಶ.೧೬೨೦, ಅನುಪುಹಳ್ಳಿ.
[೨೧] ಎ.ಕ-೯, ನೆ.ತಾ.೮, ಕ್ರಿ.ಶ.೧೭೬೩, ಸೊಂಡೆಕೊಪ್ಪ.

ಕೈವಾರನಾಡು, ಪುಲಿನಾಟ್ಟು-೬೦) ಕೆರೆಕುನ್ದ ಮುನೂರು, (ಎಲಹಂಕನಾಡು, ಕರಿಕನಾಡು, ನೆಕ್ಕುಂದಿನಾಡು, ಪುನ್ಮಣಿಗನಾಟ್ಟು, ಬೆಂಪೂರು-೧೨, ಮಾಶಂದಿನಾಡು, ಮೊರಸುನಾಡು) ಮಣ್ಣೆನಾಡು-೩೦೦(ಕುಕ್ಕಲನಾಡು) ಮತ್ತು ಸಳ್ಳೆ-ಮೂನೂರು ಸೇರಿ ಒಟ್ಟು ೧೭೦೦ ವಿಭಾಗಗಳ[೨೨] ಬಗ್ಗೆ ಶಾಸನಗಳಲ್ಲಿ ಕಾಣಬಹುದು.

ಈ ಪ್ರದೇಶವು ಸಾಮಾನ್ಯವಾಗಿ ನೊಳಂಬರ ಅಧೀನದಲ್ಲಿತ್ತು. ನೆಲ್ಲಿಗೆರೆಯ ತುರುಗೊಣ್ಡಲ್ಲಿ ತುರುವನ್ ಇಕ್ಕಿ ಪೊಸ ಮೆಂದಿಯು ಸ್ವರ್ಗಕ್ಕೆ ಹೋದ ವಿಷಯವನ್ನು ಹೇಳು ಶಾಸನದಲ್ಲಿ ನೊಳಂಬವಂಶದ ೧ನೇ ಮಹೇಂದ್ರನು ಕ್ರಿ.ಶ.೮೭೦ರಲ್ಲಿ ಗಂಗ ಆರು ಸಾಸಿರದಲ್ಲಿ ಆಳುತ್ತಿದ್ದು[೨೩], ಕ್ರಿ.ಶ.೮೭೮ರಲ್ಲಿ ಎಲೆಮಂಡಲ, ತಲಕಾಡು ಮೊದಲಾದ ಊರುಗಳನ್ನು ಕಲ್ನಾಡಾಗಿ ನೀಡಿದ ವಿವರನ್ನು ಚಿತ್ತೂರು ಜಿಲ್ಲೆ ಕಲಕತ್ತೂರು ಶಾಸನ ತಿಳಿಸಿದೆ.

### ಗಂಗವಾಡಿ ೯೬೦೦೦

ಶಾತವಾಹನರ ಅವನತಿಯ ನಂತರ ಕ್ರಿ.ಶ.೨ನೇ ಶತಮಾನದಲ್ಲಿ ಗಂಗವಾಡಿ ವಿಭಾಗ ಹುಟ್ಟಿಕೊಂಡಿರ ಬೇಕು. ಗಂಗ ಅರಸರ ಆಳ್ವಿಕೆಗೆ ಒಳಪಟ್ಟ ಪ್ರದೇಶವನ್ನು (ಗಂಗ ರಾಜ್ಯ) ಗಂಗಪಾಡಿ, ಗಂಗವಾಡಿ, ಗಂಗಮಹಿ, ಗಾಂಗೇಯ ರಾಜ್ಯೇ, ಗಂಗವಾಡಿ ತೊಂಭತ್ತಾರು ಸಾಸಿರ, ಷಣ್ಣವತಿ(ಷಣ್+ನವತಿ) ಸಹಸ್ರ ವಿಷಯ (ಶ್ರೀಪುರುಷನ ಕಾಲದ ತಾಮ್ರ ಶಾಸನದಲ್ಲಿ ಪ್ರಸ್ತಾಪ) ಎಂದು ಕರೆಯುತ್ತಿದ್ದು, ಗಂಗವಾಡಿ ೯೬೦೦೦ ದ ಉತ್ತರಕ್ಕೆ ಮರುಂದಲೆ, ಪೂರ್ವಕ್ಕೆ ತೊಂಡೂರು, ಪಶ್ಚಿಮಕ್ಕೆ ಚೇರನಾಡು ಮತ್ತು ದಕ್ಷಿಣಕ್ಕೆ ಕೊಂಗುದೇಶವಿತ್ತು.

ಬೆಳ್ವೊಲ-೩೦೦, ಬನವಸೆ-೧೨೦೦೦, ಪುಲಿಗೆರೆ-೨೦೦, ಬಾಗೆನಾಡೆಳ್ಪತ್ತು, ಕೊಂಗುನಾಡು-೮೦೦೦, ಮಲೆಸಾಸಿರ, ಮಂಡಲಿಸಾಸಿರ, ಕೋಲಾರ ಸಾಸಿರ, ಎಡೆನಾಡೆಳ್ಪತ್ತು, ಪುನಾಡು-೬೦೦೦, ಅರಿದಾಳೆ ಎಳ್ಪತ್ತು, ಬೆದ್ದೊರೆಗೆರೆ ಎಳ್ಪತ್ತು, ನೀರ್ಗುಂದ ಮೂನೂರು, ಮಗರ ಮೂನೂರು, ಬಯಲ್ನಾಡು, ಎಡತೊರೆನಾಡು, ಕಾರೆಗಾಡು, ಕೊಂಗಲ್ನಾಡು, ಕಿಳಲೆ, ಕೆಳ್ಗಲನಾಡು, ಕುಕ್ಕಲನಾಡು, ಹೊಮ್ಮಿಳಗೆನಾಡು ಮೊದಲಾದ ನಾಡುಗಳು ಗಂಗವಾಡಿಯಲ್ಲಿ ಸಮಾವೇಶಗೊಂಡಿದ್ದವು[೨೪].

[೨೨] ಡಾ.ಚನ್ನಬಸವಯ್ಯ ಹಿರೇಮಠ :- ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪು.ಸಂ-೨೬೩.
[೨೩] ಎ.ಕ-೯, ಹೊ.ತಾ.೯, ಕ್ರಿ.ಶ.೮೭೦, ಚೋಡಿ ದಳಸಿಗೆರೆ.
[೨೪] ತಮಿಳ್‌ಸೆಲ್ವಿ :- ಗಂಗರ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೨, ೨೪.

ಸಾವಿರಹಳ್ಳಿಗಳಿಂದ ಪ್ರಾರಂಭದ ಆಡಳಿತ ಪ್ರಾಂತ್ಯವು ಮುಂದೆ ೬೦೦೦ ಹಳ್ಳಿಗಳಿಗೆ ವಿಸ್ತಾರವಾಯಿತು. ನಂತರ ಗಂಗರ ಆಳ್ವಿಕೆ ವಿಸ್ತರಿಸಿದಂತೆ ಅವರ ಆಡಳಿತ ಪ್ರದೇಶವು ೯೬೦೦೦ ಹಳ್ಳಿಗಳಿಗೆ ಮುಟ್ಟಿತು. ಗಂಗವಾಡಿ ತೊಂಭತ್ತಾರು ಸಾವಿರದ ವ್ಯಾಪ್ತಿಗೆ ಬೆಂಗಳೂರು, ಕೋಲಾರ, ಮೈಸೂರು, ತುಮಕೂರು, ಮುಂತಾದ ಜಿಲ್ಲೆಗಳ ಒಳಪಟ್ಟಿದಕ್ಕೆ ಶಾಸನಗಳಲ್ಲಿ ಉಲ್ಲೇಖವಾಗಿದೆ.

ಪುನ್ನಾಟರು ಇವರೊಂದಿಗೆ ಮೈತ್ರಿಯಿಂದ ಇದ್ದು ದುರ್ವಿನೀತನ ಕಾಲದಲ್ಲಿ ತಮಿಳುನಾಡಿನವರೆಗೆ ರಾಜ್ಯ ವಿಸ್ತರಿಸಿತ್ತು. ಸೇಲಂ, ಉತ್ತರ ಅರ್ಕಾಟಿನ ಪಶ್ಚಿಮ ಭಾಗ, ಚಿತ್ತೂರು ಜಿಲ್ಲೆ, ಕರೂರು ಹೊರತು ಪಡಿಸಿ ತಿರುಚಿನಾಡಹಳ್ಳಿ ಜಿಲ್ಲೆ, ತಂಜಾವುರ ಪಾಪನಾಶ – ಮುನ್ನೂರ ಗುಡಿ, ಪುದುರಾಜ್ಯದ ಪೂರ್ವ ಭಾಗ ಇತ್ಯಾದಿ ಭಾಗಗಳು ಗಂಗವಾಡಿಗೆ ಸೇರಿಕೊಂಡವು. ತಲಕಾಡು ಪಟ್ಟಣವು ೯೬೦೦೦ ಹಳ್ಳಿಗಳ ರಾಜಧಾನಿ, ಇಂದಿನ ಬೆಂಗಳೂರು, ಮೈಸೂರು ಮಹಾನಗರಗಳಂತೆ ದೊಡ್ಡ ಪಟ್ಟಣವಾಗಿರಬೇಕು. ಸಮಗ್ರವಾದ ೯೬೦೦೦ ಹಳ್ಳಿಗಳ ಆಡಳಿತ ಮತ್ತು ತಲಕಾಡು ಪಟ್ಟಣಕ್ಕೆ ಸೀಮಿತವಾದ ಆಡಳಿತವೆಂದು ವಿಭಾಗವಾಗಿರಬೇಕು. ಏಕೆಂದರೆ ಕ್ರಿ.ಶ.೯೩೫ ರ ಶಾಸನದಲ್ಲಿ ಗಂಗ ನೀತಿಮಾರ್ಗನು (೩ನೇಯ ರಾಚಮಲ್ಲ) ತಲಕಾಡು ಮಹಾನಗರಮುಂ ಪಟ್ಟಣದಲ್ಲಿ ಆಳುತ್ತಿರಲು[೨೫] ಎಂದು ಉಕ್ತವಾಗಿದೆ. ಕ್ರಿ.ಶ.೮೯೦ ರ ಬೇಗೂರು ವೀರಗಲ್ಲು ಶಾಸನದಲ್ಲಿ ಎರೆಯಪ್ಪ ಅರಸರು ಗಂಗವಾಡಿ ತೊಂಭತ್ತಾರು ಸಾವಿರವನ್ನು ಏಕಛತ್ರಾಧಿಪತಿಯಾಗಿ ಆಳುತ್ತಿರಲು[೨೬], ಬೆಂಗಳೂರು ಮ್ಯೂಸಿಯಂನಲ್ಲಿರುವ ಕ್ರಿ.ಶ.೧೧೦೫ ರ ಚಾಲುಕ್ಯಾರಸರ ತಾಮ್ರ ಶಾಸನದಲ್ಲಿ ಗಂಗವಾಡಿ ತ್ತೊಂಭತ್ತಾರು ಸಾವಿರ ಪ್ರಾಂತ್ಯವು ಕಲ್ಯಾಣಪುರದಲ್ಲಿ ಆಳುತ್ತಿರುವ ನೊಳಂಬ ಚಕ್ರವರ್ತಿಯ[೨೭] ಅಧಿನದಲ್ಲಿತ್ತು ಎಂಬುದನ್ನ ತಿಳಿಸುತ್ತದೆ.

ತಿ.ನರಸೀಪುರ ತಾಲ್ಲೂಕಿನ ಕಲಿಯೂರು ಗ್ರಾಮದ ಚೋಳ ೧ನೇಯ ರಾಜರಾಜನ ಸಾಮಂತ & ಸೇನಾನಿಯಾಗಿದ್ದ ಅಪ್ರಮೇಯನ ಸಾಹಸ ಜಯಸ್ತಂಬ ಗಂಗವಾಡಿಯನ್ನು ಚೋಳರು ಆಕ್ರಮಿಸಿದಾಗ ಹೊಯ್ಸಳರು, ನೊಳಂಬ, ಶಬರ, ಶಾಂತರ, ಸೇನಾವಾರ ಮೊದಲಾದವರು ಒಟ್ಟುಗೂಡಿ ಕಲಿಮಾರ ಸ್ಥಳದಲ್ಲಿ ಕ್ರಿ.ಶ.೧೦೦೬ ರಲ್ಲಿ ದಾಳಿ ಮಾಡಿದಾಗ, ಇವರೆಲ್ಲರನ್ನು ಧೈರ್ಯದಿಂದ ಹಿಮ್ಮೆಟ್ಟಿಸಿದ ವಿವರವನ್ನು ತಡಿಮಾಲಿಂಗಿ ಗ್ರಾಮದ ಶಾಸನದಲ್ಲಿ ಕಾಣಬಹುದು. ಆ ಊರು ಗಂಗಪಾಡಿಯ ದಕ್ಷಿಣಕ್ಕಿರುವ ಗಂಗೈಕೊಂಡ ಚೋಳವಳನಾಡೊಳಗಣ ಇಡ್ಯೆನಾಡಿನಲ್ಲಿದೆ. ಗಂಗೈಕೊಂಡಚೋಳ ಎಂಬುದು ಒಂದನೇ ರಾಜೇಂದ್ರನ ಬಿರಿದ್ದಾಗಿದ್ದು, ಅವನ ಹೆಸರಿನಿಂದಲೇ ಈ ಪ್ರದೇಶವನ್ನು ಕರೆಯಲಾಗಿದೆ. ಈ ಪ್ರದೇಶವನ್ನು

---

[೨೫] ಡಾ.ಚನ್ನಬಸವಯ್ಯ ಹಿರೇಮಠ :- ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪು.ಸಂ-೨೨೧.

[೨೬] ಎ.ಕ-೯, ಬೆಂ.೮೩, ಕ್ರಿ.ಶ.೮೯೦, ಬೇಗೂರು.

[೨೭] ಎ.ಕ-೯, ಬೆಂ.೧೪೨, ಕ್ರಿ.ಶ.೧೧೦೫, ವರ್ತೂರು.

ಗೆದ್ದುಕೊಂಡ ಮೇಲೆ ಮುದಿಗೊಂಡ ಚೋಳಮಂಡಲ ವಿಭಾಗಕ್ಕೆ ಸೇರಿಸಲಾಯಿತು. ಮುದಿಗೊಂಡ ಚೋಳಮಂಡಲವು ತಮಿಳುನಾಡು, ಕರ್ನಾಟಕದ ಮೈಸೂರು, ಮಂಡ್ಯ ಜಿಲ್ಲೆಗಳನ್ನೊಳಗೊಂಡ ದೊಡ್ಡ ವಿಭಾಗವಾಗಿದೆ. ಅದರಲ್ಲಿ ಮತ್ತೆ ಗಂಗೈಕೊಂಡ ಚೋಳವಳವೆಂಬ ಉಪವಿಭಾಗವಿದ್ದು ಅದರಲ್ಲಿ ಇಡೈನಾಡು (ಎಡೆದೊರೆ ನಾಡು–೧೦೦೦) ಸೇರಿತ್ತು.

ಹೊಯ್ಸಳರ ಆಳ್ವಿಕೆಗೆ ಹೊಯ್ಸಳ ದೇಶ, ಹೊಯ್ಸಳನಾಡು ಹೆಚ್ಚು ಪ್ರಸಿದ್ಧಿಯಾಗಿದ್ದು, ಚೋಳರ ನಂತರ ಈ ಪ್ರದೇಶವು ಹೊಯ್ಸಳರ ಆಳ್ವಿಕೆಗೆ ಒಳಪಟ್ಟ ನಂತರ ಹೊಯ್ಸಳರ ಶಾಸನಗಳಲ್ಲಿ ಹೊಯ್ಸಳ ದೇವರು ಗಂಗವಾಡಿ ೯೬೦೦೦ ಸಾಯಿರಮನೇಕಚ್ಚತ್ರದಿಂ ರಾಜ್ಯಂಗೆಯುತ್ತಮಿರೆ ಎಂದು ಉಲ್ಲೇಖವಾಗಿದೆ. ವಿಷ್ಣುವರ್ಧನನು ಗಂಗವಾಡಿ ೯೬೦೦೦ವನ್ನು ಏಕಛತ್ರಾದಿಂದ ಆಳುತ್ತಿದ್ದಾಗ ತಳವಳಪುರ, ಕೊಂಗವಿಷಯ, ನೊಳಂಬವಾಡಿ, ಕೋಳಾಲಪುರ, ಕೂವತ್ತೂರು, ವಲ್ಲೂರ, ನಂಗಲಿ, ಗಂಗರಾಜ್ಯ ಮತ್ತು ತಲಕಾಡು ಹೊಯ್ಸಳರ ಅಧೀನದಲ್ಲಿತ್ತು[೨೮].

## ನೊಳಂಬವಾಡಿ–೩೨೦೦೦

ಶಾಸನಗಳಲ್ಲಿ ನೊಣಂಬವಾಡಿ, ನೊಳಂಬವಾಡಿ ಎಂದು ತಮಿಳನಲ್ಲಿ ನೊಳಂಬವಾಡಿ ಪದಕ್ಕೆ ದೊಡ್ಡಭಾಗ ಎಂಬ ಅರ್ಥವಿದೆ. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಸಾವಿರ ಹಳ್ಳಿಗಳ ಆಡಳಿತ ವಿಭಾಗವಾಗಿತ್ತು ಎಂಬುದನ್ನು ಚಿಕ್ಕ ಮಧುರೈ ಶಾಸನ "ನೊಳಂಬಳ್ಗೆ ಸಾಸಿರಮಂ" ಎಂದು[೨೯] ನಂತರ ಕಲ್ಯಾಣಿ ಚಾಲುಕ್ಯರ ಆಳ್ವಿಕೆಯ ವೇಳೆಗೆ ಮೂವತ್ತೆರಡು ಸಾವಿರ ಹಳ್ಳಿಗಳವರೆಗೆ ಬೆಳೆಯಿತು. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರ ತಾಲ್ಲೂಕಿನ ಹೇಮಾವತಿಯ ಪ್ರಾಚೀನ ಹೆಸರು ಹೆಂಜೇರು (ಪೆಂಜೆರು) ನೊಳಂಬವಾಡಿಯ ರಾಜಧಾನಿಯಾಗಿತ್ತು. ಉತ್ತರದಲ್ಲಿ ತುಂಗಭದ್ರ ನದಿಯಿಂದ ದಕ್ಷಿಣದಲ್ಲಿ ಪಾಪಾಗ್ನಿ, ವೇದಾವತಿ, ನದಿಯವರೆಗಿನ ಭೂ ಪ್ರದೇಶವನ್ನು ಒಳಗೊಂಡಿತ್ತು. ಆಂಧ್ರಪ್ರದೇಶದ ಕರ್ನೂಲು, ಅನಂತಪುರ, ಕಡಪ ಜಿಲ್ಲೆಗಳ ತುಮಕೂರು ಜಿಲ್ಲೆಯ ಪಾವಗಡ, ಮಧುಗಿರಿ, ಸಿರಾ ತಾಲ್ಲೂಕು, ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ಗ್ರಾಮಾಂತರ ಜಿಲ್ಲೆಗಳ ವ್ಯಾಪ್ತಿಯನ್ನು ಹೊಂದಿತ್ತು.

[೨೮] ಡಾ.ಚನ್ನಬಸವಯ್ಯ ಹಿರೇಮಠ :- ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪು.ಸಂ-೨೨೪, ೨೨೨, ೨೨೩.
[೨೯] ಡಾ.ಚನ್ನಬಸವಯ್ಯ ಹಿರೇಮಠ :- ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪು.ಸಂ-೨೫೩, ೧೩೮.

## ಮಣ್ಣೆನಾಡು

ಜಿಲ್ಲೆಯ ತಾಲ್ಲೂಕಿನಲ್ಲಿ ಒಂದಾದ ನೆಲಮಂಗಲ ತಾಲ್ಲೂಕಿನಿಂದ ಸುಮಾರು ೨೧ ಕಿ.ಮೀ.ದೂರದಲ್ಲಿರುವ ತ್ಯಾಮಗೊಂಡ್ಲು ಹೋಬಳಿಯಿಂದ ೫.೨ ಕಿ.ಮೀ. ದೂರದಲ್ಲಿರುವ ಗಂಗರ ರಾಜಧಾನಿಗಳೊಂದಾದ ಮಣ್ಣೆ ಗ್ರಾಮವಿದೆ. ಆದರೆ ಶ್ರೀಪುರುಷನ ಕಾಲದಿಂದ ಒಂದನೇ ರಾಚಮಲ್ಲನ ಕಾಲದವರೆಗೆ ಗಂಗರ ಯಾವುದೇ ಶಾಸನಗಳಲ್ಲಿ ಮಣ್ಣೆಯನ್ನು ಗಂಗರ ರಾಜದಾನಿ ಎಂದು ಕರೆದಿಲ್ಲ. ರಾಷ್ಟ್ರಕೂಟರೊಡನೆ ಯುದ್ಧ ಸಾರಿದಾಗ ಮಣ್ಣೆಯನ್ನು ತಾತ್ಕಾಲಿಕ ಯುದ್ಧ ನೆಲೆವೀಡನ್ನಾಗಿ ಮಾಡಿಕೊಂಡಿರಬೇಕು[೩೦]. ಗಂಗರ ಹಲವಾರು ಶಾಸನಗಳಲ್ಲಿ ಮಣ್ಣೇಗ್ರಾಮಾಧಿವಸತಿ ವಿಜಯಿಸ್ಕಂಧಾವಾರೇ, ಮಾನ್ಯಪುರಮಾಧಿವಸತಿ ವಿಜಯಿಸ್ಕಂಧಾವಾರೇ[೩೧] ಎಂದು ಅಧಿವಸತಿ ಎಂದು ಉಪರಾಜಧಾನಿಗೆ ಬಳಸಿರುವುದು ಕಾಣಬಹುದು. ಗಂಗರ, ರಾಷ್ಟ್ರಕೂಟರ ಅಧಿನದಲ್ಲಿದ್ದ ಮಣ್ಣೆಯು ೧೧ನೇ ಶತಮಾನದಲ್ಲಿ ಚೋಳರ ಅಕ್ರಮಣದಿಂದ ನಾಶ ಹೊಂದಿತ್ತು[೩೨]. ನಂತರ ಹೊಯ್ಸಳರ[೩೩] ವ್ಯಾಪ್ತಿಗೆ ಒಳಪಟ್ಟಿತ್ತು. ಮಣ್ಣೆಯನ್ನು ಗಂಗರ[೩೪], ರಾಷ್ಟ್ರಕೂಟರ ಪ್ರಭೂತವರ್ಷನ[೩೫] ಶಾಸನಗಳಲ್ಲಿ ಮಾನ್ಯಪುರವೆಂದು, ರಾಷ್ಟ್ರಕೂಟರ ಕನ್ನರದೇವನ ಕ್ರಿ.ಶ.೯೬೬ ರ ಕಾಲದಲ್ಲಿ ಮಣ್ಣೆನಾಡು ಮುನ್ನೂರು[೩೬] ಎಂದು, ಚೋಳರ ಕಾಲಕ್ಕೆ ಮಣ್ಣೈ ಕಡಕ್ಕಮ್[೩೭] ಎಂದು, ಹೊಯ್ಸಳರ ಕಾಲದಲ್ಲಿ ಮಣ್ಣೆನಾಟ್(ಮಣ್ಣೆನಾಡು)[೩೮] ಆಗಿದ್ದು, ವಿಜಯನಗರ ಕಾಲಕ್ಕೆ ಮಣ್ಣೆ ಸೀಮೆ[೩೯] ಎಂದು ಕರೆಯಲಾಗಿದೆ. ಹಾಗೇಯೇ ಮಣ್ಣೆಯು ಯುದ್ಧಭೂಮಿ ಜೊತೆಗೆ ಶಾಸನೊಕ್ತ ವ್ಯಾಪಾರ ಕೇಂದ್ರವಾಗಿತ್ತು[೪೦]. ಮಣ್ಣೆ ಗ್ರಾಮವೇ ಮಣ್ಣೆನಾಡಿನ ಕೇಂದ್ರವಾಗಿದ್ದು, ಮಾಗಡಿ, ನೆಲಮಂಗಲ, ದೊಡ್ಡಬಳ್ಳಾಪುರ ತಾಲ್ಲೂಕುಗಳು, ಹೆಸರುಘಟ್ಟ, ದಾಸನಪುರ ಹೋಬಳಿಗಳು ಮಣ್ಣೆನಾಡಿನ ವ್ಯಾಪ್ತಿಗೆ ಒಳಪಟ್ಟಿತ್ತು.

ಮಣ್ಣೆಯಲ್ಲಿ ಅಲ್ಲಲ್ಲಿ ಕೆಲವು ಕಡೆ ಬೂದಿ ಕೊಂಡಗಳಿದ್ದು ಅಕ್ಕ-ಪಕ್ಕದಲ್ಲಿನ ಗ್ರಾಮದ ಜನರು ಈ ಬೂದಿ ಕೊಂಡದ ಮೇಲ್ಬಾಗದ ಮಣ್ಣನ್ನು ಹಣ ಕೊಟ್ಟು ಖರೀದಿ ಮಾಡಿ ತಮ್ಮ ಹೊಲಗಳಿಗೆ ಗೊಬ್ಬರದ ಹಾಗೇ ಚೆಲ್ಲುತ್ತಾರೆ.

---

[೩೦] ಡಾ. ದೇವರ ಕೊಂಡಾ ರೆಡ್ಡಿ :- ತಲಕಾಡಿನ ಗಂಗರ ದೇವಾಲಯಗಳು- ಒಂದು ಅಧ್ಯಯನ, ಪು.ಸಂ-೧೭೯.

[೩೧] ತಮಿಳ್‌ಸೆಲ್ವಿ :- ಗಂಗರ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೨.

[೩೨] ಸೂರ್ಯನಾಥ್ ಯು ಕಾಮತ್ ರವರ ಕರ್ನಾಟಕ ರಾಜ್ಯ ಗೆಜಿಟಿಯರ್, ಪು.ಸಂ-೮೪೫.

[೩೩] ಎ.ಕ-೯, ನೆಲಮಂಗಲ ೫೭, ಕ್ರಿ.ಶ.೧೩೯೯ರ ಬಲ್ಲಾಳರಾಯನ ತಾಮ್ರಶಾಸನ. ಹೆಚ್.ಎಸ್. ಗೋಪಾಲರಾವ್-ಇ.ದ.ಸಂ.೧೮, ಪು.ಸಂ-೬೭.

[೩೪] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಗಂಗರ ಮಾರಸಿಂಹನ ಶಾಸನ, ಮಣ್ಣೆ.

[೩೫] ಎ.ಕ-೯, ನೆ.ತಾ.೬೧, ಕ್ರಿ.ಶ.೮೦೨, ರಾಷ್ಟ್ರಕೂಟರ ಪ್ರಭುತವರ್ಷನ ತಾಮ್ರಶಾಸನ, ಮಣ್ಣೆ.

[೩೬] ಎ.ಕ-೯, ಮಾ.ತಾ.೭೫, ಕ್ರಿ.ಶ.೯೬೬, ಮುಜರೆ ಮೂಡ್ಲುಪಾಳ್ಯ.

[೩೭] ಸೂರ್ಯನಾಥ್ ಯು ಕಾಮತ್ ರವರ ಕರ್ನಾಟಕ ರಾಜ್ಯ ಗೆಜಿಟಿಯರ್, ಪು.ಸಂ-೮೪೨.

[೩೮] ಎ.ಕ-೯, ನೆ.ತಾ.೬೭, ಕ್ರಿ.ಶ.೧೧೧೫, ತಮಿಳು, ನಿಜಗಲ್ಲು.

[೩೯] ಎ.ಕ-೯, ನೆ.ತಾ.೫೮, ಕ್ರಿ.ಶ.೧೫೨೭, ಮಣ್ಣೆ.

[೪೦] ಹೆಚ್.ಎಸ್. ಗೋಪಾಲರಾವ್ :- ಇ.ದ.ಸಂ.೧೯, ಪು.ಸಂ-೩೯,೪೧.

ಗಂಗ ಗಚ್ಚಿಯ ಹಿರಿಯ ಮಗನಾದ ದಡಿಗನು ಕ್ರಿ.ಶ.೯೬೬ ರಲ್ಲಿ ಮಣ್ಣೆನಾಡು-೩೦೦ ಮತ್ತು ಮಣ್ಣೆ ಸೀಮೆಯ ಮುಡ್ಲುಪಾಳ್ಯದಲ್ಲಿ ದಡಿಗೇಶ್ವರ ದೇಗುಲ ನಿರ್ಮಾಣ ಮಾಡಿ[೪೧], ರಾಜೇಂದ್ರ ಚೋಳನ ಆಳ್ವಿಕೆಯ ಕ್ರಿ.ಶ.೧೦೨೯ರಲ್ಲಿ ದಾನ ನೀಡುವಾಗ ಮಣ್ಣೆನಾಡ ಬಾಳೆವಾಡಿಯ ಸಾಕ್ಷಿಯನ್ನು[೪೨] ಪಡೆಯುವಷ್ಟು ಮಣ್ಣೆನಾಡು ಪ್ರಮುಖ್ಯತೆಯನ್ನು ಪಡೆದಿರಬೇಕು. ಕ್ರಿ.ಶ.೧೦೫೦ರಲ್ಲಿ ವಿಕ್ಕಿರಮ ಚೋಳ ಮಂಡಲದ ಮಣ್ಣೆನಾಡುವಿನಲ್ಲಿ[೪೩] ದಾನ ನೀಡಿರುವ ಮಾಹಿತಿಯನ್ನು ಮಂಡಿಗೆರೆಯ ಶಾಸನದಲ್ಲಿ ಕಾಣಬಹುದು.

ಹೊಯ್ಸಳರ ವಿಕ್ಕಿರಮಚೋಳಮಂಡಲದ ಮಣ್ಣೆನಾಡನ್ನು ಕ್ರಿ.ಶ.೧೧೧೫ರಲ್ಲಿ ಗಾಮುಂಡನಾದ ವಿರುಂತರಾಯ ಭಯಂಕರನು[೪೪]ಆಳುತಿದ್ದು, ಅದೇ ವರ್ಷದಲ್ಲಿ ವಿಕ್ಕಿರಮಚೋಳಮಂಡಲದ ಮಣ್ಣೆನಾಡನ್ನು ನಿಗರಿಲಿ ಚೋಳಮಂಡಲ ವ್ಯಾಪ್ತಿಗೆ ವರ್ಗಾಯಿಸಿ ಸಾಮಗಾವುಂಡನಿಗೆ[೪೫] ಮಣ್ಣೆನಾಡಿನ ಆಡಳತವನ್ನು ನೀಡಲಾಗಿದೆ, ವಿಜಯನಗರ ಕಾಲದ ಕ್ರಿ.ಶ.೧೫೨೭ರಲ್ಲಿ ಅಂಬಲಗೆರೆಯ ತಿರುವೆಂಗಳನಾಥ ದೇವರ ಕಾರ್ಯಗಳಗಾಗಿ ಶಿವಗಂಗೆಯ ಗುಳೂರು ಮಣ್ಣೆ ಸೀಮೆಯಲ್ಲಿ[೪೬], ಕ್ರಿ.ಶ.೧೫೪೫ರಲ್ಲಿ ಸದಾಶಿವದೇವರು ಮಲೆನಾಡ ಗೂಳೂರು ಮಣ್ಣೆ ಸೀಮೆಯ ಅಧಿಕಾರವನ್ನ ಭಂಡಿಯ ಬಸವಣ್ಣನಾಯ್ಕರಿಗೆ ಪಾಲಿಸಿದರು[೪೭]. ಕ್ರಿ.ಶ.೧೫೫೧ರಲ್ಲಿ ಗೂಳೂರು ಮಣ್ಣೆಸ್ಥಳದ ಬಿಲನಕೋಟೆ ಗ್ರಾಮವನ್ನು ಸರ್ವಮಾನ್ಯವಾಗಿ ದಾನ ನೀಡಿದ್ದರು[೪೮]. ಗಂಗ, ಚೋಳ, ಹೊಯ್ಸಳರ ಕಾಲಗಳಲ್ಲಿ ನಾಡಾಗಿದ್ದಂತಹ ಮಣ್ಣೆಯು ವಿಜಯನಗರ ಕಾಲಕ್ಕೆ ಸೀಮೆ, ಸ್ಥಳಗಳಗೆ ಸೀಮಿತವಾಯಿತ್ತು. ೧೪-೧೫ನೇ ಶತಮಾನಕ್ಕಾಗಲೇ ಯಲಹಂಕ ನಾಡಪ್ರಭುಗಳ ಪ್ರಬಲ್ಯದಿಂದಾಗಿ ಯಲಹಂಕನಾಡು ಹೆಚ್ಚು ಸ್ಥಿರತೆಯನ್ನು ಕಾಣುತ್ತಾ ಸುತ್ತ ಮುತ್ತಲಿನ ಪ್ರದೇಶಗಳು ಅಭಿವೃದ್ಧಿಯಾಗುತ್ತಾ ಕುಕ್ಕಲನಾಡು ತನ್ನ ಅಸ್ತಿತ್ವವನ್ನು ಕಳೆದು ಕೊಂಡಿದ್ದರಿಂದಾಗಿ ಕ್ರಿ.ಶ.೯೬೬ ರಲ್ಲಿ ೩೦೦ ಹಳ್ಳಿಗಳ ಕೇಂದ್ರವಾಗಿದ್ದ ಮಣ್ಣೆಯು ಸಹ ನಾಡಿನ ಸ್ಥಾನದಿಂದ ಸೀಮೆಗೆ ಕೆಲವು ವರ್ಷಗಳ ನಂತರ ಸ್ಥಳಕ್ಕೆ ಇಳಿಕೆಯಾಗುತ್ತಾ ಕೊನೆಗೆ ಮಣ್ಣೆಯು ಗ್ರಾಮಕ್ಕೆ ಬಂದು ನಿಂತ್ತಿದೆ.

**ಆವತಿನಾಡು**

---

[೪೧] ಎ.ಕ-೯, ಮಾ.ತಾ.೭೫, ಕ್ರಿ.ಶ.೯೬೬, ಮುಜರೆ ಮೂಡ್ಲುಪಾಳ್ಯ.
[೪೨] ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಸೋಲದೇವನಹಳ್ಳಿ.
[೪೩] ಎ.ಕ-೯, ನೆ.ತಾ.೨೫, ಕ್ರಿ.ಶ.೧೦೫೦, ತಮಿಳು, ಮಂಡಿಕೆರೆ.
[೪೪] ಎ.ಕ-೯, ದೊ.ತಾ.೧೧, ಕ್ರಿ.ಶ೧೧೧೫, ಹುಲುಕಡಿ.
[೪೫] ಎ.ಕ-೯, ನೆ.ತಾ.೬೭, ಕ್ರಿ.ಶ.೧೧೧೫, ತಮಿಳು, ನಿಜಗಲ್ಲು.
[೪೬] ಎ.ಕ-೯, ನೆ.ತಾ.೫೮, ಕ್ರಿ.ಶ.೧೫೨೭, ಮಣ್ಣೆ.
[೪೭] ಎ.ಕ-೯, ನೆ.ತಾ.೮೧, ಕ್ರಿ.ಶ.೧೫೪೫, ಶಿವಗಂಗೆ.
[೪೮] ಎ.ಕ-೯, ನೆ.ತಾ.೭೨, ಕ್ರಿ.ಶ.೧೫೫೧, ಬಿಲ್ಲನಕೋಟೆ.

ದೇವನಹಳ್ಳಿಯಿಂದ ಎಸ್.ಹೆಚ್. ೪೪ ರಲ್ಲಿ ೬.೭ ಕಿ.ಮೀ. ಉತ್ತರಕ್ಕಿರುವ ಆವತಿಗ್ರಾಮವೇ ಆವತಿನಾಡಿನ ಕೇಂದ್ರ ಸ್ಥಳವಾಗಿ, ದೇವನಹಳ್ಳಿ ತಾಲ್ಲೂಕಿನ ಉತ್ತರಭಾಗ, ದೊಡ್ಡಬಳ್ಳಾಪುರ ತಾಲ್ಲೂಕಿನ ಉತ್ತರಭಾಗ, ಶಿಡ್ಲಘಟ್ಟ ತಾಲ್ಲೂಕು, ಚಿಂತಾಮಣಿ ತಾಲ್ಲೂಕು, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ತಾಲ್ಲೂಕು, ಭಾಗೇಪಲ್ಲಿ ತಾಲ್ಲೂಕುಗಳ ಬಹುಭಾಗಗಳ ವರೆಗೆ ಆವತಿನಾಡ ವ್ಯಾಪ್ತಿಯು ಹಬ್ಬಿತ್ತು.

ಆವತಿನಾಡಿನಲ್ಲಿ ಶಿವನಸಮುದ್ರ ಸೀಮೆ, ಹಣಬೆತಿಪ್ಪೂರು ಸೀಮೆ, ಹೊಸೂರುನಾಡು, ಹೆಂಬೆನಾಡು, ಚೆಲೆಗೋಡುನಾಡು, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಮಂಚಂಡಹಳ್ಳಿ ಮತ್ತು ಕೆಂಗೇರಿ ಎಂಬ ಒಂಬತ್ತು ಆಡಳಿತ ಘಟಕಗಳು ಇದ್ದವೆಂದು ಹಾಗೂ ಪೂರ್ವದಲ್ಲಿ ಸುಗಟೂರು, ಪಶ್ಚಿಮದಲ್ಲಿ ಯಲಹಂಕ, ಹುಲುಕಡಿ, ಕುಕ್ಕಲನಾಡು, ಉತ್ತರದಲ್ಲಿ ಪೆನುಗೊಂಡ ರಾಜ್ಯ, ದಕ್ಷಿಣದಲ್ಲಿ ಯಲಹಂಕ ಮಹಾನಾಡುಗಳು ಎಲ್ಲೆಯಾಗಿದ್ದವು. ಚಿಕ್ಕಬಳ್ಳಾಪುರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೆಲವು ಭಾಗಗಳನ್ನು ನಂದಿ ಮಂಡಲವೆಂದು ಕರೆದಿದ್ದಾರೆ. ಈ ಪುರಾತನ ನಂದಿ ಮಂಡಲದಲ್ಲಿ ಸಣ್ಣೆನಾಡು, ಕೈವಾರನಾಡು, ಕೊಳಾಲನಾಡು, ಆವತಿನಾಡು ಇನ್ನು ಮುಂತಾದ ಆಡಳಿತ ಘಟಕಗಳು ಅಸ್ತಿತ್ವದಲ್ಲಿದ್ದವು.

ಪಶ್ಚಿಮದಲ್ಲಿನ ದೊಡ್ಡಬಳ್ಳಾಪುರವು ಸಹ ಆವತಿನಾಡಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಶಿಥಿಲವಾದ ಕೋಟೆ, ಜೀರ್ಣೋದ್ಧಾರ ಮಾಡಿಸಿದ ದೇವಾಲಯಗಳು ಕುರುವುಗಳಾಗಿವೆ. ದೊಡ್ಡಬಳ್ಳಾಪುರ ಆವತಿನಾಡ ಪ್ರಭುಗಳ ಸೈನ್ಯದ ನೆಲೆಯಾಗಿದ್ದಂತೆ ಅವರ ಯುದ್ಧಗಳ ವರ್ಣನೆಯಿಂದ ತಿಳಿಯುತ್ತದೆ[೪೯].

ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ದೇವನಹಳ್ಳಿ, ಕುಡುವತಿ, ಬೈಚಾಪುರ, ಇಮ್ಮಡಿ ಭೈರಾಪುರಾ, ಮುಚುಳಪುರ, ಕಾರೇಪುರ, ಮುದಿಗೆರೆ, ದೇವನಹಳ್ಳಿ, ಮಾವಳ್ಳಿಪುರ, ಸೀಗೇಕೋಟೆ, ಮಂಚಂಡಹಳ್ಳಿ, ಆವತಿ, ವಡಿಗೇನಹಳ್ಳಿ, ಸೋಮನಹಳ್ಳಿ, ಬೇಗೂರು, ಸೆಟ್ಟಿಹಳ್ಳಿ, ಅಂಗಟ್ಟಿ ಗ್ರಾಮ, ನಲ್ಲೂರು, ಸಿಂಗರಹಳ್ಳಿ, ತಿಪ್ಪೂರು, ನಾಗೇನಹಳ್ಳಿ, ದೊಡ್ಡಬಳ್ಳಾಪುರ, ಕೊಯಿರಾ, ನಂದಿ, ಬೂದಿಹಾಳು, ವೆಂಕಟಾಪುರಾ, ಪೊಕ್ಕಾವಾರಪಲ್ಲಿ, ಮಳೂರು, ಮೇಲೂರು, ಬುರ್ರೋನಕುಂಟೆ, ಮಾರಗಾನಕುಂಟೆ, ಸೋರನಾಯಕನಹಳ್ಳಿ, ಅಂತರಹಳ್ಳಿ, ಸಾವಕನಹಳ್ಳಿ, ಗೋಪಾಲಸಾಗರ, ಹೊಸಪೇಟೆ, ಸೋಮತ್ತನಹಳ್ಳಿ, ಕುರುಬರಹಳ್ಳಿ, ಸಾದಲಿ, ಶಿಡ್ಲಘಟ್ಟ, ಬಾಗೇಪಲ್ಲಿ, ಗೌರಿಬಿದನೂರು, ಚಿಂತಾಮಣಿ, ಬೋಂಡಪಲ್ಲಿ,

[೪೯] ಹೆಚ್.ಎಂ.ಬೋರಯ್ಯ :- ಆವತಿನಾಡಪ್ರಭುಗಳು, ಪು.ಸಂ-೧೦, ೧೧.

ಹೊಸಕೆರೆ, ಕೋಣಕುಂಟೆ ಮುಂತಾದ ಗ್ರಾಮಗಳಲ್ಲಿ ಆವತಿನಾಡುಗಳ ಉಲ್ಲೇಖವಿರುವ ಶಾಸನಗಳನ್ನು ಗಮನಿಸಿದರೆ ಈ ಗ್ರಾಮಗಳ ವರೆಗೂ ನಾಡಿನ ಎಲ್ಲೆ ಹಬ್ಬಿತ್ತು ಎಂದೆನಿಸುತ್ತದೆ.

ಆವತಿನಾಡ ಪ್ರಭುವಾದ ರಣಭೈರೇಗೌಡನಿಂದಾಗಿ ಹಾವು–ಹತ್ತಿಯು ಆವತ್ತಿಯೂರಾಯಿತು ಎಂಬ ಐತಿಹ್ಯ ಹುಟ್ಟುವ ಮೊದಲೇ ಕ್ರಿ.ಶ.೧೧೩೩ ರ ವೇಳೆಗಾಗಲೇ ಆವತ್ತಿಯೂರು ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಆವತ್ತಿ ಗ್ರಾಮದ ವೀರಗಂಗನ ತಮಿಳು ಶಾಸನದಲ್ಲಿ ಕಾಣಬಹುದು. ಹೊಯ್ಸಳರ ಕ್ರಿ.ಶ.೧೧೩೩ ರಲ್ಲಿ ಸಣ್ಣೆನಾಡಿನ ಆವತ್ತಿಯೂರ ಭೂ ಒಡೆಯರಾದ ಗಂಗ ವಂಶಸ್ಥನಾದ ಮಚ್ಚಗಾವುಂಡನು[೫೦] ಆಳುತಿದ್ದು, ಹೊಯ್ಸಳರ ಕಾಲದಲ್ಲಿ ಸಾಮನ್ಯ ಗ್ರಾಮವಾಗಿದ್ದ ಆವತ್ತಿಯೂರು ವಿಜಯನಗರ ಅವಧಿಯಲ್ಲಿ ಆವತಿನಾಡಾಗಿ ಬದಲಾಗಿ ನಾಡಪ್ರಭುಗಳು ಆಳ್ವಕೆಯನ್ನು ನಡೆಸಿರುವುದಕ್ಕೆ ಹಲವಾರು ಶಾಸನಗಳು ಮಾಹಿತಿ ಒದಗಿಸುತ್ತದೆ. ಕ್ರಿ.ಶ.೧೪೨೮ ರಲ್ಲಿ ವಿಜಯನಗರದ ಅರಸರು ದೊಡ್ಡಭೈರೇಗೌಡನಿಗೆ ನಂದಿಮಂಡಲವನ್ನು ಕರುಣಿಸಿರುವ ಬಗ್ಗೆ ಕುಡುವತಿಯ ಶಾಸನದಲ್ಲಿ ಕಾಣಬಹುದು[೫೧]. ಕ್ರಿ.ಶ.೧೫೧೮ ರಲ್ಲಿ ಸೊಣಪಗೌಡ ಅಯ್ಯನವರು[೫೨], ಕ್ರಿ.ಶ.೧೫೭೫ರಲ್ಲಿ ಮೊಲೆಯ ಬಯಿರಯ ಗಾವುಂಡರ ಕುಮಾರ ಬಯಿರಾಗೌಡರ ತಮ್ಮಂದಿರು ಮಾರಯಗೌಡರು[೫೩], ಕ್ರಿ.ಶ.೧೫೮೪ ರಲ್ಲಿ ಭೈರವದೇವನು[೫೪], ಕ್ರಿ.ಶ.೧೫೮೭ ರಲ್ಲಿ ಹಾವಳ ಬಯ್ಯಪ್ಪ ಗೌಡರು[೫೫], ಕ್ರಿ.ಶ.೧೬೯೫ ರಲ್ಲಿ ಇಮ್ಮಡಿ ಹಾವಳಗೌಡಯ್ಯ[೫೬], ಕ್ರಿ.ಶ.೧೭೧೦ ರಲ್ಲಿ ಬಯಿರೇಗೌಡ ಅಯ್ಯನವರ ಪುತ್ರರಾದ ಇಮ್ಮಡಿ ಹಾವಳ ಬಯಿರಪ್ಪಗೌಡರು[೫೭], ಕ್ರಿ.ಶ.೧೭೧೦ ರಲ್ಲಿ ಇಮ್ಮಡಿ ಹಾವಳ ಬಯಿರೇಗೌಡರು[೫೮], ಕ್ರಿ.ಶ.೧೭೯೭ ರಲ್ಲಿ ಮುದ್ದು ಭೈರೇಗೌಡಯ್ಯನವರ ಪೌತ್ರರಾದ ಇಮ್ಮಡಿ ಸೊಂಣಬಯಿರೇಗೌಡರ ಪುತ್ರರಾದ ಗೋಪಾಲ ಗೌಡಯ್ಯನವರು[೫೯] ಆವತಿನಾಡ ಪ್ರಭುವಾಗಿ ಆಳ್ವಕೆಯನ್ನು ನಡೆಸಿದ್ದಾರೆ.

---

[೫೦] ಎ.ಕ.-೯, ದೇ.ತಾ.೨೦, ಕ್ರಿ.ಶ.೧೧೩೩, ತಮಿಳು, ಆವತ್ತಿ.
[೫೧] ಎ.ಕ-೧೦, ಚಿ.ತಾ.೪೦, ಕ್ರಿ.ಶ೧೪೨೮, ಕುಡುವತಿ.
[೫೨] ಎ.ಕ-೧೦, ಗೌ.ತಾ.೫೨, ಕ್ರಿ.ಶ.೧೫೭೫, ಮುದಿಗೆರೆ.
[೫೩] ಎ.ಕ-೧೦, ಚಿ.ತಾ.೨೭, ೨೮, ಕ್ರಿ.ಶ.೧೫೭೫, ನಂದಿ.
[೫೪] ಎ.ಕ-೯, ದೇ.ತಾ.೮೨, ಕ್ರಿ.ಶ.೧೫೮೪, ದೇವನಹಳ್ಳಿ.
[೫೫] ಎ.ಕ-೯, ದೊ.ತಾ.೫, ೭, ಕ್ರಿ.ಶ.೧೫೮೭, ತಿಪ್ಪೂರು.
[೫೬] ಎ.ಕ-೯, ಅನುಬಂಧ, ದೊ.ತಾ.೬೯, ಕ್ರಿ.ಶ ೧೬೯೮, ದೊಡ್ಡಬಳ್ಳಾಪುರ.
[೫೭] ಎ.ಕ-೯, ದೊ.ತಾ.೪೯, ಕ್ರಿ.ಶ.೧೭೧೦, ನಾಗೇನಹಳ್ಳಿ.
[೫೮] ಎ.ಕ-೯, ಅನುಬಂಧ, ದೊ.ತಾ.೭೦, ಕ್ರಿ.ಶ.೧೭೧೦, ದೊಡ್ಡಬಳ್ಳಾಪುರ.
[೫೯] ಎ.ಕ-೯, ದೇ.ತಾ.೫೧, ಕ್ರಿ.ಶ.೧೭೯೭ , ಬೇಗೂರು.

## ಯಲಹಂಕನಾಡು

ಬೆಂಗಳೂರು ನಗರದಿಂದ ೧೬ ಕಿ.ಮಿ ದೂರದಲ್ಲಿನ ಯಲಹಂಕವು ಪ್ರಾಚೀನ ಕಾಲದಿಂದಲು ಒಂದು ಪ್ರಮುಖನಗರವಾಗಿ, ಹೊಯ್ಸಳ ಆಳ್ವಿಕೆ ಕೊನೆಯ ಹಂತದಲ್ಲಿ ವಿಭಾಗವೊಂದರ ಮುಖ್ಯಸ್ಥಳವಾಗಿ ವಿಜಯನಗರ ಕಾಲದಲ್ಲಿ ವಿಸ್ತಾರವಾಗಿ ಮಹಾ ನಾಡಾಗಿ ಬೆಳೆಯಿತು. ಯಲಹಂಕದ ಪಶ್ಚಿಮ ಭಾಗವು ಅರ್ಕಾವತಿ ಸೀಮೆಯಾದರೆ, ಪೂರ್ವ & ದಕ್ಷಿಣ ಭಾಗಗಳು ನರವಣ ತೊರೆಯ ಪ್ರದೇಶಗಳಾಗಿದೆ. ಈ ತೊರೆಯು ದಕ್ಷಿಣಾಭಿಮುಖವಾಗಿ ಹರಿದು ಮುಂದೆ ಹೆಬ್ಬಾಳ, ನಾಗವಾರ ಕೆರೆ ಸೇರಿ ದಕ್ಷಿಣ ಪಿನಾಕಿನಿ ನದಿಯನ್ನು ಸೇರುತ್ತದೆ.

ಗಂಗರಸರ ಕಾಲದಿಂದಲೂ ಎಲಹಂಕವು ಪ್ರಚಲಿತದಲ್ಲಿ ಇದ್ದಿರ ಬಹುದು. ಆದರೆ ಯಾವುದೇ ಆಧಾರಗಳು ದೊರೆತಿಲ್ಲ, ಚೋಳರ ಕಾಲದಲ್ಲಿ ಎಲಹಂಕ ಸ್ಥಳದ ಛಾಯೆಯನ್ನು ನೆನಪಿಸುವ ಎಲವೂರು ಎಂಬ ಹೆಸರನ್ನು ಸೋಲದೇವನಹಳ್ಳಿಯ ಕನ್ನಡ ಶಾಸನದಲ್ಲಿ ಕಾಣಬಹುದು. ಹೆಸರುಘಟ್ಟ ಶಾಸನದಲ್ಲಿ ಎಲ್ವಾವಿಷಯ ಎಂದು, ಗಂಗವಾರದ ಸೋಮೇಶ್ವರ ದೇವಾಲಯದ ಗೋಡೆ ಮೇಲಿನ ತಮಿಳು ಶಾಸನದಲ್ಲಿ ಮೊದಲ ಬಾರಿಗೆ ಇಲೈಪಾಕ್ಕನಾಡು ಎಂದು ಉಲ್ಲೇಖಿಸಿರುವುದನ್ನು ಕಾಣಬಹುದು. ಆದರೆ ಕ್ರಿ.ಶ.೧೨೬೭ರ ದೊಡ್ಡಬಳ್ಳಾಪುರದ ಶಾಸನದಿಂದ ಎಲಹಂಕದ ಉಲ್ಲೇಖ ಪ್ರಾರಂಭವಾಗುತ್ತದೆ.

ಎಲ್ವ, ಎಲವ ಎಂಬ ಶುದ್ಧ ಕನ್ನಡ ರೂಪಗಳು ಚೋಳರು ಗಂಗರನ್ನು ಆಕ್ರಮಿಸಿದ ನಂತರ ಇಲೈಆಗಿ, ತಮಿಳು ಶಾಸನಗಳಲ್ಲಿ ಇಲೈಪ್ಪಾಕ್ಕ ಎಂದು ಹೊಯ್ಸಳ ಕಾಲಕ್ಕೆ ಎಲಹಂಕವಾಗಿ ವಿಜಯನಗರದ ಅವಧಿಗೆ ಯಲಹಂಕವಾಯಿತ್ತು. ಎಲಹಂಕ ಎಂಬುದು ಎಲವ ಮತ್ತು ಹಕ್ಕ ಎಂಬ ಎರಡು ರೂಪಗಳ ಸಂಯುಕ್ತ ಪದದಲ್ಲಿ ಎಲವ ಸಂಸ್ಕೃತದಾರ್ಥ ಬೂರಗ ವೃಕ್ಷ ಅಥವಾ ಶಾಲ್ಮಲೀ ವೃಕ್ಷ ಎಂದು, ಹಕ್ಕ ಎಂದರೇ ಸಮೂಹ. ಈ ಬುರುಗದ ಮರಗಳು ಇದ್ದಿದ್ದರಿಂದ ಸಸ್ಯ ಮೂಲದ ಹೆಸರಿಂದ ಎಲಹಂಕ ಎಂದು ನಿಷ್ಪತ್ತಿಯಾಗಿರಬೇಕು.

ಉತ್ತರಕ್ಕೆ ಚಿಕ್ಕಜಾಲ, ದಕ್ಷಿಣಕ್ಕೆ ದೊಮ್ಮಲೂರು, ಪಶ್ಚಿಮದಲ್ಲಿ ಹೆಸರುಘಟ್ಟ, ಪೂರ್ವಕ್ಕೆ ಗಂಗವಾರದೊಂದಿಗೆ ಎಲ್ಲೆಯನ್ನು ಹಂಚಿಕೊಂಡಿರುವ ಯಲಹಂಕನಾಡಿನಲ್ಲಿನ ಗಂಗವಾರ, ಸುರಧೇನುಪುರ, ಯಂಬ್ರಹಳ್ಳಿ, ದೊಮ್ಮಲೂರು, ಐಗಂಡಪುರ, ದೊಡ್ಡಬಳ್ಳಾಪುರ, ಜಕ್ಕೂರು, ಹೆಬ್ಬಾಳ, ಕಟ್ಟಿಗೇನಹಳ್ಳಿ, ಕಾಡಿಗಾನಹಳ್ಳಿ, ಜಾಲ, ಚಿಕ್ಕಜಾಲ, ನಾಗಸಂದ್ರ, ಅಗರ, ಬಯಿರತ್ತಿ, ಸಾದೇನಹಳ್ಳಿ, ಹಾಡೋನಹಳ್ಳಿ, ಗುಂಜೂರು, ನಂದಿ, ಸಿಂಗನಾಯ್ಕರನಹಳ್ಳಿ, ಮಡಿವಾಳ, ಬೇಚಿರಾಖ್ ದ್ಯಾವಸಂದ್ರ,

ಬಂಡೆಕೊಡಗೆಹಳ್ಳಿ, ಕ್ಯಾಲಮಾರನಹಳ್ಳಿ, ತಿಂಡ್ಲು, ಕಿತ್ತಗನೂರು, ಅಲ್ಲಾಳಸಂದ್ರ, ಗಾಣಿಗರಹಳ್ಳಿ, ಹೆಸರುಘಟ್ಟ, ನಾಗಸೆಟ್ಟಿಹಳ್ಳಿ, ಸಾದಹಳ್ಳಿ, ಕೊಡಿಗೆಹಳ್ಳಿ, ದಾಸರಹಳ್ಳಿ, ಬಾಗಲೂರು, ಚಿಕ್ಕಪೇಟೆ, ಬಳ್ಳಾಪುರಪೇಟೆ ಮುಂತಾದ ಪ್ರದೇಶಗಳಲ್ಲಿ ದೊರೆತ ಶಾಸನಗಳಲ್ಲಿನ ಇಲೈಪಾಕ, ಇಲೈಪಾಕ್ಕನಾಡು, ಇಲೈಪಾಕ್ಕನಾಟ್ಟು, ಎಲಹಕನಾಡು, ಎಲಹಕ್ಕನಾಡು, ಎಲಹಂಕನಾಡು, ಯಲಹಕ್ಕನಾಡು, ಯಲಹಂಕನಾಡು, ಎಲಹಂಕರಾಜ್ಯ ಎಂದು ವಿವಿಧ ಕಾಲಾವಧಿಯಲ್ಲಿ ಮಾರ್ಪಟ್ಟುಗಳನ್ನು ಗಮನಿಸಿದರೆ ಬಹುಶಃ ಈ ಪ್ರದೇಶಗಳೆಲ್ಲಾ ಯಲಹಂಕನಾಡಿನಲ್ಲಿ ಅಂತರ್ಗತವಾಗಿದ್ದ ಗ್ರಾಮಗಳಾಗಿದ್ದವು ಎಂದೆನಿಸುತ್ತದೆ.

ಕ್ರಿ.ಶ.೧೨೫೩ ರ ದೊಮ್ಮಲೂರು (ಬೆಂ.೬ಎ, ಕ್ರಿ.ಶ.೧೨೫೩, ಬೆಂ.೧೦, ೧೨೬೬, ಬೆಂ.೧೧, ಕ್ರಿ.ಶ.೧೨೯೦), ಕ್ರಿ.ಶ.೧೩೦೧ ರ ಗುಂಜೂರು (ಬೆಂ.೫೧), ನಂದಿ (ಎ.ಕ.೧೦, ಚಿ.ತಾ.೨೦), ಮಡಿವಾಳ (ಬೆಂ.೬೫), ಕ್ರಿ.ಶ.೧೩೭೬ರ ಬೇಚಿರಾಖ್ ದ್ಯಾವಸಂದ್ರ (ಬೆಂ.೧೩೨), ಕ್ರಿ.ಶ.೧೩೦೫ ರ ಸಿಂಗನಾಯ್ಕನಹಳ್ಳಿಯ (ಬೆಂ.೨೩) ತಮಿಳು ಶಾಸನಗಳಲ್ಲಿ ಇಲೈಪಾಕ್ಕನಾಡು ಎಂದು, ದೊಡ್ಡಬಳ್ಳಾಪುರ ಕನ್ನಡ ಶಾಸನದ ನಂತರ ಕ್ರಿ.ಶ.೧೩೪೨ರ ಜಕ್ಕೂರು (ಬೆ.೨೧), ಕ್ರಿ.ಶ.೧೩೦೮ ರ ಹೆಬ್ಬಾಳ (೧೩೪), ಕ್ರಿ.ಶ.೧೩೨೯ ರ ದೊಮ್ಮಲೂರು (ಬೆಂ, ೧೬೩, ೧೬೫, ಅನುಬಂಧ), ಕಲ್ಲುಕೆರೆಯ (ಬೆಂ.೧೬೬, ಅನುಬಂಧ) ಶಾಸನದಲ್ಲಿ ಎಲಹಕನಾಡು ಎಂದು, ದೊಮ್ಮಲೂರು (ಬೆಂ. ೧೬೨, ಅನುಬಂಧ) ರ ಶಾಸನದಲ್ಲಿ ಎಲಕ್ಕನಾಡು, ಕ್ರಿ.ಶ.೧೩೪೨ರ ನಾಗಸಂದ್ರ (ಬೆಂ.೩೪), ಕ್ರಿ.ಶ.೧೩೬೩ ಅಗರದ (ಬೆಂ.೮) ಶಾಸನದಲ್ಲಿ ಎಲಹಂಕನಾಡು, ಕ್ರಿ.ಶ.೧೩೪೦ ರ ಅಲ್ಲಾಳಸಂದ್ರ (ಬೆಂ.೩೧), ಕ್ರಿ.ಶ.೧೩೮೬ ರ ಕ್ಯಾಲಮಾರನಹಳ್ಳಿಯ (ಬೆಂ.೧೩೯) ಶಾಸನದಲ್ಲಿ ಯಲಹಕ್ಕನಾಡು, ಕ್ರಿ.ಶ.೧೩೪೨ ರ ಗಾಣಿಗರಹಳ್ಳಿ (ಬೆಂ.೨೪) ಶಾಸನದಲ್ಲಿ ಯಲೆಯಕನಾಡು ಎಂದು, ಕ್ರಿ.ಶ.೧೪೩೧ ರ ಕೊಡಿಗೆಹಳ್ಳಿ (ಬೆಂ.೧೨೭) ಮತ್ತು ಕ್ರಿ.ಶ.೧೩೪೨ರ ನಾಗಶೆಟ್ಟಿಹಳ್ಳಿ (ಬೆಂ.೧೨೯), ಕ್ರಿ.ಶ.೧೪೭೪ ರ ಸುಲ್ತಾನ್‌ಪಾಳ್ಯದ (ಬೆಂ.೧೬೧, ಅನುಬಂಧ) ಶಾಸನದಲ್ಲಿ ಯಲಹಕನಾಡು ಎಂದು, ಜಕ್ಕರಾಯನ (ಬೆಂ.೧೫೮, ಅನುಬಂಧ) ಶಾಸನದಲ್ಲಿ ಯಲಹಂಕನಾಡು ಎಂದು, ಕ್ರಿ.ಶ.೧೫೪೦ ರ ಅಲ್ಲಾಳಸಂದ್ರ (ಬೆಂ.೩೦), ಯಶವಂತಪುರದ (ಬೆಂ.೧೭೦, ಅನುಬಂಧ) ಶಾಸನದಲ್ಲಿ ಎಲಹಕನಾಡು ಎಂದು, ಕ್ರಿ.ಶ.೧೫೩೨ ದಾಸರಹಳ್ಳಿಯ (ಬೆಂ.೫೭) ಶಾಸನದಲ್ಲಿ ಎಲಹಂಕರಾಜ್ಯ, ಕ್ರಿ.ಶ.೧೬೨೮ ರ ಬಳ್ಳಾಪುರ ಪೇಟೆಯ (ಬೆಂ.೧) ಶಾಸನದಲ್ಲಿ ಯಲಹಂಕನಾಡು, ಕ್ರಿ.ಶ.೧೬೩೩ ರ ಚಿಕ್ಕಪೇಟೆಯ (ಬೆಂ.೨) ಶಾಸನದಲ್ಲಿ ಯಲಹಂಕ ಎಂದು ಉಕ್ತವಾಗಿದೆ. ಹೀಗೆ ಇಲೈಪ್ಪಾಕ್ಕನಾಟ್ಟು, ಎಲಹಂಕನಾಡಾಗಿ, ನಂತರ ಮಹಾ ಎಲಹಂಕನಾಡಾಗಿ ವಿಸ್ತಾರಿಸಿಕೊಂಡು ಎಲಹಂಕರಾಜ್ಯವಾಗಿ ಹಂತ ಹಂತವಾಗಿ ಬೆಳೆದರ ಬಗ್ಗೆ ಶಾಸನಗಳಲ್ಲಿ ಕಾಣಬಹುದು.

ಜಿಲ್ಲಾ ವ್ಯಾಪ್ತಿಯಲ್ಲಿ ಹಲವಾರು ಗ್ರಾಮಗಳು ಯಲಹಂಕನಾಡಿಗೆ ಸೇರಿರುವ ಬಗ್ಗೆ ಚೋಳರಸರಿಂದ ವಿಜಯನಗರದ ಅರಸರವರೆಗಿನ ವಿವಿಧ ಕಾಲ ಘಟ್ಟಗಳಲ್ಲಿನ ಶಾಸನಗಳನ್ನು ಕಾಣಬಹುದು. ಯಲಹಂಕನಾಡು ಪ್ರಾರಂಭದಲ್ಲಿ ಚೋಳ ಅಧೀನದಲ್ಲಿ ಕ್ರಿ.ಶ.೧೦೪೬ ರಲ್ಲಿ ಇಲೈಪಾಕ್ಕನಾಡು ವಳನಾಡಿನ ಒಂದು ಭಾಗಿವಾಗಿದ್ದರ[೬೦] ಬಗ್ಗೆ ಉಲ್ಲೇಖಿಸುತ್ತದೆ. ಒಂದು ಪ್ರದೇಶವಾಗಿದ್ದ ಇಲೈಪಾಕ್ಕ ವಿಭಾಗವು ೧೨೦೦ ರಲ್ಲಿ ಇಲೈಪಾಕ್ಕನಾಟ್ಟು ವಿಭಾಗವಾಗಿ ರೂಪುಗೊಂಡಿತು.

ಚೋಳರ ನಂತರ ಹೊಯ್ಸಳ ಅಧಿನದಲ್ಲಿ ಕನ್ನಡ ಶಾಸನದಲ್ಲಿ ಎಲಹಕ ಹಾಗೂ ತಮಿಳು ಶಾಸನದಲ್ಲ ಇಲೈಪಾಕ್ಕನಾಡು ಎಂದು ಉಲ್ಲೀಖಿಸಿರುವುದನ್ನು ಕಂಡರೆ ಈ ನಾಡಿಗೆ ೨ ಹೆಸರಿರಬೇಕು ಅಥವಾ ಸಮೀಪದಲ್ಲಿ ೨ ನಾಡು ಗಳಿರಬೇಕು. ಮೊದಲ ಬಾರಿಗೆ ಎಲಹಂಕವೆಂಬ ಕನ್ನಡ ಹೆಸರಿನ ಬಳಕೆಯ ಉಲ್ಲೇಖವಿರುವ ೪೭ ಸಾಲುಗಳುಳ್ಳ ಕ್ರಿ.ಶ.೧೨೬೭ ರ ಶಾಸನದಲ್ಲಿ ದೇವರಸರು ಎಲಹಕದಲ್ಲಿ[೬೧] ಆಳ್ವಿಕೆ ನಡೆಸುತಿದ್ದರು.

ರಾಮನಾಥ ದೇವರ ಹಲವು ತಮಿಳು ಶಾಸನದಲ್ಲಿ ಇಲೈಪಾಕ್ಕನಾಡಿನ ಉಲ್ಲೇಖವನ್ನು ಗಮನಿಸಿದರೆ ಈ ಭಾಗದಲ್ಲಿ ರಾಮನಾಥನು ಹೆಚ್ಚು ಕಾಲ ಆಳ್ವಿಕೆಯನ್ನು ನಡೆಸಿರಬೇಕು. ಇಲೈಪ್ಪಾಕ್ಕನಾಡಿನ ನಾಡಾಧಿಕಾರಿಯಾಗಿ ಕ್ರಿ.ಶ.೧೨೮೭ ರಲ್ಲಿ ಮ.ಹವನಾಯಕನು[೬೨], ಕ್ರಿ.ಶ.೧೨೮೮ ರಲ್ಲಿ ವಲ್ಲಾಳನು[೬೩] ಹಲವಾರು ದಾನ ದತ್ತಿಗಳನ್ನು ನೀಡಿದ್ದಾರೆ. ಇಲೈಪಕ್ಕನಾಡಿನ ಕ್ರಿ.ಶ.೧೩೯೦ರಲ್ಲಿ ದೊಮ್ಮಲೂರಿನ ಶ್ರೀ ಚೊಕ್ಕನಾಥ ಪೆರುಮಾಳು ದೇವಾಲಯದಲ್ಲಿನ ತಮಿಳು ಶಾಸನದಲ್ಲಿ[೬೪], ಕ್ರಿ.ಶ.೧೩೯೧ ರ ಸುರಧೇನುಪುರದಲ್ಲಿನ ದೇವಾಲಯದಲ್ಲಿನ ತಮಿಳು ಶಾಸನದಲ್ಲಿ[೬೫], ಕ್ರಿ.ಶ.೧೩೯೨ರ ಐವರು ಕಂಡೀಶ್ವರ ದೇವಾಲಯದ ಮುಂದಿರುವ ತಮಿಳು ಶಾಸನದಲ್ಲಿ[೬೬] ದಾನ ನೀಡಿರುವುದನ್ನು ಕಾಣಬಹುದು. ಬಹುಶಃ ಆ ಕಾಲಕ್ಕಾಗಲೇ ದೊಮ್ಮಲೂರು ಇಲೈಪಾಕ್ಕನಾಡಿನಲ್ಲಿನ ಪ್ರಮುಖ ನಗರವಾಗಿತ್ತೆಂದು ಈ ದೇವಾಲಯದ ಆವರಣದಲ್ಲಿ ದೊರೆತಿರುವ ಹಲವಾರು ಶಾಸನಗಳಿಂದಾಗಿ ಊಹಿಸಬಹುದು.

---

[೬೦] ಎ.ಕ-೯, ದೇ.ತಾ.೭೫, ಕ್ರಿ.ಶ.೧೦೪೬, ತಮಿಳು, ಗಂಗವಾರ.
[೬೧] ಎ.ಕ-೯, ದೊ.ತಾ.೩೧, ಕ್ರಿ.ಶ.೧೨೬೭, ದೊಡ್ಡಬಳ್ಳಾಪುರ.
[೬೨] ಎ.ಕ-೯, ದೇ.ತಾ.೫೩, ಕ್ರಿ.ಶ.೧೨೮೭, ತಮಿಳು, ಬಯನಹಳ್ಳಿ.
[೬೩] ಎ.ಕ-೯, ದೇ.ತಾ.೨೪, ಕ್ರಿ.ಶ.೧೨೮೮, ತಮಿಳು, ಯಂಬ್ರಹಳ್ಳಿ.
[೬೪] ಎ.ಕ-೯, ಬೆಂ.೧೧, ಕ್ರಿ.ಶ.೧೩೯೦, ತಮಿಳು, ದೊಮ್ಮಲೂರು.
[೬೫] ಎ.ಕ-೯, ದೇ.ತಾ.೪೫, ಕ್ರಿ.ಶ.೧೩೯೧, ತಮಿಳು, ಸುರಧೇನುಪುರ.
[೬೬] ಎ.ಕ-೯, ನೆ.ತಾ.೩೮ಬಿ, ಕ್ರಿ.ಶ.೧೩೯೨, ತಮಿಳು, ಅಯಿಗಂಡಪುರ.

ಪೆರುಮಾಳೆ ದೇವ ದಂಡನಾಯಕರ ಮಗ ಚಕ್ರವರ್ತಿ ದಂಡನಾಯಕರ ಮರು ದಾನವನ್ನು ಅಲ್ಲಾಳನಾಥನ ಸಹಿಯೊಂದಿಗೆ ನೀಡಿದನು[೬೭] ಈ ಅಲ್ಲಾಳನಾಥನ ಹೆಸರಿನಲ್ಲಿ ಅಲ್ಲಾಳನಾಥ ದೇವಾಲಯ ನಿರ್ಮಾಣವಾಗಿರಬೇಕು.

ವೀರ ಬಲ್ಲಾಳನ ಮಹಾ ಪ್ರಧಾನಿಯಾಗಿದ್ದ ಪೊಂನಣನ ೩ ಮಕ್ಕಳು ಯಲಹಂಕನಾಡಿನಲ್ಲಿ ಆಳ್ವಿಕೆಯಲ್ಲಿ ನಡೆಸಿದ್ದಾರೆ. ಪೊಂನಣನವರ ಮಕ್ಕಳು ಶ್ರೀಮೆಯ ದಂಣಾಯಕರು ಕ್ರಿ.ಶ.೧೩೨೬ರಲ್ಲಿ[೬೮], ಮತ್ತೊಬ್ಬ ಮಗನಾದ ಕಾಮೆಯ ದಣಾಯಕರ ಕಾಲದಲ್ಲಿ ಕ್ರಿ.ಶ.೧೩೨೭ರಲ್ಲಿ ಮಯಿಲೇಗೌಡ, ಮಾರೇಗೌಡ, ಮಲ್ಲಯ್ಯಗೌಡ, ತಾಯಿಯಪ್ಪ ಗೌಡರು[೬೯], ೩ನೇಯ ಮಗನಾದ ಹೊಯ ದಂಣಾಯಕರ ಕ್ರಿ.ಶ.೧೩೨೮ರಲ್ಲಿ ಮಯಿಲಗೆಗೌಡ, ಮಾರಗಗೌಡ, ಮಲಯಗೌಡ, ತಾಮಿಯಪ್ಪಗೌಡ[೭೦], ಸಾಮಂತಾಧಿಪತಿಯಾಗಿ ಮಹಾಪ್ರಧಾನ ಬೆಟ್ಟರಸ ದಣ್ಣಾಯಕರು[೭೧], ಕ್ರಿ.ಶ.೧೩೪೨ರ ಶ್ರೀ ಮನ್ಮಹಾ ಎಲಹಂಕನಾಡ ಪ್ರಭುಗಳಾದ ಬಯಿರದೇವ, ಮಾರಗವಡ, ತಾಯಿಯಪ್ಪ, ಮಾಚಿದೇವ, ಕನ್ನಗೌಡ[೭೨], ಅದೇ ವರ್ಷ ಮಹಾಸಾಮಂತಾಧಿಪತಿ ಚಿಕ್ಕಭೈರಯ್ಯನಾಯಕರ ಮಗ ಹೊನ್ನಮಾರಯ್ಯ ನಾಯಕರು[೭೩] ಎಲಹಕ್ಕನಾಡಾಧಿಕಾರಿಯಾಗಿ ಆಡಳತ ನಡೆಸಿದ್ದಾರೆ. ಅಲ್ಲಾಳಜೀಯನು ಶಾನುಭೋಗನಾಗಿ ಕ್ರಿ.ಶ.೧೩೨೬ ರಿಂದ ಹಲವಾರು ಸಾಮಂತರು, ದಂಡನಾಯಕನ ಕಾಲದಲ್ಲಿ ತಮ್ಮ ಸೇವೆಯನ್ನು ಸಲ್ಲಿರುವದನ್ನು ಗಮನಿಸಬಹುದು.

ಹೊಯ್ಸಳ ನಂತರ ಎಲಹಂಕನಾಡು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟ ಮೇಲು ಆಗಲೂ ಶ್ರೀಮನ್ಮಹಾ ಎಲಹಂಕನಾಡಪ್ರಭುಗಳಾಗಿ ಭೈರಿದೇವ, ಮಾಚಿದೇವ, ಗೋಪಾಲಸ್ವಾಮಿಯಪ್ಪ, ಕಂನಗೌಡದೇವ, ಭೈಯಪ್ಪ, ಶಾನುಭೋವನಾಗಿ ಅಲ್ಲಾಳಜೀಯರನ್ನು ಅಧಿಕಾರವನ್ನು ಮುನ್ನೆಡೆಸಿದ್ದರ ಬಗ್ಗೆ, ಕ್ರಿ.ಶ.೧೩೪೮ರ ಕಟ್ಟಿಗೇನಹಳ್ಳಿಯ ಶಾಸನ[೭೪] ತಿಳಸುತ್ತದೆ. ಇವರೆಲ್ಲಾ ಹೊಯ್ಸಳ ಬಲ್ಲಾಳನ ಅಧಿನದಲ್ಲಿದ್ದು, ವಿಜಯನಗರ ಅರಸರ ಅವಧಿಯಲ್ಲಿಯೂ ಸಾಮಂತರಾಗಿ, ಶಾನುಭೋವರಾಗಿ, ಎಲಹಂಕನಾಡಪ್ರಭುವಾಗಿ ಅಧಿಕಾರ ಮುಂದುವರೆಸಿರುವುದನ್ನು ಶಾಸನಾಧರಗಳಂದಾಗಿ ತಿಳಯ ಬಹುದು. ಹೊಯ್ಸಳರ ಪತನ ನಂತರ ವಿಜಯನಗರ ಅರಸರೊಂದಿಗೆ ತಮ್ಮ ಒಲವನ್ನು ತೋರಿಸಿದ್ದಾರೆ

[೬೭] ಎ.ಕ-೯, ಬೆ.೨೩, ಕ್ರಿ.ಶ.೧೩೦೫, ತಮಿಳು, ಸಿಂಗನಾಯ್ಕನಹಳ್ಳಿ.
[೬೮] ಎ.ಕ-೯, ದೇ.ತಾ.೧೪, ಕ್ರಿ.ಶ.೧೩೨೬, ಹಾಡೋನಹಳ್ಳಿ.
[೬೯] ಎ.ಕ-೯, ಬೆಂ.೧೬೫, ಅನುಬಂಧ, ಕ್ರಿ.ಶ.೧೩೨೭, ದೊಮ್ಮಲೂರು.
[೭೦] ಎ.ಕ-೯, ದೇ.ತಾ.೬೦, ಕ್ರಿ.ಶ.೧೩೨೮, ಚಿಕ್ಕಜಾಲ.
[೭೧] ಎ.ಕ-೯, ಅನುಬಂಧ, ದೇ.ತಾ.೯೨, ಜೋಡಿ ಅರದೇಶಹಳ್ಳಿ ಅಗ್ರಹಾರ.
[೭೨] ಎ.ಕ-೯, ಬೆಂ.೨೪. ಕ್ರಿ.ಶ.೧೩೪೨, ಗಾಣಿಗರಹಳ್ಳಿ.
[೭೩] ಎ.ಕ-೯, ಬೆಂ.೨೧, ಕ್ರಿ.ಶ.೧೩೪೨, ಜಕ್ಕೂರು.
[೭೪] ಎ.ಕ-೯, ದೇ.ತಾ .೫೦. ಕ್ರಿ.ಶ.೧೩೪೮, ಕಟಗೇನಗಹಳ್ಳಿ.

ಎನ್ನಬಹುದು. ಆಡಳಿತ ಪಕ್ಷದ ಕಡೆಗೆ ಪಂಚಾಯಿತಿಯಿಂದ ಎಂ.ಪಿ, ಎಂ.ಎಲ್.ಎ ವರೆಗೆ ಹೇಗೆ ಅಧಿಕಾರ, ಹಣಕ್ಕೆ ವಲಸೆ ಹೋಗುವಂತೆ ಇವರೆಲ್ಲ ಹೋಗಿರಬಹುದು. ಹೊಯ್ಸಳ ಕಾಲದಲ್ಲಿ ಸಾಂತಾಧಿಪತಿ, ಅಧಿಕಾರಿ, ದಂಡನಾಯಕರಾಗಿದ್ದಂತ ನಾಡಗೌಡರ ಸ್ಥಳಯ ಆಡಳಿತದಲ್ಲಿ ಗಣನೀಯ ಪಾತ್ರವಹಿಸುತ್ತಿದ್ದರರೆನಿಸುತ್ತದೆ. ಇಲ್ಲವೇ ನಿಷ್ಟಾವಂತ ಅಧಿಕಾರಿಗಳಾಗಿರ ಬೇಕು. ಅದಕ್ಕೆ ವಿಜಯನಗರ ಅರಸರು ವರನ್ನು ಅಧಿಕಾರದಲ್ಲಿ ಮುಂದುವರೆಸಿರ ಬೇಕು. ಕ್ರಿ.ಶ.೧೩೪೮ರಲ್ಲಿ ನರಲೋಕಗಂಡ ಮೈಲೆಯ ನಾಯ್ಕರು ಮಹಾ ಸಾಮಂತಾಧಿಪತಿಯಾದರು. ಈ ಮಯಿಲೆಯ ನಾಯಕ ಮೊದಲು ಹೊಯ್ಸಳ ಕಾಲದಲ್ಲಿ ಕುಕ್ಕಲನಾಡಿನ ಸಾಮಂತನಾಗಿದ್ದನು. ಕ್ರಿ.ಶ.೧೩೪೨ ರಿಂದ ೧೩೬೭[೭೫] ರ ವರೆಗೂ ಭೈರಿದೇವನು (ಬಯಿರಿದೇವನು) ಎಲಹಂಕನಾಡಿನಲ್ಲಿ ಅಧಿಕಾರ ನಡೆಸಿದನು. ಕ್ರಿ.ಶ.೧೩೬೩ರಲ್ಲಿ ಬುಕ್ಕಣ ಒಡೆಯನ ಕುಮಾರ ಕಂಪಣ್ಣ ಒಡೆಯರು ಮುಳಬಾಗಲ ಪಟ್ಟಣದಲ್ಲಿ ರಾಜ್ಯವಾಳುತ್ತಿರುವಾಗ ಅವನ ಕುಮಾರ ಕಾಮಯ್ಯನಾಯಕರು ಎಲಹಂಕನಾಡ ಅಲ್ಲಾಳಜೀಯರ ಮಗ ತಣಿಯಪ್ಪನಿಗೆ ತೊರವಳನಾಡನಲ್ಲಿ ಸರ್ವಮಾನ್ಯವಾಗಿ[೭೬] ಕೊಟ್ಟರು. ಕ್ರಿ.ಶ.೧೩೪೨ರಲ್ಲಿ ಹೊಯ್ಸಳ ವೀರ ಬಲ್ಲಾಳನ ಕಾಲದಲ್ಲಿ ತಂದೆಯಾದ ಅಲ್ಲಾಳಜೀಯು ದಾನ ಪಡೆದು ಕೊಂಡಿದ್ದರೇ ಈಗ ಮಗನಾದ ತಣಿಯಪ್ಪನು ವಿಜಯನಗರದ ಕಂಪಣ್ಣನ ಕಾಲದಲ್ಲಿ ದಾನ ಪಡೆದು ಕೊಂಡಿದ್ದಾನೆ. ಆದರೆ ಯಾವ ಕಾರಣಕ್ಕೆ ಎಂದು ನಿಖರವಾಗಿ ತಿಳಿದು ಬಂದಿಲ್ಲ. ಒಂದು ವೇಳೆ ಶಾನುಭೋಗಕಾರಿಯಲ್ಲಿ ವೃತ್ತಿಯನ್ನು ಮುಂದುವರೆಸಿರಬೇಕು.

ಕ್ರಿ.ಶ.೧೩೬೭ ರಲ್ಲಿ ಯಲಹಂಕನಾಡ ಪ್ರಭುವಾಗಿ ಸೊಣತಮ್ಮೆಗೌಡರ ಮಕ್ಕಳಿಗೆ ಅಧಿಕಾರ[೭೭] ಲಭಿಸಿತ್ತು. ಕ್ರಿ.ಶ.೧೩೮೨ ರಲ್ಲಿ ಎಲಹಂಕನಾಡ ಸುಂಕದ ಅಧಿಕಾರಿಯಾಗಿ ರಾಮರಸರ ಮಕ್ಕಳು ದೇವರ್ಸರು[೭೮] ಕರ್ತವ್ಯ ನಿರ್ವಾಹಿಸುತಿದ್ದರು. ಕ್ರಿ.ಶ.೧೪೭೧ ರಲ್ಲಿ ಎಲಹಕ್ಕನಾಡನು ಆಳ್ವಕೆ ನಡೆಸುತ್ತಿದ್ದ, ಬಯಿರೇಗೌಡನ ಮಗ ಮಂಚೆಗೌಡನಿಗೆ ನಂದಿಗುಂದದ ಚತುಸ್ಸೀಮೆಯನ್ನು ದಾನವಾಗಿ[೭೯] ಈ ಶಾಸನದಲ್ಲಿ ಯಲಹಂಕವಂಶದ ರಾಜರ ಮೂರನೇಯ ತಲೆಮಾರಿನ ಬಂಡೆಕುಲತಿಲಕ ಭೈರದೇವನಿಗೆ ರಣಭೈರೇಗೌಡನೆಂಬ ಹೆಸರಿದ್ದಂತೆ ಕಂಡು ಬರುವುದಿಲ್ಲ. ಈ ರಣಭೈರೇಗೌಡನು ಹೊಳವನಹಳ್ಳಿಯಲ್ಲಿ ಅಳುತ್ತಿದ್ದು, ಯಲಹಂಕ ರಾಜ ವಂಶದ ಮೂಲ ಪುರುಷನೆಂದು ಹೇಳಲು ಬರುವುದಿಲ್ಲ. ಹಾಗೇಯೆ ನಾಡಗೌಡಗಳ ಜೊತೆಯಲ್ಲಿನ ಒಡನಾಡಿಯಾಗಿದಂತ ಶಾನಭೋಗ ಅಲ್ಲಾಜೀಯ ಮಗ ತಣಿಯಪ್ಪ ಮತ್ತು ಎಲಹಂಕನಾಡ ಹಿರೀಭೈರೇಗೌಡನ ಮಗ ಮಂಚೇಗೌಡನಿಗೆ ದಾನ ನೀಡಿರುವುದನ್ನು

[೭೫] ಎ.ಕ-೯, ಹೊ.ತಾ.೧೧೭. ಕ್ರಿ.ಶ.೧೩೬೭, ಕಿತಗನೂರು
[೭೬] ಎ.ಕ-೯, ಬೆಂ.೮೧, ಕ್ರಿ.ಶ.೧೩೬೩, ಬೇಗೂರು.
[೭೭] ಎ.ಕ-೯, ಅನುಬಂಧ, ನೆ.ತಾ.೧೧೦, ಕ್ರಿ.ಶ.೧೫೬೭, ಶಿವಗಂಗೆ.
[೭೮] ಎ.ಕ-೯, ದೇ.ತಾ.೫೮, ಕ್ರಿ.ಶ.೧೩೮೨, ಚಿಕ್ಕಜಾಲ.
[೭೯] ಎ.ಕ-೯, ದೇ.ತಾ.೨೯, ಕ್ರಿ.ಶ.೧೪೭೧, ನಂದಗುಡಿ.

ಗಮನಿಸಬಹುದು. ಕ್ರಿ.ಶ.೧೪೫೯ ರಲ್ಲಿ ದೇವರಾಯನ ಕಾಲಕ್ಕಾಗಲೇ ಕುಕ್ಕಲನಾಡು ವಿಭಜನೆಗೊಂಡು ಇಂದಿನ ಬೆಂಗಳೂರು ಉತ್ತರ ತಾಲ್ಲೂಕ್ ಎಲಹಕ್ಕನಾಡಿನ ಭಾಗವಾಗಿ ಪರಿಣಮಿಸಿತ್ತು[೮೦]. ಹೀಗೆ ವಿಜಯನಗರ ಅರಸರ ಸಂಗಮರ ಆಳ್ವಿಕೆಯಲ್ಲಿ ಹೆಚ್ಚು ಪ್ರಾಧಾನತ್ಯೆಯನ್ನು ಪಡೆದು ಕೊಂಡಂತ ನಾಡಗೌಡರ ಆಧಕಾರ ಸಾಳ್ವ ಅರಸರ ಆಳ್ವಿಕೆಯಲ್ಲಿ ೪೦ ವರ್ಷಗಳ ಕಾಲ ಪ್ರಾಬಲ್ಯ ಇಲ್ಲದಂತಾಯಿತ್ತು. ಎಲಹಂಕವು ಚೋಳರ ಕಾಲದಲ್ಲಿ ತಲೆ ಎತ್ತಿ ಪ್ರದೇಶವು ಹೊಯ್ಸಳ, ವಿಜಯನಗರ ಕಾಲದಲ್ಲಿ ವಿಸ್ತಾರವಾದ ಆಡಳಿತ ಪ್ರಾಂತ್ಯವಾಯಿತ್ತು.

## ಕೈವಾರನಾಡು

ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ, ಶಿಡ್ಲಘಟ್ಟ ತಾಲ್ಲೂಕಿನ ದಕ್ಷಿಣ ಭಾಗ, ಕೋಲಾರ ತಾಲ್ಲೂಕಿನ ವಾಯುವ್ಯ ಭಾಗ, ಹೊಸಕೋಟೆ ತಾಲ್ಲೂಕಿನ ಈಶಾನ್ಯ ಭಾಗವು ಕೈವಾರನಾಡಿಗೆ ಸೇರಿದ್ದು, ಗುಂಜೂರು, ಮಡಿವಾಳ, ನೆಲವಾಗಲುಹಳ್ಳಿ, ಬೇಚಿರಾಖ್ ಮಾರೇನಹಳ್ಳಿ, ಕೋಲಾರ ತಾಲ್ಲೂಕಿನ ಮಲ್ಲಂದಹಳ್ಳಿ (ಕೋ.ತಾ.೧೭, ತಮಿಳು), ಸೂಲಿದೇನಹಳ್ಳಿ (ಕೋ.ತಾ.೨೭, ತಮಿಳು), ಮಾಡಿವಾಳ (ಕೋ.ತಾ.೨೮, ತಮಿಳು), ಸೀತಿಬೆಟ್ಟ (ಕೋ.ತಾ.೩೯,೪೮,೪೯, ತಮಿಳು), ಕದಗತ್ತೂರ್ (ಕೋ.ತಾ.೫೫, ತಮಿಳು), ಸೊಲೂರು(ಕೋ.ತಾ.೯೧, ತಮಿಳು), ಬೇಲೂರು(ಕೋ.ತಾ.೯೨, ತಮಿಳು), ಕೋಲಾರದಮ್ಮ ದೇವಾಲಯ (ಕೋ.ತಾ.೧೧೧, ತಮಿಳು), ಶಿಡ್ಲಘಟ್ಟ ತಾಲ್ಲೂಕಿನ ಸುಗಟೂರು (ಶಿ.ತಾ.೮ & ೯, ತಮಿಳು), ಹೊಸಪೇಟೆ (ಶಿ.ತಾ.೧೬, ತಮಿಳು) ಶಿಡ್ಲಘಟ್ಟ (ಶಿ.ತಾ.೩೦, ತಮಿಳು), ಹಿತ್ತಲಹಳ್ಳಿ (ಶಿ.ತಾ.೩೬, ತಮಿಳು), ಚಿಂತಾಮಣಿ ತಾಲ್ಲೂಕಿನ ಕೈವಾರ (ಚಿಂ.ತಾ.೮೮, ೮೯, ೯೪, ತಮಿಳು), ಮುಂತಾದ ಸ್ಥಳಗಳಲ್ಲಿ ಕೈವಾರನಾಡಿನ ಉಲ್ಲೇಖದ ಶಾಸನಗಳನ್ನು ಕಾಣಬಹುದು. ಆಲಂಗಿರಿ (ಚಿಂ.ತಾ.೫೪, ಕನ್ನಡ), ಮತ್ತು ಕೈವಾರದ (ಚಿಂ.ತಾ.೯೫, ಕನ್ನಡ) ಈ ಶಾಸನಗಳು ಕನ್ನಡ ಭಾಷೆಯಲ್ಲಿದ್ದು, ಉಳಿದೆಲ್ಲ ಶಾಸನಗಳು ತಮಿಳು ಭಾಷೆಯಲ್ಲಿದೆ.

೭, ೮, ೯ ನೇ ಶತಮಾನಗಳ ಒಂದು ಪ್ರಾದೇಶಿಕ ವಿಭಾಗವಾಗಿ ರೂಪುಗೊಂಡಿತ್ತು. ಉತ್ತರಕ್ಕೆ ಪಾಪಾಗ್ನಿ, ಆಗ್ನೇಯಕ್ಕೆ ಪಾಲಾರ್, ಪಶ್ಚಿಮದಲ್ಲಿ ದಕ್ಷಿಣ ಪಿನಾಕಿನ ನದಿಗಳು ಹರಿಯುತ್ತದೆ. ಗಂಗರ ಕಾಲಕ್ಕೆ ಕಯ್ವುರವಿಷಯವೆಂದು, ರಾಷ್ಟ್ರಕೂಟ, ನೊಳಂಬರ ಶಾಸನಗಳಲ್ಲಿ ಕಯ್ವುರನಾಡು, ಚೋಳರ ಕಾಲದಲ್ಲಿ ನಿಗರಿಲಿ ಚೋಳ ಮಂಡಲದ ಕೈವಾರನಾಡೆಂದು ಅನಂತರ ಹೊಯ್ಸಳರ ಶಾಸನಗಳಲ್ಲಿ ಕೈವಾರನಾಡು ನಿಗರಿಲಿ ಚೋಲಮಂಡಲದ ಒಂದು ನಾಡಾಗಿತ್ತು. ಕ್ರಿ.ಶ.೧೦೬೫ ರ ನೆಲವಾಗಿಲು

[೮೦] ಪಿ.ವಿ.ಕೃಷ್ಣಮೂರ್ತಿ:- ಕುಕ್ಕಲನಾಡು ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ, ಇ.ದ.ಸಂ-೭, ೧೯೯೨, ಪು.ಸಂ-೧೪೬

ಗ್ರಾಮದ ಶಾಸನವು ಕೈವಾರನಾಡು ವಿಜಯರಾಜೇಂದ್ರ ಮಂಡಲದ ಭಾಗವೆಂದು ಉಲ್ಲೇಖಿಸಿದೆ. ಹೊಯ್ಸಳ ವೀರ ಬಲ್ಲಾಳ ಕ್ರಿ.ಶ.೧೩೦೧-೦೨ ರ ಅನೇಕ ಶಾಸನಗಳಲ್ಲಿ ಕೈವಾರನಾಡು ಒಳಗೊಂಡಂತೆ ಅನೇಕ ನಾಡುಗಳು ಹೆಸರ್ ಕುಂದಾಣಿ ರಾಜ್ಯದ ಭಾಗವೆಂದು ೧೪೦೦ ನಂತರದಲ್ಲಿ ಕೈವಾರನಾಡಿನ ಸ್ಥಾನದಿಂದ ನಾಗಣನ ಚಾವಡಿಯರಸು ನಾಡೊಳಗಣ ಕೈವಾರಸ್ಥಳವಾಗಿ ಮಾರ್ಪಾಡುಗೊಂಡಿರುವುದನ್ನು ಆಲಂಗಿರಿಯ ಕನ್ನಡ ಶಾಸನದಲ್ಲಿ ಕಾಣಬಹುದು[೮೧].

ಕೈವಾರನಾಡು ಪಾಳೇಗಾರರ ಆಡಳಿತದ ಕೇಂದ್ರವಾಗಿತ್ತು. ಕೈವಾರದಿಂದ ೭ ಕಿ.ಮೀ. ದೂರದಲ್ಲಿನ ಅಲಂಬಗಿರಿಯನ್ನು ರಾಜಧಾನಿಯಾಗಿ ಮಾಡಿಕೊಂಡು, ವಿಶಾಲವಾದ ಪ್ರದೇಶದಲ್ಲಿ ಕೋಟೆಯನ್ನು ನಿರ್ಮಾಣ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ನಲ್ಲೂರು ರಾಜ್ಯದಿಂದ ಆನೇಕಲ್‌ವರೆಗೆ, ಬೂದಿಗೆರೆ, ವರ್ತೂರು, ಸರ್ಜಾಪುರ, ಕಾಡುಗೋಡಿ, ಶಿಡ್ಲಘಟ್ಟ, ಬೂದಿಹಾಳು ಚೀಮಂಗಲ, ಜಂಗಮಕೋಟೆ ಹಾಗೂ ಸುತ್ತಮುತ್ತಲಿನ ಹಳ್ಳಿಗಳನ್ನು ಒಳಗೊಂಡ ಪ್ರದೇಶವಾದ ಕೈವಾರನಾಡಿಗೆ ಅಧಿಕಾರಿಗಳನ್ನು ನೇಮಿಸಿದ್ದರು. ಸುಮಾರು ೧೪ನೇ ಶತಮಾನಕ್ಕಾಗಲೇ ಕೈವಾರ ಒಂದು ಪ್ರವಾಸಿ ತಾಣವಾದ ಪ್ರಮುಖನಾಡಾಗಿತ್ತು.

ಚೋಳರ ಕಾಲದಲ್ಲಿನ ನಿಗರಿಲಿ ಚೋಳಮಂಡಲದ ಕೈವಾರನಾಡನ್ನು ಕ್ರಿ.ಶ.೧೦೭೫ ರಲ್ಲಿ ಸೋಮರ್ಯೆಸನ್, ನಾಗಮರ್ಯೆಸನ್, ಗಂಗೈಗೊಂಡ ಅರಸನ್[೮೨], ಹೊಯ್ಸಳ ಶ್ರೀ ನರಸಿಂಹ ದೇವರ ಆಳ್ವಿಕೆಯಲ್ಲಿ ನಿಗರಿಲಿ ಚೋಳ ಮಂಡಲದ ಕೈವಾರನಾಡನು ಕ್ರಿ.ಶ.೧೧೨೮ ರಿಂದ[೮೩] ಕ್ರಿ.ಶ.೧೧೪೫ ರ ವರೆಗೆ ಬ್ರಹ್ಮಧಿರಾಜನು[೮೪], ವಿಜ್ಯೆರಾಜೇಂದ್ರ ಮಂಡಲದ ಕೈವಾರನಾಡನ್ನು ಕ್ರಿ.ಶ.೧೧೬೪ ರಲ್ಲಿ ಬ್ರಹ್ಮಮಾರಯನು[೮೫] ಆಳುತ್ತಿದ್ದರು.

## ಸಣ್ಣೆನಾಡು (ಸಳ್ಳೆ-೩೦೦)

ಸಳ್ಳೆ-೩೦೦ ಎಂಬುದು ೩೦೦ ಹಳ್ಳಿಗಳ ಆಡಳಿತ ಕೇಂದ್ರವಾಗಿದ್ದು, ನಂದಿ, ಅವತಿ, ಚಿಕ್ಕಸಣ್ಣೆ, ದೊಡ್ಡಸಣ್ಣೆ, ಎಲಹಂಕ, ಹೆಬ್ಬಾಳ, ಗಂಗವಾರ, ಕಾಡುಗೋಡಿ, ಪಟ್ಟಂದೂರು ಮುಂತಾದ ಗ್ರಾಮಗಳು ಸಣ್ಣೆನಾಡಿನಲ್ಲಿನ ಗ್ರಾಮಗಳಾಗಿದ್ದು, ಸಣ್ಣೆನಾಡು ಸುಮಾರು ಉತ್ತರದಿಂದ ದಕ್ಷಿಣಕ್ಕೆ ೮೦ ಕಿ.ಮೀ

[೮೧] ಎ.ಕ-೯, ಚಿಂ.ತಾ.೫೪, ಕ್ರಿ.ಶ. ೧೫೮೫, ಕನ್ನಡ, ಆಲಂಗಿರಿ.
[೮೨] ಎ.ಕ-೯, ಹೊ.ತಾ.೧೦೧, ಕ್ರಿ.ಶ.೧೦೭೫, ತಮಿಳು, ಬೇಚಿರಾಖ್ ಮಾರೇನಹಳ್ಳಿ.
[೮೩] ಎ.ಕ-೯, ಹೊ.ತಾ.೧೮, ಕ್ರಿ.ಶ.೧೧೨೮, ತಮಿಳು, ಸಿದ್ಧನಹಳ್ಳಿ.
[೮೪] ಎ.ಕ-೯, ಹೊ.ತಾ.೪೦, ಕ್ರಿ.ಶ.೧೧೪೫, ತಮಿಳು, ವೋಬಳಹಳ್ಳಿ.
[೮೫] ಎ.ಕ-೯, ಹೊ.ತಾ.೩೬, ಕ್ರಿ.ಶ.೧೧೬೫, ತಮಿಳು, ಹೊಸಹಳ್ಳಿ.

ವ್ಯಾಪ್ತಿಯಲ್ಲಿ ಉತ್ತರದಲ್ಲಿ ನಂದಿದುರ್ಗದ ದಕ್ಷಿಣ ತಪ್ಪಲಿನಲ್ಲಿರುವ ಕೊಡವತ್ತಿ ಗ್ರಾಮದಿಂದ[೮೬] ದಕ್ಷಿಣ ಗಡಿ ಗ್ರಾಮವಾಗಿ ಕಾಡುಗೋಡಿಯವರೆಗೆ ವಿಸ್ತಾರವನ್ನು ಹೊಂದಿತ್ತು[೮೭]. ಉತ್ತರಕ್ಕೆ ಕಳವರನಾಡು (ಸ್ಕಂಧಗಿರಿ) ಮತ್ತು ಕೆರೆಕುಂದ ೩೦೦, ದಕ್ಷಿಣಕ್ಕೆ ಮೊರಸುನಾಡಿನ ಭಾಗವಾಗಿದ್ದ ಮಾಶಂದಿನಾಡು, ಬೆಂಪೂರು-೧೨ (ಪಟ್ಟಂದೂರು, ಕಾಡುಗೋಡಿ ಗ್ರಾಮಗಳು) ಪೂರ್ವಕ್ಕೆ ತೊರವಳನಾಡು, (ದಕ್ಷಿಣ ಪಿನಾಕಿನಿ ಜಲಾಯನ ಪ್ರದೇಶ) ಪಶ್ಚಿಮಕ್ಕೆ ಮಣ್ಣೆನಾಡು (ಅರ್ಕಾವತಿ) ಎಂಬುದು ಸಣ್ಣೆನಾಡಿನ ಎಲ್ಲೆಗಳಾಗಿದ್ದವು.

ಚಿಕ್ಕಸಣ್ಣೆಯೇ ಬಹುಶಃ ಸಣ್ಣೆನಾಡಿನ ಕೇಂದ್ರ ಸ್ಥಳವಾಗಿರಬೇಕು. ಈಗಿನ ಚಿಕ್ಕಸಣ್ಣೆಯಲ್ಲಿನ ಶಾಸನಗಳು, ಕೋಟೆಯ ಅವಶೇಷಗಳು, ಗುಡ್ಡಕ್ಕೆ ಹೊಂದಿಕೊಂಡಂತೆ ವಾಯುವ್ಯ ದಿಸೆಯಲ್ಲಿ ವಿಶಾಲವಾದ ಕೆರೆಯ ಹಿಂಭಾಗ ಪ್ರದೇಶವು ಹಳೆಯ ಊರಾಗಿದ್ದು, ಈಗ ಬೇಚರಾಕ್ ಆಗಿದೆ. ಅಲ್ಲಿ ಈಗಲೂ ಗ್ರಾಮದ ಅವಶೇಷಗಳಿವೆ. ಬಹುಶಃ ಈ ಗ್ರಾಮದ ಜನರೇ ಕಾಲಾಂತರದಲ್ಲಿ ಚಿಕ್ಕಸಣ್ಣೆ, ದೊಡ್ಡಸಣ್ಣೆ ಎಂದು ಎರಡು ಪ್ರತ್ಯೇಕ ಗ್ರಾಮಗಳಾಗಿ ರಚನೆಯಾಗಿರಬೇಕು.

ಗಂಗರ ಆಳ್ವಕೆಯ ಚಿಕ್ಕ ಸಣ್ಣೆಯ ಶಾಸನದಲ್ಲಿ ಸಳ್ನೆ..... ಎಂದು, ನಂತರ ರಾಷ್ಟ್ರಕೂಟರ ಅಕಾಲವರ್ಷನ ಕ್ರಿ.ಶ.೯೦೦ ರ ಅರದೇಶನಹಳ್ಳಿಯ ಶಾಸನದಲ್ಲಿ ಸಳ್ನೆ ಮುನ್ನೂರು, ಚೋಳರ ಕ್ರಿ.ಶ.೧೦೨೯ರ ಸೋಲದೇವನಹಳ್ಳಿಯ ಕನ್ನಡ ಶಾಸನದಲ್ಲಿ ಸಣ್ಣೆನಾಡು ಹಾಗೂ ಸಣ್ಣೆನಾಡಿನ ಸಮಕಾಲೀನ ನೆರೆಹೊರೆಯ ನಾಡುಗಳಾದ ಕುಕ್ಕನೂರುನಾಡು, ಕುರುಕುನ್ದಾಚ್ಚಿನಾಡು, ಮಣ್ಣೆನಾಡುಗಳು ವಿಕ್ರಮ ಚೋಳ ಮಂಡಲದ ದಡಿಗಾವಳಿಯ ವ್ಯಾಪ್ತಿಗೆ ಒಳಪಟ್ಟಿತು. ಗಂಗರ ಶ್ರೀಪುರುಷ, ಮಾರಸಿಂಹ, ಪೆರ್ಮನಡಿಗಳ್, ರಾಷ್ಟ್ರಕೂಟರ ಅಕಾಲವರ್ಷ, ಚೋಳರ ರಾಜೇಂದ್ರದೇವ, ರಾಜಾಧಿರಾಜದೇವ, ವೀರರಾಜೇಂದ್ರ, ಕುಲೋತ್ತುಂಗ ಚೋಳ, ಹೊಯ್ಸಳರ ವಿಷ್ಣುವರ್ಧನ, ಇಮ್ಮಡಿವೀರ ಬಲ್ಲಾಳ, ವೀರ ರಾಮನಾಥ, ಮುಮ್ಮಡಿ ವೀರ ಬಲ್ಲಾಳ, ವಿಜಯನಗರದ ವೀರ ಹರಿಯಪ್ಪ ಒಡೆಯ ಮುಂತಾದ ಆಳರಸರ ಆಡಳಿತದ ಕುರುಹುಗಳಾಗಿ ಶಾಸನಗಳನ್ನು ಕಾಣಬಹುದು.

ಕ್ರಿ.ಶ.೫೧೭ ರ ದುರ್ವಿನೀತನ ಮಲ್ಲೋಹಳ್ಳಿ ತಾಮ್ರಶಾಸನದಲ್ಲಿ[೮೮] ಮತ್ತು ರಾಷ್ಟ್ರಕೂಟರ ಆಳ್ವಿಕಾವಧಿಯ ಅಕಾಲವರ್ಷನ ಕ್ರಿ.ಶ.೯೦೦ ರ ಅರದೇಶನಹಳ್ಳಿ ಶಾಸನದಲ್ಲಿ[೮೯] ಪುನ್ನಾಟ-೭೦ ರ ಪ್ರಸ್ತಾಪವಿದ್ದು, ಈ ಪುನ್ನಾಟ-೭೦ ಮತ್ತು ಪೆರ್ಬ್ಬೊಳಲ್-೩೦ (ಅಂದರೆ ಹೆಬ್ಬಾಳ ೩೦ ಗ್ರಾಮಗಳ ಕೇಂದ್ರ

[೮೬] ಎ.ಕ.-೯, ದೇ.ತಾ.೨೮, ಕ್ರಿ.ಶ.೧೨೮೩, ತಮಿಳು, ಕಾರಹಳ್ಳಿ.
[೮೭] ಎ.ಕ-೯, ಹೊ.ತಾ.೧೪೭, ಕ್ರಿ.ಶ.೧೩೪೨, ಪಟ್ಟಂದೂರು.
[೮೮] ಎ.ಕ-೯, ದೊ.ತಾ.೬೭, ಕ್ರಿ.ಶ.೫೧೭, ತಾಮ್ರಶಾಸನ, ಮಲ್ಲೋಹಳ್ಳಿ
[೮೯] ಎ.ಕ-೯, ದೇ.ತಾ.೪೩, ಕ್ರಿ.ಶ.೯೦೦, ಅರದೇಶನಹಳ್ಳಿ.

ಸ್ಥಳವಾಗಿ ದೊಡ್ಡ ಪಟ್ಟಣವಾಗಿ ೮ನೇ ಶತಮಾನಕ್ಕಾಗಲೇ ಅಭಿವೃದ್ಧಿ ಶೀಲ ಪಟ್ಟಣವಾಗಿರುವುದನ್ನು ಗಂಗ ಶ್ರೀಪುರುಷನ ಶಾಸನದಿಂದ ಮನಗಣಬಹುದಾಗಿದೆ.) ಎಂಬುದು ಸಣ್ಣೆನಾಡು–೩೦೦ ರ ಒಳಗಿನ ಉಪವಿಭಾಗಗಳಾಗಿದ್ದವು.

ದಡಿಗಾವಳಿಯಾದ ವಿಕ್ರಮ ಚೋಳಮಂಡಲದ ಸಣ್ಣೆನಾಡನ್ನು ಕ್ರಿ.ಶ.೮೦೦ ರಲ್ಲಿ ಗಂಗರ ಪೆರ್ಮ್ಮನಡಿಗಳ್[೯೦], ಕ್ರಿ.ಶ ೯೦೦ ರಲ್ಲಿ ಗೋವಿಂದರನ್ನು[೯೧]. ಕ್ರಿ.ಶ.೧೦೪೩ ರಲ್ಲಿ ರಾಜ ರಾಜವೆಲನು[೯೨], ಕ್ರಿ.ಶ.೧೦೪೬ ರಲ್ಲಿ ಜಯಗೊಂಡ ಚೋಳವೇಳಾನ್[೯೩], ಕ್ರಿ.ಶ.೧೦೫೦ ರಲ್ಲಿ ರಾಜಾಧಿರಾಜದೇವನ್[೯೪], ಕ್ರಿ.ಶ.೧೦೮೦ ರಲ್ಲಿ ಅಧಿಪತಿ ಕಾಡೆನ ನಾಯಕನು[೯೫], ಸಣ್ಣೈನಾಡಿನ ಕ್ರಿ.ಶ.೧೦೬೭ ರಲ್ಲಿ ತಿಪ್ಪೂರಿನ ಒಡೆಯನಾದ ವಸವೈಯನು[೯೬] ಕ್ರಿ.ಶ.೧೧೩೩ ರಲ್ಲಿ ಆವತ್ತಿಯೂರಿನ ಒಡೆಯನಾಗಿದ್ದ ಗಂಗರ ಪೆರ್ಗಡೆಮಾಚ್ಚ ಗಾಮುಂಡನು[೯೭], ವಿಶಾಲವಾದ ಸಣ್ಣೆನಾಡನ್ನು ಉತ್ತರ ಮತ್ತು ದಕ್ಷಿಣ ವಿಭಾಗವಾಗಿ ಮಾಡಿ ಬೇರೆ ಬೇರೆ ನಾಯಕರು ಆಳುತಿದ್ದರು ಎಂಬುದಕ್ಕೆ ಕ್ರಿ.ಶ.೧೨೮೩ ರಲ್ಲಿ ಮಹಾಮಂಡಳೇಶ್ವರ ನಂಬಿದೇವನು ಉತ್ತರ ಭಾಗವನ್ನು[೯೮], ಮಹಾಸಾಮಂತಾಧಿಪತಿ ಚಿಕ್ಕಕಳಯ ನಾಯಕರು ತೆಂಕಣಭಾಗವನ್ನು[೯೯] ಪ್ರತಿಪಾದಿಸುತ್ತಿದ್ದರು. ವಿಕ್ರಮ ಚೋಳಮಂಡಲದಲ್ಲಿದ್ದ ಸಣ್ಣೆನಾಡು ಕ್ರಿ.ಶ.೧೩೯೯ ರಲ್ಲಿ ನಿಗಿರಿಲಿ ಚೋಳನಾಡಕ್ಕೆ ವರ್ಗಾವಣೆಯಾದ ಸಣ್ಣೈನಾಡಿನೊಳಗಿನ ತೆಂಕೂರುನಾಡಿನ ಅಧಿಕಾರಿಯಾದ ಕರಕಿರೈನ ದಾಮೋದರ ಶೆಟ್ಟಿಯಾರ್[೧೦೦]. ಕ್ರಿ.ಶ.೧೪೦೧ ರ ಆಳ್ವಿಕೆಯಲ್ಲಿ ಸಣ್ಣೆನಾಡಿನ ದಕ್ಷಿಣ ವಿಭಾಗದ ಕಿತ್ತೈನೂರು[೧೦೧] ಹರಿಹರರಾಯನ ವ್ಯಾಪ್ತಿಗೆ ಒಳಪಟ್ಟಿತ್ತು. ಬಹುಶಃ ಯಲಹಂಕನಾಡಿನೊಂದಿಗೆ ಸಣ್ಣೆನಾಡು ಲೀನವಾಗಿರಬೇಕು.

ಪ್ರಮುಖ ನಾಡುಗಳ ಜೊತೆಗೆ ಸಣ್ಣ ಸಣ್ಣ ನಾಡುಗಳು ಸಹ ಜಿಲ್ಲಾ ವ್ಯಾಪ್ತಿಯಲ್ಲಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಸಹ ಗಮನಿಸಬಹುದು. ಗಂಗ ಶ್ರೀ ಪುರುಷನ ಕ್ರಿ.ಶ.೭೨೦ ರ ಮಾರೇನಹಳ್ಳಿ ಶಾಸನದಲ್ಲಿ ಕೆರೆಕುನ್ದಾ ಮುನೂರು ಎಂಬ ವಿಭಾಗದ ಉಲ್ಲೇಖವಿದ್ದು, ಹೊಸಕೋಟೆ, ವರ್ತೂರು, ಯಲಹಂಕ

---

[೯೦] ಆದಪ್ಪ ಪಾಸೋಡಿ:- ಬೆಂಗಳೂರು ಪರಿಸರದ ಹೊಸ ಶಾಸನಗಳು, ಇ.ದ. ಸಂ ೩೪, ೨೦೧೯, ಪು.ಸಂ-೧೬.
[೯೧] ಎ.ಕ-೯, ದೇ.ತಾ.೪೨, ಕ್ರಿ.ಶ.೯೦೦, ಅರದೇಶನಹಳ್ಳಿ.
[೯೨] ಎ.ಕ.-೯, ಹೊ.ತಾ.೧೪೨, ಕ್ರಿ.ಶ.೧೦೪೩, ತಮಿಳು, ಕಾಡುಗೋಡಿ.
[೯೩] ಎ.ಕ-೯, ದೇ.ತಾ.೭೫, ಕ್ರಿ.ಶ.೧೦೪೬, ತಮಿಳು, ಗಂಗವಾರ.
[೯೪] ಎ.ಕ.-೯, ದೇ.ತಾ.೭೬, ಕ್ರಿ.ಶ.೧೦೫೦, ತಮಿಳು, ಗಂಗವಾರ.
[೯೫] ಎ.ಕ.-೯, ಬೆಂ.೩೨, ಕ್ರಿ.ಶ.೧೦೮೦, ಅಲ್ಲಾಳಸಂದ್ರ.
[೯೬] ಎ.ಕ -೯, ದೇ.ತಾ.೧೪, ಕ್ರಿ.ಶ.೧೦೬೭, ತಮಿಳು, ಬ್ಯಾಡರಹಳ್ಳಿ.
[೯೭] ಎ.ಕ-೯, ದೇ.ತಾ.೨೦, ಕ್ರಿ.ಶ.೧೧೩೩, ತಮಿಳು, ಆವತಿ.
[೯೮] ಎ.ಕ-೯, ದೇ.ತಾ.೨೮, ಕ್ರಿ.ಶ.೧೨೮೩, ತಮಿಳು ಕಾರಹಳ್ಳಿ.
[೯೯] ಎ.ಕ.-೯, ಬೆಂ.೪೧, ಕ್ರಿ.ಶ.೧೩೪೩, ಪಟ್ಟಂದೂರು.
[೧೦೦] ಎಮ್.ಎ.ಆರ್. ೧೯೧೧, ಪು.ಸಂ- ೫೨, ಹೊಸಕೋಟೆ ತಾಲ್ಲೂಕಿನ ಬಳಸಿಮಾಲೆ.
[೧೦೧] ಎ.ಕ-೯, ಹೊ.ತಾ.೧೧೮, ಕ್ರಿ.ಶ.೧೪೦೧, ತಮಿಳು, ಕಿತಗನೂರು.

ತಾಲ್ಲೂಕಿನ ಹಳ್ಳಿಗಳು ಸೇರಿರಬೇಕು ನೆಕ್ಕುಂದಿನಾಡು ಸಹ ಉಪ ವಿಭಾಗವಾಗಿರಬೇಕು[೧೦೨]. ಹೊಸಕೋಟೆ ತಾಲ್ಲೂಕಿನ ಕೊಂಡ್ರಹಳ್ಳಿ ಗ್ರಾಮದ ಕ್ರಿ.ಶ.೯೫೦ ರ ಶಾಸನದಲ್ಲಿ ನೆಕ್ಕುಂದಿನಾಡಿನ ಉಲ್ಲೇಖವಾಗಿದೆ[೧೦೩]. ಹೊಸಕೋಟೆ ತಾಲ್ಲೂಕಿನ ಈಗಿನ ನೆಕ್ಕುಂದಿ ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಸುತ್ತಲೂ ಅನೇಕ ಗ್ರಾಮಗಳನ್ನೊಳಗೊಂಡ ನೆಕ್ಕುಂದಿಗ್ರಾಮ ಮುಖ್ಯಪಟ್ಟಣವಾಗಿರಬೇಕು. ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ನೆಕ್ಕುಂದಿ ಎಂಬ ಗ್ರಾಮವು ಕೂಡ ಪ್ರಾಚೀನವಾದುದು ಆಗಿದ್ದರು ನೆಕ್ಕುಂದಿನಾಡಿನ ಭಾಗವಾಗಿಲ್ಲ. ನೆಲಮಂಗಲ ಸಮೀಪದಲ್ಲಿ ದಾಸರಹಳ್ಳಿಯ ಕ್ರಿ.ಶ.೭೫೦ ರ ಶಾಸನದಲ್ಲಿ[೧೦೪] ಕರಿಕಾಡು ಪ್ರಸ್ತಾಪವಿದ್ದು, ಬಿದಿರುಕಲ್ಲು ಗ್ರಾಮ ಈ ನಾಡಿನಲ್ಲಿದ್ದ ಸ್ಥಳವಾಗಿದ್ದು, (ಈಗಿನ ಯಶವಂತಪುರ ಹೋಬಳಿಯ ದೊಡ್ಡಬಿದಿರುಕಲ್ಲು ಗ್ರಾಮ) ಯಶವಂತಪುರ, ಯಲಹಂಕ ಪ್ರದೇಶಗಳನ್ನೊಳಗೊಂಡ ಪ್ರದೇಶವಿದ್ದಿರ ಬೇಕು. ಕ್ರಿ.ಶ.ಸು.೯೦೦ರ ಅರದೇಶನಹಳ್ಳಿ ಶಾಸನದಲ್ಲಿ ಕುಣುಂಗಿ ಆಯ್ನೂರು ವಿಭಾಗಗಳನ್ನು ಹೇಳಿದ್ದು, ಇದರಲ್ಲಿ ವನ್ದಿಗುನ್ದ. ನನ್ದಿಯಸ್ತಾನಗಳ[೧೦೫] ಪ್ರಾಸ್ತಪವಿದೆ. ಖಾಜಿಹೊಸಹಳ್ಳಿಯ ಶಾಸನದಲ್ಲಿ ಕೊಳಕುನ್ದಾಳ್ಕೆ ಮೂನೂರು[೧೦೬] ಎಂದು ಮೊದಲ ಬಾರಿಗೆ ಉಲ್ಲೇಖವಿದ್ದು, ನಂತರ ಈ ನಾಡಿನ ಬಗ್ಗೆ ಮಾಹಿತಿಗಳಿಲ್ಲ. ಗಂಗವಾಡಿ-೬೦೦೦ ದಲ್ಲಿ ಮಗರ ಮುನ್ನೂರು, ಪುಲಿನಾಟ್ಟು-೬೦ (ಕೋಲಾರ), ಹೊಮ್ಮಳಗನಾಡು (ಬನ್ನೇರುಘಟ್ಟ), ಬೆಂದೂರು ೧೨, ಮಾಶಂಡಿನಾಡು, ಯಮರೆನಾಡು (ಆನೇಕಲ್ಲು) ಆದರೆ ಈ ಶಾಸನಗಳ ನಂತರ ಈ ನಾಡಿನ ಉಲ್ಲೇಖಗಳು ಕಂಡು ಬಂದಿಲ್ಲ. ಅಚ್ಯುತರಾಯನ ಕಾಲದಲ್ಲಿ ಹೆಸರುಘಟ್ಟಕ್ಕೆ ಪ್ರತಿನಾಮವಾಗಿ ಸಿವನಸಮುದ್ರ ಎಂದು ನಾಮಕರಣದ ನಂತರ ಸಿವನಸಮುದ್ರವು ಯಲಹಂಕನಾಡಿನೊಳಗಿನ ಪ್ರಮುಖ ಸೀಮೆಯಾಗಿರುವದರ ಬಗ್ಗೆ ಹಲವಾರು ಶಾಸನಗಳು ಮಾಹಿತಿ ವದಗಿಸುತ್ತದೆ.

ಟಿಪ್ಪುವಿನ ಪತನದ ನಂತರ ೧೭೯೯ ರಲ್ಲಿ ಮೈಸೂರು ಸಂಸ್ಥಾನದ ಆಡಳಿತದಲ್ಲಿ ಕೋಲಾರ ಮತ್ತು ಬೆಂಗಳೂರು ಜಿಲ್ಲಾ ಪ್ರದೇಶಗಳನ್ನೊಳಗೊಂಡಂತೆ ಬೆಂಗಳೂರು ಫೌಜುದಾರಿಯನ್ನು ರೂಪಿಸಲಾಗಿತ್ತು. ಅನಂತರ ೧೮೬೩ ರಲ್ಲಿ ಕಮಿಷನರ್‌ಗಳ ಆಳ್ವಿಕೆಯಲ್ಲಿ ಹೊಸದಾಗಿ ಬೆಂಗಳೂರು ಜಿಲ್ಲೆಯನ್ನು ರೂಪಿಸಲಾಯಿತು. ೧೮ನೇ ಶತಮಾನದ ನಂತರ ಆದಂತ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳು ನಾಡುಗಳ ಮಹತ್ವವನ್ನು ತಗ್ಗಿಸಿದವು.

---

[೧೦೨] ಎ.ಕ-೯, ಹೊ.ತಾ.೮೬, ಕ್ರಿ.ಶ.೭೨೦, ಬೇಚಿರಾಖ್ ಮಾರೇನಹಳ್ಳಿ.
[೧೦೩] ಎ.ಕ-೯, ಹೊ.ತಾ.೩೭, ಕ್ರಿ.ಶ.೯೫೦, ಕೊಂಡಹಳ್ಳಿ.
[೧೦೪] ಎ.ಕ-೯, ಹೊ.ತಾ.೩೭, ಕ್ರಿ.ಶ.೯೫೦, ಕೊಂಡಹಳ್ಳಿ.
[೧೦೫] ಎ.ಕ-೯, ದೇ.ತಾ.೪೨, ಕ್ರಿ.ಶ.೯೦೦, ಅರದೇಶನಹಳ್ಳಿ.
[೧೦೬] ಎ.ಕ-೯, ಅನುಬಂಧ, ಹೊ.ತಾ.೧೮೫, ಖಾಜಿಹೊಸಹಳ್ಳಿ.

## ಪುರಾತತ್ವ ನೆಲೆಗಳು

ಅರ್ಕಾವತಿ, ದಕ್ಷಿಣ ಪಿನಾಕಿನಿ, ವೃಷಭಾವತಿ, ಕಣ್ವ, ಕುಮುದ್ವತಿ ನದಿಗಳ ಉಗಮದಿಂದಾಗಿ ಬಹುಶಃ ಬೆಂಗಳೂರು ಪರಿಸರದಲ್ಲಿ ಹಲವು ಸಂಸ್ಕೃತಿಗಳು ಉಗಮಕ್ಕೆ ಕಾರಣವಾಗಿದೆ. ಅರ್ಕಾವತಿ, ದಕ್ಷಿಣ ಪಿನಾಕಿನಿ ನದಿಗಳು ನಂದಿ ಬೆಟ್ಟದ ತಪ್ಪಲಿನಲ್ಲಿ ಉಗಮಗೊಂಡು, ವಿರುದ್ಧ ದಿಕ್ಕಿನಲ್ಲಿ ಸಂಚರಿಸುತ್ತದೆ. ದಕ್ಷಿಣ ಪಿನಾಕಿನಿ ನದಿಯ ವಿಶಾಲವಾದ ಮೈದಾನದಂತಿರುವ ಪ್ರದೇಶಗಳಲ್ಲಿ ಹಾಗೂ ಅರ್ಕಾವತಿ ನದಿ ತಾನು ಸಾಗುವ ೧೫೦ ಕಿ.ಮೀ. ಉದ್ದಕ್ಕೂ ಬೆಟ್ಟ ಗುಡ್ಡಗಳುಳ್ಳ ಕಣಿವೆ ಪ್ರದೇಶಗಳಲ್ಲಿ ಪ್ರಾಗೈತಿಹಾಸಿಕ ಸಂಸ್ಕೃತಿಯ ಭಿನ್ನ ರೂಪಗಳ ಲಕ್ಷಣಗಳನ್ನು ದೊರೆತ ಅವಶೇಷಗಳಿಂದ ಗುರುತಿಸಬಹುದು. ದಕ್ಷಿಣ ಪಿನಾಕಿನ ನದಿ ದಂಡೆಯ ಜಡಿಗೇನಹಳ್ಳಿಯಲ್ಲಿ ಮಣ್ಣಿನ ಪೆಟ್ಟಿಗೆ, ಅರ್ಕಾವತಿ ಕಣಿವೆಯಲ್ಲಿ ಇಟ್ಟಿಗೆ ಬೈಲು, ತರಬನಹಳ್ಳಿಯ ಕಾವಿಲೇಪನದಡಿ ಬಿಳಿ ಚಿತ್ರಗಳುಳ್ಳ ಮಡಕೆಗಳು ಹೀಗೆ ಈ ಎರಡು ನದಿಗಳ ಕಣಿವೆ ಪ್ರದೇಶದಲ್ಲಿ ಎರಡು ಭಿನ್ನ ಶೈಲಿ ಸಂಸ್ಕೃತಿಗಳು ಬೆಳೆದವು. ಈ ನದಿಗಳ ಬಯಲುಗಳಲ್ಲಿ ಕೆಂಪು ಅಲ್ಲಲ್ಲಿ ಕಪ್ಪು ಮಣ್ಣಿನ ಪ್ರದೇಶಗಳ ಫಲವತ್ತಾದ ಭೂಮಿಗಳಲ್ಲಿ ಉಳುಮೆ ಮಾಡಿಕೊಂಡು ಸಮೃದ್ಧವಾದ ಜೀವನ ನಡೆಸಿರುವ ಸಾಧ್ಯತೆಗಳನ್ನು ನದಿಗಳ ದಂಡೆಗಳಲ್ಲಿ ದೊರೆತಿರುವ ಮಣ್ಣಿನಿಂದ ಮಾಡಿದ ಮಡಿಕೆಗಳು, ಕಬ್ಬಿಣ ಲೋಹಗಳಾಧಾರದಿಂದ ತಿಳಿಯಬಹುದು.

ಐತಿಹಾಸಿಕ ಅಥವಾ ಪ್ರಾಗ್ ಐತಿಹಾಸಿಕ ಕಾಲವನ್ನು ೩ ರೀತಿಯಲ್ಲಿ ವಿಂಗಡಿಸಲಾಗಿದೆ.

೧.ಆದಿ ಶಿಲಾಯುಗ – ಪೇಲಿಯೋ ಲಿಥಿಕ್ ಏಜ್ (ಕ್ರಿ.ಪೂ ೫ ಲಕ್ಷಗಳಿಂದ ಕ್ರಿ.ಪೂ ೧೦೦೦೦)

೨.ಸೂಕ್ಷ್ಮ ಶಿಲಾಯುಗ – ಮೈಕ್ರೋಲಿಥಿಕ್ ಏಜ್ (ಕ್ರಿ.ಪೂ.೧೦೦೦೦ ದಿಂದ ೩೦೦೦)

೩.ನವಶಿಲಾಯುಗ – ನಿಯೋಲಿಥಿಕ್ ಏಜ್, (ಕ್ರಿ.ಪೂ.೨೫೦೦ ವರ್ಷಗಳ ಹಿಂದೆ ಅಸ್ತಿತ್ವದಲ್ಲಿತ್ತು) ಮತ್ತೆ ನವ ಶಿಲಾಯುಗವನ್ನು ಎರಡು ಭಾಗವಾಗಿ ಮಾಡಲಾಗುತ್ತದೆ.

೧. ಶಿಲಾತಾಮ್ರಯುಗ – ಚಾಕೋಲಿಥಿನ್ ಏಜ್

೨ ಬೃಹತ್ ಶಿಲಾಯುಗ (ಕಬ್ಬಿಣದ ಯುಗ) – ಮೆಗಾಲಿಥಿಕ್ ಏಜ್ / ಐರನ್ ಏಜ್ (ಕ್ರಿ.ಪೂ ೧೨೦೦ ರಿಂದ ಕ್ರಿ,ಪೂ ೩ನೇ ಶತಮಾನದ ವರೆಗೆ)

ಭೌಗೋಳಿಕವಾಗಿ ಅನೇಕ ಬೆಟ್ಟ ಗುಡ್ಡಗಳಿಂದ ಕೂಡಿರುವ ಈ ಪರಿಸರದಲ್ಲಿ ಜೀವನ ಕ್ರಮದಲ್ಲಿ ಕಪ್ಪು ಶಿಲೆಯಲ್ಲಿ ನಯಗೊಳಿಸಿದ ಕೊಡಲಿಗಳನ್ನು ಮತ್ತು ಲೋಹಗಳಲ್ಲಿಯೇ ಹೆಚ್ಚು ಗಟ್ಟಿ ಹಾಗೂ ಹೇರಳವಾಗಿ ಸಿಗುವ ಕಬ್ಬಿಣ ಲೋಹವನ್ನು ಕಂಡು ಕೊಂಡು ಅದನ್ನು ಕೃಷಿಗೆ ಬಳಸಿಕೊಂಡು ಭೂಮಿಯ ಉಳುಮೆಗೆ ಹೆಚ್ಚಿನ ಬಲ, ಸಹಾಯ ದೊರೆತಂತಾಯಿತು. ಜೊತೆಗೆ ಮರ ಅಥವಾ

ಮೂಳೆಗಳನ್ನು ಬಳಸಿಕೊಂಡು ದಟ್ಟ ಅರಣ್ಯಗಳಿರುವ ಮರಗಳನ್ನು ಕಡಿದು ಕೃಷಿಗೆ ಯೋಗ್ಯವಾದ ಭೂಮಿಯನ್ನಾಗಿ ಮಾಡಿ, ದವಸ ಧಾನ್ಯಗಳನ್ನು ಬೆಳೆಯುವ ಕಸುಬನ್ನು ಹಾಗೆಯೇ ಕುಂಬಾರಿಕೆ, ಲೋಹಗಾರಿಕೆ, ಕಮ್ಮಾರಿಕೆ ಎಂಬ ಕೃಷಿಯೇತರ ಚಟುವಟಿಕೆಗಳನ್ನು ಅನುಸರಿಸುವ ನವಶಿಲಾಯುಗದ ಸಂಸ್ಕೃತಿಯು ಬೆಂಗಳೂರು ಪರಿಸರದಲ್ಲಿ ಪ್ರಚಲಿತದಲ್ಲಿತ್ತು ಎಂಬುದಕ್ಕೆ ಮರದ ಅಥವಾ ಮೂಳೆಗಳ ಹಿಡಿಕೆಗಳನ್ನು ಬಳಸಿ ಮಾಡಿದ ಚಿಕ್ಕ ಗಾತ್ರದ ಶಿಲಾಯುಧಗಳು ರೇಸ್ ಕೋರ್ಸ್ ನಿವೇಶನದಲ್ಲಿ, ಹೆಚ್.ಎ.ಎಲ್ ಬಯಲಿನಲ್ಲಿ, ಜಾಲಹಳ್ಳಿಯಲ್ಲೂ ಹಾಗೂ ಸರ್ಜಾಪುರ ರಸ್ತೆಯ ಸಮೀಪದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿದೆ.

ನೈಸರ್ಗಿಕ ಗುಹೆಗಳಲ್ಲಿ ವಾಸ ಮಾಡುತ್ತಾ ಅರಣ್ಯಗಳಲ್ಲಿ ಬೇಟೆಯೊಂದಿಗೆ ಆಹಾರ ಸಂಗ್ರಹಿಸುವ ಪದ್ಧತಿಯನ್ನು ಅನುಸರಿಸುತ್ತಾ ಅಲೆಮಾರಿ ಜೀವನ ನಡೆಸುವ ಮಾನವರ ಸೂಕ್ಷ್ಮ ಶಿಲಾಯುಗ ಸಂಸ್ಕ್ರತಿಯ ನೆಲೆಗಳ ಅವಶೇಷಗಳನ್ನು ಬಸವನಗುಡಿ ಸೂಡಸಂದ್ರ, ಸಿದ್ದಾಪುರ, ಸರ್ಜಾಪುರ ರಸ್ತೆ, ರಾಗಿಗುಡ್ಡ, ಜಾಲಹಳ್ಳಿ, ದೇವನಹಳ್ಳಿ ಇತ್ಯಾದಿ ಪ್ರದೇಶಗಳಲ್ಲಿ ದೊರೆತ ವರದಿಗಳಿಂದ ಗಮನಿಸ ಬಹುದು.

ಆದಿ ಮಾನವರ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಮಾನವರು ಬಿಟ್ಟುಹೋದ ಹಲವಾರು ಅವಶೇಷಗಳಾದ ವಿವಿಧ ರೀತಿಯಲ್ಲಿ ನಿರ್ಮಿಸುತ್ತಿದ್ದ ಸಮಾಧಿಗಳು, (ಕಲ್ಗುಪ್ಪೆ, ಶಿಲಾವೃತ್ತ, ಕಲ್ಮನೆ, ಹಾದಿಕೋಣೆ, ರಂಧ್ರಕೋಣೆ, ಚಪ್ಪಡಿ ಮನೆಗಳು, ಸ್ವಸ್ತಿಕ್ ಆಕಾರದ ಗೋರಿಗಳು), ಸಮಾಧಿಗಳಿಗೆ ಬೃಹತ್ ಗಾತ್ರದ ಕಲ್ಲು ಚಪ್ಪಡಿಗಳನ್ನು ಬಳಸುತ್ತಿದ್ದರಿಂದ ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯುವ ಕಾಲದಲ್ಲಿ ಬೃಹತ್ ಶಿಲಾ ಸಮಾಧಿಗಳೇ ಪ್ರಧಾನವಾಗಿ ಹಾಗೂ ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣದ ಬಳಕೆ ಕಂಡು ಬರುವುದರಿಂದ ಕಬ್ಬಿಣ ಯುಗ ಸಂಸ್ಕೃತಿ ಸಹ ಎನ್ನಲಾಗುತ್ತದೆ. ಸಮಾಧಿಗಳಲ್ಲಿನ ಮಡಕೆಗಳು (ಕೆಂಪು, ಕಪ್ಪು ಮಿಶ್ರಿತ), ಧಾನ್ಯಗಳು, ಕಲ್ಲಿನ ಪಾತ್ರೆ, ಪ್ರಾಣಿಗಳ ಮೂಳೆಗಳ, ಕಲ್ಲಿನ, ಕಬ್ಬಿಣದ ಆಯುಧಗಳು, ರೇಖಾ ಚಿತ್ರಗಳು (ವಿವಿಧ ಪ್ರಾಣಿಗಳು), ನಿಲುಸುಗಲ್ಲುಗಳು, ಶವ ಸಂಸ್ಕಾರಕ್ಕೆ ಕಲ್ಗೋರಿ, ದೊಡ್ಡಗಾತ್ರದ ಮಡಕೆಗಳ ಇತ್ಯಾದಿ ರಚನೆಗಳ ಬಳಕೆ ಸತ್ತವರು ಅಂತ್ಯ ಸಂಸ್ಕಾರವನ್ನು ವಿಧಿವತ್ತಾಗಿ ಮತ್ತು ಅದ್ದೂರಿಯಾಗಿ ನೆರವೇರಿಸುತ್ತಿದ್ದ ಜನರ ಆರ್ಥಿಕ, ಸಾಮಾಜಿಕ, ಧಾರ್ಮಿಕ, ನಂಬಿಕೆಗಳ ಕುರುಹುಗಳಾಗಿ ಉಳಿದಿರುವ ಸಾಕ್ಷಿಯಾಗಿದೆ. ಆನಂತರ ವಾಸಸ್ಥಳವನ್ನು ವಸತಿ ನೆಲೆಯೆಂದು, ಶವ ಸಂಸ್ಕಾರದ ತಾಣಗಳನ್ನು ಸಮಾಧಿನೆಲೆಗಳೆಂದು ಗುರುತಿಸಲಾಗಿದೆ.

ತಾವರೆಕೆರೆ ಪರಿಸರದ ಕೆಂಪೊಗೊಂಡನಹಳ್ಳಿಯ ಇಲಿಗರೆಂಬ ಸಮುದಾಯದವರು ಶವಗಳನ್ನು ಹೂಳುವುದಾಗಲಿ ಅಥವಾ ಸುಡುವುದಾಗಲಿ ಮಾಡದೆ ಬೆಟ್ಟ ಬಂಡೆಗಳಲ್ಲಿ ಇರಿಸುತ್ತಾರೆ. ವನ್ಯ ಪ್ರಾಣಿಗಳ

ಆಹಾರವಾದ ನಂತರ ನಿಗಧಿತ ದಿನದಂದು ಆ ಭಾಗಕ್ಕೆ ಹೋಗಿ ಶವದ ಕಳೆಬರಹಗಳನ್ನು ಕಲೆಹಾಕಿ ಅನಂತರ ಹೂತಿಡುತ್ತಾರೆ. ಇಂತಹ ಕಲ್ಲು ಸೇವೆ ಪದ್ದತಿ ಇಂದಿಗೂ ಪ್ರಚಲಿತದಲ್ಲಿದೆ. ಪ್ರಾಚೀನ ಕಾಲದ ಶವ ಸಂಸ್ಕಾರದ ಪದ್ದತಿ ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ಗಮನಿಸಬಹುದು.

ಬಾಣಸವಾಡಿಯ, ಕಣ್ಣೂರು, ಜಾಲಹಳ್ಳಿ, ಭೈರಸಂದ್ರ, ಬೇಗೂರು, ಚಿಕ್ಕಜಾಲ, ದೊಡ್ಡಜಾಲ, ಬೆಳ್ಳಂದೂರು, ಹುಳಿಮಾವು, ಬನ್ನೆರುಘಟ್ಟ, ಚೌಡಸಂದ್ರ, ಬೂದಿಹೊಲ, ಜಡಿಗೇನಹಳ್ಳಿ, ಇತ್ಯಾದಿ ಸ್ಥಳಗಳಲ್ಲಿ ಶಿಲಾಗೋರಿಗಳು ಅಧಿಕ ಸಂಖ್ಯೆಯಲ್ಲಿ ಪತ್ತೆಯಾಗಿವೆ. ಜಡಿಗೇನಹಳ್ಳಿಯಲ್ಲಿ ದೊರೆತಿರುವ ಭತ್ತದ ಹೊಟ್ಟಿನಿಂದ ದೃಢಪಡುತ್ತದೆ. ಬೆಳ್ಳಂದುರುವಿನಲ್ಲಿ ಕೆಂಪು, ಕಪ್ಪು ಮಿಶ್ರಿತ ಮಡಕೆ, ಕಪ್ಪು ಬಣ್ಣಗಳ ಅಧಿಕವಾಗಿ ನಯ ಮಾಡಲ್ಪಟ್ಟ ಮಡಕೆ ಚೂರುಗಳು ಮದ್ರಾಸ್ ವಸ್ತು ಸಂಗ್ರಹಾಲಯದಲ್ಲಿದೆ.

ತರಬನಹಳ್ಳಿ, ಆನೇಕಲ್, ಸಾವನದುರ್ಗ, ಲಾಲ್ ಬಾಗ್ ಇತ್ಯಾದಿ ಕಡೆಗಳಲ್ಲಿ ಇತಿಹಾಸ ಆರಂಭ ಕಾಲದ ಅವಶೇಷಗಳು, ಪುರಾತನ ಮಡಕೆಗಳು, ಯಶವಂತಪುರ ರೈಲ್ವೆ ನಿರ್ಮಾಣ ಕಾರ್ಯದ ವೇಳೆಯಲ್ಲಿ, ಹೆಚ್.ಎ.ಎಲ್. ವಿಮಾನ ನಿಲ್ದಾಣದ ರನ್ ವೇ ನಿರ್ಮಾಣದ ವೇಳೆಯಲ್ಲಿ ರೋಮನ್ ಸಾಮ್ರಾಜ್ಯದ ಅರಸರಾದ ಆಗಸ್ಟನ್ (ಕ್ರಿ.ಪೂ. ೨೯ ರಿಂದ ೧೪) ಮತ್ತು ಟೈಬಿರಿಯಸ್ (ಕ್ರಿ.ಶ.೧೪ ರಿಂದ ೨೭) ಅವರ ಕಾಲದ ರೋಮನ್ ನಾಣ್ಯಗಳು ದೊರೆತಿದೆ. ನಂದಿ, ತರಬನಹಳ್ಳಿ, ಲಾಲ್ ಬಾಗ್ ಹತ್ತಿರದ ಸಿದ್ದಾಪುರ, ಬೆಳ್ಳಂದೂರು, ಆನೇಕಲ್ಲು, ಇಟ್ಟಿಗೆಬೈಲು (ಮಾಗಡಿ) ಇತ್ಯಾದಿ ನಗರಗಳು ವೃದ್ಧಿಸಿದಂತೆ ವ್ಯಾಪಾರ-ವಾಣಿಜ್ಯಗಳು ವೃದ್ಧಿಯಾಗುತ್ತಾ ಹೊರ ದೇಶದ ರೋಮನ್ನರ ಸಂಪರ್ಕವನ್ನು ವಾಣಿಜ್ಯ ಚಟುಚಟಿಕೆಗಳನ್ನು ಹೊಂದಿದ್ದರು ಎಂಬುದಕ್ಕೆ ದೊರಕಿರುವ ರೋಮನ್ ನಾಣ್ಯಗಳು ಕುರುಹುಗಳಾಗಿವೆ. ತರಬನಹಳ್ಳಿಯಲ್ಲಿ ದೊರೆತ ಕಾವಿ ಲೇಪನದಡಿ ಬಿಳಿಚಿತ್ರಗಳುಳ್ಳ ಮಡಕೆಗಳನ್ನು ಕೂಡ ದಕ್ಷಿಣ ಭಾರತದ ಇತಿಹಾಸ ಆರಂಭ ಕಾಲದ ಅನೇಕ ಪ್ರಾಚೀನ ನೆಲೆಗಳ ಶೋಧನೆಯಾಯಿತು ವಿಶಿಷ್ಟ ಮಡಕೆಯ ರಚನೆಗಳಾಯಿತು[೧೦೭].

ಬೆಂಗಳೂರು ಪರಿಸರದಲ್ಲಿ ಕಬ್ಬಿಣಯುಗ ಸಂಸ್ಕೃತಿಯ ಕಲ್ಗೋರಿ, ಮಡಕೆ, ಮಣ್ಣಿನ ಶವ ಪೆಟ್ಟಿಗೆಗಳು ಹಾಗೂ ಕಬ್ಬಿಣದಲ್ಲಿ ಮಾಡಲಾದ ವಿವಿಧ ಉಪಕರಣಗಳು ಮತ್ತು ಧಾನ್ಯಗಳನ್ನು ಶೇಕರಿಸಿಡುವ ದೊಡ್ಡ ಗಾತ್ರದ ಹಲವಾರು ಮಡಕೆಗಳ ತಯಾರುವಿಕೆಗಳು ಕೃಷಿ ಉತ್ಪಾದನೆಯ ಬಗ್ಗೆ ಬೆಳಕು ಚೆಲ್ಲುತ್ತದೆ. ಬೃಹತ್ ಶಿಲಾ ಸಮಾಧಿಯಲ್ಲಿ ಪುನರ್ ಜನ್ಮದ ಕಲ್ಪನೆಯುಳ್ಳ ಅಂಶವನ್ನು ಸಮಾಧಿಗಳನ್ನು ಪರೀಕ್ಷಿಸಿದಾಗ ಗೋಚರವಾಗುತ್ತದೆ. ಕಲ್ಗೋರಿಗಳು ಅನೇಕ ವಿಧಗಳಲ್ಲಿ

[೧೦೭] ಡಾ.ಪಿ.ಎನ್.ನರಸಿಂಹಮೂರ್ತಿ:- ಇತಿಹಾಸ ಪೂರ್ವದ ಬೆಂಗಳೂರು, ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ. ಪು.ಸಂ-೩೭, ೩೪.

ರಚನೆಯಾಗಿದ್ದು, ಅವುಗಳಲ್ಲಿ ಮಣ್ಣಿನ ಪಾತ್ರೆಗಳು, ಆಭರಣಗಳು, ಆಯುಧಗಳು, ರಾಗಿ ಕಾಳುಗಳು, ಮಣ್ಣಿನ ಮಡಕೆಗಳು ಸಹ ದೊರೆತಿದೆ.

ಅವಿಭಾಜಿತ ಬೆಂಗಳೂರು ಪರಿಸರದಲ್ಲಿ ಶೋಧನಾ ಕಾರ್ಯವು ೧೭೯೧ ರಲ್ಲಿ ಬ್ರಿಟಿಷರು ಬೆಂಗಳೂರನ್ನು ವಶಪಡಿಸಿಕೊಂಡ ನಂತರ ೧೮೦೦ ರ ಸುಮಾರಿಗೆ ವಿದ್ವಾಂಸರಾದ ಕಾಲೀನ್ ಮೆಕೆಂಜೆಯವರ ಮೈಸೂರು ರಾಜ್ಯ ಭೂ ಸರ್ವೇಕಾರ್ಯದಿಂದಾಗಿ ನಾಡಿನಾದ್ಯಂತ ಚರಿತ್ರೆಯ ದಾಖಲೆಗಳನ್ನು ಸಂಗ್ರಹಿಸಿದರು. ಬೆಂಗಳೂರು ಪರಿಸರದಲ್ಲಿ ಪ್ರಾಚೀನ ಆದಿ ಮಾನವನ ಅವಶೇಷಗಳ ಶೋಧನೆಯ ಕಾರ್ಯ ೧೮೩೦ರ ದಶಕದಿಂದ ಪ್ರಾರಂಭಗೊಂಡಿದ್ದು, ಕರ್ನಲ್ ಮಾರ್ಕ್ ವಿಲ್ಕ್ಸ್ ರವರು Historical sketches of the south India – In an Attempt to trace the History of Mysore from the origin of the Hindoo Govrnment of that state to the Extinction of the Mohammedan Dynasty in ೧೭೯೯ ಮತ್ತು ಪ್ರಾನ್ಸಿಸ್ ಬುಕಾನನ್‌ರವರು ರಚಿಸಿದ ಸಂಪುಟಗಳ ಬೃಹತ್ ವರದಿಗಳಾದ A Journey from Madras through the countries of Mysore, canara, malbar ೧೮೦೭, ಎಂಬುದು ಬೆಂಗಳೂರು ಪರಿಸರ ಕುರಿತಾದ ಭೌಗೋಳಿಕ ಮಾಹಿತಿ ಒಳಗೊಂಡ ಲೇಖನ ಪ್ರಥಮ ಬಾರಿಗೆ ಪ್ರಕಟಗೊಂಡಿದ್ದು, ಕ್ರಿ.ಶ.೧೮೩೯ ರ ಅವಧಿಯಲ್ಲಿ ಜಾನ್ ಕ್ಲಾರ್ಕ್ ಎಂಬ ವಿದ್ವಾಂಸ “Geology of Bangalore and some Portions of Mysore“ಎಂಬ ಲೇಖನವನ್ನು ಮದ್ರಾಸ್ ನಿಂದ ಪ್ರಕಟಗೊಳ್ಳುತ್ತಿದ್ದ ವಿದ್ವತ್ ಪತ್ರಿಕೆಯಲ್ಲಿ ಪ್ರಕಟಿಸಿದ ಲೇಖನದಲ್ಲಿ ಬೆಂಗಳೂರು ಸುತ್ತಮುತ್ತಲಿನ ಪ್ರದೇಶದ ಪ್ರಾಗೈತಿಹಾಸಿಕ ವಿಷಯಗಳಿಗೆ ಸಂಬಂಧಿಸಿದ ಪೂರಕವಾದ ಮಾಹಿತಿಗಳನ್ನು ಒಳಗೊಂಡಿದೆ. ನಂತರ ಬ್ರಿಟಿಷ್ ಅಧಿಕಾರಿಯಾಗಿದ್ದ ರಾಬರ್ಟ್ ಕೊಲ್‌ರವರು ಚಿಕ್ಕ ಜಾಲದ ಬೆಟ್ಟದ ಬಂಡೆಯಲ್ಲಿರುವ ಕಬ್ಬಿಣಯುಗದ ಶಿಲಾ ಸಮಾಧಿಗಳ ಮಾಹಿತಿಯನ್ನು ಒಳಗೊಂಡ ಲೇಖನವನ್ನು ಇಂಡಿಯನ್ ಆಂಟಿಕ್ವೆರಿ ನಿಯತಕಾಲಿಕೆಯ ೨ನೇ ಸಂಪುಟದಲ್ಲಿ ಪ್ರಕಟಿಸಿದ್ದ ಲೇಖನವು ಬೆಂಗಳೂರು ಪರಿಸರದ ಪ್ರಾಗೈತಿಹಾಸಿಕ ಅವಶೇಷಗಳನ್ನು ಉಲ್ಲೇಖಿಸಿದ ಪ್ರಥಮ ಪ್ರಕಟಣೆಯಾಗಿದೆ. ಬಿ.ಎಲ್. ರೈಸ್ ರವರ ಮಾರ್ಗದರ್ಶನದಲ್ಲಿ ಮೈಸೂರು ರಾಜ್ಯದಲ್ಲಿ ಪುರಾತತ್ವ ಇಲಾಖೆಯು ೧೮೮೫ ರಲ್ಲಿ ಅಸ್ತಿತ್ವದಲ್ಲಿ ಬಂದ ನಂತರ ೧೮೯೧ರಲ್ಲಿ ಯಶವಂತಪುರದಲ್ಲಿ ರೋಮನ್ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಹಳೆಯ ನಾಣ್ಯಗಳಿರುವ ಒಂದು ಕುಡಿಕೆ ಪತ್ತೆಯಾಯಿತು. ೧೮೬೫ರಲ್ಲಿ ಹೆಚ್.ಎ.ಎಲ್ ನ ವಿಮಾನ ನಿಲ್ದಾಣದ ನೂತನ ರನ್ ವೇ ಕಾಮಗಾರಿಯಲ್ಲಿ ಕೆಂಪು ವರ್ಣದ ದೊಡ್ಡ ಮಡಕೆಯಲ್ಲಿ ದೊರೆಕಿರುವ ಸು.೨೫೬ ರೋಮನ್

ನಾಣ್ಯಗಳು ಕ್ರಿ.ಶ.೧ನೇ ಶತಮಾನದ ರೋಮನ್ ಚಕ್ರವರ್ತಿಗಳಾದ ಆಗಸ್ಟಸ್ ಹಾಗೂ ಟೈಬಿರಿಯಸ್ ಅವರ ಆಳ್ವಿಕೆಯ ನಾಣ್ಯಗಳು ಬೆಂಗಳೂರು ಪರಿಸರದ ಪ್ರಾಮುಖ್ಯತೆಯನ್ನು ಇಮ್ಮಡಿಗೊಳಿಸಿದವು. ಈ ನಾಣ್ಯಗಳ ಜೊತೆಗೆ ಕಾವಿಲೇಪಿತ ಬಿಳಿ ಚಿತ್ರವುಳ್ಳ ಮಡಕೆ ದೊರೆಕಿದ್ದು. ಬಿ.ಎಲ್. ರೈಸ್ ರವರು ಪ್ರಕಟಿಸಿದ ಎಲ್ಲಾ ವರದಿಗಳನ್ನು ಪ್ರೊ.ಜಿ. ಸುಂದರ ೧೯೮೯ರಲ್ಲಿ ಸಂಪಾದಿಸಿದ ಗ್ರಂಥದ ಮುನ್ನುಡಿಯಲ್ಲಿ ವಿವರಿಸಿದ್ದಾರೆ.

೧೯೦೯ ರಲ್ಲಿ ಮಿಥಿಕ್ ಸೊಸೈಟಿ ಸ್ಥಾಪನೆಯೊಂದಿಗೆ ಬೆಂಗಳೂರು ಪರಿಸರದಲ್ಲಿ ಪುರಾತತ್ವ ಅಧ್ಯಯನಗಳಗೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು. ೧೯೧೦ ರಲ್ಲಿ ಆರ್.ನರಸಿಂಹಾಚಾರ್ ಮೈಸೂರು ಪುರಾತತ್ವ ಇಲಾಖೆಯ ಮುಖ್ಯಸ್ಥರಾದ ಮೇಲೆ ೧೯೧೫ ರಲ್ಲಿ ಬೆಂಗಳೂರಿನ ನೈರುತ್ಯಕ್ಕಿರುವ ಬೆಳ್ಳಂದೂರಿನಲ್ಲಿ ಪೂರ್ಣ ಪ್ರಮಾಣದ ಉತ್ಖನನಗಳನ್ನು ಕೈಗೊಂಡು ಪ್ರಾಗೈತಿಹಾಸಿಕ ಶಿಲಾಗೋರಿಯ ನಿರ್ಮಾಣದ ವಿಧಾನ ಮತ್ತು ಅವುಗಳಲ್ಲಿ ದೊರೆತ ವಿವಿಧ ರೀತಿಯ ಮಡಕೆಗಳು ಹಾಗೂ ಇತರ ಅವಶೇಷಗಳ ಕುರಿತಾದ ಒಂದು ಚಿಕ್ಕ ಟಿಪ್ಪಣಿಯನ್ನು ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದರು.

ಆರ್.ನರಸಿಂಹಾಚಾರ್ ಅಧಿಕಾರಾವಧಿಯ ಎಂ.ಹೆಚ್.ಕೃಷ್ಣರವರು ಮೈಸೂರು ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿದರು ೧೯೩೨ ರಲ್ಲಿ ಬೆಂಗಳೂರಿನ ಲಾಲ್ ಬಾಗ್ ಆವರಣಕ್ಕೆ ಹೊಂದಿಕೊಂಡಂತಿರುವ ಬಯಲಿನಲ್ಲಿ ಶೋಧಿಸಲಾದ ಬೃಹತ್ ಶಿಲಾ ಸಂಸ್ಕೃತಿಯ ಗೋರಿಗಳನ್ನು, ೧೯೪೫ರಲ್ಲಿ ಡಿ.ಹೆಚ್. ಗೊರ್ಡಾನ್ ಎಂಬುವರು ಸರ್ಜಾಪುರ, ಹೆಚ್.ಎ.ಎಲ್. ಕಾರ್ಖಾನೆ ಸಮೀಪದಲ್ಲಿ ಸೂಕ್ಷ್ಮ ಶಿಲಾಯುಗಕ್ಕೆ ಸೇರಿದ ಎರಡು ಪ್ರತ್ಯೇಕ ನೆಲೆಗಳನ್ನು, ೧೯೪೮ರಲ್ಲಿ ಮ್ಯಾನ್ ಎಂಬ ಅಂತರಾಷ್ಟ್ರೀಯ ನಿಯತಕಾಲಿಕೆಯಲ್ಲಿ ಜಾಲಹಳ್ಳಿ ಗ್ರಾಮದ ಬಳಿಯ ಬೆಟ್ಟಗಳ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗದ ಆಯುಧಗಳನ್ನು ಕೆ.ಆರ್.ಯು.ಟಾಡ್‌ರವರು ಶೋಧಿಸಿ ಪ್ರಕಟಿಸಿದರು. ಹೀಗೆ ಜಾಲಹಳ್ಳಿ ಶೋಧಿಸಿದ ಶಿಲಾಯುಧಗಳು, ಮಡಕೆ ಚೂರುಗಳು ಇಂಗ್ಲೇಡಿನ ಬ್ರಿಟೀಷ್ ಮ್ಯೂಸಿಯಂ ಸಂಗ್ರಹಾಲಯದಲ್ಲಿ ಇಲ್ಲಿರುವ ಅವಶೇಷಗಳನ್ನು ೧೯೫೬ರಲ್ಲಿ ಇಲಾಖೆಯ ಮುಖ್ಯಸ್ಥರಾದ ಎಂ.ಶೇಷಾದ್ರಿಯವರು ಅಧ್ಯಯನ ಮಾಡಿದ ವಿವರಗಳನ್ನು ಪ್ರಕಟಿಸಿದರು.

೧೯೭೫ ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು mid southern cirtcle ಹೆಸರಿನ ತನ್ನ ನೂತನ ವಲಯದ ಕೇಂದ್ರವನ್ನು ಬೆಂಗಳೂರಿನಲ್ಲಿ ಸ್ಥಾಪನೆ ಮಾಡಿತು. ೧೯೭೫ರಲ್ಲಿ ಎಸ್.ಆರ್.ರಾವ್ ರವರ ಜೊತೆಗೂಡಿ ಕೆ.ಪಿ.ಪೂಣಚ್ಚ ಅವರು ದೇವನಹಳ್ಳಿ ಬಳಿ ಸೂಕ್ಷ್ಮ ಶಿಲಾಯುಗದ ಆಯುಧಗಳನ್ನು ಶೋಧಿಸಿದರು. ೧೯೭೯ ರಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಎಂ.ವಿ.ವಿಶ್ವೇಶ್ವರರವರು

ಆನೇಕಲ್ ತಾಲ್ಲೂಕಿನ ಮುತ್ಯಾಲಮುಡು ಪ್ರದೇಶದಲ್ಲಿ ನವಶಿಲಾಯುಗದ ಆಯುಧಗಳನ್ನು ಶೋಧಿಸಿದರು[೧೦೮].

೧೯೮೩ ರಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿ ಸ್ಥಾಪನೆಯಿಂದಾಗಿ ಬೆಂಗಳೂರು ಪರಿಸರದಲ್ಲಿ ಹೆಚ್ಚಿನದಾಗಿ ಹಿರಿಯ ಸಂಶೋಧಕರಿಂದ ಕಿರಿಯ ಸಂಶೋಧಕರು ಹಲವಾರು ಪುರಾತನ ನೆಲೆಗಳನ್ನು ಶೋಧಿಸಿದ್ದರು. ದೇವರ ಕೊಂಡಾರೆಡ್ಡಿಯವರು (೧೯೯೩), ಹೆಚ್.ಎಸ್.ಗೋಪಾಲ್ ರಾವ್ (೧೯೯೪), ಎಂ.ಜಿ. ಮುಂಜುನಾಥ್ (೧೯೯೭, ೧೯೯೮), ಲೋಕೇಶ್ (೧೯೯೯), ಸಾಸಲು (೧೯೯೯, ೨೦೦೩), ಜಯರಾಮಯ್ಯ, (೧೯೯೮), ಎಂ.ಭೈರೇಗೌಡ, (೨೦೦೨) ಸ್ಮಿತಾರೆಡ್ಡಿ (೨೦೧೦) ಮುಂತಾದ ಸಂಶೋಧಕರು ಅರ್ಕಾವತಿ ನದಿ ಕಣಿವೆಯ ಪ್ರದೇಶದಲ್ಲಿ ಶಿಲಾಗೋರಿಗಳನ್ನು, ನಿಲುವುಗಳನ್ನು ಶೋಧಿಸಿರುವುದನ್ನು ಇತಿಹಾಸ ದರ್ಶನ ಸಂಪುಟದ ವಾರ್ಷಿಕ ವರದಿಯಲ್ಲಿ ಲೇಖನ ರೂಪದಲ್ಲಿ ಪ್ರಕಟಗೊಂಡಿರುವುದನ್ನು ಕಾಣ ಬಹುದು.

ಪುರಾತತ್ವ ಇಲಾಖೆಯಿಂದ ಅವಿಭಾಜಿತ ಬೆಂಗಳೂರಿನ ೭ ಸ್ಥಳಗಳಲ್ಲಿ ಮಾತ್ರ ಉತ್ಖನಗಳು ನಡೆದಿದ್ದು, ಸಾವನದುರ್ಗದ ಇಟ್ಟಿಗೆಬೈಲು, ಬೆಳ್ಳಂದೂರು, ಮನಗೊಂಡನಹಳ್ಳಿ, ಜಾಲಹಳ್ಳಿ, ಜಡಿಗೇನಹಳ್ಳಿ, ರಾಜಘಟ್ಟ ಮಾತ್ರ ನಡೆದಿದ್ದು, ಇನ್ನು ಹೆಚ್ಚಿನ ಶೋಧನೆಯಾಗ ಬೇಕಾಗಿದೆ. ಇವುಗಳಲ್ಲಿ ೪ ನೆಲೆಗಳು ಕಬ್ಬಿಣಯುಗದ ಬೃಹತ್ ಶಿಲಾಗೋರಿಗಳು, ಸೂಕ್ಷ್ಮಶಿಲಾಯುಗ, ನೆಲೆಗಳು ಶೋಧನೆಗೊಂಡಿದೆ. ಅರ್ಕಾವತಿ ಕಣಿವೆಯ ಸಾವನದುರ್ಗದ ಇಟ್ಟಿಗಬೈಲು, ದಕ್ಷಿಣ ಪಿನಾಕಿನಿ ಕಣಿವೆಯ ಜಡಿಗೇನಹಳ್ಳಿ ಕಬ್ಬಿಣ ಯುಗದ ಸಂಸ್ಕೃತಿಯನ್ನು ಕಾಣಬಹುದು. ಬೆಂಗಳೂರು ಪರಿಸರದ ಪೂರ್ವಭಾಗದ ಸಂಸ್ಕೃತಿಯನ್ನು ಜಡಿಗೇನಹಳ್ಳಿಯಲ್ಲಿ ದೊರಕಿದರೆ, ಪಶ್ಚಿಮ ವಲಯದ ಸಂಸ್ಕೃತಿಯಾಗಿ ಸಾವನದುರ್ಗ ಬಳಿಯ ಇಟ್ಟಿಗೆ ಬೈಲುನಲ್ಲಿ ದೊರೆತಿದೆ.

೧೯೧೭ ರಲ್ಲಿ ದೇವನಹಳ್ಳಿ ತಾಲ್ಲೂಕಿನ ಮನಗೊಂಡನಹಳ್ಳಿ ಬಳಿಯ ಬೃಹತ್ ಶಿಲಾಗೋರಿಗಳನ್ನು ಸಣ್ಣ ಪ್ರಮಾಣದಲ್ಲಿ ಕೈಗೊಂಡ ಉತ್ಖನದಲ್ಲಿ ಬೆಳ್ಳಂದೂರು ಉತ್ಖನನಗಳಿಗಿಂತಲೂ ಹೆಚ್ಚು ವೈಜ್ಞಾನಿಕ ಹಾಗೂ ಅವಶೇಷಗಳ ಪೂರ್ಣ ಮಾಹಿತಿ ಒದಗಿಸುವ ವಿಧಾನಗಳ ಉತ್ಖನನದಲ್ಲಿ ಶೋಧಿಸಿದ ಸಿಲಿಂಡರ್ ಆಕಾರದ ಮಣ್ಣಿನ ಮಡಕೆಗಳು ನೇರವಾಗಿ ನಿಲ್ಲುವುದಕ್ಕೆ ತಳಭಾಗದಲ್ಲಿ ಅಡ್ಡಣಿಗೆಯಂತಹ ೩ ಕಾಲುಗಳನ್ನು ಮಾಡಲಾಗಿದೆ. ಧಾನ್ಯಗಳನ್ನು ಶೇಕರಿಸಲು ರಚಿಸುವ ದೊಡ್ಡ ಗಾತ್ರದ ಮಡಕೆಗಳು ಕೂಡ ದೊರೆತಿವೆ. ಅಂದರೆ ಸುಮಾರು ೧ ಲಕ್ಷ ವರ್ಷಗಳಿಂದ ನಿರಂತರವಾಗಿ ಈ ಪರಿಸರದಲ್ಲಿ ಹಲವು

[೧೦೮] ಎಸ್.ಕೆ. ಅರುಣಿ, ಅವಲೋಕನ, ಏಪ್ರಿಲ್– ಜೂನ್ ೨೦೧೩, ಇ. ದರ್ಪಣ ಸಂ.೧೭, ಪು.ಸಂ-೮ ರಿಂದ ೧೨.

ಸಂಸ್ಕೃತಿಗಳು ಬೆಳೆದು ಬಂದಿದೆ. ಮಡಕೆಗಳ ಛಾಯಚಿತ್ರ ಸಹಿತ ಪ್ರಕಟಗೊಂಡ ವರದಿಯಲ್ಲಿ ನರಸಿಂಹಾಚಾರ್ ರವರು ಅವಶೇಷಗಳ ಮಹತ್ವ ವಿವರಿಸಿದ್ದಾರೆ. ೧೯೨೦-೨೧ರಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಸಿ.ಕೃಷ್ಣಮೂರ್ತಿಯವರು ಮನಗೊಂಡನಹಳ್ಳಿ ಬಳಿ ಅಂತ್ಯತ ಹಳೆ ಶಿಲಾಯುಗದ ಆಯುಧಗಳನ್ನು ಶೋಧಿಸಿದರು. ಕೆಲವು ಶಿಲಾಯುಧಗಳನ್ನು ಶೋಧಿಸುವುದರೊಂದಿಗೆ ಸುಮಾರು ೧ ಲಕ್ಷ ವರ್ಷಗಳ ಪುರಾತನವಾದ ಶಿಲಾಯುಧಗಳು ಬೆಂಗಳೂರು ಪರಿಸರದಲ್ಲಿ ದೊರೆತ ಅತ್ಯಂತ ಪುರಾತನವಾದ ಶಿಲಾಯುಗವಾಗಿದೆ.

೧೯೫೬-೫೭ ರಲ್ಲಿ ಎಂ.ಶೇಷಾದ್ರಿರವರು ಜಡಿಗೇನಹಳ್ಳಿರಲ್ಲಿ ದೊಡ್ಡ ಪ್ರಮಾಣದ ಕಬ್ಬಿಣಯುಗದ ೮ ಪ್ರಮುಖ ಸಮಾಧಿಗಳನ್ನು ಹೊರ ತೆಗೆದರು ಮಣ್ಣಿನಲ್ಲಿ ಮಾಡಿದ ಶವಪೆಟ್ಟಿಗೆ, ಮಡಕೆಗಳು, ಕಬ್ಬಿಣದ ಆಯುಧಗಳನ್ನು ಶೋಧಿಸಿದರು. ಕಾವೇರಿ ಸೀಮೆಯ ಪ್ರಾಚೀನ ಸಂಸ್ಕೃತಿಗಿಂತಲೂ ಭಿನ್ನವಾದ ಸಂಸ್ಕೃತಿ ಜಡಿಗೇನಹಳ್ಳಿ ಪರಿಸರ ಹೊಂದಿತ್ತು ಎಂಬು ಈ ಉತ್ಖನನಗಳ ಅವಶೇಷಗಳಂದ ಸ್ಪಷ್ಟವಾಯಿತು.

೧೯೬೬ ರಲ್ಲಿ ದೇವನಹಳ್ಳಿ ತಾಲ್ಲೂಕಿನ ತರಬನಹಳ್ಳಿ ಗ್ರಾಮದ ಬಳಯಲ್ಲಿನ ಚರಿತ್ರೆಯ ಆರಂಭ ಕಾಲದ ಅವಶೇಷಗಳನ್ನು ಬೆಂಗಳೂರಿನ ಸರ್ಕಾರಿ ವಸ್ತು ಸಂಗ್ರಹಾಲಯದ ಸಹಯೋಗದೊಂದಿಗೆ ಶೋಧಿಸಿ, ಚಂದ್ರವಳ್ಳಿಯ ಅವಶೇಷಗಳೊಂದಿಗೆ ತಾಳೆಹಾಕಿ ಮಹತ್ವವನ್ನು ವಿವರಿಸಿದ್ದಾರೆ. ೧೯೬೬ ರಲ್ಲಿ ತರಬನಹಳ್ಳಿಯಲ್ಲಿ ಅನ್ವೇಷಣೆ ಕೈಗೊಂಡು ಒಂದು ಚಿಕ್ಕ ಟಿಪ್ಪಣಿಯನ್ನು ವಾರ್ಷಿಕ ವರದಿಯಲ್ಲಿ ಪ್ರಕಟಿಸಿದರು. ಎಂ.ಶೇಷಾದ್ರಿರವರು ದೇವನಹಳ್ಳಿ ಹತ್ತಿರ ಕಣ್ಣೂರಿನಲ್ಲಿ ಬೃಹತ್ ಶಿಲಾಗೋರಿಗಳನ್ನು

ನೆಲಮಂಗಲ ತಾಲ್ಲೂಕಿನ ಹೆಗ್ಗುಂದ ಗ್ರಾಮದ ಬಳಿ ಕಬ್ಬಿಣಯುಗ ಹಾಗೂ ಇತಿಹಾಸ ಆರಂಭ ಕಾಲದ ಮಡಕೆಗಳ ಹಾಗೂ ಇತರ ಅವಶೇಷಗಳನ್ನು ಕೇಂದ್ರ ಪುರಾತತ್ವ ಇಲಾಖೆಯ ೧೯೮೧ರಲ್ಲಿ ಶೋಧಿಸಿದರು. ೧೯೮೩ ರಿಂದ ೮೭ ರವರೆಗೆ ಕೇಂದ್ರ ಪುರಾತತ್ವ ಇಲಾಖೆಯ ಎಲ್.ಕೆ. ಶ್ರೀನಿವಾಸ್, ಸಿ.ಕೃಷ್ಣಮೂರ್ತಿ ಮತ್ತು ಬಿ.ನರಸಿಂಹಯ್ಯ ಅವರ ತಂಡದವರು ದಕ್ಷಿಣ ಪಿನಾಕಿನಿ ನದಿ ಕಣಿವೆಯ ಬನಹಳ್ಳಿಯಲ್ಲಿ ಉತ್ಖನ ನಡೆಸಿದರು.

ಅರ್ಕಾವತಿ ಕಣಿವೆಯಲ್ಲಿನ ರಾಜಘಟ್ಟದಲ್ಲಿ ೨೦೦೧ ರಿಂದ ೨೦೦೪ರವರೆಗೆ ಎಂ.ಎಸ್.ಕೃಷ್ಣಮೂರ್ತಿಯವರ ನೇತೃತ್ವದಲ್ಲಿ ಮೈಸೂರು ವಿಶ್ವ ವಿದ್ಯಾಲಯ ಹಾಗೂ ರಾಜ್ಯ ಪುರಾತತ್ವ

ಇಲಾಖೆಗಳೆರಡು ಉತ್ಖನನ ಕೈಗೊಂಡು ಚೈತ್ಯಾಲಯ ಹಾಗೂ ಮತ್ತಿತರ ಮಹತ್ವದ ಅವಶೇಷಗಳನ್ನು ಶೋಧಿಸಿದರು[೧೦೯].

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಹಲವಾರು ನಿವೇಶನಗಳು ಪತ್ತೆಯಾಗಿದ್ದವು. ಸಾವನದುರ್ಗದ ಇಟ್ಟಿಗೆಬೈಲು, ಹೂಜಿಗಲ್ಲು, ಸೋಲೂರು ಹೋಬಳಿಯ ಕಲ್ಯಾಣಪುರ, ನೆಲಮಂಗಲ ತಾಲ್ಲೂಕಿನ ಬಿಲ್ಲನಕೋಟೆ ಬಳಿಯ ಆಲದಹಳ್ಳಿ, ಮಹಿಮರಂಗನ ಬೆಟ್ಟ, ಮೈಲನಹಳ್ಳಿ, ಎಲೆಕ್ಯಾತನಹಳ್ಳಿ, ಬಂಡಿ ಚಿಕ್ಕನಹಳ್ಳಿ, ಶ್ರೀನಿವಾಸಪುರ, ಮಹದೇವಪುರ, ಮಾದೀಪುರ, ರಾಮನಗರದ ಹತ್ತಿರವಿರುವ ಬಸವಪುರ, ಗಂಗರಾಜರಹಳ್ಳಿ, ಕೆಂಚಿಗರಹಳ್ಳಿ, ವಡೇರಹಳ್ಳಿ, ಅರಳೀಮರದ ದೊಡ್ಡಿ, ದೊಡ್ಡಬಳ್ಳಾಪುರ ತಾಲ್ಲೂಕಿನ ಉಜ್ಜನಿ, ಹೊಸಹಳ್ಳಿ, ಜಾಲಗೆರೆ, ಸೋಲುಕುಂಟೆ, ಹಾಲು ಚಿಲುಮೆ, ಬೆಣಚಿನ ಮಡುಗು, ಕಲ್ಕುಂಟೆ, ಆಲಪನಹಳ್ಳಿ, ಭಕ್ತರಹಳ್ಳಿ, ಏಳಟ್ಟಿ, ಮಾಡೇಶ್ವರ, ಕನಕೇನಹಳ್ಳಿ, ಸಾಸಲು, ಬೂಚನಹಳ್ಳಿ, ಬೊಮ್ಮನಹಳ್ಳಿ, ಭೈರಾಪುರ, ಮಾಕಳ, ಸೊಣ್ಣೇನಹಳ್ಳಿ, ಲಗುಮೇನಹಳ್ಳಿ, ಕಲ್ಲುಕೋಟೆ, ಮೆಳೆಕೋಟೆ ಹೆಗ್ಗಡಿಹಳ್ಳಿ, ಗುಂಜೂರು, ಕಸಬಾ ಹೋಬಳಿ ಅರಳು ಮಲ್ಲಿಗೆ, ಜಕ್ಕಸಂದ್ರ, ದೇವನಹಳ್ಳಿ ತಾಲ್ಲೂಕಿನ ಅರದೇಶನಹಳ್ಳಿ, ಕೊಣ್ಣೂರು, ಕೊಯಿರಾ, ಚಿಕ್ಕಜಾಲ, ಜ್ಯೋತಿಪುರ, ದೇವನಹಳ್ಳಿ, ಬ್ಯಾಡರಹಳ್ಳಿ, ಮನಗೊಂಡನಹಳ್ಳಿ, ಹೊಸೂರು ಮುಂತಾದ ಹಾಗೂ ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ ಮುಂತಾದ ಸ್ಥಳಗಳಲ್ಲಿ ನೂರಾರು ಬೃಹತ್ ಶಿಲಾಯುಗದ ಅವಶೇಷಗಳಾದ ವಿಭಿನ್ನ ಮಾದರಿಯ ಸಮಾಧಿಗಳ ಜೊತೆಗೆ ನಿಲುಸುಗಲ್ಲುಗಳು, ದೊರೆತಿರುತ್ತದೆ. ರೇಖಾಚಿತ್ರಗಳು ಬೆಳಕಿಗೆ ಬಂದಿದೆ. ಬೃಹತ್ ಶಿಲಾಯುಗದ ಕಾಲದಲ್ಲಿ ಕಬ್ಬಿಣದ ಆಯುಧಗಳು ಸಮಾಧಿಗಳಲ್ಲಿ ದೊರೆಯುವುದು ಸಾಮಾನ್ಯವಾದ ಸಂಗತಿ, ಆದರೆ ಈ ಪ್ರದೇಶಗಳಲ್ಲಿ ಕಬ್ಬಿಣದ ಆಯುಧಗಳಿಗೆ ಬದಲಾಗಿ ಕಬ್ಬಿಣದ ಉಂಡೆಗಳು ಕಂಡು ಬರುತ್ತದೆ. ನೆಲಮಂಗಲ ತಾಲ್ಲೂಕಿನ ಮಾದಿಪುರದಲ್ಲಿ ಹೆಚ್ಚಿನದಾಗಿ ದೊರೆತ ಕಬ್ಬಿಣ ಉಂಡೆಗಳನ್ನು ಗಮನಿಸಿದರೆ ಬಹುಶಃ ಮಾದಿಪುರದಲ್ಲಿ ಲೋಹದ ವಸ್ತುಗಳ ತಯಾರಿಕಾ ಕೇಂದ್ರವಾಗಿತ್ತೆಂದೆನಿಸುತ್ತದೆ.

## ನಿಲುವುಗಲ್ಲುಗಳು

ಬೃಹತ್ ಶಿಲಾಯುಗದ ಸಮಾಧಿಗಳನ್ನು ನಿರ್ದೇಶಿಸಲು ಎತ್ತರೂಪ ಕಲ್ಲುಗಳನ್ನು ನಿಲ್ಲಿಸುತ್ತಿದ್ದರು. ಇಂಗ್ಲೀಷ್‌ನಲ್ಲಿ ಮೆನ್‌ಹಿರ್ ಎಂದು ಕರೆಯುವ ಈ ನಿಲುವುಗಲ್ಲುಗಳನ್ನು ವ್ಯವಸ್ಥಿತವಾಗಿ ಶವವನ್ನು ಅಥವಾ ಶವದ ಅವಶೇಷವನ್ನು ಮುಚ್ಚಿದ ಮೇಲೆ ನೆಡುತ್ತಿದ್ದ ಕಲ್ಲುಗಳನ್ನು ನೆಲಮಂಗಲ,

[೧೦೯] ಡಾ.ಎಂ.ಎಸ್. ಕೃಷ್ಣಮೂರ್ತಿ ಮತ್ತು ಡಾ.ಎಂ.ಪಿ.ಮಹದೇವಯ್ಯ :- ಕರ್ನಾಟಕದ ಬೌದ್ಧದ ಧರ್ಮದ ಮೇಲೆ ಹೊಸಬೆಳಕು-ರಾಜಘಟ್ಟ ಉತ್ಖನನ, ಇ.ದ.ಸಂ ೧೭, ಪು.ಸಂ- ೧ ರಿಂದ ೧೧.

ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಕಾಣಬಹುದು. ಈ ನಿಲುವುಗಲ್ಲು ಕೆಳಭಾಗದಲ್ಲಿ ಅಗಲವಾಗಿದ್ದು, ಮೇಲ್ಭಾಗದಲ್ಲಿ ಕ್ರಮೇಣ ಚಿಕ್ಕದಾಗಿದ್ದು, ಕಠಾರಿಯ ಆಕಾರದಲ್ಲಿದೆ. ಉಜ್ಜನಿಬೆಟ್ಟ, ಹುಲುಕಡಿಬೆಟ್ಟ, ಮಾಕಳಿ ಬೆಟ್ಟಗಳ ಶ್ರೇಣಿಯ ತಪ್ಪಲಿನಲ್ಲಿ ಈ ನಿಲುವುಗಲ್ಲುಗಳು ಹೆಚ್ಚಾಗಿ ಕಂಡು ಬಂದಿದೆ. ಈ ಬೆಟ್ಟದ ತಪ್ಪಲಿನಲ್ಲಿ ನೀರಿನ ಕಾಲುವೆಗಳಿದ್ದು, ನೈಸರ್ಗಿಕ ಗುಹೆಗಳು ಮೃಗ ಸಂಕುಲ, ಮಾನವ ಸಂಕುಲದ ವಾಸಕ್ಕೆ ಯೋಗ್ಯವಾದ್ದರಿಂದಾಗಿ ಈ ಬೆಟ್ಟಗಳ ಶ್ರೇಣಿಯಲ್ಲಿ ಜನರು ಅಧಿಕವಾಗಿ ವಾಸಿಸುತ್ತಿದ್ದಾರೆಂದು ಹೇಳಬಹುದು.

ಬೆಣಚಿನಮಡಗು, ಕಲ್ಕುಂಟೆ, ಭಕ್ತರಹಳ್ಳಿ, ಏಳಟ್ಟಿ, ಹೊಸಹಳ್ಳಿ, ಆಲಪನಹಳ್ಳಿ, ಭೂಚನಹಳ್ಳಿ, ಕನಕೇನಹಳ್ಳಿ, ಬೊಮ್ಮನಹಳ್ಳಿ, ಭೈರಾಪುರ, ಶ್ರೀರಾಮಹಳ್ಳಿ, ಅಕ್ಕತಮ್ಮನಹಳ್ಳಿ ಮುಂಥಾದ ಗ್ರಾಮಗಳಲ್ಲಿ ನಿಲುವುಗಳು ದೊರೆತಿದೆ.

ತೋಡಲಬಂಡೆ ಪೂರ್ವ ದಿಕ್ಕಿನಲ್ಲಿ ೧೦ ರಿಂದ ೨೦ ಅಡಿ ಎತ್ತರ, ೩-೪ ಅಡಿ ಅಗಲವಿರುವ ೩ ನಿಲುವುಗಲ್ಲುಗಳಿವೆ. ತೂಬಗೆರೆ ಹೋಬಳಿ ಮೇಲೆಕೋಟೆಯ ಹೊಲವೊಂದರಲ್ಲಿ ೬ ಅಡಿ ಎತ್ತರ, ೨ ೧/೨ ಅಡಿ ಅಗಲ ಇದರ ಮೇಲೆ ಕಲ್ಲಿನಿಂದ ಗೀಚಿದ ಮಾನವರ ರೇಖಾಚಿತ್ರವಿದೆ. ತಲೆ ಮೇಲೆ ಛತ್ರಿ ಇದೆ. ಹೆಗ್ಗಡಿಹಳ್ಳಿಗಳಲ್ಲಿ ೨ ನಿಲುವುಗಳು ೮-೧೦ ಅಡಿ ಎತ್ತರ ೨-೩ ಅಡಿ ಅಗಲದವು, ಒಂದು ನಿಲುವುಗಲ್ಲು ವಾಲಿದ್ದರೆ, ಇನ್ನೊಂದು ನೆಲದ ಮೆಲೆ ಬಿದ್ದಿದೆ. ಲಗುಮೇನಹಳ್ಳಿ ಕಲ್ಲುಕೋಟೆ ಕಣಿವೆ ಪ್ರದೇಶದಲ್ಲಿ ಅನೇಕ ನಿಲುವುಗಲ್ಲು, ಮಾಕಳಿಗ್ರಾಮದಲ್ಲಿ ೩ ನಿಲುಸುಗಲ್ಲುಗಳು, ೩ ರಿಂದ ೪ ಅಡಿ ಎತ್ತರದ ೨ ೧/೨ ಅಡಿ ಅಗಲದ ಮಾಕಳಿ ಗ್ರಾಮದ ಪಕ್ಕದಲ್ಲಿ ಸೊಣ್ಣೇನಹಳ್ಳಿ ಕೆರೆಯ ಮುಂದಿನ ಹೊಲವೊಂದರಲ್ಲಿ ಬೃಹತ್ ನಿಲುಸುಗಲ್ಲು ಸಮಾಧಿ ೨೦ ಅಡಿ ಎತ್ತರ, ೪ ಅಡಿ ಅಗಲ ಸಮಾಧಿಯ ಸುತ್ತಲೂ ವೃತ್ತಕಾರವಾಗಿ ಜೋಡಿಸಿಟ್ಟ ಚಪ್ಪಡಿಕಲ್ಲು ಎಲ್ಲವೂ ಸ್ಪಷ್ಟವಾಗಿ ಕಾಣಬಹುದು. ಅರಳು ಮಲ್ಲಿಗೆ ಗ್ರಾಮದ ಸಮೀಪದಲ್ಲಿರುವ ಬೇಚಿರಾತ್ ಜಕ್ಕಸಂದ್ರ ಗ್ರಾಮದಲ್ಲಿ ೨ ೧/೨ ಅಡಿ ಎತ್ತರದ ೨ ನಿಲುವುಗಲ್ಲುಗಳಿವೆ. ಮಾದಿಪುರದಲ್ಲಿ ಸುಮಾರು ೩ ಅಡಿ ಎತ್ತರವಾದ ನಿಲುವುಗಲ್ಲು ಕಾಣಬಹುದು.

ಸಾಸಲು ಹೋಬಳಿಯ ಸಾಸಲಿನ ದಕ್ಷಿಣ ದಿಕ್ಕಿನಲ್ಲಿ ಸುಮಾರು ಒಂದೂವರೆ ಕಿಲೋಮೀಟರ್ ದೂರದಲ್ಲಿನ ತೋಡಲುಬಂಡೆ ಎಂಬ ಗುಡ್ಡದ ಪೂರ್ವ ದಿಕ್ಕಿನಲ್ಲಿ ೩ ನಿಲುವುಗಲ್ಲುಗಳಿವೆ. ಮೊದಲನೇಯದು ೧೨ ಅಡಿ ಎತ್ತರ, ೩ ಅಡಿ ಅಗಲ, ಎರಡನೇಯದು ೧೦ ಅಡಿ ಎತ್ತರ, ಎರಡೂವರೆ ಅಡಿ ಅಗಲ, ಮೂರನೇಯದು ೮ ಅಡಿ ಎತ್ತರ, ೩ ಅಡಿ ಅಗಲವಾಗಿದೆ. ಒಂದು ಮತ್ತು ಎರಡನೇಯ ನಿಲುವುಗಳ ಅಂತರ ೬ ಅಡಿ ಇದ್ದರೆ, ಮೂರನೇಯದು ಮೂವತ್ತೈದು ಅಡಿಗಳಷ್ಟು ದೂರದಲ್ಲಿದೆ.

ಇಲ್ಲಿಂದ ಉತ್ತರಕ್ಕೆ ಒಂದೂವರೆ ಕಿಲೋಮೀಟರ್ ದೂರದಲ್ಲಿ ಮತ್ತೊಂದು ನಿಲುವುಗಲ್ಲಿದೆ. ಇದು ೧೯ ಅಡಿ ಎತ್ತರ, ೬ ಅಡಿ ಅಗಲವಾಗಿದ್ದು, ಸ್ವಲ್ಪ ಎಡಕ್ಕೆ ಭಾಗಿದೆ. ಮೇಲ್ನೋಟಕ್ಕೆ ಕಲ್ಲಿನಿಂದ ನಿರ್ಮಿಸಿದ ಖಡ್ಗದಂತೆ ಕಾಣುತ್ತದೆ. ಇದರ ಸಮೀಪದಲ್ಲಿಯೇ ಶಿಲಾವೃತ್ತಗಳುಳ್ಳ ೧೦ ಸಮಾಧಿಗಳಿವೆ. ಈ ೫ ನಿಲುವುಗಲ್ಲುಗಳು ಕಣಶಿಲೆಯ ಚಪ್ಪಡಿಯಿಂದ ನಿರ್ಮಿಸಲ್ಪಟ್ಟಿವೆ.

ಸೂಲುಕುಂಟೆ ಗ್ರಾಮದ ಬಳಿಯಿರುವ ಪಾಂಡವರ ದಿನ್ನೆ ಎಂದು ಕರೆಯುವ ಕಿರು ಕಾಲುವೆಗಳಿಂದ ಕುರುಚಲು ಗಿಡಗಳಿಂದಲೇ ಆವೃತ್ತವಾಗಿರುವ ಪ್ರದೇಶದಲ್ಲಿ ಒಟ್ಟು ಹತ್ತಕ್ಕೂ ಹೆಚ್ಚು ನಿಲುವುಗಲ್ಲುಗಳಿವೆ. ಬಹುತೇಕ ನಿಧಿಗಳದಿದ್ದರಿಂದ ನೆಲಕ್ಕೆ ಬಿದ್ದಿದೆ. ೧೨ ಅಡಿ ಎತ್ತರ ೨ ೧/೨ ಅಡಿ ಅಗಲದ ನಿಲುವುಗಲ್ಲು ಮಾತ್ರ ನಿಂತಿದೆ. ಇದರ ಕೆಳಗೆ ಸಮಾಧಿಗೆ ಹಾಸಿರುವ ಹಾಸು ಬಂಡೆಯನ್ನು ನಿಧಿಗಳ್ಳರು ನಾಶ ಮಾಡಿದ್ದಾರೆ. ಸಮಾಧಿಯಲ್ಲಿ ಮಡಕೆಯ ಚೂರುಗಳು, ಎಲುಬುಗಳು ಕಂಡು ಬಂದವು, ಚೌಡಪ್ಪನ ಹೊಲದಲ್ಲಿ ೨ ನಿಲುವುಗಲ್ಲುಗಳಿವೆ. ೧೧ ಅಡಿ ಎತ್ತರ, ೩ ಅಡಿ ಅಗಲವಿದೆ.

ಉಜ್ಜೈನಿಬೆಟ್ಟಕ್ಕೆ ತೆರಳುವ ಮಾರ್ಗದಲ್ಲಿರುವ ಗಂಗಮ್ಮದೇವಿಯ ಹಾಲು ಚಿಲುಮೆ ಪ್ರದೇಶದಲ್ಲಿ ೧೦ ಅಡಿ ಎತ್ತರದ ೨ ಅಡಿ ಅಗಲದ ಒಂದು ನಿಲುವುಗಲ್ಲು ಸುಸ್ಥಿತಿಯಲ್ಲಿದೆ. ಊರ ಹೊರಗಿನ ಉಜ್ಜನಿ ಅರಣ್ಯ ಪರಿಸರದಲ್ಲಿ ೨೬ ನಿಲುವುಗಲ್ಲುಗಳು ಒಂದು ಕಡೆ ಕಂಡು ಬರುತ್ತವೆ. ಶವ ಕುಣಿಯ ಮೇಲೆ ಮುಚ್ಚಲ್ಪಟ್ಟ ಹಾಸು ಬಂಡೆಯ ಮುಂದೆ ನಿಲುವುಗಳ ಅಂತರ ೨೦-೨೫ ಅಡಿಯಿದ್ದು, ೨೦ ೧/೨ ಅಡಿಗಳ ಎತ್ತರವಿರುವ ಹಾಗೂ ನೆಲಕ್ಕೆ ಬಿದ್ದಿರುವ ತುಂಡಾಗಿರುವ ಕೆಲವು ಕಿರುಗಲ್ಲುಗಳು ಸಹ ಇದೆ. ಇವುಗಳ ಸುತ್ತಮುತ್ತ ಎಲ್ಲಿ ನೋಡಿದರೂ ಕೆಂಪು ಅಥವಾ ಬಿಳಿ ಬಣ್ಣದ ಬೆಣಚುಗಲ್ಲುಗಳ ರಾಶಿಯಿದೆ. ಇವು ಕಲ್ಲುಗುಪ್ಪೆ ಸಮಾಧಿಗಳು ಇಲ್ಲಿನ ನಿಲುವುಗಲ್ಲುಗಳನ್ನು ಪಾಂಡವರ ಕಲ್ಲುಗಳು ಎಂದು, ಆನೆಗಳನ್ನು ಕಟ್ಟಲು ನೆಟ್ಟಿರುವ ಕಲ್ಲುಗಳೆಂದು ಸ್ಥಳೀಯರು ಹೇಳುತ್ತಿದ್ದಾರೆ.

ಉಜ್ಜೈನಿ ಬೆಟ್ಟದ ತಪ್ಪಲಿನಲ್ಲಿ ೧೨ ಅಡಿ ಉದ್ದ, ೪ ಅಡಿ ಅಗಲದ ಒಂದು ನಿಲುಸುಗಲ್ಲು, ಇಲ್ಲಿಂದ ಮುಂದೆ ೩ ಅಡಿ ಯಿಂದ ೨೨ ಅಡಿಯ ಉದ್ದದ, ೨ ಅಡಿ ಯಿಂದ ೬ ಅಡಿವರೆಗಿನ ಅಗಲದ ೨೧ ನಿಲುವುಗಲ್ಲುಗಳಿದ್ದು, ೪ ನಿಲುವುಗಲ್ಲು ಬಿದ್ದಿವೆ. ೬ ನಿಲುವುಗಲ್ಲು ವಾಲಿದ್ದರೆ, ೪ ನಿಲುವುಗಲ್ಲು ಸುಸ್ಥಿತವಾಗಿದೆ. ಇಷ್ಟು ನಿಲುವುಗಲ್ಲು ಒಂದೇ ಪ್ರದೇಶದಲ್ಲಿ ಇರುವುದು ದಾಖಲೆ ನೂರಾರು ಶಿಲಾವೃತ್ತ, ಕಲ್ಲುಗುಪ್ಪೆ, ಹಾದಿಕೋಣೆ ಸಮಾಧಿಗಳು ಸುಸ್ಥಿತಿಯಲ್ಲಿದೆ. ಬೆಟ್ಟದ ಶ್ರೇಣಿಯ ದಟ್ಟ ಕಾಡಿನಲ್ಲಿ ಶಿಲಾಯುಗ ಮಾನವ ವಾಸಿಸುವ ಪ್ರದೇಶವಾಗಿದೆ.

ಉಜ್ಜನಿ ಬೆಟ್ಟದ ತಪ್ಪಲಿನಲ್ಲಿರುವ ಕಾಡಂಚಿನ ಜಾಲಗೆರೆ ಗ್ರಾಮದಲ್ಲಿ ಅನೇಕ ನಿಲುವುಗಲ್ಲುಗಳನ್ನು ಕಾಣಬಹುದು. ಪೂಜಪ್ಪನಿಗೆ ಸೇರಿದ ಹೊಲದಲ್ಲಿ ೮–೧೧ ಅಡಿ ಉದ್ದ, ೩–೪ ಅಡಿ ಅಗಲವಿದ್ದ ೬ ನಿಲುವುಗಲ್ಲು ಇದ್ದು ಪ್ರಸ್ತುತ ಒಂದು ಕಲ್ಲು ಇದ್ದು, ಹೊಲವನ್ನು ಹಸನು ಮಾಡುವಾಗ ತೆಗೆದು ರಸ್ತೆಯಾಂಚೆಗೆ ಬಿಸಾಡಿದೆ. ಹಾಗೆ ಇನ್ನೊಂದು ಹೊಲದಲ್ಲಿ ೧೨ ಅಡಿ ಎತ್ತರದ ೨ ನಿಲುವುಗಳಿದ್ದವು.

ಹೊಸೂರು ಗ್ರಾಮದಲ್ಲಿ ೧೨ ನಿಲುಸುಗಲ್ಲುಗಳು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ನೂರಾರು ಸಮಾಧಿಗಳಿವೆ. ಸನಿಹದಲ್ಲಿ ನಿಲುವುಗಳಲ್ಲಿ ೨ ನಿಲುವುಗಲ್ಲುಗಳು ೨೨ ಅಡಿ ಎತ್ತರವಾಗಿದೆ. ಉಳಿದವು ೮ ರಿಂದ ೧೧ ಅಡಿ ಎತ್ತರವಾಗಿದೆ. ಕೊಯಿರಾದ ಒಂದು ಹೊಲದಲ್ಲಿ ೫ ನಿಲುವುಗಲ್ಲುಗಳಿದ್ದು, ಒಂದು ೧೬ ಅಡಿ, ಇನ್ನೆರಡು ೧೦ ಅಡಿ, ಒಂದು ೭ ಅಡಿ ಎತ್ತರವಿದೆ ಇಲ್ಲಿರುವ ಸಮಾಧಿಗಳ ಸುತ್ತ ೩ ರಿಂದ ೯ ಶಿಲಾವೃತ್ತಗಳಿವೆ. ಕಲ್ಕುಂಟೆ ಗ್ರಾಮದ ಬಳಿ ೧೦ ಅಡಿ ಉದ್ದ ೪ ಅಡಿ ಅಗಲ ನಿಲುವುಗಲ್ಲು ಇದರ ಸುತ್ತಲೂ ೧೦ ಶಿಲಾವೃತ್ತ ಸಮಾಧಿಗಳಿವೆ.

## ಶಿಲಾವೃತ್ತಗಳು

ಸಮಾಧಿ ನೆಲೆಗಳಲ್ಲಿ ಶಿಲಾವೃತ್ತ ಅಥವಾ ಕಲ್ಲು (ಸ್ಟೋನ್ ಸರ್ಕಲ್) ಮಾದರಿಯ ಸಮಾಧಿಯ ಸುತ್ತಲೂ ಅನಿರ್ಧಿಷ್ಟ ಆಕಾರದ ಕಣ ಶಿಲೆಯ ಸಣ್ಣ ಸಣ್ಣ ಗುಂಡು ಕಲ್ಲು ನೆಲಮಟ್ಟದಲ್ಲಿ ಸುಮಾರು ೧೫ ರಿಂದ ೨೦ ಅಡಿಗಳ ವ್ಯಾಸವುಳ್ಳ ವೃತ್ತಾಕಾರವಾಗಿ ಜೋಡಿಸಿರುತ್ತಾರೆ. ಒಂದು ಸಮಾಧಿಗೆ ಒಂದೇ ಕಲ್ಲು ವೃತ್ತವಿದ್ದು, ಸಮಾಧಿಯು ಚೌಕಾಕಾರ, ಆಯತಾಕಾರ, ಸ್ವಸ್ತಿಯಾಕಾರ, ಕಲ್ಲು ತೊಟ್ಟಿಗಳ ಮಾದರಿಯ ರಚನೆಯನ್ನು ಹೊಂದಿದ್ದು, ಅದರ ಮೇಲೆ ಟೊಪ್ಪಿ ಕಲ್ಲು ಅಥವಾ ತಲೆ ಕಲ್ಲು ಇರುತ್ತದೆ.

ಉಜ್ಜನಿ ಬೆಟ್ಟದ ತಪ್ಪಲಿನಲ್ಲಿ ಜಾಲಗೆರೆ, ಸೂಲುಕುಂಟೆ, ಪಾಂಡವರ ದಿನ್ನೆ, ಕಲ್ಕುಂಟೆ, ಭೈರಾಪುರ, ಹುಲುಕಡಿ ಬೆಟ್ಟದ ತಪ್ಪಲಿನ ಗ್ರಾಮಗಳಾದ ಹಾಲುಚಿಲುಮೆ, ಏಳಟ್ಟಿ, ಮಾಡೇಶ್ವರ, ಬೂಚನಹಳ್ಳಿ, ಗಲಿಬಿಲಿಕೋಟೆ, ಮಾಕಳಿಬೆಟ್ಟದ ಶ್ರೇಣಿಯಲ್ಲಿ, ಮಾಕಳಿ ಗ್ರಾಮ, ಹೊಸಳ್ಳಿ, ಲಗುಮೇನಹಳ್ಳಿ, ಕಲ್ಲುಕೋಟೆ, ಹಿರೇಮುದ್ದನಹಳ್ಳಿ, ಅರಳುಮಲ್ಲಿಗೆ ಮುಂತಾದ ಗ್ರಾಮಗಳಲ್ಲಿ ಕಲ್ಲು ವೃತ್ತ ಸಮಾಧಿಗಳು ಪತ್ತೆಯಾಗಿದೆ. ಈ ಶಿಲಾವೃತ್ತ ಸಮಾಧಿಗಳನ್ನು ಪಾಂಡವರ ಗುಡಿಗಳು ಎಂದು ಕರೆಯುವುದರ ಜೊತೆಗೆ ಸಮಾಧಿಗಳಿಗೆ ಕೆಲವು ಕಡೆ ಪಿತೃಪಕ್ಷದಲ್ಲಿ ಎಡೆ ಇಡುವ ಪದ್ಧತಿ ಪ್ರಚಲಿತದಲ್ಲಿದೆ.

ಬಂಡಿಚಿಕ್ಕನಹಳ್ಳಿಯ ಪಕ್ಕದಲ್ಲಿ ಗುಡ್ಡಗಳಲ್ಲಿ ಸಮಾಧಿಗಳನ್ನು ಪಾಂಡವರ ಗುಡಿಗಳೆಂದು ಸ್ಥಳೀಯ ಕರೆಯುವ ಕ್ರಿ.ಪೂ.೧ನೇ ಶತಮಾನಕ್ಕೆ ಸೇರಿರಬಹುದಾದ ೭೫ ಶಿಲಾಯುಗದ ಸಮಾಧಿಗಳು ಹಾಗೂ

ಹಳ್ಳಿಯ ಸುತ್ತ ಮುತ್ತಲಿನ ಹೊಲಗಳಲ್ಲಿಯು ಶಿಲಾವೃತ್ತಗಳು ಕಂಡು ಬರುತ್ತದೆ. ಕೆಲವು ಕಡೆ ನಿಧಿಯ ಆಸೆಯಿಂದ ಹಾಳು ಮಾಡಿರುವ ಸಮಾಧಿಯೊಂದರ ಮೇಲ್ಭಾಗದ ಚಪ್ಪಡಿಯು ೧೨ ಅಡಿ ಉದ್ದ, ೬ ಅಡಿ ಅಗಲ, ೦.೫ ಅಡಿ ಗಾತ್ರವುಳ್ಳದ್ದಾಗಿರುತ್ತದೆ. ಈ ಶಿಲಾಗೋರಿಯು ೨೫ ಅಡಿಗಳಷ್ಟು ವೃತ್ತಾಕಾರವಾಗಿರುತ್ತದೆ. ಈ ಸಮಾಧಿಯ ಸುತ್ತಮುತ್ತ ಮಡಕೆಯ ಚೂರುಗಳು, ಬೂದಿ, ಕಿಟ್ಟಗಳು ಕಂಡು ಬರುತ್ತದೆ. ಕಪ್ಪು, ಕೆಂಪು ಬಣ್ಣದ ಮಡಕೆಗಳು ಕಂಡು ಬರುತ್ತದೆ. ಕೆಲವು ಮಡಿಕೆ ಚೂರುಗಳ ಮೇಲೆ ಕೆಂಪು ಬಣ್ಣದ ರೇಖೆಗಳು ಕಂಡುಬರುತ್ತದೆ.

ಶ್ರೀನಿವಾಸಪುರ ಬಳಿ ೫ ವೃತ್ತಾಕಾರದ ಸಮಾಧಿಗಳು ರಸ್ತೆಗೆ ಹತ್ತಿರದಲ್ಲಿಯೇ ಕಾಣಸಿಗುತ್ತದೆ. ಕಸಬಾ ಹೋಬಳಿಯ ಮೈಲನಹಳ್ಳಿ ಎಂಬ ಗ್ರಾಮದಲ್ಲಿ ಒಂದು ಬೃಹತ್ ಶಿಲಾಯುಗದ ನಿವೇಶನ ಪತ್ತೆಯಾಗಿದೆ. ೧೦೯ ರಂಧ್ರ ಕೋಣೆ ಗೋರಿಗಳು ಹಾಗೂ ೧೨ ಹಾದಿ ಕೋಣೆ ಗೋರಿಗಳಿವೆ. ಇವುಗಳಲ್ಲಿ ಹತ್ತಾರು ಗೋರಿಗಳು ಅಗೆಯಲ್ಪಟ್ಟಿವೆ. ಅವುಗಳಲ್ಲಿನ ಮಡಿಕೆಗಳಲ್ಲಿ ರಾಗಿ ಕಾಳುಗಳು ಹಾಗೂ ಮೂಳೆಗಳು ದೊರೆತವೆಂದು ಸ್ಥಳೀಯರು ಹೇಳಿದರು.

ಸೋಂಪುರ ಹೋಬಳಿಯ ಬಿಲ್ಲಿನಕೋಟೆ ಬಳಿಯಲ್ಲಿರುವ ಆಲದಹಳ್ಳಿ ಬೆಟ್ಟದ ಹಿಂಭಾಗದಲ್ಲಿ ಒಂದು ನಿವೇಶನದಲ್ಲಿ ೪೨ ಹಾದಿ ಕೋಣೇ ಗೋರಿಗಳಲ್ಲಿ ೧ ಗೋರಿ ಮಾತ್ರ ಹಾಳಾಗಿದೆ. ಈ ನಿವೇಶನದ ಪಕ್ಕದಲ್ಲಿಯೇ ಇರುವ ಬೆಟ್ಟದಲ್ಲಿ ೪ ಗವಿಗಳು, ೬ ಕಲ್ಲಾಸರೆಗಳು ಇವೆ. ಮಹಿಮಾಪುರದ ಮಹಿಮರಂಗನ ಬೆಟ್ಟದ ಬಳಿ ೨೬ ರಂಧ್ರ ಕೋಣೇ ಗೋರಿಗಳಿವೆ. ಒಂದು ಗೋರಿಯು ಶಿಥಿಲವಾಗಿದ್ದು, ಉಳಿದೆಲ್ಲವೂ ಅತ್ಯಂತ ಸುಭದ್ರವಾಗಿದೆ.

ಹುಲುಕಡಿಬೆಟ್ಟದ ತಪ್ಪಲಿನ ಬೂಚನಹಳ್ಳಿಯ ಹೊಲವೊಂದರಲ್ಲಿ ಕಲ್ಲುವೃತ್ತಗಳು ಸಂಪೂರ್ಣವಾಗಿ ಮಣ್ಣು ಮಳೆ ನೀರಿನಿಂದ ಕೊರೆದು ಕೊಚ್ಚಿಹೋಗಿ ಅದರ ಚಪ್ಪಡಿ ಗೋಡೆಗಳು ಹೊರಗೆ ಕಾಣುತ್ತಿರುವ ಸಮಾಧಿಯೊಂದಿಗೆ ಸ್ವಸ್ತಿಕ್ ಆಕಾರದ ರಚನೆಯನ್ನು ಹೊಂದಿರುವ ೪ ಅಡಿ ಅಗಲ, ೧೦ ಅಡಿ ಉದ್ದವಿರುವ ಸಮಾಧಿಯ ಟೊಪ್ಪಿಕಲ್ಲು ಚೂರುಗಳಾಗಿ ಒಂದೆರಡು ತುಂಡುಗಳು ಮಾತ್ರ ಕಾಣಿಸುತ್ತದೆ. ಮಣ್ಣಿನ ಬೋಗುಣಿಗಳು, ಗಂಟೆಯಾಕಾರದ ಮುಚ್ಚಳಗಳುಳ್ಳ ಅವುಗಳ ಮೇಲೆ ಗೀರು ರೆಂಬೆಗಳು ಸಹ ಕಾಣಿಸಿಕೊಂಡಿವೆ.

ಬೂಚನಹಳ್ಳಿಯಲ್ಲಿ ಕುಂಭವು ಮೃತ ವ್ಯಕ್ತಿಯ ಅಸ್ಥಿ ಅವಶೇಷಗಳನ್ನು ಕಾಣಬಹುದು. ಮೃತ ವ್ಯಕ್ತಿಯ ಅಸ್ಥಿ ಅವಶೇಷಗಳನ್ನು ಬೃಹತ್ ಕುಂಭದೊಳಗೆ ಇಟ್ಟು ಹೂಳಲಾಗುತ್ತಿತ್ತು, ಈ ಕುಂಭವು ಗುಡಾಣದಂತೆ ದೊಡ್ಡದಾಗಿರುವುದರಿಂದ ಇದರ ತಳವು ನೆಲದ ಮೇಲೆ ನಿಲ್ಲದ ಕಾರಣ ಭೂಮಿಯೊಳಗೆ

ಹೂಳುತ್ತಿದ್ದರು ಮಡಕೆಯ ಸುತ್ತಲೂ ದೊಡ್ಡಕಲ್ಲು ಚಪ್ಪಡಿಗಳಿಂದ ಆಯತಾಕಾರದಲ್ಲಿ ಕಲ್ಲುಗಳನ್ನು ನಿಲ್ಲಿಸಿ ಅದರ ಮೇಲೆ ಚಪ್ಪಡಿ ಕಲ್ಲಿನಿಂದ ಮುಚ್ಚುತ್ತಿದ್ದರು. ಕರ್ನಾಟಕದ ಮೊಟ್ಟ ಮೊದಲನೆಯ ಶವ ಕುಂಭ ಸಮಾಧಿಯಾಗಿರುವ ಬೂಚನಹಳ್ಳಿ ನೆಲೆಯು ಒಂದು ಪ್ರಮುಖ ಪ್ರಾಚ್ಯ ನೆಲೆಯಾಗಿದೆ[೧೧೦].

ಅರಳುಮಲ್ಲಿಗೆ ಗ್ರಾಮದ ರಾಮಕೃಷ್ಣರವರ ಹೊಲದಲ್ಲಿ ಕಪ್ಪು ಕಲ್ಲಿನ ನಾಲ್ಕಾರು ಶಿಲಾವೃತ್ತ ಸಮಾಧಿಗಳಿವೆ. ಬೆಟ್ಟದ ತಪ್ಪಲಿನಲ್ಲಿರುವ ಬಹುತೇಕ ಸಮಾಧಿಗಳು ಬೆಟ್ಟದಿಂದ ಹರಿದು ಬರುವ ನೀರು, ಮಣ್ಣಿನಿಂದಾಗಿ ಹಲವಾರು ನೆಲೆಗಳು ಮುಚ್ಚಿಹೋಗಿವೆ. ಕೆಲವೆಡೆ ಜಮೀನಿನ ಮಾಲೀಕರು ನೆಲವನ್ನು ವ್ಯವಸಾಯಕ್ಕೆ ಬಳಸಲು ಈ ಸಮಾಧಿಗಳನ್ನು ಕಲ್ಲುಗಳನ್ನು ಹೊರಗೆ ಬಿಸಾಡಿರುವುದನ್ನು ಸಹ ಕಾಣಬಹುದು.

ಅರದೇಶನಹಳ್ಳಿ ಸಹ ಸ್ಥಳಿಯರು ಪಾಂಡವರ ಗುಡಿ ಎಂದೇ ಕರೆಯುವುದು ರೂಢಿಯಲ್ಲಿದೆ. ಹಳೆಯ ಸಮಾಧಿಗಳಲ್ಲಿ, ಹಳೆಯ ದೇವಾಲಯಗಳಲ್ಲಿ ನಿಧಿ ಇರಬಹುದೆಂದು ನಿಧಿಗಳ್ಳರು ನಾಶ ಮಾಡಿದ್ದಾರೆ. ಊರಿನ ಕೆರೆಯ ಕೋಡಿ ಬಯಲಿನಲ್ಲಿ ವೃತ್ತಾಕಾರದಲ್ಲಿರುವ ಶಿಲಾಯುಗದ ಸಮಾಧಿಗಳು ಕಂಡು ಬಂದಿದೆ ಒಂದು, ಎರಡು ವೃತ್ತಗಳಿರುವ ೫ ಸಮಾಧಿಗಳನ್ನು ಕದಲಿಸಲಾಗಿದೆ. ಅದರಿಂದ ಹೊರ ತೆಗೆದ ಮಣ್ಣಿನ ಮಡಕೆ, ಕಪ್ಪು ಮತ್ತು ಕಂದು ಮಿಶ್ರಿತ ಮಡಕೆ ಚೂರುಗಳು ಮತ್ತು ಮೂಳೆಯ ಚೂರುಗಳು ಕಂಡು ಬರುತ್ತವೆ. ಈ ಸ್ಥಳದ ಸುತ್ತಲೂ ಬೂದಿ ಮಿಶ್ರಿತ ಮಣ್ಣು ಕಂಡು ಬರುತ್ತದೆ. ವೃತ್ತಾಕಾರದ ಶಿಲಾ ಗೋರಿಗಳಿದ್ದು, ಇವುಗಳಲ್ಲಿ ಕೆಲವನ್ನು ಅಗೆದು ತೆಗೆಯಲಾಗಿದೆ. ಮಡಕೆ ಚೂರುಗಳು, ಕೆಂಪಾದ ಮಡಕೆಯ ಚೂರುಗಳ ಮೇಲೆ ಬಿಳಿ ಬಣ್ಣದಿಂದ ಗೆರೆ ಮತ್ತು ಚುಕ್ಕೆಗಳನ್ನು ಹಾಕಿದೆ. ಸಮಾಧಿಯಲ್ಲಿ ನಿಧಿ ಇದೆ ಎಂಬ ತಪ್ಪು ಕಲ್ಪನೆಯಿಂದಾಗಿ ನಾಶಮಾಡಿರುವುದು ಕಂಡು ಬರುತ್ತದೆ. ಕಲ್ಲು, ತೊಟ್ಟಿಯನ್ನು ಮುಚ್ಚಿದ ಕಲ್ಲು ೫೦ ಸೆಂ.ಮೀ.ದಪ್ಪ, ೪ ಮೀ ಅಗಲ, ೫ ಮೀಟರ್ ಉದ್ದವಾಗಿರುತ್ತದೆ. ಮುಚ್ಚಳದ ಕಲ್ಲು ಪೂರ್ವಕ್ಕೆ ಸ್ವಲ್ಪ ಮುಂದಕ್ಕಿದೆ, ಕಪ್ಪು ಬೀಡುಗಲ್ಲುಗಳನ್ನು ವೃತ್ತಕ್ಕೆ ಬಳಸಲಾಗಿದೆ. ೨, ೩, ವೃತ್ತಗಳಲ್ಲಿ ಇದು ಕಂಡುಬರುತ್ತದೆ.

**ಕಲ್ಲುಗುಪ್ಪೆಗಳು(ಕೇಯಿರ್ನ್)**

ಸಮಾಧಿಯ ಮೇಲೆ ಗುರುತಿಗಾಗಿ ಸಣ್ಣ ಸಣ್ಣ ಕಲ್ಲಿನ ರಾಶಿಯೇ ಕಲ್ಲುಗುಪ್ಪೆಗಳು, ನಿಲುಸುಗಲ್ಲುಗಳು, ಶಿಲಾವೃತ್ತ ಸಮಾಧಿಗಳಲ್ಲಿ ಇರುವಂತೆ ಕಲ್ಲಿನ ರಾಶಿಯ ಕೆಳಗೆ ಮೊಪ್ಪಿ ಕಲ್ಲು ಕಂಡು

[೧೧೦] ಡಾ.ಎಸ್.ವೆಂಕಟೇಶ್ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೪

ಬರುತ್ತದೆ. ಅದರ ಒಳಗೆ ಮಾನವನ ಅಸ್ಥಿಯ ಅವಶೇಷಗಳು, ಮಡಿಕೆಗಳು ಸಾಮಾನ್ಯವಾಗಿ ಕಂಡುಬರುತ್ತದೆ.

ತಾವರೆಕೆರೆ ಹೋಬಳ ಬಸವನ ಬೆಟ್ಟದ ತಪ್ಪಲಿನಲ್ಲಿ ೬ ರಂಧ್ರ ಕೋಣೆ ಕಲ್ಲುಗುಪ್ಪೆ ಸಮಾಧಿಗಳು ಪತ್ತೆಯಾಗಿದೆ. ಇವುಗಳಲ್ಲಿ ನಾಲ್ಕು ಕಲ್ಲುಗಳು ೧೨ ಅಡಿ ಉದ್ದ, ೧೦ ಅಡಿ ಅಗಲ, ೧ ಅಡಿ ದಪ್ಪ ಗ್ರಾನೈಟ್ ರಣ ಶಿಲೆಯಿಂದ ನಿರ್ಮಿಸಿದವುಗಳಾಗಿವೆ. ಇನ್ನುಳಿದ ಎರಡು, ೧೦ ಅಡಿ ಉದ್ದ, ೮ ಅಡಿ ಅಗಲ, ೧ ಅಡಿ ದಪ್ಪವಾಗಿದೆ. ಸ್ವಸ್ತಿಕ್ ಆಕಾರದ ಕಣ ಶಿಲೆಯಿಂದ ಮಾಡಿದವುಗಳಾಗಿವೆ. ಈ ಸಮಾಧಿಯ ಪರಿಸರದಲ್ಲಿ ಕೆಂಪು, ಕಪ್ಪು ಮಣ್ಣು ಮಿಶ್ರಿತ ಮಡಿಕೆಯ ಚೂರುಗಳು ದೊರೆತಿವೆ. ಬಸವನ ಕಟ್ಟೆ ಸಮೀಪ ೧೦ ಅಡಿ ಉದ್ದ, ೯ ಅಡಿ ಅಗಲದ, ೧ ಅಡಿ ದಪ್ಪನಯ ಮತ್ತೆರಡು ಕಲ್ಲುಗುಪ್ಪೆ ಸಮಾಧಿಗಳಿವೆ. ಇದೇ ಗ್ರಾಮದ ತೂತುಕೆರೆ ಸಮೀಪದ ಪರಿಸರದಲ್ಲಿ ವಿಶಾಲವಾದ ೧೪ ಅಡಿ ಉದ್ದ, ೧೧ ಅಡಿ ಅಗಲ, ೧ ಅಡಿ ದಪ್ಪನೆಯ ಮತ್ತೆರಡು ಕಲ್ಲುಗುಪ್ಪೆ ಸಮಾಧಿಗಳಿವೆ. ಇವುಗಳ ಪೂರ್ವ ದಿಕ್ಕಿನಲ್ಲಿ ರಂಧ್ರವಿದ್ದು ಪಾಂಡವರ ಮನೆಗಳೆಂದು ಸ್ಥಳೀಯರು ಕರೆಯುತ್ತಾರೆ.

ಮಾದಾಪಟ್ಟಣದ ಚಿಕ್ಕರಂಗಯ್ಯ ಕೆಂಚಪ್ಪ, ಅಂದಾನಪ್ಪ ಹೊಲಗಳ ಪರಿಸರದಲ್ಲಿ ೮ ಶಿಲಾವೃತ್ತವುಳ್ಳ ಸಮಾಧಿಗಳಿವೆ. ಇವುಗಳಲ್ಲಿ ೪ ಏಕಶಿಲಾವೃತ್ತ ಸಮಾಧಿಗಳಾಗಿವೆ. ೩ ಪಂಚಶಿಲಾವೃತ್ತ ಸಮಾಧಿಗಳಾಗಿವೆ. ೧ ಒಂಭತ್ತು ಶಿಲಾವೃತ್ತವಿರುವ ಅತಿದೊಡ್ಡ ಶಿಲಾಸಮಾಧಿಯಾಗಿದೆ. ಶಿಲಾವೃತ್ತಕ್ಕೆ ಚಪ್ಪಡಿಯಾಕಾರದ ಕಲ್ಲುಗಳನ್ನು ಬಳಸಿದ್ದಾರೆ. ಬೆಟ್ಟದ ತಪ್ಪಲಿನಲ್ಲಿರುವುದರಿಂದ ಬೆಟ್ಟದ ಗ್ರಾನೈಟ್ ಕಲ್ಲುಗಳನ್ನು ಬಳಸಿದ್ದಾರೆ ಮಡಿಕೆ ಚೂರುಗಳು ಹೇರಳವಾಗಿ ದೊರೆತರೂ ಈ ಪರಿಸರದಲ್ಲಿ ಒಂದೂ ನಿಲುವುಗಲ್ಲೂ ಪತ್ತೆಯಾಗಿಲ್ಲ. ಇಂತಹ ಮಡಕೆಗಳು ನವಶಿಲಾಯುಗದ ಪ್ರಾರಂಭದ ಕಾಲದಲ್ಲಿ ತಯಾರಿಸಲ್ಪಟ್ಟವೆಂದು ಬ್ರೂಸ್‌ಪೂಟ್‌ರವರು ಅಭಿಪ್ರಾಯ ಪಟ್ಟಿರುತ್ತಾರೆ. ಇದರಿಂದಾಗಿ ಈ ಸಮಾಧಿಗಳು ಕ್ರಿ.ಪೂ.೧ನೇಯ ಶತಮಾನಕ್ಕೆ ಸೇರಿರಬಹುದಾಗಿಬೆ. ಪಕ್ಕದಲ್ಲಿ ಹೇರಳವಾಗಿ ದೊರೆಯುವ ಬಂಡೆಗಳ ಕಲ್ಲುಗಳನ್ನು ಈ ಸಮಾಧಿಗಳ ನಿರ್ಮಾಣಕ್ಕೆ ಉಪಯೋಗಿಸಲಾಗಿದೆ.

ಸೂಲುಕುಂಟೆ ಗ್ರಾಮದ ಬಳಿಯಿರುವ ಪಾಂಡವರ ದಿನ್ನೆಯಲ್ಲಿ ಕೆಂಪು ಮತ್ತು ಬಿಳಿ ಬಣ್ಣದ ಬೆಣಚುಕಲ್ಲಿನ ರಾಶಿಗಳಿಂದ ಕೂಡಿವೆ. ಸುತ್ತಹಳ್ಳಿಯ ಸುತ್ತಮುತ್ತಲಿನ ಉಜ್ಜನಿ ಕಾಡಿನಲ್ಲಿ ನಿಲುವುಗಲ್ಲುಗಳ ಜೊತೆಗೆ ಬಿಳಿ ಕೆಂಪು ಮಿಶ್ರಿತ ಬೆಣಚು ಕಲ್ಲುಗಳ ರಾಶಿಯಿಂದ ಕೂಡಿರುವ ನೂರಕ್ಕೂ ಹೆಚ್ಚು ಕಲ್ಲುಗುಪ್ಪೆ ಸಮಾಧಿಗಳನ್ನು ಕಾಣಬಹುದು, ಹಾಲುಚಿಲುಮೆಯ ಹತ್ತಿರ ೧೯ ಮೇಲ್ಲುಗುಪ್ಪೆ ಸಮಾಧಿಗಳಿವೆ. ಜಾಲಗೆರೆ ಗ್ರಾಮದ ಸಮೀಪದ ಹೊಲಗಳಲ್ಲಿ ೧೧ ಕಲ್ಲುಗುಪ್ಪೆ ಸಮಾಧಿಗಳಿವೆ. ಒಂದು ಕಲ್ಲುಗುಪ್ಪೆ ಸಮಾಧಿಯ ಮುಚ್ಚಳ

ವೃತ್ತಾಕಾರವಾಗಿದ್ದು ೧೧ ಮೀಟರದ ವ್ಯಾಸವನ್ನು ೨ ಅಡಿ ದಪ್ಪವನ್ನು ಹೊಂದಿದೆ. ಪಾಂಡವರ ದಿನ್ನೆಯಲ್ಲಿ ಹೆದ್ದಾರಿಯ ೨ ಬದಿಗಳಲ್ಲಿ ನೂರಾರು ಕಲ್ಗುಪ್ಪೆ, ಶಿಲಾವೃತ್ತ ಸಮಾಧಿಗಳಿವೆ ಈ ಶಿಲಾವೃತ್ತ ಸಮಾಧಿಗಳು ಸ್ವಸ್ತಿಕ್ ಆಕಾರದ ತೊಟ್ಟಿಗಳ ಮಾದರಿಯಲ್ಲಿ ರಚಿತವಾಗಿ ಪೂರ್ವ ದಿಕ್ಕಿನಲ್ಲಿ ರಂಧ್ರಗಳನ್ನು ಒಳಗೊಂಡಿದೆ.

ಸೂಲುಕುಂಟೆ ಗ್ರಾಮದ ಪಕ್ಕದಲ್ಲಿ ಕಾಡಿನ ಮಧ್ಯೆ ೧೩ ಅಡಿ ಉದ್ದ, ೩ ಅಡಿ ಅಗಲದ ನಿಲುವುಗಲ್ಲು ಹಾಗೂ ಈ ಪರಿಸರದಲ್ಲಿ ೧೫೦ ಕ್ಕೂ ಹೆಚ್ಚು ಕಲ್ಗುಪ್ಪೆ ಸಮಾಧಿಗಳಿವೆ. ಸ್ಥಳೀಯರು ಪಾಂಡವರ ದಿಣ್ಣೆ ಎಂದು ಕರೆಯುತ್ತಾರೆ.

**ಕಲ್ಮನೆಗಳು**

ಕಲ್ಗುಪ್ಪೆ, ಶಿಲಾವೃತ್ತ, ನಿಲುಸುಗಲ್ಲುಗಳ ಕೆಳಗಡೆಯಿರುವ ಸಮಾಧಿಗಳೆಲ್ಲಾ ನೆಲದೊಳಗಿನ ಕಲ್ಮನೆಗಳೇ ನೆಲದ ಮೇಲಿನ ಕಲ್ಮನೆಗಳು ಎಂಬ ಎರಡು ವಿಧಗಳಿರುತ್ತವೆ. ಹಾದಿಕೋಣೆ, ಕಿಂಡಿಕೋಣೆ ಸಾಮಾನ್ಯವಾಗಿ ಕಲ್ಮನೆಗಳಲ್ಲಿ ಕಂಡುಬರುತ್ತವೆ. ನಾಲ್ಕು ಚಪ್ಪಡಿಕಲ್ಲುಗಳನ್ನು ಆಯತಾಕಾರದಕಲ್ಲು ಚಪ್ಪಡಿಯ ಮೇಲೆ ಚಪ್ಪಡಿ ಕಲ್ಲಿನಿಂದ, ನೆಲಹಾಸುಗಲ್ಲಿದೆ. ಯಾವುದಾದರೊಂದು ಬದಿಯ ಗೋಡೆಯಂತಿರುವ ಚಪ್ಪಡಿ ಕಲ್ಲಿನಲ್ಲಿ ಸುಮಾರು ಒಂದು ಅಡಿ ವ್ಯಾಸವುಳ್ಳ ವೃತ್ತಾಕಾರದ ಕಿಂಡಿಯಿರುತ್ತದೆ. ಕಿಂಡಿಕೋಣೆ ಕಲ್ಗೋರಿಗಳು ಎನ್ನುವರು.

ಮಾದೀಪುರದಲ್ಲಿ ಬೃಹತ್ ಶಿಲಾಯುಗ ಕೋಣೆ ಗೋರಿಗಳಿದ್ದು, ಬೆಂಗಳೂರು ಕುಣಿಗಲ್ ನಡುವೆ ಹೊಸದಾಗಿ ರಸ್ತೆ ನಿರ್ಮಿಸುವಾಗ ಭಗ್ನವಾಗಿರುವ ಗೋರಿಗಳಲ್ಲಿ ಕಪ್ಪು, ಕೆಂಪು ಹಾಗೂ ಕೆಂಪುವರ್ಣದ ಮೃತ್ ಪಾತ್ರೆಗಳು ದೊರೆತಿವೆ. ಸಮಾಧಿಗಳ ಸುತ್ತ ಶಿಲಾ ವೃತ್ತವನ್ನು ರಚಿಸಲಾಗಿದೆ. ದಾರಿ ಕೋಣೆಯ ಸಮಾಧಿಗಳು ಹೆಚ್ಚಿನ ಸಮಾಧಿಗಳಲ್ಲಿ ಕಿಂಡಿಗಳು ಪೂರ್ವಾಭಿಮುಖವಾಗಿ ಭಗ್ನ ಗೊಂಡಿರುವ ೩ ಸಮಾಧಿಗಳ ಸುತ್ತಲೂ ಸಣ್ಣ ಸಣ್ಣ ಕಲ್ಲುಗಳನ್ನು ಇಟ್ಟು ವೃತ್ತಾಕಾರವನ್ನು ರಚಿಸಲಾಗಿದೆ. ಇನ್ನುಳಿದ ಸಮಾಧಿಗಳು ೪ ಅಡಿಗಳಷ್ಟು ಅಗಲ ಹಾಗೂ ೫ ೧/೨ ಅಡಿಗಳಷ್ಟು ಉದ್ದವಾಗಿದೆ. ಭಗ್ನಗೊಂಡಿರುವ ಸಮಾಧಿಗಳು ರಸ್ತೆಯ ಎಡಭಾಗದಲ್ಲಿ ಕಂಡು ಬಂದರೆ, ರಸ್ತೆಯ ಬಲಭಾಗದ ನೀರಿನ ಕಟ್ಟೆಯ ಬಳಿಯಲ್ಲಿ ಹಾಸುಬಂಡೆಯೊಂದು ಕಂಡುಬರುತ್ತದೆ. ಬಂಡೆಯ ಮೇಲೆ ಕಲ್ಲುಗಳನ್ನು ಜೋಡಿಸಿ ಇದರ ಮೇಲೆ ವಿಶಾಲವಾದ ಹಾಸು ಚಪ್ಪಡಿಯನ್ನು ಹಾಕಲಾಗಿದೆ. ಇದು ಸುಮಾರು ೧ ಅಡಿ ದಪ್ಪ, ೧೩ ೧/೨ ಅಡಿ ಉದ್ದ, ೧ ೧/೨ ಅಡಿಯಷ್ಟು ಅಗಲವಿದ್ದು ಒಬ್ಬ ಮನುಷ್ಯ ನುಸುಳ ಬರಬಹುದಾಗಿದೆ. ಬೃಹತ್ ಶಿಲಾಯುಗದ ಸಂಸ್ಕೃತಿಯ ಗೋರಿ ನೆಲೆಯಿದ್ದು, ಗೋರಿಗಳಲ್ಲಿ ಕಿಂಡಿಗಳು ಪೂರ್ವಭಿಮುಖವಾಗಿದೆ.

ಭಗ್ನವಾಗಿರುವ ಗೋರಿಗಳಲ್ಲಿ ಕಪ್ಪು, ಕೆಂಪು ಹಾಗೂ ಕೆಂಪು ವರ್ಣದ ಮೃತ್ ಪಾತ್ರೆಗಳು ದೊರೆತಿವೆ. ಸಮಾಧಿಗಳ ಸುತ್ತ ಶಿಲಾವೃತ್ತವನ್ನು ರಚಿಸಲಾಗಿದೆ.

ಎಲೆಕ್ಯಾತನಹಳ್ಳಿ ನಿವೇಶನದಲ್ಲಿ ೪ ರಂಧ್ರಕೋಣೆ ಗೋರಿಗಳವೆ, ಅದರಲ್ಲಿ ೨ ಗೋರಿಗಳನ್ನು ಅಗೆದು ಹಾಳು ಮಾಡಿದ್ದಾರೆ, ಉಳಿದೆರೆಡು ಸುಸ್ಥಿತಿಯಲಿವೆ. ಇಲ್ಲಿ ಹತ್ತಾರು ಗೋರಿಗಳ ಅವಶೇಷಗಳನ್ನು ಕಾಣ ಬಹುದು. ಮಹದೇವಪುರದ ಬಳಿಯ ಹನುಮಯ್ಯನ ಪಾಳ್ಯದ ಬಳಿಯಲ್ಲಿ ೮ ಹಾದಿಕೋಣೆ ಗೋರಿಗಳವೆ ತುಂಬ ದೊಡ್ಡ ಗೋರಿಗಳಾಗಿವೆ. ಮೇಲ್ಭಾಗದಲ್ಲಿ ೨೦ ಅಡಿ ಉದ್ದ, ೧೫ ಅಡಿ ಅಗಲವಾಗಿದೆ.

ಘಾಟಿ ಸಮೀಪದ ಲಗುಮೇನಹಳ್ಳಿಯ ಹೊಲದಲ್ಲಿ ಚೌಕಾಕಾರದ ಸ್ವಸ್ತಿಕ್ ಆಕಾರದ ಕಿಂಡಿ ಕೋಣೆಗಳು ವ್ಯವಸಾಯ, ಮನೆಗಳ ನಿರ್ಮಾಣ ಹಾಗೂ ನಿಧಿಗಳ್ಳರಿಂದಾಗಿ ಬಹುತೇಕ ಘೋರಿಗಳು ನಾಶವಾಗಿರುವ ಅವಶೇಷಗಳನ್ನು ಕಾಣಬಹುದು. ೧೪ ಬೃಹತ್ ಶಿಲಾಗೋರಿಗಳನ್ನು ಕಾಣಬಹುದು ಇವುಗಳ ಉದ್ದ ೮ ಅಡಿ, ಅಗಲ ೩ ಅಡಿ ಇದೆ. ಮೇಲ್ಭಾಗದ ಚಪ್ಪಡಿಯ ಕಲ್ಲುಗಳು ಇಲ್ಲ. ಅಂದಾಜು ಸುಮಾರು ೮ ಅಡಿ ಉದ್ದ, ೧ ೧/೨ ಅಡಿ ದಪ್ಪವಿರಬೇಕು. ಶಿಲಾಗೋರಿಗಳ ಕೋಣೆಯ ಕಿಂಡಿಯು ಸುಮಾರು ೧ ಅಡಿ ವ್ಯಾಸವನ್ನು ಹೊಂದಿದೆ.

ಲಗುಮೇನಹಳ್ಳಿಯ ಪೂರ್ವ ದಿಕ್ಕಿನ ಬೆಟ್ಟದ ಮೇಲೆ ಬೃಹತ್ತಾದ ನೈಸರ್ಗಿಕವಾದ ಒಂದು ಕಲ್ಮನೆಯಿದ್ದು, ೧೪ ಅಡಿ ಉದ್ದ, ೧೦ ಅಡಿ ಅಗಲವಿದೆ. ೨ ೧/೨ ಅಡಿಗಳಷ್ಟು ದಪ್ಪವಿದೆ. ಮುಂಭಾಗವೂ ಸುಮಾರು ೩ ಅಡಿಗಳಗಿಂತಲೂ ಹೆಚ್ಚು ದಪ್ಪವನ್ನು ಹೊಂದಿದೆ. ಈ ಕಲ್ಮನೆಯ ಕೆಳಗೆ ೬ ಮಂದಿ ಮಲಗಬಹುದು. ಇದರ ಸಮೀಪದಲ್ಲೆ ನಾಲ್ಕು ಶಿಲಾ ಸಮಾಧಿಗಳವೆ.

ಲಗುಮೇನಹಳ್ಳಿಯಲ್ಲಿ ೧೫ ಕ್ಕೂ ಹೆಚ್ಚು ಕಿಂಡಿಕೋಣೆ ಸಮಾಧಿಗಳು ಲಗುಮೇನಹಳ್ಳಿ ಹೊಲಗಳಲ್ಲಿ ಅಥವಾ ಮನೆಗಳ ಅಕ್ಕ ಪಕ್ಕದಲ್ಲಿಯೇ ಹಲವಾರು ಚೌಕಾಕಾರದ ಕಿಂಡಿಕೋಣೆ ಶಿಲಾಗೋರಿಗಳವೆ. ನಿಧಿಗಳ್ಳರು, ಕೃಷಿಕಾರ್ಯ, ಮನೆ ನಿರ್ಮಾಣಗಳಿಂದಾಗಿ ಹಲವಾರು ಸಮಾಧಿಗಳು ಭಗ್ನಾ ವ್ಯವಸ್ಥೆಯಲ್ಲಿದೆ. ೮ ಅಡಿ ಉದ್ದ ಮತ್ತು ೩ ಅಡಿ ಅಗಲವಾಗಿರುವ ಮೇಲ್ಭಾಗದ ಚಪ್ಪಡಿ ಕಲ್ಲುಗಳುಳ್ಳ ಸಮಾಧಿಯು ಒಡೆದು ಚೂರಾದ ಸಮಾಧಿಯ ಕಿಂಡಿಯು ಸುಮಾರು ೧ ಅಡಿ ವ್ಯಾಸವನ್ನು ಹೊಂದಿದೆ.

ಪಾಂಡವರ ದಿನ್ನೆಯಲ್ಲಿ ೬ ಕಿಂಡಿ ಕೋಣೆ ಸಮಾಧಿಗಳ ಮೇಲಿನ ಯಾವುದಕ್ಕೂ ಮುಚ್ಚಳ ಕಲ್ಲುಗಳಿಲ್ಲ. ನಿಧಿಗಳ್ಳರಿಂದಾಗಿ ಮೇಲಿನ ಮುಚ್ಚಳ ಹಾಳಾಗಿದೆ. ಕೆಲವು ಸಮಾಧಿಗಳಿಗೆ ಪಶ್ಚಿಮ ಭಾಗದಲ್ಲಿ

ಕಿಂಡಿಗಳಿವೆ. ಮಾಡೇಶ್ವರದಲ್ಲಿನ ಕಲ್ಮನೆ ಸುಸ್ಥಿತಿಯಲ್ಲಿದೆ ಗತಿಸಿದವರ ಆತ್ಮ ಶವಕುಣಿಕೆಯಲ್ಲೇ ಅವಿತಿರುತ್ತದೆ ಎಂದು ನಂಬಿದ ನಮ್ಮ ಪೂರ್ವಜರು ಪ್ರತಿ ವರ್ಷ ಪಿತೃಗಳಿಗೆ ಆಹಾರ ಪದಾರ್ಥ, ಪಾನೀಯ, ಆಯುಧ ಇತ್ಯಾದಿ ಅಗತ್ಯ ವಸ್ತುಗಳನ್ನು ಸಮಾಧಿಗಳಲ್ಲಿ ಇಡಲು ಕಿಂಡಿಗಳನ್ನು ಮಾಡಿರಬೇಕೆಂದು ತೋರುತ್ತದೆ.

ರಾಜಘಟ್ಟ ೬೦ ಎಕರೆ ಬೂದಿಗುಂಡಿ ಪ್ರದೇಶದಲ್ಲಿ ಕ್ರಿ.ಪೂ.೧೨೦೦ ಕಾಲಕ್ಕೆ ಸೇರಿಸಲಾಗಿರುವ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ರಂಧ್ರಕೋಣೆ ಸಮಾಧಿಗಳು, ಕಲ್ಗುಪ್ಪೆ ಸಮಾಧಿಗಳು ೫ ಕಲ್ಮನೆ ಸಮಾಧಿಗಳಲ್ಲಿ ೩ ರಂಧ್ರಕೋಣೆ (ಕಿಂಡಿಕೋಣೆ) ಸಮಾಧಿಗಳು ಸ್ವಸ್ತಿಕ್ ಆಕಾರದಲ್ಲಿ ಪೂರ್ವ ದಿಕ್ಕಿನ ಗೋಡೆ ಕಲ್ಲಿನಲ್ಲಿ ರಂಧ್ರವಿದೆ. ೨.೭೦ ಮೀಟರ್ ಉದ್ದ, ೧.೭೦ ಮೀಟರ್ ಅಗಲ, ೧.೬ ಅಡಿ ಎತ್ತರವಿರುವ ಚೌಕಟ್ಟಾದ ಸಮಾಧಿಯ ಕೋಣೆಯಲ್ಲಿ ಪೂರ್ವ ದಿಕ್ಕಿಗೆ ೮೦ ಸೆಂ.ಮೀ. ವ್ಯಾಸದ ಕಿಂಡಿಯನ್ನು ಹೊಂದಿರುವ ಹಾದಿಕೋಣೆ ಸಮಾಧಿ ಎಂದು ಗುರುತಿಸಲಾಗಿದೆ. ನಿಧಿಗಳ್ಳರಿಂದ ಹಾಳಾಗಿರುವ ಸಮಾಧಿಯಲ್ಲಿ ಮಣ್ಣಿನ ಮಡಕೆ, ಅದರ ಮೇಲೆ ಮುಚ್ಚುವ ತಟ್ಟೆಯೊಂದು ದೊರಕಿದೆ. ರಂಧ್ರಕೋಣೆ ಸಮಾಧಿಯ ಹಾಗೆ ಚಿಕ್ಕದಾದ ಶಿಲಾಗೋರಿಯೊಂದಿದೆ. ಈ ಕಲ್ಲನ್ನು ಗೊಡ್ಡುಕಲ್ಲು ಎಂದು ಪ್ರತಿ ವರ್ಷವು ಬೇವಿನಸೊಪ್ಪು, ಅರಿಶಿನ ಕುಂಕುಮ ಪಂಚ ಭಕ್ಷ್ಯಗಳ ಎಡೆಯಿಟ್ಟು ಆರಾಧಿಸುವ ಪದ್ಧತಿ ಇಂದಿಗೂ ಆಚರಣೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಈ ಊರ ಜನ ಪ್ರಾಚೀನ ಸ್ಮಾರಕಗಳನ್ನು ಪೂರ್ವಜರ ನೆಲೆಗಳಾಗಿ ಹಿರಿಯರ ನೆನಪಿಗೆ ಪ್ರತಿವರ್ಷ ಪಿತೃಪಕ್ಷದಲ್ಲಿ ಎಡೆಯಿಟ್ಟು ದೀಪ ಹೊತ್ತಿಸಿ ಹಬ್ಬ ಆಚರಿಸುವ ಪದ್ಧತಿಯನ್ನು ಕಾಣಬಹುದು.

ಅರದೇಶನಹಳ್ಳಿಯಲ್ಲಿ ಕಂಡುಬಂದ ಶಿಲಾಯುಗದ ಸಮಾಧಿಗಳನ್ನು ಜನರು ನಿಧಿ ಇದೆ ಎಂದು ಹಾಳು ಮಾಡಿರುವುದಲ್ಲದೆ, ಚಪ್ಪಡಿಯಾಕಾರದಲ್ಲಿದ್ದ ಕಲ್ಲುಗಳನ್ನು ಒಡೆದು ದ್ರಾಕ್ಷಿ ತೋಟಗಳಿಗೆ, ತಮ್ಮ ಉಪಯೋಗಕ್ಕೆ ಬಳಸಿಕೊಂಡಿರುವುದರಿಂದ ಹೆಚ್ಚಿನ ಸಮಾಧಿಗಳು ನಾಶವಾಗಿದೆ. ಹಾಳು ಮಾಡಿರುವ ಒಂದು ಸಮಾಧಿಯು ೧.೩೭ ಮೀ.ಅಗಲ, ೧.೮೩ ಮೀ ಉದ್ದ ೧.೫೨ ಮೀ.ಗಳಷ್ಟು ಎತ್ತರವುಳ್ಳದಾಗಿದೆ. ೪ ಕಡೆಗಳಲ್ಲಿ ನಿಲ್ಲಿಸಿರುವ ಕಲ್ಲುಗಳು ಸುಮಾರು ೨೨-೨೩ ಸೆಂ.ಮೀ. ದಪ್ಪವಾಗಿದೆ. ಮೇಲ್ಭಾಗದಲ್ಲಿ ಹಾಕಿದ್ದ ಚಪ್ಪಡಿಯು ೧೨ ೧/೨ ಅಡಿಗಳಷ್ಟು ಉದ್ದ, ೮ ಅಡಿ ಅಗಲವಾಗಿದೆ. ಈ ಸಮಾಧಿಯಲ್ಲಿ ೩ ಮಡಕೆಗಳು ದೊರೆತಿದ್ದು, ಅದರಲ್ಲಿ ಬೂದಿ ತುಂಬಿದೆ. ಸಮಾಧಿಯಲ್ಲಿ ಕಲ್ಲಿನ ಹಾಸುಗಲ್ಲು, ಅರೆಯುವ ಕಲ್ಲುಗಳು ದೊರೆತಿವೆ. ಈ ಮಡಿಕೆಗಳಲ್ಲಿ ಒಂದು ಮಡಕೆಯ ಮೇಲೆ ಬಣ್ಣದ ಸಾಲುಗಳು ಚಿತ್ರಿಸಲಾಗಿದೆ.

ಬೃಹತ್ ಶಿಲಾಯುಗದ ಕಾಲದಲಲ್ಲಿ ಬಣ್ಣವನ್ನು ಉಪಯೋಗಿಸಿ ಮಡಕೆಯ ಹೊರಭಾಗವನ್ನು ಚಿತ್ರಿಸಲಾಗುತ್ತಿತ್ತು

## ರೇಖಾಚಿತ್ರಗಳು

ಇತಿಹಾಸ ಪೂರ್ವ ಕಾಲದ ರೇಖಾಚಿತ್ರಗಳು ದೊಡ್ಡಬಳ್ಳಾಪುರ ತಾಲ್ಲೂಕಿನ ಶ್ರೀರಾಮನಹಳ್ಳಿ, ಲಗುಮೇನಹಳ್ಳಿ, ಹುಲುಕಡಿಬೆಟ್ಟ, ಬೊಮ್ಮನಹಳ್ಳಿ, ಮೇಳೆಕೋಟೆಗಳಲ್ಲಿ ನೈಸರ್ಗಿಕ ಗುಹೆ, ಕಲ್ಲೂಟರೆ, ನಿಲುವುಗಲ್ಲಿನ ಮೇಲೆ, ವಿಶಾಲ ಬಂಡೆಗಳ ಕೆಳಭಾಗದಲ್ಲಿ ಪ್ರಾಣಿಗಳು, ಮಾನವರ ಹಾಗೂ ಅರ್ಥೈಸಲಾಗದ ಹಲವಾರು ಚಿತ್ರಗಳಿವೆ.

ಮೇಳೇಕೋಟೆಯ ಹೊಲವೊಂದರಲ್ಲಿರುವ ಕಲ್ಗೋರಿ ಮೇಲಿನ ನಿಲುವುಗಲ್ಲಿನ ಮೇಲೆ ಕಲ್ಲಿನಿಂದ ಕೊರೆದು ರಚಿಸಿರುವ ಮಾನವರ ರೇಖಾಚಿತ್ರವೊಂದಿದೆ. ಬೊಮ್ಮನಹಳ್ಳಿಯ ಊರ ಹಿಂದಿರುವ ಗುಡ್ಡಗಳ ನಡುವಿನ ಹೊರಚಾಚಿರುವ ವಿಶಾಲ ಬಂಡೆಯೊಂದರ ಕೆಳಭಾಗದಲ್ಲಿ ಕೈ ಹಿಡಿದಿರುವ ಮಾನವರು, ಜಿಂಕೆಗಳು, ಹಾವು, ಕೆಲವೊಂದು ಪಕ್ಷಿಗಳು ವೃತ್ತಾಕಾರದ ರಚನೆಗಳಿರುವುದನ್ನು ಪತ್ತೆಹಚ್ಚಲಾಗಿದೆ. ಹುಲುಕಡಿ ಬೆಟ್ಟದ ಮೇಲಿನ ಕಲ್ಲಾಸರೆಯಲ್ಲಿ ಕೆಲವೊಂದು ಬಣ್ಣದ ಚಿತ್ರಗಳು ಕಂಡು ಬಂದಿದೆ.

ಸಾಸಲು ಗ್ರಾಮದ ಬಳಿ ಬೃಹತ್ ಶಿಲಾಯುಗಕ್ಕೆ ಸೇರಿದ ೫ ನಿಲುವುಗಳು ಹಲವಾರು ರೇಖಾ ಚಿತ್ರಗಳು ಕಂಡು ಬಂದಿವೆ. ಸಾಸಲು ಗ್ರಾಮದ ಉತ್ತರ ದಿಕ್ಕಿನಲ್ಲಿ ಒಂದೂವರೆ ಕಿಲೋಮೀಟರ್ ದೂರದಲ್ಲಿ ೫ ಅಡಿ ಎತ್ತರ ಹಾಗೂ ೨ ೧/೨ ಅಡಿ ಅಗಲದ ಒಂದು ನಿಲುವುಗಲ್ಲಿದೆ. ಈ ನಿಲುವುಗಲ್ಲಿನ ಮೇಲೆ ಹಲವಾರು ರೇಖಾ ಚಿತ್ರಗಳಿವೆ. ಯಾವುದೇ ಅರ್ಥವನ್ನು ಸೂಚಿಸದೇ ವಿಚಿತ್ರವಾದ ಚಿತ್ರಗಳು, ವಿಚಿತ್ರವಾದ ದಳಗಳಂತಹ ಚಿತ್ರಗಳು ಮತ್ತು ಅವುಗಳ ಮೇಲ್ಭಾಗಲ್ಲಿ ಚೌಕಳಿ ಮನೆಗಳ ಚಿತ್ರಗಳಿವೆ.

ಸಾಸಲು ಗ್ರಾಮದ ನಿಲುವುಗಲ್ಲುಗಳು ದೊರೆತ ಸ್ಥಳದಿಂದ ೨ ಕಿಲೋಮೀಟರ್ ದೂರದಲ್ಲಿ ನಿಲುವುಗಲ್ಲುಗಳು ಮತ್ತು ರೇಖಾ ಚಿತ್ರಗಳು ಒಂದೇ ನಿವೇಶನದಲ್ಲಿ ದೊರೆತಿವೆ ಸಾಸಲು ಗ್ರಾಮದ ಈಶಾನ್ಯ ದಿಕ್ಕಿನಲ್ಲಿರುವ ಕದರಿಕಂಭದ ಗುಡ್ಡದಲ್ಲಿನ ಬಂಡೆಗಳ ಮೇಲೆ ೧೪ ರೇಖಾಚಿತ್ರಗಳಿವೆ. ಇವು ೩-೪ ಚದರಡಿಯ ಕಪ್ಪು ಬಂಡೆಗಲ್ಲುಗಳ ಮೇಲೆ ಕಲ್ಲಿನಿಂದ ಕುಟ್ಟಿ ಕುಟ್ಟಿ ರಚಿಸಿದಂತಹ ಚಿತ್ರಗಳಲ್ಲಿ ನವಿಲು, ಆನೆ, ಜಿಂಕೆ, ಮನುಷ್ಯ, ನಕ್ಷತ್ರ ಮುಂತಾದ ಚಿತ್ರಗಳೇ ಅಲ್ಲದೇ ಕೆಲವೊಂದು ಅರ್ಥೈಸಲಾರದಂತ ಚಿತ್ರಗಳು ಸಾಕಷ್ಟಿವೆ.

ಶ್ರೀರಾಮನಹಳ್ಳಿಯ ಕಾಡಿನ ಗುಡ್ಡದಲ್ಲಿ ಬಂಡೆಗಳ ಮೇಲೆ ಕೆಲವು ರೇಖಾ ಚಿತ್ರಗಳಿವೆ. ಆನೆ, ಗೂಳಿ, ನವಿಲು, ಮನುಷ್ಯನ ಚಿತ್ರಗಳಿವೆ ಈ ಪ್ರದೇಶದಲ್ಲಿ ಮಡಕೆ ಚೂರುಗಳು ದೊರೆತಿವೆ. ಉಜ್ಜೈನಿ ಬೆಟ್ಟದ ಕಾಡಿನ ನಡುವೆ ಒಂದು ಗುಡ್ಡದ ಮೇಲೆ ೪-೫ ಚದುರಡಿಯ ದಪ್ಪ ಗ್ರಾನೈಟ್ ಬಂಡೆಗಳ ಮೇಲೆ ಕಲ್ಲಿನಿಂದ ಕಲ್ಲನ್ನು ಚಚ್ಚಿ ಕೆತ್ತಿದ ೧೭ ರೇಖಾ ಚಿತ್ರಗಳಿವೆ. ನವಿಲು, ಆನೆ, ಜಿಂಕೆ, ಕುರಿ, ಮಾನವ, ಗೂಳಿ ಇನ್ನು ಅರ್ಥವಾಗದ ರೇಖಾಚಿತ್ರಗಳಿವೆ.

ಪಾಂಡವರ ದಿಣ್ಣೆಯ ಬುಡ್ಡೆಪ್ಪನ ಹೊಲದಲ್ಲಿ ೬ ಅಡಿ ಉದ್ದ, ೨ ಅಡಿ ಅಗಲದ ನಿಲುವುಗಲ್ಲು ಇದ್ದು, ಇದರ ಪಕ್ಕ ೧೫ ಕ್ಯಾಪ್ ಸ್ಟೋನ್ ಸಮಾಧಿಗಳಿವೆ. ಹಾಲುಚಿಲುಮೆಯಲ್ಲಿ ೬ ಅಡಿ ಕ್ಯಾಪ್ ಸ್ಟೋನ್ ಸಮಾಧಿಗಳು, ೧೨ ಅಡಿ ಉದ್ದ ೩ ೧/೨ ಅಡಿ ಅಗಲ ನಿಲುವುಗಲ್ಲು ಸುತ್ತಲೂ ೧೯ ಕಲ್ಗುಪ್ಪೆ ಸಮಾಧಿಗಳು, ಆದಿ ಮಾನವನ ವಾಸಕ್ಕೆ ಯೋಗ್ಯವಾದ ಕಲ್ಲಾಸರೆಗಳನ್ನು ಸ್ಥಳೀಯರು ಗೂಡ್ಗಲ್ಲು, ಕೋತಿಕಲ್ಲು, ಪಾಂಡವರ ಕಲ್ಲು ಎಂದು ಕರೆಯುತ್ತಾರೆ. ಉಜ್ಜೈನಿ ಬೆಟ್ಟದಲ್ಲಿ ಸ್ವಸ್ತಿಕ್ ಆಕಾರದಂತಿರುವ ಕಲ್ಲಾಸರೆಯ ಸಮಾಧಿಗಳು ನಿಧಿ ಶೋಧಕರಿಂದ ಹಾಳಾಗಿದೆ. ಭೈರಾಪುರ ಹೊಲಗಳಲ್ಲಿ ೩೨ ಶಿಲಾವೃತ್ತ ಸಮಾಧಿಗಳಿವೆ. ಜಾಲಗೆರೆ ೧೧ ಕಲ್ಗುಪ್ಪೆ ಸಮಾಧಿಗಳಿವೆ.

ಜಾಲಗೆರೆ ಸಮೀಪ ೧೨ ಅಡಿ ಉದ್ದ ೩ ೧/೨ ಅಡಿ ಅಗಲದ ನಿಲುವುಗಲ್ಲಿದೆ. ದೊಡ್ಡ ಬೆಳವಂಗಲ ಸಕ್ಕರೆ ಗೊಲ್ಲಹಳ್ಳಿ ಮಧ್ಯೆ ಅಕ್ಕತಮ್ಮನಹಳ್ಳಿ ಸಮೀಪ ಮಟಗುಂಟೆಯ ಹತ್ತಿರ ತುಂಡು ಕಲ್ಲಿನ ಸಮಾಧಿ ಇದೆ. ಒಂದು ಚಿಕ್ಕ ನಿಲುಸುಗಲ್ಲು ಇದೆ. ಭಕ್ತರಹಳ್ಳಿ ಆಲಪನಹಳ್ಳಿ ಮಧ್ಯೆ ೧೪ ಅಡಿ ಎತ್ತರ ೪ ಅಡಿ ಅಗಲದ ನಿಲುಸುಗಲ್ಲು ಹಾಗೂ ೧೭ ಬೃಹತ್ ಶಿಲಾ ಸಮಾಧಿಗಳಿವೆ. ರಾಜಘಟ್ಟದ ಬಳಿ ಬೂದಿಗುಂಡಿಯಲ್ಲಿ ೪ ಹಾದಿ ಕೋಣೆ ಸಮಾಧಿಗಳಲ್ಲಿ ಒಂದು ಅಗೆದ ಸಮಾಧಿ ಹಾಳಾದ ರಂಧ್ರಕೋಣೆ ಊರಿಗರು ಕಲ್ಮನೆ ಎಂದು ಗುರುತಿಸಲ್ಪಡುತ್ತಿದ್ದ ೪ ಶಿಲಾವೃತ್ತ ಸಮಾಧಿಗಳು ನಿಧಿ ಶೋಧಕರಿಂದ ಹಾಳಾಗಿದೆ.

ಹೊಸಕೋಟೆ ತಾಲ್ಲೂಕಿನಲ್ಲಿ ಕುಪ್ಪೆದೊಡ್ಡಿ, ಜಡಿಗೇನಹಳ್ಳಿಯಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಅವಶೇಷಗಳು ದೊರೆತಿವೆ. ದಕ್ಷಿಣ ಪಿನಾಕಿನಿ ನದಿ ಕಣಿವೆ ಪ್ರದೇಶದ ಸಂಸ್ಕೃತಿಯ ಕುರುಹುಗಳಾಗಿ ಹೊಸಕೋಟೆಯಿಂದ ಮಾಲೂರಿಗೆ ಹೋಗುವ ಹೆದ್ದಾರಿಯ ಜಡಿಗೇನಹಳ್ಳಿಯಲ್ಲಿ ೪ ಸಮಾಧಿಗಳ ಅವಶೇಷಗಳನ್ನು ಉತ್ಖನನದ ಮೂಲಕ ಹೊರ ತೆಗೆದರು. ಸಮಾಧಿಗಳನ್ನು ನೆಲದಲ್ಲಿ ೧೦ ಅಡಿ ಆಳವಾದ ಕುಣಿಗಳನ್ನು ಮಾಡಿ ಮಣ್ಣಿನಲ್ಲಿ ರಚಿಸಿದ ಶವಪೆಟ್ಟಿಗೆ ಇರಿಸಿ, ಅದರ ಜೊತೆಗೆ ಹಲವಾರು ಪಾತ್ರೆಗಳು, ಕಬ್ಬಿಣದ ಆಯುಧಗಳನ್ನು ಇರಿಸಿ, ಕಲ್ಲು ಮಣ್ಣುಗಳಿಂದ ಮುಚ್ಚಿರುತ್ತಾರೆ. ಮಣ್ಣಿನಿಂದ

ಮುಚ್ಚಿದ ಸಮಾಧಿಯ ಮೇಲ್ಭಾಗದಲ್ಲಿ ಕಪ್ಪು ಕಲ್ಲುಗಳನ್ನು ವೃತ್ತಾಕಾರದಲ್ಲಿ ಜೋಡಿಸಲಾಗಿದೆ. ಗಾತ್ರದಲ್ಲಿ ದೊಡ್ಡದಾದ ಈ ಸಮಾಧಿಗಳಲ್ಲಿ ಮಣ್ಣಿನ ಶವ ಪೆಟ್ಟಿಗೆಗಳು ಇರುವುದು ಅತ್ಯಂತ ವಿಶೇಷ. ಶವ ಪಟ್ಟಿಗೆಗಳ ಜೊತೆಗೆ ಇರಿಸಲಾದ ಮಡಿಕೆಗಳನ್ನು ಹಲವಾರು ವಿನ್ಯಾಸ ವರ್ಣಗಳಲ್ಲಿ ರಚಿಸಲಾಗಿದೆ. ಕಪ್ಪು–ಕೆಂಪು ದ್ವಿವರ್ಣ ಮಡಿಕೆಗಳು ದೊರೆಕಿದೆ. ಶವಗಳ ಅಸ್ತಿ ಪಂಜರಗಳು ಕಳೆಬರಹಗಳು ದೊರೆತಿಲ್ಲ, ಖಡ್ಗ, ಈಟಿ, ಅಡ್ಡಣಿಗ, ಗುಳ, ಕುಡುಗೋಲು ಇತ್ಯಾದಿಗಳು ಉತ್ಖನನದಲ್ಲಿ ದೊರೆತಿವೆ[೧೧೧]. ಮಡಕೆಗಳ ಮೇಲೆ ಗೀಚು ಕಾರದ ಗೆರೆಗಳವೆ. ಈ ರೀತಿಯಲ್ಲಿನ ಈ ಬೃಹತ್ ಶಿಲಾಯುಗದ ಸಮಾಧಿಗಳು ಈ ಸ್ಥಳ ಪ್ರಾಚೀನ ಜನವಸತಿಯ ಬಗ್ಗೆ ಮಾಹಿತಿ ನೀಡುತ್ತದೆ. ಈ ಸ್ಥಳವು ಶಿಲಾಯುಗದ ಸಂಸ್ಕೃತಿಯ ನೆಲೆಯಾಗಿ ರೂಪುಗೊಂಡಿತು. ಆದರೆ ಮಾಲೂರು ಹೊಡಸಕೋಟೆ ರಸ್ತೆಯನ್ನ ಮಾಡುವಾಗ ಸಮಾಧಿಗಳಲ್ಲಿ ತೆಗೆದು ರಸ್ತೆಯ ಬದಿಯಲ್ಲಿ ಹಾಕಿದ್ದಾರೆ. ಈಗ ಬರೀ ಕಲ್ಲುಗಳ ರಾಶಿಯನ್ನು ಕಾಣಬಹುದು ಅಷ್ಟೆ.

ದೊಡ್ಡಬಳ್ಳಾಪುರ ತಾಲ್ಲೂಕಿನ ಲಗುಮೇನಹಳ್ಳಿಯ ಬೆಟ್ಟದ ನಡುಭಾಗದಲ್ಲಿ ಸ್ವಾಭಾವಿಕವಾಗಿರುವ ಬೃಹತ್ತಾಕಾರದ ೨ ಕಲ್ಲು ಬಂಡೆಗಳ ಕೆಳಗೆ ದೊಡ್ಡಬಂಡೆಯ ಕೆಳಗೆ ಒಬ್ಬ ವ್ಯಕ್ತಿ ನುಸುಳಬಹುದಾದ ಸಣ್ಣ ಕಿಂಡಿಯ ಒಳಗೆ ಹೋದರೆ ೧೨ ಜನ ಮಲಗುವಷ್ಟು ವಿಶಾಲವಾದ ಸ್ಥಳದಲ್ಲಿ ಮಡಕೆ ಕುಡಕೆಗಳನ್ನಿಟ್ಟು ಪೂಜೆ ಮಾಡುವ ಪದ್ಧತಿ ಇಂದಿಗೂ ಇರುವುದನ್ನು ಗಮನಿಸಿದರೆ ಹಿಂದೆ ಈ ಸ್ಥಳದಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ಮಾನವರು ವಾಸಿಸುತ್ತಿದ್ದಿರಬೇಕು. ಅದಕ್ಕಾಗಿ ನವಶಿಲಾಯುಗದ ಕಾಲಕ್ಕೆ ಸೇರಿರುವ ಒಂದು ಶಿಲಾಯುಗ (ಕಲ್ಲಿನ ಗುಂಡು) ಬೆಣಚುಕಲ್ಲಿನ ಚೌಕಾಕಾರದಲ್ಲಿದೆ. ಈಗ ಪ್ರತಿ ಸೋಮವಾರ ಮುನೇಶ್ವರ ದೇವರ ಹೆಸರಿನಲ್ಲಿ ಪೂಜೆ ಮಾಡುತ್ತಾರೆ. ಬೆಟ್ಟದಿಂದ ಗ್ರಾಮಕ್ಕೆ ಇಳಿಯುವಾಗ ಒಂದು ಕಡೆ ಕಲ್ಲುಗಳನ್ನಿಟ್ಟು ಪೂಜಿಸಲಾಗುತ್ತದೆ. ಅಲ್ಲಿ ಒಂದು ಕಲ್ಲಿನ ಮೇಲೆ ಒಂದು ರೇಖಾ ಚಿತ್ರವು ಗೂಳಿಯ ಚಿತ್ರವನ್ನು ಹೊಲುತ್ತದೆ.

ಲಗುಮೇನಹಳ್ಳಿಯ ದಕ್ಷಿಣಕ್ಕೆ ೨ ಕಿ,ಮೀ. ದೂರದಲ್ಲಿನ ಬೆಟ್ಟವನ್ನು ಹತ್ತುತ್ತಿದ್ದಂತೆಯೇ ಪ್ರಾರಂಭದಲ್ಲಿಯೇ ಉತ್ತರಾಭಿಮುಖವಾಗಿ ಸ್ವಾಭಾವಿಕವಾದ ಗುಹೆಯಲ್ಲಿ ದೊಡ್ಡ ಸುರಂಗ ರಚನೆಯಿದೆ. ದೊಡ್ಡ ದೊಡ್ಡ ಕಲ್ಲು ಚಪ್ಪಡಿಗಳನ್ನು ಒಂದರ ಮೇಲೊಂದು ಜೋಡಿಸಿರುವಂತಿದೆ. ಅದನ್ನು ನೋಡಿದಾಕ್ಷಣವೇ ಇದು ಮಾನವನ ನೆಲೆಯಾಗಿತ್ತೆಂದು ಸ್ಪಷ್ಟವಾಗುತ್ತದೆ. ಹಾಗೆಯೇ ಬೆಟ್ಟದ ಮೇಲೆ ವಿಶಾಲವಾದ ಸಮತಟ್ಟಾದ ಬಯಲು ಪ್ರದೇಶದಲ್ಲಿ ೨ ಪ್ರಾಕೃತಿಕ ದೋಣೆಗಳವೆ. ಮೇಲ್ಭಾಗದಲ್ಲಿ

[೧೧೧] ಎಸ್.ಕೆ. ಅರುಣಿ, ಅವಲೋಕನ, ಏಪ್ರಿಲ್– ಜೂನ್ ೨೦೧೩, ಇ.ದರ್ಪಣ ಸಂ.೧೭, ಪು.ಸಂ-೨೮, ೩೦.

ನಿಲುವುಗಲ್ಲೊಂದಿದೆ. ಪುಣ್ಯಕ್ಷೇತ್ರವಾಗಿರುವ ಘಾಟಿ ಸುಬ್ರಹ್ಮಣ್ಯ ಕ್ಷೇತ್ರದಲ್ಲಿನ ಶಿಲಾಗೋರಿ, ಕಲ್ಮನೆ, ಗುಹೆಗಳು, ನಿಲುವುಗಳಂದ ಕ್ರಿ.ಪೂ.ದಿಂದ ಇಲ್ಲಿನ ಜನ ವಸತಿ ಕೇಂದ್ರವಾಗಿತ್ತೆಂದು ತಿಳಿಯಬಹುದು.

ಒಟ್ಟಿನಲ್ಲಿ ಬೆಂಗಳೂರು ಪರಿಸರದಲ್ಲಿ ೧೮೭೩ರಲ್ಲಿ ರಾಬರ್ಟ್ ಕೊಲ್ ರವರಿಂದ ಹಿಡಿದ ಇತ್ತೀಚಿನ ಸಂಶೋಧಕರವರೆಗೂ ಸುಮಾರು ೧೪೭ ವರ್ಷಗಳ ಸುದೀರ್ಘ ಶೋಧನೆಯಿಂದಾಗಿ ಇತಿಹಾಸ ಆರಂಭಕಾಲದ ಅವಶೇಷಗಳಂದ ಹಿಡಿದು ನಿಲುವುಗಲ್ಲುವರೆಗೆ ಹಲವಾರು ಅವಶೇಷಗಳು ದೊರೆತಿದ್ದು, ಬೆಂಗಳೂರಿನ ಪ್ರಾಗಿತಿಹಾಸವನ್ನು ಸುಮಾರು ಕ್ರಿ.ಪೂ.೧೨೦೦ ವರ್ಷಗಳ ಹಿಂದಕ್ಕೆ ಕೊಂಡೊಯ್ಯುತ್ತದೆ.

# ಅಧ್ಯಾಯ – ೩

## ರಾಜಕೀಯ ಇತಿಹಾಸ

೩.೧ ಗಂಗರು

೩.೨ ರಾಷ್ಟ್ರಕೂಟರು

೩.೩ ನೊಳಂಬರು

೩.೪ ಚೋಳರು

೩.೫ ಹೊಯ್ಸಳರು

೩.೬ ಕುಕ್ಕಲ ನಾಡಪ್ರಭುಗಳು

೩.೭ ವಿಜಯನಗರದ ಅರಸರು

೩.೮ ಆವತಿ ನಾಡಪ್ರಭುಗಳು

೩.೯ ಸುಗಟೂರು ಪ್ರಭುಗಳು

೩.೧೦ ಮರಾಠರು

೩.೧೧ ಹುಲುಕಡಿ ನಾಡಪ್ರಭುಗಳು

೩.೧೨ ಯಲಹಂಕ ನಾಡಪ್ರಭುಗಳು

೩.೧೩ ತೊರವಳ ನಾಡಪ್ರಭುಗಳು

೩.೧೪ ಮೈಸೂರು ಒಡೆಯರು

ಒಂದು ಪ್ರದೇಶದ ಪ್ರಾಚೀನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಭೌಗೋಳಿಕ ಪರಿಸ್ಥಿತಿಯನ್ನು ತಿಳಿಯಲು ಶಾಸನಗಳೇ ಪ್ರಮುಖ ಆಧಾರವಾಗಿರುತ್ತದೆ. ಶಾಸನಗಳಲ್ಲಿ ಅವು ರಚಿತವಾದ ಕಾಲಘಟ್ಟದ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ವಿವರಗಳಿಂದ ಒಂದು ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚನೆಗೆ ಅತ್ಯಂತ ನಂಬಲಾರ್ಹ ಆಕರಗಳಾಗಿವೆ.

ಆಡಳಿತದ ಮುಖ್ಯಸ್ಥನಾದ ರಾಜನನ್ನು ಧರ್ಮಮಹಾರಾಜರೆಂದು, ಮಂತ್ರಿಮಂಡಲ ರಾಜನಿಗೆ ಸಹಾಯಕರಾಗಿರುತ್ತಾರೆ. ಪ್ರಧಾನಮಂತ್ರಿಯನ್ನು ಸರ್ವಾಧಿಕಾರಿ, ವಿದೇಶಾಂಗಮಂತ್ರಿಯನ್ನು ಸಂಧಿ ವಿಗ್ರಹಿ, ಸೈನ್ಯದ ಮುಖ್ಯಸ್ಥನನ್ನು ದಂಡನಾಯಕ / ಸೇನಾಧಿಪತಿ, ಖಜಾನೆ ಮುಖ್ಯಸ್ಥನನ್ನು ಹಿರಿಯ ಭಂಡಾರಿಕ, ಅರಮನೆ ಮೇಲ್ವಿಚಾರಕನನ್ನು ಮನೆವರ್ಗಡೆ, ಲೆಕ್ಕ ಪತ್ರಗಳಾಧಿಕಾರಿಯನ್ನು ಶ್ರೀಕರಣಿಕ ಎಂದು ಹೀಗೆ ಅರಮನೆಗೆ / ರಾಜ್ಯಕ್ಕೆ ಸಂಬಂಧಿಸಿದಂತೆ ವಿವಿಧ ವಲಯದಲ್ಲಿ ಅಧಿಕಾರಿಗಳಿದ್ದರೇ, ರಾಜ್ಯವನ್ನು ಆಡಳಿತಕ್ಕಾಗಿ ಹಲವಾರು ಪ್ರಾಂತ್ಯಗಳಾಗಿ ವಿಂಗಡಿಸಿ, ಪ್ರತಿಯೊಂದು ವಿಭಾಗಗಳ ಮುಖ್ಯಸ್ಥರನ್ನು ಪ್ರಾಂತ್ಯಾಧಿಕಾರಿ (ಸಾಮಾನ್ಯವಾಗಿ ಪ್ರಾಂತ್ಯಾಧಿಕಾರಿಗಳಾಗಿ ರಾಜಕುಮಾರರನ್ನು ನೇಮಿಸುತ್ತಿದ್ದರು), ನಾಡು / ಸೀಮೆಗಳ ಮುಖ್ಯಸ್ಥನಾಗಿ ನಾಡಗೌಡ ಅಥವಾ ನಾಡಪ್ರಭು, ಪಟ್ಟಣದ ಮುಖ್ಯಸ್ಥನಾಗಿ ಪಟ್ಟಣಸ್ವಾಮಿ, ಗ್ರಾಮಾಡಳಿತವನ್ನು ಗಾವುಂಡ / ಗೌಡ ಮುಖ್ಯಸ್ಥನಾಗಿ ಆಳ್ವಿಕೆ ನಡೆಸುತ್ತಿದ್ದರು.

ಆಡಳಿತದಲ್ಲಿ ರಾಜನು ಮೊದಲ ಸ್ಥಾನದಲ್ಲಿದ್ದರೆ, ಯುವರಾಜನು ಎರಡನೇಯ ಸ್ಥಾನದಲ್ಲಿ ನಂತರದ ಸ್ಥಾನದಲ್ಲಿ ಉಳಿದ ರಾಜಕುಮಾರರು, ಕುಮಾರ ವೃತ್ತಿಯಿಂದ ಆಳುತ್ತಿದ್ದರು. ಗಂಗರ ಶಿವಕುಮಾರನ ಆಳ್ವಿಕೆಯಲ್ಲಿ ಮಾರಸಿಂಹನು ಯುವರಾಜನಾಗಿ ಮಣ್ಣೆಯನ್ನು ನೋಡಿ ಕೊಳ್ಳುತ್ತಿದ್ದನು. ಪಟ್ಟದ ರಾಣಿಯ ಅಥವಾ ಹಿರಿಯ ಮಗನನ್ನು ಯುವರಾಜನಾಗಿ ಉಳಿದವರು ಕುಮಾರರು ರಾಜ್ಯದ ಆಡಳಿತದಲ್ಲಿ ಭಾಗವಹಿಸುತ್ತಿದ್ದರು. ರಾಜರಿಗೆ ಬಹುಪತ್ನಿಯರಿದ್ದು ಪಿರಿಯರಸಿ, ಪಟ್ಟಮಹಾದೇವಿ, ರಾಣಿಯರೆಂದು ಕರೆಯುತ್ತಿದ್ದು ರಾಣಿಯರು ಕೆಲವೊಂದು ಸೀಮೆಗಳನ್ನು ಆಳುತ್ತಿದ್ದರು.

ವಿವಿಧ ಪ್ರಾಂತಗಳಿಗೆ ಒಡೆಯರಾಗಿ ಆಳುತ್ತಿದ್ದ ಸಾಮಂತರು ಆಳುವ ದೃಷ್ಟಿಯಿಂದ ಸ್ವಾತಂತ್ರರಾಗಿದ್ದರೂ ತಮ್ಮ ಮೇಲಿನ ಒಡೆಯರಿಗೆ ನಿಷ್ಠೆಯಿಂದ ಇದ್ದು, ಕಾಲಕಾಲಕ್ಕೆ ಕಪ್ಪ ಕಾಣಿಕೆಗಳನ್ನು ಸಲ್ಲಿಸುವುದರ ಜೊತೆಗೆ ಚಕ್ರವರ್ತಿಯು ಯುದ್ಧಕ್ಕೆ ಹೋದಾಗ ಸೈನ್ಯದ ನೆರವನ್ನು ಒದಗಿಸಬೇಕಾಗಿತ್ತು. ತಮ್ಮ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಮಹಾಮಂಡಳೇಶ್ವರನಾಗಿ ಪದೋನ್ನತಿ ಪಡೆಯುತ್ತಿದ್ದರು. ಸಾಮಂತ್ವವು ವಂಶ ಪಾರಂಪರೆಯಾಗಿ ಮುಂದುವರೆಯುತಿತ್ತು.

ಕೇಂದ್ರಾಡಳಿತಕ್ಕೂ ಊರಿನ ಜನರ ಮಧ್ಯವರ್ತಿಯಾಗಿದ್ದ ಗಾವುಂಡರು ಅಥವಾ ಪ್ರಭು ಗಾವುಂಡರನ್ನು ರಾಜ್ಯದ ಅಧಿಕಾರಿಗಳೆಂದು ಭಾವಿಸುವುದಕ್ಕಿಂತ ಜನರ ಪ್ರತಿನಿಧಿಗಳಾಗಿದ್ದರು. ಮಹಾ ಸಾಮಂತರ ಕೆಳಗೆ, ಗಾವುಂಡರ ಮೇಲಿನ ಅಧಿಕಾರಿಗಳಾಗಿದ್ದವರನ್ನ ಹೊಯ್ಸಳ ಕಾಲದಲ್ಲಿ ಸಮಸ್ತ ಪ್ರಭು ಗಾವುಂಡರೆಂದು ಕರೆಯಲಾಗುತಿತ್ತು. ಗ್ರಾಮಗಳೇ ಮೂಲ ಘಟಕಗಳಾಗಿ ಕೆಲವು ಗ್ರಾಮಗಳಿಗೆ ಉಪಗ್ರಾಮಗಳಿರುತಿತ್ತು. ಗ್ರಾಮಗಳನ್ನು ಗೌಡಾಳಿಕೆಗೆ ಬಿಟ್ಟು ಕೊಡುತ್ತಿದ್ದರು. ನಾಡು ಅಥವಾ ಸೀಮೆಯ ಮೇಲೆ ಅಧಿಕಾರವನ್ನು ನಾಡಪ್ರಭುಗಳ ಹಿಡಿತದಲ್ಲಿರುತಿತ್ತು.

ಹಾಗೇಯೇ ಅನೇಕ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಸುಂಕದಾಧಿಕಾರಿ, ಪ್ರಧಾನ, ಮಹಾಪ್ರಧಾನ, ಮಹಾಸಾಮಂತಾಧಿಪತಿ, ದಂಡನಾಯಕರು ಸಾಮನ್ಯವಾಗಿ ಮುಖ್ಯಸ್ಥರಾಗಿದ್ದರು. ಒಂದು ಸಾಮ್ರಾಜ್ಯದ ಇತಿಹಾಸವನ್ನು ರಚಿಸುವಾಗ ಸ್ಥಳೀಯವಾಗಿ ರಾಜರಿಗೆ ನೆರವಾದ ಸೈನಿಕರ, ಅಧಿಕಾರಿಗಳ, ಗ್ರಾಮಸ್ಥರ ವಿಷಯಗಳು ಪ್ರಮುಖವಾಗಿರುತ್ತದೆ. ಸ್ಥಳೀಯ ಜನರೊಂದಿಗೆ ಅವರ ಬಾಂಧವ್ಯ ಇರುವ ರೀತಿಯನ್ನು, ರಾಜಕೀಯ ಇತಿಹಾಸದಲ್ಲಿ ಕೇವಲ ರಾಜನನ್ನು ಮಾತ್ರ ಕೇಂದ್ರಿಕೃತವಾಗದೆ ಭೌಗೋಳಿಕ ಪ್ರದೇಶದ ಜನರ ಕೊಡುಗೆಯು ಸಹ ಇತಿಹಾಸ ರಚನೆಗೆ ಅತ್ಯಂತ ಪ್ರಮುಖವಾಗಿರುತ್ತದೆ.

ದೊಡ್ಡ ಸಾಮ್ರಜ್ಯಗಳ ಮೇಲೆ ಮಾತ್ರ ಅನೇಕ ಸಂಶೋಧನೆಗಳು ನಡೆದಿರುತ್ತದೆ. ಆದರೆ ಸಣ್ಣ ಪುಟ್ಟ ಮನೆತನಗಳ ಬಗ್ಗೆ ಮಂದಗತಿಯ ಅಧ್ಯಯನಗಳು ನಡೆದಿರುತ್ತದೆ. ಕೆಲವು ಮನೆತನಗಳ ಬಗ್ಗೆ ಶೋಧನೆಯೇ ಆಗಿರುವುದಿಲ್ಲ. ಆಳರಸರ ನಿಷ್ಟೆಗೆ, ಸಾಮ್ರಾಜ್ಯಗಳ ವಿಸ್ತರಣೆ, ಅಭಿವೃದ್ಧಿಗೆ, ಉಳಿವಿಗೆಗಾಗಿ ಈ ಸಣ್ಣ ಪುಟ್ಟ ಅರಸರುಗಳೇ ಕಾರಣ ಕರ್ತರಾಗಿರುತ್ತಾರೆ. ಇವರ ಬಗ್ಗೆ ಪೂರ್ಣ ಶೋಧನೆಯಾಗದೆ ಒಂದು ನಾಡಿನ ಇತಿಹಾಸ ಬೆಳಕಿಗೆ ಬರುವುದಿಲ್ಲ. ಆತ ಸಮುದಾಯದ ಜೊತೆಗೆ ನೇರ ಸಂಪರ್ಕದೊಂದಿಗೆ ಜನ ಜೀವನದ ಆಗು ಹೋಗುಗಳಲ್ಲಿ ಗಣನೀಯವಾದ ಪಾತ್ರವನ್ನು ವಹಿಸಿರುತ್ತಾರೆ. ಪ್ರಧಾನ ರಾಜಮನೆತನಗಳ ಆಳ್ವಿಕೆಯು ಒಂದು ಮುಖವಾದರೆ, ಸ್ಥಳೀಯ ಮುಖಂಡರ ಆಳ್ವಿಕೆಯು ಇನ್ನೊಂದು ಮುಖವಾಗಿರುತ್ತದೆ. ಒಂದು ಪ್ರಾದೇಶಿಕ ಇತಿಹಾಸ, ಅಖಂಡತೆಯ ಜೀವ ದ್ರವ್ಯವಾದ ಸಾಂಸ್ಕೃತಿಕ ಪರಂಪರೆಯ ಅಧ್ಯಯನೊಂದಿಗೆ ಸೇರಿರುತ್ತದೆ.

ಕರ್ನಾಟಕದ ಇತಿಹಾಸಕ್ಕೆ ಗ್ರಾಮಾಂತರ ಜಿಲ್ಲೆಯ ಕೊಡುಗೆಗಳು ಮಹತ್ವದ್ದಾಗಿದೆ. ಕರ್ನಾಟಕದ ಇತಿಹಾಸವು ಮೌರ್ಯರಿಂದ ಪ್ರಾರಂಭವಾದರೆ ಜಿಲ್ಲೆಯ ಇತಿಹಾಸವು ದಕ್ಷಿಣ ಭಾರತದ ಪ್ರಥಮ ಸಾಮ್ರಾಜ್ಯವಾದ ಶಾತವಾಹನರ ಕುರುಹುಗಳಾಗಿ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟದಲ್ಲಿ ಉತ್ಖನನದಿಂದ ದೊರೆತ ಆಧಾರಗಳಿಂದ ಜಿಲ್ಲೆಯ ಚರಿತ್ರೆ ಆರಂಭವಾಗುತ್ತದೆ. ರಾಜಕೀಯ

ಇತಿಹಾಸವನ್ನು ತಿಳಿಯಲು ಶಾಸನಗಳು ಮೂಲಾಧಾರಗಳಾಗಿವೆ. ಗಂಗರಸರಿಂದ ಪ್ರಾರಂಭವಾಗಿ ರಾಷ್ಟ್ರಕೂಟರು, ನೊಳಂಬರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮರಾಠರು, ಮೈಸೂರು ಒಡೆಯರು ಹಾಗೂ ನಾಡಪ್ರಭುಗಳಾದ ಕುಕ್ಕಲನಾಡ ಪ್ರಭುಗಳು, ಸುಗಟೂರು ಪ್ರಭುಗಳು, ಆವತಿನಾಡ ಪ್ರಭುಗಳು, ಹುಲುಕಡಿ ಪ್ರಭುಗಳು, ಯಲಹಂಕನಾಡ ಪ್ರಭುಗಳು, ತೊರವಳಿ ನಾಡಪ್ರಭುಗಳವರೆಗಿನ ರಾಜಕೀಯ ಇತಿಹಾಸದ ಜೊತೆಗೆ ವಿವಿಧ ಕಾಲಘಟ್ಟಗಳಲ್ಲಿ ಪ್ರತಿಯೊಂದು ರಾಜವಂಶವು ತನ್ನ ಸಂಸ್ಕೃತಿಯನ್ನು ಸ್ಥಿರಗೊಳಿಸಿರುವುದನ್ನು, ಆಳರಸರ ಏಳು ಬೀಳುಗಳು, ಆಢಳಿತ, ಕೊಡುಗೆಗಳು ರಾಜಕೀಯ ಸ್ಥಿರತೆಯನ್ನು ಕಾಣಬಹುದು.

## ೩.೧ ಗಂಗರು

ಗ್ರಾಮಾಂತರ ಜಿಲ್ಲೆಯಲ್ಲಿ ಪ್ರಾರಂಭದ ಶಾಸನಗಳು ಲಭಿಸುವುದೇ ಗಂಗರಸರ ಶಾಸನಗಳಿಂದ ಕ್ರಿ.ಶ.೪೫೯ರ ದೊಡ್ಡಬಳ್ಳಾಪುರ ತಾಲ್ಲೂಕಿನ ಮಲ್ಲೋಹಳ್ಳಿಯ ತಾಮ್ರಶಾಸನದಿಂದ ಕ್ರಿ.ಶ.೧೨೯೮ರ ಬೇಗೂರು ಹೋಬಳಿಯ ಹೊಂಗಸಂದ್ರದ ಹೊಯ್ಸಳ ಕಾಲದಲ್ಲಿ ಸಾಮಂತನಾಗಿದ್ದ ಇರಾಜೈರಾಜ ಕರ್ಕಾಟ ಮಹಾರಾಜನ್‌ನ ತಮಿಳು ಶಿಲಾಶಾಸನದ ವರೆಗೆ ದೊರೆತ್ತರೆ ಜಿಲ್ಲೆಯಲ್ಲಿ ೪ನೇ ರಾಚಮಲ್ಲನ ೧೦ನೇ ಶತಮಾನದ ಕಾಲದ ನಂತರದ ಯಾವುದೇ ಶಾಸನಗಳು ದೊರೆತಿಲ್ಲ.

ಗಂಗರು ೪ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಸುಮಾರು ೫೦೦-೬೦೦ ವರ್ಷಗಳ ತಮ್ಮ ಸುಧೀರ್ಘ ಆಳ್ವಿಕೆಯಲ್ಲಿ ಕ್ರಿ.ಶ.೩೫೦ ರಿಂದ ಕ್ರಿ.ಶ.೫೫೦ ರ ವರೆಗೆ ಪರಮಾಧಿಕಾರಿಗಳಾಗಿ ನಂತರದ ೧೦ನೇ ಶತಮಾನದವರೆಗೆ ಕದಂಬರು, ಬಾದಾಮಿ ಚಾಲುಕ್ಯರು, ಪಲ್ಲವರು, ರಾಷ್ಟ್ರಕೂಟರು ನಂತರ ಚೋಳ ರಾಜ ಮನೆತನಗಳೊಡನೆ ರಾಜಕೀಯವಾಗಿ ಮತ್ತು ರಕ್ತಸಂಬಂಧವನ್ನು ಹೊಂದಿ ಸಾಮಂತಾಧಿಪತಿಗಳಾಗಿ, ಮಾಂಡಲಿಕರಾಗಿ ನಂತರ ಹೊಯ್ಸಳರೊಂದಿಗೂ ಸಹ ಮಾಂಡಲಿಕರಾಗಿ[೧], ಸೀಮಿತ ರಾಜ್ಯದಲ್ಲಿ ಸೀಮಿತ ಸ್ವತಂತ್ರದೊಂದಿಗೆ ಆಳ್ವಿಕೆ ನಡೆಸುತ್ತಿದ್ದರು. ಚೋಳರೊಂದಿಗೆ ಸಾಮಂತರಾಗಿದ್ದರು ಎಂಬುದಕ್ಕೆ ಗಂಗರ ಶಾಸನದಲ್ಲಿ ತಮಿಳು ಪ್ರಭಾವ ಹಾಗೂ ಚೋಳರಸರಂತೆಯೇ ಹೋಲುವ ಗಂಗರಸರ ಹೆಸರುಗಳನ್ನು ಕಾಣಬಹುದು. ಬಾದಾಮಿ ಚಾಲುಕ್ಯರು ಮತ್ತು ಪಲ್ಲವ ಸಾಮ್ರಾಜ್ಯಗಳ ನಡುವಿನ ಯುದ್ಧಗಳಲ್ಲಿ ಕೆಲವು ಸಂದರ್ಭದಲ್ಲಿ ಗಂಗರು ತಟಸ್ಥವಾಗಿ ಮಹತ್ವದ ಸ್ಥಾನ ಪಡೆದಿದ್ದರು. ಸ್ವತಂತ್ರವಾಗಿ ಕ್ರಿ.ಶ.೩೫೦-೬೦೦ ರ ವರೆಗೆ, ಚಾಲುಕ್ಯರ ಸಾಮಂತರಾಗಿ ಕ್ರಿ.ಶ.೭೫೭-೯೭೩ ರ ವರೆಗೆ, ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಕ್ರಿ.ಶ.೯೭೩-೯೯೦ ರ ವರೆಗೆ ಆಳ್ವಿಕೆಯನ್ನು ನಡೆಸಿದ್ದಾರೆ.

---

[೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೪.

ಗ್ರೀಕ್ ಪ್ರವಾಸಿ ಟಾಲೆಮಿಯು ತನ್ನ ಬರಹದಲ್ಲಿ "ಗಂಗಾರಿಡೀ" ಜನಾಂಗ ಅಥವಾ ಪ್ರದೇಶವನ್ನು ಮತ್ತು ಅದರ ರಾಜಧಾನಿ "ಗಂಗೇ" ಎಂದು ಪ್ರಸ್ತಾಪಿಸಿದ್ದಾರೆ. ಪ್ಲೀನಿ ಎಂಬ ಮತ್ತೊಬ್ಬ ವಿದೇಶಿಯು ಗಂಗರಾಜ್ಯದ ಜನರನ್ನು ಗಂಗಾರಿಡೀ ಎಂದೇ ಸಂಬೋಧಿಸಿದ್ದಾರೆ[೨]. ತಮಿಳು ಶಾಸನಗಳಲ್ಲಿ ಗಂಗರನ್ನು ಕೊಂಗಣಿ (ಕೊಂಕಣಿ) ಅರಸರೆಂದು ಕರೆಯುತ್ತಾರೆ[೩].

ಕರ್ನಾಟಕದ ಮೊದಲ ಸಾಮ್ರಾಜ್ಯವಾದ ಉತ್ತರದಲ್ಲಿ ಬನವಾಸಿಯನ್ನು ರಾಜಧಾನಿಯಾಗಿ ಮಯೂರಶರ್ಮ ಕದಂಬ ವಂಶವನ್ನು ಸ್ಥಾಪಿಸಿದರೆ, ಕದಂಬರ ಸಮಕಾಲೀನರಾಗಿ ದಕ್ಷಿಣದಲ್ಲಿ ಕೊಂಗಣಿವರ್ಮನು ಗಂಗ ಸಾಮ್ರಾಜ್ಯವನ್ನು ಸ್ಥಾಪಿಸುವುದರೊಂದಿಗೆ ಕುವಲಾಲದಲ್ಲಿ (ಕೋಲಾರ) ರಾಜಕೀಯವನ್ನು ಪ್ರಾರಂಭಿಸಿದನು. ನಂತರ ರಾಜಧಾನಿಯನ್ನು ಹರಿವರ್ಮನ ಕಾಲದಲ್ಲಿ ತಳವನಪುರಕ್ಕೆ (ಮೈಸೂರು ಜಿಲ್ಲೆ ತಿರುಮಕೂಡಲ ನರಸೀಪುರ ತಾಲ್ಲೂಕಿನಲ್ಲಿರುವ ದಟ್ಟವಾದ ಕಾಡಿನಿಂದ ಕೂಡಿದ ಪ್ರದೇಶವೇ ತಲಕಾಡು) ವರ್ಗಾವಣೆಯಾದ ಮೇಲೆ ತಲಕಾಡಿನ ಗಂಗರು, ಪಶ್ಚಿಮ ಗಂಗರು ಎಂದೇ ಖ್ಯಾತಿಗೊಂಡವರು, ಭೂ ವಿಕ್ರಮನ ಆಳ್ವಿಕೆ ಕಾಲದಲ್ಲಿ ಚನ್ನಪಟ್ಟಣ ತಾಲ್ಲೂಕಿನ ಮಾಕುಂದವನ್ನು ರಾಜಧಾನಿ ಮಾಡಿಕೊಂಡು, ನಂತರ ಕಾಲದಲ್ಲಿ ಶ್ರೀಪುರುಷನ ಕಾಲದಲ್ಲಿ ನೆಲಮಂಗಲ ತಾಲ್ಲೂಕಿನ ಮಾನ್ಯಪುರವನ್ನು ನಾಲ್ಕನೇ ರಾಜಧಾನಿಯಾಗಿ ಹೊಂದಿದ್ದ ಗಂಗರು ಮದಗಜವನ್ನು ಲಾಂಛನವಾಗಿ, ನವಿಲು ಗರಿಯ ಪಿಂಚ ಧ್ವಜವೇ ಪತಾಕೆಯಾಗಿ[೪] ಹೊಂದಿದ ಗಂಗರು ತಮ್ಮ ರಾಜ್ಯಕ್ಕೆ ಗಂಗವಾಡಿ ೯೬೦೦೦ ಎಂದು ಹೆಸರಿಟ್ಟಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಬೆಂಗಳೂರು, ಕೋಲಾರ, ತುಮಕೂರು, ಮಂಡ್ಯ, ಮೈಸೂರು, ಚಿಕ್ಕಬಳ್ಳಾಪುರ ಜಿಲ್ಲೆಯ ಕೆಲವು ಪ್ರದೇಶಗಳು ಗಂಗವಾಡಿ ೯೬೦೦೦ ವ್ಯಾಪ್ತಿಗೆ ಒಳಪಟ್ಟಿತು.

ಗಂಗರ ಕುಲ ಮತ್ತು ಗೋತ್ರದ ಬಗ್ಗೆ ಮಣ್ಣೆ ಮತ್ತು ಮಲ್ಲೋಹಳ್ಳಿಯ ತಾಮ್ರಶಾಸನಗಳಲ್ಲಿ ಗಂಗರು ತಮ್ಮನ್ನು ತಾವು ಜಾಹ್ನವೇಯ ಕುಲ ಮತ್ತು ಕಾಣ್ವಾಯನ ಗೋತ್ರದವರೆಂದು ಹೇಳಿ ಕೊಂಡಿರುವುದನ್ನು ಗಮನಿಸಬಹುದು. ನಾಗಕ್ಷರ, ಸಂಸ್ಕೃತ, ಪ್ರಾಕೃತ, ಹಳಗನ್ನಡ ಭಾಷೆಗಳಲ್ಲಿ ಗಂಗರ ಶಾಸನಗಳನ್ನು ಕಾಣಬಹುದು. ಗಂಗರ ತಾಮ್ರಶಾಸನಗಳಲ್ಲಿ ಹೆಚ್ಚಿನದಾಗಿ ಕೂಟ ಶಾಸನಗಳಿದ್ದು, ಶಕ ವರ್ಷ ಕಾಲದ ನಿಖರತೆ ತಪ್ಪಾಗಿ ಉಲ್ಲೇಖಿಸಲಾಗಿರುತ್ತದೆ. ತಾಮ್ರಶಾಸನಗಳಲ್ಲಿ ಗಂಗರಸರ

[೨] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೪೩.

[೩] Suryanath.U.Kamath :- Karnataka State Gazetter, Bangalore Rural District, 1989, Page.no-41.

[೪] ತಲಕಾಡಿನ ಗಂಗರು :- ಕರ್ನಾಟಕ ಪರಂಪರೆ ಸಂಪುಟ-೧, ಪು.ಸಂ-೧೩೯.

ವಂಶಾವಳಿಯು ತೇದಿಯ ವಿವರವನ್ನು ಸಂಸ್ಕೃತಭಾಷೆಯಲ್ಲಿಯೂ, ಅರಸರ ವರ್ಣನೆ, ದಾನಕ್ಕೆ ಮತ್ತು ಗ್ರಾಮಗಳ ಸಂಬಂಧಿಸಿದ ವಿವರಗಳು ಹಳಗನ್ನಡ ರೂಪದಲ್ಲಿದೆ.

ಮಾರಸಿಂಹನ ಕ್ರಿ.ಶ.೯೬೨ರ ಮಣ್ಣೆ ತಾಮ್ರಶಾಸನದಲ್ಲಿ ಗಂಗವಂಶಕ ಸ್ಥಾಪಕ ಕೊಂಗಣಿವರ್ಮನಿಂದ ಆರಂಭವಾಗಿ ೧ನೇ ಮಾಧವ, ಹರಿವರ್ಮ, ವಿಷ್ಣುಗೋಪ, ೨ನೇ ಮಾಧವ, ಶ್ರೀಕೃಷ್ಣವರ್ಮ, ಅವನೀತ, ದುರ್ವಿನೀತ, ಮುಷ್ಕರ, ಶ್ರೀ ವಿಕ್ರಮ, ಭೂವಿಕ್ರಮ, ೧ನೇ ಶಿವಮಾರ, ಶ್ರೀಪುರುಷ, ೨ನೇ ಶಿವಮಾರ, ಮಾರಸಿಂಹನವರೆಗೆ ಅವರವರ ಸಾಧನೆಗಳನ್ನು ವರ್ಣಿಸುವುದರ ಮೂಲಕ ನೀಡಿರುವ ಗಂಗರ ವಂಶಾವಳಿಯು ಆರಂಭದ ಅರಸರ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ.

ಒಂದು ಪ್ರಾದೇಶಿಕ ಜನರ ಕೊಡುಗೆಯು ಸಹ ಇತಿಹಾಸ ರಚನೆಗೆ ಅತ್ಯಂತ ಪ್ರಮುಖಾಧಾರವಾಗಿರುತ್ತದೆ. ಸ್ಥಳೀಯವಾಗಿ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವಿಷಯಗಳ ಮೇಲೆ ಬೀರುವ ಪರಿಣಾಮವನ್ನು ಗಂಗರು ಮತ್ತು ಪಲ್ಲವರ ನಡುವಿನ ಸಂಬಂಧವನ್ನು ಹೊಸಕೋಟೆಯ ಅವನೀತ ಆಳ್ವಿಕೆಯ ತಾಮ್ರಶಾಸನದಲ್ಲಿ ಕಾಣಬಹುದು. ಪಲ್ಲವ ರಾಜಸಿಂಹ ವಿಷ್ಣುವಿನ ಮಡದಿಯೂ, ಇಮ್ಮಡಿ ಸಿಂಹವರ್ಮನ ತಾಯಿಯ ಆಗಿದ್ದಂತಹ ಜನನ್ಯ ರಾಣಿಯು ತನ್ನ ಭರ್ತೃಕುಲದ ಯಶಸ್ವಿಗಾಗಿ, ತನ್ನ ಶ್ರೇಯೋಭಿವೃದ್ಧಿಗಾಗಿ ಕೋರಿಕುಂದ ಭಾಗದ ಪುಲಿಯೂರಲ್ಲಿ ಅರ್ಹತ್ ದೇವಾಲಯ (ಬಸದಿ)ಯನ್ನು ನಿರ್ಮಿಸಿದಳು. ಯವನಿಕಾ ಸಂಘದ ಸದಸ್ಯರಿಂದ ಪೋಷಿಸಲ್ಪಟ್ಟ ಅರ್ಹತ್ ದೇವಾಲಯಕ್ಕೆ ಅವನೀತನು ದಾನ ನೀಡುತ್ತಾನೆ. ಬೇರೊಂದು ರಾಜಮನೆತನದವರು ನಿರ್ಮಿಸಿದ ಬಸದಿಗೆ ಮತ್ತೊಂದು ರಾಜಮನೆತನದ ಆಳರಸ ದಾನ ನೀಡಿರುವುದು ಎರಡು ಮನೆತನಕ್ಕಿರುವ ಸಾಮರಸ್ಯವನ್ನು ತೋರಿಸುತ್ತದೆ. ಹಾಗೂ ದೇವನಹಳ್ಳಿ ಸಮೀಪದ ಯಂಬ್ರಹಳ್ಳಿ, ಮುತ್ತನಲ್ಲೂರು, ಮನ್ನರ್‌ಪುರದಲ್ಲಿನ ಶಾಸನಗಳು, ವೀರಗಲ್ಲುಗಳು ಗಂಗರು ಮತ್ತು ನೊಳಂಬರ ಸಮ್ಮಿಲನಕ್ಕೆ ಸಾಕ್ಷಿಯಾಗಿದೆ. ೮ನೇ ಶತಮಾನದಲ್ಲಿ ಕೋಲಾರ ಮತ್ತು ನಂದಿಗಿರಿ ಸುತ್ತಮುತ್ತಲಿನ ಪ್ರದೇಶವನ್ನು ಗಂಗಾರಸು ಆಳುತ್ತಿದ್ದು, ನಂತರ ತಮ್ಮ ಸಾಮಂತರಾದ ನೊಳಂಬರಿಗೆ ತಮ್ಮ ಆಡಳಿತ ಪ್ರದೇಶಗಳನ್ನು ಬಿಟ್ಟು ಕೊಟ್ಟಿರಬೇಕು. ಇದರಿಂದಾಗಿ ೭, ೮, ೯ ಶತಮಾನ ಕಾಲಕ್ಕೆ ನೊಳಂಬರು ಈ ಭಾಗದಲ್ಲಿ ಪ್ರಭಾವ ಶಾಲಿಯಾಗಿರುವುದಕ್ಕೆ ಸಾಕ್ಷಿಯಾಗಿ ಅವರ ಕೊಡುಗೆಗಳೇ ಕುರುವುಗಳಾಗಿವೆ.

ಮಾರಸಿಂಹನು ಮಣ್ಣೆಯ ನಡೆದ ಯುದ್ಧದಲ್ಲಿ ಕಾದಾಡಿ ಸಾವನ್ನಪ್ಪುವುದರೊಂದಿಗೆ ಗ್ರಾಮಾಂತರ ಜಿಲ್ಲೆಯಲ್ಲಿ ಗಂಗರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡರು. ಆ ನಂತರ ಗಂಗರು ಗ್ರಾಮಾಂತರ

ಜಿಲ್ಲೆಯಿಂದ ಅನೇಕಲ್ ತಾಲ್ಲೂಕಿನ ಕಡೆ ಸಾಗಿರುವುದನ್ನು ಸಹ ಅವರ ಶಾಸನಗಳಿಂದಲೇ ತಿಳಿಯ ಬಹುದು.

೧೧ನೇ ಶತಮಾನದಲ್ಲಿ ಕ್ರಿ.ಸ.೧೦೦೪ರಲ್ಲಿ ಚೋಳರಿಂದ ಸಂಪೂರ್ಣ ಸೋತು ರಾಜಧಾನಿ ತಲಕಾಡನ್ನು ಕಳೆದು ಕೊಳ್ಳುವುದರೊಂದಿಗೆ ಗಂಗರ ಗಂಗವಾಡಿ ೯೬೦೦೦ದ ಆಧಿಪತ್ಯವು ಅಂತ್ಯವಾಯಿತು. ಆದರೆ ಉಪಶಾಖೆಗಳಾದ ಶಿವಮೊಗ್ಗ, ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಅಧಿಕಾರವನ್ನು ಮುಂದುವರೆಸಿದರು. ತದ ನಂತರ ಹೊಯ್ಸಳರ ಮಾಂಡಳಿಕರಾಗಿ ಕ್ರಿ.ಶ.೧೨೯೮ವರೆಗೆ ಬೆಂಗಳೂರು ನಗರದಲ್ಲಿ ಆಳ್ವಿಕೆ ನಡೆಸಿದ್ದಾರೆ. ಒಟ್ಟಾರೆಯಾಗಿ ಸುಮಾರು ೩೦ ಮಂದಿ ರಾಜರ ಗಂಗಮನೆತನವು ಸುಮಾರು ಅರೇಳು ಶತಮಾನಗಳ ಕಾಲ ದಕ್ಷಿಣ ಕರ್ನಾಟಕದ ಬಹುಭಾಗದಲ್ಲಿ ಆಳ್ವಿಕೆ ನಡೆಸಿದ್ದರು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ತೋಟಗೆರೆ (ಈಗಿನ ಬೆಂಗಳೂರು ಪೂರ್ವ ತಾಲ್ಲೂಕು), ಮಣ್ಣೆ, ಅರಳಸಂದ್ರ, ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟ, ಕಂಚಿಗನಾಳ, ದೊಡ್ಡಬೆಳವಂಗಲ, ಅರಳುಮಲ್ಲಿಗೆ, ಕಲ್ಲುಕುಂಟೆ, ಶಿವಪುರ, ವೀರಾಪುರ, ಬೊಮ್ಮನಹಳ್ಳಿ, ದೇವನಹಳ್ಳಿ ತಾಲ್ಲೂಕಿನ ಯಂಬ್ರಹಳ್ಳಿ, ಕೊಯಿರ, ಗಂಗವಾರ, ಅರದೇಶನಹಳ್ಳಿ, ಸುರಧೇನುಪುರ, ಹೊಸಕೋಟೆ ತಾಲ್ಲೂಕಿನ ಬೇಚಿರಾಖ್ ಮಾರೇನಹಳ್ಳಿ, ಕಮ್ಮಸಂದ್ರ, ಶಿವನಾಪುರ ಮುಂತಾದ ಸ್ಥಳಗಳಲ್ಲಿ ತಾಮ್ರಶಾಸನ, ಶಿಲಾಶಾಸನ, ವೀರಗಲ್ಲುಗಳು, ನಿಷಿಧಿಕಲ್ಲುಗಳು ಹಾಗೂ ದೇವಾಲಯಗಳು, ಕೆರೆಗಳು, ಕಟ್ಟೆಗಳು, ಕೋಟೆಗಳ ಅವಶೇಷಗಳು ಗಂಗರಸರ ಆಡಳಿತದ ಕುರುಹುಗಳಾಗಿ ಉಳಿದುಕೊಂಡಿದೆ. ಗಂಗರಸರ ರಾಜಕೀಯದಲ್ಲಿನ ಏಳು–ಬೀಳು ಕಂಡಿರುವುದು ಶಾಸನಗಳನ್ನು ಅವಲೋಕಿಸುವುದರಿಂದ ತಿಳಿಯಬಹುದು.

## ಕೊಂಗಣಿವರ್ಮ (ಕ್ರಿ.ಶ.೩೫೦–೩೭೦)

ಕರ್ನಾಟಕದ ಉತ್ತರದಲ್ಲಿ ಬನವಾಸಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಕದಂಬ ರಾಜಮನೆತನ ಸ್ಥಾಪಕ ಮಯೂರವರ್ಮನ ಸಮಕಾಲೀನನಾದ ಕೊಂಗಣಿವರ್ಮನು ದಕ್ಷಿಣದಲ್ಲಿ ತನ್ನ ಸ್ವತಃ ಭುಜಬಲದಿಂದ ಗಂಗ ಕುಲಕ್ಕೆ ಅಡಿಕಲ್ಲು ಹಾಕಿ, ದಟ್ಟವಾದ ಅರಣ್ಯಗಳಿಂದ ಕೂಡಿದ ಅಪಾರವಾದ ಸಂಖ್ಯೆಯಲ್ಲಿ ಆನೆಗಳನ್ನು ಹೊಂದಿದ್ದ ಕುವಲಾಲವನ್ನು ರಾಜಧಾನಿಯಾಗಿ ಮಾಡಿಕೊಂಡು ಗಂಗ ಸಾಮ್ರಾಜ್ಯವನ್ನು ಸ್ಥಾಪಿಸಿದನು.

ಒಮ್ಮೆ ಜೈನಮುನಿ ಸಿಂಹನಂದಿಯನ್ನು ಭೇಟಿಮಾಡಿ ಅವರ ಆಶೀರ್ವಾದದಿಂದ ಪದ್ಮಾವತಿ ದೇವಿಯ ವರಪ್ರಸಾದವಾಗಿ ಖಡ್ಗವೊಂದನ್ನು ಪಡೆಯುತ್ತಾನೆ. ಈ ಖಡ್ಗದಿಂದ ಒಂದು ಕಲ್ಲಿನ ಕಂಬವನ್ನು ಒಂದೇ ಏಟಿಗೆ ಎರಡು ತುಂಡು ಮಾಡುತ್ತಾನೆ. ಇದನ್ನು ಶುಭ ಶಕುನವೆಂದು ಪರಿಗಣಿಸಿದ ಸಿಂಹನಂದಿ ಕರ್ಣಿಕಾರ ಪುಷ್ಪಗಳಿಂದ ಒಂದು ಕಿರೀಟ ಮಾಡಿ ಕೊಂಗಣಿವರ್ಮನ ತಲೆಯ ಮೇಲಿಟ್ಟು ತನ್ನ ಮಯೂರ ಪಂಖವನ್ನು ಲಾಂಛನವನ್ನಾಗಿ ಕೊಟ್ಟನು ಎಂಬುದು ಗಂಗವಂಶದ ಮೂಲದ ಬಗ್ಗೆ ಇರುವ ಪರಂಪರಾನುಗತವಾದ ಹೇಳಿಕೆಯನ್ನು ದೊಡ್ಡಬಳ್ಳಾಪುರ ತಾಲ್ಲೂಕಿನ ಮಲ್ಲೋಹಳ್ಳಿಯ ಶಾಸನದಲ್ಲಿ ಕಾಣಬಹುದು.

ದಡಿಗನಿಗೆ ಕೊಂಗಣಿವರ್ಮ, ಕೊಂಕಣಿವರ್ಮ ಎಂಬ ಬಿರುದುಗಳಿದ್ದವು ಎಂಬುದನ್ನು ಶಿವಮೊಗ್ಗ ಮತ್ತು ನಗರ ತಾಲ್ಲೂಕಿನ ಶಾಸನಗಳು ಉಲ್ಲೇಖಿಸುತ್ತದೆ. ದಡಿಗನ ನಂತರ ಆಳ್ವಿಕೆ ಮಾಡಿದ ಎಲ್ಲಾ ಗಂಗರಸರು ಸಹ ಇದೇ ಬಿರುದನ್ನು ಹೊಂದಿರುವುದನ್ನು ಸಹ ಶಾಸನಗಳಲ್ಲಿ ಕಾಣಬಹುದು.

ಜಿಲ್ಲೆಯಲ್ಲಿ ಕೊಂಗಣಿವರ್ಮನಿಗೆ ಸಂಬಂಧಿಸಿದ ಯಾವುದೇ ಶಾಸನಗಳು ದೊರೆಯದೇ ಇದ್ದರೂ ಸಹ ಹೆಸರನ್ನು ಉಲ್ಲೇಖಿಸುವ ಹಲವಾರು ತಾಮ್ರಗಳನ್ನು ಕಾಣಬಹುದು. ಅವನೀತನ ಮಲ್ಲೋಹಳ್ಳಿ, ಹೊಸಕೋಟೆಯ ತಾಮ್ರಶಾಸನಗಳು, ದುರ್ವಿನೀತನ ಮಲ್ಲೋಹಳ್ಳಿ, ಬಸನಹಳ್ಳಿ, ಕೊಂಡರಹಳ್ಳಿ ಹಾಗೂ ಮಾರಸಿಂಹನ ಮಣ್ಣೆಯ ತಾಮ್ರಶಾಸನಗಳಲ್ಲಿ ಗಂಗ ವಂಶಾವಳಿಯನ್ನು ವಿವರಿಸುವಾಗ ಕೊಂಗಣಿವರ್ಮನ ಆಡಳಿತ, ಕುಲ, ಗೋತ್ರ, ಶೌರ್ಯಗಳನ್ನು ವಿವರಿಸಿರುವುದನ್ನು ಕಾಣಬಹುದು.

ಜಾಹ್ನವೇಯ ಕುಲದಲ್ಲಿ ಯಾವುದೇ ಕಪ್ಪು ಚುಕ್ಕೆಯಿಲ್ಲದ ಆಕಾಶದಲ್ಲಿ ಸೂರ್ಯನಂತೆ ಹೊಳೆಯುವನು[೫೫], ತನ್ನ ಭುಜಬಲದಿಂದ ಶತ್ರುಗಳನ್ನು ಜಯಿಸಿ, ಅತ್ಯಂತ ದಾರುಣವಾದ ಯುದ್ಧಗಳಲ್ಲಿ ಭಾಗಿಯಾಗಿ, ಆಯುಧಗಳಿಂದಾದ ಗಾಯಗಳನ್ನೇ ಆಭರಣಗಳನ್ನಾಗಿ ಹೊಂದಿ ಅಲಂಕೃತನಾಗಿರುವ[೫೬] ಕೊಂಗಣಿವರ್ಮನು ಕೋಲಾರ ಪ್ರದೇಶವನ್ನು ಆಳುತ್ತಿದ್ದ ಬಾಣರ ಮೇಲೆ ಕಾಡ್ಗಿಚ್ಚಿನೋಪಾದಿಯಲ್ಲಿ ಏರಿ ಹೋಗಿ ಗೆಲವು ಸಾಧಿಸುವುದರ ಮೂಲಕ “ಬಾಣಕುಲಾಂತಕ”, “ಬಾಣವಂಶದಾವಾಲನ” ಎಂಬ ಬಿರುದನ್ನು ಪಡೆದನು. ಕೊಂಗಣಿವರ್ಮನು ತನ್ನ ಶತ್ರುಗಳಿಗೂ ಕೂಡ ಅತಿಥಿ ಸತ್ಕಾರ ಮಾಡುವ ವಿಶಾಲ ಗುಣವುಳ್ಳವನು.

[೫೫] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೫, ಅವನೀತ, ಮಲ್ಲೋಹಳ್ಳಿ.

[೫೬] ಎ.ಕ-೯, ಬೆಂ.೧೪೧, ಕ್ರಿ.ಶ.೪೮೧, ದುರ್ವಿನೀತ, ಬೆಂಗಳೂರು ಮ್ಯೂಸಿಯಂ.

ಕೊಂಗಣಿವರ್ಮ ಮತ್ತು ದಡಿಗ ಎಂಬ ಹೆಸರುಳ್ಳ ಒಬ್ಬನೇ ವ್ಯಕ್ತಿಯ ಹೆಸರುಗಳು ಹಾಗೂ ಕೊಂಗಣಿವರ್ಮನೇ ಗಂಗವಂಶದ ಮೂಲಪುರುಷ, ಇವನ ಕಾಲಮಾನ ನಾಲ್ಕನೇಯ ಶತಮಾನದ ಮಧ್ಯಭಾಗ ಅಂದರೆ ಕ್ರಿ.ಶ.೩೫೦ ರಿಂದ ೩೭೦ ಎಂದು ಎಂ.ವಿ.ಕೃಷ್ಣರಾವ್, ಸತ್ಯನಾಥ ಅಯ್ಯರ್, ನೆಲಮಂಗಲ ಲಕ್ಷ್ಮಿನಾರಾಯಣರಾವ್, ಡಾ.ಸೂರ್ಯನಾಥ್ ಕಾಮತ್, ಟಿ.ವಿ.ಮಹಾಲಿಂಗಂ ಮುಂತಾದ ವಿದ್ವಾಂಸರು ನಿಗದಿ ಮಾಡಿದ್ದಾರೆ[೭].

## ಒಂದನೇ ಮಾಧವ (ಕ್ರಿ.ಶ.೩೮೦–೪೦೦)

ಕೊಂಗಣಿವರ್ಮನ ನಂತರ ಮಾಧವನನ್ನು ಅಧಿಕಾರಕ್ಕೆ ಬಂದರೂ ಇವನ ಯಾವುದೇ ಶಾಸನಗಳು ಜಿಲ್ಲೆಯಲ್ಲಿ ದೊರೆತ್ತಿಲ್ಲ. ಆದರೆ ಅವನೀತ, ದುರ್ವಿನೀತ ಮತ್ತು ಮಾರಸಿಂಹನ ತಾಮ್ರಶಾಸನಗಳಲ್ಲಿ ಉಲ್ಲೇಖಿಸಿರುವುದನ್ನು ಗಮನಿಸಬಹುದು. ಮಾಧವನು ತಂದೆ ಕೊಂಕಣಿವರ್ಮನಂತೆಯೇ ಒಳ್ಳೆಯ ಗುಣಗಳಿಂದ ಕೂಡಿದವನು. ಸಮರಗಳಿಂದಾದ ಗಾಯಗಳನ್ನೇ ಆಭರಣಗಳನ್ನಾಗಿ ಹೊಂದಿ ಅಲಂಕೃತನಾಗಿರುವವನು[೮]. ವಿದ್ಯೆ ವಿನಯವನ್ನು ಹೊಂದಿರುವ, ನಾನಾಶಾಸ್ತ್ರಾರ್ಥಗಳನ್ನು ಕಲಿತವನು. ವಿದ್ವಾಂಸರು, ಕವಿಗಳಿಗೆ ಒರೆಗಲ್ಲಿನಂತಿರುವವನು. ನೀತಿಶಾಸ್ತ್ರವನ್ನು ತಿಳಿದುಕೊಂಡಿರುವವನು ಹಾಗೂ ಅದನ್ನು ಪ್ರಯೋಗಿಸುವುದರಲ್ಲಂತೂ ಕುಶಲನಾಗಿರುವವನು[೯]. ಒಳ್ಳೆಯ ಸೈನ್ಯ, ಕರ್ತವ್ಯ ನಿಷ್ಠೆಯಿಂದ ಕೂಡಿದ ಸೇವಕರ ಪರಿವಾರವನ್ನು[೧೦], ದತ್ತಕ ಬರೆದ ಶೃಂಗಾರ ಗ್ರಂಥ ದತ್ತಕ ಸೂತ್ರಕ್ಕೆ ವ್ಯಾಖ್ಯಾನವನ್ನು ರಚಿಸಿದವನು[೧೧].

ಕೊಂಕಣಿವರ್ಮ ಮತ್ತು ಮಾಧವರು ಕಣ್ವಮಾನಸ ಗೋತ್ರಕ್ಕೆ ಸೇರಿದವರು ಹಾಗೂ ಹಲವಾರು ಶಾಸ್ತ್ರ ಪಾರಂಗತವರೆಂದು ಶಾಸನಗಳಲ್ಲಿ ಉಲ್ಲೇಖಿಸಿರುವುದನ್ನು ಗಮನಿಸಿದರೆ ಗಂಗರ ಪ್ರಾರಂಭದ ಅರಸರು ಸಕಲಶಾಸ್ತ್ರ ಸಂಪನ್ನರಾಗಿ ರಾಜ್ಯವನ್ನು ಮುನ್ನೆಡೆಸುವಲ್ಲಿ ಯಶಸ್ವಿಯಾದರೆಂದು ಹೇಳಬಹುದು.

## ಹರಿವರ್ಮ (ಕ್ರಿ.ಶ.೪೦೦–೪೩೬)

ಮಾಧವನ ನಂತರ ಮಗನಾದ ಹರಿವರ್ಮನು ಅಧಿಕಾರಕ್ಕೆ ಬಂದನು. ಇವನ ಬಗ್ಗೆನು ಸಹ ಜಿಲ್ಲೆಯ ವ್ಯಾಪ್ತಿಯಲ್ಲಿ ಯಾವುದೇ ಶಾಸನಾಧಾರಗಳು ದೊರೆತಿಲ್ಲವಾದರು. ತಾಮ್ರಶಾಸನಗಳಲ್ಲಿ ಹರಿವರ್ಮನ ಸಾಧನೆ, ಗುಣಗಳನ್ನು ವರ್ಣಿಸಿರುವುದನ್ನು ಕಾಣಬಹುದು. ಹರಿವರ್ಮನು ತಂದೆ,

---

[೭] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೪೭ & ೪೮.

[೮] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಅವನೀತ, ಮಲ್ಲೋಹಳ್ಳಿ.

[೯] ಎ.ಕ-೯, ಬೆಂ.೧೪೧, ಕ್ರಿ.ಶ.೪೮೧, ದುರ್ವಿನೀತ, ಬೆಂಗಳೂರು ಮ್ಯೂಸಿಯಂ.

[೧೦] ಕೆ.ವಿ.ರಮೇಶ್:- Inscriptions of the western Gangas, ಶಾಸನ ಸಂಖ್ಯೆ ೧೯, ೬ನೇ ಶತಮಾನ, ದುರ್ವಿನೀತ, ಬಿಸನಹಳ್ಳಿ.

[೧೧] ಎಂ.ಎ.ಆರ್, ೧೯೪೧, ಮೈಸೂರು, ೬ನೇ ಶತಮಾನ, ದುರ್ವಿನೀತ, ಕೊಂಡರಹಳ್ಳಿ, ಪು.ಸಂ-೧೨೭ ರಿಂದ ೧೨೮.

ತಾತರಿಂದ ಅನೇಕ ಗುಣಗಳನ್ನು ಮೈಗೂಡಿಸಿಕೊಂಡಿರುವ, ಇವರ ಕೀರ್ತಿ ದಶ ದಿಕ್ಕುಗಳಿಗೂ ಹರಡಿತ್ತು. ನಾಲ್ಕು ಸಮುದ್ರಗಳ ನೀರಿನ ಸವಿರುಚಿಯನ್ನು ಕಂಡವರು. ಮದಗಜ, ಅಶ್ವಗಳನ್ನು ನಿಯಂತ್ರಿಸುವ, ಪಳಗಿಸುವ, ಸೂರೆ ಮಾಡುವ ನೈಪುಣ್ಯವನ್ನು ಕರಗತ ಮಾಡಿಕೊಂಡಿದ್ದನು[೧೨]. ತನ್ನ ಶತ್ರುಗಳನ್ನು ನಾಶಗೊಳಿಸಿದವನು[೧೩]. ವಿಫುಲವಾದ ಸಂಪತ್ತನ್ನು ಹೊಂದಿರುವವನು, ದೇವರು, ಬ್ರಾಹ್ಮಣರು, ಗುರುಗಳ ಚರಣಗಳ ಪೂಜೆಯಲ್ಲಿ ಆಸಕ್ತಿಯುಳ್ಳವನು. ಇವನನ್ನು ಆರ್ಯವರ್ಮ ಮತ್ತು ವಿಜಯ ಕೃಷ್ಣವರ್ಮ ಎಂದು ಕರೆಯಲಾಗುತ್ತದೆ[೧೪]. ಈ ಹರಿವರ್ಮನ ಕಾಲದಲ್ಲಿ ತಲಕಾಡು ೨ನೇ ರಾಜಧಾನಿಯಾಯಿತ್ತು[೧೫]. ಹರಿವರ್ಮ ನಂತರ ಇಮ್ಮಡಿ ಮಾಧವನು ರಾಜಕೀಯ ಸೂತ್ರವನ್ನು ಹಿಡಿಯುತ್ತಾನೆ. ಎರಡನೇ ಮಾಧವನನ್ನು ಶಿವಮಾರ ಎಂಬ ಮತ್ತೊಂದು ಹೆಸರಿದ್ದು, ಪಲ್ಲವರ ಸ್ಕಂಧವರ್ಮನ ಸಹಾಯದಿಂದ ಗಂಗಸಿಂಹಾಸನವನ್ನು ಪಡೆದನು[೧೬]. ೨ನೇ ಮಾಧವನಿಗೆ ವಿಷ್ಣುಗೋಪ ಮತ್ತು ವೀರವರ್ಮರೆಂಬ ಸಹೋದರರು ಇದ್ದರು.

## ವಿಷ್ಣುಗೋಪ

ಎರಡನೇ ಮಾಧವ ನಂತರ ವಿಷ್ಣುಗೋಪ ಅಧಿಕಾರಕ್ಕೆ ಬಂದನು. ವಿಷ್ಣುಗೋಪನು ಕೆಲವೊಂದು ಗುಣಗಳನ್ನು ಅನುವಂಶೀಯವಾಗಿ ಪಡೆದಿದ್ದನು. ರಾಜ್ಯಾಡಳಿತದಲ್ಲಿ ಬೃಹತ್ವತಿಗೆ ಸಮನಾದವನು, ಶೌರ್ಯದಲ್ಲಿ ಇಂದ್ರನಿಗೆ ಸಮನಾದ ಪರಾಕ್ರಮವುಳ್ಳವನು[೧೭]. ಬ್ರಾಹ್ಮಣರನ್ನು, ಗುರುಗಳನ್ನು, ದೇವತೆಗಳನ್ನು ಪೂಜಿಸುವವನು. ನಾರಾಯಣ ಚರಣಗಳಲ್ಲಿ ಧ್ಯಾನಾಸಕ್ತನಾದವನು[೧೮]. ವಿಷ್ಣುಗೋಪನ ಒಲವು ಜೈನಧರ್ಮಕ್ಕೆ ಬದಲಾಗಿ ವೈದಿಕ ಧರ್ಮದ ಕಡೆಗಿತ್ತು ಎಂದೆನಿಸುತ್ತದೆ.

## ೩ನೇ ಮಾಧವ (ಕ್ರಿ.ಶ.೪೪೦–೬೯)

ವಿಷ್ಣುಗೋಪನ ನಂತರ ಮಗನಾದ ಮಾಧವನು ಅಧಿಕಾರಕ್ಕೆ ಬಂದನು. ಇವನನ್ನು ತಂಡಗಾಲ ಮಾಧವ ಎಂದು ಸಹ ಕರೆಯಲಾಗುತ್ತದೆ. ಮಾಧವನನ್ನು ವಿಷ್ಣುಗೋಪನ ಪುತ್ರನೆಂಬುದನ್ನು ಬಹುಮಂದಿ ವಿದ್ವಾಂಸರು ಒಪ್ಪುವುದಿಲ್ಲ. ಬದಲಾಗಿ ಮಾಧವನನ್ನು ಪೃಥ್ವಿಗಂಗನ ಮಗನೆಂದೂ ವಿಷ್ಣುಗೋಪನ ಮೊಮ್ಮಗನೆಂದೂ ಹಯವದನರಾಯರು ತಮ್ಮ ವಾದವನ್ನು ಮುಂದಿಡುತ್ತಾರೆ. ಆದರೆ

[೧೨] ಎಂ.ಎ.ಆರ್, ೧೯೩೮, ಮೈಸೂರು, ೫ ನೇ ಶತಮಾನ, ಅವನೀತ, ಹೊಸಕೋಟೆ, ಪು.ಸಂ-೮೦ ರಿಂದ ೮೧.

[೧೩] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಅವನೀತ, ಮಲ್ಲೋಹಳ್ಳಿ.

[೧೪] ಕೆ.ವಿ.ರಮೇಶ್ :- Inscriptions of the western Gangas, ಶಾಸನ ಸಂಖ್ಯೆ ೫, ೫ನೇ ಶತಮಾನ, ಅವನೀತ, ಬೆಂಡಿಗಾನಹಳ್ಳಿ.

[೧೫] ಎಂ.ಜಿ.ಭೈರಪ್ಪ :- ಬೆಂಗಳೂರು ಜಿಲ್ಲೆಯ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಪು.ಸಂ-೨೧.

[೧೬] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೮.

[೧೭] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಅವನೀತ, ಮಲ್ಲೋಹಳ್ಳಿ.

[೧೮] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ

ದೊಡ್ಡಬಳ್ಳಾಪುರ ತಾಲ್ಲೂಕಿನ ಮಲ್ಲೋಹಳ್ಳಿಯ ತಾಮ್ರಪಟದ ಜೊತೆಗೆ ಚುಟುಕುರು ಮತ್ತು ಕೊಂಡು ಜೆರುವು ತಾಮ್ರಶಾಸನಗಳ ನೆರವಿನೊಂದಿಗೆ ಡಾ.ಬಿ.ಷೇಕ್ಅಲಿಯವರು ಹಯವದನರಾಯರ ಅಭಿಪ್ರಾಯವನ್ನು ತಳ್ಳಿಹಾಕುತ್ತಾ ತಂಡಗಾಲ ಮಾಧವನು ವಿಷ್ಣುಗೋಪನ ಮಗನೆಂದು ಸ್ಪಷ್ಟಪಡಿಸಿದ್ದಾರೆ.

ಬನವಾಸಿಯ ಕದಂಬ ದೊರೆ ಕಾಕುಸ್ತವರ್ಮನ ಮಗಳು, ಒಂದನೇ ಕೃಷ್ಣವರ್ಮನ ಪ್ರಿಯ ಸಹೋದರಿಯಾದ ರಾಜ ಕುಮಾರಿಯನ್ನು ಮಾಧವನು ವರಿಸಿದನು[೧೯]. ಇದರಿಂದಾಗಿ ಬನವಾಸಿಗೂ, ಗಂಗವಾಡಿಗೂ ಉತ್ತಮ ಸಂಬಂಧಗಳು ಏರ್ಪಟ್ಟಿದ್ದವು. ಮಾಧವನು ಶೌರ್ಯ ಪರಾಕ್ರಮಗಳಲ್ಲಿ ಇಂದ್ರನಂತಿರುವವು, ಸಂಪತ್ತಿನಲ್ಲಿ ಕುಬೇರನಂತಿರುವುದು, ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಯುದ್ಧಗಳಲ್ಲಿ ತನ್ನ ಬಾಣಗಳಿಂದ ಸೈನಿಕರನ್ನು ನಾಶಗೊಳಿಸಿ ಸುತ್ತಲಿನ ಅಧಿಪತಿಗಳಿಗೆ ಯಮನಂತೆ ಇರುವವನು[೨೦]. ಬಹುದಿನಗಳಿಂದ ನಷ್ಟವಾಗಿ ನಿಂತು ಹೋಗಿದ್ದ ದೇವಬೋಗ ಮತ್ತು ಬ್ರಹ್ಮದೇಯಗಳನ್ನು ಪುನಃ ಸ್ಥಾಪನೆಗೊಳಿಸಿದವನು. ಕೆಸರಿನಲ್ಲಿ ಸಿಕ್ಕಿಗೊಂಡಿದ್ದ ಧರ್ಮ ದೇವತೆಯನ್ನು ಉದ್ಧಾರ ಮಾಡಿದವನು. ತ್ರ್ಯೆಂಬಕನ ಕಮಲ ಚರಣಗಳ ರಜವನ್ನು ಅಂದರೆ ವಿಭೂತಿಯನ್ನು ಹಣೆಯಲ್ಲಿ ಧರಿಸುವುದರ ಮೂಲಕ ಪವಿತ್ರವಾದ ಶಿರಸ್ಸವುಳ್ಳವನ್ನು[೨೧] ತ್ರ್ಯೆಂಬಕನ ಭಕ್ತನಾಗಿದ್ದು, ಶಿವರಾಧನೆಯಲ್ಲಿ ಹೆಚ್ಚು ಆಸಕ್ತನಾಗಿದ್ದರೂ ಸಹ ಜೈನ ಮತ್ತು ಬೌದ್ಧಧರ್ಮಗಳಿಗೆ ಉದಾರ ನೆರವು ನೀಡಿದ್ದನು. ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದವನು. ಮಲ್ಲಯುದ್ಧ ಪ್ರವೀಣನೂ, ಆಯುಧಗಳನ್ನು ಪ್ರಯೋಗಿಸುವಲ್ಲಿ[೨೨], ತನ್ನ ಯುದ್ಧ ಕೌಶಲ್ಯ, ಚತುರೋಕ್ತಿ, ಸಾಮರ್ಥ್ಯಗಳಿಂದ ಗಂಗರಾಜ್ಯವನ್ನು ವಿಸ್ತರಿಸಿದಲ್ಲದೆ, ರಾಜ್ಯವನ್ನು ಪಲ್ಲವರ ಹಸ್ತಕ್ಷೇಪದಿಂದ ಮುಕ್ತಗೊಳಿಸಿದನು.

## ಅವನೀತ (ಕ್ರಿ.ಶ.೪೬೯–೫೨೯)

ತಂಡಗಾಲ ಮಾಧವನ ನಂತರ ಮಗನಾದ ಅವನೀತನು ಚಿಕ್ಕವಯಸ್ಸಿನಲ್ಲೇ ಅಧಿಕಾರಕ್ಕೆ ಬಂದಿದ್ದರಿಂದ ದೀರ್ಘಕಾಲದವರೆಗೆ ಗಂಗ ಸಾಮ್ರಾಜ್ಯದ ಅಧಿಪತಿಯಾಗಿದ್ದನು. ಶ್ರೇಷ್ಠವಾದ ಕದಂಬಕುಲ ಎಂಬ ಆಕಾಶದಲ್ಲಿ ಸೂರ್ಯನಂತೆ ಹೊಳೆಯುತ್ತಿರುವ ಶ್ರೀಕೃಷ್ಣವರ್ಮ ಮಹಾಧಿರಾಜನ ಪ್ರಿಯ ತಂಗಿಯಾದ, ದೇವತೆಯಾದ ತನ್ನ ತಾಯಿಯ ತೊಡೆಯ ಮೇಲಿದ್ದಾಗಲೇ ರಾಜ ಭಕ್ತನಾದವನು[೨೩].

---

[೧೯] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೪೯.

[೨೦] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಅವನೀತ, ಮಲ್ಲೋಹಳ್ಳಿ.

[೨೧] ಎಂ.ಎ.ಆರ್, ೧೯೪೧, ಮೈಸೂರು, ೬ನೇ ಶತಮಾನ, ದುರ್ವಿನೀತ, ಕೊಂಡರಹಳ್ಳಿ, ಪು.ಸಂ-೧೨೭ ರಿಂದ ೧೨೮.

[೨೨] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ ಪು.ಸಂ-೪೦.

[೨೩] ಕೆ.ವಿ.ರಮೇಶ್:-Inscriptions of the western Gangas, ಶಾಸನ ಸಂಖ್ಯೆ ೧೯, ೬ನೇ ಶತಮಾನ, ದುರ್ವಿನೀತ, ಬಿಸನಹಳ್ಳಿ.

ಪುನ್ನಾಟದ ರಾಜ ಇಮ್ಮಡಿ ಸ್ಕಂದವರ್ಮನ ಮಗಳಾದ ಜೇಷ್ಠ ದೇವಿಯನ್ನು ಅವಳ ಇಚ್ಛೆಯಂತೆ ವಿವಾಹವಾದನು. ಶಾಸನೋಕ್ತ ಪುನ್ನಾಟ ರಾಜ್ಯವು ಕಪಿಲ ನದಿಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಪ್ರದೇಶವಾಗಿದ್ದು, ತಮಿಳುನಾಡಿನ ಗಡಿ ಪ್ರದೇಶವನ್ನು ಒಳಗೊಂಡಿದ್ದ ರಾಜ್ಯವಾಗಿತ್ತು. ತಲಕಾಡನು ಖಾಯಂ ರಾಜ್ಯವಾಗಿ ಮಾಡಿದನು. ಅವನೀತನ ಬಗ್ಗೆ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವಾರು ತಾಮ್ರಶಾಸನಗಳು ದೊರೆತಿದ್ದು ಎಲ್ಲವೂ ದಾನ ಶಾಸನಗಳೇ ಆಗಿದೆ.

ಅವನೀತನು ಕೀರ್ತಿಯಲ್ಲಿ ಇಂದ್ರಗಿಂತಲೂ ಮಿಗಿಲಾದವನು. ಆನೆ ಕುದುರೆಗಳನ್ನು ಪಳಗಿಸುವುದರಲ್ಲಿ ಸರಿಸಾಟಿಯಿಲ್ಲದವನೂ ಯುದ್ಧ ಭೂಮಿಯಲ್ಲಿ ರಣಕಲಿಯೂ, ಸಂಪತ್ತಿನಲ್ಲಿ ಕುಬೇರರಿಗೆ ಸರಿಸಮಾನನೂ, ಶಿಕ್ಷೆ ವಿಧಿಸುವರಲ್ಲಿ ಯಮನಿಗಿಂತಲೂ ಮಿಗಿಲಾದವನೂ, ವರ್ಣಧರ್ಮಪಾಲಕನೂ ಆಗಿದ್ದನು. ವೈಯಕ್ತಿಕವಾಗಿ ಶಿವಭಕ್ತನಾಗಿದ್ದರೂ ಸಹ ಸರ್ವಧರ್ಮ ಸಹಿಷ್ಣು ಆಗಿದ್ದನು. ವಿಷ್ಣುವಿನ ಪಾದಾರವಿಂದಗಳಲ್ಲಿ ಭಕ್ತಿಯುಳ್ಳವನಾಗಿದ್ದು ತನ್ನ ೨೯ನೇ ಆಳ್ವಿಕೆಯ ಅವಧಿಯಲ್ಲಿ ಬ್ರಾಹ್ಮಣರಿಗೆ ಸರ್ವಬಾದಾ ಪರಿಹಾರವಾಗಿ ನೀರಿನಧಾರೆಯನ್ನು ಎರೆದು ಕೊಟ್ಟನು[೨೪]. ಒಂದು ರೀತಿಯಲ್ಲಿ ಆಕಾಶದಲ್ಲಿ ಸೂರ್ಯನಿದ್ದಂತೆ ಗಂಗಕುಲಕ್ಕೆ ಅವನೀತನು. ತಪ್ಪದೇ ಅಶ್ವಮೇಧ ಯಾಗವನ್ನು ಮಾಡಿ ಅವಿಭೃದದಿಂದ ಅಭಿಷಿಕ್ತನಾದವನು, ಪರಸ್ಪರ ಧರ್ಮ, ಅರ್ಥ, ಕಾಮ ಎಂಬ ೩ ವರ್ಗಗಳ ಸ್ವಾರಸ್ಯವನ್ನು ಹೊಂದಿರುವನು[೨೫]. ತನ್ನ ಹೆಂಡತಿ ಜೇಷ್ಟಾದೇವಿಯು ಜೈನಧರ್ಮದ ಆರಾಧಕಳಾಗಿರುತ್ತಾಳೆ. ತನ್ನ ಜೈನಧರ್ಮದ ಗುರುವಾದ ವಿಜಯಕೀರ್ತಿ[೨೬] ಶಿಷ್ಯೆಯಾಗಿರುತ್ತಾಳೆ.

ಅವನೀತನು ತನ್ನ ೧೨ನೇ ವರ್ಷದ ಆಳ್ವಿಕೆಯಲ್ಲಿ ಪಲ್ಲವ ಅಧಿರಾಜ ಸಿಂಹ ವಿಷ್ಣುವಿನ ತಾಯಿಯು ತನ್ನ ಭಾರ್ತೃಕುಲದ ಯಶಸ್ವಿಗಾಗಿ, ತನ್ನ ಶ್ರೇಯೋಭಿವೃದ್ಧಿಗಾಗಿ ಅರ್ಹದ್ ದೇವಾಲಯವನ್ನು ಕಟ್ಟಿಸಿದ ಬಸದಿಗೆ ಅವನೀತನು ಮಹಾಕೆರೆಯ ಕೆಳಗೆ ನೀರಾವರಿ ಭೂಮಿಯನ್ನು ದಾನ ನೀಡಿದನು[೨೭]. ಜೈನಧರ್ಮಕ್ಕೆ ಹಲವು ದಾನದತ್ತಿಗಳನ್ನು ನೀಡಿದ್ದರೂ ಅದರ ಪ್ರಭಾವಕ್ಕೆ ಒಳಗಾಗದೆ ವೈದಿಕ ಧರ್ಮದಲ್ಲಿ ನಿಷ್ಠಾವಂತನಾಗಿದ್ದನು.

---

[೨೪] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಅವನೀತ, ಮಲ್ಲೋಹಳ್ಳಿ.
[೨೫] ಎ.ಕ-೯, ಬೆಂ.೧೪೧, ಕ್ರಿ.ಶ.೪೮೧, ದುರ್ವಿನೀತ, ಬೆಂಗಳೂರು ಮ್ಯೂಸಿಯಂ.
[೨೬] ಎ.ಕ-೯, ರೈಸ್ ಆವೃತ್ತಿ, ಪು.ಸಂ-೧೮.
[೨೭] ಎಂ.ಎ.ಆರ್, ೧೯೩೮, ಮೈಸೂರು, ೫ ನೇ ಶತಮಾನ, ಅವನೀತ, ಹೊಸಕೋಟೆ, ಪು.ಸಂ-೮೦ ರಿಂದ ೮೧.

## ದುರ್ವಿನೀತ (ಕ್ರಿ.ಶ.೫೨೯–೫೭೯)

ಅವನೀತನು ತನ್ನ ನಂತರ ಗಂಗಕುಲಕ್ಕೆ ಅಧಿಪತಿಯಾಗಿ ತನ್ನ ಎರಡನೇಯ ಪತ್ನಿಯ ಮಗನನ್ನು ನೇಮಿಸಲು ಬಯಸಿದಾಗ ಮೊದಲ ಪತ್ನಿ ಜೇಷ್ಠದೇವಿಯ ಮಗನಾದ ಅತ್ಯಂತ ಪ್ರತಿಭಾವಂತನಾದ ದುರ್ವಿನೀತನು ತನ್ನ ಮಲ ಸಹೋದರನನ್ನು ಸೋಲಿಸಿ ಗಂಗಕುಲದ ಅಧಿಪತಿಯಾದನು[೨೮]. ದುರ್ವಿನೀತನಿಗೆ ಅವನೀತಸ್ಥಿರ ಪ್ರಜ್ವಲ, ಅನೀತ, ವಿನೀತ, ಅರಿನೃಪ ನಿರ್ವಿನೀತ ಎಂದು ಮುಂತಾದ ಬಿರುದುಗಳಿದ್ದವು[೨೯]. ಪುನ್ನಾಟರಾಜ ಸ್ಕಂದವರ್ಮನ ಮಗಳಾಗಿಯೇ ಜನಿಸಿದವನಾದ ದುರ್ವಿನೀತನು ಅಧಿಕಾರಕ್ಕೆ ಬಂದ ಮೇಲೆ ಪುನ್ನಾಟರಾಜ ಸ್ಕಂದವರ್ಮನ ಮಗ ರವಿದತ್ತ ಅಕಾಲಿಕ ಮರಣಕ್ಕೆ ತುತ್ತಾದುದರಿಂದ ತಾತನಿಗೆ ಬೇರೆ ಯಾವ ಗಂಡು ಮಕ್ಕಳಿಲ್ಲದ ಕಾರಣ ಪುನ್ನಾಟ ರಾಜ್ಯವು ದುರ್ವಿನೀತನ ಆಳ್ವಿಕೆಗೆ ಸೇರಿತ್ತು ಎಂಬುದಕ್ಕೆ ಮಣ್ಣೆ ತಾಮ್ರಶಾಸನದಲ್ಲಿ ಪುನ್ನಾಡಾಧಿಪತಿ ಎಂದೇ ಉಲ್ಲೇಖಿಸಲಾಗಿದೆ[೩೦].

ದುರ್ವಿನೀತನು ತನ್ನ ಶತ್ರುಗಳಾದ ಪಲ್ಲವರನ್ನು ಕೊಯಮತ್ತೂರು ಜಿಲ್ಲೆಯ ಅಂದೇರಿ, ಆಲತ್ತೂರು, ಚೆಂಗಲಪೇಟೆ ಜಿಲ್ಲೆಯ ಪೊರುಳರೆ, ಸೇಲಂ ಜಿಲ್ಲೆಯ ಪೆನ್ನಾಗರ ಮುಂತಾದ ಯುದ್ಧಗಳಲ್ಲಿ ನಿರ್ಣಾಯಕವಾಗಿ ಸೋಲಿಸಿದನೆಂದು ಮಲ್ಲೋಹಳ್ಳಿಯ ತಾಮ್ರ ಶಾಸನ ತಿಳಿಸುತ್ತದೆ[೩೧]. ದುರ್ವಿನೀತನು ಪಲ್ಲವರನ್ನು ಸೋಲಿಸುವುದರೊಂದಿಗೆ ತಮಿಳುನಾಡಿನ ಕೆಲವು ಭಾಗಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು ಸಾಮ್ರಾಜ್ಯದ ವ್ಯಾಪ್ತಿಯನ್ನು ವಿಸ್ತರಿಸಿದನು. ದುರ್ವಿನೀತನು ಬಾದಾಮಿ ಚಾಲುಕ್ಯರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿದ್ದನು[೩೨]. ಎಲ್ಲಾ ಶತ್ರುಗಳನ್ನು ಸೋಲಿಸಿ ಸಮಸ್ತ ಸಾಮಂತರನ್ನಾಗಿ ಮಾಡಿ ಕೊಳ್ಳುತ್ತಿದ್ದನು[೩೩]. ಪೆನಬ್ಬಾಣ, ಮುತ್ತಾರಸರ್, ಶಿಯವಲ್ಲವರಸರ್, ತೆಗೆಯರ್, ಮುನಿಯನ್, ನಮ್ದ್ಯಾಲರ್, ಶಿಯಬಾಲರ್[೩೪] ಮುಂತಾದ ವಿಸ್ತಾರವಾದ ಸಾಮಂತ ಮಂಡಲವನ್ನು ಹೊಂದಿರುವವನು. ಶತ್ರುಗಳಿಂದ ಪಾಲನ್ನು ಪಡೆದು ಶೂರ ಪುರುಷನೆಂದೆನಿಸಿಕೊಂಡವನು[೩೫].

---

[೨೮] ಎಂ.ಜಿ.ಭೈರಪ್ಪ :- ಬೆಂಗಳೂರು ಜಿಲ್ಲೆಯ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಪು.ಸಂ-೩೩.
[೨೯] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೫೧.
[೩೦] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ.
[೩೧] ಎ.ಕ-೯, ದೊ.ತಾ.೬೮, ಕ್ರಿ.ಶ.೫೧೭, ದುರ್ವಿನೀತ, ಮಲ್ಲೋಹಳ್ಳಿ.
[೩೨] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೮.
[೩೩] ಎಂ.ಎ.ಆರ್, ೧೯೪೧, ಮೈಸೂರು, ೬ನೇ ಶತಮಾನ, ದುರ್ವಿನೀತ, ಕೊಂಡರಹಳ್ಳಿ, ಪು.ಸಂ-೧೨೭ ರಿಂದ ೧೨೮.
[೩೪] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ.
[೩೫] ಎ.ಕ-೯, ದೊ.ತಾ.೬೮, ಕ್ರಿ.ಶ.೫೧೭, ದುರ್ವಿನೀತ, ಮಲ್ಲೋಹಳ್ಳಿ.

ಮಣ್ಣೆಯ ಶಾಸನದಲ್ಲಿ ಶ್ರೀಮತ್ಕೊಂಗಣಿವೃದ್ಧ ರಾಜೇನ ದುರ್ವಿನೀತ[೩೬] ಎಂದು ಉಲ್ಲೇಖಿಸಿರುವುದನ್ನು ಗಮನಿಸಿದರೆ ದುರ್ವಿನೀತನು ೫೦ ವರ್ಷಗಳ ಕಾಲ ರಾಜ್ಯಭಾರ ಮಾಡಿರಬೇಕು. ದುರ್ವಿನೀತನು ನೀತಿಶಾಸ್ತ್ರದಲ್ಲಿ ಚಾಣಾಕ್ಯನಿಗೆ ಸಮಾನರೆಂದು, ಕಲೆ, ಸಂಗೀತ, ನೃತ್ಯ ಮುಂತಾದ ಲಲಿತ ಕಲೆಗಳಲ್ಲಿ ತುಂಬುರ, ನಾರಾದ, ಭರತ, ಕಂಬಲಾಚಾರ್ಯನಿಗೆ ಮೀರಿದವನೆಂದೂ, ಶಾಸ್ತ್ರ ವಿದ್ಯೆಗಳಲ್ಲಿ ಪರಶುರಾಮನು, ಧರ್ಮಾಚರಣೆಯಲ್ಲಿ ಯುಧಿಷ್ಠಿರನಿಗೆ ಸಮನೆಂದೂ, ರಾಜನೀತಿಯಲ್ಲಿ ಶ್ರೀಕೃಷ್ಣನಿಗೆ ಸಮನೆಂದೂ, ದಕ್ಷಿಣ ರಾಜ್ಯ ಸಂರಕ್ಷಣಾಧುರಂಧರ ಎಂದು ತಾಮ್ರಶಾಸನಗಳಲ್ಲಿ ವರ್ಣಿಸಲಾಗಿದೆ[೩೭].

ಆಯುರ್ವೇದದಲ್ಲಿ ಅಪಾರವಾದ ಜ್ಞಾನವಿದ್ದು[೩೮] ವೈದಿಕ ಮತಾವಲಂಬಿಯಾಗಿದ್ದ ದುರ್ವಿನೀತನು ವಿಷ್ಣುವಿನ ಪರಮಾರಾಧಕನಾಗಿದ್ದನು. ಪ್ರತಿವರ್ಷ ಹಿರಣ್ಯಗರ್ಭ ಮಹಾಯಜ್ಞ ಮಾಡುತ್ತಿದ್ದು, ತಾನು ಕಮಲೋಧರ (ವಿಷ್ಣು) ಭಕ್ತ ಎಂದು ಕರೆದುಕೊಂಡಿರುವುದು ವೈದಿಕ ಮತಸ್ಥನೇ ಎಂದು ಡಾ|| ಶ್ರೀಕಂಠಶಾಸ್ತ್ರಿಗಳ ಅಭಿಪ್ರಾಯ. ದುರ್ವಿನೀತನು ಕವಿಯು ಹಾಗೂ ವಿಮರ್ಶಕನೂ ಆಗಿದ್ದನು ಎಂಬುದಕ್ಕೆ ಪ್ರಾಕೃತದಲ್ಲಿನ ವಡ್ಡಾರಾಧನೆಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದವನು[೩೯] ಮತ್ತು ಭಾರವಿ ಕವಿಯು ರಚಿಸಿದ ಕಿರಾತಾರ್ಜುನೀಯದ ಹದಿನೈದು ಸರ್ಗಗಳಿಗೆ ಟೀಕೆಯನ್ನು ಬರೆದವನು[೪೦].

ದುರ್ವಿನೀತನಿಗೆ ೩ ಗಂಡು ಮಕ್ಕಳಿದ್ದರು ಎಂದು ಸಿರಗುಂದ ಶಾಸನ ತಿಳಿಸಿದ್ದು. ಈ ಪೈಕಿ ಮುಷ್ಕರ ಮತ್ತು ಪೋಲವೀರರು ಎಂಬ ಇಬ್ಬರು ಮಕ್ಕಳ ಹೆಸರು ತಿಳಿದೆ. ಮುಷ್ಕರನು ಕ್ರಿ.ಶ.೬೦೫ರಲ್ಲಿ ಪಟ್ಟವೇರಿ[೪೧] ಸಿಂಧೂ ರಾಜನ ಮಗಳನ್ನು ವಿವಾಹವಾಗಿದ್ದನು[೪೨]. ಮುಷ್ಕರನ ನಂತರ ಸಹೋದರ ಪೋಲವೀರನು ಕ್ರಿ.ಶ.೬೨೦ರಲ್ಲಿ ಪಟ್ಟವೇರಿದನು[೪೩]. ಈ ಇಬ್ಬರೂ ಸಹೋದರ ಆಳ್ವಿಕೆಯ ಯಾವುದೇ ಆಧಾರಗಳು ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿಲ್ಲ. ಆದರೆ ಮಾರಸಿಂಹನ ಮಣ್ಣೆ ತಾಮ್ರಶಾಸನದಲ್ಲಿ ಮುಷ್ಕರ ಬಗ್ಗೆ ಕೆಲವು ಸಾಲುಗಳ ವರ್ಣನೆ ಮಾತ್ರ ಇದೆ. ಸಾಮಂತರು ಮುಷ್ಕರದ ಚಾರಣಾರವಿಂದಗಳಿಗೆ ಗುಂಪು ಗುಂಪಾಗಿ ನಮಸ್ಕರಿಸುತ್ತಿದ್ದರು. ಅವರ ಕಿರೀಟಗಳ ಪರಸ್ಪರ ಘರ್ಷಣೆಯಿಂದ ಬಿದ್ದ ಬೆಳಕು ಮುಷ್ಕರನ

[೩೬] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ.
[೩೭] ಎ.ಕ-೯, ದೊ.ತಾ.೬೮, ಕ್ರಿ.ಶ.೫೧೭, ದುರ್ವಿನೀತ, ಮಲ್ಲೋಹಳ್ಳಿ.
[೩೮] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಅವನೀತ, ಮಲ್ಲೋಹಳ್ಳಿ.
[೩೯] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೫.
[೪೦] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ.
[೪೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೬.
[೪೨] ಎಂ.ಜಿ.ಭೈರಪ್ಪ :- ಬೆಂಗಳೂರು ಜಿಲ್ಲೆಯ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಪು.ಸಂ-೨೫.
[೪೩] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೬.

ಪಾದ ಕಮಲಗಳ ಮೇಲೆ ಬಿದ್ದು ಹರಿಶಿಣ ಬಣ್ಣದ ಪಾದಗಳ ಹಾಗೆ ಕಾಣಿಸುತ್ತಿದ್ದವು ಎಂದು ವರ್ಣಿಸಲಾಗಿದೆ.

## ಶ್ರೀವಿಕ್ರಮ (ಕ್ರಿ.ಶ.೬೨೯–೬೫೪)

ಪೋಲವೀರನ ನಂತರ ಮುಷ್ಕರನ ಮಗನಾದ ಶ್ರೀವಿಕ್ರಮನು ಗಂಗ ಸಾಮ್ರಾಜ್ಯದ ಅಧಿಪತಿಯಾದನು. ಶ್ರೀ ವಿಕ್ರಮನು ೧೪ ಕೇಂದ್ರಗಳಿಂದ ವಿದ್ಯಾಸಂಪನ್ನವಾದ ವಿಶೇಷ ಗುಣ ಲಕ್ಷಣಗಳನ್ನು ಹೊಂದಿರುವವನು. ನೀತಿಶಾಸ್ತ್ರವನ್ನು ಹೇಳುವುದರಲ್ಲಿ ಮತ್ತು ಪ್ರಯೋಗಿಸುವಲ್ಲಿ ಕುಶಲನಾದವನು ಎಂದು ಮಣ್ಣೆಯ ತಾಮ್ರದಲ್ಲಿನ ಉಲ್ಲೇಖ ಬಿಟ್ಟರೆ ಬೇರೆಯಾವ ದಾಖಲೆಗಳು ದೊರೆತಿಲ್ಲ. ಕಾವೇರಿ ನದಿಗೆ ಕಟ್ಟೆ ಕಟ್ಟಿ ಪ್ರಸಿದ್ಧಿಗೆ ಬಂದವನು. ಕರಿಕಾಳ ಚೋಳನ ಮಗಳನ್ನು ವಿವಾಹವಾಗಿದ್ದನು[೪೪]. ಶ್ರೀವಿಕ್ರಮನಿಗೆ ಭೂವಿಕ್ರಮ ಮತ್ತು ಶಿವಮಾರನೆಂಬ ಇಬ್ಬರು ಗಂಡು ಮಕ್ಕಳಿದ್ದರು. ಮಣ್ಣೆಯಲ್ಲಿ ದೊರೆತ ತಾಮ್ರ ಶಾಸನದಲ್ಲಿ ಕೊಂಗುಣಿವರ್ಮನಿಂದ ಶ್ರೀ ವಿಕ್ರಮದವರೆಗೆ ವಂಶಾವಳಿಯ ಉಲ್ಲೇಖವನ್ನು ಕ್ರಿ.ಶ.೬೫೦ ರ ತಾಮ್ರಶಾಸನದಲ್ಲಿ ಕಾಣಬಹುದು.

## ಭೂವಿಕ್ರಮ (ಕ್ರಿ.ಶ.೬೫೪–೬೭೯)

ಶ್ರೀವಿಕ್ರಮನ ನಂತರ ಮಗನಾದ ಭೂವಿಕ್ರಮನು ಗಂಗ ಸಾಮ್ರಾಜ್ಯದ ದೊರೆಯಾದನು. ಭೂವಿಕ್ರಮನು ಪ್ರಾರಂಭದಲ್ಲಿ ಕುವಲಾದಲ್ಲಿ ಅಧಿಕಾರಿಯಾಗಿದ್ದಾಗ ತನ್ನ ತಂದೆಯೊಂದಿಗೆ ಸೇರಿ ಗಂಗರ ರಾಜ್ಯವನ್ನು ವ್ಯಾಪಕವಾಗಿ ಅಭಿವೃದ್ಧಿಗೊಳಸಿದನು[೪೫]. ಭೂವಿಕ್ರಮನು ಚಾಲುಕ್ಯರ ಮಾಂಡಲಿಕರಾಗಿದ್ದು, ಮೊದಲನೆಯ ವಿಕ್ರಮಾದಿತ್ಯನೊಂದಿಗೆ ರಾಜಕೀಯ ಸಂಬಂಧಗಳನ್ನು ಹೊಂದುವುದರ ಜೊತೆಗೆ ಚಾಲುಕ್ಯರ ಅಧಿಕಾರವನ್ನು ಒಪ್ಪಿದುದಲ್ಲದೆ ಅವರು ಕೈಗೊಳ್ಳುವ ಹಲವಾರು ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರು. ಇಮ್ಮಡಿ ಪುಲಿಕೇಶಿಯ ಸಮಕಾಲೀನವಾದ ಭೂವಿಕ್ರಮನು[೪೬] ಇಮ್ಮಡಿ ಪುಲಿಕೇಶಿಯ ಉತ್ತರ ದಂಡಯಾತ್ರೆಯಲ್ಲಿಯೂ ಸಹ ಪಾಲ್ಗೊಂಡಿರುವುದಕ್ಕೆ ಶಾಸನೋಕ್ತ ದಾಖಲೆಯಿಂದ ತಿಳಿಯುತ್ತದೆ[೪೭].

ಕ್ರಿ.ಶ.೬೭೦ರಲ್ಲಿ ವಿಳಂದೆಯಲ್ಲಿ ಚಾಲುಕ್ಯರಿಗೂ ಪಲ್ಲವರಿಗೂ ನಡೆದ ಯುದ್ಧದಲ್ಲಿ ಪಲ್ಲವ ಪರಮೇಶ್ವರವರ್ಮನಿಂದ ಉಗ್ರೋದಯವೆಂಬ ಕಂಠಿಹಾರವನ್ನು ಸೆಳೆದು ಚಾಲುಕ್ಯ ವಿಕ್ರಮಾದಿತ್ಯನ

---

[೪೪] ಎಂ.ಜಿ.ಭೈರಪ್ಪ :- ಬೆಂಗಳೂರು ಜಿಲ್ಲೆಯ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಪು.ಸಂ-೨೬.

[೪೫] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೯.

[೪೬] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೪.

[೪೭] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೯.

ವಿಜಯಕ್ಕೆ ಭೂವಿಕ್ರಮನು ಕಾರಣನಾದನು[೮೮]. ವಿಳಂದೆ ಎಂಬಲ್ಲಿ ನಡೆದ ಯುದ್ಧದಲ್ಲಿ ಅನೇಕ ಸೈನಿಕರನ್ನು ಪುಡಿ ಪುಡಿ ಗಟ್ಟಿ, ಸೈನಿಕರು ಕವಚವನ್ನು ಹಾಕಿಕೊಂಡಿದ್ದರೂ, ಹೊಡೆದ ಏಟಿನಿಂದ ಕವಚಗಳು ಒಡೆದು ಅವುಗಳ ಒಳಗಿಂದ ರಕ್ತವು ಸುರಿಯುತಿತ್ತು ಎಂದು ಮಣ್ಣೆಯ ತಾಮ್ರಶಾಸನದಲ್ಲಿ ವರ್ಣಿಸಲಾಗಿದೆ. ನಂತರ ರಾಜಧಾನಿಯನ್ನು ತಲಕಾಡಿನಿಂದ ಚನ್ನಪಟ್ಟಣ ತಾಲ್ಲೂಕಿನ ಮಾಕುಂದಕ್ಕೆ ಬದಲಾಯಿಸಿದನು. ಪ್ರಸ್ತುತ ಈಗ ಮಾಕುಂದದಲ್ಲಿ ಸೂರ್ಯ, ನಂದಿ, ಕೆಲವು ವೀರಗಲ್ಲುಗಳು ಮತ್ತು ಒಂದು ಶಿಲಾಶಾಸನವನ್ನು ಬಿಟ್ಟರೆ ಗಂಗರ ಆಳ್ವಿಕೆಯ ಬೇರೆ ಯಾವುದೇ ಅವಶೇಷಗಳು ಉಳಿದು ಬಂದಿಲ್ಲ. ಭೂವಿಕ್ರಮನು ಅನೇಕ ಯುದ್ಧಗಳಿಂದ ಸಂಪಾದಿಸಲ್ಪಟ್ಟ ಗಾಯಗಳನ್ನು ವಿಜಯದ ಲಕ್ಷಣವನ್ನಾಗಿ ಉಳ್ಳವವನು ಹಾಗೂ ಸಕಲ ಶಾಸ್ತ್ರಾರ್ಥವನ್ನು ಹೊಂದಿರುವವನು ಎಂದು ಭೂವಿಕ್ರಮನ ಶೌರ್ಯವನ್ನು ವರ್ಣಿಸಿರುವುದನ್ನು ಮಣ್ಣೆಯ ತಾಮ್ರಶಾಸನದಲ್ಲಿ ಕಾಣಬಹುದು.

## ೧ನೇ ಶಿವಮಾರ (ಕ್ರಿ.ಶ.೬೭೯–೭೨೫)

ಭೂವಿಕ್ರಮನ ನಂತರ ಅವನ ಸೋದರ ಶಿವಮಾರನು ಕ್ರಿ.ಶ.೬೭೯ರಲ್ಲಿ ಅಧಿಕಾರಕ್ಕೆ ಬಂದನು. ಶಿವಮಾರನಿಗೆ ಮುಮ್ಮಡಿ ಕೊಂಕಣಿವರ್ಮ ಎಂಬ ಮತ್ತೊಂದು ಹೆಸರಿದ್ದು, ನೃಪಕಾಯ, ಶಿಷ್ಯಪ್ರಿಯ, ಅವನಿ ಮಹೇಂದ್ರ, ಸ್ಥಿರಿವಿನಿತ, ಲೋಕದೂತ ದೇವರಾಜ ಎಂಬೆಲ್ಲ ಬಿರುದುಗಳಿದ್ದವು[೮೯].

ಸಮರಗಳಲ್ಲಿ ಸತತವಾಗಿ ಜಯಗಳಿಸಿದ್ದುದ್ದರಿಂದಾಗಿ ಲಕ್ಷ್ಮಿ ಬಂದು ನೆಲೆಸಿದಂತಹವನಾದ ಶಿವಮಾರನಿಗೆ ಅನೇಕ ನರೇಂದ್ರನು ಇವನ ಪಾದಪದ್ಮಗಳಿಗೆ ಬಗ್ಗಿ ನಮಸ್ಕರಿಸುತ್ತಿದ್ದು, ಅವರ ಕಿರೀಟಗಳಲ್ಲಿದ್ದ ರತ್ನಾಗಳ ಬೆಳಕು ಪಾದಪದ್ಮಗಳ ಮೇಲೆ ಬಿದ್ದು ಪ್ರಕಾಶವಾಗಿ ವಿರಾಜಸುತಿತ್ತು ಎಂದು ಮಾರಸಿಂಹನ ಶಾಸನದಲ್ಲಿ ಹೇಳಲಾಗಿದೆ. ಶಿವಮಾರನಿಗೆ ಎರೆಗಂಗ ಎಂಬ ಹೆಸರಿನ ಮಗನಿದ್ದು ಅವನು ತೋರನಾಡು–೫೦೦, ಕೊಂಗಾಳನಾಡು–೨೦೦೦, ಮಲೆನಾಡು–೧೦೦೦ ಎಂಬ ಪ್ರಾಂತಗಳಿಗೆ ಮಾಂಡಲಿಕನಾಗಿದ್ದನು.

## ಶ್ರೀ ಪುರುಷ (ಕ್ರಿ.ಶ.೭೨೫–೭೮೮)

ಶಿವಮಾರನಿಗೂ ಮೊದಲೇ ಮಗನಾದ ಎರೆಗಂಗ ಮರಣ ಹೊಂದಿದ್ದರಿಂದ ಮೊಮ್ಮಗನಾದ ಶ್ರೀ ಪುರುಷನಿಗೆ ಕ್ರಿ.ಶ.೭೨೬ರಲ್ಲಿ ಪಟ್ಟಾಭಿಷೇಕವಾಯಿತು. ಗಂಗವಂಶದಲ್ಲಿ ಪ್ರಭಾವಿತ ದೊರೆಗಳಲ್ಲಿ ಒಬ್ಬನಾದ ಶ್ರೀಪುರುಷನ ರಾಜ್ಯಭಾರವು ಗಂಗ ರಾಜ್ಯಕ್ಕೆ ಹಿಂದೆಂದೂ ಇಲ್ಲದ ಮಹತ್ವವನ್ನು, ಶ್ರೇಯಾಸಮೃದ್ಧಿಯನ್ನು

---

೮೮ ಡಾ.ಸೂರ್ಯನಾಥ ಕಾಮತ್ :- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೬.

೮೯ ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೯.

ನೀಡಿದ ಚಿರಸ್ಮರಣಿಯ ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಗಂಗರಾಜ್ಯಕ್ಕೆ ಶ್ರೀರಾಜ್ಯ ಎಂಬ ಪ್ರಶಸ್ತಿ ಪ್ರಾಪ್ತವಾಯಿತು[೫೦].

ಸುಮಾರು ಏಳು ದಶಕಗಳ ಕಾಲದ ಸುದೀರ್ಘ ಆಳ್ವಿಕೆಯಲ್ಲಿ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವಾರು ಅಭಿವೃದ್ಧಿ ಕಾರ್ಯಗಳು ನಡೆದಿರುತ್ತದೆ. ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ದೊರೆತಿರುವ ಎಲ್ಲಾ ಶಾಸನಗಳು ದಾನ ಶಾಸನಗಳೇ ಆಗಿದೆ. ಕ್ರಿ.ಶ.೭೨೦ರಲ್ಲಿ ಕೆರೆಕುನ್ದ-೩೦೦ ನಾಡನ್ನು ಆಳುತ್ತಿದ್ದು, ಗಂಗ ಮಹಾನಾಯಗನಿಗೆ ಗೌರವಪಟ್ಟ ನೀಡಿ ೩೦ ಕುಳ ಭೂಮಿಯನ್ನು[೫೧], ಕ್ರಿ.ಶ.೭೫೦ರಲ್ಲಿ ಸೊಮಯಾಜಿಯ ಮಗನಾದ ಸಕ್ಕರಶರ್ಮನಿಗೆ ಅತ್ತಿಗುನ್ದೂರು ಎಂಬ ಗ್ರಾಮವನ್ನು ಬ್ರಹ್ಮದೇಯವಾಗಿ[೫೨], ಕ್ರಿ.ಶ.೭೫೦ರಲ್ಲಿ ಶ್ರೀಪುರುಷನ ಆಜ್ಞೆಯ ಮೇರೆಗೆ ಕಾದುವಟ್ಟಿ ಸೈನ್ಯ ಯುದ್ಧದಲ್ಲಿ ಸೀಮವಲ್ಲವರಸ ಸ್ವರ್ಗಕ್ಕೆ ಹೋದನು[೫೩]. ೮ನೇ ಶತಮಾನದಲ್ಲಿ ಶ್ರೀಪುರುಷ ಮಹಾರಾಜಾಧಿರಾಜನ ಆಳ್ವಿಕೆಯಲ್ಲಿ ಗಂಗಾರುಸಾಸಿರ ಮತ್ತು ನಾಡು-೬೬ ಬೇಡಿಕೊಳ್ಳಲು ಈಶ್ವರ ಭಟ್ಟಾರಿಗೆ ಮೊದಲ ಅಣೆಕಟ್ಟಿನ ಕೆಳಗಿನ ಭತ್ತ ಬೆಳೆಯುವ ಗದ್ದೆಯನ್ನು ದಾನ ನೀಡಿದನು[೫೪].

ನಾರಾಯಣ ಚರಣ ಕಮಲಗಳಲ್ಲಿ ದ್ಯಾನಾಸಕ್ತನಾದ, ಶೂರ ಪುರುಷನು, ದಾರುಣ ಯುದ್ಧಗಳಲ್ಲಿ ಆನೆಯಂತ ಮನುಷ್ಯರನ್ನು ಪುಡಿಗಟ್ಟಿದವನು. ಅತ್ಯಂತ ಕಠಿಣವಾದ ಅನೇಕ ಯುದ್ಧಗಳಲ್ಲಿ ಗೆದ್ದಂತಹವನು. ಗಜಕೇಸರಿ, ಘಟಾಕೇಸರಿ ಧನಸ್ಸನ್ನು ಬಳಸುವುದರಲ್ಲಿ ದಶರಥನ ಮಗನಾದ ರಾಮನಂತೆ, ಪರಾಕ್ರಮದಲ್ಲಿ ಜಮದಗ್ನಿಯ ಮಗ ಪರಶು ರಾಮನಂತಿರುವನು, ರಾಜ್ಯವನ್ನು ಜಯಿಸುವುದರಲ್ಲಿ ಇಂದ್ರನಂತಿರುವರು, ಕೀರ್ತಿಯಲ್ಲಿ ಸೂರ್ಯನಂತೆ ಇರುವವರು, ಪ್ರಭುತ್ವದಲ್ಲಿ ಕುಬೇರನಂತಿರುವವನಾದ ಪ್ರಥಮ ನಾಮಧೇಯ ಪೃಥ್ವೀ ಕೊಂಗಣಿ ಮಹಾಧಿರಾಜ ಶ್ರೀಪುರುಷನು ಎಂದು ಶ್ರೀಪುರುಷನ ಗುಣಗಾನ, ವರ್ಣನೆ, ಶೌರ್ಯವನ್ನು ಮಣ್ಣೆಯ ತಾಮ್ರಶಾಸನದಲ್ಲಿ ವಿವರಿಸಲಾಗಿದೆ.

ಬಾದಾಮಿ ಚಾಲುಕ್ಯರ ಪಲ್ಲವ ನಂದಿವರ್ಮನನ್ನು ಯುದ್ಧದಲ್ಲಿ ಸೋಲಿಸಿ, ೨ನೇ ವಿಕ್ರಮಾದಿತ್ಯನು ಕಂಚಿಯ ಮೇಲೆ ದಂಡೆತ್ತಿ ಹೋಗಲು ಶ್ರೀ ಪುರುಷನು ಸಹಾಯ ಮಾಡಿದನು[೫೫]. ಒಮ್ಮೆ ಪಾಂಡ್ಯರು ಗಂಗಕನ್ಯೆಯೊಬ್ಬಳನ್ನು ಅಪಹರಿಸಿ ವರಿಸಿದ್ದ ಪಾಂಡ್ಯ ತೇರ್ಮಾರನ ವಿರುದ್ಧ

---

[೫೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ ಪು.ಸಂ-೪೬.

[೫೧] ಎ.ಕ-೯, ಹೊ.ತಾ.೮೬, ಕ್ರಿ.ಶ.೭೨೦, ಬೇಚಿರಾಖ್ ಮಾರೇನಹಳ್ಳಿ.

[೫೨] ಎ.ಕ-೯, ನೆ.ತಾ.೩೩, ಕ್ರಿ.ಶ.೭೫೦, ತೋಟಗೆರೆ.

[೫೩] ಎ.ಕ-೯, ಹೊ.ತಾ.೨೧, ಕ್ರಿ.ಶ.೭೫೦, ಶಿವನಾಪುರ.

[೫೪] ಎಂ.ಆರ್.ಎ, ೧೯೪೧, ಮೈಸೂರು, ಕ್ರಿ.ಶ.೮ನೇ ಶತಮಾನ, ಶ್ರೀಪುರುಷ, ಅರಳಸಂದ್ರ, ಪು.ಸಂ-೩೪ ರಿಂದ ೩೫.

[೫೫] ಎಂ.ಜಿ.ಮಂಜುನಾಥ :- ಬೆಂಗಳೂರು ಗ್ರಾಮಾಂತರ ಜಿಲ್ಲೆ ಇತಿಹಾಸ, ಪು.ಸಂ-೩.

ದೇಣ್‌ಬೈಯಲ್ಲಿನ ಯುದ್ಧದಲ್ಲಿ ಶ್ರೀಪುರುಷನು ಸೋತ ನಂತರ ಪಲ್ಲವರ ಕಾಡುವಟ್ಟಿಯು ಗಂಗರ ರಾಜ್ಯದ ಮೇಲೆ ದಾಳಿ ಮಾಡಿ ಗಂಗವಾಡಿಗೆ ನುಗ್ಗಿ ಶ್ರೀಪುರುಷನನ್ನು ಸೋಲಿಸಿ ಹಿಂದೆ ಭೂಮಿಕ್ರಮನು ಸೆಳೆದುಕೊಂಡಿದ್ದ ಉಗ್ರೋದಯವೆಂಬ ಕಂಠಿಹಾರವನ್ನು ಕಿತ್ತುಕೊಂಡನು[೫೬]. ಈ ದಾಳಿಯಿಂದ ರಕ್ಷಣೆ ಪಡೆಯಲು ರಾಜಧಾನಿಯನ್ನು ತಲಕಾಡಿನಿಂದ ಮಾನ್ಯಪುರಕ್ಕೆ ವರ್ಗಾಯಿಸಿದನು[೫೭].

ಈ ಯುದ್ಧಗಳ ನಂತರ ಕ್ರಿ.ಶ.೭೩೧ರಲ್ಲಿ ಶ್ರೀಪುರುಷನು ಪಲ್ಲವರ ಜೊತೆ ನಡೆದ ಉಗ್ರಕಾಳಗದಲ್ಲಿ ಎರಡನೇಯ ಪಲ್ಲವ ಪರಮೇಶ್ವರವರ್ಮನನ್ನು ಕೊಂದು ಅವನ ಪೆರ್ಮಾಡಿ ಎಂಬ ಬಿರುದನ್ನು ಕಿತ್ತುಕೊಂಡನು. ಇದೇ ಎರಡನೇಯ ವಿಳಂದೆ ಕಾಳಗ[೫೮]. ಉತ್ತರದಲ್ಲಿ ಚಾಲುಕ್ಯರ ಅವನತಿಯಾಗಿ ರಾಷ್ಟ್ರಕೂಟರು ಕ್ರಿ.ಶ.೭೫೩ರಲ್ಲಿ ಉದಯಿಸಲು ಗಂಗರು ಪ್ರಾರಂಭದಲ್ಲಿ ರಾಷ್ಟ್ರಕೂಟರೊಡನೆ ಸೌಹಾರ್ದ ಸಂಬಂಧವನ್ನು ಬೆಳೆಸಿದನು. ನಂತರ ರಾಷ್ಟ್ರಕೂಟರ ೧ನೇ ಕೃಷ್ಣನು ಮಾನ್ಯಪುರದ ಮೇಲೆ ದಾಳಿ ಮಾಡಿದಾಗ, ಅವನ ಸೈನ್ಯವನ್ನು ಕಂಪಿಲೆಯ ತನಕ ಶ್ರೀಪುರುಷನು ಬೆನ್ನಟ್ಟಿದನು. ಹಾಗೂ ಕೆಲವು ವರ್ಷಗಳ ಕಾಲ ಆ ಭಾಗದ ಪ್ರದೇಶಗಳು ಶ್ರೀಪುರುಷನ ವಶದಲ್ಲಿತ್ತು[೫೯]. ಚಾಲುಕ್ಯರ ಅಧಿಕಾರಕ್ಕೆ ಒಳಪಟ್ಟಿದ್ದ ರಾಜ್ಯಗಳಲ್ಲಿ ಪ್ರಭುತ್ವ ಸ್ಥಾಪಿಸಿಕೊಳ್ಳುವುದೇ ರಾಷ್ಟ್ರಕೂಟರ ಮೂಲ ಉದ್ದೇಶವಾಗಿತ್ತು. ಪ್ರಭುತ್ವ ವಿಸ್ತರಣೆಗಾಗಿ ರಾಷ್ಟ್ರಕೂಟರು ಹೂಡಿದ ಆಕ್ರಮಣಗಳನ್ನು ಶ್ರೀಪುರುಷನು ತನ್ನ ಆಳ್ವಕೆಯ ಕೊನೆಯವರೆಗೂ ಎದುರಿಸುತ್ತಲೇ ಹೋರಾಡಿದನು[೬೦]. ಶ್ರೀಪುರುಷನ ಕಾಲದಿಂದ ರಾಷ್ಟ್ರಕೂಟರಿಗೂ ಗಂಗರಿಗೂ ಅಘೋಷಿತ ಯುದ್ಧಗಳು ನಡೆಯುತ್ತಿದ್ದವು[೬೧]. ಪಾಂಡ್ಯ, ಪಲ್ಲವ ಮತ್ತು ರಾಷ್ಟ್ರಕೂಟರ ವಿರುದ್ಧ ಪ್ರಬಲ ಹೋರಾಟ ನಡೆಸಿದ, ಪರಾಕ್ರಮಿಯಾದ ಶ್ರೀ ಪುರುಷನು ವಿದ್ವಾಂಸನು ಆಗಿದ್ದನು. ಸಂಸ್ಕೃತ ಭಾಷೆಯಲ್ಲಿ ಗಜಶಾಸ್ತ್ರವನ್ನು ಬರೆದನು. ಜೊತೆಗೆ ಅನೇಕ ವಿದ್ವಾಂಸರಿಗೆ ದಾನ ದತ್ತಿಗಳನ್ನು ನೀಡಿದನು.

ಶ್ರೀಪುರುಷನಿಗೆ ರಾಜಕೇಸರಿ, ಭೀಮಕೋಪ, ರಣಭಾಜನ ಎಂಬ ಬಿರುದುಗಳಿದ್ದವು. ಚಾಲುಕ್ಯ ವಂಶದ ವಿಜಯ ಮಹಾದೇವಿಯನ್ನು, ನೊಳಂಬವಂಶದ ಕನ್ಯೆಯನ್ನು ವರಿಸಿದ್ದನು. ವಿಜಯ ಮಹಾದೇವಿಯು ಚಾಲುಕ್ಯ ವಿಜಯಾದಿತ್ಯದ ಮಗಳಿರಬೇಕು ಎಂದು ಕೆ.ಬಿ.ಪಾಠಕರು ಊಹಿಸಿದ್ದು, ಮಹಾದೇವಿಗೆ ವಿಜಯಾದಿತ್ಯ ಎಂಬ ಮಗ ಜನಿಸಿರಬೇಕು[೬೨]. ಶ್ರೀ ಪುರುಷನ ಆಳ್ವಕೆಯಾವಧಿಯಲ್ಲಿ

[೫೬] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೭.
[೫೭] ಎಂ.ಜಿ.ಮಂಜುನಾಥ :- ಬೆಂಗಳೂರು ಗ್ರಾಮಾಂತರ ಜಿಲ್ಲೆ ಇತಿಹಾಸ, ಪು.ಸಂ-೩.
[೫೮] Suryanath.U.Kamath :- Karnataka State Gazetter, Bangalore Rural District, page.no-೪೩.
[೫೯] ಡಾ.ಸೂರ್ಯನಾಥ ಕಾಮತ್:-ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೭.
[೬೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :-ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೮.
[೬೧] ಡಾ.ಎಚ್.ಗುಡ್ಡದೇಶ್ವರಪ್ಪ :-ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೦.
[೬೨] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೭.

ಶ್ರೀಪುರುಷ ಮತ್ತು ವಿನಾಯಕನಿಮ್ಮಡಿಗೆ ಜನಿಸಿದ ಜೇಷ್ಠಪುತ್ರ ಶಿವಮಾರನು ಕಡಂಬೂರು ಮತ್ತು ಕುಣಗಲನಾಡು ಎಂಬ ಪ್ರಾಂತಗಳನ್ನು ಆಳುತ್ತಿದ್ದರೆ, ವಿಜಯಾದಿತ್ಯನು ಕೆರೆಗೋಡುನಾಡಿನ ಮತ್ತು ಅಸಂದಿನಾಡಿನ ಮಾಂಡಳಿಕನಾಗಿದ್ದನು. ಅಲ್ಲಿ ಅವನ ಸಂತತಿಯವರು ಬಹುಕಾಲ ಒಡೆಯರಾಗಿದ್ದರು. ಕೊವಲಾಲನಾಡು, ಬೆಳ್ತೂರುನಾಡು, ಪುಲವಕಿನಾಡು ಮತ್ತು ಮಲನಾಡು ಪ್ರಾಂತಗಳಲ್ಲಿ ಇನ್ನೊಬ್ಬ ಮಗನಾದ ದುಗ್ಗಮಾರನು ಮಾಂಡಲೇಶ್ವರನಾಗಿದ್ದನು. ಹಾಗೂ ಪ್ರಸಿದ್ಧ ಸೇನಾನಿ ಸಿಯಗೆಲ್ಲನು ಪ್ರಾಯಶಃ ಶ್ರೀಪುರುಷನ ಕೊನೆಯ ಮಗ ರಾಷ್ಟ್ರಕೂಟರೊಡನೆ ಹಾಗೂ ಪಲ್ಲವರೊಡನೆ ನಡೆದ ಸಂಗ್ರಾಮಗಳಲ್ಲಿ ಪ್ರಾಣದ ಹಂಗು ತೊರೆದು ಕಾದಾಡಿ ತಂದೆಗೆ ಅಪಾರವಾದ ಕೀರ್ತಿಯನ್ನು ತಂದಿದ್ದ ಸಿಯಗೆಲ್ಲನು ರಣರಂಗದಲ್ಲೇ ಮೃತನಾದುದರಿಂದ ಸಿಂಹಾಸನ ಪ್ರಾಪ್ತಿಗಾಗಿ ಅಣ್ಣಂದಿರೊಡನೆ ಕಾದಾಡುವ ದುರ್ಯೋಗ ಅವನಿಗಿರಲಿಲ್ಲ[೬೩].

## ದುಗ್ಗಮಾರ

ದುಗ್ಗಮಾರನು ತಂದೆ ಶ್ರೀಪುರುಷನ ೪೨ನೇ ಆಡಳಿತಾವಧಿಯಾದ ಕ್ರಿ.ಶ.೭೬೭ರಲ್ಲಿ ಕೊವಳಾಲನಾಡು-೩೦೦, ಗಂಗಾರುಸಾಸಿರ ಪ್ರಾಂತಗಳಲ್ಲಿ ಮಂಡಳೇಶ್ವರನಾಗಿ ಆಳ್ವಿಕೆ ನಡೆಸಿದನು[೬೪]. ಶ್ರೀಪುರುಷನು ಮಾಲೂರು ತಾಲ್ಲೂಕಿನಲ್ಲಿ ಶಿವಮಾರನ ಹೆಸರಲ್ಲಿ ಶಿವಾರ, ಶಿವಾರ ಪಟ್ಟಣ, ಮುಳುಬಾಗಿಲು ತಾಲ್ಲೂಕಿನಲ್ಲಿ ದುಗ್ಗಮಾರನ ಹೆಸರಲ್ಲಿ ದುಗ್ಗಸಂದ್ರವನ್ನು ಮಕ್ಕಳಗಳಗೆ ಸ್ಥಾಪಿಸಿ ಆಡಳಿತವನ್ನು ಮಾಡಲು ಅನುವು ನೀಡಿದನು. ಆದರೂ ಮಾರಸಿಂಹನ ಮಣ್ಣೆಯ ತಾಮ್ರಶಾಸನದಲ್ಲಿ ಗಂಗವಂಶಾವಳಿಯನ್ನು ಹೇಳುವಾಗ ದುಗ್ಗಮಾರನ ಬಗ್ಗೆ ಯಾವುದೇ ಮಾಹಿತಿಯನ್ನು ತಿಳಿಸದೆ ಇರೊದು ಬೇಸರ ಸಂಗತಿ.

ಬಹುಶಃ ಶ್ರೀಪುರುಷನು ೨ನೇ ಶಿವಮಾರನ ಮೇಲಿನ ಪ್ರೀತಿಯಿಂದ ಶಿವಮಾರನಿಗೆ ಪಟ್ಟ ಕಟ್ಟಲು ಅಥವಾ ದುಗ್ಗಮಾರನು ತಂದೆಯ ವಿರುದ್ಧ ಬಂಡಾಯ ಎದ್ದಿರಲು, ದುಗ್ಗಮಾರನನ್ನು ನಿಯಂತ್ರಿಸಲು ನೊಳಂಬರ ಮುಖಾಂತರ ಮಗನ ಮೇಲೆ ಯುದ್ಧ ಮಾಡಿಸಿರ ಬೇಕು. ಕ್ರಿ.ಶ.೭೬೫ ರಿಂದ ಶ್ರೀ ಪುರುಷನ ಅಧಿನದಲ್ಲಿ ದುಗ್ಗಮಾರನು ಆಳುತ್ತಿದ್ದ ಕೊವಳಾಲನಾಡು[೬೫] ಮತ್ತು ಗಂಗಾರುಸಾಸಿರ ಪ್ರಾಂತ್ಯವನ್ನು ಕ್ರಿ.ಶ.೮೬೦ ರ ಕಾಲಕ್ಕಾಗಲೇ ನೊಳಂಬಾಧಿರಾಜನ ಅಧಿನದಲ್ಲಿ ದುಗ್ಗಮಾರ ಆಳುತ್ತಿದ್ದು[೬೬], ನಂತರ ಕ್ರಿ.ಶ.೮೯೦ ರ ಕಾಲಕ್ಕೆ ನಿರ್ತಿಮಾರ್ಗ್ಗ ಕೊಂಕಣಿವರ್ಮನ ಗಂಗವಾಡಿ ೯೬೦೦೦ ಪ್ರದೇಶದಲ್ಲಿ

---

[೬೩] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೯.

[೬೪] ಎ.ಕ-೧೦, ಮು.ತಾ.೮೦, ಕ್ರಿ.ಶ.೭೬೭, ಮೇಲಾಗಾಣಿ.

[೬೫] ಎ.ಕ-೧೦, ಶ್ರೀ.ತಾ.೬೫, ಕ್ರಿ.ಶ.೭೬೫, ದಿಂಬಾಲ.

[೬೬] ಎ.ಕ-೧೦, ಮು.ತಾ.೨೪೮, ಕ್ರಿ.ಶ.೮೬೦, ಮೋತಗಪಲ್ಲಿ.

ನೊಳಂಬಾಧಿರಾಜನು ಗಂಗಾರುಸಾಸಿರದಲ್ಲಿ ಆಳ್ವಿಕೆಯಲ್ಲಿ ಇರುವುದನ್ನು[೬೭] ಗಮನಿಸಿದರೆ ದುಗ್ಗಮಾರನ ಪ್ರದೇಶಗಳೆಲ್ಲಾ ನೊಳಂಬರ ವಶವಾಯಿತ್ತು.

ಮಣ್ಣೆಯ ತಾಮ್ರಶಾಸನದಲ್ಲಿ ದುಗ್ಗಮಾರನ ಬಗ್ಗೆ ಮಾಹಿತಿ ಇಲ್ಲದಿದ್ದರೂ ಜಿಲ್ಲಾ ವ್ಯಾಪ್ತಿಯ ಹೊಸಕೋಟೆ ಭಾಗದಲ್ಲಿ ದುಗ್ಗಮಾರನ ಆಳ್ವಿಕಾವಧಿಯ ಶಾಸನ ವೀರಗಲ್ಲುಗಳು ದೊರೆತಿದ್ದು, ದುಗ್ಗಮಾರನ ಆಳ್ವಿಕೆಗೆ ಜಿಲ್ಲೆಯು ಒಳಪಟ್ಟಿರುವುದು ರುಜುವಾತಾಗಿದೆ. ಕ್ರಿ.ಶ.೭೮೦ರಲ್ಲಿ ದುಗ್ಗಮಾರನ ವಿರುದ್ಧ ಗಂಗಪುರದೊಳಗೆ ನುಗ್ಗಿದ ಶತ್ರುಗಳನ್ನು ಪೆಣ್ಣನ್ದೂರಿನ ಕೀರ್ತಿಣ್ಣದು ಹಿರಿದು, ತಾನು ಮಡಿದನು[೬೮]. ಗಂಗಪುರದೊಳಗೆ ನುಗ್ಗಿದ ಶತ್ರುಗಳು ಬಹುಶಃ ನೊಳಂಬರೇ ಆಗಿರಬೇಕು. ಕ್ರಿ.ಶ.೭೮೦ರಲ್ಲಿ ಭಿವೊಮ್ಮೆ ಕೊರಳಗನ ಸೇವಕರಲ್ಲಿ ಒಬ್ಬನಾದ ಕೊಣಮಿರು ಗಂಗನು ಆಲೂರಿನಲ್ಲಿ ದುಗ್ಗಮಾರನ ಪಡೆಯಲ್ಲಿ ಸೇರಿಕೊಂಡು ಶತ್ರುಗಳನ್ನು ಇರಿದು ಸತ್ತದು[೬೯]. ಗಂಗರ ಕಾಲದಲ್ಲಿ ಪದಾಲೆದಳಕ್ಕೆ ಇದ್ದಂತ ಅತ್ಯಂತ ಮಹತ್ವ ಸ್ಥಾನವನ್ನು ತಿಳಸುತ್ತದೆ. ನಾಡಿನ ರಕ್ಷಣೆ, ಏಳ್ಗೆಗಾಗಿ ತಮ್ಮ ಜೀವನವನ್ನು ಮೂಡಿಪಿಡುತ್ತಿದ್ದರು ಎಂಬುದನ್ನು ಈ ಶಾಸನ ತಿಳಸುತ್ತದೆ.

## ೨ನೇ ಶಿವಮಾರ (ಕ್ರಿ.ಶ.೭೮೮–೮೧೬)

ಶ್ರೀ ಪುರುಷನ ನಂತರ ೨ನೇ ಶಿವಮಾರನು ಕ್ರಿ.ಶ.೭೮೮ರಲ್ಲಿ ಪಟ್ಟಕ್ಕೆ ಬಂದನು. ಶಿವಮಾರನಿಗೆ ಸೈಗೊಟ್ಟ ಶಿವಮಾರ ಎಂಬ ಇನ್ನೊಂದು ಹೆಸರಿದ್ದು, ಸೈಗೊಟ್ಟ ಎಂದರೆ ಎಲ್ಲಾರಿಗೂ ಸವಾಲು ಹಾಕಿದವ ಎಂದು. ಶಿವಮಾರನು ಪಟ್ಟಾರೂಢನಾದಿನಿಂದಲೇ ಅವನಿಗೂ ಅವನ ತಮ್ಮ ದುಗ್ಗಮಾರನಿಗೂ ಸಿಂಹಾಸನ ಪ್ರಾಪ್ತಿಗಾಗಿ ಯುದ್ಧಾರಂಭವಾಯಿತು. ದುಗ್ಗಮಾರನು ತಾನು ಸ್ವತಂತ್ರ ರಾಜನೆಂದು ಘೋಷಿಸಿ ದಂಗೆಯೆದ್ದನು. ಆಗ ಶಿವಮಾರನ ಸಾಮಂತನಾದ ಸಿಂಗಪೋತನು ಶಿವಮಾರನ ನೆರವಿಗೆ ಬಂದು ಆ ದಂಗೆಯನ್ನು ಮುರಿದನು[೭೦]. ಶಿವಮಾರನು ರಾಷ್ಟ್ರಕೂಟರ ವಿರುದ್ಧ ತನ್ನ ಸ್ವತಂತ್ರವನ್ನು ರಕ್ಷಿಸಿಕೊಳ್ಳಲು ಹೋರಾಡಿ ದೀರ್ಘ ಕಾಲ ಕಾರವಾಸದಲ್ಲಿ ಇದ್ದಿದಲ್ಲದೆ ಬಿಡುಗಡೆಯ ನಂತರದಲ್ಲೂ ಅವರ ವಿರುದ್ಧ ಹೋರಾಡುತ್ತಾ ಅಸುನೀಗಿದನು[೭೧].

ಧನುರ್ವಿದ್ಯೆಯಲ್ಲಿ ವಿಕಾಸವನ್ನು ಹೊಂದಿರುವವನು, ಅಲಂಕಾರಿಕವಾದ ಸೇತುವೆಗಳನ್ನು ನಿರ್ಮಿಸುವವನು, ಜ್ಞಾನಿಗಳಿಗೆ ಸ್ನೇಹಿತನು, ಕಾವ್ಯಗಳನ್ನು ರಚಿಸುವ ಕೌಶಲ್ಯವನ್ನು ಹೊಂದಿರುವನು.

---

[೬೭] ಎ.ಕ-೧೦. ಕೊ.ತಾ.೭೯, ಕ್ರಿ.ಶ.೮೯೦, ಕೆಂದಟ್ಟಿ (ಕೆಂದಟ್ಟಿ ಮಡಿವಾಳ).
[೬೮] ಎ.ಕ-೯, ದೇ.ತಾ.೭೪, ಕ್ರಿ.ಶ.೭೮೦, ದುಗ್ಗಮಾರ, ಗಂಗವಾರ.
[೬೯] ಎ.ಕ-೯, ದೇ.ತಾ.೬೭, ಕ್ರಿ.ಶ.೭೮೦, ದುಗ್ಗಮಾರ, ಚಂದ್ರಪ್ಪಹಳ್ಳಿ.
[೭೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೮೯.
[೭೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೭.

ಕುದುರೆಯನ್ನು ಪಳಗಿಸುವುದರಲ್ಲಿ ಪರಿಣಿತನು, ಗರುಡನು ಹೇಗೆ ಹರಿಯಲ್ಲಿ ಪೂಜ್ಯ ಭಾವನೆಯನ್ನು ಹೊಂದಿರುವವನು. ದುರ್ಯೋಧನಂತೆ ಧೈರ್ಯಶಾಲಿಯಾಗಿರುವ, ಅರ್ಜುನನಂತೆ ಒಳ್ಳೆಯ ಗುಣಗಳಿಂದ ಕೂಡಿರುವವನು, ಮಕರ ಧ್ವಜನ ಗುರುವಿನ (ವಿಷ್ಣು) ಚರಣಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡುವ, ಮುದಕುನ್ದಾರು ಎಂಬ ಗ್ರಾಮದಲ್ಲಿ ಬೀಡು ಬಿಟ್ಟಿರುವವನು. ರಾಷ್ಟ್ರಕೂಟ ಮತ್ತು ಪಲ್ಲವಸಂತತಿಯ ರಾಜರುಗಳಾದ ಗೋವಿಂದರಾಜು ಮತ್ತು ನಂದಿವರ್ಮರು ರಾಜಾಭಿಷೇಕ ಮಾಡಿ ಅವರ ಕೈಗಳಿಂದಲೇ ಅವನ ತಲೆಯ ಮೇಲೆ ಕಿರೀಟವನ್ನು ಇಟ್ಟು ಪಟ್ಟವನ್ನು ಕಟ್ಟಿದವರು ಎಂದು ಮಣ್ಣೆಯ ತಾಮ್ರಶಾಸನದಲ್ಲಿ ಶಿವಮಾರನ ಗುಣಗಾಣವನ್ನು ಕಾಣಬಹುದು. ಕ್ರಿ.ಶ.೭೮೦ರಲ್ಲಿ ಅಭಿಷಿಕ್ತನಾದ ರಾಷ್ಟ್ರಕೂಟರ ಧೃವನು ಮಣ್ಣೆ ಮೇಲೆ ದಾಳಿ ಮಾಡಿದಾಗ ಧೃವನ ಸೈನ್ಯ ಧಿಕ್ಕಾಪಾಲಾಗಿ ಓಡಿತು[೨೨]. ಶ್ರೀ ಪುರುಷನು ಜೀವಿಸಿರುವವರೆಗೂ ರಾಷ್ಟ್ರಕೂಟರು ಗಂಗರ ಮೇಲೆ ಅಧಿಕಾರವನ್ನು ಸಂಪಾದಿಸಲು ಆಗಲಿಲ್ಲ[೨೩].

ರಾಷ್ಟ್ರಕೂಟ ಧೃವನನ್ನು ಸದೆಬಡಿಯಲು ವಿಶೇಷ ಯತ್ನ ಮಾಡಿ, ಮುದಗುಂಡೂರಲ್ಲಿ ನಡೆದ ಯುದ್ಧದಲ್ಲಿ ಧೃವನು ಶಿವಮಾರನನ್ನು ಸೋಲಿಸಿ, ಬಂಧಿಸಿ, ಮಣ್ಣೆಯನ್ನು ಆಕ್ರಮಿಸಿಕೊಂಡು ತನ್ನ ಮಗನಾದ ಕಂಬರಸನನ್ನು ಗಂಗವಾಡಿಯಲ್ಲಿ ಆಡಳಿತಾಧಿಕಾರಿಯಾಗಿ ನೇಮಿಸಿದನು[೨೪]. ಒಂದು ವೇಳೆ ಶಿವಮಾರನ ಬದಲು ದುಗ್ಗಮಾರನಿಗೆ ಶ್ರೀಪುರುಷ ಪಟ್ಟಕಟ್ಟಿದ್ದರೆ ರಾಷ್ಟ್ರಕೂಟರು ಮಣ್ಣೆಯನ್ನು ಆಕ್ರಮಿಸುವುದಿರಲ್ಲಿ ಗಂಗರ ಮೇಲೆ ಯುದ್ಧಮಾಡಲು ಭಯ ಪಡೋರೀತಿಯಲ್ಲಿ ಅವರನ್ನ ಮಟ್ಟ ಹಾಕುತಿದ್ದನೆನಿಸುತ್ತದೆ.

ಧೃವನ ನಂತರ ೩ನೇ ಗೋವಿಂದನು ಅಧಿಕಾರಕ್ಕೆ ಬಂದ ಮೇಲೆ ಶಿವಮಾರನನ್ನು ಬಿಡುಗಡೆಗೊಳಿಸಿ ತನ್ನ ಆಂತರಿಕ ಕಲಹದಲ್ಲಿ ಸಹಾಯ ಮಾಡಲು ಕೇಳಿದನು. ಆದರೆ ಶಿವಮಾರನು ಧೃವನ ಮಗನಾದ ಕಂಬರಸನ ಜೊತೆಗೂಡಿ ಗೋವಿಂದನ ಮೇಲೆ ಯುದ್ಧ ಮಾಡಿದ್ದರಿಂದ ಮತ್ತೆ ಶಿವಮಾರನನ್ನು ಬಂಧಿಸಿ ನಂತರ ಬಿಡುಗಡೆ ಮಾಡಿದನು[೨೫].

ಕಡಿಮೆ ಕಾಲಾವಧಿಯಲ್ಲಿ ಆಡಳಿತ ನಡೆಸಿದರೂ ಸಹ ಜಿಲ್ಲೆಯ ವ್ಯಾಪ್ತಿಯಲ್ಲಿ ಶಿವಮಾರನ ಆಳ್ವಿಕೆಯಾವಧಿ ವೀರಗಲ್ಲುಗಳು ದೊರೆತಿದೆ. ಶಿವಮಾರ ಮಹಾರಾಜ ಆಳ್ವಿಕೆಯ ಸಂದರ್ಭದಲ್ಲಿ

[೨೨] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ.

[೨೩] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೧೭೩.

[೨೪] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೭

[೨೫] ಎಂ.ಜಿ.ಭೈರಪ್ಪ :- ಬೆಂಗಳೂರು ಜಿಲ್ಲೆಯ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಪು.ಸಂ-೨೯.

ಕವಿತ್ತೊರನ್ ಪಸುವಳ ಧನುವೆಳ್ದ ಕೊನ್ದ ಬಿಟ್ಟಿದಕ್ಕೆ ತಿಜಣಿಯೂರನ್ನು ಕ್ರಿ.ಶ.ಸು.೭ನೇ ಶತಮಾನದಲ್ಲಿ[೭೬], ಮತ್ತೊಂದು ಶಾಸನದಲ್ಲಿ (ಮರಳು ಕುಂಟೆ) ಮಣ್ಣೆಯ ಕೋಟೆ ಕಾಳಗದಲ್ಲಿ ಗಂಗರ ಪರಮ ಹೋರಾಡಿ ಮರಣ ಹೊಂದಿದಕ್ಕೆ ಅವನ ಮಗ ಸಿಜ್ಗಾಟಿಗೆ ದಾನ ನೀಡಿದರು[೭೭]. ಈ ಶಾಸನವು ಮಾನ್ಯಪುರಕ್ಕೆ ಮಣ್ಣೆಯೆಂಬ ಮತ್ತೊಂದು ಹೆಸರನ್ನು ತಿಳಿಸುವುದರೊಂದಿಗೆ ಮಣ್ಣೆಯಲ್ಲಿ ಕೋಟೆ ಇದ್ದುದಕ್ಕೆ ಸಾಕ್ಷಿಯಾಗಿದೆ. ಆದರೆ ಪ್ರಸ್ತುತ ಮಣ್ಣೆಯಲ್ಲಿ ಕೋಟೆಯ ಯಾವ ಅವಶೇಷಗಳು ಇಲ್ಲ. ಶಿವಮಾರನ ದೇವನಹಳ್ಳಿ ತಾಲ್ಲೂಕಿನ ಸುರದೇವಪುರದ ಶಾಸನವು[೭೮] ಬಿ.ಎಲ್.ರೈಸ್‌ರವರು ಈ ಶಾಸನದ ಕಾಲಾವಧಿಯನ್ನು ಕ್ರಿ.ಶ.೧೪೩೭ಕ್ಕೆ ಸೇರಿಸಿದ್ದಾರೆ. ಹಿಂದೆ ಶಿವಮಾರನು ನೀಡಿದ ದಾನವು ಪುನರಾವರ್ತನೆಯಾಗಿರಬೇಕು. ಈ ಶಾಸನದಲ್ಲಿ ೧ನೇ ಸಾಲಿನಿಂದ ೪೦ನೇ ಸಾಲಿನವರೆಗೆ ಮಣ್ಣೆಯ ತಾಮ್ರಶಾಸನದಲ್ಲಿ ಉಲ್ಲೇಖವಾಗಿರುವ ಶಿವಮಾರನವರೆಗಿನ ವಂಶಾವಳಿಯನ್ನು ಇಲ್ಲಿ ಸಹ ರಾಜರ ಹೆಸರುಗಳನ್ನು ಪರ್ಯಾಯವಾಗಿ ಉಲ್ಲೇಖಿಸಲಾಗಿದೆ. ಮುಷ್ಕರನನ್ನು ಮೊಕರ ಎಂದು, ಭೂವಿಕ್ರಮನನ್ನು ಭೂರಿವಿಕ್ರಮ ಎಂದು ನವಿಕಾಮವನ್ನು ನವಿಚೋಕ ಎಂದು, ಶ್ರೀಪುರುಷನನ್ನು ಪುರುಷೋತ್ತಮ ಹಾಗೂ ಶಿವಮಾರನನ್ನು ನರಸಿಂಹ ಧರ್ಮವರ್ಮ ಮಹಾಧಿರಾಜ ಎಂದು ನಾಗಾಕ್ಷರದಲ್ಲಿರುವ ತಾಮ್ರಶಾಸನವು ಕೂಟ ಶಾಸನವೋ ಅಥವಾ ರೈಸ್ ಹೇಳುವಂತೆ ದಾನ ಪುನರಾವರ್ತನೆಯೊ ತಿಳಿಯುತ್ತಿಲ್ಲ. ಗಜ ಮಸ್ತಕ ಕಲ್ಪ (ಆನೆಗಳಿಗೆ ಬರುವ ರೋಗಗಳಿಗೆ ಹೇಗೆ ಚಿಕಿತ್ಸೆಯನ್ನು ನೀಡಿ ಗುಣಪಡಿಸಬೇಕು ಎಂಬುದನ್ನು ಕುರಿತ ಗ್ರಂಥ) ಕೃತಿಯ ಕರ್ತೃನಾದ ಶಿವಮಾರನು[೭೯] ಅಮೋಘವರ್ಷನ ಸೈನ್ಯದ ವಿರುದ್ಧ ಕ್ರಿ.ಶ.೮೧೩ರಲ್ಲಿ ಕಾಗೆಮಾಗೆಯಲ್ಲಿ ಹೋರಾಡುತ್ತಲೇ ಮರಣವನ್ನಪ್ಪಿದನು.

## ಮಾರಸಿಂಹ (ಕ್ರಿ.ಶ.೭೯೭–೭೯೯)

ತಂದೆ ಶಿವಮಾರ ರಾಷ್ಟ್ರಕೂಟರ ಬಂಧನದಲ್ಲಿದ್ದ ಸಮಯದಲ್ಲೇ ಗಂಗವಾಡಿಯ ಉಸ್ತುವಾರಿಯಾಗಿ, ಯುವರಾಜನಾಗಿ ಕ್ರಿ.ಶ.೭೯೩ರಲ್ಲಿ ಮಾರಸಿಂಹನಿಗೆ ಪಟ್ಟ ಕಟ್ಟಲಾಯಿತು[೮೦]. ಇವನಿಗೆ ಲೋಕ ತ್ರಿಣೇತ್ರ ಎಂಬ ಬಿರುದಿದ್ದು, ರಾಷ್ಟ್ರಕೂಟರ ಮುಮ್ಮಡಿ ಗೋವಿಂದನ ಸಾಮಂತನಾಗಿ ಬೇರೊಂದು ಗಂಗಶಾಖೆಯನ್ನು ಸ್ಥಾಪಿಸಿರಬೇಕೆಂದೂ[೮೧], ಮಾರಸಿಂಹನು ಗಂಗಮಂಡಲವನ್ನು ಆಳ್ವಿಕೆ ಮಾಡುತ್ತಿರುವಾಗ ಆಜ್ಞೆ ಮೇರೆಗೆ ಸೇನಾಧಿಪತಿಯಾದ ಶ್ರೀವಿಜಯನು ಮಾನ್ಯನಗರದಲ್ಲಿ ಜಿನೇಂದ್ರ

---

[೭೬] ಎ.ಕ-೯, ಅನುಬಂಧ, ಹೊ.ತಾ.೧೬೮, ತುರಗೋಳ್ ವೀರಗಲ್ಲು, ಭಕ್ತರಹಳ್ಳಿ.

[೭೭] ಡಾ.ಹೆಚ್.ಎಸ್.ಗೋಪಾಲರಾವ್ :- ಶಿವಮಾರನ ಮರಳುಕುಂಟೆ ಶಾಸನ ಮತ್ತು ಮಣ್ಣೆಯ ಯುದ್ಧ ನೆಲೆ, ಇ.ದ.ಸಂ-೧೯, ಪು.ಸಂ-೪೦.

[೭೮] ಎ.ಕ-೯, ದೇ.ತಾ.೪೪, ಕ್ರಿ.ಶ.೧೪೬೭, ಸುರಧೇನುಪುರ.

[೭೯] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಾರಸಿಂಹನ ತಾಮ್ರ ಶಾಸನ, ಮಣ್ಣೆ.

[೮೦] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೧೭೩.

[೮೧] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೫೨.

ಭವನವನ್ನು ನಿರ್ಮಿಸಿ ಕಿರೆವೆಕ್ಕೂರು ಗ್ರಾಮಾದಾಯವನ್ನು ದಾನ ನೀಡಿದನು. ಹಾಗೆಯೇ ಮಾರಸಿಂಹನು ತನ್ನ ಹೆಂಡತಿಯರಿಗೆ ನಿಜ ಮಿತ್ರನಂತಿರುವವನು, ಯುದ್ಧದಲ್ಲಿ ಶರಣಾಗುತ್ತಾರೆಯೋ ಅವರಿಗೆ ಆಶ್ರಯ ಸ್ಥಾನದಂತಿರುವರು. ವಿಷ್ಣು ಧ್ಯಾನಸಕ್ತನಾಗಿ ಅವನಿಗೆ ಗರುಡನಂತಿರುವವನು. ರಾಕ್ಷಸರ ಜೊತೆಯಲ್ಲೇ ಇದ್ದರು. ಒಳ್ಳೆಯವನು. ದಂಡಾನೀತಿ ಗೊತ್ತಿದ್ದರೂ ದಂಡ ನೀಡುವವನಲ್ಲ. ಸಾಮಂತ ರಾಜರುಗಳು ಜೇನುನೋಣಗಳಂತೆ ಅವನ ಪಾದಗಳನ್ನು ಮುತ್ತುತ್ತಿದ್ದರು ಎಂದು ಮಣ್ಣೆಯ ತಾಮ್ರ ಶಾಸನದಲ್ಲಿ ತಿಳಿಸಲಾಗಿದೆ. ಮಣ್ಣೆಯಲ್ಲಿ ಮಾರಸಿಂಹನ ಎರಡು ತಾಮ್ರಶಾಸನಗಳು ೧೯೭೮, ಏಪ್ರಿಲ್ ನಲ್ಲಿ ದೊರೆತಿದ್ದು, ಯುವರಾಜನೆಂದು ಉಲ್ಲೇಕಿಸಿರುವುದನ್ನು ಗಮನಿಸಿದರೆ ದೀರ್ಘಕಾಲ ಯುವರಾಜನಾಗಿ ಅಧಿಕಾರ ನಡೆಸಿದ್ದಾನೆ. ಕ್ರಿ.ಶ.೮೦೧ ರ ಈ ಶಾಸನದಲ್ಲಿ ಮಣ್ಣೆಯಲ್ಲಿ ವರ್ತಕರು ಕಟ್ಟಿಸಿದ ಅಹರ್ಪ್ವತಿ (ಸೂರ್ಯ) ದೇವಾಲಯಕ್ಕೆ ಪೊನ್ನುಡಿಕೆ ವಿಷಯದ ಮಸೆಕ್ಕೈಲ ಎಂಬ ಗ್ರಾಮವನ್ನು ದಾನ ನೀಡಿದಾಗ ಮಾರಸಿಂಹ ಮಣ್ಣೆಯಲ್ಲಿ ವಾಸವಾಗಿದ್ದನು.

ಮಾರಸಿಂಹನ ಆಳ್ವಿಕೆಯಲ್ಲಿ ಪಿಳಲಬ್ಬೆ ಎಂಬ ಹೆಂಗಸು ಸತ್ತು ಆಕೆಗೆ ಯಾರೋ ನಿಷಿಧಿಯೊಂದನ್ನು ಹಾಕಿಸಿರಬೇಕೆಂದು ಊಹಿಸಬಹುದು[೮೨]. ಕ್ರಿ.ಶ.ಸು.೮೭೦ರಲ್ಲಿ ಶೌರ್ಯವಂತನಾದ ಮಾರಸಿಂಹನು ಮಣ್ಣೆಯಲ್ಲಿ ನಡೆದ ಯುದ್ಧದಲ್ಲಿ ಕಾದಾಡಿ ಕೊನೆಗೆ ಸತ್ತು ಹೋಗಲು ಶ್ರೇಷ್ಟವಾದ ವೀರನನ್ನು ದೇವತೆಗಳೇ ಒಟ್ಟುಗೂಡಿ ಅತ್ಯಂತ ಪ್ರೀತಿಯಿಂದ ಸ್ವರ್ಗಕ್ಕೆ ಕೊಂಡು ಹೋದರು[೮೩].

ಶಿವಮಾರನಿಗೆ ಮಾರಸಿಂಹ ಅಲ್ಲದೇ ಪೃಥ್ವೀಪತಿಯೆಂಬ ಇನ್ನೊಬ್ಬ ಮಗನಿದ್ದು ತೀರ ಕಿರಿಯ ವಯಸ್ಸಿನವರಾದ್ದರಿಂದ ಸೋದರನಾದ ವಿಜಯಾದಿತ್ಯನನ್ನು ಯುವರಾಜನಾಗಿ ನೇಮಿಸಿರಬೇಕು. ಈ ಪೃಥ್ವಿಪತಿಯು ಮುಂದೆ ಹಿಂದುಪುರ ತಾಲ್ಲೂಕಿನ ಪರ್ವೆಶಾಖೆಯ ಸ್ಥಾಪಕನಾಗಿ ಪಲ್ಲವರ ಮಾಂಡಲಿಕನಾಗಿದ್ದನು. ಇವನ ನಂತರ ನನ್ನೆಯ ಗಂಗ, ೨ನೇಯ ಪೃಥ್ವೀಪತಿ ಎಂಬ ಅರಸರು ಆಳಿದರು. ಕೊನೆಯಾತನು ಚೋಳಪರಾಂತಕನ ಮಾಂಡಲೀಕನಾಗಿ ಬಾಣವಾಡಿಯಲ್ಲಿ ಆಳಿದನು. ಇವರ ಶಾಖೆಯು ತಮಿಳು ಗಂಗರೆಂದು ಪ್ರಸಿದ್ಧವಾಯಿತ್ತು[೮೪].

ಇತ್ತ ತಲಕಾಡಿನಲ್ಲಿ ವಿಜಯಾದಿತ್ಯನು ತನ್ನ ಮಗನಾದ ೧ನೇ ರಾಚಮಲ್ಲನನ್ನು ಕ್ರಿ.ಶ.೮೧೮ರಲ್ಲಿ ನೇಮಿಸಿದನು. ನೊಳಂಬರೊಂದಿಗೆ ಸ್ನೇಹವನ್ನು ಬೆಳೆಸಿ, ರಾಚಮಲ್ಲನು ತನ್ನ ಮಗಳಾದ

---

[೮೨] ಡಾ.ಹೆಚ್.ಎಸ್.ಗೋಪಾಲರಾವ್:- ಮಣ್ಣೆಯಲ್ಲಿ ಇತ್ತೀಚಿನ ಶೋಧಗಳು, ಇ.ದ.ಸಂ-೧೫, ಪು.ಸಂ-೩೬.

[೮೩] ಎ.ಕ-೯, ನೆ.ತಾ.೫೪, ಕ್ರಿ.ಶ.೯೭೦, ಮಾರಸಿಂಹನ ವೀರಗಲ್ಲು, ಮಣ್ಣೆ.

[೮೪] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೮.

ಜಯಾಂಬೆಯನ್ನು ನೊಳಂಬ ಪೋಳಲ್ಚೋರನಿಗೆ ವಿವಾಹ ಮಾಡಿಕೊಟ್ಟನು[೮೫]. ರಾಚಮಲ್ಲನ ನಂತರ ಕ್ರಿ.ಶ.೮೪೩ರಲ್ಲಿ ನೀತಿಮಾರ್ಗ ಎರೆಯಂಗನು ಅಧಿಕಾರಕ್ಕೆ ಬಂದನು. ಈ ಕಾಲದಲ್ಲಿ ರಾಷ್ಟ್ರಕೂಟರ ದೊರೆ ಮೊದಲನೆ ಅಮೋಘವರ್ಷ ಮಾನ್ಯಖೇಟದಲ್ಲಿ ಆಳ್ವಿಕೆ ನಡೆಸುತ್ತಿದ್ದು, ವೈಶಮ್ಯವನ್ನು ಬಿಟ್ಟು ಸೌಹಾರ್ದವಾಗಿ ತನ್ನ ಮಗಳಾದ ಚಂದ್ರಲಬ್ಬೆಯನ್ನು ಎರೆಯಂಗ ನೀತಿಮಾರ್ಗದ ಕಿರಿಯ ಮಗ ಭೂತುಗನಿಗೆ ಮದುವೆ ಮಾಡಿಕೊಟ್ಟನು[೮೬]. ೧ನೇ ಕೃಷ್ಣ, ಧೃವನ ಕಾಲದಲ್ಲಿ ಆರಂಭವಾದ ವೈಶಮ್ಯವನ್ನು ಅಮೋಘವರ್ಷನ ಆಳ್ವಿಕೆಯಲ್ಲಿ ವೈವಾಹಿಕ ಸಂಬಂಧದೊಂದಿಗೆ ಶಾಂತರಾದರು.

ಜಿಲ್ಲಾ ವ್ಯಾಪ್ತಿಯಲ್ಲಿ ವಿಜಯಾಧಿತ್ಯ, ೧ನೇ ರಾಚಮಲ್ಲ. ೧ನೇ ಸತ್ಯವಾಕ್ಯ, ೧ನೇ ಭೂತುಗ, ದಡಿಗ ಅರಸರು ಆಡಳಿತ ನಡೆಸಿರುವ ಯಾವುದೇ ಕುರುಹುಗಳು ದೊರೆತಿಲ್ಲ. ಹಾಗೂ ಯಾವುದೇ ಆಧಾರಗಳು ದೊರೆತಿಲ್ಲ ಹಾಗೂ ದೊಡ್ಡ ಬೆಳವಂಗಲ ಹೋಬಳಿಯ ಅಕ್ಕ ತಮ್ಮನ ಹಳ್ಳಿಯಲ್ಲಿ ಕ್ರಿ.ಶ.೯೮೦ರ ಕಾಲದ ೪ನೇ ರಾಜಮಲ್ಲನ ಆಳ್ವಿಕೆಯ ವೇಳೆವಾಳ ಶಾಸನ ದೊರೆತಿದ್ದು. ವೀರನೊಬ್ಬನು ವೇಳೆವಾಳಿಯಾಗಿದಕ್ಕೆ ವೀರನ ಕುಟುಂಬಕ್ಕೆ ೫ ಖಂಡಾಗ ಬೆಳೆ ಬರುವ ಗದ್ದೆಯನ್ನು ದಾನ ನೀಡಲಾದ ಮಾಹಿತಿಯನ್ನು ಕಾಣಬಹುದು[೮೭]. ೪ನೇ ರಾಚಮಲ್ಲನ ಈ ಶಾಸನದ ನಂತರ ಜಿಲ್ಲಾ ವ್ಯಾಪ್ತಿಯಲ್ಲಿ ಗಂಗರ ಯಾವುದೇ ಶಾಸನಗಳು ಇದುವರೆಗೆ ದೊರೆತಿಲ್ಲ ಎಂಬುವುದೇ ಬೇಸರದ ಸಂಗತಿಯಾಗಿದೆ.

## ೩.೨ ರಾಷ್ಟ್ರಕೂಟರು

ಬಾದಾಮಿಯ ಚಾಲುಕ್ಯರನ್ನು ಪದಚ್ಯುತಗೊಳಿಸಿ ರಾಷ್ಟ್ರಕೂಟರು ೮ನೇ ಶತಮಾನದಿಂದ ೧೦ನೇ ಶತಮಾನದ ಕೊನೆಯವರೆಗೆ ಆಳ್ವಿಕೆ ನಡೆಸಿ ಕರ್ನಾಟಕದ ಕೀರ್ತಿ ಪತಾಕೆ ಹಾರಿಸಿದರು. ದಂತಿದುರ್ಗದಿಂದ ಆರಂಭಿಸಿ ಸುಮಾರು ೨೨೩ ವರ್ಷಗಳ ಕಾಲ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ಶಾಸನಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬೆರೆಳೆಣಿಕೆಯಷ್ಟು ಮಾತ್ರ ದೊರತಿವೆ.

ರಾಷ್ಟ್ರಕೂಟರಲ್ಲಿ ಕೃಷ್ಣ ನಂತರ ಕ್ರಿ.ಶ.೭೮೦ರಲ್ಲಿ ಧೃವನು ಸಾಮ್ರಾಟನಾದ ಮೇಲೆ ಗಂಗರ ಶ್ರೀ ಪುರುಷನನ್ನು ಸೋಲಿಸಲು ಸಾಧ್ಯವಾಗಲಿಲ್ಲ. ಆದರೆ ಶ್ರೀ ಪುರುಷನ ಮಗನಾದ ೨ನೇ ಶಿವಮಾರನನ್ನು ಧೃವನು ಮುದುಗುಂದದ ಯುದ್ಧದಲ್ಲಿ ಸೋಲಿಸಿ, ಬಂಧನದಲ್ಲಿಟ್ಟು ತನ್ನ ಹಿರಿಯ ಮಗನಾದ ಕಂಬರಸ (ಸ್ತಂಭರಾಜ) ನನ್ನು ಗಂಗವಾಡಿಯ ಮಾಂಡಲಿಕನಾಗಿ ನೇಮಿಸುವುದರೊಂದಿಗೆ ಗಂಗವಾಡಿಯು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತು.

---

[೮೫] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ -೫೨.

[೮೬] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ -೩೯.

[೮೭] ಸಾಸಲು ಜೆ ವಿಶ್ವನಾಥ :- ಸಾಸಲು ಪ್ರದೇಶದ ಸ್ಥಳನಾಮೆಗಳು, ಇ.ದ.ಸಂ-೧೬, ಪು.ಸಂ -೨೦೧.

ತನ್ನ ತಂದೆಯ ಕಾಲದಲ್ಲಿ ಯುವರಾಜನಾಗಿ ನೇಮಿಸಲ್ಪಟ್ಟ ಧೃವನ ೩ನೇ ಮಗನಾದ ರಾಷ್ಟ್ರಕೂಟರಲ್ಲಿ ಇನ್ನೊಬ್ಬ ಗಣ್ಯ ಅರಸನಾದ ೩ನೇ ಗೋವಿಂದನಿಗೆ ಪ್ರಭೂತ ವರ್ಷ, ಜಗತ್ತುಂಗ, ಅನುಪಮ, ಕೀತಿ ನಾರಾಯಣ, ತ್ರಿಭುವನಧವಳ ಮುಂತಾದ ಬಿರುದುಗಳಿದ್ದವು. ಅಣ್ಣನಾದ ಕಂಬರಸನು ತಂದೆಯ ಕಾಲದಲ್ಲಿ ಗಂಗವಾಡಿಯನ್ನು ಆಳುತ್ತಿದ್ದು, ಸೋದರ ಕಂಬರಸನಿಗೆ ಪಟ್ಟವಾದಾಗ ೧೨ ಅರಸುಗಳ ನೆರವು ಪಡೆದು ಕಂಬರಸನ ವಿರುದ್ಧ ಬಂಡೆದ್ದು ಅಧಿಕಾರಕ್ಕೆ ಬಂದನು. ಬಂಧನದಲ್ಲಿದ್ದ ಗಂಗರ ೨ನೇ ಶಿವಮಾರನನ್ನು ಬಿಡುಗಡೆ ಮಾಡಿ ಗಂಗವಾಡಿಗೆ ಕಳುಹಿಸಿದನು. ನಂತರ ತನ್ನ ವಿರುದ್ಧ ಬಂಡೆದ್ದ ಎಲ್ಲಾ ರಾಜರನ್ನು ಸೋಲಿಸಿ, ಅಣ್ಣನಾದ ಕಂಬನನ್ನು, ೨ನೆ ಶಿವಮಾರನನ್ನು ಬಂಧಿಸಿ[೮೮], ನಂತರ ತನ್ನ ಅಣ್ಣನಾದ ಸ್ತಂಭರಾಜನನ್ನು (ರಣಾವಲೋಕ) ಮಣ್ಣೆಯ ಮಾಂಡಳಿಕನಾಗಿ ನೇಮಿಸಿದನು.

ಮಾರಸಿಂಹನ ಸಾಮಂತನಾಗಿದ್ದ ಶ್ರೀ ವಿಜಯನು ಕಂಬರಸನ ಅಧಿಕಾರಿಯಾಗಿ ಮುಂದುವರೆದು, ಮಾರಸಿಂಹನ ಅಧಿಕಾರಾವಧಿಯಲ್ಲಿ ಮಣ್ಣೆಯಲ್ಲಿ ನಿರ್ಮಿಸಿದ ಜಿನಾಲಯಕ್ಕೆ ಕಂಬರಸನ ಅಧಿಕಾರಾವಾಧಿಯಲ್ಲಿ ಪೆರ್ಬ್ಬಡಿಯೂರು ಎಂಬ ಗ್ರಾಮವನ್ನು ದಾನ ನೀಡಿದನು[೮೯].

ಗಂಗರು ಮತ್ತು ರಾಷ್ಟ್ರಕೂಟರ ನಡುವಿನ ವೈಮನಸ್ಸಿನ ನಿವಾರಣೆಗಾಗಿ ಅಮೋಘವರ್ಷನು ತನ್ನ ಮಗಳಾದ ಚಂದ್ರಬ್ಬಲಬ್ಬೆಯನ್ನು ಗಂಗರ ರಾಚಮಲ್ಲನ ಮೊಮ್ಮಗನಾದ ಬೂತುಗನಿಗೆ ಮದುವೆ ಮಾಡಿ ಕೊಟ್ಟು, ಗಂಗರು ಮತ್ತು ರಾಷ್ಟ್ರಕೂಟರು ಸಂಬಂಧಿಕರಾದರು.

ಅಮೋಘವರ್ಷ ನೃಪತುಂಗನ ನಂತರ ಅಧಿಕಾರಕ್ಕೆ ಬಂದ ಮಗನಾದ ಅಕಾಲವರ್ಷ, ಶುಭತುಂಗ, ಪೃಥ್ವಿವಲ್ಲಭ ಎಂಬ ಬಿರುದಾಂಕಿತ ೨ನೇ ಕೃಷ್ಣ (ಕ್ರಿ.ಶ.೮೭೮–೯೧೪) ನು ಗಂಗವಾಡಿ ಪ್ರಾಂತ್ಯವನ್ನು ಆಳುತ್ತಿದ್ದಾಗ ೨ನೇ ಕೃಷ್ಣನ ಆಪ್ತನಾದ ಹಾಗೂ ಕೃಪೆಗೊಳಗಾದ ಗಂಗವಾಸನ ಮಗನಾದ ಗೋವಿಂದನು ಸಳ್ನೆ ಮುನ್ನೂರು ಮತ್ತು ಕುಣುಂಗಿ ೫೦೦ ರನ್ನು ಪ್ರತಿಪಾದಿಸುತ್ತಿರಲು ನಂದಿಗುಂದದ ಪಸುವೊನ್ನಮಾರೆ ಎಂಬ ಗಣಿ ಗಾವುಂಡನು ರಾಜ್ಯವನ್ನು ದಾಟಿ ಬಂದು ಇಲ್ಲಿನ ತುರುಗಳನ್ನು ಬಂದಿಸಿದಾಗ ನಂದಿಸ್ಥಾನದ ಮುಮೆ ನಾಯಗನು ಹಸುಗಳನ್ನು ರಕ್ಷಿಸಿ ಮಡಿದನು[೯೦]. ಈ ಶಾಸನದ ಶಿಲ್ಪದಲ್ಲಿ ೭ ತುರುಗಳು ಹಟ್ಟಿಯ ಕಡೆಗೆ ಹಿಂತಿರುಗುವಂತೆ ಕೆತ್ತಲಾಗಿದೆ. ಹಾಗೆಯೇ ಅಮೋಘವರ್ಷ ಕಾಲದಲ್ಲಿ ಗಂಗ ಮತ್ತು ರಾಷ್ಟ್ರಕೂಟರಿಗೆ ಏರ್ಪಟ್ಟ ಬಾಂಧವ್ಯವನ್ನು ೨ನೇ ಕೃಷ್ಣನ ಕಾಲದಲ್ಲಿ ಮುಂದುವರೆದಿರುವುದನ್ನು ಈ ಶಾಸನದಲ್ಲಿ ಕಾಣಬಹುದು.

---

[೮೮] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೬೮, ೬೭.
[೮೯] ಎ.ಕ-೯, ನೆ.ತಾ.೬೧, ಕ್ರಿ.ಶ.೮೦೨, ಮಣ್ಣೆ.
[೯೦] ಎ.ಕ-೯, ದೇ.ತಾ.೪೨, ಕ್ರಿ.ಶ.೯೦೦, ಅರದೇಶನಹಳ್ಳಿ.

ಅಕಾಲವರ್ಷನ ಮತ್ತೊಂದು ಶಾಸನದಲ್ಲಿ ಕ್ರಿ.ಶ.೯೦೦ರಲ್ಲಿ[೯೧] ಅಕಾಲವರ್ಷನ ಕೆಳಗೆ ಪುಲಿಮಂಗಲದ ತೆರಿಗೆಯ ಅಧಿಕಾರಿ ಪುನ್ನಾಡನ್ನು ಆಳುತ್ತಿದ್ದನು. ಈ ಹಿಂದೆ ಪುನ್ನಾಡು ೭೦ ಎಂಬುದು ಗಂಗವಾಡಿಯಲ್ಲಿ ಬರುವ ಒಂದು ಪ್ರಾಂತ್ಯದ ಹೆಸರಾಗಿದ್ದು, ಪುನ್ನಾಡವು ಸಹ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿರುವುದನ್ನು ಈ ಶಾಸನದಿಂದ ತಿಳಿಯಬಹುದು.

ಕ್ರಿ.ಶ.೯೦೦ ರಲ್ಲಿ ರಾಷ್ಟ್ರಕೂಟರ ಕನ್ನಡಿ ಅರಸನು ಕೈವಾರನಾಡನ್ನು ಆಳುತ್ತಿರಲು, ಶುಭವನ್ದ್ರಿನನು ಚರುಕ್ಕನೂರ್‌ನ ೩ನೇ ಒಂದು ಭಾಗವನ್ನು[೯೨], ಹಾಗೇಯೇ ೩ನೇ ಕೃಷ್ಣನ ಅಧಿಕಾರಿಯಾದ ಗಂಗವಂಶದ ದಡಿಗನು ತನ್ನ ಹೆಸರಿನಲ್ಲೆ ಮುಜುರೆ ಮೂಡ್ಲುಪಾಳ್ಯದಲ್ಲಿ ದಡಿಗೇಶ್ವರ ದೇವಾಲಯವನ್ನು ನಿರ್ಮಿಸಿದನು[೯೩]. ಆದರೆ ಪ್ರಸ್ತುತ ಮುಜುರೆ ಮೂಡ್ಲುಪಾಳ್ಯದಲ್ಲಿ ದಡಿಗೇಶ್ವರ ದೇವಾಲಯವಿಲ್ಲ. ೧೯೭೪ ರಲ್ಲಿ ಉಳುವವನೆ ಭೂಮಿಯ ಒಡೆಯ ಎಂಬ ಭೂ ಸುಧಾರಣೆ ನೀತಿ ಜಾರಿಯಾದ ಮೇಲೆ ದೇವಸ್ಥಾನವಿದ್ದರೆ ಜಮೀನು ದೊರೆಯುವುದಿಲ್ಲ ಎಂದು ದೇವಸ್ಥಾನದ ಕಲ್ಲುಗಳನ್ನು ಕಿತ್ತು ಬಾವಿಯೊಳಗೆ ಹಾಕಿದರಂತೆ ಈಗ ಬಾವಿಯನ್ನು ಸಹ ಮುಚ್ಚಲಾಗಿದ್ದು, ದೇವಾಲಯದ ಪಾಣಿಪೀಠ ಮತ್ತು ಬಲಿಪೀಠದ ಅವಶೇಷಗಳು ಊರ ಹೊರಗಿನ ನಿಲಗಿರಿ ತೋಪಿನಲ್ಲಿ ಸಿಕ್ಕಿದ್ದು ಇದರ ಸಮೀಪದಲ್ಲೆ ದೇವಾಲಯವಿತ್ತು ಎಂದು ಕುರಿಕಾಯುತ್ತಿದ್ದ ಸುಮಾರು ೭೦-೮೦ ವರ್ಷದ ಅಜ್ಜ ಹೇಳಿದ್ದರು. ರಾಷ್ಟ್ರಕೂಟರ ಕನ್ಯೆ ರೇವಕ ನಿಮ್ಮಡಿ ಎಂಬುವವಳು ಗಂಗ ಎರೆಯಂಗನೆಂಬ ರಾಜಪುತ್ರನನ್ನು ವರಿಸದ್ದಳೆಂದು ಡಾ.ದೇಸಾಯಿ ಹೇಳಿದ್ದಾರೆ[೯೪].

ಕ್ರಿ.ಶ.೯೩೩ರ ನಂತರ ರಾಷ್ಟ್ರಕೂಟರ ಯಾವುದೇ ಶಾಸನಗಳು ಜಿಲ್ಲೆಯ ವ್ಯಾಪ್ತಿಯಲ್ಲಿ ದೊರೆಯುವುದಿಲ್ಲ. ಬಹುಶ ಗಂಗರು ಮತ್ತು ರಾಷ್ಟ್ರಕೂಟರ ನಡುವಿನ ಬಾಂಧವ್ಯದಿಂದ ರಾಷ್ಟ್ರಕೂಟರು ದಕ್ಷಿಣದ ಭಾಗಗಳನ್ನು ಬಿಟ್ಟು ಉತ್ತರದ ಕಡೆ ತಮ್ಮ ಆಳ್ವಿಕೆಯನ್ನು ಮುಂದುವರೆಸಿದ್ದರಿಂದಾಗಿ ಅವರ ಆಡಳಿತದ ಕುರುವುಗಳು ಈ ಭಾಗದಲ್ಲಿ ದೊರೆಯುವುದಿಲ್ಲ ಎಂದೆನಿಸುತ್ತದೆ.

## ೩.೩ ನೊಳಂಬರು

ಕಂಚಿಯ ಪಲ್ಲವರ ಒಂದು ಶಾಖೆಯಾಗಿದ್ದ ನೊಳಂಬರು ಪಲ್ಲವರ ನಿಷ್ಠಾವಂತ ಅನುಯಾಯಿಗಳಾಗಿದ್ದು, ತನ್ನ ಸಮಕಾಲೀನರಾದ ಗಂಗ, ಬಾಣ, ವೈದುಂಬ ಮುಂತಾದ ನೆರೆಹೊರೆಯ

---

[೯೧] ಎ.ಕ-೯, ದೇ.ತಾ.೪೩, ಕ್ರಿ.ಶ.೯೦೦, ಅರದೇಶನಹಳ್ಳಿ.
[೯೨] ಎ.ಕ-೯, ಹೊ.ತಾ.೧೨, ಕ್ರಿ.ಶ.೯೦೦, ಸಿದ್ಧನಹಳ್ಳಿ.
[೯೩] ಎ.ಕ-೯, ಮಾ.ತಾ.೭೫, ಕ್ರಿ.ಶ.೯೬೬, ಮುಜರೆ ಮೂಡುಪಾಳ್ಯ.
[೯೪] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೬೯.

ಪಲ್ಲವ ವಿರೋಧ ಬಣಗಳೊಂದಿಗೆ ಯುದ್ಧಗಳಲ್ಲಿ ಪಾಲ್ಗೊಳ್ಳಬೇಕಾಗುತ್ತಿತ್ತು. ನಂತರ ಉಂಟಾದ ರಾಜಕೀಯ ಏರುಪೇರುಗಳಿಂದಾಗಿ ಮುಂದೆ ಕರ್ನಾಟಕದಲ್ಲಿ ಸ್ವತಂತ್ರವಾಗಿ ಆಳ್ವಿಕೆ ಆರಂಭಿಸಿ ಬಾದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರ ಮಾಂಡಳಿಕರಾಗಿ, ಸಾಮಂತರಾಗಿ ಆಡಳಿತ ನಡೆಸಿದರು. ನೊಳಂಬರು ತಮ್ಮ ಶಾಸನಗಳಲ್ಲಿ ಪಲ್ಲವರ ಬಿರುದುಗಳನ್ನೆ ತಮ್ಮ ಬಿರುದುಗಳಾಗಿ ಬಳಸುತ್ತಿದ್ದು[೯೫], ತಮ್ಮನ್ನು ಕಂಚಿಯ ಪ್ರಭುಗಳೆಂದು ಕರೆದುಕೊಂಡಿದ್ದಾರೆ[೯೬]. ಇದ್ದರಿಂದಾಗಿ ಇತಿಹಾಸಕಾರರು, ವಿದ್ವಾಂಸರು ಪ್ರಾರಂಭದಲ್ಲಿ ಪಲ್ಲವರು, ನೊಳಂಬರು ಇಬ್ಬರು ಒಬ್ಬರೆ ಎಂದು ಭಾವಿಸುತ್ತಿದ್ದರು. ಆದರೆ ಎಂ.ಎಸ್.ಕೃಷ್ಣಮೂರ್ತಿ ರವರು ದಿ ನೊಳಾಂಬಸ್ ಎಂಬ ಮಹಾ ಪ್ರಬಂಧದಲ್ಲಿ ನೊಳಂಬರು ಪಲ್ಲವರ ಸಂತತಿಗಿಂತ ವಿಭಿನ್ನವಾದದರೆಂದು ಅಧ್ಯಯನ ಮೂಲಕ ತಿಳಿಸಿದ ಮೇಲೆ ಪಲ್ಲವರ ಒಂದು ಶಾಖೆಯಾಗಿ ನೊಳಂಬರು ಇದ್ದು, ಎರಡು ಮನೆತನಗಳು ಬೇರೆ ಬೇರೆ ಎಂದು ನಿರ್ಧರಿಸಲಾಯಿತ್ತು. ಕ್ರಿ.ಶ.೭೫೦ ರಿಂದ ೧೦೫೦ ರವರೆಗೆ ೩ ಶತಮಾನಗಳ ಕಾಲ ಆಳ್ವಿಕೆ ನಡೆಸಿದ ಸಾಮಂತ ರಾಜವಂಶವಾದ ನೊಳಂಬರು ಕರ್ನಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯ ಪ್ರದೇಶದಲ್ಲಿ "ನೊಳಂಬರ ಸಾಸಿರ"ದಲ್ಲಿ ಆಡಳಿತ ಪ್ರಾರಂಭಿಸಿ ನಂತರ ಅವಿಭಾಜಿತ ಬೆಂಗಳೂರು ಜಿಲ್ಲೆ, ತುಮಕೂರು, ಧರ್ಮಪುರಿ, (ತಮಿಳುನಾಡು) ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಕೆಲವು ಭೂ ಭಾಗಗಳನ್ನು ಒಳಗೊಂಡ ಭೌಗೋಳಿಕ ಪ್ರದೇಶದಲ್ಲಿ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿನ ಹೆಂಜೇರು, ಈಗಿನ ಹೇಮಾವತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನಂತರ ನೊಳಂಬವಾಡಿ ೩೨೦೦೦ ಎಂಬ ವಿಶಾಲ ಪ್ರಾಂತ್ಯದಲ್ಲಿ ಮೂಲ ಪುರುಷ ಮಂಗಳ ನೊಳಂಬ (ಕ್ರಿ.ಶ.೭೪೦–೭೭೫), ಅವನ ಮಗ ಸಿಂಹಪೋತ (ಕ್ರಿ.ಶ.೭೭೫–೮೦೦), ಸಿಂಹಪೋತನ ಮಗ ಚಾರುಪೋನ್ನೇರ (ಕ್ರಿ.ಶ.೮೦೦–೩೦), ಅವನ ಮಗ ಒಂದನೇ ಪೋಳಲ್ಚೋರ (ಕ್ರಿ.ಶ.೮೩೦–೭೦), ನಂತರ ಪೋಳಲ್ಚೋರ ಮಗ ನೊಳಂಬಾಧಿರಾಜ ಮಹೇಂದ್ರ (ಕ್ರಿ.ಶ.೮೭೦–೯೧), ಅವನ ಮಗ ಒಂದನೇ ಅಯ್ಯಪದೇವ (ಕ್ರಿ.ಶ.೮೯೭–೩೪), ಮಗನಾದ ಬೀರ ನೊಳಂಬ ಅಣ್ಣಿಗನ (ಕ್ರಿ.ಶ.೯೩೪–೪೦), ತಮ್ಮನಾದ ಇರಿವನೊಳಂಬ ದಿಲೀಪನ (ಕ್ರಿ.ಶ.೯೪೧–೬೭), ಮಗನಾದ ನನ್ನಿ ನೊಳಂಬನ (ಕ್ರಿ.ಶ.೯೬೮–೭೧), ೨ನೇ ಮಗನಾದ ಇಮ್ಮಡಿ ಪೋಳಲ್ಚೋರ (ಕ್ರಿ.ಶ.೯೬೫–೭೧), ಮಗನಾದ ಎರಡನೇಯ ಮಹೇಂದ್ರನ (ಕ್ರಿ.ಶ.೯೭೭–೮೨), ತಮ್ಮನಾದ ಇರಿವ ನೊಳಂಬ ಘಂಟೆಯಾಕಾರ (ಕ್ರಿ.ಶ.೧೦೧೦–೨೪), ಜಗದೇಕ ಮಲ್ಲ ನೊಳಂಬ ಪಲ್ಲವ ಪೆರ್ಮನಡಿ ಉದಯಾದಿತ್ಯನ (ಕ್ರಿ.ಶ.೧೦೧೮–೩೭), ಹಿರಿಯ ಮಗನಾದ ಜಗದೇಕ ಮಲ್ಲ ನೊಳಂಬನ

[೯೫] ಎ.ಕ-೯, ದೇ.ತಾ.೧೦, ಕ್ರಿ.ಶ.೯೪೮, ಕೊಯಿರ ಮತ್ತು ಹೊ.ತಾ.೧೪, ಕ್ರಿ.ಶ.೯೦೦, ಸಿದ್ಧನಹಳ್ಳಿ.

[೯೬] ಎ.ಕ-೯, ಹೊ.ತಾ.೩೭, ಕ್ರಿ.ಶ.೯೫೦, ಕೊಂಡರಹಳ್ಳಿ.

(ಕ್ರಿ.ಶ.೧೦೩೭–೪೪), ತಮ್ಮನಾದ ತ್ರೈಲೋಕ್ಯಮಲ್ಲ ನನ್ನಿ ನೊಳಂಬ ಪಲ್ಲವ ಪೆರ್ಮಾನಡಿ (ಕ್ರಿ.ಶ.೧೦೪೪–೫೪)[೯೭] ಹೀಗೆ ೧೬ ದೊರೆಗಳನ್ನೊಳಗೊಂಡ ನೊಳಂಬರು ಆಡಳಿತ ನಡೆಸಿದರು.

ಜಿಲ್ಲಾ ವ್ಯಾಪ್ತಿಯಲ್ಲಿನ ನೊಳಂಬರ ಎಲ್ಲಾ ಶಾಸನಗಳು ಕನ್ನಡದಲ್ಲಿದ್ದು, ಒಂದು ದಾನ ಶಾಸನ ಬಿಟ್ಟರೆ ಉಳಿದೆಲ್ಲವು ಯುದ್ಧ, ತುರುಗೋಳ್ ವೀರಗಲ್ಲುಗಳೇ ಆಗಿದೆ. ಬಹುಶಃ ಸಾಮಂತರಾಗಿದ್ದ ನೊಳಂಬರು ಸದಾ ಯುದ್ಧಕ್ಕೆ ಸಿದ್ಧರಾಗಿ ಯಾರಾದರು ಒಬ್ಬರ ಮೇಲೆ ಯುದ್ಧ ಮಾಡಲೇ ಬೇಕಾದ ಅನಿವಾರ್ಯದ ಪರಿಸ್ಥಿತಿಯಲ್ಲಿದ್ದರಿಂದಲೇನೋ ಯುದ್ಧ ವೀರಗಳೇ ಹೆಚ್ಚಾಗಿ ಕಂಡು ಬರುತ್ತದೆ. ಹಾಗೂ ವೀರಗಲ್ಲುಗಳ ರಚನಾ ಶೈಲಿಯಲ್ಲಿ ಪಲ್ಲವರ ಪ್ರಭಾವಕ್ಕಿಂತ ಗಂಗರ ಪ್ರಭಾವವನ್ನೆ ಹೆಚ್ಚಾಗಿ ಕಾಣಬಹುದು. ಕೆಲವು ಸಂದರ್ಭಗಳಲ್ಲಿ ಶಿಲ್ಪ ವೀರಗಲ್ಲುಗಳನ್ನು ಗಂಗರ ಅಥವಾ ನೊಳಂಬರ ವೀರಗಲ್ಲುಗಳ ಎಂದು ಗುರುತಿಸಲು ಕಷ್ಟವಾಗುತ್ತದೆ. ಪ್ರಾಂತ್ಯಾಧಾರದ ಮೇಲೆ ಇಂತಹವರದ್ದೆ ಎಂದು ಊಹಿಸಬಹುದು. ಕೋಲಾರ, ನಂದಿ ಹಾಗೂ ದೇವನಹಳ್ಳಿಯ ಕೆಲವು ಭಾಗಗಳನ್ನು ಒಳಗೊಂಡ ಸುತ್ತಮುತ್ತಲಿನ ಪ್ರದೇಶವನ್ನು ಕ್ರಿ.ಶ.೪–೫ನೇ ಶತಮಾನದವರೆಗೆ ಗಂಗರ ಆಳ್ವಿಕೆ ಶಾಸನಗಳನ್ನು ಕಾಣುತಿದ್ದ ಪ್ರದೇಶಗಳಲ್ಲಿ ಕ್ರಿ.ಶ.೭, ೮, ೯ನೇ ಶತಮಾನದಲ್ಲಿ ನೊಳಂಬರ ಆಡಳಿತ ಕುರುಹುಗಳನ್ನು ಕಾಣಬಹುದು. ಸಾಮಂತರಾಗಿದ್ದ ನೊಳಂಬರಿಗೆ ಗಂಗರು ಈ ಭಾಗಗಳನ್ನು ಬಿಟ್ಟು ಕೊಟ್ಟಿರಬೇಕು.

ಪೋಳಲ್ಚೋನು ಆಡಳಿತಕ್ಕೆ ಬಂದಾಗ ದಕ್ಷಿಣ ಭಾರತದ ಇತಿಹಾಸದಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದವು. ರಾಷ್ಟ್ರಕೂಟರು ಕ್ರಮೇಣ ಶಕ್ತಿ ಕುಂದುತ್ತಿದ್ದರು, ಕಲ್ಯಾಣದ ಚಾಲುಕ್ಯರು ಅಧಿಕಾರದ ಚುಕ್ಕಾಣಿ ಹಿಡಿದಿದ್ದರು. ಪೋಳಲ್ಚೋರನು ರಾಚಮಲ್ಲನ ಮಗಳು ಜಯಬ್ಬೆಯನ್ನು ವಿವಾಹವಾಗಿ ಗಂಗರೊಂದಿಗೆ ವೈವಾಹಿಕ ಸಂಬಂಧ ಹೊಂದಿದ್ದನು. ಅಮೋಘವರ್ಷ ನೃಪತುಂಗನ ಕಾಲದಲ್ಲಿ ರಾಷ್ಟ್ರಕೂಟರ ಅಧಿಕಾರವನ್ನು ಧಿಕ್ಕರಿಸಿ, ಸ್ವತಂತ್ರರಾದ ಗಂಗರು ಪಲ್ಲವರನ್ನು ಸೋಲಿಸಿದರಲ್ಲದೆ, ಪಲ್ಲವರ ಸಾಮಂತರಾಗಿದ್ದ ಬಾಣರ ವಶದಲ್ಲಿದ್ದ "ಗಂಗಾರುಸಾಸಿರ"ವನ್ನು ಕಸಿದುಕೊಂಡು ತಮ್ಮನ್ನು ಯುದ್ಧದಲ್ಲಿ ಬೆಂಬಲಿಸಿದ ತಮ್ಮ ಅಳಿಯನಾದ ನೊಳಂಬ ಪೋಳಲ್ಚೋರನಿಗೆ ಗಂಗ ೬೦೦೦ದ ಆಡಳಿತವನ್ನು ವಹಿಸಿದನು. ಇದೇ ಸಮಯದಲ್ಲಿ ಪೋಳಲ್ಚೋರನು ಬಾಣರ ಮಾಂಡಳೀಕರಾದ ವೇಮಗಲ್ ಪ್ರದೇಶವನ್ನು ಆಳುತ್ತಿದ್ದ ಪೊಂಪಲರನ್ನು ಕದನದಲ್ಲಿ ಕೊಂದು ಗಂಗಾರುಸಾಸಿರ ಪ್ರಾಂತ್ಯದಲ್ಲಿ ನೊಳಂಬರ ಆಡಳಿತವನ್ನು ಸ್ಥಿರಗೊಳಿಸಿದನು[೯೮].

---

[೯೭] ನೊಳಂಬರ ಇತಿಹಾಸ ದರ್ಶನ, ಪು.ಸಂ-೩೪ ರಿಂದ ೫೭.
[೯೮] ಕೋಲಾರ ಜಿಲ್ಲೆ ಗ್ಯಾಜಿಟಿಯರ್, ೨೦೦೫,

ಪೋಳಲ್ಚೋರನ ನಂತರ ಮಗ ನೊಳಂಬರಾಜ ಮಹೇಂದ್ರನು ಅಧಿಕಾರಕ್ಕೆ ಬಂದನು. ಕ್ರಿ.ಶ.೮೭೦ ರಲ್ಲಿ ಗಂಗ ೬೦೦೦ದಲ್ಲಿ ಆಳುತ್ತಿದ್ದ[೯೯] ಕಾಲದಲ್ಲಿ ಸಂಬಂಧಿಸಿದ ತುರುಕಾಳಗವೊಂದರಲ್ಲಿ ಪೋಸಮಂದಿ ಎಂಬ ವೀರನು ಮರಣ ಹೊಂದಿದನು. ಮಹೇಂದ್ರನು ಗಂಗರಾಜ ಪುತ್ರಿ ಗಾಮಬ್ಬೆಯನ್ನು ವಿವಾಹವಾಗಿ[೧೦೦], ನೊಳಂಬರು ಗಂಗರೊಂದಿಗೆ ವೈವಾಹಿಕ ಸಂಬಂಧ ಹೊಂದಿ ಸಾಮರಸ್ಯದಿಂದ ಇದ್ದರು ಸಹ ಎರಡು ರಾಜಮನೆತನಗಳ ನಡುವಿನ ಸಂಬಂಧ ಹದಗೆಟ್ಟಿ ಅನೇಕ ಯುದ್ದಗಳಿಗೆ ದಾರಿ ಮಾಡಿಕೊಟ್ಟಿತು ಎಂಬುದಕ್ಕೆ ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡಬೆಳವಂಗಲದ ಚನ್ನರಾಯಸ್ವಾಮಿ ದೇವಾಲಯ ಆವರಣದಲ್ಲಿನ ಕ್ರಿ.ಶ.೮೮೦ ಕಾಲದ ಶಾಸನದಲ್ಲಿ ನೊಳಂಬರಾಜ ಮಹೇಂದ್ರನು ಗಂಗರಸರೊಡನೆ ಮಾಡಿದ ಯುದ್ದದಲ್ಲಿ ಗಂಗಾರಸರ ಸೇವಕನಾದ ಅರದರೆ ಒಡೆಯ ಚಿಕ್ಕಕಾಕ ಮೋಸೆಯು ಮಹೇಂದ್ರನ ವಿರುದ್ಧ ಹೋರಾಡುತ್ತಾ ಸ್ವರ್ಗಸ್ತನಾದನು[೧೦೧]. ಈ ಶಾಸನದಲ್ಲಿ ಗಂಗಾರಸರ ಹೆಸರನ್ನು ಉಲ್ಲೇಖಿಸಿಲ್ಲ. ಆದರೆ ಗಂಗರಾಜನೆಂದರೆ ಬಹುಶಃ ರಾಚಮಲ್ಲನ ತಮ್ಮನಾದ ಭೂತುಗನೆ ಇರಬೇಕು. ಏಕೆಂದರೆ ಇವನು ನೊಳಂಬ ಅರಸ ಮಹೇಂದ್ರನ ವಿರುದ್ದ ಹಿರಿಯೂರು, ಸೂಳೂರು, ಸಾಮಿಯ ಕದನಗಳಲ್ಲಿ ಜಯಗಳಿಸಿದನೆಂದು ಶಾಸನಗಳಲ್ಲಿ ತಿಳಿಸಲಾಗಿದೆ[೧೦೨]. ಹಾಗೇಯೇ ಈ ಶಾಸನದ ಪಕ್ಕದಲ್ಲಿ ಪೂರ್ವಾಭಿಮುಖವಾಗಿ ೫ ಶಿಲ್ಪ ವೀರಗಲ್ಲುಗಳಿದ್ದು ಇವೆಲ್ಲವು ನೊಳಂಬರ ವಿರುದ್ದ ಯುದ್ದದಲ್ಲಿ ಹೋರಾಡಿ ಮಡಿದಿರುವ ಗಂಗ ವೀರರ ಶಿಲ್ಪಗಳು ಏಕೆಂದರೆ ನೊಳಂಬರಲ್ಲದೆ ಬೇರಾರು ಗಂಗರ ವಿರುದ್ದ ಹೋರಾಡಿದ್ದಕ್ಕೆ ನಿರ್ಧಶನಗಳಿಲ್ಲ. ಸಾಮಂತರಾಗಿದ್ದು, ವೈವಾಹಿಕ ಸಂಬಂಧ ಹೊಂದಿದ್ದಂತ ಗಂಗರು ಮತ್ತು ನೊಳಂಬರ ನಡುವಿನ ಯುದ್ದಕ್ಕೆ ಕಾರಣವೆನ್ನೆಂಬುದು ನಿಗೂಢವಾಗಿದೆ.

ಮಹೇಂದ್ರನು ಅಧಿಕಾರಕ್ಕೆ ಬಂದ ಕಾಲದಲ್ಲಿಯೇ ಮಹಾಬಲಿಯ ಬಾಣರನ್ನು ಯುದ್ದದಲ್ಲಿ ಸೋಲಿಸಿದ್ದರಿಂದ ಮಹಾಬಲಿ ವಿದ್ವಂಸ ಎಂಬ ಹೆಸರು ಬಂದಿತು. ಇದರಿಂದಾಗಿ ಪುನಃ ಗಂಗ ಸಾಸಿರನಾಡು ನೊಳಂಬವಾಡಿಗೆ ಸೇರಿತು. ಬಹುಶಃ ಮಹತ್ವಾಕಾಂಕ್ಷಿಯಾಗಿದ್ದ ಮಹೇಂದ್ರನು ಬಾಣ, ಮೈದುಂಬರು, ತೆಲುಗು ಚೋಳರನ್ನು ಮಣಿಸಿದ ನಂತರ ಸಾಮ್ರಾಜ್ಯ ದಾಹಕ್ಕೆ ಗಂಗರು ನೀಡಿದ್ದ ನೆರವು ಮರೆತು ಅವರ ಸಾಮ್ರಾಜ್ಯದ ಮೇಲೆ ಎರಗಿರಬೇಕು.

ಹಾಗೇಯೇ ಮಹೇಂದ್ರನು ಗಂಗವಾಡಿ ೯೬೦೦೦ವನ್ನು ವಶಪಡಿಸಿ ಕೊಂಡನೆಂದು ನೊಳಂಬ ಶಾಸನಗಳು ಹೇಳುತ್ತಿದ್ದರು, ಇಮ್ಮಡಿ ಮಾರಸಿಂಹನ ಕಡಲೂರು ತಾಮ್ರಶಾಸನದಲ್ಲಿ ಗಂಗ ಎರೆಯಪ್ಪ

---

[೯೯] ಎ.ಕ-೯,ಹೊ.ತಾ.೯, ಕ್ರಿ.ಶ.೮೭೦, ಜೋಡಿ ದಳಸಿಗೆರೆ.

[೧೦೦] Suryanath.U.Kamath :- Karnataka State Gazetter, Bangalore Rural District, 1989, Page.no-48.

[೧೦೧] ಎ.ಕ-೯, ದೊ.ತಾ.೩, ಕ್ರಿ.ಶ.೮೮೦, ವೀರಗಲ್ಲು, ದೊಡ್ಡ ಬೆಳವಂಗಲ.

[೧೦೨] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೧೫೪.

ಮತ್ತು ಇಮ್ಮಡಿ ಬೂತುಗರ ಶೌರ್ಯ ಸಾಹಸಗಳಿಂದಾಗಿ ರಾಚಮಲ್ಲನು ಮಹೇಂದ್ರನನ್ನು ಹಿಮ್ಮೆಟಿಸಿದನೆಂದು, ಹುಂಚ ಶಾಸನವು ಗಂಗ ಎರೆಯಪ್ಪನು ಒಂದನೇ ಮಹೇಂದ್ರನನ್ನು ಯುದ್ಧರಂಗದಲ್ಲಿ ಕೊಂದು "ಮಹೇಂದ್ರಾಂತಕ" ಎಂಬ ಬಿರುದನ್ನು ಧರಿಸಿದನೆಂದು ಹೇಳುತ್ತಿದೆ[೧೦೩]. ಇದಕ್ಕೆ ಪೂರಕವಾಗಿ ಗಂಗ ದೊರೆ ಎರೆಯಪ್ಪನ ಸಾಮಂತಾಧಿಪತಿ ನಾಗತ್ತರನು ವೀರಾವೇಶದಿಂದ ಹೋರಾಡಿ ಆನೆಯ ತಿವಿತದಿಂದ ಮರಣಹೊಂದಿದ್ದ ವಿಷಯವನ್ನು ಹೇಳುವ ಬೇಗೂರಿನ ಕ್ರಿ.ಶ.೮೯೦ರ ವೀರಗಲ್ಲುನಲ್ಲಿ, ವೀರ ಮಹೇಂದ್ರನೊಡನೆ ಯುದ್ಧಮಾಡಲೆಂದು ಅಯ್ಯಪ್ಪದೇವನ ಸಹಾಯಕ್ಕಾಗಿ ಸಾಮಂತಸಹಿತ ನಾಗತ್ತರ ಎಂಬುವವನಿಗೆ ಸೈನ್ಯ ತೆಗೆದುಕೊಂಡು ಹೋಗಲು ಎರೆಯಪ್ಪನು ಹೇಳಿದನು[೧೦೪]. ಈ ಶಾಸನದ ಕಾಲಕ್ಕಾಗಲೆ ವೀರಮಹೇಂದ್ರನು ಅಸುನೀಗಿರಬೇಕು ಯಾಕೆಂದರೆ ಈ ಶಾಸನದಲ್ಲಿ ಎರೆಯಪ್ಪನು ಎಲ್ಲಾ ಶತ್ರುಗಳನ್ನು ಧ್ವಂಸ ಮಾಡಿ ಗಂಗವಾಡಿ ೯೬೦೦೦ದಲ್ಲಿ ಏಕ ಛಾತ್ರಛಾಯೆಯಲ್ಲಿ ಆಳುತ್ತಿದ್ದ ಎನ್ನುವಾಗ, ಎಲ್ಲಾ ಶತ್ರುಗಳನ್ನು ಅಂತ ಹೇಳುವಾಗ ವೀರ ಮಹೇಂದ್ರನೇ ಆ ಶತ್ರುವಾಗಿರಬೇಕು. ಅದು ಅಲ್ಲದೆ ಈ ಶಾಸನದಲ್ಲಿ ಯುದ್ಧದಲ್ಲಿ ನೊಳಂಬ ಅರಸನು ಸಾವಿಗೀಡಾದನು ಎಂದು ಉಲ್ಲೇಖಿರುವುದನ್ನು ಗಮನಿಸಿದರೆ ಆ ನೊಳಂಬ ಅರಸನು ಮಹೇಂದ್ರನೇ ಅಗಿರಬೆಕು.

ಜಿಲ್ಲೆಯ ವ್ಯಾಪ್ತಿಯಲ್ಲಿ ಮಹೇಂದ್ರನ ನಂತರ ಅಯ್ಯಪ್ಪದೇವ ಮತ್ತು ಅವನ ಮಕ್ಕಳೇ ಹೆಚ್ಚುಕಾಲ ಆಳ್ವಿಕೆ ನಡೆಸಿದ್ದಾರೆ. ಕ್ರಿ.ಶ.೯೦೦ರಲ್ಲಿ ತುರುಗಳನ್ನು ರಕ್ಷಿಸಿ ಬಂಡಿ ಅಣಿಲೆಯರ ಮಗ ನಲ್ಮಲ್ಲ ಅಣ್ಣಮ್ಮನ ಅಳಿಯ ತೊರುವನು ಹಸುಗಳನ್ನು ರಕ್ಷಿಸಿ ಸ್ವರ್ಗಸ್ಥನಾದನು[೧೦೫]. ವೀರ ಮಹೇಂದ್ರನ ಮಗ ಪಲ್ಲವಾನ್ವಯ ಕುಲತಿಲಕ ಕಾಂಚಿಪುರವರೇಶ್ವರ ಅಯ್ಯಪ್ಪದೇವನು ಆಳುತಿದ್ದು[೧೦೬], ಅಯ್ಯಪ್ಪದೇವನ ಮಗ ಮಯ್ದನೋಲಪನು ರಾಜ್ಯದೊಳಗೆ ಕ್ರಿ.ಶ.೯೧೮ರಲ್ಲಿ ಬಸವಸೆಟ್ಟಿ ಎಂಬುವವನ ಮಗ ಚಬ್ಬಿಸೆಟ್ಟಿಯು ಸಂದಿ ಮಲ್ಲನೆಂಬ ತುರುಗಳ್ಳನೊಡನೆ ಹೋರಾಡಿ ತುರುಗಳನ್ನು ರಕ್ಷಿಸುವಾಗ ಸಾವಿಗೀಡಾಗಿ ವೀರ ಸ್ವರ್ಗಕ್ಕೆ ಸೇರಿದನು. ಅರ್ಜುನರಾಹನ ಕಾಲದಲ್ಲಿ ಕ್ರಿ.ಶ.೯೨೦ರಲ್ಲಿ ಚಬ್ಬಿಸೆಟ್ಟಿಯು ತಮ್ಮ ಮಣಿಯಮ ಸೆಟ್ಟಿಯು ಹಸುಗಳನ್ನು ರಕ್ಷಿಸಿ ಸಾವನ್ನಪ್ಪಿದನು[೧೦೭]. ಒಬ್ಬ ತಂದೆಯ ಇಬ್ಬರು ಮಕ್ಕಳು ೨ ವರ್ಷಗಳ ಅಂತರದಲ್ಲಿ ತುರುಗಳನ್ನು ರಕ್ಷಿಸಿ ಸ್ವರ್ಗನಾದ ಎಂಬುದು ಹೆಮ್ಮೆಯ ವಿಷಯವಾಗಿ ಭಾವಿಸುತ್ತಿದ್ದರೆನ್ನಿಸುತ್ತದೆ.

---

[೧೦೩] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೯೯.

[೧೦೪] ಎ.ಕ-೯, ಬೆಂ.೮೩, ಕ್ರಿ.ಶ.೮೯೦, ವೀರಗಲ್ಲು, ಬೇಗೂರು.

[೧೦೫] ಎ.ಕ-೯, ಹೊ.ತಾ.೧೧೦, ಕ್ರಿ.ಶ.೯೦೦, ಕುಂಬಳದಹಳ್ಳಿ.

[೧೦೬] ಎ.ಕ-೯, ಹೊ.ತಾ.೧೪, ಕ್ರಿ.ಶ.೯೦೦, ಸಿದ್ಧನಹಳ್ಳಿ.

[೧೦೭] ಎ.ಕ-೯, ದೊ.ತಾ.೯, ೧೦, ಕ್ರಿ.ಶ.೯೧೮, ಬೇಚಿರಾಖ್ ಜಕ್ಕಸಂದ್ರ, ಅರಳು ಮಲ್ಲಿಗೆ.

ಅಯ್ಯಪ್ಪದೇವನ ಮತ್ತೊಬ್ಬ ಮಗನಾದ ಇರಿವನೊಳಂಬ ದಿಲೀಪನು ಕ್ರಿ.ಶ.೯೪೮ರಲ್ಲಿ ಕಾಳುವಟ್ಟಿ ಬೀರಯ್ಯನ ವೀರತನವನ್ನು ಅಭ್ಯಂತರಿಸಿ ಶ್ರೀ ಕಾಲ್ನಾಡು ಕೊಟ್ಟರು[೧೦೮]. ವೀರನೊಬ್ಬನ ಶೌರ್ಯವು ರಾಜನ ಮೆಚ್ಚುಗೆ ಪಡೆದಿದ್ದ ಎಂದರೆ ಎಂತಹ ಶೌರ್ಯ ಇರಬೇಕು. ಹಾಗೂ ಶಾಸನ ಶಿಲ್ಪದಲ್ಲಿ ವೀರನು ಕುದುರೆಯ ಮೇಲೆ ಕುಳಿತಿದ್ದು ಬಹುಶಃ ವೀರನು ಸೈನ್ಯದಲ್ಲಿ ಉನ್ನತ ಹುದ್ದೆಯನ್ನು ಪಡೆದಿರಬೇಕು. ಕ್ರಿ.ಶ.೯೫೦ರಲ್ಲಿ ಕೈವಾರನಾಡು, ನೆಕ್ಕುಂದಿನಾಡು ಇವರ ಆಡಳಿತದ ವ್ಯಾಪ್ತಿಗೆ ಒಳಪಟ್ಟಿದ್ದು ದೇವಭೋಗಕ್ಕೆ ದಾನ ನೀಡಿದನು[೧೦೯]. ಹಾಗೇಯೇ ಪಟ್ಟಕ್ಕೆ ಬಂದ ೨೦ನೇ ವರ್ಷದಲ್ಲಿ ಬನಹಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸುತ್ತಾನೆ[೧೧೦]. ಈ ಶಾಸನದ ಮೇಲ್ಭಾಗದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ.

ನೆಲಮಂಗಲ ತಾಲ್ಲೂಕಿನ ಬಿದಲೂರಿನಲ್ಲಿ ಇರಿವನೊಳಂಬ ದಿಲೀಪನ ಆಳ್ವಿಕೆಯಲ್ಲಿ ಕ್ರಿ.ಶ.೯೫೫ರಲ್ಲಿ ಪೊಲ್ಲತಾಳ್ವನು ಮಹಾ ಸಾಮಂತನಾಗಿ ಈ ಪ್ರದೇಶದಲ್ಲಿ (ಬಿದಲೂರು) ಆಳ್ವಿಕೆ ನಡೆಸುತ್ತಿದ್ದು[೧೧೧], ನೊಳಂಬರ ಅಧಿಕಾರಿಯು ಗಂಗರ ರಾಜಧಾನಿ ಮಣ್ಣೆ ವ್ಯಾಪ್ತಿಯ ಬಿದಲೂರಿನ ದೇವಾಲಯಕ್ಕೆ ದಾನ ನೀಡಿರುವುದನ್ನು ಗಮನಿಸಿದರೆ ಗಂಗರು ಮತ್ತು ನೊಳಂಬರ ನಡುವಿನ ಸಾಮರಸ್ಯದ ಪ್ರಭಾವ ಅವರ ಅಧೀನದಲ್ಲಿರುವ ಆಧಿಕಾರಿ, ಗಾವುಂಡರ ಮೇಲೆ ಬಿದ್ದಿರುವುದನ್ನು ಗಮನಿಸ ಬಹುದು.

ನೊಳಂಬರಿಗೂ ಮತ್ತು ಚೋಳರಿಗೂ ಬಿಜಯಿತಮಂಗಲದಲ್ಲಿ ಯುದ್ಧ ನಡೆದಿರುವುದನ್ನು ಕ್ರಿ.ಶ.೯೮೦ ರ ಹಡಕನಹಳ್ಳಿಯ ಶಾಸನದಲ್ಲಿ ಕಾಣಬಹುದು. ಈ ಯುದ್ಧದಲ್ಲಿ ನೊಳಂಬರಾಯನ ಪ್ರಿಯನಾದ ನೊಳಂಬರಸ ಹೋರಾಡಿ ಮಡಿದನು. ಇದೇ ಗ್ರಾಮದಲ್ಲಿ ಇದೇ ಯುದ್ಧದ ಮತ್ತೊಂದು ವೀರಗಲ್ಲಿನಲ್ಲಿ ಕಾವಳಯ ರಣಗಯ್ಯನ ತಮ್ಮ ನೊಳಂಬರಸನು ಮಲ್ಲಪನ್ನಾರ ಜೊತೆ ಕಾದಿಮನ್ನರ ಕೊಂದನು[೧೧೨]. ಈ ಶಾಸನದ ಏಕ ವಾಕ್ಯ ಶ್ರೀಮಾನ್ ನೊಳಂಬರಾಜನು ೨ನೇ ಮಹೇಂದ್ರ ಇರಬೇಕು. ಹಾಗೂ ಶಾಸನದಲ್ಲಿ ನೊಳಂಬರಸನು ಸತ್ತಂ ಎಂದು ಉಲ್ಲೇಖಿರುವುದರಿಂದ ಅರಸನು ಹಸುನೀರಬೇಕು. ಏಕೆಂದರೆ ಕ್ರಿ.ಶ.೯೮೧ರ ನಂತರ ಇವನ ಶಾಸನಗಳು ದೊರೆಯುವುದಿಲ್ಲ[೧೧೩]. ಇಲ್ಲವಾದರೆ ರಣಗಯ್ಯನ ತಮ್ಮ ನೊಳಂಬರಸನು ಬಹುಶ ದಂಡನಾಯಕನಿರಬೇಕು.

---

[೧೦೮] ಎ.ಕ-೯, ದೇ.ತಾ.೧೦, ಕ್ರಿ.ಶ.೯೪೮, ಕೊಯಿರ.
[೧೦೯] ಎ.ಕ-೯, ಹೊ.ತಾ.೩೭, ಕ್ರಿ.ಶ.೯೫೦, ಕೊಂಡಹಳ್ಳಿ.
[೧೧೦] ಎ.ಕ-೯, ಅನುಬಂಧ, ಹೊ.ತಾ.೧೯೯, ಬನಹಳ್ಳಿ.
[೧೧೧] ಎಂ.ಜಿ.ನಾಗರಾಜ್, & ಹೆಚ್.ಎಂ.ಸಿದ್ಧನಗೌಡ :- ಬಿದಲೂರು ಶಾಸನ, ಕ್ರಿ.ಶ.೯೫೫, ಇ.ದ.ಸಂ-೧೪, ಪು.ಸಂ-೨೮ ರಿಂದ ೪೦.
[೧೧೨] ಎ.ಕ-೯, ಹೊ.ತಾ.೪೭, ೪೮, ಕ್ರಿ.ಶ.೯೮೦, ಹಡಕನಹಳ್ಳಿ.
[೧೧೩] ಡಾ.ಎಸ್.ಹೆಚ್.ಕೆಂಪರಾಜು :- ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೧೦.

ಕ್ರಿ.ಶ.೯೯೭ರಲ್ಲಿ ಅಯ್ಯಪ್ಪದೇವನ ಮತ್ತೋರ್ವ ಮಗ ಗನ್ನರಸನು ಚೋಳ ದೊರೆ ರಾಜರಾಜ ಚೋಳನ ಸಾಮಂತಾಧಿಪತಿಯಾಗಿ ದಳುಗವಾಡಿಯ ಕುರು.ಕ್ಷನ್ದಳ್ಚುಯ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದನು[೧೧೪]. ಈ ಶಾಸನಗಳಲ್ಲದೆ ರಾಜಘಟ್ಟದ ಬೂದಿಗುಂಡಿಯ ಬಳಿ ಸುಮಾರು ೫ ಅಡಿ ಎತ್ತರದ ಶಿಲ್ಪ ವೀರಗಲ್ಲು, ತಿಪ್ಪೂರಿನ ಕೆರೆ ಕೋಡಿಯ ಬಳಿ ವೀರಗಲ್ಲುಗಳು ದೊರೆತಿದ್ದು, ಇತ್ತೀಚೆಗೆ ಕ್ಷೇತ್ರಕಾರ್ಯದಲ್ಲಿ ದೇವನಹಳ್ಳಿ ತಾಲ್ಲೂಕಿನ ಯಂಬ್ರಹಳ್ಳಿಯಲ್ಲಿ ನೊಳಂಬ ಕಾಲದ ೫ ವೀರಗಲ್ಲುಗಳು ದೊರೆತಿದ್ದು, ಅದರಲ್ಲಿ ೩ ಶಾಸನ ವೀರಗಲ್ಲುಗಳು, ೨ ಶಿಲ್ಪ ವೀರಗಲ್ಲುಗಳು, ಮನ್ನಾಪುರದಲ್ಲಿ ನೊಳಂಬರು ಮತ್ತು ಚೋಳರ ಸಮನ್ವಯದ ಕ್ರಿ.ಶ.೧೦೦೭ರ ಕಾಲದ ಶಾಸನ ಮತ್ತು ವೀರಗಲ್ಲುಗಳು ದೊರೆತಿದೆ.

ಹೀಗೆ ಗಂಗರು, ಬಾಣರು, ಪಲ್ಲವರು, ವೆಂಗಿ ಚಾಲುಕ್ಯರು, ಚೋಳರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಮುಂತಾದವರೊಂದಿಗೆ ಮಿತ್ರ–ವೈರಿಗಳಾಗಿ ಹಲವಾರು ಯುದ್ಧಗಳನ್ನು ಮಾಡಿರುವರು. ಗಂಗರು, ಕದಂಬರು, ಕಲ್ಯಾಣ ಚಾಲುಕ್ಯರೊಂದಿಗೆ ನೊಳಂಬರು ವೈವಾಹಿಕ ಸಂಬಂಧವನ್ನು ಹೊಂದಿದ್ದ ಮನೆತನವು ಚೋಳರ ಮತ್ತು ಕಲ್ಯಾಣ ಚಾಲುಕ್ಯರ ಪ್ರಾಬಲ್ಯದಿಂದಾಗಿ ನೊಳಂಬರು ಹಂತ ಹಂತವಾಗಿ ಅವನತಿ ಹೊಂದಿದರು.

## ೩.೮ ಚೋಳರು

ಕರ್ನಾಟಕದಲ್ಲಿ ಒತ್ತುವರಿ ನಡೆಸಲು ಪಲ್ಲವರು ಮಾಡಿದ್ದ ಪ್ರಯತ್ನಗಳನ್ನು ಬಾದಾಮಿ ಬಾಲುಕ್ಯರ ಮತ್ತು ರಾಷ್ಟ್ರಕೂಟರ ನೆರವಿನಿಂದ ಗಂಗರು ತಡೆಯುತ್ತ ಬಂದಿದ್ದರು. ರಾಷ್ಟ್ರಕೂಟರನ್ನು ಕಲ್ಯಾಣದ ಚಾಲುಕ್ಯರು ಪದಚ್ಯುತಿಗೊಳಸಿದ ಮೇಲೆ ಗಂಗರು ಕಲ್ಯಾಣದ ಚಾಲುಕ್ಯರ ಮೇಲಾಳ್ಕೆಯನ್ನು ಪ್ರಶ್ನಿಸಲು ಆರಂಭಿಸಿದರು. ಇದರಿಂದಾಗಿ ಗಂಗರ ರಾಜ್ಯವೇ ನಾಮಶೇಷವಾಗಿ ಕ್ರಿ.ಶ.೯೯೭ ರಿಂದ ೧೦೦೬ ರ ವರೆಗೆ ಗಂಗವಾಡಿಯು ನೇರವಾಗಿ ಚೋಳರ ಆಡಳಿತಕ್ಕೆ ಒಳಪಟ್ಟಿತು. ತಮಿಳುನಾಡಿನ ಕಾವೇರಿಪಟ್ಟಣ, ತಂಜಾವೂರುಗಳನ್ನು ರಾಜಧಾನಿ ಮಾಡಿಕೊಂಡು ಒಟ್ಟು ೧೯ ಆರಸರುಗಳ ಆಳ್ವಿಕೆ ನಡೆಸಿದ ಚೋಳ ವಂಶದ ಸಂಸ್ಥಾಪಕ ವಿಜಯಾಲಯಾನಾದರೆ, ಕರಿಕಾಳನೆಂಬ ಚೋಳ ಅರಸನು ಚೋಳರಲ್ಲೇ ಪ್ರಸಿದ್ಧನಾದ ಅರಸನಾಗಿದ್ದನು[೧೧೫]. ತಂಜಾವೂರಿನಲ್ಲಿ ಆಳುತ್ತಿದ್ದ ಚೋಳರ ಒಂದನೆಯ ರಾಜ ರಾಜ ಚೋಳನು ಗಂಗವಾಡಿಯ ತಲಕಾಡನ್ನು ಆಕ್ರಮಿಸಿ ಕೊಳ್ಳುವುದರೊಂದಿಗೆ ಚೋಳರ ಅಧಿಕಾರ

---

[೧೧೪] ಎ.ಕ-೯, ಹೊ.ತಾ.೧೧೧, ಕ್ರಿ.ಶ.೯೯೭, ಕಮ್ಮಸಂದ್ರ.

[೧೧೫] ಡಾ.ಎಸ್.ಕೆ.ಜೋಶಿ :- ಚೋಳರು: ಒಂದು ಚಿಂತನೆ, ಇ.ದ.ಸಂ.೨೩, ಪು.ಸಂ-೨೬೯.

ಪ್ರಾರಂಭವಾಗಿ ತಲಕಾಡನ್ನು ತಮ್ಮ ಪ್ರಾಂತೀಯ ಕೇಂದ್ರವನ್ನಾಗಿ ಮಾಡಿ ರಾಜರಾಜಪುರ ಎಂದು ಹೆಸರಿಟ್ಟರು. ಚೋಳರು ತಾವು ಗೆದ್ದ ಪ್ರದೇಶದಲ್ಲಿನ ಆಡಳಿತವನ್ನು ಪುನಃ ವ್ಯವಸ್ಥೆಗೊಳಿಸಿ ಹೊಸ ಪ್ರಾಂತ್ಯಗಳಾಗಿ ಚತುರ್ವೇದಿಮಂಗಲ, ಚೋಳಮಂಡಲ, ನಾಡುಗಳು ರಚನೆಯಾದವು, ದಡಿಗಾವಳಿ ಎಂಬುದು ಗಂಗರ ಆಳ್ವಿಕೆಯ ಪ್ರದೇಶದ ಸೂಚಕವಾಗಿದ್ದು, ಚೋಳರು ಗಂಗವಾಡಿಯನ್ನು ಆಕ್ರಮಿಸಿದ ನಂತರ ದಳಿಗವಾಡಿಗೆ ವಿಕ್ರಮಚೋಳ ಮಂಡಲ ಎಂದು ಮರುನಾಮಕರಣ ಮಾಡಿರಬೇಕು. ನಂತರ ವಿಕ್ರಮಚೊಳ ಮಂಡಳವು ನಿಗರಿಲಿ ಚೋಳ ಮಂಡಲವಾಯಿತ್ತು. ಬೆಂಗಳೂರು ಜಿಲ್ಲೆಯು ರಾಜ ರಾಜ ಚೋಳನ ಗಂಗೈಕೊಂಡ ಚೋಳನಾಡಿನಲ್ಲಿತ್ತು.

ಶಾಸನಗಳಲ್ಲಿ ಬೆಂಗಳೂರು ಜಿಲ್ಲೆಯು ರಾಜೇಂದ್ರ ಚೋಳ ಒಳನಾಡುವಿನ ನಿಗರಿಲ್‌ಚೋಳಮಂಡಲ, ವಿಕ್ರಮ ಚೋಳಮಂಡಲ, ಜಯಗೊಂಡ ಚೋಳಮಂಡಲಗಳಲ್ಲಿ ವಿಭಜಿತವಾಗಿತ್ತು. ಹಾಗೂ ಮಣ್ಣೆನಾಡು, ಕುಕ್ಕನೂರು ನಾಡು (ನೆಲಮಂಗಲ ತಾಲ್ಲೂಕು), ಇಲ್ಲೈಪಾಕ್ಕಂನಾಡು (ಯಲಹಂಕನಾಡು), ಸಣ್ಣೆನಾಡು (ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕಿನ ಕೆಲವು ಭಾಗಗಳು) ಹುಲ್ಲೂರುನಾಡು, ಕೈವಾರನಾಡು ಎಂದು ಹಲವಾರು ನಾಡುಗಳಾಗಿ ಸಹ ವಿಂಗಡಿಸಲಾಗಿತ್ತು.

ಗಂಗರಿಂದ ರಾಜ್ಯವನ್ನು ಪಡೆದ ಚೋಳರು ಜನರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕಿತ್ತು. ಹೀಗಾಗಿ ಗಂಗರಿಂದ ನಿರ್ಮಾಣಗೊಂಡಿದ್ದ ದೇವಾಲಯಗಳಿಗೆ ಮುಖ್ಯವಾಗಿ ಶಿವ ದೇವಾಲಯಗಳಿಗೆ ದಾನ ದತ್ತಿಗಳನ್ನು ಕೊಡುವುದರ ಜೊತೆಗೆ ದೇವಾಲಯಗಳ ಅಧಿಸ್ಟಾನ, ಗೋಡೆ, ಹೊರಬಿತ್ತಿ, ಕಂಬಗಳ ಬುಡದಲ್ಲಿ, ಪೀಠದ ಮೇಲೆ, ಪ್ರಕಾರದ ಗೋಡೆಗಳ ಮೇಲೆ ಶಾಸನಗಳನ್ನು ಹಾಕಿಸಿರುವುದನ್ನು ಕಾಣಬಹುದು. ಉದಾಹರಣೆಗೆ ಐಯಿಗಂಡಪುರದ ಧರ್ಮರಾಯ ದೇವಸ್ಥಾನದಲ್ಲಿ ಪೀಠದ ಮೇಲೆ. ವೇಣುಗೋಪಾಲ ದೇವಾಲಯದಲ್ಲಿ ಅಧಿಸ್ಥಾನದ ಮೇಲೆ, ಗಂಗವಾರದ ಸೋಮೇಶ್ವರ ದೇವಸ್ಥಾನದಲ್ಲಿ ಹೊರಬಿತ್ತಿಯ ಮೇಲೆ ಶಾಸನಗಳನ್ನು ಕಾಣಬಹುದು.

ಚೋಳರ ಅಧಿಪತ್ಯವು ಬೆಂಗಳೂರು ಜಿಲ್ಲೆಯ ಮೇಲೆ ಸಾಕಷ್ಟು ಪ್ರಭಾವಕಾರಿ ರಾಜಕೀಯ ಮಾತ್ರವಲ್ಲದೆ ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಪರಿಣಾಮಕಾರಿಯಾಗಿ ಬೆಳೆಯಿತು. ಚೋಳರು ಅನೇಕ ಅಗ್ರಹಾರಗಳನ್ನು ಸ್ಥಾಪಿಸಿ, ತಮಿಳು ಬ್ರಾಹ್ಮಣರನ್ನು ಕರೆ ತಂದು ನೆಲೆಸುವಂತೆ ಮಾಡಿದರು[೧೧೬]. ಇದರಿಂದಾಗಿ ತಮಿಳು ಸಂಸ್ಕೃತಿ, ಸಂಪ್ರದಾಯಗಳು ಜಿಲ್ಲೆಯ ವ್ಯಾಪ್ತಿಯಲ್ಲಿ ಬೆರೆತು ಹೊಯಿತು. ಅದು

[೧೧೬] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೦೬, ೧೦೭.

ಅಲ್ಲದೆ ಭೌಗೋಳಿಕವಾಗಿ ಜಿಲ್ಲೆಯು ತಾಲ್ಲೂಕಿನ ಕೆಲವು ಭೂ ಭಾಗಗಳು ತಮಿಳುನಾಡಿಗೆ ಹೊಂದಿಕೊಂಡು ಇದೆ. ಚತುರ್ವೇದಿಮಂಗಲ ಎನಿಸಿಕೊಂಡ ಅಗ್ರಹಾರಗಳು ಮತ್ತು ಅದಕ್ಕೆ ಹೊಂದಿಕೊಂಡ ದೇವಾಲಯಗಳಲ್ಲಿ ತಮಿಳು ಭಾಷೆಯ ಅರ್ಚಕರೇ ಇದ್ದ ಪರಿಣಾಮವಾಗಿ ಅಲ್ಲೆಲ್ಲಾ ಸಹಜವಾಗಿಯೇ ತಮಿಳು ಶಾಸನಗಳು ಹೆಚ್ಚಾಯಿತು[೧೧೭]. ರಾಜರಾಜ ಚೋಳನು ಮಳೂರು ಪಟ್ಟಣವನ್ನು ನಿಗರಿಳಿ ಚೋಳಪುರವೆಂದೂ, ಮಳೂರನ್ನು ಅಗ್ರಹಾರವನ್ನಾಗಿ ಪರಿವರ್ತಿಸಿ, ರಾಜ ರಾಜ ಚತುರ್ವೇದಿಮಂಗಲ ಎಂದು ಹೆಸರಿಟ್ಟಿದನ್ನು ಮಳೂರು ಪಟ್ಟಣದ ನಾರಾಯಣಸ್ವಾಮಿ ದೇವಸ್ಥಾನದ ಭಿತ್ತಿ ಮೇಲಿರುವ ಶಾಸನದಲ್ಲಿ ಕಾಣಬಹುದು[೧೧೮].

ದೇವರಕೊಂಡಾರೆಡ್ಡಿಯವರು ಹೇಳುವಂತೆ ಗಂಗವಾಡಿಯ ಪೂರ್ವಭಾಗವನ್ನು ಸುಮಾರು ೧೫೦ ವರ್ಷಗಳ ಕಾಲ ಆಳಿದ[೧೧೯] ಚೋಳರು ದೇವಾಲಯಗಳಿಗೆ, ಬ್ರಾಹ್ಮಣರಿಗೆ ದಾನಗಳನ್ನು ನೀಡುವುದರೊಂದಿಗೆ ನೀರಾವರಿಗಾಗಿ ಅನೇಕ ಕೆರೆಗಳನ್ನು ಕಟ್ಟಿಸಿ ತೂಬುಗಳನ್ನು ನಿರ್ಮಿಸಿರುವುದನ್ನು ಕಾಣಬಹುದು.

ಚೋಳರ ಶಾಸನಗಳು ಜಿಲ್ಲಾ ವ್ಯಾಪ್ತಿಯಲ್ಲಿ ಕ್ರಿ.ಶ.೯೬೨ರ ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರದ ಶಾಸನದಿಂದ ಕಂಡು ಬಂದ ನಂತರ ಕ್ರಿ.ಶ.೧೦೦೫ ರಿಂದ ೧೦೨೦ ರವರೆಗೆ ಚನ್ನಪಟ್ಟಣ ತಾಲ್ಲೂಕಿನಲ್ಲಿ ಚೋಳರ ಆಡಳಿತದ ಶಾಸನಗಳನ್ನು ಕಾಣಬಹುದು. ಕ್ರಿ.ಶ.೧೦೨೩ ರಿಂದ ಕ್ರಿ.ಶ.೧೧೫೦ ರ ವರೆಗೆ ಶಾಸನಗಳು ಗ್ರಾಮಾಂತರ ಜಿಲ್ಲೆ ವ್ಯಾಪ್ತಿಯಲ್ಲಿ ದೊರೆಯುತ್ತದೆ. ಕ್ರಿ.ಶ.೯೬೨ ರಿಂದ ೧೦೨೯ ರ ವರೆಗಿನ ಶಾಸನಗಳು ಕನ್ನಡದಲ್ಲಿದ್ದು, ಕ್ರಿ.ಶ.೧೦೩೩ ರ ನಂತರ ತಮಿಳು ಶಾಸನಗಳು ಕಂಡು ಬರುತ್ತದೆ. ಕೆಲವು ಸಂದರ್ಭದಲ್ಲಿ ಕನ್ನಡ ಮತ್ತು ತಮಿಳು ಎರಡು ಭಾಷೆಯಲ್ಲಿ ಒಂದೇ ಶಾಸನವನ್ನು ಕಾಣಬಹುದು. ಚೋಳರ ಕೆಲವು ಶಾಸನಗಳಲ್ಲಿ ರಾಜ, ಸೇನಾಧಿಪತಿ, ಗಾವುಂಡರು, ಮಂಡಲ, ದೇವಾಲಯದ ದೇವರ ಇತ್ಯಾದಿಗಳಿಗೆಲ್ಲಾ ಎರಡೆರಡು ಹೆಸರುಗಳಿರುವುದನ್ನು ಕಾಣಬಹುದು.

ರಾಜ ಹೆಸರನ್ನು ಅಥವಾ ರಾಜ ಬಿರುದುಗಳನ್ನು ಸಾಮಂತಾಧಿಕಾರಿಗಳು ಸೇನಾಧಿಪತಿಗಳು ಅಥವಾ ಗಾವುಂಡರು ಇಟ್ಟು ಕೊಂಡಿದ್ದು, ಕೆಲವು ಸಂದರ್ಭದಲ್ಲಿ ದಾನ ಶಾಸನಗಳಲ್ಲಿ ದಾನ ನೀಡಿರುವವರು ರಾಜನೇ ಅಥವಾ ಅಧಿಕಾರಿಯೇ ಹಾಗೆಯೇ ವೀರಗಲ್ಲುಗಳಲ್ಲಿ ಮರಣ ಹೊಂದಿದವನು ರಾಜನೆ ಅಥವಾ ಅಧಿಕಾರಿಯೇ ಎಂಬ ಸಂಶಯ ಕಾಡತೊಡಗುತ್ತದೆ.

---

[೧೧೭] ಹೆಚ್.ಎಸ್. ಗೋಪಾಲರಾವ್:- ಬೆಂಗಳೂರು ಜಿಲ್ಲೆಯ ತಮಿಳು ಶಾಸನಗಳು ಇ.ದ.ಸಂ.೨೧, ಪು.ಸಂ-೯೨.
[೧೧೮] ಎ.ಕ-೯, ಚ.ತಾ.೧೩೩, ಕ್ರಿ.ಶ.೧೦೩೦, ತಮಿಳು, ಮಳೂರು ಪಟ್ಟಣ.
[೧೧೯] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೩.

## ಒಂದನೇ ರಾಜರಾಜ ಚೋಳ (ಕ್ರಿ.ಶ.೯೮೫–೧೦೧೫)

ಒಂದನೇ ರಾಜ ರಾಜ ಚೋಳನು ಗಂಗವಾಡಿಯನ್ನು ಆಕ್ರಮಿಸುವುದರೊಂದಿಗೆ ಗ್ರಾಮಾಂತರ ಜಿಲ್ಲೆಯು ಚೋಳನ ವ್ಯಾಪ್ತಿಗೆ ಒಳಪಟ್ಟಿತು ಎಂಬುದಕ್ಕೆ ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರದ ಕ್ರಿ.ಶ.೯೯೭ ರ ಕನ್ನಡ ಶಾಸನವೇ ಸಾಕ್ಷಿಯಾಗಿದೆ[೧೨೦]. ಈ ಶಾಸನದಲ್ಲಿ ರಾಜರಾಜ ಚೋಳನನ್ನು ಅಯ್ಯಪ್ಪದೇವನ ಮಗ ಗನ್ನರಸನ ಮಗ ರಾಜ ಎಂದು ನಮೂದಿಸಿರುವುದನ್ನು ಕಂಡರೆ ರಾಜರಾಜ ಚೋಳನು ಗನ್ನರಸನನ್ನು ಸೋಲಿಸಿ ತನ್ನ ಸಾಮಂತನನ್ನಾಗಿ ಅಥವಾ ಮಾಂಡಳೀಕನಾಗಿ ಮಾಡಿಕೊಂಡು ಕುರುಕುನ್ನಾಡ್ಚಿಯನ್ನ ಆಳ್ವಿಕೆ ಮಾಡಲು ಅನುಮತಿ ನೀಡಿರಬೇಕು. ಹಾಗೆಯೇ ಗನ್ನರಸನ ದಂಡನಾಯಕ ಶ್ರೀಧರಯ್ಯನು ಸಂತಿವಂಗಲದ ಜಮೀನಿನ ಸಂಬಂಧದ ವ್ಯಾಜ್ಯವನ್ನು ನಿವಾರಿಸಿದನು. ಈ ಕಮ್ಮಸಂದ್ರ ಶಾಸನದ ನಂತರ ರಾಜ ರಾಜ ಚೋಳನ ಯಾವ ಶಾಸನಗಳು ಜಿಲ್ಲಾ ವ್ಯಾಪ್ತಿಯಲ್ಲಿ ಕಂಡು ಬರುವುದಿಲ್ಲ. ಆದರೆ ಚನ್ನಪಟ್ಟಣ ತಾಲ್ಲೂಕಿನಲ್ಲಿ ಹೆಚ್ಚಾಗಿ ಕಾಣಿಸುತ್ತದೆ. ಚನ್ನಪಟ್ಟಣ ತಾಲ್ಲೂಕಿನ ಹೊಂಗನೂರು ಶಾಸನದಲ್ಲಿ ಪುಂಗನೂರನ್ನು ತ್ರೈಲೋಕ್ಯ ಮಹಾದೇವಿ ಚರ್ತುವೇದಿ ಮಂಗಲ ಎಂದು ತನ್ನ ಹೆಂಡತಿಗಾಗಿ ಹೆಂಡತಿಯ ಹೆಸರಿನಲ್ಲಿ ಅಗ್ರಹಾರವನ್ನು ನಿರ್ಮಿಸಿದನು[೧೨೧].

## ಒಂದನೇ ರಾಜೇಂದ್ರ (ಕ್ರಿ.ಶ.೧೦೧೭–೧೦೪೪)

ಒಂದನೇ ರಾಜರಾಜ ಚೋಳನ ನಂತರ ಅಧಿಕಾರಕ್ಕೆ ಬಂದ ಮಗನಾದ ಒಂದನೇ ರಾಜೇಂದ್ರ ಚೋಳನ ಹಲವಾರು ಶಾಸನಗಳು ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿದ್ದು, ಅದರಲ್ಲಿ ೨ ಕನ್ನಡ ಶಾಸನಗಳು, ಉಳಿದೆಲ್ಲವೂ ತಮಿಳು ಶಾಸನಗಳಾಗಿದ್ದು, ಬಹುತೇಕ ಎಲ್ಲಾ ಶಾಸನಗಳು ದಾನ ಶಾಸನಗಳಾಗಿವೆ. ರಾಜೇಂದ್ರ ಚೋಳನು ತಂದೆಯ ಅಧಿಕಾರವಧಿಯಲ್ಲೆ ಯುವರಾಜನಾಗಿದ್ದಲ್ಲೇ ಚನ್ನಪಟ್ಟಣ ತಾಲ್ಲೂಕಿನ ಹೊಂಗನೂರಿನ ಶಾಸನಗಳನ್ನು ಹಾಕಿಸಿದವನು[೧೨೨]. ರಾಜೇಂದ್ರ ಚೋಳನು ತಂದೆಯಂತೆಯೇ ಹಲವಾರು ಅಗ್ರಹಾರಗಳನ್ನು ಸ್ಥಾಪಿಸಿದನು. ತನ್ನ ಹೆಸರಿನಲ್ಲೆ ರಾಜೇಂದ್ರನಿಕ ಚತುರ್ವೇದಿಮಂಗಲವೆಂಬ ಅಗ್ರಹಾರವನ್ನು ಸ್ಥಾಪಿಸಿದನು[೧೨೩].

ರಾಜೇಂದ್ರ ಚೋಳನ ಆಳ್ವಿಕೆಯ ಕ್ರಿ.ಶ.೧೦೧೯ ರಲ್ಲಿ ನನ್ದಿಯ ಬಾಳಶಕ್ತಿಪಂಡಿತರು ಬಂದು ಬಾಣವರದಲ್ಲಿ ಎರಡು ಭಳಾರಿಗಳನ್ನು, ನಾಗಮರದಲ್ಲಿ ಒಂದು ಭಳಾರಿಯನ್ನು, ಏರಿಯ ಮೇಲೆ ಭಗವತಿಯನ್ನು ಮತ್ತು ಬೀರೆದೇವರನ್ನು ಪ್ರತಿಷ್ಟೆ ಮಾಡಿ, ಪೂಜಾಕೈಕಾರ್ಯಗಳಿಗೆ ಬಾಣವರದ ಭಟ್ಟಾರಿಗೆ

---

[೧೨೦] ಎ.ಕ-೯, ಹೊ.ತಾ.೧೧೧, ಕ್ರಿ.ಶ.೯೯೭, ಕನ್ನಡ, ಕಮ್ಮಸಂದ್ರ.

[೧೨೧] Suryanath.U.Kamath :- Karnataka State Gazetter, Bangalore Rural District, 1989, Page.no-50.

[೧೨೨] ಡಾ.ಎಚ್.ಗುಡ್ಡದೇಶ್ವರಪ್ಪ :-ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೫.

[೧೨೩] Suryanath.U.Kamath :- Karnataka State Gazetter, Bangalore Rural District, 1989, Page.no-50.

೧೦ ಕೊಳಗ ಗದ್ದೆ, ನಾಗಮರದ ಭಟ್ಟಾರಿಗೆ ೧೦ ಕೊಳಗ ಗದ್ದೆ, ಏರಿಯ ಮೇಲಿನ ಭಗವತಿಗೆ ೫ ಕೊಳಗ ಗದ್ದೆ, ೧ ಗದ್ಯಾಣ, ಬೀರನಿಗೆ ೫ ಕೊಳಗ ಗದ್ದೆಗಳನ್ನು[೧೨೪] (ಇಲ್ಲಿ ದಾನವನ್ನು ಕೊಳಗದ ಅಳತೆಯಲ್ಲಿ ಗದ್ದೆಯನ್ನು ಹಾಗೂ ಪ್ರಚಲಿತದಲ್ಲಿದ್ದ ನಾಣ್ಯವಾದ ಗದ್ಯಾಣವನ್ನು ಉಲ್ಲೇಖಿಸಲಾಗಿದೆ.),

ಕ್ರಿ.ಶ.೧೦೨೩ ರಲ್ಲಿ ಪದಿಯರಕ್ಕರ ಚೋಳಯ್ಯ ಗಾವುಂಡರ ಮಗ ಪಲಯ್ಯಗಾವುಂಡರ ತಂಗಿ ಮಣ್ಣೆಯಬ್ಬೆಯು ನೆಲ್ಲಿಗೆರೆಯ ಬ್ರಾಹ್ಮಣನಿಗೆ[೧೨೫], ಕ್ರಿ.ಶ.೧೦೨೮ ರಲ್ಲಿ ಗಂಗವಾಡಿಯ ವಿಕ್ರಮ ಚೋಳಮಂಡಲದ ಕಲಿಎತಣಂಗ ಸೇವಚಾರಿಯು ಮಕರ ತೋರಣವ ನಿಲ್ಲಿಸಿದರೆ[೧೨೬], ಕ್ರಿ.ಶ.೧೦೨೯ ರಲ್ಲಿ ಸಾಮಂತಾಧಿಪತಿ ವಾಮನಯ್ಯನು ಸೋಲದೇವನಹಳ್ಳಿಯಲ್ಲಿ ಸಿದ್ದೇಶ್ವರ ದೇವಾಲಯವನ್ನು ನಿರ್ಮಿಸಿ, ರಾಜಾನುಗ್ರಹದಿಂದ ದೇವಭೋಗವಾಗಿ[೧೨೭] ದಾನ ನೀಡಿದ ಸಿದ್ದೇಶ್ವರ ದೇವಾಲಯವು ಪ್ರಸ್ತುತ ಈಗ ಸೋಲದೇವನಹಳ್ಳಿ ಹಾಗು ಸುತ್ತಮುತ್ತಲಿನ ಗ್ರಾಮಗಳಲ್ಲಿ ಎಲ್ಲಿಯೂ ಕಾಣಿಸುತ್ತಿಲ್ಲ. ಕ್ರಿ.ಶ.೧೦೩೩ ರಲ್ಲಿ ೨೨ನೇ ವರ್ಷದ ಆಳ್ವಿಕೆಯಲ್ಲಿ ಕೊಲಿಸಂಬುದ್ಯೆ ಎಂಬಲ್ಲಿನ ಸಿದ್ದೇಶ್ವರ ದೇವರಿಗೆ ದೇವಧನವಾಗಿ[೧೨೮], ಕ್ರಿ.ಶ.೧೦೩೮ ರಲ್ಲಿ ೨೭ನೇ ವರ್ಷದ ಆಳ್ವಿಕೆಯಲ್ಲಿ ಚಾಮುಂಡೇಶ್ವರಿಗೆ ಕುಕ್ಕನೂರುನಾಡಿನ ನಿವಾಸಿಗಳು, ಚಿನ್ನಮಂಗಲದ ರಾಜೇಂದ್ರ ಚೋಳ ಗಾವುಂಡ ೫೦೦ ಕುಳ ಭೂಮಿಯನ್ನು ಮತ್ತು ವಿಕ್ರಮ ಚೋಳ ಮಂಡಲದ ಕುಕ್ಕನೂರುನಾಡಿನ ಕೊಲಿಂಬರ್ ಸಿದ್ದೇಶ್ವರನಿಗೆ ರೇಷ್ಮೆ, ಹತ್ತಿ, ಮರಗಳನ್ನು ಹಾಗು ನೈವೇದ್ಯ, ದೀಪಾರಾಧನೆಗೆ ದಿನಕ್ಕೆ ಮೂರು ಬಾರಿ ಅಕ್ಕಿಯನ್ನು, ೧ ಬಾರಿ ಪೂಜಾರಿಗೆ ಅಕ್ಕಿಯನ್ನು ಕೊಡ ಬೇಕೆಂದು[೧೨೯], ಕ್ರಿ.ಶ.೧೦೪೦ ರಲ್ಲಿ ಶ್ರೀಕಾಮದೇವನು ಮತ್ತು ಇತರರು ಸೇರಿ ದೊಮ್ಮಲೂರು ಸೊಕ್ಕಪೆರುಮಾಳು ದೇವರಿಗೆ ದಾನ ನೀಡಿದನು[೧೩೦].

ಬಹುತೇಕ ವೀರಗಲ್ಲುಗಳನ್ನು ಪುರುಷರೇ ಹೋರಾಡಿ ಮಾಡಿದದ್ದಕ್ಕೆ ಹಾಕಿಸಿದ ಸ್ಮಾರಕಗಳ ಮಧ್ಯದಲ್ಲಿ ತುರುಗಳನ್ನು ಕಾಪಾಡಲು ಪುರುಷರಂತೆ ಮಹಿಳೆಯರು ಸಹ ಭಾಗವಹಿಸುತ್ತಿದ್ದರು ಎಂಬುದಕ್ಕೆ ಕ್ರಿ.ಶ.೧೦೪೧ ರಲ್ಲಿ ಕೈವಾರನಾಡ ಸರಕ್ಕನೂರ ಕಿಟ್ಟಂಬಿಮಾಸರ ಗಾವುಂಡರ ಮಗ ಮಳ್ಳಿಗಾವುಂಡರ ಮಗಳು ಲಕ್ಷ್ಮಮ್ಮ ಗಾವುಂಡಿ ಸರಕ್ಕನೂರಿನಲ್ಲಿ ಶತ್ರುಗಳ ವಿರುದ್ದ ಹೋರಾಡಿ ಎಮ್ಮೆ,

---

೧೨೪ ಕೆ.ಧನಪಾಲ್ & ಕೆ.ಆರ್.ನರಸಿಂಹನ್ :- ಹೆಸರುಘಟ್ಟದ ಅಪ್ರಕಟಿತ ಶಾಸನ, ಇ.ದ.ಸಂ.೩೩, ಪು.ಸಂ-೪೭.

೧೨೫ ಎ.ಕ-೯, ಹೊ.ತಾ.೧೦, ಕ್ರಿ.ಶ.೧೦೨೩, ಕನ್ನಡ, ಜೋಡಿ ದಳಸಿಗೆರೆ.

೧೨೬ ಎ.ಕ-೯, ಅನುಬಂಧ, ಹೊ.ತಾ.೧೭೯, ಕ್ರಿ.ಶ.೧೦೨೮, ಹಳಕನ್ನಡ, ವಾಗಟ.

೧೨೭ ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಕನ್ನಡ, ಸೋಲದೇವನ ಹಳ್ಳಿ.

೧೨೮ ಎ.ಕ-೯, ನೆ.ತಾ,೩೭, ಕ್ರಿ.ಶ.೧೦೩೩, ತಮಿಳು, ಆಯಿಗಂಡ ಪುರ.

೧೨೯ ಎ.ಕ-೯, ನೆ.ತಾ.೭ಎ, ಕ್ರಿ.ಶ.೧೦೩೮, ತಮಿಳು, ಆಬೂರು.

೧೩೦ ಎ.ಕ-೯, ನೆ.ತಾ.೬೨ಎ, ಕ್ರಿ.ಶ.೧೦೪೦, ತಮಿಳು, ಕೋಡಿಪಾಳ್ಯ.

ಹಸುಗಳನ್ನು ಕಾಪಾಡಿ ಸತ್ತು ಸ್ವರ್ಗಸ್ಥವಾದರು[೧೩೧]. ಹಾಗೆಯೇ ಗಾವುಂಡರ ಮಗಳು ಸಹ ಗಾವುಂಡಿಯಾಗುತಿದ್ದಳು ಎಂಬುದಕ್ಕೆ ಸಹ ಈ ಶಾಸನ ಉದಾಹರಣೆಯಾಗಿದೆ. ೩೩ನೇ ಆಳ್ವಿಕೆಯಾವಧಿಯಲ್ಲಿ ಕ್ರಿ.ಶ.೧೦೪೩ರಲ್ಲಿ ದಡಿಗೈವಲಿ ಅಲಿಯಾಸ್ ವಿಕ್ರಮ ಚೋಳ ಮಂಡಲದ ಸಣ್ಣೈನಾಡಿನ ಗಾವುಂಡನಾದ ಪೆಮ್ಮಡಿಗಾವುಂಡನ ಮಗ ರಾಜ ರಾಜ ವೆಲನು ಪಟ್ಟಂದೂರಿನಲ್ಲಿ ಏರಿ ಕಟ್ಟಿಸಿ, ೩ ತೂಬುಗಳನ್ನು ನಿರ್ಮಿಸಿ, ದುರ್ಗೆ, ಗೆತ್ತಿರಪಾಲರು, ಗಣಪತಿ ವಿಗ್ರಹ ಸ್ಥಾಪನೆ ಮಾಡಿ, ಕಾಣಿಕೆಯನ್ನು ಮತ್ತು ೭೫೦ ಖಂಡುಗ ಗದ್ದೆಯನ್ನು ದಾನ ನೀಡುತ್ತಾರೆ[೧೩೨].

## ರಾಜಾಧಿರಾಜ (ಕ್ರಿ.ಶ.೧೦೪೪–೫೪)

ರಾಜೇಂದ್ರ ಚೋಳನ ನಂತರ ಅವನ ಮಗನಾದ ರಾಜಾಧಿರಾಜನು ತನ್ನ ಆಳ್ವಿಕೆಯಾವಧಿಯಲ್ಲಿ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವಾರು ದೇವಾಲಯಗಳನ್ನು ನಿರ್ಮಿಸಿ, ದಾನ ದತ್ತಿಗಳನ್ನು ನೀಡಿರುವುದನ್ನು ಶಾಸನಗಳಲ್ಲಿ ಕಾಣಬಹುದು. ೨೯ ವರ್ಷದ ಆಳ್ವಿಕೆಯಲ್ಲಿ ವಿಕ್ರಮ ಚೋಳಮಂಡಲದ ಸಣ್ಣೆನಾಡ ಗಾವುಂಡನಾದ ಜಯಗೊಂಡ ಚೋಳವೇಲನು ದೇವರ ಹಬ್ಬಕ್ಕೆ ಕ್ರಿ.ಶ.೧೦೪೬ ರಲ್ಲಿ ಚಾಮುಂಡೇಶ್ವರಿಗೆ ದಾನ ನೀಡಿದನು[೧೩೩]. ತೆರಿಗೆಗಳನ್ನು ವಸೂಲಿ ಮಾಡಲು ರಾಜನು ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಆದರೆ ಕೆಲವೊಮ್ಮೆ ಸೇನಾಧಿಪತಿಯೇ ತೆರಿಗೆ ವಸೂಲಿ ಮಾಡುವುದನ್ನು ೩೩ನೇ ಆಳ್ವಿಕೆಯಲ್ಲಿ ಕ್ರಿ.ಶ.೧೦೫೦ರಲ್ಲಿ ಸೇನಾಧಿಪತಿಯಾದ ಜಯಗೊಂಡ ಚೋಳವನ ಕೊವರೈನು ವಿಕ್ರಮ ಚೋಳಮಂಡಲದ ಮಣ್ಣೆನಾಡಿನಲ್ಲಿ ಬೆಳೆಗಳ ತೆರಿಗೆಯನ್ನು ಪಡೆಯುತ್ತಿದ್ದನು[೧೩೪]. ಕ್ರಿ.ಶ.೧೦೫೦ ರಲ್ಲಿ ಸೇನಾಧಿಪತಿ ರಾಜೇಂದ್ರ ಚೋಳ ಬ್ರಹ್ಮಮಾರಯರಿಗೆ ದಡಿಗೆವಲಿ ಎಂಬ ವಿಕ್ರಮ ಚೋಳಮಂಡಲದ ಸಣ್ಣೆನಾಡಿನಲ್ಲಿ ಬೆಳೆಯುವ ಬೆಳೆಗಳ ತೆರಿಗೆ ಭಾಗದಲ್ಲಿ ಜೀವನ ಪೂರ್ತಿ ಅನುಭವಿಸಿಕೊಂಡು ಇರು ಎಂದು ಅನುಮತಿ ನೀಡಿದರು[೧೩೫]. ಮಣ್ಣೆನಾಡು, ಸಣ್ಣೆನಾಡು, ವಿಕ್ರಮಚೋಳ ಮಂಡಲದಲ್ಲಿ ಬರುವ ನಾಡುಗಳಾಗಿದ್ದು, ಒಂದೊಂದು ನಾಡಿಗೆ ಒಬ್ಬೊಬ್ಬ ಸೇನಾಧಿಪತಿಗಳನ್ನು ನೇಮಿಸಿರುವುದನ್ನು ಕಾಣಬಹುದು. ಕ್ರಿ.ಶ.೧೦೫೦ರಲ್ಲಿ ವೀರ ಪಾಂಡಿಯನ್ ತಲೆ ಕಡಿದ ಜಯಕ್ಕಾಗಿ ಆಯಿಗಂಡಪುರ ದೇವಾಲಯಕ್ಕೆ ವಿಕ್ರಮ ಚೋಳ ಮಂಡಲದ ಕುಕ್ಕನೂರು ಗಾವುಂಡನಾದ ರಾಜಾಧಿರಾಜ ವೇಲನು[೧೩೬], ಕ್ರಿ.ಶ.೧೦೫೧ ರಲ್ಲಿ ದಳಗವಾಡಿಯಾದ ವಿಕ್ರಮ ಚೋಳಮಂಡಲದ ಮಣ್ಣೆನಾಡಿನಲ್ಲಿ ದುಗ್ಗಯ್ಯ

[೧೩೧] ಎ.ಕ-೯, ಹೊ.ತಾ.೧೧, ಕ್ರಿ.ಶ.೧೦೪೧, ಕನ್ನಡ, (ತುರುಗೋಳ್) ಸಿದ್ಧನಹಳ್ಳಿ.
[೧೩೨] ಎ.ಕ-೯, ಹೊ.ತಾ.೧೪೨, ಕ್ರಿ.ಶ.೧೦೪೩, ಕಾಡುಗೋಡಿ.
[೧೩೩] ಎ.ಕ-೯, ದೇ.ತಾ.೭೫, ಕ್ರಿ.ಶ.೧೦೪೬, ತಮಿಳು, ಗಂಗವಾರ.
[೧೩೪] ಎ.ಕ-೯, ನೆ.ತಾ.೨೫, ಕ್ರಿ.ಶ.೧೦೫೦, ತಮಿಳು, ಮಂಡಿಗೆರೆ
[೧೩೫] ಎ.ಕ-೯, ದೇ.ತಾ.೭೬, ಕ್ರಿ.ಶ.೧೦೫೦, ತಮಿಳು, ಗಂಗವಾರ.
[೧೩೬] ಎ.ಕ-೯, ನೆ.ತಾ,೩೮ಸಿ, ಕ್ರಿ.ಶ.೧೦೫೦, ತಮಿಳು, ಆಯಿಗಂಡ ಪುರ.

ಗಾವುಂಡರ ಮಕ್ಕಳು ಒದೆಯುವ ಮಾತ್ತಣ್ಣ ವೇಳರು, ಗಂಗೆಗೊಂಡ ಚೋಳಗಾವುಂಡನು, ದೋರಯ್ಯ ಈ ಮೂವರು ಉರಳಿಗಾಗಿ ಕಾದಿ ಸತ್ತು ಸ್ವರ್ಗಸ್ಥರಾದ ಕುಟುಂಬದವರಿಗೆ ಮಣ್ಣೆನಾಡಿನ ಮುಡುಗೆರೆಯ ಕೆಳಗೆ ಖಂಡುಗ ಗದ್ದೆಯನ್ನು ಎಲ್ಲ ಕಾಲಕ್ಕೂ ದಾನವಾಗಿ ಕೊಟ್ಟರು[೧೩೭].

## ರಾಜ ಮಹೇಂದ್ರ

ರಾಜಾಧಿರಾಜ ಚೋಳನ ನಂತರ ಅವನ ಸಹೋದರ ೨ನೇ ರಾಜೇಂದ್ರ ಅಧಿಕಾರಕ್ಕೆ ಬಂದನು. ಆದರೆ ಇವನ ಆಳ್ವಿಕೆಯ ಯಾವ ಆಧಾರಗಳು ಜಿಲ್ಲೆಯ ವ್ಯಾಪ್ತಿಯಲ್ಲಿ ದೊರೆತಿಲ್ಲ. ೨ನೇ ರಾಜೇಂದ್ರನ ನಂತರ ಅವನ ಮಗ ರಾಜ ಮಹೇಂದ್ರನು ಅಧಿಕಾರಕ್ಕೆ ಬಂದನು. ಕ್ರಿ.ಶ.೧೦೬೫ರಲ್ಲಿ ೨ನೇ ವರ್ಷದ ಆಳ್ವಿಕೆಯಲ್ಲಿ ವಿಜೈ ರಾಜೇಂದ ಮಂಡಲದ ಕೈವಾರನಾಡಿನ ನೊಂದುಕೊಲ್ಲಿಯಲ್ಲಿನ ಸೋಮೇಶ್ವರ ಒಡೆಯ ದೇವಸ್ಥಾನಕ್ಕೆ ದೇವಸ್ಥಾನದ ನಿರ್ವಹಣೆ, ಅರ್ಚನೆ, ಭೋಗ ಇತ್ಯಾದಿಗಳಿಗೆ ೧೫೦ ಕುಳ ಭೂಮಿಯನ್ನು ಸೋಮೇಶ್ವರ ದೇವಸ್ಥಾನದ ಕೆರೆಯ ಕೆಳಗೆ ದಾನ ನೀಡಿದರು[೧೩೮].

## ವೀರ ರಾಜೇಂದ್ರ (ಕ್ರಿ.ಶ.೧೦೬೯-೭೦)

೧ನೇ ಮಹೇಂದ್ರನ ನಂತರ ಚಿಕ್ಕಪ್ಪನಾದ ವೀರ ರಾಜೇಂದ್ರನು ಅಧಿಕಾರಕ್ಕೆ ಬಂದನು. ಒಬ್ಬ ರಾಜನು ಮತ್ತೊಂದು ರಾಜ ಮನೆತನದ ಮೇಲೆ ದಾಳಿ ಮಾಡಿ ವಿಜಯವನ್ನು ಸಾಧಿಸಿದಾಗ ಅಲ್ಲಿಯ ಮನೆತನವನ್ನು ಯಾವ ರೀತಿ ಶೋಷಣೆ ಮಾಡುತ್ತಾರೆ ಎಂಬುದನ್ನು ಕ್ರಿ.ಶ.೧೦೬೫ರಲ್ಲಿ ವೀರ ರಾಜೇಂದ್ರನು ಚಾಲುಕ್ಯ ದೊರೆ ಅಹವಮಲ್ಲನನ್ನು ಸೋಲಿಸಿ, ಆತನ ರಾಣಿಯರನ್ನು, ಆಯುಧಗಳನ್ನು, ವಜ್ರ ವೈಡೂರ್ಯವನ್ನು ವಶಪಡಿಸಿಕೊಂಡನು[೧೩೯]. ಈ ಶಾಸನದಲ್ಲಿ ಬಹು ಮುಖ್ಯವಾಗಿ ವೀರತನದ ಜೊತೆ ಕೌರ್ಯತನವನ್ನು ಕಾಣಬಹುದು. ಕ್ರಿ.ಶ.೧೦೬೭ ರಲ್ಲಿ ೫ನೇ ವರ್ಷದ ಆಳ್ವಿಕೆಯ ಅವಧಿಯಲ್ಲಿ ವಿಕ್ರಮ ಚೋಳಮಂಡಲದ ಸಣ್ಣೆನಾಡಿನ ತಿಪ್ಪೂರಗಾವುಂಡರ ಪತ್ನಿ ಸೊಮಕ್ಕನೂ ಬೆಂಕಿಯನ್ನು ಪ್ರವೇಶಿಸಿದಳು[೧೪೦].

## ಒಂದನೇ ಕುಲೋತ್ತುಂಗ (ಕ್ರಿ.ಶ.೧೦೭೦-೧೧೨೨)

ವೀರ ರಾಜೇಂದ್ರನ ನಂತರ ಒಂದನೇ ಕುಲೋತ್ತುಂಗನು ಕ್ರಿ.ಶ.೧೦೭೦ ರಲ್ಲಿ ಚೋಳ ಸಾಮ್ರಾಜ್ಯದ ಅಧಿಕಾರ ಚುಕ್ಕಾಣಿ ಹಿಡಿದನು. ಹೆಚ್ಚು ಕಾಲ ಆಳ್ವಿಕೆ ನಡೆಸಿದ ಕುಲೋತ್ತುಂಗನು ದೇವಾಲಯಕ್ಕೆ ದಾನ ನೀಡಿರುವ ಹಲವಾರು ಶಾಸನಗಳನ್ನು ಜಿಲ್ಲೆಯ ವ್ಯಾಪ್ತಿಯಲ್ಲಿ ಕಾಣಬಹುದು.

---

[೧೩೭] ಎ.ಕ-೯, ಅನುಬಂಧ, ನೆ.ತಾ.೧೮೪, ಕ್ರಿ.ಶ.೧೦೫೧, ಕನ್ನಡ, ವರನಾಯಕನಹಳ್ಳಿ.

[೧೩೮] ಎ.ಕ-೯, ಹೊ.ತಾ.೩೬, ಕ್ರಿ.ಶ.೧೦೬೫, ತಮಿಳು, ಹೊಸಹಳ್ಳಿ.

[೧೩೯] ಎ.ಕ-೯, ನೆ.ತಾ.೨೪, ಕ್ರಿ.ಶ.೧೦೬೫, ತಮಿಳು, ಹುರುಳಿಚಿಕ್ಕನಹಳ್ಳಿ.

[೧೪೦] ಎ.ಕ-೯, ದೇ.ತಾ.೧೪, ಕ್ರಿ.ಶ.೧೦೬೭, ತಮಿಳು, (ಮಾಸ್ತಿಗಲ್ಲು) ಬ್ಯಾಡರಹಳ್ಳಿ.

ಇವನ ಆಳ್ವಿಕೆಯ ಜಿಲ್ಲಾ ವ್ಯಾಪ್ತಿಯಲ್ಲಿನ ಮೊದಲ ಶಾಸನ ಹೊಸಕೋಟೆ ತಾಲ್ಲೂಕಿನ ಬೇಚಿರಾಚ್ ಮಾರೇನಹಳ್ಳಿಯ ಕ್ರಿ.ಶ.೧೦೭೫ ರಲ್ಲಿ ನಿಗರಿಲಿ ಚೋಳಮಂಡಲದ ಕೈವಾರನಾಡಿನ ನಿಲತ್ತೂರ್, ಪೆರುಬಳ್ಳಾಪುರದ ಶ್ರೀ ರಾಮೇಶ್ವರ ಒಡೆಯ ಮಹಾದೇವರಿಗೆ, ಶಿವ ಬ್ರಾಹ್ಮಣರಿಗೆ ದೊಡ್ಡಕೆರೆ ಕೆಳಗಿನ ಭೂಮಿಯಲ್ಲಿ[೧೪೧], ನೆಲಮಂಗಲ ತಾಲ್ಲೂಕಿನ ಬಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯವನ್ನು ಪೂರ್ತಿ ಕಟ್ಟಿಸಿದನು[೧೪೨]. ೪೧ನೇ ಆಳ್ವಿಕೆಯಾದ ಕ್ರಿ.ಶ.೧೧೧೦ ರಲ್ಲಿ ರಾಜ ರಾಜ ಪಾಂಡಿನಾಡು, ಅರಿಕೇಸರಿ ವಲನಾಡು, ಸಮವರ ನಲ್ಲೂರು ಒಡೆಯನಾದ ರಾಜರಾಜನು ಕುಲೋತ್ತುಂಗ ಚೋಳ ಎಂಬುವ ಕುಲೋತ್ತುಂಗ ಚೋಳ ಆದಿಮುರ್ಕ ಚೆಂಗಿರೈನು ವಿಕ್ರಮ ಚೋಳಮಂಡಲದ ಕುಕ್ಕನೂರು ನಾಡಿನ ವಿನ್ನಮಂಗಲದ ಮುಕ್ತೀಶ್ವರ ಒಡೆಯ ಮಹಾದೇವರಿಗೆ ಈ ನಾಡಿನ ನಕ್ಕೂರುನಲ್ಲಿನ ಗದ್ದೆ ಭೂಮಿ, ಬೆಳೆಗಳ ತೆರಿಗೆಗಳು ಜೊತೆಗೆ ಕುಮಾರಿ ತೆರಿಗೆ, ಹತ್ತಿ, ಹಸು, ಮನೆ ಮತ್ತು ಇತರೆ ತೆರಿಗೆಗಳನ್ನು ದೇವರಿಗೆ ಪೂಜೆ, ಪುನಸ್ಕಾರ, ದೀಪಾರಾಧನೆ, ನೈವೇದ್ಯವು ನಡೆಯಲೆಂದು ದೇವಧನವನ್ನು ನೀಡಿದನು[೧೪೩]. ೪೩ನೇ ಆಳ್ವಿಕೆಯಲ್ಲಿ ರಾಜ ರಾಜನ್ ಪಾಂಡಿನಾಡು, ಅರಿಕೇಸರಿ ವಳನಾಡಿನ ಸೆಯವರ ನಲ್ಲೂರ ಒಡೆಯನಾದ ರಾಜರಾಜನ್ ಕುಲೋತ್ತುಂಗ ಚೋಳ ಆದಿರ್ಮುಖ ಚೆಂಗಿರೈನು, ಕ್ರಿ.ಶ.೧೧೧೩ ರಲ್ಲಿ ವೆಲಪಲಹಳ್ಳಿಯ ಚತುಸ್ಸೀಮೆಯೊಳಗಣ ಗದ್ದೆ ಭೂಮಿಯನ್ನು ವಿಕ್ರಮ ಚೋಳಮಂಡಲದ ಕುಕ್ಕನೂರು ನಾಡಿನ ಪೆರಿಯಮತ್ತಕೂರ ಐವರ ಕಂಡೀಶ್ವರ ಒಡೆಯ ಮಹಾದೇವರಿಗೆ ಪೂಜೆ ಪುನಸ್ಕಾರ ಇತ್ಯಾದಿಗಳಾಗಿ ದೇವಧನವನ್ನು ನೀಡಿದನು[೧೪೪]. ಕ್ರಿ.ಶ.೧೧೫೦ರಲ್ಲಿ ಕುಲೋತ್ತುಂಗ ಚೋಳ ಸಣ್ಣೆನಾಡಿನ ಕುಲರಾಜರು ರಾಜಾಧಿರಾಜ, ವೆಂಗಿಸ್ವರ ಒಡೆಯ ದೇವಸ್ಥಾನಕ್ಕೆ ಭೂ ಧನವಾಗಿ ೫೦೦ ಕಲಿಯಂ ಕೊಟ್ಟರು[೧೪೫]. ಹೀಗೆ ಚೋಳರ ಅಧಿಪತ್ಯವನ್ನು ಕ್ರಿ.ಶ.೧೧೧೫ ರಲ್ಲಿ ಹೊಯ್ಸಳ ವಿಷ್ಣುವರ್ಧನನು ಚೋಳರನ್ನು ಸೋಲಿಸುವುದರೊಂದಿಗೆ ಚೋಳರ ಆಡಳಿತಕ್ಕೆ ಕಡಿವಾಣ ಹಾಕಿದರು.

## ೩.೫ ಹೊಯ್ಸಳರು

ತಲಕಾಡಿನ ಗಂಗರಂತೆ ಹೊಯ್ಸಳರು ಮುನ್ನೂರು ವರ್ಷಗಳ ಕಾಲ ಸೊಸೆಯೂರು, ದ್ವಾರಸಮುದ್ರ, ಕಣ್ಣಾನೂರು, ಉಣಾಮಲೆಪಟ್ಟಣ, ಹೊಸಪಟ್ಟಣ ಅಥವಾ ವಿರೂಪಾಕ್ಷಪುರ ಮುಂತಾದ ಪ್ರದೇಶಗಳನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಹೊಯ್ಸಳರು ತಾವು ಯದುವಂಶಕ್ಕೆ

---

೧೪೧ ಎ.ಕ-೯, ಹೊ.ತಾ.೧೦೧, ಕ್ರಿ.ಶ.೧೦೭೫, ತಮಿಳು, ಮಾರೇನಹಳ್ಳಿ.

೧೪೨ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೦೭.

೧೪೩ ಎ.ಕ-೯, ನೆ.ತಾ.೩, ಕ್ರಿ.ಶ.೧೧೧೦, ತಮಿಳು, ಬಿನ್ನಮಂಗಲ.

೧೪೪ ಎ.ಕ–೯, ನೆ.ತಾ,೩ಲಎ, ಕ್ರಿ.ಶ.೧೧೧೩, ತಮಿಳು, ಆಯಿಗಂಡ ಪುರ.

೧೪೫ ಎ.ಕ-೯, ಹೊ.ತಾ.೧೪೫, ಕ್ರಿ.ಶ.೧೧೫೦, ತಮಿಳು, ಕಾಡುಗೋಡಿ.

ಸೇರಿದವರು, ತಮ್ಮನ್ನು ದ್ವಾರಾವತೀಪುರಾಧೀಶ್ವರರೆಂದು ಕರೆದು ಕೊಂಡಿದ್ದಾರೆ. ಜೊತೆಗೆ ಮಲೆಪರೊಳ್‌ಗಂಡ ಎಂಬ ಹೆಮ್ಮೆಯ ಬಿರುದನ್ನು[೧೪೬] ಹೊಂದಿದ್ದರು. ಹೊಯ್ಸಳರ ಮೂಲದ ಬಗ್ಗೆ ಹಲವಾರು ಕತೆಗಳಿದ್ದು, ಅದರಲ್ಲಿ ಪ್ರಮುಖವಾದ ಕತೆಯೆಂದರೆ ಚಿಕ್ಕಮಗಳೂರು ಜಿಲ್ಲೆಯ ಮೂಡಗೆರೆ ತಾಲ್ಲೂಕಿನ ಶಶಕಪುರ (ಸೊಸೆವೂರು) ದ ತರುಣನಾದ ಸಳನು ತನ್ನ ಕುಲದೇವತೆ ವಾಸಂತಿಕಾದೇವಿಯ ಪೂಜೆಗೆ ಹೋಗುತ್ತಿರಲು ದೇವಾಲಯದ ಆವರಣದೊಳಗೆ ಹುಲಿಯೊಂದು ನುಗ್ಗಿದ್ದು ಅಲ್ಲಿದ್ದ ಜೈನ ಮುನಿಯು ತನ್ನ ಶಿಷ್ಯನಾದ ಸಳನಿಗೆ ಪೊಯ್‌ಸಳ (ಸಳನೇ ಹೊಡಿ) ಎಂದು ಆದೇಶ ನೀಡಲು, ಸಳನು ಹುಲಿಯನ್ನು ಹೊಡೆದು ಕೊಂದ[೧೪೭]. ಇದರಿಂದಾಗಿ ಈ ವಂಶಕ್ಕೆ ಹೊಯ್ಸಳ (ಪೊಯ್ಸಳ) ಎಂಬ ಹೆಸರು ಬರಲು ಕಾರಣವಾಯಿತು. ಹಾಗೆಯೇ ಈ ಸಳನ ಕತೆಯು ಕ್ರಿ.ಶ.೧೧೧೭ರ ಬೇಲೂರು ಶಾಸನದಲ್ಲಿ ಮತ್ತು ಕ್ರಿ.ಶ.೧೨೦೮ರ ಒಂದು ಶಾಸನದಲ್ಲಿ ಸಳನನ್ನು ಆಜ್ಞಾಪಿಸಿದ ಜೈನಮುನಿಯ ಹೆಸರು ಸುದತ್ತಾಚಾರ್ಯ ಎಂದು, ಹಾಗೂ ಹೊಯ್ಸಳ ಮೂಲ ಪುರುಷನಾದ ಸಳನ ಮೂಲಸ್ಥಳ ಮೂಡುಗೆರೆ ತಾಲ್ಲೂಕಿನ ಅಂಗಡಿ ಎಂದು ಬಿ.ಎಲ್.ರೈಸ್‌ರವರು ಅಭಿಪ್ರಾಯ ಪಟ್ಟಿದ್ದಾರೆ[೧೪೮]. ಹೊಯ್ಸಳರು ಮಲೆನಾಡಿನ ಬಿಲ್ಲ ಅಥಾವ ಬೇಡರಾಗಿದ್ದು ಮುಂದೆ ಜೈನನಾಗಿರಬಹುದು. ಒಟ್ಟಿನಲ್ಲಿ ಹೊಯ್ಸಳ ವಂಶದ ಆರಂಭವು ಅಸ್ಪಷ್ಟವಾಗಿದ್ದು, ಸಳನು ಐತಿಹಾಸಿಕ ವ್ಯಕ್ತಿಯೇ ಎಂಬುದು ಸಂಶಯಸ್ಪದ. ಬಹುಶಃ ಕ್ರಿ.ಶ.೧೧೧೬ರಲ್ಲಿ ಹೊಯ್ಸಳರು ಚೋಳರ ವಿರುದ್ಧ ಹೋರಾಟ ನಡೆಸಿಗಳಿಸಿದ ವಿಜಯವೇ ಹುಲಿಯನ್ನ ಸಳನು ಕೊಂದ ಕತೆಯ ಹುಟ್ಟಿಗೆ ಕಾರಣವಾಗಿರ ಬೇಕು. ಹುಲಿ ಚೋಳರ ಲಾಂಛನವಾಗಿದ್ದು, ಈ ಯುದ್ಧದಲ್ಲಿ ಚೋಳನ ಕೊಂದಿದ್ದರ ಸಮನಾರ್ಥವಾಗಿ ಹುಲಿಯನ್ನು ಕೊಲ್ಲುತ್ತಿರುವ ಚಿತ್ರವೇ ಹೊಯ್ಸಳರ ಲಾಂಛನವಾಗಿರಬೇಕು.

ಹೊಯ್ಸಳರು ಮಲೆನಾಡಿನಲ್ಲಿ ಆಳುತಿದ್ದು, ಗಂಗರ ಮಾಂಡಲಿಕರಾಗಿದ್ದು, ಮಲಪರೊಳ್‌ಗಂಡ ಎಂಬ ಬಿರುದನ್ನು ಹೋಂದಿದ್ದರು. ಪ್ರಾರಂಭದಲ್ಲಿ ಚಿಕ್ಕ ಮನೆತನವಾಗಿದ್ದ ಹೊಯ್ಸಳರು ಗಂಗರ ಸಾಮಂತರಾಗಿದ್ದು. ನಂತರ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಮುಂದೆ ತುಂಗಭದ್ರಾ ನದಿಯನ್ನು ದಾಟಿ ಲಕ್ಕುಂಡಿಯವರೆಗೂ ಸಾಮ್ರಜ್ಯ ವಿಸ್ತಾರಣೆ ಮಾಡಿ ಚಕ್ರವರ್ತಿಗಳಾದರು. ಹೊಯ್ಸಳ ಮನೆತನದ ಪ್ರಾರಂಭಿಕ ಅರಸು ಸಳನ ಉತ್ತರಾಧಿಕಾರಿಯಾಗಿ ಬಂದ ಒಂದನೇಯ ವಿನಯಾದಿತ್ಯ (ಕ್ರಿ.ಶ.೧೦೦೬–೧೦೨೨) ನ ನಂತರ ಮಗನಾದ ನೃಪಕಾಪನು (ಕ್ರಿ.ಶ.೧೦೨೨–೧೦೪೭) ಚಾಲುಕ್ಯರ

[೧೪೬] ಎ.ಕ-೯, ಮಾ.ತಾ.೧೯, ಕ್ರಿ.ಶ.೧೩೪೧, ಕಲ್ಯಾ.

[೧೪೭] ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಸಂಪುಟ-೧, ಅಧ್ಯಾಯ-೨, ಪು.ಸಂ-೨೦೮.

[೧೪೮] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೧

ಮಾಂಡಲಿಕನಾಗಿದ್ದು[೧೪೯], ಪೆರ್ಮಾಡಿ ಎಂಬ ಗಂಗರ ವಿಶಿಷ್ಟ ಬಿರುದನ್ನು ಹೊಂದಿದ್ದು, ಗಂಗ ಹೊಯ್ಸಳ ಸಂಬಂಧಕ್ಕೆ ಇದು ಸೂಚಕವೆಂದು ಪ್ರೋ.ಬಿ.ಎನ್.ಕೃಷ್ಣಸ್ವಾಮಿಅಯ್ಯಂಗಾರ್ ಹೇಳಿದ್ದಾರೆ[೧೫೦]. ನೃಪಕಾಮನ ಮಗನು ಇಮ್ಮಡಿ ವಿನಯಾದಿತ್ಯನು (ಕ್ರಿ.ಶ.೧೦೪೭–೧೧೦೦) ಹೊಯಿಸಳರ ಪ್ರಾರಂಭದ ರಾಜಧಾನಿಯಾದ ಸೊಸೆವೂರುನಲ್ಲಿ ಜನಿಸಿದ. ತನ್ನ ಸಮಕಾಲೀನರಾದ ಚಾಲುಕ್ಯ ಒಂದನೇ ಸೋಮೇಶ್ವರನಿಗೆ ತನ್ನ ಸಹೋದರಿ ಹೊಯಿಸಳದೇವಿಯನ್ನು ವಿವಾಹ ಮಾಡಿದನು. ಚಾಲುಕ್ಯರ ಸಾಮಂತನಾಗಿ, ದಂಡಯಾತ್ರೆಯಲ್ಲಿ ಪಾಲ್ಗೊಂಡು ಆರನೇಯ ವಿಕ್ರಮಾದಿತ್ಯನಂತೆ ತ್ರಿಭುವನಮಲ್ಲ ಎಂಬ ಉಪನಾಮವನ್ನು ಇಟ್ಟುಕೊಂಡು ದೀರ್ಘಕಾಲ ಆಳ್ವಿಕೆ ನಡೆಸಿದನು. ನಂತರ ಇಮ್ಮಡಿ ವಿನಾಯಾದಿತ್ಯ ಮತ್ತು ಕಳೆಯಬ್ಬರಸಿಯ ಮಗನಾದ ಎರೆಯಂಗನು[೧೫೧] (ಕ್ರಿ.ಶ.೧೦೬೩–೧೯೫) ಸೊಸೆವೂರಿಂದ ಬೇಲೂರಿಗೆ ರಾಜಧಾನಿಯನ್ನು ವರ್ಗಾಹಿಸಿದನು[೧೫೨]. ಎರೆಯಂಗನ ಮರಣದ ನಂತರ ಹಿರಿಯ ಮಗನಾದ ಒಂದನೇಯ ಬಲ್ಲಾಳ (ಕ್ರಿ.ಶ.೧೧೦೦–೧೦೦೬) ನು ಕ್ರಿ.ಶ.೧೧೦೦ರಲ್ಲಿ ಪಟ್ಟವೇರಿ ದೀರ್ಘಕಾಲ ಅರಸನಾಗಿರಲಿಲ್ಲ[೧೫೩]. ಒಂದನೇಯ ವಿನಯಾದಿತ್ಯ, ನೃಪಕಾಮ, ಇಮ್ಮಡಿ ವಿನಯಾದಿತ್ಯ, ಎರೆಯಂಗ, ಒಂದನೇ ಬಲ್ಲಾಳನ ವರೆಗಿನ ಯಾವುದೇ ಹೊಯ್ಸಳ ಶಾಸನಗಳು ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿಲ್ಲ. ಹೊಯ್ಸಳ ಮನೆತನದ ಶಾಸನಗಳು ಕ್ರಿ.ಶ.೧೦೦೬ ರಿಂದ ಪ್ರಾರಂಭವಾದರೆ ಗ್ರಾಮಾಂತರ ಜಿಲ್ಲೆಯ ಭಾಗದಲ್ಲಿ ಕ್ರಿ.ಶ.೧೧೧೫ರ ನೆಲಮಂಗಲ ತಾಲ್ಲೂಕಿನ ನಿಜಗಲ್ಲು ಬೆಟ್ಟದ ಮಲ್ಲಿಕಾರ್ಜುನ ದೇವಸ್ಥಾನದ ಬಾಗಿಲ ಬಳಿಯ ತಮಿಳು ಭಾಷೆಯ ವಿಷ್ಣುವರ್ಧನ ಶಾಸನದಿಂದ ಪ್ರಾರಂಭವಾಗಿ, ಕ್ರಿ.ಶ.೧೩೪೩ರ ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರದ ತಮಿಳು ಭಾಷೆಯ ಬಲ್ಲಾಳ ದೇವನ ಶಾಸನದವರೆಗೆ ಸುಮಾರು ೨೨೮ ವರ್ಷಕಾಲದೊಳಗಿನ ಶಾಸನಗಳು ದೊರಕಿದ್ದು, ಕ್ರಿ.ಶ.೧೧೫೨ರ ನರಸಿಂಹದೇವರ್ ತಮಿಳು ಶಾಸನದ ನಂತರ ೪೪ ವರ್ಷಗಳ ಕಾಲ ಮತ್ತು ಕ್ರಿ.ಶ.೧೧೯೬ರ ಬಲ್ಲಾಳ ದೇವನ ಕನ್ನಡ ಶಾಸನದಿಂದ ಪ್ರಾರಂಭವಾಗಿ ಕ್ರಿ.ಶ.೧೨೬೯ರ ನರಸಿಂಹದೇವರಸರ ಕನ್ನಡ ಶಾಸನದ ಮದ್ಯದಲ್ಲಿ ಸುಮಾರು ೭೦ ವರ್ಷಗಳ ಕಾಲದಲ್ಲಿ ಯಾವುದೇ ಕನ್ನಡ ಶಾಸನಗಳು ಕಾಣಿಸುವುದಿಲ್ಲ. ವೀರಗಂಗ, ನರಸಿಂಹದೇವರ್, ರಾಮನಾಥದೇವರ್, ೩ನೇ ಬಲ್ಲಾಳದೇವ ಮುಂತಾದ ಆಳರಸರ ಸುಮಾರು ೨೦೦ ಶಾಸನಗಳು ಹಾಗೂ ಸಾಮಂತರಾದ ರಾಜರಾಜ ಕರ್ಕಡ ಮಾರಾಯರ್,

೧೪೯ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೨೩.

೧೫೦ ಡಾ.ಸೂರ್ಯನಾಥ ಕಾಮತ್:- ಹೊಯ್ಸಳರು, ಅವಲೋಕನ ಕರ್ನಾಟಕ ಪರಂಪರೆಯ ಸಮೀಕ್ಷೆ, ಪು.ಸಂ-೬೮.

೧೫೧ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೨೩.

೧೫೨ ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಸಂಪುಟ-೧, ಅಧ್ಯಾಯ-೨, ಪು.ಸಂ-೨೦೯.

೧೫೩ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೨೩.

ಗಂಗಪೆರುಮಾಳ್, ಚೊಕ್ಕನಾಯನ್, ವಿಲ್ಲಗಾವುಂಡ, ಮಹಾಪ್ರಧಾನ ಪೊನ್ನಣ್ಣ ಮುಂತಾದವರನ್ನ ಉಲ್ಲೇಖಗಳನ್ನು ಕಾಣಬಹುದು.

ಹೊಯ್ಸಳರ ಸಾಕಷ್ಟು ಶಾಸನಗಳು ಚೋಳರ ಶಾಸನಗಳ ಸ್ವರೂಪದಂತೆ ಶಾಸನಗಳನ್ನು ದೇವಾಲಯದ ಅಧಿಸ್ಥಾನದ ಮೇಲೆ, ಬಿತ್ತಿಯ ಮೇಲೆ, ಕಂಬದ ಮೇಲೆ, ಚಪ್ಪಡಿಯ ಮೇಲೆ, ಹುಟ್ಟು ಬಂಡೆಗಳ ಮೇಲೆ ಕೆತ್ತಲಾಗಿದೆ. ಹೊಯ್ಸಳರ ಶಾಸನಗಳಲ್ಲಿ ಆರಂಭದಲ್ಲಿ ದೇವತಾ ಶ್ಲೋಕ, ಶಕವರುಷ, ಕಾಲ, ರಾಜನ ಬಿರುದುಗಳು, ಮಾಂಡಲಿಕರು ಅಥವಾ ಅಧಿಕಾರಿಗಳು, ನಾಡಪ್ರಭುಗಳು ಅಥವಾ ಗಾವುಂಡರುಗಳ ಉಲ್ಲೇಖ, ದಾನದ ವಿವರಗಳು, ಶಾಪಶಯ ಹೀಗೆ ಶಾಸನಗಳು ಗದ್ಯ ಪ್ರಯೋಗವಾಗಿರುತ್ತದೆ.

ಹೊಯ್ಸಳರ ಶಾಸನಗಳಲ್ಲಿ ರಾಜನ ಬಿರುದುಗಳೇ ಹೆಚ್ಚು ಆಕರ್ಶಿಯವಾದದ್ದು, ಕ್ರಿ.ಶ.೧೧೧೫ ರಿಂದ ಕ್ರಿ.ಶ.೧೧೯೬ ಕಾಲದವರೆಗಿನ ಶಾಸನಗಳಲ್ಲಿ ಮಹಾಮಂಡಳೇಶ್ವರ, ತ್ರಿಭುವನಮಲ್ಲ, ತಲಕಾಡುಗೊಂಡ, ಭುಜಬಲ, ಹೊಯ್ಸಳ ದೇವ ಎಂದು ಕರೆದರೆ, ಕ್ರಿ.ಶ.೧೧೯೬ ರ ಕನ್ನಡ ಶಾಸನದಲ್ಲಿ ಬಲ್ಲಾಳ ದೇವನನ್ನು ಮಹಾ ಮಂಡಳೇಶ್ವರ, ಭುಜಬಲ ವೀರ ನಾರಾಯಣ, ಪಾಂಡ್ಯರಾಯ ಗಜಕೇಸರಿ, ಪಾಂಡ್ಯರಾಯ ಪ್ರತಿಷ್ಟಾಚಾರ್ಯ, ಅಹುದೆಂಬ ರಾಯ ಭರಣ, ಮಂಡಳಿಕ ಲವುಡಿ ನಾರಾಯಣ ಬಾಗಿಲಿಗೆ ಕಾಹ ಹೇಳುವ ಮಂಡಳಿಕರಗಂಡ, ಭಗವತೀದೇವಿ ಅಂಕಕಾರ, ಮಂದಿ ವೇಳಿಕೆ ನುಡಿವ ಮಂಡಳಿಕರ ಗಂಡ, ರಾಯ ಮಂಡಳಿಕ ತಲೆ ಚವರ, ಮಾಂಡಳಿಕ ರಣಹುಲಿ ೧೧ ಮಾಂಡಳಿಕರ ಗಂಡ, ಬಗಳ ರಾಯ ಕಪಾಳ, ಸಾವಂತರ ಗಂಡ ಎಣ್ಣೆ ಕೊಡುವ ರಾಯರ ಗಂಡ, ನವಲಕತೆಲು ಚಲುವ ತನಗೇಕೆ ಬಿರಿದೆಂಬ ರಾಯರ ಗಂಡ ಎಂಬ ಬಿರುದುಗಳಿಂದ ಉಲ್ಲೇಖಿಸಿದ್ದಾರೆ.

ಕ್ರಿ.ಶ.೧೨೬೭ರ ಕನ್ನಡ ಶಾಸನದಲ್ಲಿ ನರಸಿಂಹ ದೇವರಸರನ್ನು[೧೫೪] ಪ್ರತಾಪಚಕ್ರವರ್ತಿ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಕದನಪ್ರಚಂಡ, ಏಕಾಂಗಿವೀರ, ಅಸಹಾಯಶೂರ, ವೀರ ಹೊಯ್ಸಳ ಎಂದು ಕರೆದರೆ, ಕ್ರಿ.ಶ.೧೨೯೮ ರ ಕಾಲದಿಂದ ಹಿಡಿದು ಕ್ರಿ.ಶ.೧೩೪೩ ರ ಕಾಲದವರೆಗಿನ ೩ನೇ ಬಲ್ಲಾಳ ದೇವನ ಕನ್ನಡ ಮತ್ತು ತಮಿಳು ಶಾಸನಗಳಲ್ಲಿ ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಯಾದವ ಕುಲಾಂಬರದ್ಯುಮಣಿ, ಸರ್ವಜ್ಞ ಚೂಡಾಮಣಿ, ಮಲೆರಾಜ ರಾಜ ಮಲಪರೊಳು ಗಂಡ, ಗಂಡಬೇರುಂಢ, ಕದನಪ್ರಚಂಡ, ಅಸಹಾಯಶೂರ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ, ಛಲದಂಕ ರಾಮ, ವೈರೀಭ ಕಂಠೀರವ, ಮಗರ ರಾಜ್ಯ ನಿರ್ಮೂಲಕ, ಚೋಳರಾಜ್ಯ ಸ್ಥಾಪನಾಚಾರ್ಯ, ಪಾಂಡ್ಯ

[೧೫೪] ಎ.ಕ-೯, ದೊ.ತಾ.೩೧, ಕ್ರಿ.ಶ.೧೨೬೭, ಕನ್ನಡ, ದೊಡ್ಡಬಳ್ಳಾಪುರ.

ಕುಲ ಸಮುದ್ಧರಣ, ಪರಮಬಟ್ಟಾರಕ, ದ್ವಾರವತೀಪುರವರಧೀಶ್ವರ, ಏಕಾಂಗಿವೀರ, ನಿಸ್ಸಂಕ ಪ್ರತಾಪ ಚಕ್ರವರ್ತಿ, ಹೊಯ್ಸಳ ಭುಜಬಲ ವೀರ ಬಲ್ಲಾಳ ದೇವ ಎಂದು ಸಾಮನ್ಯವಾಗಿ ಒಂದೇ ರೀತಿಯ ಬಿರುದುಗಳನ್ನು ಕಾಣಬಹುದು.

ಚೋಳರನ್ನ ಕರ್ನಾಟಕದಿಂದ ವಿಷ್ಣುವರ್ಧನ ಹೊರಗಟ್ಟಿದದ್ದರೂ ಜಿಲ್ಲಾ ವ್ಯಾಪ್ತಿಯಲ್ಲಿ ಶಾಸನಗಳಿಗಾಗಿ ತಮಿಳು ಭಾಷೆಯನ್ನು ಬಳಸುವ ಸಂಪ್ರದಾಯವನ್ನು ಹೊಯ್ಸಳರು ಮುಮ್ಮಡಿ ಬಲ್ಲಾಳನ ಕಾಲದವರೆಗೂ ಮುಂದುವರೆಸಿಕೊಂಡು ಬಂದಿರುವುದು ಸೋಜಿಗದ ಸಂಗತಿಯಾಗಿದೆ. ಹೊಯ್ಸಳರ ಕನ್ನಡ ಶಾಸನಗಳಿಗಿಂತ ತಮಿಳು ಭಾಷೆಯ ಶಾಸನಗಳೇ ಜಿಲ್ಲಾ ವ್ಯಾಪ್ತಿಯಲ್ಲಿ ಹೆಚ್ಚು. ಚೋಳರ ಸ್ಪಷ್ಟ ಪ್ರಭಾವವನ್ನು ಬಿಂಬಿಸುವ ಹಲವು ಶಾಸನಗಳು ಕಾಣಿಸುತ್ತದೆ. ತಮಿಳು ಭಾಷೆಯಲ್ಲೆ ಹೊಯ್ಸಳರ ಶಾಸನಗಳು ಹೆಚ್ಚು ಎಂದು ಬಿ.ಎಲ್.ರೈಸ್‌ರವರು ಅಭಿಪ್ರಾಯ ಪಟ್ಟಿದ್ದಾರೆ[೧೫೫]. ಈ ಹಿಂದಿನ ಮನೆತನಗಳಾದ ಗಂಗರು, ಪಲ್ಲವರು, ರಾಷ್ಟ್ರಕೂಟರು ಮತ್ತು ಮುಂದಿನ ಮನೆತನಗಳಾದ ವಿಜಯನಗರ, ಮೈಸೂರು ಒಡೆಯರು ಕನ್ನಡಕ್ಕೆ ಹೆಚ್ಚಿನ ಆದ್ಯತೆಗಳನ್ನು ನೀಡಿ ಶಾಸನಗಳನ್ನು ಹಾಕಿಸಿದ್ದಾರೆ. ಆದರೆ ಹೊಯ್ಸಳರು ಚೋಳರ ಶಾಸನದಲ್ಲಿ ಉಲ್ಲೇಖಿಸುತ್ತಿದ್ದ ಮಂಡಲಗಳು, ಅಲಿಯಾಸ್ (ಒಂದೇ ಪ್ರದೇಶ ಅಥವಾ ಅಧಿಕಾರಿಗಳ ಎರಡೆರಡು ಹೆಸರುಗಳು) ಕನ್ನಡದ ಹ ಕಾರಕ್ಕೆ ತಮಿಳುನಲ್ಲಿ ಪ ಕಾರಗಳ ಬಳಕೆಯನ್ನು ಶಾಸನಗಳಲ್ಲಿ ಕಾಣ ಬಹುದು.

## ವಿಷ್ಣುವರ್ಧನ (ಕ್ರಿ.ಶ.೧೧೦೮–೧೧೫೨)

ಒಂದನೇ ಬಲ್ಲಾಳ ರಾಜನಾಗಿದ್ದಗಲೇ ವಿಷ್ಣುವರ್ಧನ ಯುವರಾಜನಾಗಿದ್ದು, ಬಲ್ಲಾಳನು ಅಕಾಲಿಕ ಮರಣ ಹೊಂದಲಾಗಿ ಎರೆಯಂಗನ ಎರಡನೇಯ ಮಗನಾದ ವಿಷ್ಣುವರ್ಧನನು ಕ್ರಿ.ಶ.೧೧೦೮ರಲ್ಲಿ ಪಟ್ಟಕ್ಕೆ ಬಂದನು[೧೫೬]. ವಿಷ್ಣುವರ್ಧನ ಕಾಲದಿಂದಲೇ ಹೊಯ್ಸಳ ರಾಜ್ಯಕ್ಕೆ ಮೆರಗು ಬರಲು ಕಾರಣವಾಗಿ ಹೊಯ್ಸಳರ ರಾಜಕೀಯ ಭಾಗ್ಯವು ದಿನೇ ದಿನೇ ವೃದ್ಧಿಗೊಂಡಿತ್ತು. ಅಣ್ಣ ಬಲ್ಲಾಳನ ಕಾಲದಲ್ಲಿ ಗಂಗವಾಡಿಯ ಮಾಂಡಲಿಕನಾಗಿದ್ದು[೧೫೭], ಕಲ್ಯಾಣಿ ಚಾಲುಕ್ಯರ ಸಾಮಂತನಾಗಿರುತ್ತಾನೆ. ಪಟ್ಟಾಭಿಷೇಕ ನಂತರ ಕಲ್ಯಾಣಿ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಅಧಿಕಾರವಧಿಯಲ್ಲಿ ಕುಲೊತ್ತುಂಗ ಚೋಳನು ವೆಂಗಿಯ ರಾಜಕೀಯದಲ್ಲಿ ಮಗ್ನನಾಗಿದ್ದ ಸುಸಂದರ್ಭವನ್ನು ಉಪಯೋಗಿಸಿಕೊಂಡು[೧೫೮],

---

[೧೫೫] ಹೆಚ್.ಎಸ್. ಗೋಪಾಲರಾವ್:- ಬೆಂಗಳೂರು ಜಿಲ್ಲೆಯ ತಮಿಳು ಶಾಸನಗಳು ಇ.ದ.ಸಂ.-೨೧, ಪು.ಸಂ-೯೨.

[೧೫೬] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೭.

[೧೫೭] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೨.

[೧೫೮] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೧೧.

ವಿಷ್ಣುವರ್ಧನನು ಕ್ರಿ.ಶ.೧೧೧೬-೧೭ರಲ್ಲಿ ತಲಕಾಡಿನ ಮೇಲೆ ದಾಳಿ ಮಾಡಿ ಅಲ್ಲಿದ್ದ ಚೋಳರ ಅಧಿಮಯ, ದಾಮೋಧರ, ನರಸಿಂಹವರ್ಮನ್‌ರನ್ನು ಸೋಲಿಸುವುದರೊಂದಿದೆ ಕರ್ನಾಟಕದಲ್ಲಿ ಚೋಳರ ಆಳ್ವಿಕೆಯನ್ನು ಕೊನೆಗೊಳಿಸಿ, ಗಂಗವಾಡಿ ೯೬೦೦೦ ಪ್ರಾಂತವನ್ನು ವಶಪಡಿಸಿಕೊಂಡು ತಲಕಾಡುಗೊಂಡ ಎಂಬ ಬಿರುದಾಂಕಿತನಾಗಿ[೧೫೯] ಈ ಯುದ್ಧದ ನೆನಪಿಗಾಗಿ ತಲಕಾಡಿನಲ್ಲಿ ಕೀರ್ತಿನಾರಾಯಣ, ಬೇಲೂರಿನಲ್ಲಿ ವಿಜಯನಾರಾಯಣ ಎಂಬ ದೇವಾಲಯವನ್ನು ನಿರ್ಮಿಸಿದನು[೧೬೦].

ತಲಕಾಡಿನ ಯುದ್ಧದ ನಂತರ ಅದೇ ರಭಸದಲ್ಲಿ ಕೋಲಾರ, ಬೆಂಗಳೂರು, ಸೇಲಂ, ಕೊಯಮತ್ತೂರು, ಧರ್ಮಪುರಿ, ಉತ್ತರಅರ್ಕಾಟು ಜಿಲ್ಲೆಗಳ ಮೇಲೆ ದಾಳಿ ಮಾಡಿ ನೊಳಂಬವಾಡಿಯನ್ನು ಆಕ್ರಮಿಸುವುದರೊಂದಿಗೆ[೧೬೧] ಜಿಲ್ಲೆಯು ಹೊಯ್ಸಳರ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟಿತ್ತು. ಹಿಂದೆ ಗಂಗರು ನಂತರ ಚೋಳರ ಅಧಿನದಲ್ಲಿದ್ದ ಪ್ರಾಂತ್ಯಗಳಾದ ಗಂಗವಾಡಿ ೯೬೦೦೦ ಕ್ಕೆ ವಿಷ್ಣುವರ್ಧನ ಅಧಿಪತಿಯಾದನು. ಕಲ್ಯಾಣ ಚಾಲುಕ್ಯರ ಅವನತಿಯ ನಂತರ ಕಲ್ಯಾಣ ಚಾಲುಕ್ಯರ ಸಾಮ್ರಜ್ಯವು ಉತ್ತರದಲ್ಲಿ ದೇವಗಿರಿಯ ಸೇವುಣರರು ಮತ್ತು ದಕ್ಷಿಣದಲ್ಲಿ ದ್ವಾರಸಮುದ್ರದ ಹೊಯ್ಸಳರ ನಡುವೆ ಹಂಚಿ ಹೋಯಿತ್ತು.

ಜಿಲ್ಲಾ ವ್ಯಾಪ್ತಿಯಲ್ಲಿ ವಿಷ್ಣುವರ್ಧನನ ಮೊದಲ ಶಾಸನ ಕ್ರಿ.ಶ.೧೧೧೫ರ ನೆಲಮಂಗಲ ತಾಲ್ಲೂಕಿನ ನಿಜಗಲ್ಲು ಬೆಟ್ಟದ ಮಲ್ಲಿಕಾರ್ಜುನ ದೇವಸ್ಥಾನದ ಬಾಗಿಲ ಬಳಿ ಇರುವ ತಮಿಳು ಶಾಸನದಲ್ಲಿ[೧೬೨] ನಿಗರಿಲಿ ಚೋಳಮಂಡಲದ ಮಣ್ಣೆನಾಡಿನ ತೆಂದರೂರು ಮಲ್ಲಿಕಾರ್ಜುನ ಒಡೆಯ ಮಹಾದೇವರಿಗೆ ಹೊಯ್ಸಳ ಸಾಮಂತ, ಮಣ್ಣೆನಾಡನು ಆಳುತ್ತಿರುವ ಸಾಮಗಾವುಂಡನು ದಾನ ನೀಡಿದ ಅದೇ ವರ್ಷವಾದ ಕ್ರಿ.ಶ.೧೧೧೫ ರಲ್ಲಿ ದೊಡ್ಡ ಬಳ್ಳಾಪುರ ತಾಲ್ಲೂಕಿನ ಹುಲುಕಡಿಬೆಟ್ಟಕ್ಕೆ ಪೂರ್ವ ಮುಕ್ಕಣ್ಣೇಶ್ವರ ದೇವಾಲಯದ ವಾಯುವ್ಯ ಗುಂಡಿಯಲ್ಲಿ ಇರುವ ತಮಿಳು ಶಾಸನದಲ್ಲಿ[೧೬೩] ೧೨ನೇ ವರ್ಷದ ಆಳ್ವಿಕೆಯಲ್ಲಿ ವಿಕ್ರಮ ಚೋಳಮಂಡಲದ ಮಣ್ಣೆನಾಡನ್ನು ಆಳುತಿದ್ದ ಗಾವುಂಡ ವಿರುಂತರಾಯ ಭಯಂಕರನು ಪುರ್‌ಕೋಡಿಬೆಟ್ಟದ ಮೇಲೆ ಮುತ್ತೀಶ್ವರ ಒಡೆಯ ಮಹಾದೇವರಿಗೆ ಮತ್ತು ಶಿವ ಬ್ರಾಹ್ಮಣನಾದ ಪನ್ಮಭಟ್ಟನಿಗೆ ತನ್ನ ವಂಶ ಮತ್ತು ಪನ್ಮಾಭಟ್ಟರ ವಂಶ ಇರೋವರೆಗೂ ನಿತ್ಯ ಪೂಜೆ ನಡೆಯಲೆಂದು ದಾನ ನೀಡಿದನು. ಈ ಶಾಸನದಲ್ಲಿ ಹುಲುಕಡಿಬೆಟ್ಟವನ್ನು ಪುರ್‌ಕೋಟಿ ಎಂದೂ, ಮುಕ್ಕಣೇಶ್ವರ

---

೧೫೯ Suryanath.U.Kamath :- Karnataka State Gazetter, Bangalore Rural District, 1989, Page.no-54.

೧೬೦ ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೭.

೧೬೧ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೩೩.

೧೬೨ ಎ.ಕ-೯, ನೆ.ತಾ.೬೭, ಕ್ರಿ.ಶ.೧೧೧೫, ತಮಿಳು, ನಿಜಗಲ್ಲು.

೧೬೩ ಎ.ಕ-೯, ದೊ.ತಾ.೧೧, ಕ್ರಿ.ಶ.೧೧೧೫, ತಮಿಳು, ಹುಲ್ಲುಕಡಿ.

ದೇವರನ್ನು ಮುತಿಸ್ವರ ವಡೆಯರ್ ಎಂದು ಹಾಗೂ ಮಾಡೇಶ್ವರನನ್ನು ಮುಡೀಶ್ವರಮ್ ಎಂದು ಕರೆಯಲಾಗಿದೆ.

ನಿಜಗಲ್ಲು ಮತ್ತು ಹುಲುಕಡಿಯ ಈ ಎರಡು ತಮಿಳು ಶಾಸನದಲ್ಲಿ ವಿಷ್ಣುವರ್ಧನನ್ನು ಮಹಾಮಂಡಳೇಶ್ವರ, ತ್ರಿಭುವನಮಲ್ಲ, ತಲೈಕಾಡುಗೊಂಡ, ಭುಜಬಲ, ವೀರಗಂಗ ಪೊಯ್ಸಳ ದೇವ ಎಂದು ಕರೆಯುವುದನ್ನು ಗಮನಿಸಿದರೆ ಚೋಳರನ್ನು ಗೆದ್ದ ಮೇಲೆ ಜಯಾರ್ಥವಾಗಿ ದಾನ ನೀಡಿರಬೇಕು.

ಕ್ರಿ.ಶ.೧೧೨೮ರ ಸಿದ್ದನಹಳ್ಳಿಯ ವೀರಗಲ್ಲು ತಮಿಳು ಶಾಸನದಲ್ಲಿ[೧೬೪] ವಿಷ್ಣುವರ್ಧನನ್ನು ಹಿಂದಿನ ಬಿರುದುಗಳ ಜೊತೆಗೆ ಕೊಂಗುನಂಗಲಿ, ಕೊಯರೂರ್, ಉಚ್ಚಂಗಿ, ಪನುಂಗಲ್, ಗಂಗಪಡಿ, ನುಲಂಪಡಿಕೊಂಡ ಎಂಬ ಬಿರುದುಗಳು ಇರುವುದನ್ನು ಗಮನಿಸಿದರೆ ತಲಕಾಡು ಯುದ್ಧದ ನಂತರ ವಶಪಡಿಸಿಕೊಂಡಿರುವ ಪ್ರದೇಶಗಳಾಗಿರ ಬೇಕು. ಈ ಶಾಸನದಲ್ಲಿನ ಗಂಗಪಡಿ, ನುಲಂಪಾಡಿ ಎಂದರೆ ಬಹುಶಃ ಗಂಗವಾಡಿ, ನೊಳಂಬವಾಡಿಯಾಗಿರಬೆಕು.

ಕ್ರಿ.ಶ.೧೧೩೩ರ ದೇವನಹಳ್ಳಿ ತಾಲ್ಲೂಕಿನ ಆವತಿಯ ತಮಿಳು ಶಾಸನದಲ್ಲಿ[೧೬೫] ವಿಷ್ಣುವರ್ಧನ ಪಿರುಕಿವಿ ರಾಜ್ಯದಲ್ಲಿ ಆಳುತ್ತಿರಲು ಎಂದು ಉಲ್ಲೇಖವಾಗಿದೆ. ಆದರೆ ಈ ಪಿರುಕಿವಿ ರಾಜ್ಯ ಯಾವುದು ತಿಳಿದು ಬಂದಿಲ್ಲ. ಹಾಗೇಯೇ ನೃಪಕಾಮನ ಕಾಲದಲ್ಲಿ ಹೊಯ್ಸಳರು ಗಂಗರ ಮಾಂಡಲಿಕರಾಗಿದ್ದರೆ, ವಿಷ್ಣುವರ್ಧನ ಕಾಲದಲ್ಲಿ ಗಂಗವಂಶದ ಮಾಚ್ಚಗಾವುಂಡನು ಹೊಯ್ಸಳರ ಮಾಂಡಲಿಕನಾಗಿ ಸಣ್ಣೈನಾಡಿನ ಅಧಿಕಾರಿಯಾಗಿರುವುದನ್ನು ಈ ಶಾಸನದಲ್ಲಿ ಗಮನಿಸ ಬಹುದು.

ಕ್ರಿ.ಶ.೧೧೪೦ ರ ನೆಲಮಂಗಲ ತಾಲ್ಲೂಕಿನ ಶಿವಗಂಗೆ ಗಂಗಾಧರೇಶ್ವರ ದೇವಾಲಯದ ಮಂಟಪದ ಕಂಬದಲ್ಲಿನ ಕೆರೆಯನ್ನು ಕಟ್ಟಿಸಿರುವ ಉಲ್ಲೇಖವಿರುವ ಕನ್ನಡ ಶಾಸನದಲ್ಲಿ[೧೬೬] ವಿಷ್ಣುವರ್ಧನನ್ನು ಬಿಟ್ಟಿದೇವ ಎಂದು ಕರೆಯಲಾಗಿದೆ. ತುಲಾಪುರುಷ, ಹಿರಣ್ಯಗರ್ಭ ಮುಂತಾದ ವಿಧಿಗಳನ್ನು ಮಾಡಿದ್ದ ಬಿಟ್ಟಿದೇವನು ರಾಮಾನುಜಚಾರ್ಯರಿಂದ ಆಕರ್ಶಿತರಾಗಿ ಅವರಿಗೆ ರಾಜ್ಯದಲ್ಲಿ ಆಶ್ರಯ ನೀಡಿದ ಮೊದಲೇ ಜೈನ ಸಂಪ್ರದಾಯ ತ್ಯಜಿಸಿ ವೈಷ್ಣವನಾಗಿದ್ದಕ್ಕೆ ಕಾರಣ ಚಕ್ರವರ್ತಿ ಎನಿಸಲು ಯಜ್ಞ ಯಾಗಾದಿಗಳನ್ನು ಜೈನ ಸಂಪ್ರದಾಯದಂತೆ ಮಾಡಲು ಸಾಧ್ಯವಿಲ್ಲವೆಂಬ ಮುಜುಗರ

[೧೬೪] ಎ.ಕ-೯, ಹೊ.ತಾ.೧೮, ಕ್ರಿ.ಶ.೧೧೨೮, ತಮಿಳು, ಸಿದ್ದನಹಳ್ಳಿ.
[೧೬೫] ಎ.ಕ-೯, ದೇ.ತಾ.೨೦, ಕ್ರಿ.ಶ.೧೧೩೩, ತಮಿಳು, ಆವತಿ.
[೧೬೬] ಎ.ಕ-೯, ನೆ.ತಾ.೮೪, ಕ್ರಿ.ಶ.೧೧೪೦, ಕನ್ನಡ, ಶಿವಗಂಗೆ.

ಇದ್ದಿರಬೇಕು[೧೬೭]. ಜಿಲ್ಲೆಯಲ್ಲಿ ವಿಷ್ಣುವರ್ಧನನು ವೈಷ್ಣವ ದೇವಾಲಯಗಳ ನಿರ್ಮಾಣ ಅಥವಾ ದಾನ ನೀಡಿರುವ ಯಾವುದೇ ಶಾಸನಗಳು ದೊರಕಿರುವುದಿಲ್ಲ ಆದರೆ ಮಲ್ಲಿಕಾರ್ಜುನ, ಮುಕ್ಕಣ್ಣೇಶ್ವರ, ಗಂಗಾಧರೇಶ್ವರ ದೇವಾಲಯಗಳು ಎಂಬ ಹಲವಾರು ಶೈವ ದೇವಾಲಯಗಳಿಗೆ ದಾನ ನೀಡಿರುವ ದಾಖಲೆಗಳಿವೆ.

ವಿಷ್ಣುವರ್ಧನ ಒಮ್ಮೊಮ್ಮೆ ದಂಡಯಾತ್ರೆಗಳಲ್ಲಿ ರಾಜ್ಯದ ಸೀಮೆಯನ್ನು ವಿಸ್ತಾರಿಸುತ್ತಾ ಬಲಪಡಿಸಿದನು. ಮೊದಲು ದ್ವಾರಸಮುದ್ರವನ್ನು ಪ್ರಧಾನ ರಾಜಧಾನಿಯಾಗಿ ಮಾಡಿಕೊಂಡು ಕ್ರಮೇಣ ಯಾದವಪುರ ಇಲ್ಲವೇ ತೊನ್ನುರು (ಕ್ರಿ.ಶ.೧೧೨೮), ಉತ್ತರದಲ್ಲಿ ಬಂಕಾಪುರ (ಕ್ರಿ.ಶ.೧೧೩೭), ದಕ್ಷಿಣದಲ್ಲಿ ತಲಕಾಡು, ಪೂರ್ವದಲ್ಲಿ ಕೋಲಾರ ಹೀಗೆ ನಾನಾ ಉಪ ರಾಜಧಾನಿಗಳನ್ನು ಕಟ್ಟಿ ಕೊಂಡಿದ್ದನು.

ಮಾರಸಿಂಹ ಮತ್ತು ಮಾಚಿಕಬ್ಬೆಯ ಮಗಳಾದ ಶಾಂತಲದೇವಿಯು ವಿಷ್ಣುವರ್ಧನನ ಪಟ್ಟದ ರಾಣಿಯಾಗಿದ್ದು, ಕ್ರಿ.ಶ.೧೧೧೭ರಲ್ಲಿ ರಾಜಾಜ್ಞೆ ಪಡೆದು ಕಿರೀಟಧಾರಣೆ ಮಾಡಿದಳು. ನಾಟ್ಯ ಸರಸ್ವತಿಯಾದ ಶಾಂತಲೆ ಜಿನಬಿಕ್ಷೆಯಾಗಿ ಹಲವಾರು ಜೈನಬಸದಿಗಳಿಗೆ ಭೂದಾನ ನೀಡಿ, ಕ್ರಿ.ಶ.೧೧೩೧ರಲ್ಲಿ ಶಾಂತಲೆಯು ಮೃತನಾದಳು. ನಂತರ ನೊಳಂಬವಂಶದ ಬೊಮ್ಮಲಾದೇವಿಯು ಪಟ್ಟದರಸಿಯಾಗಿ ಆಸಂಡಿ ೫೦೦, ನೀರಗುಂದ ೩೦೦ ಗಳನ್ನು ಆಳುತ್ತಿದ್ದಳು. ಕ್ರಿ.ಶ.೧೧೩೨ರಲ್ಲಿ ಲಕ್ಷ್ಮಿಮಹಾದೇವಿಯನ್ನು, ಕ್ರಿ.ಶ.೧೧೩೫ರಲ್ಲಿ ಶಾಂತಲೆ (ಇಮ್ಮಡಿ ಶಾಂತಲೆ) ಯನ್ನು, ಕ್ರಿ.ಶ.೧೧೪೦ರಲ್ಲಿ ಚಾಲುಕ್ಯವಂಶದ ರಾಜಲದೇವಿಯನ್ನು ವಿಷ್ಣುವರ್ಧನನು ರಾಣಿಯನ್ನಾಗಿ ವರಿಸಿದನು. ವಿಷ್ಣುವರ್ಧನನು ಕ್ರಿ.ಶ.೧೧೪೧ರಲ್ಲಿ ಮೃತನಾದರೂ ಕ್ರಿ.ಶ.೧೧೪೨, ೧೧೪೮, ೧೧೪೯ರ ಶಾಸನಗಳು ವಿಷ್ಣುವರ್ಧನನೇ ಚಕ್ರವರ್ತಿಯಾಗಿದ್ದನೆಂದು ಹೇಳಿದೆ. ಬಹುಶಃ ಉತ್ತರಾಧಿಕಾರಿಯಾದ ನರಸಿಂಹನು ಇನ್ನು ಬಾಲಕನಾಗಿದ್ದನೆಂದು ರಾಜ್ಯದ ಹಿತಚಿಂತನೆಗಾಗಿ ವಿಷ್ಣುವರ್ಧನನ ಹೆಸರಿನಲ್ಲಿ ಹೊರಡಿಸಿರಬೇಕು[೧೬೮].

## ೧ನೇ ನರಸಿಂಹ (ಕ್ರಿ.ಶ.೧೧೪೩–೭೩)

ವಿಷ್ಣುವರ್ಧನನ ಹಿರಿಯ ಮಗನಾದ ಬಲ್ಲಾಳನು ಅಪ್ರಾಪ್ತ ವಯಸ್ಸಿನಲ್ಲಿ ಸುಮಾರು ಕ್ರಿ.ಶ.೧೧೩೩ಕ್ಕೂ ಮೊದಲೇ ಮರಣ ಹೊಂದಿದ್ದನು. ಅದೇ ವರ್ಷದಲ್ಲಿ ಇನ್ನೊಬ್ಬ ಮಗನಾದ ನರಸಿಂಹನು ಜನಿಸಿದನು[೧೬೯]. ಮಹಾವೀರನಾದ ಕದಂಬ ದಳಪತಿ ಮಸಣನು ಅಪಾರ ಸೈನ್ಯ ಸಮೇತನಾಗಿ ಹೊಯಿಸಳ ರಾಜ್ಯಕ್ಕೆ ವಿಜೃಂಭಿಸಿಕೊಂಡು ಬಂದು ಪರಾಜಿತನಾದ ಆ ಸುಮುಹೂರ್ತದಲ್ಲೇ ಮಗನು

---

೧೬೭ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೩.

೧೬೮ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೪೨,೨೪೬,೨೪೭,೨೪೮, ೨೪೧.

೧೬೯ ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಸಂಪುಟ-೧, ಅಧ್ಯಾಯ-೨, ಪು.ಸಂ-೨೧೧.

ಜನಿಸಿದನು. ಆದುದರಿಂದ ಪುತ್ರನಿಗೆ ಪ್ರತಾಪನಾರಸಿಂಹ ಎಂದು ನಾಮಕರಣ ಮಾಡಿ ಆ ಗಳಿಗೆಯಲ್ಲೇ ಪಟ್ಟ ಕಟ್ಟಿದನಂತೆ[೧೭೦]. ವಿಷ್ಣುವರ್ಧನ ಮತ್ತು ಲಕ್ಷ್ಮಿದೇವಿಯ ಮಗನಾದ ೧ನೇ ನರಸಿಂಹನು ಕ್ರಿ.ಶ.೧೧೪೫ರಲ್ಲಿ ಪಟ್ಟಕ್ಕೆ ಬರುವಾಗ ೮ ವರ್ಷ ವಯಸ್ಸಿವನಾದ ನರಸಿಂಹನಿಗೆ ವಿಜಯನಾರಸಿಂಹ ಮತ್ತು ಪ್ರತಾಪ ನಾರಸಿಂಹ ಎಂಬ ಹೆಸರಿದ್ದು, ನರಸಿಂಹನಿಗೆ ಕ್ರಿ.ಶ.೧೧೩೩ರಲ್ಲಿ ಜನಿಸಿದ ದಿನ, ಕ್ರಿ.ಶ.೧೧೪೫ರಲ್ಲಿ ೧೨ ವರ್ಷವಾದಾಗ, ಕ್ರಿ.ಶ.೧೧೪೯ ರಲ್ಲಿ ತಂದೆಯ ಮರಣದ ನಂತರ ಸಾಮ್ರಜ್ಯಾಧಿಪತಿಯಾಗಿ ಒಟ್ಟು ೩ ಬಾರಿ ಪಟ್ಟಾಭಿಷೇಕವಾಯಿತ್ತು[೧೭೧]. ಕಲ್ಯಾಣಿ ಚಾಲುಕ್ಯರ ದೊರೆ ೩ನೇ ತೈಲಪನನ್ನು ಸೋಲಿಸಿ ಕೊಂದು, ತೆಂಕಣ ಚಕ್ರವರ್ತಿ ಎಂಬ ಬಿರುದು ಪಡೆದಿದ್ದನು[೧೭೨].

ನರಸಿಂಹನ ಪರವಾಗಿ ಅಧಿಕಾರಿಗಳು ದಾನ ದತ್ತಿಗಳನ್ನು ನೀಡಿರುವ ಶಾಸನಗಳನ್ನು ಜಿಲ್ಲೆಯಲ್ಲಿ ಶಾಸನಗಳಲ್ಲಿ ಕಾಣಬಹುದು. ಕ್ರಿ.ಶ.೧೧೪೫ರ ವೋಬಳಹಳ್ಳಿಯ ತಮಿಳು ಶಾಸನದಲ್ಲಿ[೧೭೩] ಕೈವಾರನಾಡಿನ ಗಾವುಂಡನಾದ ಬ್ರಹ್ಮಾದಿರಾಜನು ಕೆರೆ ಏರಿ ಸರಿ ಪಡಿಸಿದ್ದಕ್ಕಾಗಿ ಗೊವಿಂದನಿಗೆ ಹಾಗೂ ಕ್ರಿ.ಶ.೧೧೫೨ರ ನಿಜಗಲ್ಲು ಬೆಟ್ಟದ ಮಲ್ಲಿಕಾರ್ಜುನ ದೇವಸ್ಥಾನದೊಳಗಿನ ತಮಿಳು ಶಾಸನದಲ್ಲಿ[೧೭೪] ಕೊಮುಗಾವುಂಡನು ೧೦ ಖಂಡುಗ ಗದ್ದೆಯನ್ನು ಮಲ್ಲಿಕಾರ್ಜುನ ಒಡೆಯ ಮಹಾದೇವರು ಮತ್ತು ಬ್ರಾಹ್ಮಣರಿಗೆ ನೀಡಿದರು.

ನೊಳಂಬವಾಡಿಯ ಮೇಲಿನ ಅಧಿಕಾರವನ್ನು ಕಳೆದು ಕೊಳ್ಳುವುದಕ್ಕೆ[೧೭೫] ನರಸಿಂಹನು ಸುಖಲೋಲುಪನೂ, ಸಮರ್ಥನಲ್ಲದವನೂ ಆಗಿದುದರಿಂದ ಸಾಮ್ರಾಜ್ಯದ ಗಾತ್ರ ಕುಗ್ಗಿತ್ತು. ಇದರಿಂದಾಗಿ ಕೊನೆಗೆ ಮಗನಾದ ಎರಡನೇಯ ಬಲ್ಲಾಳನು ತಂದೆಯ ವಿರುದ್ಧ ಬಂಡೆದ್ದು ಕ್ರಿ.ಶ.೧೧೭೩ರಲ್ಲಿ ರಾಜ್ಯಭಾರ ಆರಂಭಿಸಿದ್ದನು[೧೭೬].

## ಇಮ್ಮಡಿ ಬಲ್ಲಾಳ (ಕ್ರಿ.ಶ.೧೧೭೩-೧೨೨೦)

ಇಮ್ಮಡಿ ಬಲ್ಲಾಳನು ೩ ದಶಕಗಳಿಗೂ ಹೆಚ್ಚು ಕಾಲ ರಾಜ್ಯವನ್ನಾಳಿ, ತನ್ನ ತಂದೆಯ ಆಳ್ವಿಕೆಯಲ್ಲಿ ಅನುಭವಿಸಿದ ಹಿನ್ನಡೆಯನ್ನು ಅಂತ್ಯಗೊಳಿಸಿದಲ್ಲದೆ ತನ್ನ ತಾತನು ಹಮ್ಮಿಕೊಂಡಿದ್ದ ಸ್ವಾತಂತ್ರ ರಾಜ್ಯದ ಕನಸನ್ನು ನನಸಾಗಿಸುವುದರಲ್ಲಿ ಯಶಸ್ವಿಯಾದ. ಇವನ ಆಳ್ವಕೆಯ ಕಾಲವನ್ನು ಹೊಯ್ಸಳರ ಇತಿಹಾಸಲ್ಲಿ

[೧೭೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೪೮.
[೧೭೧] ಎಂ.ಮುನಿಕೆಂಪೇಗೌಡ, ಆರ್.ಲೋಕೇಶ್:- ಹೊಯ್ಸಳ ಒಂದನೇ ನರಸಿಂಹನ ಪಟ್ಟಾಭಿಷೇಕ: ಹೊಸ ವಿಚಾರಗಳು, ಇ.ದ.ಸಂ:-೩೩, ೨೦೧೮, ಪು.ಸಂ-೨೩೨.
[೧೭೨] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೮.
[೧೭೩] ಎ.ಕ-೯, ಹೊ.ತಾ.೪೦, ಕ್ರಿ.ಶ.೧೧೪೫, ತಮಿಳು, ವೋಬಳಹಳ್ಳಿ.
[೧೭೪] ಎ.ಕ-೯, ನೆ.ತಾ.೬೮, ಕ್ರಿ.ಶ.೧೧೫೨, ತಮಿಳು, ನಿಜಗಲ್ಲು.
[೧೭೫] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೮.
[೧೭೬] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೩

ವೈಭವಯುಕ್ತವಾದ ಅಧ್ಯಾಯವೆಂದು ಪರಿಗಣಿಸಲಾಗಿದೆ[೧೭೭]. ಇವನ ತರುವಾಯ ಹೊಯ್ಸಳ ವಂಶಕ್ಕೆ ಬಲ್ಲಾಳ ವಂಶವೆಂದೇ ಹೆಸರು ಗೊಂಡಿತ್ತು. ಇಮ್ಮಡಿ ಬಲ್ಲಾಳನಿಗೆ ವೀರ ಬಲ್ಲಾಳ, ಯಾದವ ನಾರಾಯನ ಎಂಬ ಇನ್ನೇರಡು ಹೆಸರುಗಳಿದ್ದವು[೧೭೮].

ಇಮ್ಮಡಿ ಬಲ್ಲಾಳನ ಪ್ರಥಮ ಸಾಧನೇಂದರೆ ಹಿಂದೆ ವಿಷ್ಣುವರ್ಧನನು ಗೆದ್ದು ನಂತರ ಕೈ ತಪ್ಪಿದ ಉಚ್ಚಂಗಿದುರ್ಗವನ್ನು ಕ್ರಿ.ಶ.೧೧೭೭ರಲ್ಲಿ ಪಾಂಡ್ಯ ಕಾಮದೇವನನ್ನು ಸೋಲಿಸಿ, ಗೆದಿಯೊದೊಂದ್ದಿಗೆ ಗಿರಿದುರ್ಗಮಲ್ಲ, ಶನಿವಾರಸಿದ್ಧಿ ಎಂಬ ಬಿರುದನ್ನು ಪಡೆದನು. ಬಹುಶಃ ಶನಿವಾರ ಈ ವಿಜಯ ಸಾಧಿಸಿದ್ದರಿಂದ ಶನಿವಾರಸಿದ್ಧಿ ಎಂಬ ಬಿರುದು ಬಂದಿರಬಹುದು. ಉಚ್ಚಂಗಿಪಾಂಡ್ಯರ ನಂತರ ಕೊಂಗಾಳ್ವ, ಚಂಗಾಳ್ವ, ಕಲಚೂರಿಗಳನ್ನು ಸೋಲಿಸಿ ಅವರ ಭಾಗಗಳ ಮೇಲೆ ತನ್ನ ಅಧಿಪತ್ಯವನ್ನು ಸಾಧಿಸಿದನು[೧೭೯]. ಕ್ರಿ.ಶ.೧೧೯೩ರಲ್ಲಿ ಧಾರವಾಡ ಜಿಲ್ಲೆಯ ಲೊಕ್ಕಿಗುಂಡಿಯನ್ನು ತಾತ್ಕಲಿಕ ರಾಜಧಾನಿಯನ್ನಾಗಿ ಮಾಡಿಕೊಂಡು. ನಂತರ ಕ್ರಿ.ಶ.೧೧೯೫ರಲ್ಲಿ ಎರಂಬಾರಗೆ ರಾಜಧಾನಿಯನ್ನು ಸ್ಥಳಾಂತರಿಸಿದನು[೧೮೦].

ಎರಡನೆಯ ವೀರ ಬಲ್ಲಾಳನು ಚೋಳವಂಶದ ಚೋಳಮಹಾದೇವಿಯನ್ನು ವರಿಸಿದ್ದನು. ಹಾಗೂ ಮೂರನೇ ಕುಲ್ಲೋತ್ತುಂಗ ಚೋಳ ದೊರೆಗೆ ತನ್ನ ಮಗಳಾದ ಸೋಮಾಲೆಯನ್ನು ಕೊಟ್ಟು ವಿವಾಹ ಮಾಡಿಕೊಂಡು ಚೋಳರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದನು. ಚೋಳರನ್ನು ಪಾಂಡ್ಯ ಮನೆತನದ ಮಾವರ್ಮಸುಂದರಪಾಂಡ್ಯನು ಸೋಲಿಸಿ ಹೊರದೂಡಲ್ಪಟ್ಟಾಗ ಇಮ್ಮಡಿ ಬಲ್ಲಾಳನು ಚೋಳ ರಾಜ್ಯವನ್ನು ಮರಳಿ ಪಡೆಯಲು ತನ್ನ ಮಗನಾದ ಇಮ್ಮಡಿ ನಾರಸಿಂಹನಿಗೆ ವಹಿಸಿದ್ದು, ಆತ ಪಾಂಡ್ಯರನ್ನು ಸೋಲಿಸಿದನು. ಇದರಿಂದಾಗಿ ಚೋಳರಿಗೆ ಪುನಃ ರಾಜ್ಯ ಸ್ಥಾಪಿಸಿ ಕೊಟ್ಟಿದ್ದಕ್ಕಾಗಿ ಬಲ್ಲಾಳನಿಗೆ ಚೋಳರಾಜ್ಯ ಸ್ಥಾಪನಾಚಾರ್ಯ ಎಂಬ ಬಿರುದು ಬಂದಿತು. ಇಮ್ಮಡಿ ಬಲ್ಲಾಳನಿಗೆ ಉಮಾದೇವಿಯು ಪಟ್ಟದ ರಾಣಿಯಾಗಿ, ಮಗುರೆ ೩೦೦ನ್ನು ಆಳುತ್ತಿದ್ದರು. ಉಮಾದೇವಿ ಜೊತೆಗೆ ಬಮ್ಮಲಾದೇವಿ, ಚಿಕ್ಕಬಮ್ಮಲೆ, ಚೋಳಮಹಾದೇವಿ, ಕೇತಲದೇವಿ, ಅಭಿನವ ಕೇತನದೇವಿ, ಪದುಮಲದೇವಿ, ತುಳುವಲದೇವಿ ಮುಂತಾದ ಅನೇಕ ರಾಣಿಯರಿದ್ದರು[೧೮೧].

[೧೭೭] ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಸಂಪುಟ-೧, ಅಧ್ಯಾಯ-೨, ಪು.ಸಂ-೨೧೧.
[೧೭೮] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ- ೨೫೮.
[೧೭೯] Suryanath.U.Kamath :- Karnataka State Gazetter, Bangalore Rural District, 1989, Page.no-55.
[೧೮೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೯೯.
[೧೮೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೫.

ಕ್ರಿ.ಶ.೧೧೯೬ ರ ಕನ್ನಡ ಶಾಸನದಲ್ಲಿ[೧೮೨] ಬಲ್ಲಾಳ ದೇವನನ್ನು ಮಹಾ ಮಂಡಳೇಶ್ವರ, ಭುಜಬಲ ವೀರ ನಾರಾಯಣ, ಪಾಂಡ್ಯರಾಯ ಗಜಕೇಸರಿ, ಪಾಂಡ್ಯರಾಯ ಪ್ರತಿಷ್ಟಾಚಾರ್ಯ, ಅಹುದೆಂಬ ರಾಯ ಭರಣ, ಮಂಡಳಿಕ ಲವುಡಿ ನಾರಾಯಣ ಬಾಗಿಲಗೆ ಕಾಹ ಹೇಳುವ ಮೂಡಳಿಕರ ಗಂಡ, ಭಗವತೀದೇವಿ ಅಂಕಕಾರ, ಮಂದಿ ವೇಳಿಕೆ ನುಡಿವ ಮಂಡಳಿಕರ ಗಂಡ, ರಾಯ ಮಂಡಳಿಕ ತಲರ ಚವರ, ಮಾಂಡಳಿಕ ರಣಹುಲಿ ೧೧ ಮಾಂಡಳಕರ ಗಂಡ, ಬಗಳ ರಾಯ ಕಪಾಳ, ಮಾಮ್ ಸಾವಂತರ ಗಂಡ ಎಣ್ಣೆ ಕೊಡುವ ರಾಯರ ಗಂಡ, ನವಲಕತೆಲು ಚಲುವ ತನಗೇಕೆ ಬಿರಿದೆಂಬ ರಾಯರ ಗಂಡ, ಎಂಬ ಬಿರುದುಗಳ ನಂತರ ಹೊಯ್ಸಳಚಕ್ರವರ್ತಿ, ದಕ್ಷಿಣಚಕ್ರವರ್ತಿ[೧೮೩], ಸಮಸ್ತ ಭುವನಾಶ್ರಯ, ಶ್ರೀ ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ ಪರಮಭಟ್ಟಾರಕ, ಯಾದವ ಚಕ್ರವರ್ತಿಮೊದಲಾದ ಬಿರುದುಗಳನ್ನು[೧೮೪] ಹೊಂದಿದ್ದನು. ಕ್ರಿ.ಶ.೧೨೨೦ರಲ್ಲಿ ಬಲ್ಲಾಳ ತೀರಿಕೊಂಡ ಸಂದರ್ಭದಲ್ಲಿ ಅವನ ಗರುಡ ಲಕ್ಷ್ಮ ಮತ್ತು ಲಕ್ಷ್ಮನ ಸತಿ ಸುಗ್ಗಲದೇವಿ ಹಾಗೂ ೧೦೦೦ ಬೆಂಗಾಲಿಗರೂ ಆತ್ಮಾರ್ಪಣೆ ಮಾಡಿಕೊಂಡರು[೧೮೫].

## ಇಮ್ಮಡಿ ನರಸಿಂಹ (ಕ್ರಿ.ಶ.೧೨೨೦–೧೨೩೫)

ಇಮ್ಮಡಿ ಬಲ್ಲಾಳನ ಮಗ ಇಮ್ಮಡಿ ನರಸಿಂಹನಿಗೆ ಕ್ರಿ.ಶ.೧೨೨೦ರಲ್ಲಿ ಪಟ್ಟವಾಯಿತ್ತು[೧೮೬]. ತಂದೆಯ ಕಾಲದಲ್ಲಿ ರಾಜ್ಯಭಾರದಲ್ಲಿ ಪಳಗಿದ ವೀರ ನಾರಸಿಂಹನು ತಂದೆ ವೀರ ಬಲ್ಲಾಳನು ಹೊಯ್ಸಳರ ರಾಜ್ಯವನ್ನು ಉತ್ತರಾಭಿಮುಖವಾಗಿ ವಿಸ್ತಾರಿಸಿದ್ದರೆ, ಹೊಯಿಸಳರ ರಾಜ್ಯದ ವಿಖ್ಯಾತಿಯನ್ನು ದಕ್ಷಿಣದಲ್ಲಿ ರಾಮೇಶ್ವರವರೆಗೂ ಹರಡಿಸಿದನು. ಶಾಸನಗಳಲ್ಲಿ ಇಮ್ಮಡಿ ನಾರಸಿಂಹನನ್ನು ಮಗರ ರಾಜ್ಯ ನಿರ್ಮೂಲನನೆಂದೂ, ಪಾಂಡ್ಯ ದಿಶಾ ಪಟ್ಟನೆಂದೂ, ಚೋಳರಾಜ್ಯ ಪ್ರತಿಷ್ಟಾಪನಾಚಾರ್ಯನೆಂದೂ ಉಲ್ಲೇಖಿಸಲಾಗಿದೆ[೧೮೭]. ತಮಿಳುನಾಡಿನ ರಾಜಕೀಯದಲ್ಲಿಯೇ ಮಗ್ನನಾಗಿ ಕಡವ ಹಾಗೂ ಪಾಂಡ್ಯರನ್ನು ಸೋಲಿಸಿ ಅವರಿಂದ ಕಪ್ಪ ಕಾಣಿಕೆಗಳನ್ನು ಪಡೆದನು. ಬಹುಶಃ ತನ್ನ ಅಳಿಯನಾದ ಚೋಳ ಮೂರನೇ ರಾಜರಾಜನ ಸ್ಥಾನವನ್ನು ಭದ್ರಗೊಳಿಸಲು ನೇರವಾದ. ಶ್ರೀರಂಗಂ ಬಳಿಯ ಕುಪ್ಪಂ (ಕಣ್ಣಾನೂರು)

---

[೧೮೨] ಎ.ಕ-೯, ನೆ.ತಾ.೮೨, ಕ್ರಿ.ಶ.೧೧೯೬, ಕನ್ನಡ, ಶಿವಗಂಗೆ.

[೧೮೩] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೫.

[೧೮೪] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೬೦.

[೧೮೫] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೫

[೧೮೬] Suryanath.U.Kamath:-Karnataka State Gazetter, Bangalore Rural District, 1989, Page.no-56.

[೧೮೭] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೬೫.

ಎರಡನೇಯ ರಾಜಧಾನಿಯಾಗಿ ಮಾಡಿಕೊಂಡು ತನಗೆ ದೊರೆತ ತಮಿಳುನಾಡಿನ ಪ್ರದೇಶಗಳ ಆಡಳಿತ ಭದ್ರಗೊಳಿಸಿ ರಾಮೇಶ್ವರವರೆಗೂ ವಿಜಯಯಾತ್ರೆ ನಡೆಸಿದನು[೧೮೮].

ತಮಿಳುನಾಡಿನ ಪ್ರಾಂತ್ಯವನ್ನು ಆಳುತ್ತಿದ್ದರಿಂದ ಇವನ ಶಾಸನಗಳು ಜಿಲ್ಲೆಯಲ್ಲಿ ಭಾಗದಲ್ಲಿ ದೊರೆಯುವುದಿಲ್ಲ. ಆದರೆ ತಮಿಳುನಾಡಿನಲ್ಲಿ ಶಾಸನಗಳು ದೊರೆಯುತ್ತವೆ. ಕ್ರಿ.ಶ.೧೨೩೭ರಲ್ಲಿ ಇಳೈಪಕ್ಕನಾಡಿನಲ್ಲಿ ಶಿವನೀಶ್ವರಂ ಒಡೆಯರ್ ದೇವಸ್ಥಾನದ ಗೋಪುರವನ್ನು ಕಟ್ಟಿಸಿದನು[೧೮೯].

## ಸೋಮೇಶ್ವರ (ಕ್ರಿ.ಶ.೧೨೩೫–೧೨೫೪)

ಇಮ್ಮಡಿ ನರಸಿಂಹನ ಮಗನಾದ ಸೋಮೇಶ್ವರನಿಗೆ ಕ್ರಿ.ಶ.೧೨೩೫ರಲ್ಲಿ ಪಟ್ಟವಾಯಿತು[೧೯೦]. ತಮಿಳುನಾಡಿನಲ್ಲೆ ಬೆಳೆದು ಅದೇ ಪ್ರಾಂತ್ಯದಲ್ಲಿ ಆಳ್ವಿಕೆ ನಡೆಸುತ್ತಾ ದೀರ್ಘಕಾಲ ಕಣ್ಣಾನೂರಲ್ಲೇ ಇರುತ್ತಿದ್ದು, ತಮಿಳುನಾಡಿನ ರಾಜಕಾರಣದಲ್ಲೇ ಮಗ್ನನಾಗಿದ್ದು[೧೯೧], ಪಾಂಡ್ಯರು ಮತ್ತು ಚೋಳರ ನಡುವಿನ ಯುದ್ಧದಲ್ಲಿ ಸೋಮೇಶ್ವರನು ಮಾವನಾದ ಮೂರನೇಯ ಚೋಳ ರಾಜ ರಾಜೇಂದ್ರನಿಗೆ ನೆರವು ನೀಡಿದ್ದನು[೧೯೨]. ೩೦ಕ್ಕು ಹೆಚ್ಚು ತಮಿಳು ಶಾಸನಗಳು ತಮಿಳುನಾಡಿನಲ್ಲಿ ಸಿಕ್ಕಿರುತ್ತದೆ. ಇವನ ಎಲ್ಲಾ ಶಾಸನಗಳಲ್ಲಿ ರಾಜನ ಆರೋಗ್ಯಕ್ಕಾಗಿ ಸಾಮಂತರು, ದಂಡನಾಯಕರು ದಾನ ದತ್ತಿಯನ್ನು ನೀಡಿರುವುದನ್ನು ಗಮನಿಸಿದರೆ ಯಾವುದೊ ವ್ಯಾದಿ ಇದ್ದಿರ ಬೇಕು. ಬಹುಕಾಲ ವಿಕ್ರಮಪುರದಲ್ಲಿ (ಕಣ್ಣಾನೂರು) ಕಾಲ ಕಳೆದಿರುವುದರಿಂದ ಸೋಮೇಶ್ವರನ ಶಾಸನಗಳು ಜಿಲ್ಲೆಯ ಭಾಗದಲ್ಲಿ ದೊರೆಯುವುದಿಲ್ಲ. ಸೋಮೇಶ್ವರನಿಗೆ ತಮಿಳುನಾಡು ಅಧಿಕಾರದ ಜೊತೆಗೆ ದ್ವಾರ ಸಮುದ್ರದ ಉಸ್ತುವಾರಿಯನ್ನು ಸಹ ನೋಡಿ ಕೊಳ್ಳ ಬೇಕಾದ ಸಂದರ್ಭ ಬಂದು[೧೯೩], ಆ ಸಂದರ್ಭದಲ್ಲಿ ನೊಳಂಬವಾಡಿಯವರೆಗೆ ರಾಜ್ಯವನ್ನು ವಿಸ್ತಾರ ಮಾಡುತ್ತಾನೆ.

ತನ್ನ ಕೊನೆ ದಿನಗಳಲ್ಲಿ ಕ್ರಿ.ಶ.೧೨೫೪ರಲ್ಲಿ ಹೊಯ್ಸಳ ಸಾಮ್ರಜ್ಯವನ್ನು ವಿಭ್ಹಾಗ ಮಾಡಿ ದ್ವಾರಸಮುದ್ರವನ್ನು ರಾಜಧಾನಿಯಾಗಿ ಹೊಂದಿದ್ದ ಉತ್ತರ ಭಾಗವನ್ನು ಹಿರಿಯ ಮಗನಾದ ಮುಮ್ಮಡಿ ನರಸಿಂಹನಿಗೆ, ಚಿತ್ತೂರು, ಕೋಲಾರ ಹಾಗೂ ತಮಿಳು ಭಾಷೆ ಭಾಗವನ್ನು (ಕೃಷ್ಣಗಿರಿ, ಸೇಲಂ ಸುತ್ತ

---

೧೮೮ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೫.

೧೮೯ ಎ.ಕ-೯, ಬೆಂ.೧೩೯ಎ, ಕ್ರಿ.ಶ.೧೨೩೭, ತಮಿಳು, ಕ್ಯಾತಮಾರನಹಳ್ಳಿ.

೧೯೦ Suryanath.U.Kamath :- Karnataka State Gazetter, Bangalore Rural District, 1989, Page.no-56.

೧೯೧ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೬.

೧೯೨ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೬೯.

೧೯೩ ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೯.

ಮುತ್ತ) ಒಳಗೊಂಡ ಕಣ್ಣಾನೂರನ್ನು ರಾಜಧಾನಿಯಾಗಿ ಕಿರಿಯ ಮಗನಾದ ರಾಮನಾಥನಿಗೆ ನೀಡುತ್ತಾನೆ[೯೪]. ಇದರಿಂದಾಗಿ ದಾಯಾದಿಗಳ ಕಲಹಕ್ಕೆ ನಾಂದಿಯಾಯಿತ್ತು.

## ಮುಮ್ಮಡಿ ನರಸಿಂಹ (ಕ್ರಿ.ಶ.೧೨೫೪–೧೨೯೨)

ಸೋಮೇಶ್ವರ ಮತ್ತು ದೇವಿಕಾದೇವಿಯ ಮಗನಾದ ಮುಮ್ಮಡಿ ನರಸಿಂಹನು ಪಟ್ಟಕ್ಕೆ ಬಂದು ದ್ವಾರಸಮುದ್ರದಿಂದ ಆಳ್ವಿಕೆ ನಡೆಸುತ್ತಿರುತ್ತಾನೆ. ಕ್ರಿ.ಶ.೧೨೬೭ರ ಮೊದಲು ದೊಡ್ಡಬಳ್ಳಾಪುರದ ಕೋಟೆ ಪ್ರದೇಶದಲ್ಲಿದ್ದು, ಈಗ ತಾಲ್ಲೂಕು ಕಛೇರಿ ಆವರಣದಲ್ಲಿರುವ ಕನ್ನಡ ಶಾಸನದಲ್ಲಿ[೯೫]. ಮುಮ್ಮಡಿ ನರಸಿಂಹನನ್ನು ಪ್ರತಾಪ ಚಕ್ರವರ್ತಿ, ಶ್ರೀ ಪೃಥ್ವೀವಲ್ಲಭ, ಮಹಾ ರಾಜಾಧಿರಾಜ ಪರಮೇಶ್ವರ, ಕದನ ಪ್ರಚಂಡ, ಏಕಾಂಗಿವೀರ, ಅಸಹಾಯಶೂರ, ವೀರ ಹೊಯ್ಸಳ, ವೀರ ನರಸಿಂಹ ದೇವರಸರು ದ್ವಾರಸಮುದ್ರದಿಂದ ಆಳ್ವಿಕೆ ನಡೆಸುತ್ತಿರಲು ಎಂದು ಇರುವುದನ್ನು ಗಮನಿಸಿದರೆ ಹೊಯ್ಸಳರ ವಿಷ್ಣುವರ್ಧನದಿಂದ ಸೋಮೇಶ್ವರನ ಶಾಸನದವರೆಗೆ ಮಹಾ ಮಂಡಳೇಶ್ವರ ಎಂದು ಉಲ್ಲೇಖಿಸುತ್ತಿದ್ದು, ಮೊದಲ ಬಾರಿಗೆ ಮುಮ್ಮಡಿ ನರಸಿಂಹನನ್ನು ಮಹಾರಾಜಾಧಿರಾಜ ಪರಮೇಶ್ವರ, ಶ್ರೀ ಪೃಥ್ವೀವಲ್ಲಭ, ಏಕಾಂಗಿವೀರ, ಅಸಹಾಯಶೂರ ಎಂದು ಕರೆದಿರುವುದನ್ನು ಕಂಡರೆ ಮಂಡಳೇಶ್ವರರಾಗಿದ್ದವರು ರಾಜನಾಗಿ ಆಡಳಿತ ನಡೆಸಿರಬೇಕು.

ಹಾಗೇಯೇ ಈ ಶಾಸನದಲ್ಲಿ ಗಂಗ ಮನೆತನಕ್ಕೆ ಸೇರಿದ ನಂದಿಗಿರಿನಾಥ, ತ್ರಿಭುವನಮಲ್ಲನಾದ ಬೇಚಿದೇವರಸನು ಯಲಹಂಕ ನಾಡಪ್ರಭುವಾಗಿ, ಮಂಡಳೇಶ್ವರನಾಗಿದ್ದನು. ಇಲ್ಲಿ ಗಮನಿಸ ಬೇಕಾದ ವಿಷಯವೆಂದರೆ ಹೊಯ್ಸಳರು ಪ್ರಾರಂಭದಲ್ಲಿ (ನೃಪಕಾಮನ ಕಾಲದಲ್ಲಿ) ಗಂಗರ ಮಾಂಡಳಿಕರಾಗಿದ್ದರು. ಆದರೆ ನರಸಿಂಹ ದೇವರಸ ಕಾಲಕ್ಕೆ ಗಂಗರು ಹೊಯ್ಸಳರ ಮಾಂಡಳಿಕರಾಗಿದ್ದರು ಎಂಬುದನ್ನು ಈ ಶಾಸನವು ತಿಳಿಸುತ್ತದೆ.. ಮತ್ತು ರಾಜಘಟ್ಟದ ವೀರಬಲ್ಲಾಳಸೆಟ್ಟಿ, ಮರಿಯಹೋಲಿಸೆಟ್ಟಿ, ದೊಡ್ಡಲಪೋತಿ ಸೆಟ್ಟಿ, ಇರಿಗಿಸೆಟ್ಟಿ, ಮೈಲಾರಸೆಟ್ಟಿ, ಕಲ್ಲಿಸೆಟ್ಟಿ ಮೊದಲಾದ ವರ್ತಕರು, ಚಿಕ್ಕಗೌಡ, ಮುಖ್ಯರಪ್ಪ ಮುಂತಾದ ನಾನಾದೇಶಿ ೧೮ ಸಮುದಾಯದವರೆಲ್ಲರೂ ಸೇರಿ ಐಯ್ಯಾವಳಿಯ ಐನೂರು ಸ್ವಾಮಿಗಳ ಉಭಯದಲ್ಲಿ ರಾಜಘಟ್ಟದ ಶ್ರೀ ಗವರೇಶ್ವರ ದೇವರ ಅಂಗ ರಂಗ ವೈಭವ, ರಥೋತ್ಸವ, ಪಂಚಾಮೃತ, ಅಮೃತಪಡಿ, ನೈವೇದ್ಯ ಮತ್ತು ದೇವಾಲಯದ ಜೀರ್ಣೋದ್ಧಾರಕ್ಕಾಗಿ ದಾನ ನೀಡಿದರು. ಹಾಗೂ ಕರ್ನಾಟಕದ ಪ್ರಮುಖ ವಾಣಿಜ್ಯ ಸಂಘವಾದ ಐಯ್ಯಾವೊಳೆ ಐನ್ನೂರು ವರ್ತಕ ಸಂಘದ ವ್ಯಾಪಾರಿಗಳು ರಾಜಘಟ್ಟದಲ್ಲಿ

[೯೪] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೬

[೯೫] ಎ.ಕ-೯, ದೊ.ತಾ.೩೧, ಕ್ರಿ.ಶ.೧೨೬೭, ಕನ್ನಡ, ದೊಡ್ಡಬಳ್ಳಾಪುರ.

ವಾಣಿಜ್ಯ ಸಂಬಂಧ ಹೊಂದಿದ್ದರೆಂದ್ದರೆ ಕ್ರಿ.ಶ.೧೨೬೨ರ ಕಾಲಕ್ಕೆ ರಾಜಘಟ್ಟ ದೊಡ್ಡ ವಾಣಿಜ್ಯ ಕೇಂದ್ರವಾಗಿತ್ತು ಎಂಬುದನ್ನು ಸಹ ಇದೇ ಶಾಸನದಿಂದ ತಿಳಿಯಬಹುದು.

ಕ್ರಿ.ಶ.೧೨೬೯ ರ ಕನ್ನಡ ಶಾಸನದಲ್ಲಿ[೧೯೬]. ನರಸಿಂಹ ದೇವರಸರ ಜೊತೆಗೆ ಅವರ ತಂದೆಯಾದ ಸೋಮೇಶ್ವರ ಮತ್ತು ಸೋಮೇಶ್ವರನ ಬಿರುದುಗಳನ್ನು ಉಲ್ಲೇಖಿಸಲಾಗಿದೆ.

## ರಾಮನಾಥ (ಕ್ರಿ.ಶ.೧೨೫೮–೧೯೯೫)

ವೀರ ಸೋಮೇಶ್ವರ ಮತ್ತು ಬಿಜ್ಜಳೆಯ ಮಗನಾದ ರಾಮನಾಥನು ತಂದೆಯ ನಂತರ ತಮಿಳು ಪ್ರಾಂತ್ಯದ ಭಾಗವಾದ ಕಣ್ಣಾನೂರಿನಲ್ಲಿ ಆಳ್ವಕೆ ನಡೆಸಿದನು. ಕ್ರಿ.ಶ.೧೨೮೦ರಲ್ಲಿ ಪಾಂಡ್ಯರು ಕಣ್ಣಾನೂರಿನಿಂದ ಹೊರದೂಡಿದ ನಂತರ ರಾಮನಾಥನು ತನ್ನ ಭಾಗದ ದಕ್ಷಿಣದ ಕೆಲವು ಪ್ರದೇಶಗಳನ್ನು ಕಳೆದುಕೊಂಡು, ತನ್ನ ರಾಜಧಾನಿಯನ್ನು ಕೃಷ್ಣಗಿರಿ ಜಿಲ್ಲೆಯ ವೇಪನಪಲ್ಲಿ ತಾಲ್ಲೂಕಿನ ದೇವರ ಕುಂದಾಣಿಗೆ ಬಂದು ಮೂರನೇ ನರಸಿಂಹನ ಪಾಲಿನ ಕನ್ನಡ ಪ್ರದೇಶಗಳನ್ನು ಒತ್ತುವರಿ ನಡೆಸಿ ಅಣ್ಣನಿಗೆ ಕಿರುಕುಳ ಕೊಡುತ್ತಾ ಸುಮಾರು ೪೩ ವರ್ಷಗಳ ಕಾಲ ಆಡಳಿತ ನಿರ್ವಹಿಸಿದನು[೧೯೭] ಎಂಬುದಕ್ಕೆ ಹಲವಾರು ಶಾಸನಗಳು ದೊರಕಿರುತ್ತದೆ. ದೇವನಹಳ್ಳಿ ತಾಲ್ಲೂಕಿನ ಕುಂದಾಣವನ್ನು ರಾಮನಾಥನ ರಾಜಧಾನಿ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ ಆದರೆ ತಮಿಳುನಾಡಿನ ದೇವರ ಕುಂದಾಣಿಯೇ ರಾಜಧಾನಿ ಎಂಬುದಕ್ಕೆ ಹಲವಾರು ಅವಶೇಷಗಳನ್ನು ಅಲ್ಲಿ ಕಾಣಬಹುದು. ದೇವನಹಳ್ಳಿಯ ಕುಂದಾಣವನ್ನ ಹೆಸರ್ ಕುಂದಾಣ ಎಂದು ಮಾತ್ರ ಉಲ್ಲೇಖಿಸಲಾಗಿದೆ. ಬಹುಶಃ ತನ್ನ ಹಳೆಯ ರಾಜಧಾನಿ ನೆನಪಿನಲ್ಲಿ ಹೆಸರಿಟ್ಟಿರಬಹುದು. ರಾಮನಾಥನು ತಮಿಳು ಪ್ರಾಂತ್ಯವನ್ನು ಆಡಳಿತ ನಡೆಸುತ್ತಿದ್ದರಿಂದಲೇನೊ ಅಥವಾ ತಮಿಳು ಭಾಷೆಯ ಮೇಲಿನ ಪ್ರೇಮವೇನೊ ಜಿಲ್ಲೆಯಲ್ಲಿ ದೊರಕಿರುವ ಶಾಸನಗಳೆಲ್ಲ ತಮಿಳು ಭಾಷೆಯಲ್ಲಿಯೇ ಇದೆ. ರಾಮನಾಥನ ಪರವಾಗಿ ಅಧಿಕಾರಿಗಳು ದಾನ ನೀಡಿರುವುದಕ್ಕೆ ಹಲವಾರು ಶಾಸನಗಳಲ್ಲಿ ನೋಡ ಬಹುದು.

ರಾಮನಾಥನ ಆಳ್ವಕೆಯ ಕ್ರಿ.ಶ.೧೨೮೬ರಲ್ಲಿ ವಲ್ಲಾಳ ಸೆಟ್ಟಿಯರು ಅಯ್ಯಪದೇವರಿಗೆ[೧೯೮], ವೀರನ ತೋಳಿನ ಖಡ್ಗದ ಜಯವು ನಾಡಿನ ಜಯವಾಗಿದ್ದ ಜಯಕ್ಕಾಗಿ ಬ್ರಾಹ್ಮಣರಿಗೆ ದಾನ ನೀಡಿದರೆ ಶ್ರೇಷ್ಠ ಎನ್ನುವಂತೆ ಕ್ರಿ.ಶ.೧೨೮೭ರ ಶಾಸನದಲ್ಲಿ[೧೯೯] ವೀರ ರಾಮನಾಥನ ೩೩ನೇ ವರ್ಷದ ಆಳ್ವಕೆಯಲ್ಲಿ ಮಕರ

[೧೯೬] ಎ.ಕ-೯, ದೊ.ತಾ.೮, ಕ್ರಿ.ಶ.೧೨೬೯, ಕನ್ನಡ, ವಾಂಗರಹಳ್ಳಿ.

[೧೯೭] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೭೫.

[೧೯೮] ಎ.ಕ-೯, ನೆ.ತಾ.೩೬, ಕ್ರಿ.ಶ.೧೨೮೬, ತಮಿಳು, ಹುಸ್ಕೂರು.

[೧೯೯] ಎ.ಕ-೯, ದೇ.ತಾ.೫೩, ಕ್ರಿ.ಶ.೧೨೮೭, ತಮಿಳು, ಬಯನಹಳ್ಳಿ.

ಸಂಕ್ರಾತಿಯ ದಿನ ಬಳ್ಳಿಯನಾಡಿನ ಇರಾಮದೇವರ ತೋಳನ ಜಯಕ್ಕಾಗಿ ಬ್ರಾಹ್ಮಣರಿಗೆ ಕುದಿರಕಿರ್ರೈಗೆ ರಾಮನಾಥ ದೇವರ ಚರ್ತುವೇದಿ ಮಂಗಲ ಎಂದು ರಾಜರ ಹೆಸರನ್ನೇ ಒಂದು ಸೀಮೆ ಅಥವಾ ಪ್ರದೇಶಕ್ಕೆ ಪ್ರತಿನಾಮವಾಗಿ ಇಟ್ಟು ದಾನ ಕೊಡುತ್ತಾರೆ, ೩೪ನೇ ಆಳ್ವಕೆಯಲ್ಲಿ ಕ್ರಿ.ಶ.೧೨೮೮ರಲ್ಲಿ ಇಲ್ಲೈಪಕ್ಕನಾಡ ಅಧಿಕಾರಿ ವಲ್ಲಾಳನು[೨೦೦], ೩೭ನೇ ಆಳ್ವಕೆಯಾವಧಿಯಲ್ಲಿ ಕ್ರಿ.ಶ.೧೨೯೧ರಲ್ಲಿ ದೇವಧನವಾಗಿ[೨೦೧], ೩೯ನೇ ಆಳ್ವಕೆಯಲ್ಲಿ ಕ್ರಿ.ಶ.೧೨೯೪ರಲ್ಲಿ ರಾಮನಾಥನಿಗೆ ಒಳ್ಳೆಯದಾಗಲಿ ಎಂದು ಚೊಕ್ಕನಾಯನು ಸತ್ತುವಯ್ಯಾರ್ ತಿಯಗರನಿಗೆ ದೇವರಿಗೆ ಪೂಜೆ ಪುನಸ್ಕಾರ ಮಾಡಿಕೊಂಡು ಇರಲಿ[೨೦೨] ಎಂದು ದಾನ ನೀಡಿದರು.

ಕ್ರಿ.ಶ.೧೨೯೧ವರೆಗೆ ರಾಮನಾಥ ದೇವರನ್ನು ಪ್ರತಾಪ ಚಕ್ರವರ್ತಿ, ಭುಜಬಲ ಎಂದು ಮಾತ್ರ ಕರೆಯಲಾಗುತ್ತಿತ್ತು. ಆದರೆ ಕ್ರಿ.ಶ.೧೨೯೨ರ ಐಯಿಗಂಡಪುರದ ಧರ್ಮೇಶ್ವರ ದೇವಾಲಯದ ಮುಂದಿರುವ ಶಾಸನ[೨೦೩] ಮತ್ತು ಕ್ರಿ.ಶ.೧೨೯೪ ರ ಗುನ್ನೂರಿನ ಶಾಸನವಾದ[೨೦೪]. ಈ ಎರಡು ತಮಿಳು ದಾನ ಶಾಸನದಲ್ಲಿ ರಾಮನಾಥ ದೇವರನ್ನು ಶ್ರೀಪೃಥ್ವೀಶ್ವರ ವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಯಾದವ ಕುಲಾಂಬರದ್ಯುಮಣಿ, ದ್ವಾರವತೀಪುರಧೀಶ್ವರ, ಸರ್ವಜ್ಞ ಚೂಡಾಮಣಿ, ಮಲೆರಾಜ, ಗಂಡ ಬೇರುಂಢ, ಕದನಪ್ರಚಂಡ, ಏಕಾಂಗವೀರ, ಅಸಹಾಯಶೂರ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ, ಛಲದಂಕಮಲ್ಲ, ಮಗರರಾಜ್ಯ ನಿರ್ಮೂಲನ, ಪಾಂಡ್ಯಕುಲ ಸಮುದ್ಧರಣ, ಚೋಳರಾಜ್ಯ ಸ್ಥಾಪನಾಚಾರ್ಯ, ನಿಸ್ಸಂಕಮಲ್ಲ ದ್ವಾರಾಪತೀಶ್ವರ ಎಂದು ಕರೆಯಲಾಗಿರುವ ಬಿರುದುಗಳನ್ನು ಗಮನಿಸಿದರೆ ಕ್ರಿ.ಶ.೧೨೯೨ರಲ್ಲಿ ಮುಮ್ಮಡಿ ನರಸಿಂಹನ ಮರಣದ ನಂತರ ರಾಮನಾಥನೇ ದ್ವಾರಸಮುದ್ರಕ್ಕೆ ಚಕ್ರಾಧಿಪತಿಯಾಗಿ ಆಡಳತ ನಡೆಸಿರಬೇಕು. ತನ್ನ ಸಹೋದರನ ಮಗನಾದ ಮೂರನೇ ಬಲ್ಲಾಳನ ಜೊತೆ ಕಾದಾಡಿ ಕೊನೆಗೆ ಕ್ರಿ.ಶ.೧೨೯೫ರಲ್ಲಿ ತೀರಿಕೊಂಡನು[೨೦೫].

## ವಿಶ್ವನಾಥ (ಕ್ರಿ.ಶ.೧೨೯೫–೧೨೯೭)

ರಾಮನಾಥನ ನಂತರ ಮಗನಾದ ವಿಶ್ವನಾಥನು ೨ ವರ್ಷಗಳ ಕಾಲ ಆಳ್ವಕೆ ನಡೆಸಿದನು. ತಮಿಳುನಾಡು ಪ್ರಾಂತ್ಯದಲ್ಲಿ ಇವನ ಹೆಚ್ಚಿನ ದಾನ ಶಾಸನಗಳು ಮತ್ತು ಕೊಡುಗೆಗಳನ್ನು ಕಾಣ ಬಹುದು.

---

[೨೦೦] ಎ.ಕರ್-೯, ದೇ.ತಾ.೨೪, ಕ್ರಿ.ಶ.೧೨೮೮, ತಮಿಳು, ಯಂಬ್ರಹಳ್ಳಿ.

[೨೦೧] ಎ.ಕರ್-೯, ದೇ.ತಾ.೪೫, ಕ್ರಿ.ಶ.೧೨೯೧, ತಮಿಳು, ಸುರಧೇನುಪುರ.

[೨೦೨] ಎ.ಕರ್-೯, ಹೊ.ತಾ.೧೬೧, ಕ್ರಿ.ಶ.೧೨೯೪, ತಮಿಳು, ಗುನ್ನೂರು.

[೨೦೩] ಎ.ಕರ್-೯, ನೆ.ತಾ.೩೮ಬಿ, ಕ್ರಿ.ಶ.೧೨೯೨, ತಮಿಳು, ಅಯಿಗಂಡಪುರ.

[೨೦೪] ಎ.ಕರ್-೯, ಹೊ.ತಾ.೧೬೧, ಕ್ರಿ.ಶ.೧೨೯೪, ತಮಿಳು, ಗುನ್ನೂರು.

[೨೦೫] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೧೬.

ಜಿಲ್ಲೆಯಲ್ಲಿ ಕ್ರಿ.ಶ.೧೨೯೭ರ ಪರಮನಹಳ್ಳಿಯ ತಮಿಳು ದಾನ ಶಾಸನಗಳಲ್ಲಿ[೨೦೬] ಒಂದೇ ಕಾಲಾವಧಿಯ ಒಂದೇ ವಿಷಯವನ್ನು ಒಳಗೊಂಡ ಈ ಎರಡು ಶಾಸನಗಳು ಒಂದೇ ಗ್ರಾಮದಲ್ಲಿ ಕೆರೆ ಏರಿ ಮೇಲೆ ಮತ್ತು ಕೆರೆ ಕೋಡಿ ಬಳಿ ದೊರೆತಿದ್ದು. ಚೋಳಿಶ್ವರ ಒಡೆಯ ದೇವರಿಗೆ ದಾನ ನೀಡಿದ ವಿವರ ಇರುವ ಶಾಸನದಲ್ಲಿ ವಿಶ್ವನಾಥ ದೇವರ ೩ನೇ ವರ್ಷ ಆಳ್ವಿಕೆಯಲ್ಲಿ ಎಂದು ಇರುವುದನ್ನು ಕಂಡರೆ ತಂದೆ ರಾಮನಾಥ ದೇವರ ಆಡಳಿತಾವಧಿಯಲ್ಲೆ ಯಾವುದೊ ಪ್ರಾಂತ್ಯದಲ್ಲಿ ಕ್ರಿ.ಶ.೧೨೯೩ರಿಂದಲೇ ಆಳ್ವಿಕೆ ಪ್ರಾರಂಭಿಸಿರ ಬೇಕು. ಹಾಗೇಯೇ ಈ ಎರಡು ಶಾಸನದಲ್ಲಿ ರಾಮನಾಥ ದೇವರಿಗೆ ಇದ್ದಂತ ಯಾವುದೇ ಬಿರುದುಗಳನ್ನು ಉಲ್ಲೇಖಿಸದೆ ಪ್ರತಾಪ ಚಕ್ರವರ್ತಿ, ಹೊಯ್ಸಳ ವೀರ ಎಂದಷ್ಟೆ ಬಳಸಲಾಗಿರುವುದನ್ನು ನೋಡಿದರೆ ತಂದೆ ಆಡಳಿತ ನಡೆಸುತ್ತಿದ್ದ ತಮಿಳು ಪ್ರಾಂತ್ಯದಲ್ಲೇ ಆಡಳಿತ ನಡೆಸಿರಬೇಕು. ಮತ್ತು ಈ ಕಾಲಕ್ಕಾಗಲೇ ಅಂದರೆ ಕ್ರಿ.ಶ.೧೨೯೭ ಕಾಲಕ್ಕೆ ದ್ವಾರಸಮುದ್ರದಲ್ಲಿ ಮುಮ್ಮಡಿ ನರಸಿಂಹನ ಮಗನಾದ ಮುಮ್ಮಡಿ ಬಲ್ಲಾಳನು ಅಧಿಕಾರ ಚುಕ್ಕಾಣಿಯನ್ನು ಹಿಡಿದಿದ್ದನು.

## ಮುಮ್ಮಡಿ ಬಲ್ಲಾಳ (ಕ್ರಿ.ಶ.೧೨೯೨–೧೩೪೩)

ರಾಮನಾಥನು ಜೀವಂತವಾಗಿದ್ದಾಗಲೇ ಮುಮ್ಮಡಿ ನರಸಿಂಹನ ಮಗನಾದ ಮುಮ್ಮಡಿ ಬಲ್ಲಾಳನು ಕ್ರಿ.ಶ.೧೨೯೨ ಜನವರಿ ೩೧ ರಂದು ಸಮಗ್ರ ಹೊಯಿಸಳ ರಾಜ್ಯಕ್ಕೆ ಅಧಿಪತಿಯಾಗಿ ವಿಜಯನಗರ ಸ್ಥಾಪನೆಯಾಗೊವರೆಗೂ[೨೦೭] ಸುಮಾರು ೫ ದಶಕಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದನು[೨೦೮]. ಕ್ರಿ.ಶ.೧೨೯೧ರಲ್ಲಿ ಪಟ್ಟವೇರಿದ ಗಣ್ಯಾರಸು ವಯಸ್ಸು ೨೮ ವರ್ಷಗಳಾಗಿರ ಬೇಕು. ಬಲ್ಲಾಳನು ಪಟ್ಟವೇರಿದ ನಂತರ ಚಿಕ್ಕಪ್ಪನಾದ ರಾಮನಾಥನ ಹಲವಾರು ದಾಳಿಗಳನ್ನು ಎದುರಿಸ ಬೇಕಾಯಿತ್ತು. ಕ್ರಿ.ಶ.೧೨೯೨ರಲ್ಲಿ[೨೦೯] ಬಲಿಬಹರಾಂಡನಹಳ್ಳಿಯಲ್ಲಿ ಮಾರದೇವರು, ಕ್ರಿ.ಶ.೧೨೯೪ ರಲ್ಲಿ[೨೧೦] ಗಂಗವಾಡಿಯ ಕೇತಂಣನು, ಕ್ರಿ.ಶ.೧೨೯೫ ರಲ್ಲಿ[೨೧೧] ಹಾಳವಾಡಿಯ ಅಲ್ಲಪ್ಪನು ರಾಮನಾಥನ ದಾಳಿಯನ್ನು ಎದುರಿಸಿ ಹೋರಾಡಿ ಮರಣ ಹೊಂದಿದ್ದರು.

ಮುಮ್ಮಡಿ ನರಸಿಂಹನ ಕಾಲದಲ್ಲೆ ವೀರ ಬಲ್ಲಾಳನು ಮಾಂಡಲಿಕನಾಗಿ ಆಳ್ವಿಕೆ ನಡೆಸಿದ್ದಿರ ಬೇಕು. ಅಧಿಕಾರಕ್ಕೆ ಬಂದ ಕೂಡಲೇ ಹೊಯ್ಸಳರ ಕಣ್ಣಾನೂರು ಶಾಖೆಯನ್ನು ಕ್ರಿ.ಶ.೧೩೦೦ರಲ್ಲಿ ಮೂಲ

---

[೨೦೬] ಎ.ಕ-೯, ಹೊ.ತಾ.೧೩೬ ಮತ್ತು ೧೩೮, ಕ್ರಿ.ಶ.೧೨೯೭, ತಮಿಳು, ಪರಮನಹಳ್ಳಿ.

[೨೦೭] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೭೬

[೨೦೮] ಕರ್ನಾಟಕ ರಾಜ್ಯ ಗ್ಯಾಜಿಟಿಯರ್‌ಸಂಪುಟ-೧, ಅಧ್ಯಾಯ-೨, ಪು.ಸಂ-೨೧೪.

[೨೦೯] ಎ.ಕ-೯, ಕ.ತಾ.೨೮, ಕ್ರಿ.ಶ.೧೨೯೨, ಕನ್ನಡ, ಕೋಟೆಕೊಪ್ಪ.

[೨೧೦] ಎ.ಕ-೯, ಚ.ತಾ.೧೮೩, ಕ್ರಿ.ಶ. ೧೨೯೪, ಕನ್ನಡ, ದೊಡ್ಡ ಗಂಗವಾಡಿ.

[೨೧೧] ಎ.ಕ-೯, ಚ.ತಾ.೧೭೯, ಕ್ರಿ.ಶ.೧೨೯೫, ಕನ್ನಡ, ತಾಳವಾಡಿ.

ಶಾಖೆಯಾದ ದ್ವಾರಸಮುದ್ರದೊಂದಿಗೆ ವಿಲೀನ ಮಾಡಿದನು[೨೧೨]. ಬಲ್ಲಾಳನು ಕ್ರಿ.ಶ.೧೨೯೨ರಲ್ಲಿ ಅಧಿಕಾರ ಬಂದರು ಸಹ ಜಿಲ್ಲೆಯಲ್ಲಿ ಕ್ರಿ.ಶ.೧೨೯೮ರ ಕಾಲದಿಂದಲೇ ಸುಮಾರು ೫೦ ವರ್ಷಗಳ ಕಾಲಾವಧಿಯಲ್ಲಿನ ಕನ್ನಡ ಮತ್ತು ತಮಿಳು ಭಾಷೆಯಲ್ಲಿ ನೂರಕ್ಕು ಹೆಚ್ಚು ಶಾಸನಗಳು ದೊರೆತ್ತಿದ್ದು, ಮುಮ್ಮಡಿ ಬಲ್ಲಾಳನನ್ನು ಕನ್ನಡ ಶಾಸನಗಳಲ್ಲಿ ಬಲ್ಲಾಳದೇವ, ಬಲ್ಲಾಳ ದೇವರಸ, ಬಲ್ಲಾಳರಾಯ ಎಂದು ಕರೆದರೆ, ತಮಿಳು ಶಾಸನದಲ್ಲಿ ವಲ್ಲಾಳ ದೇವರ್, ವಲ್ಲಾಳ ದೇವ ಎಂದು ಕರೆಯಲಾಗಿದೆ.

ತಾತ ಸೋಮೇಶ್ವರ ಕಾಲದಲ್ಲಿ ವಿಭ್ಭಾಗವಾಗಿದ್ದ ಹೊಯ್ಸಳ ಸಾಮ್ರಾಜ್ಯವನ್ನು ಒಂದು ಗೂಡಿಸಿ ಹೊಯ್ಸಳರ ಹಿಂದಿನ ಮಾಂಡಲಿಕರು ದಂಗೆ ಎದ್ದಾಗ ಎಲ್ಲ ದಂಗೆಯನ್ನು ತಡೆಯುತ್ತಾನೆ. ತಮಿಳುನಾಡಿನಲ್ಲಿ ಎದ್ದ ದಂಗೆಯನ್ನು ಅಡಗಿಸಲು ಹೋದ ಸಮಯದಲ್ಲಿ ದ್ವಾರಸಮುದ್ರದ ಮೇಲೆ ಮಲ್ಲಿಕಾಫರ್ ದಾಳಿ ಮಾಡಿದಾಗ ಬಲ್ಲಾಳನು ಜಾಣತನದಿಂದ ರಾಜಿ ಮಾಡಿಕೊಳ್ಳುತ್ತಾನೆ[೨೧೩]. ಆಡಳಿತದ ಅನುಕೂಲಕ್ಕಾಗಿ ಜಿಲ್ಲೆಯನ್ನು ಯಲಹಂಕನಾಡು, ಮಣ್ಣೆನಾಡು, ಕುಕ್ಕಲನಾಡು, ಕೈವಾರನಾಡು, ಪುಲಿಯೂರುನಾಡು ಎಂದು ಹಲವಾರು ನಾಡುಗಳಾಗಿ ವಿಭಾಗಿಸಿ ನಾಡಪ್ರಭುಗಳು ಅಥವಾ ಅಧಿಕಾರಿಗಳ ಮುಖಾಂತರ ಆಡಳಿತ ನಡೆಸುತ್ತಿದ್ದನು[೨೧೪].

ವೀರ ಬಲ್ಲಾಳನ ಕನ್ನಡ ಮತ್ತು ತಮಿಳು ಶಾಸನಗಳಲ್ಲಿ ಒಂದೇ ರೀತಿಯ ಬಿರುದುಗಳನ್ನು ಕಾಣ ಬಹುದು. ಹಾಗೂ ಬಿರುದುಗಳಿಂದ ಇದು ಬಲ್ಲಾಳದೇವನ ಶಾಸನ ಅಂತ ಗುರ್ತಿಸುವಷ್ಟು ಪ್ರಸಿದ್ಧಿಯಾದ ಬಿರುದುಗಳನ್ನು ಹೊಂದಿದನು. ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಯಾದವ ಕುಲಾಂಬರದ್ಯುಮಣಿ, ಪರಮ ಭಟ್ಟಾರಕ, ದ್ವಾರವತೀಪುರವರಧಿಶ್ವರ, ಸರ್ವಜ್ಞ ಚೂಡಾಮಣಿ, ಮಲೆರಾಜ ರಾಜ ಮಲಪರೊಳುಗಂಡ, ಗಂಡಬೇರುಂಢ, ಕದನಪ್ರಚಂಡ, ಏಕಾಂಗಿವೀರ, ಅಸಹಾಯಶೂರ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ, ಛಲದಂಕರಾಮ, ವೈರೀಭ ಕಂಠೀರವ, ಮಗರರಾಜ್ಯ ನಿರ್ಮೂಲಕ, ಚೋಳರಾಜ್ಯ ಸ್ಥಾಪನಾಚಾರ್ಯ, ಪಾಂಡ್ಯಕುಲ ಸಮುದ್ಧರಣ, ನಿಸ್ಸಂಕ ಪ್ರತಾಪ ಚಕ್ರವರ್ತಿ, ಹೊಯ್ಸಳ ಭುಜಬಲ ವೀರ ಬಲ್ಲಾಳ ದೇವ ಎಂದು ಸಾಮನ್ಯವಾಗಿ ಒಂದೇ ರೀತಿಯ ಬಿರುದುಗಳನ್ನು ಕಾಣ ಬಹುದು.

---

[೨೧೨] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೧೪.

[೨೧೩] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೨೯.

[೨೧೪] ಎ.ಕ-೯, ನೆ.ತಾ.೩೮, ಕ್ರಿ.ಶ.೧೩೦೧, ತಮಿಳು, ಅಯಿಗಂಡಪುರ, ಬೆಂ.೫೧, ಕ್ರಿ.ಶ.೧೩೦೧, ತಮಿಳು, ಗುಂಜೂರು ಮತ್ತು ಬೆಂ.೬೫, ಕ್ರಿ.ಶ.೧೩೬೬,ತಮಿಳು, ಮಡಿವಾಳ.

ದಕ್ಷಿಣ ಭಾರತದ ಗಣ್ಯ ರಾಜಮನೆತನಗಳೇ ಮರೆಯಾದಾಗ ಕ್ರಿ.ಶ.೧೩೧೧ರ ನಂತರ ಮಲ್ಲಿಕಾಫರ್‌ನ ನಿರಂತರ ದಾಳಿಯಿಂದ ತತ್ತರಿಸಿ ಹೋಗಿ ಅವನೊಂದಿಗೆ ಸ್ನೇಹವನ್ನು ಬೆಳೆಸಿ, ಕಪ್ಪ ಕಾಣಿಕೆ ನೀಡಿ, ತನ್ನ ಹೊಯ್ಸಳ ರಾಜ್ಯವನ್ನು ರಕ್ಷಿಸಲು ರಾಜಧಾನಿಯನ್ನು ಬದಲಾಯಿಸಿದನು. ಹೊಸ ರಾಜಧಾನಿಯನ್ನು ಸ್ಥಾಪಿಸಿ ಅಲ್ಲಿ ಸೇನೆಯನಿಟ್ಟು ಆಳ್ವಿಕೆ ನಡೆಸುತ್ತಿದ್ದನು. ಪ್ರಾರಂಭದಲ್ಲಿ ದ್ವಾರಸಮುದ್ರ, ನಂತರ ಉಣಮಲೆಪಟ್ಟಣ, ತದ ನಂತರ ಹೊಸಪಟ್ಟಣ ಅಥವಾ ವಿರೂಪಾಕ್ಷಪುರ ಎಂಬ ರಾಜಧಾನಿಯನ್ನು ಸ್ಥಾಪಿಸಿ ಅಲ್ಲಿಂದ ರಾಜ್ಯಭಾರ ಮಾಡಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಕ್ರಿ.ಶ.೧೨೯೮ ರಿಂದ ೧೩೨೭ ವರೆಗೂ ಶಾಸನಗಳಲ್ಲಿ ಬಲ್ಲಾಳ ದೇವನು ದ್ವಾರಸಮುದ್ರದಿಂದ, ಕ್ರಿಶ.೧೩೨೮ರ ಹಾಡೋನಹಳ್ಳಿ,[೨೧೫] ಕ್ರಿ.ಶ.೧೩೪೨ರ ಪಟ್ಟಂದೂರು[೨೧೬], ಕ್ರಿ.ಶ.೧೩೪೨ರ ಸಾದೇನಹಳ್ಳಿಯ[೨೧೭] ಕನ್ನಡ ಶಾಸನಗಳಲ್ಲಿ ಉಣಮಲೆ ಪಟ್ಟಣದಲ್ಲಿ ಸುಖದಿಂದ ರಾಜ್ಯಭಾರ ಮಾಡುತ್ತಿರಲು, ಕ್ರಿ.ಶ.೧೩೩೩ರ ಮಂತಾಳು[೨೧೮] ಕನ್ನಡ ಶಾಸನದಲ್ಲಿ ಹೊಸಪಟ್ಟಣ ಎಂದು, ಕ್ರಿ.ಶ.೧೩೪೦ರ ಶ್ಯಾಕಲದೇವನಪುರದ[೨೧೯] ಕನ್ನಡ ಶಾಸನದಲ್ಲಿ ಹೊಸನಾಡು ಎಂದು, ಕ್ರಿ.ಶ.೧೩೪೨ರ ಮುದಗಲಕೆರೆಯ[೨೨೦] ಕನ್ನಡ ಶಾಸನದಲ್ಲಿ ವಿರೂಪಾಕ್ಷಪುರದಲ್ಲಿ ಸುಖದಿಂದ ಪೃಥ್ವೀಗೆಯ್ಯುತ್ತಿರಲು ಎಂದು ಹೊಸ ರಾಜಧಾನಿಯ ಉಲ್ಲೇಖಗಳನ್ನು ಕಾಣ ಬಹುದು.

ಜಿಲ್ಲಾ ವ್ಯಾಪ್ತಿಯಲ್ಲಿನ ನಾಡುಗಳ ಆಡಳತಕ್ಕಾಗಿ ಹಲವಾರು ಸಾಮಂತರು, ದಣ್ಣಾಯಕರು, ಅಧಿಕಾರಿಗಳನ್ನು ನೇಮಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಬಲ್ಲಾಳ ಕಾಲದಲ್ಲಿ ಮಹಾ ಪ್ರಧಾನ ದಣ್ಣಾಯಕರಾದ ಕ್ರಿ.ಶ.೧೩೧೪ರಲ್ಲಿ ಮಹಾ ಪ್ರಧಾನ ತಮ್ಮ ಸಿಂಗಯ್ಯ ದಣ್ಣಾಯಕ[೨೨೧], ಕ್ರಿ.ಶ.೧೩೨೮ರಲ್ಲಿ ಮಹಾ ಪ್ರಧಾನ ಪೊನ್ನಣನ ಮಕ್ಕಳಾದ ಕ್ರಿ.ಶ.೧೩೨೮ ರಲ್ಲಿ ಶ್ರೀಮೆಯ ದಂಣಾಯಕ[೨೨೨], ಕಾಮ ದಣ್ಣಾಯಕ[೨೨೩], ಯೆನಪಯ[೨೨೪], ಹೊಯ ದಣ್ಣಾಯಕರು[೨೨೫] ಒಂದೇ ತಂದೆಯ ನಾಲ್ಕು ಮಕ್ಕಳು ಒಂದೇ ಅವಧಿಯಲ್ಲಿ, ಒಂದೇ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ಕ್ರಿ.ಶ.೧೩೩೦ರಲ್ಲಿ ಜಾಲೆಯ

---

೨೧೫ ಎ.ಕ-೯, ದೊ.ತಾ.೧೪, ಕ್ರಿ.ಶ. ೧೩೨೮, ಕನ್ನಡ, ಹಾಡೋನಹಳ್ಳಿ.
೨೧೬ ಎ.ಕ-೯, ಹೊ.ತಾ.೧೪೭, ಕ್ರಿ.ಶ. ೧೩೪೨, ಕನ್ನಡ, ಪಟ್ಟಂದೂರು.
೨೧೭ ಎ.ಕ-೯, ದೇ.ತಾ.೪೬, ಕ್ರಿ.ಶ.೧೩೪೨, ಕನ್ನಡ, ಸಾದೇನಹಳ್ಳಿ.
೨೧೮ ಎ.ಕ-೯, ನೆ.ತಾ.೯, ಕ್ರಿ.ಶ.೧೩೩೩, ಕನ್ನಡ, ಮಂತಾಳು.
೨೧೯ ಎ.ಕ-೯, ದೊ.ತಾ.೪೩, ಕ್ರಿ.ಶ.೧೩೪೦ ಕನ್ನಡ, ಶ್ಯಾಕಲ ದೇವನ ಪುರ.
೨೨೦ ಎ.ಕ-೯, ದೇ.ತಾ.೨೧, ಕ್ರಿ.ಶ.೧೩೪೨, ಕನ್ನಡ, ಮುದಗಲ ಕೆರೆ.
೨೨೧ ಎ.ಕ-೯, ಹೊ.ತಾ.೧೩೯, ಕ್ರಿ.ಶ.೧೩೧೪, ತಮಿಳು, ಪರಮನಹಳ್ಳಿ.
೨೨೨ ಎ.ಕ-೯, ದೊ.ತಾ.೧೪, ಕ್ರಿ.ಶ.೧೩೨೮, ಕನ್ನಡ ಹಾಡೋನಹಳ್ಳಿ.
೨೨೩ ಎ.ಕ-೯, ಕ್ರಿ.ಶ.೧೩೨೮, ಕನ್ನಡ, ದೊ.ತಾ.೧೮, ಕುರುವಿಗೆರೆ, ದೇ.ತಾ.೧, ತಿಂಡಲು, ಹೊ.ತಾ.೧೨೪, ಬಯಿರಿತ್ತಿ.
೨೨೪ ಎ.ಕ-೯, ದೊ.ತಾ.೩೮, ಕ್ರಿ.ಶ.೧೩೨೮, ಕನ್ನಡ, ಶಿವಪುರ.
೨೨೫ ಎ.ಕ-೯, ದೇ.ತಾ.೬೦, ಕ್ರಿ.ಶ.೧೩೨೮, ಕನ್ನಡ, ಚಿಕ್ಕಜಾಲ.

ದಣ್ಣಾಯಕ[226], ಕ್ರಿ.ಶ.೧೩೩೦, ೩೧, ೩೨ ರಲ್ಲಿ ಸಿಂಗೆಯ ದಣ್ಣಾಯಕ[227], ಕ್ರಿ.ಶ.೧೩೩೬ರಲ್ಲಿ ಮಹಾ ಪ್ರಧಾನ ಸಿಂಗೆ ದಣ್ಣಾಯಕರ ತಮ್ಮ ವಲ್ಲಪ್ಪ ದಣ್ಣಾಯಕ[228], ಕ್ರಿ.ಶ.೧೩೩೯ರಲ್ಲಿ ಜಲ್ಲಪ್ಪ ದಣ್ಣಾಯಕ[229], ಕ್ರಿ.ಶ.೧೩೪೨ರಲ್ಲಿ ದೇವಪ್ಪ[230], ಸೊಣ್ಣಯನಾಯಕ[231], ಕ್ರಿ.ಶ.೧೩೪೩ರಲ್ಲಿ ವೆಟ್ಟರಸ[232], ಬೆಟ್ಟರಸ[233] ದಣ್ಣಾಯಕರುಗಳು ಆಳ್ವಿಕೆ ನಡೆಸಿದ್ದಾರೆ. ಕ್ರಿ.ಶ.೧೩೧೧ರಲ್ಲಿ ಮಹಿಲೆಯನಾಯಕ[234], ಕ್ರಿ.ಶ.೧೩೨೮ರಲ್ಲಿ ಸಿಗಲನಾಡಿನಲ್ಲಿಯೂ, ಪುಣ್ಣಾಡ-೭೦ ರಲ್ಲಿಯೂ ಯಲಳಪರಸರ[235], ಕ್ರಿ.ಶ.೧೩೧೫ರಲ್ಲಿ ವೈಸಂದಗಲಿ[236], ಕ್ರಿ.ಶ.೧೩೩೨ರಲ್ಲಿ ವೈಚ್ಚಗಾವುಂಡ[237], ಕ್ರಿ.ಶ.೧೩೩೨ರಲ್ಲಿ ನಾಗದೇವನು[238] ಪುಲಿಯೂರು ನಾಡಿನಲ್ಲಿಯೂ, ಕ್ರಿ.ಶ.೧೩೩೩ರಲ್ಲಿ ಅಮ್ಮೆನಾಯಕನು ತಿರುಕ್ಕುಂಜಿ ನಾಡಿನಲ್ಲಿಯೂ[239], ಕ್ರಿ.ಶ.೧೩೩೩ರಲ್ಲಿ ಮಹಿಲೆಯ ಜನ್ನಯನಾಯಕ[240], ಕ್ರಿ.ಶ.೧೩೪೨ರಲ್ಲಿ ಚಿಕ್ಕನಾಯಕ[241], ಕ್ರಿ.ಶ.೧೩೪೩ರಲ್ಲಿ ಗಂಡರಗುಳ ಅಂಕಯ್ಯನಾಯಕರುಗಳು[242] ಮಹಾಸಾಮಂತಾಧಿಪತಿಗಳಾಗಿ ಆಳ್ವಿಕೆ ನಡೆಸಿದರು.

ಬಲ್ಲಾಳನ ಆಳ್ವಿಕೆಯಲ್ಲಿ ಹಲವಾರು ಕೆರೆಗಳು ಮತ್ತು ದೇವಾಲಯಗಳ ನಿರ್ಮಾಣ, ದೇವಾಲಯಗಳಿಗೆ, ಬ್ರಾಹ್ಮಣರಿಗೆ, ವೀರರಿಗೆ, ಅಧಿಕಾರಿಗಳಿಗೆ ದಾನ ದತ್ತಿಗಳನ್ನು ನೀಡಿರುತ್ತಾನೆ. ವೀರ ಬಲ್ಲಾಳ ದೇವನು ನೇರವಾಗಿ ದಾನ ನೀಡಿರುವ ಹಲವಾರು ಶಾಸನಗಳನ್ನು ಗಮನಿಸಬಹುದು. ಕ್ರಿ.ಶ.೧೩೦೦ರ ಗಂಗವಾರ ದೇವಾಲಯ ಬಳಿ ಇರುವ ಎರಡು ತಮಿಳು ಶಾಸನದಲ್ಲಿ ದೇವರಿಗೆ[243], ಕ್ರಿ.ಶ.೧೩೧೯ರ ಮಣ್ಣೆಯಲ್ಲಿನ ಕನ್ನಡ ಶಾಸನದಲ್ಲಿ[244] ಹಿರಿಯ ತಿರುಮಲೆ ತಿರುನಾಳಿಗೆ ಹಾಲು,

---

226 ಎ.ಕ-೯, ನೆ.ತಾ.೧೨, ಕ್ರಿ.ಶ.೧೩೩೦, ಕನ್ನಡ, ಕಿತ್ತನಲ್ಲಿ.
227 ಎ.ಕ-೯, ಕ್ರಿ.ಶ. ೧೩೩೦, ತಮಿಳು, ಹೊ.ತಾ.೫೬, ಸೂಲಿಬೆಲೆ ಮತ್ತು ಹೊ.ತಾ.೮೧, ಚಿಕ್ಕನಲ್ಲೂರು ಹಾಗೂ ಹೊ.ತಾ.೧೪೦ ಎ, ಕ್ರಿ.ಶ.೧೩೩೧, ತಮಿಳು, ದೇವಿಶೆಟ್ಟಿಹಳ್ಳಿ ಜೊತೆಗೆ ಕ್ರಿ.ಶ.೧೩೩೨, ತಮಿಳು, ಹೊ.ತಾ.೧೦೪, ಸತ್ಯವಾರ & ಹೊ.ತಾ.೧೪೦, ದೇವಿಸೆಟ್ಟಿಹಳ್ಳಿ.
228 ಎ.ಕ-೯, ಹೊ.ತಾ.೧೩೪, ಕ್ರಿ.ಶ.೧೩೩೬, ತಮಿಳು, ವಾಗಟ.
229 ಎ.ಕ-೯, ಹೊ.ತಾ.೪೩, ಕ್ರಿ.ಶ.೧೩೩೯, ಕನ್ನಡ, ಕೊರಟ.
230 ಎ.ಕ-೯, ಹೊ.ತಾ.೯೦, ಕ್ರಿ.ಶ.೧೩೪೨, ತಮಿಳು, ಅಟ್ಟೂರು.
231 ಎ.ಕ-೯, ದೇ.ತಾ.೨೧, ಕ್ರಿ.ಶ.೧೩೪೨, ಕನ್ನಡ, ಮುದಗುರಕಿ.
232 ಎ.ಕ-೯, ಹೊ.ತಾ.೧೧೨, ಕ್ರಿ.ಶ. ೧೩೪೩, ತಮಿಳು, ಕಮ್ಮಸಂದ್ರ
233 ಎ.ಕ-೯, ಅನುಬಂಧ, ದೇ.ತಾ.೯೨, ಕನ್ನಡ, ಜೋಡಿ ದಳಸಿಗೆರೆ.
234 ಎ.ಕ-೯, ನೆ.ತಾ.೯, ಕ್ರಿ.ಶ.೧೩೩೩, ಕನ್ನಡ, ಮಂಠಾಳು.
235 ಎ.ಕ-೯, ದೊ.ತಾ.೩೮, ಕ್ರಿ.ಶ.೧೩೨೮, ಕನ್ನಡ, ಶಿವಪುರ.
236 ಎ.ಕ-೯, ಹೊ.ತಾ.೧೫೯, ಕ್ರಿ.ಶ.೧೩೧೫, ತಮಿಳು, ಅರಹಳ್ಳಿ.
237 ಎ.ಕ-೯, ಹೊ.ತಾ.೧೦೪, ಕ್ರಿ.ಶ.೧೩೩೨, ತಮಿಳು, ಸತ್ಯವಾರ ಮತ್ತು ಹೊ.ತಾ.೧೪೦, ಕ್ರಿ.ಶ.೧೩೩೨, ತಮಿಳು, ದೇವಿಶೆಟ್ಟಿಹಳ್ಳಿ.
238 ಎ.ಕ-೯, ಹೊ.ತಾ.೧೪೦, ಕ್ರಿ.ಶ.೧೩೩೨, ತಮಿಳು, ದೇವಿಶೆಟ್ಟಿಹಳ್ಳಿ.
239 ಎ.ಕ-೯, ಹೊ.ತಾ.೯೭, ಕ್ರಿ.ಶ.೧೩೩೧, ತಮಿಳು, ಮುಗಬಾಳ.
240 ಎ.ಕ-೯, ನೆ.ತಾ-೯, ಕ್ರಿ.ಶ.೧೩೩೩, ಕನ್ನಡ, ಮಂಠಾಳು.
241 ಎ.ಕ-೯, ಹೊ ತಾ.೧೪೭, ಕ್ರಿ.ಶ.೧೩೪೨, ಕನ್ನಡ, ಪಟ್ಟಂದೂರು.
242 ಎ.ಕ-೯, ಹೊ.ತಾ.೭೫, ಕ್ರಿ.ಶ.೧೩೪೩, ತಮಿಳು, ನಿಡುಬೆಟ್ಟ.
243 ಎ.ಕ-೯, ದೇ.ತಾ.೭೮, ೮೦, ಕ್ರಿ.ಶ.೧೩೦೦, ತಮಿಳು, ಗಂಗವಾರ.
244 ಎ.ಕ-೯, ನೆ.ತಾ.೫೭, ಕ್ರಿ.ಶ.೧೩೧೯, ಕನ್ನಡ, ಮಣ್ಣೆ.

ಬೆಣ್ಣೆಸೇವೆಗೆ ಅಂಬಲಿಗೆರೆ ಪುರುಷನಹಳ್ಳಿಯನ್ನು ಮತ್ತು ಕ್ರಿ.ಶ.೧೩೨೪ರ ಮಂಡೂರು ತಮಿಳು ಶಾಸನದಲ್ಲಿ[೨೪೫] ವಯಿರಿದೇವರಿಗೆ, ಸಿಕ್ಕಿದೇವರಿಗೆ ಹಾಗೂ ಕ್ರಿ.ಶ.೧೩೩೧ರಲ್ಲಿ ಶ್ರೀ ಮುಕ್ತಿನಾಥದೇವರಿಗೆ[೨೪೬] ದಾನಗಳನ್ನು ನೀಡಿದ ವಿವರಗಳಿವೆ.

ಬಲ್ಲಾಳ ದೇವನ ಪರವಾಗಿ ಅಧಿಕಾರಿಗಳು, ಮಾಂಡಲಿಕರು, ನಾಡಪ್ರಭುಗಳು, ಗಾವುಂಡರು ದಾನ ದತ್ತಿಗಳನ್ನು ನೀಡಿ ಶಾಸನಗಳನ್ನು ಹಾಕಿರುವುದಕ್ಕೆ ಹಲವಾರು ಶಾಸನಗಳಲ್ಲಿ ಮಾಹಿತಿ ಲಭಿಸುತ್ತದೆ. ಕ್ರಿ.ಶ.೧೩೧೫ರ ಅರಹಳ್ಳಿಯ ತಮಿಳು ಶಾಸನದಲ್ಲಿ[೨೪೭] ಬಲ್ಲಾಳ ದೇವನ ಜಯಕ್ಕಾಗಿ ಮಹಾ ಸಾಮಂತಾಧಿಪತಿ ಸೆವಿದೈನಾಯನರು ದೇವರಿಗೆ, ಕ್ರಿ.ಶ.೧೩೨೮ರ ಹಾಡೋನಹಳ್ಳಿಯ ಕನ್ನಡ ಶಾಸನದಲ್ಲಿ[೨೪೮] ಪುನ್ನಾಡು-೭೦ನ್ನು ಆಳುತ್ತಿರುವ ಯಲಲಪರಸರು ವರಹರೇಶ್ವರ ದೇವರಿಗೆ, ಕ್ರಿ.ಶ.೧೩೨೮ರ ಚಿಕ್ಕಜಾಲದ ಕನ್ನಡ ಶಾಸನದಲ್ಲಿ[೨೪೯] ಹೊಯ ದಣ್ಣಾಯಕರು ತೆರಿಗೆಗಳನ್ನು ಸಂಗ್ರಹ ಮಾಡಿ ಜಾಲದ ಚನ್ನಕೇಶವ ದೇವರಿಗೆ ಅಂಗಭೋಗ, ರಂಗಭೋಗ, ಅಮೃತಪಡಿ, ನಂದಾದೀಪಕ್ಕೆ, ಕ್ರಿ.ಶ.೧೩೩೦ರ ಜೋಡಿ ದಾಸರಹಳ್ಳಿಯ ತಮಿಳು ಶಾಸನದಲ್ಲಿ[೨೫೦] ಬಲ್ಲಾಳ ದೇವನ ಜಯಕ್ಕಾಗಿ ಪುಲಿಯೂರು ನಾಡಪ್ರಭು ಸೋಮನಾಥನು ದೇವರಿಗೆ, ಹಾಗೂ ಚಿಕ್ಕ ನಲ್ಲೂರುನಲ್ಲಿ ಕೆರೆ ಕಟ್ಟಿದಕ್ಕೆ, ಕ್ರಿ.ಶ.೧೩೩೬ರ ವಾಗಟ ತಮಿಳು ಶಾಸನದಲ್ಲಿ[೨೫೧] ಬಲ್ಲಾಳ ದೇವನ ೨೫ನೇ ವರ್ಷದ ಆಳ್ವಿಕೆಯ ಸಂಭ್ರಕ್ಕಾಗಿ ವಲ್ಲಪ್ಪ ದಣ್ಣಾಯಕರು ವರದರಾಜ ದೇವರಿಗೆ ದಾನಗಳನ್ನು ನೀಡಿದ್ದಾರೆ.

ತೆರಿಗೆಗಳು ರಾಜ್ಯಾದಾಯವಾಗಿದ್ದು ಯಾವ ರೀತಿಯ ತೆರಿಗೆಗಳು ದ್ವಾರಸಮುದ್ರದಲ್ಲಿ ಜಾರಿಯಲ್ಲಿದ್ದವು ಅನ್ನೋದ್ದನ್ನ ಕ್ರಿ.ಶ.೧೩೦೧ರ ಐವರುಕಂಡಪುರದ ತಮಿಳು ಶಾಸನದಲ್ಲಿ[೨೫೨] ನಾಡುಗಳು ಮತ್ತು ನಾಡುಗಳಲ್ಲಿನ ತೆರಿಗೆಗಳ ಉಲ್ಲೇಖವನ್ನು ಕಾಣಬಹುದು. ಹಾಗೇಯೆ ಕ್ರಿ.ಶ.೧೩೦೬ರ ಇಸ್ತೂರು ಕನ್ನಡ ಶಾಸನದಲ್ಲಿ[೨೫೩] ೧೧ ಸಾಲುಗಳಲ್ಲಿ ತೆರಿಗೆಗಳ ಮಂಜೂರುಗಳ ಮಾಹಿತಿಯನ್ನು ನೋಡಬಹುದು. ಕ್ರಿ.ಶ.೧೩೧೪ರ ಪರಮನಹಳ್ಳಿಯ ತಮಿಳು ಶಾಸನದಲ್ಲಿ[೨೫೪] ಕೆರೆ ದಂಡೆಯನ್ನು ಜೀರ್ಣೋದ್ಧಾರ ಮಾಡಿಸಿದಕ್ಕಾಗಿ ಸೊಮಿಯ, ದಾಮೋಧರರಿಗೆ ಹಾಗೂ ಕ್ರಿ.ಶ.೧೩೩೦ರ ಸೂಲಿಕೆರೆಯ ತಮಿಳು

---

೨೪೫ ಎ.ಕ-೯, ಹೊ.ತಾ.೧೨೬, ಕ್ರಿ.ಶ.೧೩೨೪, ತಮಿಳು, ಮಂಡೂರು.

೨೪೬ ಎ.ಕ-೯, ಅನುಬಂಧ ನೆ.ತಾ.೧೦೩, ಕ್ರಿ.ಶ.೧೩೩೧, ಕನ್ನಡ, ಬಿನ್ನಮಂಗಲ.

೨೪೭ ಎ.ಕ-೯, ಹೊ.ತಾ.೧೫೯, ಕ್ರಿ.ಶ.೧೩೧೫, ತಮಿಳು, ಅರೆಹಳ್ಳಿ.

೨೪೮ ಎ.ಕ-೯, ದೊ.ತಾ.೩೮, ಕ್ರಿ.ಶ.೧೩೨೮, ಕನ್ನಡ, ಶಿವಪುರ.

೨೪೯ ಎ.ಕ-೯, ದೇ.ತಾ.೬೦, ಕ್ರಿ.ಶ.೧೩೨೮, ಕನ್ನಡ, ಚಿಕ್ಕಜಾಲ.

೨೫೦ ಎ.ಕ-೯, ಹೊ.ತಾ.೧೦೦, ಕ್ರಿ.ಶ.೧೩೩೦, ತಮಿಳು, ಜೋಡಿ ದಾಸರಹಳ್ಳಿ.

೨೫೧ ಎ.ಕ-೯, ಹೊ.ತಾ.೧೩೪, ಕ್ರಿ.ಶ.೧೩೩೬, ತಮಿಳು, ವಾಗಟ.

೨೫೨ ಎ.ಕ-೯, ನೆ.ತಾ.೩೮, ಕ್ರಿ.ಶ.೧೩೦೧, ತಮಿಳು, ಅಯಿಗಂಡಪುರ.

೨೫೩ ಎ.ಕ-೯, ದೊ.ತಾ.೫೨, ಕ್ರಿ.ಶ.೧೩೦೬, ಕನ್ನಡ, ಇಸ್ತೂರು.

೨೫೪ ಎ.ಕ-೯, ಹೊ.ತಾ.೧೪೯, ಕ್ರಿ.ಶ.೧೩೧೪, ತಮಿಳು, ಪರಮನಹಳ್ಳಿ.

ಶಾಸನದಲ್ಲಿ[೨೫೫] ನಂಬಿರವಿಸೆಟ್ಟಿಯರು ಕೆರೆ ಏರಿ ಕಟ್ಟಿದಕ್ಕೆ ಪ್ರಧಾನ ಸಿಂಗೆಯದಣ್ನಾಯರು ದಾನ ನೀಡುತ್ತಾರೆ. ಕ್ರಿ.ಶ.೧೩೩೭ರ ಮುಗಬಾಳ ತಮಿಳು ವೀರಗಲ್ಲು ಶಾಸನದಲ್ಲಿ[೨೫೬] ಸ್ನೇಹಿತನು ಹಸುಗಳನ್ನು ರಕ್ಷಿಸಿ ಮರಣ ಹೊಂದಿದ್ದಕ್ಕಾಗಿ ನೆಟ್ಟಿರವಿಯು ವೀರಗಲ್ಲನ್ನು ಹಾಕಿಸಿದನು. ಹೀಗೆ ರಾಜನ ಪರವಾಗಿ ಕೆರೆ ಕಟ್ಟಿದ್ದಕ್ಕೆ, ಏರಿ ನಿರ್ಮಿಸಿದಕ್ಕೆ, ಕೆರೆ ಅಥವಾ ಏರಿ ಜೀರ್ಣ್ಣೋದ್ಧರ ಮಾಡಿದಕ್ಕೆ, ತೂಬು ನಿರ್ಮಿಸಿದಕ್ಕೆ, ನಾನಾ ಅಭಿವೃದ್ಧಿ ಕಾರ್ಯಾಧಾರದ ಮೇಲೆ, ರಾಜನ ಜಯಕ್ಕಾಗಿ, ರಾಜನ ಆಳ್ವಿಕೆಗೆ, ವೀರ ಮರಣ ಹೊಂದಿದ್ದ ವೀರರ ಕುಟುಂಬಗಳಿಗೆ ದಾನ ನೀಡಿರುವುದನ್ನು ಶಾಸನಗಳಲ್ಲಿ ಕಾಣ ಬಹುದು.

ವೀರಬಲ್ಲಾಳನು ಕ್ರಿ.ಶ.೧೩೪೦ರಲ್ಲಿ ವಿರೂಪಾಕ್ಷ ಬಲ್ಲಾಳನಿಗೆ ರಾಜ್ಯಾಭಿಷೇಕ ಮಾಡಲಾದ ಸಂದರ್ಭದಲ್ಲಿ ಚೆಂನೆಯನಾಯಕರು ರಾಮಸಮುದ್ರ ಎಂಬ ಕೆರೆಯನ್ನು ಕಟ್ಟಿಸಲಾಯಿತ್ತು[೨೫೭]. ವೀರ ಬಲ್ಲಾಳನು ಕ್ರಿ.ಶ.೧೩೪೩ರಲ್ಲಿ ಮಧುರೈಯ ತಿರುಚಿನಾಪಳ್ಳಿಯಲ್ಲಿದ್ದಾಗ ದೆಹಲಿಯ ಸುಲ್ತಾನನ ಕಡೆಯವರು ಮೋಸದಿಂದ ಮುಮ್ಮಡಿ ಬಲ್ಲಾಳನನ್ನು ಹತ್ಯೆಗೈದರು[೨೫೮]. ನಂತರ ಮಗ ವಿರೂಪಾಕ್ಷ ಬಲ್ಲಾಳನು ಉತ್ತರಾಧಿಕಾರಿಯಾದರೂ ಅಸಮರ್ಥನಾಗಿದ್ದು, ಕ್ರಿ.ಶ.೧೩೪೭ರಲ್ಲಿ ತೀರಿ ಕೊಂಡನು. ಇದರೊಂದಿಗೆ ಹೊಯ್ಸಳ ಸಾಮ್ರಜ್ಯವೂ ಕೊನೆಗೊಂಡಿತ್ತು.

## ೩.೭ ಕುಕ್ಕಲನಾಡ ಪ್ರಭುಗಳು

ಬೆಂಗಳೂರಿನ ಪಶ್ಚಿಮ ಭಾಗವಾದ ಅರ್ಕಾವತಿ ನದಿಯ ಇಕ್ಕೆಲವಾದ ಹೆಸರುಘಟ್ಟ ಕೆರೆ, ಮಧುರೆ ಕೆರೆ, ತಿಪ್ಪಗೊಂಡನಹಳ್ಳಿ ಹಾಗೂ ಮಂಚನಬೆಲೆ ಕಣಿವೆಯ ಭೂಪ್ರದೇಶವಾದ, ನೆಲಮಂಗಲವನ್ನು ಕೇಂದ್ರವಾಗಿಟ್ಟುಕೊಂಡು, ಬೆಂಗಳೂರು ಉತ್ತರ ತಾಲ್ಲೂಕಿನ ಪಶ್ಚಿಮ ಭಾಗ, ಮಾಗಡಿ ತಾಲ್ಲೂಕಿನ ಪೂರ್ವಭಾಗ ಹಾಗೂ ಬೆಂಗಳೂರು ದಕ್ಷಿಣ ಭಾಗಗಳನ್ನು ಒಳಗೊಂಡಿರುವ ಪ್ರದೇಶವೇ ಕುಕ್ಕಲನಾಡಾಗಿತ್ತು ಎಂಬುದನ್ನು ಶಾಸನಗಳಂದ ಗುರುತಿಸಬಹುದು[೨೫೯]. ಗ್ರಾಮಾಂತರ ಜಿಲ್ಲೆಯಲ್ಲಿನ ಮಣ್ಣೆನಾಡು, ಸಣ್ಣೆನಾಡು, ಹುಲುಕುಡಿನಾಡು, ಕೈವಾರನಾಡು, ಪುಲಿಯೂರುನಾಡು ಮುಂತಾದ ಪ್ರಾಚೀನ ನಾಡುಗಳಲ್ಲಿ ಒಂದಾದ ಕುಕ್ಕಲನಾಡಿಗೆ ಪೂರ್ವದಲ್ಲಿ ಎಲಹಕ್ಕನಾಡು, ಪಶ್ಚಿಮದಲ್ಲಿ ಮಣ್ಣೆನಾಡು, ಉತ್ತರದಲ್ಲಿ ಹುಲುಕಡಿನಾಡು ಮತ್ತು ದಕ್ಷಿಣದಲ್ಲಿ ಕರಿಕನಾಡುಗಳು ಎಲ್ಲೆಗಳಾಗಿತ್ತು.

---

[೨೫೫] ಎ.ಕ-೯, ಹೊ.ತಾ.೫೬, ಕ್ರಿ.ಶ.೧೩೩೦, ತಮಿಳು, ಸೂಲಿಬೆಲೆ.

[೨೫೬] ಎ.ಕ-೯, ಹೊ.ತಾ.೯೮, ಕ್ರಿ.ಶ.೧೩೩೭, ತಮಿಳು, ಮುಗಬಾಳ.

[೨೫೭] ಎ.ಕ-೯, ಬೆಂ.೧೧೧, ಕ್ರಿ.ಶ.೧೩೪೦, ರಾಮಸಂದ್ರ.

[೨೫೮] ಪ್ರೊ. ಬಿ. ನಾರಯಣಮ್ಮ : ಬೆಂಗಳೂರಿನ ನಿಮಾತೃ ಕೆಂಪೇಗೌಡರು, ಪು.ಸಂ-೨೧.

[೨೫೯] ಎ.ಕ-೯, ನೆ.ತಾ.೯, ಕ್ರಿ.ಶ.೧೩೩೩, ಮಂಠಾಳು. ನೆ.ತಾ.೧೯, ಕ್ರಿ.ಶ.೧೩೪೦, ಬಾಣಸವಾಡಿ. ಬೆಂ.೧೧೦, ಕ್ರಿ.ಶ.೧೩೩೬, ಬ್ಯಾಡರಹಳ್ಳಿ. ಬೆಂ.೧೧೧, ಕ್ರಿ.ಶ.೧೩೪೦, ರಾಮಸಮುದ್ರ. ಮಾ.ತಾ.೮೧, ೧೩೪೦, ಬೈಚಗುಪ್ಪೆ.

ಭೌಗೋಳಿಕವಾಗಿ ಅರ್ಕಾವತಿ ನದಿಯು ಹರಿಯುವ ನೆಲೆಯಾಗಿ ನೈಸರ್ಗಿಕವಾದ ಬೆಟ್ಟ, ಹಳ್ಳ, ಕೊಳ್ಳಗಳಿಂದಲೇ ಕುಕ್ಕಲನಾಡು ಎಂಬ ಹೆಸರು ಬಂದಿರಬೇಕು. ಕುಕ್ಕಲ ಎಂದರೆ ಏರಿಳಿತ, ಶಿಖರದ ತುದಿ, ಆಲ ಎಂದರೆ ತಗ್ಗು ಸ್ಥಳಗಳಲ್ಲಿ ನೀರು ನಿಂತಿರುವ ಜಾಗ, ಅಂದರೆ ನದಿ ಮುಖಜ ಭೂಮಿ ಎಂದರ್ಥ. ಒಂದು ಪ್ರಾಚೀನ ಪ್ರಾದೇಶಿಕ ವಿಭಾಗಕ್ಕೆ ಹೆಸರು ಬರಲು ಪ್ರಧಾನವಾಗಿ ಆ ಪ್ರದೇಶದ ನೈಸರ್ಗಿಕ ವೈಶಿಷ್ಟವು ಸಹ ಕಾರಣವಾಗಿರುತ್ತದೆ. ಹಾಗೇಯೇ ಕುಕ್ಕಲನಾಡು ಸಹ ತನ್ನ ನೈಜ ಭೌಗೋಳಿಕ ವೈಲಕ್ಷಣಗಳಿಂದಲೇ ಹೆಸರು ಪಡೆದಿರಬೇಕು.

ಕುಕ್ಕಲನಾಡಿನ ಆಳ್ವಿಕೆಯು ಕ್ರಿ.ಶ.೭೫೦ ರಿಂದಲೇ ಗಂಗ ದೊರೆ ಶ್ರೀಪುರುಷನಿಂದಲೇ ಪ್ರಾರಂಭವಾಗುತ್ತದೆ. ಈ ಶಾಸನದಲ್ಲಿ ಕುಕ್ಕರಪಾಳಿಕ್ಕಾರೆನಾಡು[೨೬೦], ಮಾರಸಿಂಹನ ಕ್ರಿ.ಶ.೭೯೭ರ ಶಾಸನದಲ್ಲಿ ಕುಕ್ಕನರೆನಾಡು[೨೬೧], ಚೋಳರ ಅಧಿನಕ್ಕೆ ಒಳಪಟ್ಟು ಮೇಲೆ ಕುಕ್ಕನೂರು[೨೬೨] ಎಂದು, ಹೊಯ್ಸಳರ ಆಡಳಿತ ವಿಭಾಗಕ್ಕೆ ಸೇರಿದ ಮೇಲೆ ಕುಕ್ಕಲನಾಡು[೨೬೩] ಎಂದು ನಂತರ ವಿಜಯನಗರ ಕಾಲಕ್ಕೆ ತನ್ನ ಅಸ್ಥಿತ್ವವನ್ನು ಕಳೆದುಕೊಂಡ ಈ ನಾಡನ್ನು ಅನೇಕ ನಾಯಕರು, ಪ್ರಭುಗಳು, ಗೌಡರು, ಅಧಿಕಾರಿಗಳು ಆಳ್ವಿಕೆ ನಡೆಸುತ್ತಾ ಹಲವಾರು ದೇವಾಲಯಗಳು, ಕೆರೆಗಳು, ಕಟ್ಟೆಗಳು, ಕಾಲುವೆಗಳನ್ನು ನಿರ್ಮಿಸಿದ್ದಾರೆ.

೧೧ನೇ ಶತಮಾನದ ಪ್ರಾರಂಭದಲ್ಲಿ ಒಂದನೇ ರಾಜ ರಾಜ ಚೋಳನು ಗಂಗರನ್ನು ಸೋಲಿಸಿ, ಗಂಗವಾಡಿಯನ್ನು ವಶಪಡಿಸಿಕೊಳ್ಳುವುದರಿಂದ ಕುಕ್ಕಲನಾಡು ಚೋಳರ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿತು. ಈ ಸಂದರ್ಭದಲ್ಲಿ ಸ್ಥಳೀಯ ಆಡಳಿತಗಾರನಾಗಿದ್ದ ನಾಡ ಗಾವುಂಡರಾದ, ಗಾವುಂಡರು ಇಚ್ಚೆಯಿಂದಲೊ ಅಥವಾ ಅನಿವಾರ್ಯದಿಂದ ಚೋಳಾರಸರ ಹೆಸರನ್ನು ಅಥವಾ ಅವರ ಬಿರುದನ್ನು ತಮ್ಮ ಹೆಸರುಗಳಿಗೆ ಸೇರಿಸಿಕೊಂಡು ಆಡಳಿತ ನಡೆಸಿರುವ ಹಲವಾರು ಗಾವುಂಡರ ಹೆಸರುಗಳನ್ನು ಶಾಸನಗಳಲ್ಲಿ ಕಾಣಬಹುದು. ಕ್ರಿ.ಶ.೧೦೨೯ ರಲ್ಲಿ ರಟ್ಟಕುಳಕಲ ಚೋಳ ಗಾವುಂಡ[೨೬೪], ಕ್ರಿ.ಶ.೧೦೩೩ ರಲ್ಲಿ ರಾಜೇಂದ್ರ ಚೋಳ ಗಾವುಂಡ[೨೬೫], ಕ್ರಿ.ಶ೧೦೩೮ ರಲ್ಲಿ ರಾಜೇಂದ್ರ ಚೋಳ ಗಾವುಂಡ[೨೬೬], ಕ್ರಿ.ಶ.೧೧೧೦ ರಿಂದ ೧೩

---

[೨೬೦] ಎ.ಕ-೯, ನೆ.ತಾ.೩೩, ಕ್ರಿ.ಶ.೭೫೦, ತೋಟಗೆರೆ.

[೨೬೧] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಣ್ಣೆ.

[೨೬೨] ಎ.ಕ-೯, ನೆ.ತಾ.೩, ಕ್ರಿ.ಶ.೧೧೧೦, ತಮಿಳು, ಬಿನ್ನಮಂಗಲ.

[೨೬೩] ಎ.ಕ-೯, ನೆ.ತಾ.೧೨, ಕ್ರಿ.ಶ.೧೩೩೦, ಕಿತ್ತನಲ್ಲಿ ಮತ್ತು ನೆ.ತಾ.೧೯, ಕ್ರಿ.ಶ.೧೩೪೦, ಬಾಣಸವಾಡಿ.

[೨೬೪] ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಕನ್ನಡ, ಸೋಲದೇವನಹಳ್ಳಿ.

[೨೬೫] ಎ.ಕ-೯, ನೆ.ತಾ,೩೭, ಕ್ರಿ.ಶ.೧೦೩೩, ತಮಿಳು, ಆಯಿಗಂಡಪುರ.

[೨೬೬] ಎ.ಕ-೯, ನೆ.ತಾ.೭ಎ, ಕ್ರಿ.ಶ.೧೦೩೮, ತಮಿಳು, ಆಬೂರು.

ವರೆಗೆ ರಾಜರಾಜನ್ ಕುಲೊತ್ತುಂಗ ಆದಿಮುರ್ಕ ಚೆಂಗಿರೈ[೨೬೭] ಹೀಗೆ ಕುಕ್ಕಲನಾಡಿನಲ್ಲಿ ಆಡಳಿತ ನಡೆಸಿರುವ ಗಾವುಂಡರು ತಮ್ಮ ಅಧಿಕಾರವಧಿಯಲ್ಲಿ ಶೈವ ದೇವಾಲಯಗಳಿಗೆ ಮಾತ್ರವೇ ದಾನ ನೀಡಿರುವುದನ್ನು ಶಾಸನದಲ್ಲಿ ಕಾಣಬಹುದು. ಕ್ರಿ.ಶ.೧೦೨೯ ರಲ್ಲಿ ರಾಜೇಂದ್ರ ಚೋಳದೇವರ ೧೮ನೇ ಆಳ್ವಿಕೆಯ ವರ್ಷದಲ್ಲಿ ವಾಮನಯ್ಯನು ತನ್ನ ಗುರುಗಳಾದ ಶ್ರೀ ಮೌನಿ ಭಟ್ಟಾರಕರು ಸಿದ್ಧಿಯಾದ ನೆನಪಿಗಾಗಿ ಸಿದ್ದೇಶ್ವರ ದೇವಾಲಯನ್ನು ನಿರ್ಮಿಸಿ ದೇವರಿಗೆ ನೈವೇದ್ಯ, ನಿರಂತರ ದೀಪಾರಾಧನೆಗೆ[೨೬೮], ಕ್ರಿ.ಶ.೧೦೩೩ರಲ್ಲಿ ರಾಜೇಂದ್ರ ಚೋಳದೇವರ ೨೨ನೇ ಆಳ್ವಿಕೆಯ ವರ್ಷದಲ್ಲಿ ರಾಜೇಂದ್ರ ಚೋಳ ಗಾವುಂಡನು ಕುಕ್ಕನೂರುನಾಡಿನ ಸಿದ್ದೇಶ್ವರ ದೇವರಿಗೆ[೨೬೯], ಕ್ರಿ.ಶ.೧೦೩೮ ರಲ್ಲಿ ರಾಜೇಂದ್ರ ಚೋಳ ದೇವರ ಆಳ್ವಿಕೆಯಲ್ಲಿ ಕುಕ್ಕನೂರಿನ ರಾಜೇಂದ್ರ ಚೋಳ ಗಾವುಂಡನು ಸಿದ್ದೇಶ್ವರರಿಗೆ ರೇಷ್ಮೇ, ಹತ್ತಿ, ಮರಗಳನ್ನು ಕೊಟ್ಟು, ನೈವೇದ್ಯ, ದೀಪಾರಾಧನೆಗೆ[೨೭೦], ಕ್ರಿ.ಶ.೧೧೧೦ ರಲ್ಲಿ ಕುಲೊತ್ತುಂಗ ಚೋಳ ದೇವರ ೪೧ನೇ ವರ್ಷದ ಆಳ್ವಿಕೆಯಲ್ಲಿ ಕುಲೊತ್ತುಂಗ ಆದಿಮುರ್ಕ ಚೆಂಗಿರೈನು ಕುಕ್ಕನೂರು ನಾಡಿನ ವಿನ್ನಮಂಗಲದ (ಬಿನ್ನಮಂಗಲ) ಮುತ್ತೀಶ್ವರ (ಮುಕ್ತೀಶ್ವರ) ಒಡೆಯ ಮಹಾದೇವರಿಗೆ[೨೭೧], ಕ್ರಿ.ಶ.೧೦೫೦ರಲ್ಲಿ ರಾಜಾಧಿರಾಜ ದೇವರ ಆಳ್ವಿಕೆಯಲ್ಲಿ ಕುಕ್ಕನೂರು ಗಾವುಂಡನಾದ ರಾಜಾಧಿರಾಜ ವೆಲನೂ ಎಲ್ಲಾ ರೀತಿಯ ಆದಾಯವನ್ನು ದೇವಾಲಯಕ್ಕೆ[೨೭೨], ಕ್ರಿ.ಶ.೧೧೧೩ ರಲ್ಲಿ ಶ್ರೀ ಕುಲೊತ್ತುಂಗ ಚೋಳದೇವರ ೪೩ನೇ ಆಳ್ವಿಕೆಯಲ್ಲಿ ಗೌಡನಾಗಿ ಮುಂದುವರೆದ ರಾಜರಾಜನ್ ಕುಲೊತ್ತುಂಗ ಚೋಳ ಆದಿಮುರ್ಕ ಚೆಂಗಿರೈನು, ವೆಲಪಲಹಳ್ಳಿಯ ಚತುಸ್ಸೀಮೆಯೊಳಗಣ ಗದ್ದೆಯನ್ನು ವಿಕ್ಕಿರಮ ಚೋಳಮಂಡಲದ ಕುಕ್ಕುನೂರುನಾಡಿನ ಪೆರಿಯಮತ್ತಕೂರ ಐವರ ಕಂಡೀಶ್ವರ ಒಡೆಯ ಮಹಾ ದೇವರಿಗೆ ಪೂಜೆ ಪುನಸ್ಕಾರಗಳಿಗೆ[೨೭೩] ಕೊಡುಗೆಗಳನ್ನು ನೀಡಿದ್ದಾರೆ.

ಕ್ರಿ.ಶ.೧೧೧೬-೭ ರಲ್ಲಿ ಹೊಯ್ಸಳ ವಿಷ್ಣುವರ್ಧನ ತಲಕಾಡಿನಿಂದ ಚೋಳರನ್ನು ಸೋಲಿಸಿ ಗಂಗವಾಡಿ ೯೬೦೦೦ ಪ್ರದೇಶವನ್ನು ವಶಪಡಿಸಿಕೊಳ್ಳುವುದರೊಂದಿಗೆ ಕುಕ್ಕಲನಾಡು ಸಹ ಹೊಯ್ಸಳರ ಆಡಳಿತ ವ್ಯಾಪ್ತಿಗೆ ಒಳಪಟ್ಟಿತು. ವೀರ ಬಲ್ಲಾಳನ ಕ್ರಿ.ಶ.ಸು.೧೩೨೫ರಲ್ಲಿ ಕುಕ್ಕಲನಾಡನ್ನು ಉಪ್ಪೂರ ಬಂಮೆಯ ನಾಯಕರು ಆಳುತ್ತಿರಲು, ವಿರಯನು, ಕುಕ್ಕಲನಾಡಿನ ಕಿತ್ತನೆಲೆಯ ದೊಡನಗೌಡರ ಮಕ್ಕಳು

[೨೬೭] ಎ.ಕ-೯, ನೆ.ತಾ.೩, ಕ್ರಿ.ಶ.೧೧೧೦, ತಮಿಳು ,ಬಿನ್ನಮಂಗಲ ಮತ್ತು ನೆ.ತಾ.೩೮ಎ, ಕ್ರಿ.ಶ.೧೧೧೩, ತಮಿಳು, ಅಯಿಗಂಡಪುರ.
[೨೬೮] ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಕನ್ನಡ, ಸೋಲದೇವನಹಳ್ಳಿ.
[೨೬೯] ಎ.ಕ-೯, ನೆ.ತಾ,೩೭, ಕ್ರಿ.ಶ.೧೦೩೩, ತಮಿಳು, ಆಯಿಗಂಡಪುರ.
[೨೭೦] ಎ.ಕ-೯, ನೆ.ತಾ.೭ಎ, ಕ್ರಿ.ಶ.೧೦೩೮, ತಮಿಳು, ಆಬೂರು.
[೨೭೧] ಎ.ಕ-೯, ನೆ.ತಾ.೩, ಕ್ರಿ.ಶ.೧೧೧೦, ತಮಿಳು, ಬಿನ್ನಮಂಗಲ.
[೨೭೨] ಎ.ಕ-೯, ನೆ.ತಾ.೩೮ಸಿ, ಕ್ರಿ.ಶ.೧೦೫೦, ತಮಿಳು, ಆಯಿಗಂಡವುರ.
[೨೭೩] ಎ.ಕ-೯, ನೆ.ತಾ.೩೮ಎ, ಕ್ರಿ.ಶ.೧೧೧೩, ತಮಿಳು, ಆಯಿಗಂಡವುರ.

ಗೌಡಪ್ಪ, ಮಾರಪ್ಪ, ಗಂಗಣ್ಣನಿಗೆ ಮುದುಗೆರೆಯನ್ನು ಸರ್ವ ಕೊಡುಗೆಯಾಗಿ ಕೊಟ್ಟನು[೨೭೪]. ಈ ದೊಡ್ಡಗೌಡರ ಕುಟುಂಬಗಳು ಕಿತ್ತನೆಲೆಯಲ್ಲಿ ಪ್ರಸಿದ್ಧವಾಗಿರಬೇಕು. ಕ್ರಿ.ಶ.೧೩೪೦ ರಲ್ಲಿ ಈ ವಂಶದಲ್ಲಿ ಹುಟ್ಟಿದ ಬಯಿಚವ್ವೆ (ಮಹಾ ಕುಕ್ಕಲನಾಥ ಪ್ರಭು ಕಿತ್ತನಲ್ಲಿಯ ಹೊಂನಗವುಡರ ಮಕ್ಕಳು......ಹೊಂನಪ್ಪ ವೀರಯ್ಯನ ಮಗಳಾದ ಬಯಿಚಪ್ಪೆ) ಎಂಬ ಹೆಣ್ಣು ಮಗಳಗೆ ದಂಡಿಗೆಯ ಬೀಯಕ್ಕೆ ಕೊಟ್ಟ ತಾವರೇಕೆರೆ ಹೊಲದೊಳಗಣ ಉಂಬಳಿಯನ್ನು ಶ್ರೀ ವೀರ ಬಲ್ಲಾಳ ದೇವರ್ಸನ ಕುವರ ಮಹಾ ಸಾವಂತಾಧಿಪತಿ ಮಹಿಲೆಯನಾಯಕ, ಚಂನಿನಾಯಕ, ಕಾಟನಾಯಕರ ಆಳ್ವಿಕೆಯಲ್ಲಿ ಬಿಟ್ಟಿರುವುದು[೨೭೫],

ಮೂರನೇ ಬಲ್ಲಾಳನ ಕಾಲದಲ್ಲಿ ಮಹಾಸಾಮಂತಾಧಿಪತಿಯಾಗಿ ಮಯಿಲೆಯನಾಯಕರು ಮತ್ತು ಆತನ ಸಹೋದರರು ಹೆಚ್ಚು ಮಾನ್ಯತೆಯನ್ನು ಪಡೆದಿದ್ದವರಾಗಿ ಕ್ರಿ.ಶ.೧೩೩೩ ರಿಂದ ೧೩೪೦ ರವರೆಗೆ ಆಡಳತ ನಡೆಸಿರುವುದಕ್ಕೆ ಶಾಸನಗಳು ಮಾಹಿತಿ ನೀಡುತ್ತವೆ. ಕ್ರಿ.ಶ.೧೩೩೦ ರಲ್ಲಿ ಜಾಲೆಯ ದಣ್ನಾಯಕರು ಕುಕ್ಕಲನಾಡಿನಲ್ಲಿ ಆಳುವ ಕಾಲದಲ್ಲಿ ದ್ವಾರಸಮುದ್ರದಲ್ಲಿ ಜಾರಿಯಾಗಿದ್ದ ಆಸ್ತಿಗೆ ಸಂಬಂಧಿಸಿದ ಕಾನೂನನ್ನು ಕುಕ್ಕಲನಾಡಿನಲ್ಲಿಯೂ ಸಹ ಜಾರಿಗೆ ತರಲಾಯಿತು[೨೭೬]. ಕ್ರಿ.ಶ.೧೩೩೩ ರಲ್ಲಿ ಕುಕ್ಕಲನಾಡನು ಕೋಡಿಯನಾಯಕರ ಮಕ್ಕಳಾದ ಮಹಾ ಸಾವಂತಾಧಿಪತಿ ನರಲೋಕ ಗಂಡ ಮಯಿಲೆಯನಾಯಕರ ತಮ್ಮ ಚೆನ್ನೆಯನಾಯಕ ಆಳುತ್ತಿದ್ದು[೨೭೭], ಕ್ರಿ.ಶ.೧೩೪೦ ರಲ್ಲಿ ಭೂಮಿ ಮೇಲಿನ ದೇವ, ನರ, ಮೃಗ, ಪಕ್ಷಿ ಮೊದಲಾದ ಯೋನಿ ಜೀವರಾಶಿಗಳೆಲ್ಲವನ್ನು ಸರ್ವಕಾಲವು ರಕ್ಷಿಸಲೆಂದು ಶ್ರೀ ಗಂಗಾದೇವಿಯನ್ನು ಪ್ರಾರ್ಥಿಸಿ ೩೦೦೦ ಹೊನ್ನನಿಕ್ಕಿ ರಾಮಸಮುದ್ರವೆಂಬ ಕೆರೆಯನ್ನು ಕಟ್ಟಿಸಿದರು[೨೭೮].

ಹೊಯ್ಸಳರ ನಂತರ ಬೆಂಗಳೂರಿನಲ್ಲಿದ್ದ ಯಲಹಂಕದ ನಾಡಪ್ರಭುಗಳು, ಕುಕ್ಕಲನಾಡ ಪ್ರಭುಗಳ ಮೇಲೆ ವಿಜಯನಗರ ಸ್ಥಾಪನೆಯೊಂದಿಗೆ ಈ ಭಾಗಗಳ ಮೇಲೆ ರಾಜ್ಯದ ಅಧಿಕಾರ ಪುನಃ ಸಾಮ್ರಾಜ್ಯ ಮಾದರಿಯಲ್ಲಿ ಸ್ಥಾಪಿತವಾಯಿತು[೨೭೯]. ವಿಜಯನಗರದ ೧ನೇ ಹರಿಹರನ ಸಾಮಂತನಾಗಿ ಮಯಿಲೆಯನಾಯಕರು ಮತ್ತು ಸಹೋದರರು ಹಾಗೂ ಮಗನಾದ ಕೊಟ್ಟಯ್ಯನಾಯಕರು ಆಳ್ವಿಕೆಯನ್ನು ಮುಂದುವರೆಸಿದ್ದರು. ಕ್ರಿ.ಶ.೧೩೪೦ ರಲ್ಲಿ ಹರಿಯಪ್ಪ ಒಡೆಯರ ಆಳ್ವಿಕೆಯಲ್ಲಿ ಮಹಾಸಾಮಾಂತಾಧಿಪತಿ, ನರಲೋಕಗಂಡ ಮಹಿಲೆಯನಾಯಕರು ಕುಕ್ಕಲನಾಡನ್ನು ಆಳುತ್ತಿದ್ದು[೨೮೦],

---

[೨೭೪] ಎ.ಕ-೯, ನೆ.ತಾ.೧೧, ಕ್ರಿ.ಶ.೧೩೨೫, ಕಿತ್ತನಲ್ಲಿ.

[೨೭೫] ಎ.ಕ-೯, ಮಾ.ತಾ.೮೧, ಕ್ರಿ.ಶ.೧೩೪೦, ಬೈಚಗುಪ್ಪೆ.

[೨೭೬] ಎ.ಕ-೯, ನೆ.ತಾ.೧೨, ಕ್ರಿ.ಶ.೧೩೩೦, ಕಿತ್ತನಲ್ಲಿ.

[೨೭೭] ಎ.ಕ-೯, ನೆ.ತಾ.೯, ಕ್ರಿ.ಶ.೧೩೩೩, ಮಂಠಾಳು.

[೨೭೮] ಎ.ಕ-೯, ಬೆಂ.೧೧೧, ಕ್ರಿ.ಶ.೧೩೪೦, ರಾಮಸಮುದ್ರ.

[೨೭೯] ಡಾ.ಹೆಚ್. ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೪೦.

[೨೮೦] ಎ.ಕ-೯, ನೆ.ತಾ.೧೯, ಕ್ರಿ.ಶ.೧೩೪೦, ಬಾಣಸವಾಡಿ.

ನಂತರ ಕ್ರಿ.ಶ ೧೩೪೮ ರಲ್ಲಿ ಹರಿಯಪ್ಪ ಒಡೆಯರಾವಧಿಯಲ್ಲಿ ಮಹಾಸಾಮಂತಾಧಿಪತಿ ಮೈಲೆಯನಾಯಕರು ಎಲಕ್ಕನಾಡ ಪ್ರಭುಗಳಾಗಿ ಕಾರ್ಯ ನಿರ್ವಹಿಸಿರುವುದನ್ನು[೨೮೧] ಕಂಡರೆ ಈ ವೇಳೆಗಾಗಲೆ ಎಲಹಕ್ಕನಾಡು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದ್ದರ ಫಲವಾಗಿ ಕುಕ್ಕಲನಾಡು ಕ್ರಿ.ಶ.೧೪೯ ರ ಕಾಲಕ್ಕಾಗಲೆ ವಿಭಜಿಸಿಕೊಂಡು ಇಂದಿನ ಬೆಂಗಳೂರು ಉತ್ತರ ತಾಲ್ಲೂಕಿನ ಪ್ರದೇಶವು ಎಲಹಕ್ಕನಾಡಿನ ಭಾಗವಾಗಿ ಪರಿಣಮಿಸಿತು. ನೆಲಮಂಗಲ ಮತ್ತು ಮಾಗಡಿ ತಾಲ್ಲೂಕುಗಳಲ್ಲಿ ಸಮಾವೇಶಗೊಂಡಿದ್ದ ಪ್ರದೇಶ ಮಾತ್ರವೇ ಕುಕ್ಕಲನಾಡು ಎಂಬ ಹೆಸರಿನಿಂದ ಕರೆಯಲ್ಲಟ್ಟು ಭೌಗೋಳಿಕ ಸಾಕಷ್ಟು ಸಂಕುಚಿತಗೊಂಡಿತು[೨೮೨]. ಮುಂದೆ ಯಲಹಂಕ ನಾಡಪ್ರಭುಗಳಾದ ಕೆಂಪೇಗೌಡರ ವಂಶಿಯರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ.೧೪೩೦ರ ಕಾಲದ ಯಲಹಂಕ ಹೋಬಳಿಯ ದೊಡ್ಡಬೊಮ್ಮಸಂದ್ರದ ಗೋಪಾಲಸ್ವಾವಿ ದೇವಾಲಯದಲ್ಲಿನ ಶಾಸನ[೨೮೩] ಕ್ರಿ.ಶ.೧೪೩೦ರಲ್ಲಿ ಬುಕ್ಕನಾಯಕ[೨೮೪], ೧೩೮೬ರಲ್ಲಿ ಮಹಿಲೆಯನಾಯಕನ ಮಗ ಕೋಟಯ್ಯನಾಯಕ[೨೮೫] ಎಲಹಕ್ಕನಾಡಿನಲ್ಲಿ ಆಳ್ವಿಕೆಯನ್ನು ನಡೆಸಿದರೆ, ಮಹಿಲೆಯನಾಯಕರ ತಮ್ಮ ಚೆಂನೆಯನಾಯಕರು ಚನ್ನಪಟ್ಟಣದ ಕಲುವಳನಾಡಿನಲ್ಲಿ ಆಡಳಿತ ನಡೆಸುತ್ತಿದ್ದರು[೨೮೬].

ಕ್ರಿ.ಶ.೧೪೧೫ ರ ನಂತರ ದೇವರಾಯನ ಆಳ್ವಿಕೆಯಲ್ಲಿ ನಾಡುಗಳ ಆಡಳಿತ ಹೆಚ್ಚು ಕೇಂದ್ರೀಕರಣವಾದಂತೆ ತೊರುತ್ತದೆ, ಸ್ಥಳೀಯ ನಾಡಪ್ರಭುಗಳು ಮುಂತಾದವರ ಪ್ರಸ್ಥಾಪ ಶಾಸನಗಳಲ್ಲಿ ಕಡಿಮೆಯಾಗಿರುವುದು ಕಂಡು ಬರುತ್ತದೆ. ಅಲ್ಲದೆ ದೇವರಾಜರಿಂದ ನೇರವಾಗಿ ನೇಮಿತಗೊಂಡ ಅಧಿಕಾರಿಗಳ ಪ್ರಭಾವ ಎದ್ದು ಕಾಣುತ್ತದೆ[೨೮೭]. ಕ್ರಿ.ಶ.೧೪೯೫ರಲ್ಲಿ ಅನಂತಯ್ಯ ಮಹಾದೇವ ಅರಸನು ಕುಕ್ಕಲನಾಡಿನಲ್ಲಿ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನು[೨೮೮]. ಕುಕ್ಕಲನಾಡನ್ನು ಪ್ರಸ್ತಾಪಿಸುವ ಕೊನೆಯ ಶಾಸನ ಕ್ರಿ.ಶ.೧೫೨೩ರಲ್ಲಿ ಕೊಮನಾಯಕರಿಗೆ ನಾಯ್ಕತನಕ್ಕೆ ಪಾಲಿಸಿದ ಕುಕ್ಕಲನಾಡೊಳಗಣ

[೨೮೧] ಎ.ಕ-೯, ದೇ.ತಾ.೫೦, ಕ್ರಿ.ಶ.೧೩೪೮, ಕಟಗೇನಹಳ್ಳಿ.
[೨೮೨] ಪಿ.ವಿ.ಕೃಷ್ಣಮೂರ್ತಿ:- ಕುಕ್ಕಲನಾಡು-ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ, ಇ.ದ.ಸಂ-೭, ಪು.ಸಂ-೧೪೬.
[೨೮೩] ಎ.ಕ-೯, ಬೆಂ.೨೬, ಕ್ರಿ.ಶ.೧೪೩೦, ದೊಡ್ಡಬೊಮ್ಮಸಂದ್ರ.
[೨೮೪] ಎ.ಕ-೯, ಬೆಂ.೨೬, ಕ್ರಿ.ಶ.೧೪೩೦, ದೊಡ್ಡಬೊಮ್ಮಸಂದ್ರ.
[೨೮೫] ಎ.ಕ-೯, ಬೆಂ.೧೯, ಕ್ರಿ.ಶ.೧೩೮೬, ಕ್ಯಾತಮಾರನಹಳ್ಳಿ.
[೨೮೬] ಎ.ಕ-೯, ಚ.ತಾ. ೧೬, ಕ್ರಿ.ಶ.೧೩೫೧, ಐಜೋರು.
[೨೮೭] ಪಿ.ವಿ.ಕೃಷ್ಣಮೂರ್ತಿ:- ಕುಕ್ಕಲನಾಡು-ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ, ಇ.ದ.ಸಂ-೭, ಪು.ಸಂ-೧೪೬.
[೨೮೮] ಎ.ಕ-೯, ಬೆಂ.೧೨೩, ಕ್ರಿ.ಶ.೧೪೯೫, ಗೊಂಗಡಿಪುರ.

ತಿರುವೆಂಡನಾಥ ದೇವರಿಗೆ ದಾಸನಪುರದಲ್ಲಿ, ದಾನ ನೀಡಿದರು[೨೮೯]. ಕ್ರಿ.ಶ.೧೫೨೩ ರ ನಂತರ ಕುಕ್ಕಲನಾಡಿನ ಪ್ರಸ್ತಾಪ ಕಂಡು ಬರುವುದಿಲ್ಲ.

## ೩.೭ ವಿಜಯನಗರ

ದೆಹಲಿ ಸುಲ್ತಾನರ ದಾಳಿಯಿಂದಾಗಿ ಕರ್ನಾಟಕದ ರಾಜಮನೆತನಗಳಾದ ಸೇವುಣರು, ಹೊಯ್ಸಳರು, ಕಾಕತೀಯರು ನಾಶವಾದ ಸಂದರ್ಭದಲ್ಲಿ ದಕ್ಷಿಣ ಭಾರತದ ಇತಿಹಾಸದಲ್ಲಿ ನಿರ್ಣಾಯಕ ಪಾತ್ರವಹಿಸಿರುವ ವಿಜಯನಗರ ಸಾಮ್ರಾಜ್ಯವನ್ನು ಕ್ರಿ.ಶ.೧೩೩೬ರಲ್ಲಿ ಸಂಗಮ್ಮನ ಮಕ್ಕಳಾದ ಹರಿಹರ, ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪರು ಸ್ಥಾಪಿಸಿದರು[೨೯೦]. ಈ ಮನೆತನವು ಕ್ರಿ.ಶ.೧೩೩೬ರಿಂದ ೧೫೬೫ರ ವರೆಗಿನ ವೈಭವ ಕಾಲದಲ್ಲಿ ವಿಜಯನಗರವನ್ನು ರಾಜಧಾನಿಯಾಗಿ[೨೯೧] ಹೊಂದಿದ್ದು, ನಂತರ ಕ್ರಿ.ಶ.೧೫೬೫ ರಿಂದ ೧೬೪೬ ರ ವರೆಗಿನ ಅವಧಿಯಲ್ಲಿ ಪೆನುಗೊಂಡವನ್ನು (ಘನಗಿರಿ)[೨೯೨], ವೆಂಕಟಪತಿರಾಯನು ಚಂದ್ರಗಿರಿಯನ್ನು, ೩ನೇ ವೆಂಕಟನು ವೆಲ್ಲೂರುಗಳನ್ನು[೨೯೩] ರಾಜಧಾನಿಯನ್ನಾಗಿ ಹೊಂದಿದ್ದ ಸಾಮ್ರಾಜ್ಯವನ್ನು ಯಾವ ರೀತಿಯ ರಕ್ತ ಸಂಬಂಧವಿಲ್ಲದ ಕನ್ನಡಿಗರಾಗಿದ್ದ ಸಂಗಮ, ಆಂಧ್ರ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದ ಸಾಳುವ, ತುಳುವ, ಅರವೀಡು ಎಂಬ ೪ ಪ್ರತ್ಯೇಕ ವಂಶಸ್ಥರು ಆಳ್ವಿಕೆ ನಡೆಸಿದ್ದರು.

ಮುಮ್ಮಡಿ ಬಲ್ಲಾಳನ ಸೋದರಳಿಯನಾದ ಸೋಮೆಯ ದಂಡನಾಯಕನು ಹರಿಹರನ ಮಗಳನ್ನು ಮದುವೆಯಾಗಿದ್ದನು. ಕ್ರಿ.ಶ.೧೩೩೬ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಾರಕೂರಿನಲ್ಲಿ ಹರಿಹರನು ಕೋಟೆಯೊಂದನ್ನು ಕಟ್ಟಿದ ಪ್ರದೇಶಕ್ಕೆ ಕ್ರಿ.ಶ.೧೩೩೮ರಲ್ಲಿ ಮುಮ್ಮಡಿ ಬಲ್ಲಾಳನ್ನು ಭೇಟಿ ನೀಡಿದ ಮರು ವರ್ಷ ಹೊಯ್ಸಳರು ಹಂಪಿಯಲ್ಲಿ ಕಾಣಿಸಿದ್ದರು. ಕ್ರಿ.ಶ.೧೩೪೦ರಲ್ಲಿ ಹಂಪಿಯಲ್ಲಿ ನಾಲ್ವಡಿ ವಿರೂಪಾಕ್ಷ ಬಲ್ಲಾಳನಿಗೆ ಪಟ್ಟಾಭಿಷೇಕವಾಯಿತು[೨೯೪]. ಹೊಯ್ಸಳ ಶಾಸನಗಳಲ್ಲಿ ಹೊಸನಾಡು, ಹೊಸವೀಡು, ಹೊಸಪಟ್ಟಣ, (ಹಂಪಾಪುರ) ವಿಜಯ ವಿರೂಪಾಕ್ಷಪುರ, ವಿರೂಪಾಕ್ಷಪುರ ಎಂಬಲ್ಲಿ ಹೊಸ ರಾಜಧಾನಿ ಆಳುತ್ತಿರಲು ಎಂದಿರಲು ಹಾಗೂ ಹರಿಹರನ ಆರಂಭದ ಶಾಸನಗಳಲ್ಲಿ[೨೯೫] ತನ್ನನ್ನು ತಾನು ಮಹಾ ಮಂದಳೇಶ್ವರ ಎಂದು ಕರೆದಿರುವುದರಿಂದ ಬಹುಶಃ ಹೊಯ್ಸಳ ಅಧೀನದಲ್ಲಿದ್ದು, ದ್ವಾರಸಮುದ್ರದ ಉತ್ತರ

---

[೨೮೯] ಎ.ಕ-೯, ಅನುಬಂಧ, ನೆ.ತಾ.೧೮೬, ಕಸಬಾ, ದಾಸನಪುರ ಹೋಬಳಿ.

[೨೯೦] Suryanath.U.Kamath :- Karnataka State Gazetter, Bangalore Rural District, Page.no-60.

[೨೯೧] ಎ.ಕ-೯, ದೊ.ತಾ.೩೦, ಕ್ರಿ.ಶ.೧೫೩೦, ತಾಮ್ರಶಾಸನ, ಕೊಣಗಟ್ಟ.

[೨೯೨] ಎ.ಕ.-೯, ಹೊ.ತಾ.೭, ಕ್ರಿ.ಶ.೧೬೪೯, ಬೇಬಿರಾಕ್ ಬತಗಾನಹಳ್ಳಿ.

[೨೯೩] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೬೪.

[೨೯೪] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೦.

[೨೯೫] **ಎ.ಕ-೯,** ನೆ.ತಾ.೧೯, ಕ್ರಿ.ಶ.೧೩೪೦, ಬಾಣಸವಾಡಿ.

ಪ್ರಾಂತ್ಯ ಭಾಗಗಳನ್ನು ನೋಡಿಕೊಳ್ಳಲು ಸೇನಾನಿಗಳಾಗಿದ್ದ ಹರಿಹರ ಮತ್ತು ಅವನ ಸಹೋದರರು ನೇಮಿಸಿರಬೇಕು. ಬಲ್ಲಾಳನ ಮರಣದ ನಂತರ ಸ್ವಾತಂತ್ರರಾದರು. ಇದಕ್ಕೆ ಪೂರಕವಾಗಿ ಡಾ.ಸ್ವೀನ್‌ರವರು ಹರಿಹರ ಮತ್ತು ಅವನ ಸಹೋದರರು ಹೊಯ್ಸಳ ಸೇನಾನಿಗಳಾಗಿದ್ದು, ಮುಂದೆ ಸ್ವತಂತ್ರ ಸಾಮ್ರಾಜ್ಯ ಕಟ್ಟಿದರೆಂಬ ಕನ್ನಡ ಮೂಲಕ್ಕೆ ಹೆಚ್ಚು ಆಧಾರಗಳು ಸಿಕ್ಕಿವೆಯಾದರೂ ವಿಜಯನಗರದ ರಾಜಕೀಯ ಇತಿಹಾಸದಲ್ಲಿ ತೆಲುಗು ನಾಯಕರ ಸೈನಿಕ ಪರಾಕ್ರಮ ಮತ್ತು ಅವರ ವೈಭವವೇ ಆಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ[೨೯೬]. ಹಂಪೆಯ ವಿರುಪಾಕ್ಷ ದೇವರ ಭಕ್ತರಾಗಿದ್ದು, ತಮ್ಮ ದಾನದತ್ತಿಗಳಲ್ಲಿ ಶ್ರೀ ವಿರೂಪಾಕ್ಷನ ಹೆಸರಿನಲ್ಲಿ ಕೈಬರಹ ಹಾಕುತ್ತಿದ್ದರು. ವರಹಾ ಅವರ ಚಿಹ್ನೆ (ಲಾಂಛನ) ಯಾಗಿತ್ತು.

ಹರಿಹರನು ವಿಜಯನಗರವನ್ನು, ಕಂಪಣ್ಣನು ನೆಲ್ಲೂರಿನ ಸುತ್ತಮುತ್ತಲಿನ ಉದಯಗಿರಿ ರಾಜ್ಯವನ್ನು, ಒಂದನೇ ಬುಕ್ಕನು ದ್ವಾರಸಮುದ್ರದ ಸುತ್ತಲಿನ ಪ್ರದೇಶವನ್ನು, ಮಾರಪ್ಪನು ಪಶ್ಚಿಮ ತೀರದ ಕೊಂಕಣದ ಸುತ್ತಲಿನ ಮಲೆರಾಜ್ಯ ಎನಿಸಿದ ಚಂದ್ರಗುತ್ತಿಯನ್ನು, ಕೊನೆಯವನಾದ ಮುದ್ದಪ್ಪನು ಕೋಲಾರ ಜಿಲ್ಲೆಯ ಮುಳಬಾಗಿಲ ಸುತ್ತಲಿನ ಪ್ರದೇಶವನ್ನು ಆಳುತ್ತಿದ್ದು, ನಂತರ ಮುದ್ದಪ್ಪನು ಸತ್ತಂತೆ ತೋರುತ್ತದೆ. ವಿಜಯನಗರವನ್ನು ಆನೆಗೊಂದಿ, ವಿರೂಪಾಕ್ಷಪುರ, ಹೊಸಪಟ್ಟಣ, ಹೊಸ ಹಂಪೆಯ ಪಟ್ಟಣ, ಹಸ್ತಿನಾವತಿ, ಹಂಪೆಯಹಸ್ತಿನಾವತಿ, ವಿದ್ಯಾನಗರ ಎಂಬ ಹೆಸರುಗಳಿಂದ ಕರೆಯಲ್ಪಟ್ಟು, ೭ನೇ ಶತಮಾನದ ತಾಮ್ರಶಾಸನದಲ್ಲಿ ಪಂಪಾತೀರ್ಥ, ೧೧ನೇ ಶತಮಾನದ ಶಿಲಾಶಾಸನದಲ್ಲಿ ಪಂಪಾಪುರ ಎಂದು, ಹೊಯ್ಸಳ ಶಾಸನಗಳಲ್ಲಿ ಹೊಸನಾಡು ಎಂದು ಕರೆಯಲಾಗಿದೆ. ಮೊದಲನೇ ಹರಿಹರನು ಶೃಂಗೇರಿ ಮಠದ ಗುರುಗಳಾದ ವಿದ್ಯಾರಣ್ಯವನ್ನು ಕಂಡು ಅವರ ಆಶೀರ್ವಾದದಿಂದಲೇ ರಾಜ್ಯವನ್ನು, ರಾಜಧಾನಿ ಪಟ್ಟಣವನ್ನು ಕಟ್ಟಿದನೆಂದು ಕಥೆ ಹೇಳುತ್ತದೆ[೨೯೭]. ಕ್ರಿ.ಶ.೧೩೪೬ರ ಶೃಂಗೇರಿ ಶಾಸನದಂತೆ ಈ ಐವರು ಸಂಗಮ ಸಹೋದರರು ಶೃಂಗೇರಿಯಲ್ಲಿ ಭಾರತಿತೀರ್ಥರಿಗೆ ದಾನವೊಂದನ್ನು ನೀಡಿದರು. ಈ ಶಾಸನದ ಶಿಲೆಯ ಕೆಳಭಾಗದಲ್ಲಿ ಹೊಯ್ಸಳ ಬಲ್ಲಾಳನ ಸತಿ ಕೃಷ್ಣಾಯಿ ತಾಯಿಯು ನೀಡಿದ ದಾನವು ಕೆತ್ತಲ್ಪಟ್ಟಿದ್ದು, ಆಕೆಯು ಹೊಯ್ಸಳ ರಾಜ್ಯದ ಪರವಾಗಿ ಸಂಗಮ ಸಹೋದರರಿಗೆ ನೀಡಿದ ಬೆಂಬಲದ್ಯೋತಕ ಈ ಶಾಸನವೆಂದು ಡಾ॥ ಸಾಲ್ತೊರೆ ಹೇಳಿದ್ದಾರೆ. ಅದೇ ವರ್ಷ ಹೊಯ್ಸಳ ವಿರೂಪಾಕ್ಷ ಬಲ್ಲಾಳನು ತೀರಿಕೊಂಡು ಹೊಯ್ಸಳ ವಂಶ ಕೊನೆಯಾಯಿತ್ತು[೨೯೮].

---

೨೯೬ ಡಾ.ಕೆ.ಜಿ.ವಸಂತ ಮಾಧವ :- ವಿಜಯಕಾಲದ ಇತಿಹಾಸ, ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ, ಪು.ಸಂ-೭೬.

೨೯೭ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೦, ೨೨೧.

೨೯೮ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೨.

ಆಡಳಿತದ ಅನುಕೂಲಕ್ಕಾಗಿ ವಿಜಯನಗರ ಸಾಮ್ರಾಜ್ಯವನ್ನು ಅನೇಕ ಪ್ರಾಂತ್ಯಗಳನ್ನಾಗಿ ವಿಂಗಡಿಸಿ, (ಅನೇಕ ರಾಜ್ಯಗಳಾಗಿ) ರಾಜವಂಶಿಯರೂ, ಸಮರ್ಥ ದಳಪತಿಗಳನ್ನು ರಾಜ್ಯಾಧಿಕಾರಿಗಳಾಗಿ ನೇಮಿಸುತ್ತಿದ್ದರು. ನೆಲ್ಲೂರು, ಕಡಪಾ ಪ್ರಾಂತ್ಯಗಳಿಗೆ ಉದಯಗಿರಿ ರಾಜ್ಯವೆಂದು, ಬಳ್ಳಾರಿ, ಅನಂತಪುರ, ಉತ್ತರ ಮೈಸೂರು ಪ್ರಾಂತ್ಯಗಳಿಗೆ ಪೆನುಗೊಂಡ ರಾಜ್ಯವೆಂದು, ಮೈಸೂರಿನ ಕೆಲವು ಭಾಗಗಳು, ಸೇಲಂ, ದಕ್ಷಿಣ ಅರ್ಕಾಡು ಪ್ರಾಂತ್ಯಗಳಿಗೆ ಅಂಗ, ಬನವಾಸಿ, ಚಂದ್ರಗುತ್ತಿ, ಗೋವಾ ಪ್ರಾಂತ್ಯಗಳಿಗೆ ತುಳು ರಾಜ್ಯ, ಮುಳುವಾಯ ರಾಜ್ಯ, ಸಾದಲಿರಾಜ್ಯ, ರಾಜಗಂಭೀರ ರಾಜ್ಯ ಮುಂತಾದ ಅನೇಕ ರಾಜ್ಯಗಳು ವಿಜಯನಗರದ ಪ್ರಾಂತ್ಯದಲ್ಲಿದ್ದವು[೨೯೯]. ಜಿಲ್ಲೆಯಲ್ಲಿನ ದೇವನಹಳ್ಳಿ, ಹೊಸಕೋಟೆ, ಚಿಕ್ಕಬಳ್ಳಾಪುರ ಸುತ್ತಮುತ್ತಲಿನ ಪ್ರದೇಶಗಳು ಸಾದಲಿ ರಾಜ್ಯಕ್ಕೆ, ನೆಲಮಂಗಲ ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಲವು ಭಾಗಗಳು ಪೆನುಗೊಂಡ ರಾಜ್ಯಕ್ಕೆ ಒಳಪಟ್ಟಿತ್ತು ಎಂಬುದನ್ನು ಶಾಸನಗಳಿಂದ ಗುರುತಿಸಬಹುದು.

ವಿಜಯನಗರದ ಸ್ಥಾಪಕರು ಕನ್ನಡಿಗರೇ ಅಥವಾ ತೆಲುಗರೇ ಹಾಗೂ ವಿದ್ಯಾರಣ್ಯರ ಪಾತ್ರದ ಬಗ್ಗೆ ಹಲವಾರು ಅಭಿಪ್ರಾಯಗಳಿವೆ. ಕೆಲವು ತೆಲುಗು ಸಾಹಿತ್ಯ ಮತ್ತು ಹೇರಳವಾದ ಕನ್ನಡ ಶಾಸನಗಳ ವಿಮರ್ಶಾತ್ಮಕ ಅಧ್ಯಯನದ ಫಲವಾಗಿ ವಿಜಯನಗರ ಸ್ಥಾಪಕರೇ ಕನ್ನಡಿಗರಾದ ಹರಿಹರ ಮತ್ತು ಬುಕ್ಕರು ಎಂದು ತಿಳಿದು ಬರುತ್ತದೆ. ವಿಜಯನಗರ ಅರಸರನ್ನು ಕರ್ನಾಟಕ ರಾಜರೆಂದೇ ಕರೆಯುತ್ತಿದ್ದರು. ತೆಲುಗು ಮೂಲವುಳ್ಳ ವಿಜಯನಗರದ ಕೊನೆಯ ಅರವೀಡು ಸಂತತಿ ಅಧಿಕಾರಕ್ಕೆ ಬಂದ ಮೇಲಂತೂ ಜನ ಕರ್ನಾಟಕ ರಾಜರೆಂದೇ ಕರೆಯುತ್ತಿದ್ದರು[೩೦೦].

ವಿಜಯನಗರ ಸಾಮ್ರಾಜ್ಯದ ಅಸ್ತಿತ್ವ, ಪರಾಕ್ರಮವು ಶ್ರೀಲಂಕಾ, ಪೆರು, ಬರ್ಮಾ, ಚೀನಾ, ಪರ್ಶಿಯ ದೇಶಗಳಿಗೆ ತಿಳಿಯಿತು. ಪೋರ್ಚುಗಲ್‌ನಿಂದ ಪಾಯಿಸ್, ನುನಿಶ್, ಬರ್ಬೋಸಬರ್ರಡಸ್, ಇಟಲಿಯಿಂದ ನಿಕೊಲೊಕೋಂಟಿ, ಸೀಜರ್‌ಫ್ರೆಡರಿಚ್ಚಿ, ಪರ್ಶಿಯಿಂದ ಅಬ್ದುಲ್‌ರಜಾಕ್‌ರು ವಿಜಯನಗರ ಆಸ್ಥಾನಕ್ಕೆ ಭೇಟಿ ನೀಡಿ ಬರೆದ ಪ್ರವಾಸಿ ಕಥಾನಗಳು ಮತ್ತು ಸಂಸ್ಕೃತ ಭಾಷೆಯಲ್ಲಿನ ವಿದ್ಯಾರಣ್ಯರ ಕಾಲಜ್ಞಾನ, ಗಂಗಾಂಬಿಕೆಯ ಮಧುರಾವಿಜಯ, ಒಂದನೇಯ ರಾಜನಾಥ ಡಿಂಡಿಮನ ಸಾಳುವಾಭ್ಯುದಯಂ, ಸಾಳುವ ನರಸಿಂಹನ ರಾಮಾಭ್ಯುದಯಂ, ೨ನೇ ರಾಜನಾಥ ಡಿಂಡಿಮನ ಅಚ್ಯುತಾಭ್ಯುದಯಂ, ತಿರುಮಲಾಂಬೆಯ ವರದಾಂಬಿಕಾಪರಿಣಯಂ ಎಂಬ ಕೃತಿಗಳು ಜೊತೆಗೆ ಕನ್ನಡದಲ್ಲಿ ನಂಜುಂಡ ಕವಿಯ ಕುಮಾರ ರಾಮ ಸಾಂಗತ್ಯ, ಕನಕದಾಸರ ಮೋಹನತರಂಗಿಣಿ, ಲಿಂಗಣನ ಕೆಳದಿನೃಪ ಕೃತಿಗಳು, ತೆಲುಗಿನಲ್ಲಿ ಶ್ರೀನಾಥನ ಕಾಶಿಖಂಡ, ಮಲ್ಲಯ್ಯ ಮತ್ತು ಸಿಂಗಯ್ಯರ

[೨೯೯] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ ಪು.ಸಂ-೩೬೧.

[೩೦೦] ಡಾ.ಬಿ.ಎ. ಸಾಲೆತ್ತೊರೆ & ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೬೩.

ವರಾಹಪುರಾಣಮಂ, ವಿಶ್ವನಾಥನಾಯನಿಯ ರಾಯವಾಚಕಮು, ಕೃಷ್ಣದೇವರಾಯನ ಅಮೂಲ್ಯಮಾಲ, ಪೆದ್ದಣ್ಣನ ಮನುಚರಿತೆಯು[೩೦೧] ಎಂಬ ಹಲವಾರು ಕೃತಿಗಳು ವಿಜಯನಗರ ಚರಿತ್ರೆಯನ್ನು ನಿರೂಪಿಸುತ್ತದೆ. ಸರ್ವಧರ್ಮ ಸಮನ್ವಯ ನಂಬಿಗೆಯಿಟ್ಟು ಹಿಂದೂ ಧರ್ಮವನ್ನು ರಕ್ಷಿಸಲು ಯತ್ನಿಸಿದರೂ ಹೆಚ್ಚಿನ ಸಮಯವನ್ನು ಹಿಂದು ಅರಸರನ್ನು ಸಡೆ ಬಡಿಯುವುದರಲ್ಲಿ ಕಾಲ ಕಳೆದ, ಹಿಂದು ರಾಜರನ್ನು ಸದೆ ಬಡಿಯಲು ವಿಜಯನಗರದ ಅರಸರು ಮುಸ್ಲಿಂ ಸೈನಿಕರನ್ನು ಉಪಯೋಗಿಸುತ್ತಿದ್ದರು. ಇದು ಒಂದು ವಿಪರ್ಯಾಸವೆಂದು ಡಾ. ಬರ್ಟನ್‌ಸ್ಟೀನ್‌ರ ಅಭಿಪ್ರಾಯವಾಗಿದೆ[೩೦೨].

## ಸಂಗಮ ಮನೆತನ

ವಿಜಯನಗರ ಮನೆತನ ಸಂಸ್ಥಾಪಕನಾದ ಸಂಗಮನ ಮಕ್ಕಳಾದ ೫ ಸಹೋದರರಲ್ಲಿ ಹಿರಿಯನಾದ ಹರಿಹರನು ಆಳ್ವಿಕೆಯನ್ನು ಆರಂಭಿಸಿ, ಆಡಳಿತದಲ್ಲಿ ಬದಲಾವಣೆ ತಂದ್ದು, ರಾಜ್ಯವನ್ನು ಸ್ಥಳಗಳಾಗಿಯೂ, ಮಂಡಲಗಳಾಗಿಯೂ ವಿಂಗಡಿಸಿ, ರಾಜ ಕುಟುಂಬದವರನ್ನೇ ಮಂಡಲಾಧಿಪತಿಗಳಾಗಿ ನೇಮಿಸುತ್ತಿದ್ದನು. ಅದುವರೆಗೆ ಅಕ್ಕಸಾಲಿಗರು, ಶ್ಯಾನುಭೋಗರನ್ನು ನೇಮಿಸುತ್ತಿದ್ದ ಪದ್ಧತಿಯನ್ನು ನಿಲ್ಲಿಸಿ ಬ್ರಾಹ್ಮಣರನ್ನು ಆ ಸ್ಥಾನಕ್ಕೆ ನೇಮಿಸಿದನು. ಹೊಯ್ಸಳರ ಕಾಲದಲ್ಲಿ ಬೆಂಗಳೂರು ಭಾಗಗಳನ್ನು ಹಲವಾರು ಕಿರಿಯ ನಾಡಪ್ರಭುಗಳು ಆಳುತ್ತಿದ್ದು, ವಿಜಯನಗರ ಸ್ಥಾಪನೆಯೊಂದಿಗೆ ಈ ಭಾಗದ ಮೇಲೆ ರಾಜ್ಯದ ಅಧಿಕಾರ ಪುನಃ ಸಾಮ್ರಾಜ್ಯ ಮಾದರಿಯಲ್ಲಿ ಸ್ಥಾಪಿಸಲಾಯಿತು.

ಹರಿಯಪ್ಪ ಒಡೆಯರ ಆಳ್ವಿಕೆಯ ಹಲವಾರು ಶಾಸನಗಳು ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿದೆ. ಹರಿಹರನ ಪರವಾಗಿ ಸಾಮಂತರು, ನಾಡಪ್ರಭುಗಳು ಆಳ್ವಿಕೆ ಮಾಡುತ್ತಾ ಹಲವಾರು ದಾನದತ್ತಿಗಳನ್ನು ನೀಡಿದ್ದಾರೆ. ಕ್ರಿ.ಶ.೧೩೪೦ರಲ್ಲಿ ಹರಿಹರನ ಸಾಮಂತನಾಗಿ ಕುಕ್ಕಲನಾಡಿನಲ್ಲಿ ಮೈಲೆಯನಾಯಕನು ಆಳುತ್ತಿದ್ದು, ಇದೇ ಮೈಲೆಯನಾಯಕ ಈ ಹಿಂದೆ ಹೊಯ್ಸಳ ೩ನೇ ಬಲ್ಲಾಳನ ಸಾಮಂತನಾಗಿ ಕುಕ್ಕಲನಾಡಿನಲ್ಲಿ ಆಳುತ್ತಿದ್ದು[೩೦೩], ಅಧಿಕಾರ ಬದಲಾದ ತಕ್ಷಣ ಆಳರಸನ ಸಾಮಂತರಾಗಿ ಆಳ್ವಿಕೆ ನಡೆಸುವುದನ್ನು ಈ ಶಾಸನದಲ್ಲಿ ಕಾಣಬಹುದು. ಕ್ರಿ.ಶ.೧೩೪೮ರಲ್ಲಿ ಮಹಾಸಾಮಂತಾಧಿಪತಿ ಮೈಲೆಯನಾಯ್ಕರು, ಎಲಕ್ಕನಾಡಪ್ರಭು ಭೈರದೇವನು ಹರಿಹರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದರು[೩೦೪]. ಕ್ರಿ.ಶ.೧೩೪೬ರಲ್ಲಿ ಹರಿಹರ ಮತ್ತು ಬುಕ್ಕರು ಜೊತೆಯಲ್ಲೇ ಆಡಳಿತ ನಡೆಸಿರುವುದನ್ನು ಸಹ

---

೩೦೧ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೪೮, ೧೪೯.

೩೦೨ ಡಾ.ಕೆ.ಜಿ.ವಸಂತ ಮಾಧವ :- ವಿಜಯಕಾಲದ ಇತಿಹಾಸ, ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ, ಪು.ಸಂ.೭೭.

೩೦೩ ಎ.ಕ-೯, ನೆ.ತಾ.೧೯, ಕ್ರಿ.ಶ.೧೩೪೦, ಬಾಣಸವಾಡಿ ಮತ್ತು ಬೆಂ.೧೧೧, ರಾಮಸಮುದ್ರ.

೩೦೪ ಎ.ಕ-೯, ದೇ.ತಾ.೫೦, ಕ್ರಿ.ಶ.೧೩೪೮, ಕಟಗೇನಹಳ್ಳಿ.

ಕಾಣಬಹುದು[೩೦೫]. ಕ್ರಿ.ಶ.೧೩೫೫ರಲ್ಲಿ ಹರಿಹರನು ವಾಗಟದ ವರದರಾಜ ದೇವರಿಗೆ ದತ್ತಿಯೊಂದನ್ನು ನೀಡಿದನು[೩೦೬]. ಹರಿಹರನು ಕ್ರಿ.ಶ.೧೩೪೬ರಲ್ಲಿ ತಮ್ಮನಾದ ಬುಕ್ಕನನ್ನು ತನ್ನ ಉತ್ತರಾಧಿಕಾರಿಯಾಗಿ ಘೋಷಿಸಿದನು. ಬಹುಶಃ ಒಂದನೇಯ ಹರಿಹರನು ೧೩೫೬ರ ಅಂತ್ಯದಲ್ಲಿ ಮೃತನಾಗಿರಬೇಕು[೩೦೭].

## ಬುಕ್ಕರಾಯ (ಕ್ರಿ.ಶ.೧೩೫೬–೭೭)

ಬುಕ್ಕನು ಕ್ರಿ.ಶ.೧೩೪೫ರಿಂದಲೇ ಅಣ್ಣನ ಜೊತೆ ಜಂಟಿ ಅರಸನಾಗಿದ್ದನಾಲ್ಲದೇ, ದ್ವಾರಸಮುದ್ರದಿಂದ ಹೊಯ್ಸಳ ಪ್ರಾಂತ್ಯವನ್ನು ಆಳುತ್ತಿದ್ದು[೩೦೮], ಕ್ರಿ.ಶ.೧೩೫೬ರಲ್ಲಿ ಪಟ್ಟಕ್ಕೆ ಬಂದು ಸುಮಾರು ೨೦ ವರ್ಷ ಕಾಲ ಆಳ್ವಿಕೆ ನಡೆಸಿದ ಸಂಗಮ ವಂಶಸ್ಥರಲ್ಲಿ ಖ್ಯಾತಿ ಹೊಂದಿದ್ದ ಬುಕ್ಕನು ವಿಜಯನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ಅದರ ಸುತ್ತಲೂ ಕೋಟೆ ಕೊತ್ತಲಗಳನ್ನು ಕಟ್ಟಿಸಿದ. ಬುಕ್ಕನ ಮಗನಾದ ಕಂಪಣ್ಣ, ದಂಡನಾಯಕ ಸಾಳುವ ಮಂಗು ಮತ್ತು ಗೋಪ್ಪಣ್ಣರು[೩೦೯], ಮಧುರೆಯ ಸುಲ್ತಾನನಾದ ಷರಿಸುದ್ದೀನ್ ಆದಿಲ್‌ಷಹ ವಿರುದ್ಧ ತೆರಳ ಕ್ರಿ.ಶ.೧೩೭೮ರಲ್ಲಿ ಸುಲ್ತಾನನು ಸಾಳ್ವ ಮಂಗುವಿನಿಂದ ಕೊಲ್ಲಲ್ಪಟ್ಟನು. ಬುಕ್ಕನ ಸತಿ ಗಂಗಾದೇವಿಯು ಸಂಸ್ಕೃತ ಭಾಷೆಯಲ್ಲಿ ರಚಿಸಿದ ಮಧುರಾ ವಿಜಯಮ್ ಕಾವ್ಯದಲ್ಲಿ ಕಂಪಣನ ಸಾಹಸ ಕಾರ್ಯಗಳನ್ನು ವಿವರಿಸಲಾಗಿದೆ. ಮಧುರೆ ಸುಲ್ತಾನನನ್ನು ಸೋಲಿಸುವುದರೊಂದಿಗೆ ಸಾಮ್ರಾಜ್ಯದ ದಕ್ಷಿಣ ಭಾಗವನ್ನೆಲ್ಲ ಶತ್ರುಮುಕ್ತವಾಗಿ ಮಾಡಿ, ರಾಮೇಶ್ವರ ತನಕ ಸಾಮ್ರಾಜ್ಯವನ್ನು ವಿಸ್ತರಿಸಿದ ಹಾಗೂ ಪೆನುಗೊಂಡ, ಚೆಂಗಲ್‌ಪೇಟೆಗಳನ್ನು ಆಕ್ರಮಿಸಿದನು[೩೧೦]. ವೀರ ಕಂಪಣರಾಯನ ಯುದ್ಧ ಕಾರ್ಯಚರಣೆಯೂ ಬುಕ್ಕನ ರಾಜ್ಯಭಾರವು ಒಟ್ಟೊಟ್ಟಿಗೆ ಮುಗಿಯುತ್ತಾ ಬಂದವು. ಬುಕ್ಕನು ಮಹಮ್ಮದೀಯರನ್ನು, ಪೂರ್ವದಲ್ಲಿ ಗಜಪತಿಯನ್ನು, ದಕ್ಷಿಣದಲ್ಲಿ ತಮಿಳು ರಾಜ್ಯಗಳ ಕೊನೆ ಕೊನೆಯ ಗುರುತುಗಳನ್ನು ನಾಶ ಮಾಡಿದನು[೩೧೧].

ಬುಕ್ಕರಾಯನ ಅಧೀನದಲ್ಲಿ ಹಲವಾರು ಸಾಮಂತರು, ಮಾಂಡಳಿಕರು, ನಾಡಪ್ರಭುಗಳು ಜಿಲ್ಲಾ ವ್ಯಾಪ್ತಿಯಲ್ಲಿ ಆಡಳಿತ ನಡೆಸಿರುವ ಗುರುತುಗಳನ್ನು ಶಾಸನಗಳಲ್ಲಿ ಕಾಣಬಹುದು. ಕ್ರಿ.ಶ.೧೩೫೨ರಲ್ಲಿ ಮಹಾಪ್ರಧಾನ ನಾಗಣ್ಣ ದಣ್ಣಾಯಕ ಒಡೆಯರ್, ಮಹಾಸಾಮಾಂತಾಧಿಪತಿ ತಂಮೆಯನಾಯ್ಕರು[೩೧೨],

---

[೩೦೫] ಎ.ಕ-೯, ಬೆಂ.೫೯, ಕ್ರಿ.ಶ.೧೩೪೬, ಸಾದರ ಮಂಗಳ.
[೩೦೬] ಎಂ.ಎ.ಆರ್, ೧೯೧೯, ಕ್ರಿ.ಶ.೧೩೫೫, ವಾಗಟ, ಪು.ಸಂ-೩೩.
[೩೦೭] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೬೦.
[೩೦೮] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೩.
[೩೦೯] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೩.
[೩೧೦] Suryanath.U.Kamath :- Karnataka State Gazetter, Bangalore Rural District, 1989, Page-61.
[೩೧೧] ಡಾ.ಬಿ.ಎ. ಸಾಬೆತ್ತೊರೆ & ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ-೧, ಪು.ಸಂ-೬೩.
[೩೧೨] ಎ.ಕ-೯, ದೇ.ತಾ.೨೯, ಕ್ರಿ.ಶ.೧೩೫೨, ವಡಿಗೇನಹಳ್ಳಿ.

ಕ್ರಿ.ಶ.೧೩೫೮ರಲ್ಲಿ ಚೋಳಮಂಡಲದ ಕೈವಾರನಾಡಿನ ಬ್ರಹ್ಮರಾಯನ್[೩೧೩], ಕ್ರಿ.ಶ.೧೩೫೯ರಲ್ಲಿ ಸಾಮಂತಾಧಿಪತಿ ಮಯಿಲೆಯನಾಯಕರ ತಮ್ಮ ಯೊಜಯನಾಯಕರು, ಸೀತೆಯನಾಯಕರು[೩೧೪], ಕ್ರಿ.ಶ.೧೩೬೭ರಲ್ಲಿ ಸಾಮಾಂತಾಧಿಪತಿ ಬೊಮ್ಮಯ್ಯನಾಯಕರು, ಅಣ್ಣಪ್ಪನವರು[೩೧೫], ಕ್ರಿ.ಶ.೧೩೬೭ರಲ್ಲಿ ಮಹಾಸಾವಂತಾಧಿಪತಿ ಅಂಗಯ ನಾಯ್ಕರು, ಎಲಹಂಕ ನಾಡಪ್ರಭು ಬಯಿರೆದೇವ[೩೧೬], ಕ್ರಿ.ಶ.೧೩೭೪ರಲ್ಲಿ ಮಹಾಮಂಡಳೇಶ್ವರ ಬಸವಶಂಕರ ಆಳುತ್ತಿದ್ದು[೩೧೭] ಹಲವಾರು ಜನಪರ ಕಾರ್ಯಗಳನ್ನು ರಾಜನ ಪರವಾಗಿ ಮಾಡಿದ್ದಾರೆ. ಕ್ರಿ.ಶ.೧೩೭೪ರಲ್ಲಿ ಬಯಪ್ಪ, ಗಂಗದೇವ ಒಡೆಯರು ಮಣ್ಣೆಯ ಹಿರಿಯ ಕೆರೆಯ ತೆಂಗಣ ಕೋಡಿಯೊಳಗಣ ಭತ್ತಾದಾಯವನ್ನ[೩೧೮] ನೀಡಿದ್ದರು.

ಬುಕ್ಕರಾಯನು ಶ್ರೀವೈಷ್ಣವರಿಗೂ ಮತ್ತು ಜೈನರಿಗೂ ಸಂಧಾನವೇರ್ಪಡಿಸಿ ಕಲಹವನ್ನು ಅಂತ್ಯಗೊಳಿಸಿದ್ದನ್ನು, ಮಾಗಡಿ ತಾಲ್ಲೂಕಿನ ಕಲ್ಯಾ ಶಾಸನದಲ್ಲಿ[೩೧೯] ಹಾಗೂ ಇದರ ಪ್ರತಿಯನ್ನು ಶ್ರವಣಬೆಳಗೊಳದಲ್ಲಿ[೩೨೦] ಕಾಣಬಹುದು. ಬುಕ್ಕನಿಗೆ ಹೊನ್ನಾಯಿ, ಗೌರಾಂಬಾ ಎಂಬ ರಾಣಿಯರಿದ್ದು, ಹತ್ತಕ್ಕೂ ಹೆಚ್ಚು ಗಂಡುಮಕ್ಕಳಿದ್ದರು[೩೨೧]. ಅದರಲ್ಲಿ ಮಲ್ಲಪ್ಪ, ಕಂಪಣ್ಣ ಒಡೆಯರು, ೨ನೇ ಹರಿಹರರೆಂಬ ಮಕ್ಕಳು ಬುಕ್ಕರಾಯನ ಅಧಿಕಾರಾವಧಿಯಲ್ಲಿ ಪ್ರಾಂತಾಧಿಕಾರಿಗಳಾಗಿ ಆಳ್ವಿಕೆ ನಡೆಸುತ್ತಿದ್ದರು. ಮಲ್ಲಪ್ಪನು ಬನ್ನೇರುಘಟ್ಟದ ದಾಮೋದರ ದೇವಾಲಯ[೩೨೨] ಹಾಗೂ ಬೇಲೂರಿನ ಶ್ರೀ ಚೆನ್ನಕೇಶವನಾಥ ದೇವಾಲಯಗಳಿಗೆ[೩೨೩] ದಾನದತ್ತಿಗಳನ್ನು ನೀಡಿದ್ದಾನೆ. ಮಲ್ಲಪ್ಪ ಸಹೋದರ ಕಂಪಣ್ಣನು ಮುಳುಬಾಗಿಲ ಪಟ್ಟಣದಲ್ಲಿ ಪೃಥ್ವಿಗೆಯ್ಯುತ್ತಿರುವುದರಿಂದಾಗಿ[೩೨೪] ಕಂಪಣನ ಶಾಸನಗಳು ಹೊಸಕೋಟೆ ತಾಲ್ಲೂಕಿನ (ಮುಳುಬಾಗಿಲುಗೆ ಹತ್ತಿರವಿರುವ) ಭಾಗದಲ್ಲಿ ಹೆಚ್ಚು ಲಭಿಸಿದೆ. ಕ್ರಿ.ಶ.೧೩೬೯ರಲ್ಲಿ ಇಲಕ್ಕಪರ್ ಸೇವಕನಾದ ಕಂಪಣ ಒಡೆಯರ ಚೀಲವನ್ನ ಹೊರುವಂತ ವೃತ್ತಿಯ ಸಿರುನಲ್ಲನಿಗೆ ರಕ್ತ ಕೊಡುಗೆಯಾಗಿ[೩೨೫], ಪುಲಿಯೂರುನಾಡಿನಲ್ಲಿ ಪೆರಿಯಸತ್ತವರನಾಗಲಿ ತೊಟ್ಟಿಗನ್ (ಜಾತಿ) ಪಿಲಗುವಲ್ಲೈ ಜಾತಿಯವರು

---

[೩೧೩] ಎ.ಕ-೯, ದೇ.ತಾ.೨೭, ಕ್ರಿ.ಶ.೧೩೫೮, ತಮಿಳು, ಬುಳ್ಳಹಳ್ಳಿ.

[೩೧೪] .ಎ.ಕ-೯, ನೆ.ತಾ.೨೩, ಕ್ರಿ.ಶ.೧೩೫೯,ಹುರುಳಿ ಚಿಕ್ಕನಹಳ್ಳಿ.

[೩೧೫] ಎ.ಕ-೯, ದೊ.ತಾ.೩೯, ಕ್ರಿ.ಶ.೧೩೬೭, ಅರಳುಮಲ್ಲಿಗೆ.

[೩೧೬] ಎ.ಕ-೯, ಹೊ.ತಾ.೧೧೭, ಕ್ರಿ.ಶ.೧೩೬೭, ಕಿತಗನೂರು.

[೩೧೭] ಎ.ಕ-೯, ಹೊ.ತಾ.೧೫೭, ಕ್ರಿ.ಶ.೧೩೭೪, ಹರದೇನಹಳ್ಳಿ.

[೩೧೮] ಎ.ಕ-೯, ನೆ.ತಾ.೫೩, ಕ್ರಿ.ಶ.೧೩೭೪, ಮುದ್ದಲಿಂಗನಹಳ್ಳಿ ಮತ್ತು ದೇ.ತಾ.೧೩, ಕ್ರಿ.ಶ.೧೩೭೫, ಬ್ಯಾಡರಹಳ್ಳಿ.

[೩೧೯] ಎ.ಕ-೯, ಮಾ.ತಾ.೧೮, ಕ್ರಿ.ಶ.೧೩೬೮.ಕಲ್ಯಾ.

[೩೨೦] ಎ.ಕ-೨, ಶ್ರವಣಬೆಳಗೊಳ.೧೩೬, ಕ್ರಿ.ಶ.೧೩೬೮. ಬಂಡಾರ ಬಸ್ತಿಯ ಪೂರ್ವ ದಿಕ್ಕಿನಲ್ಲಿ, ಶ್ರವಣಬೆಳಗೊಳ.

[೩೨೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೩.

[೩೨೨] ಎ.ಕ-೯, ಆ.ತಾ.೮೨, ಕ್ರಿ.ಶ.೧೩೬೭, ಚಂಪಕಧಾಮ ದೇವಾಲಯ ದ್ವಾರದ ಬಳಿ, ಬನ್ನೇರುಘಟ್ಟ.

[೩೨೩] ಎ.ಕ-೯, ಅನುಬಂಧ, ಮಾ.ತಾ.೧೦೮, ಕ್ರಿ.ಶ.೧೩೬೭, ಅಜ್ಜನಹಳ್ಳಿ.

[೩೨೪] ಎ.ಕ-೯, ಬೆಂ.೮೧, ಕ್ರಿ.ಶ.೧೩೬೪, ಅಗರ ಗ್ರಾಮದಿಂದ ಬೆಂಳೂರು ಮ್ಯೂಸಿಯಂನಲ್ಲಿರುವ ಶಾಸನ.

[೩೨೫] ಎ.ಕ-೯, ಹೊ.ತಾ.೧೦೩ಎ, ಕ್ರಿ.ಶ.೧೩೬೯, ತಮಿಳು, ಚಿಕ್ಕನಲ್ಲೂರು

ಉಳದಂತೆ ಪ್ರತಿಹಳ್ಳಿಯಿಂದ ಒಂದು ಹಣವನ್ನು ಕೊಡಬೇಕು. ಕೊಡದವರು ನಾಡಿನ ಊರಿನಿಂದ ಹೊರಗೆ ಎಂದು ಪಂಚಾಯಿತಿ ನಿರ್ಧರಿಸಿತು. ಈ ನಿರ್ಧಾರವನ್ನು ೧೮ ನಾಡಿನವರು ತೀರ್ಮಾನಿಸಿದರು[೩೨೬] ಬಹುಶಃ ಈ ೧೮ ನಾಡುಗಳು ಕಂಪಣನ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಾಗಿರಬೇಕು. ಕಂಪಣ್ಣನು ಕ್ರಿ.ಶ.೧೩೭೭ರಲ್ಲಿ ತೀರಿಕೊಳ್ಳಲು ಬುಕ್ಕನು ಮತ್ತೊಬ್ಬ ಮಗನಾದ ೨ನೇ ಹರಿಹರನನ್ನು ಯುವರಾಜನಾಗಿ ನೇಮಿಸಲಾಯಿತು[೩೨೭].

## ೨ನೇ ಹರಿಹರ (ಕ್ರಿ.ಶ.೧೩೭೭–೧೪೦೪)

ತಂದೆ ಬುಕ್ಕರಾಯನ ಆಳ್ವಿಕೆಯಲ್ಲಿ ಯುವರಾಜನಾಗಿದ್ದ ಇಮ್ಮಡಿ ಹರಿಹರನು ಅಧಿಕಾರಕ್ಕೆ (ಪಟ್ಟ) ಬಂದ ಮೇಲೆ ನಿರಂತರ ಯುದ್ಧಗಳನ್ನು ನಡೆಸ ಬೇಕಾಯಿತು. ಇವನ ಅತ್ಯಂತ ಆಪ್ತ ಹಿಂದು ಸೇನಾನಾಯಕ ಗುಂಡ ದಂಡಾಧಿಪನು ಕ್ರಿ.ಶ.೧೩೯೭ರಲ್ಲಿ ಮುಸ್ಲಿಮರ ಮೇಲೆ ವಿಜಯ ಸಾಧಿಸಿದನು[೩೨೮]. ಇಮ್ಮಡಿ ಹರಿಹರನು ತನ್ನ ಸಾಮ್ರಾಜ್ಯ ವಿಸ್ತರಣೆಗಾಗಿ ಹಲವಾರು ಮನೆತನಗಳೊಂದಿಗೆ ಯುದ್ಧಮಾಡಿ ತನ್ನ ರಾಜ್ಯವನ್ನು ಕೊಂಕಣಿ ಭಾಗದವರೆಗೂ ವಿಸ್ತರಿಸಿದನು[೩೨೯]. ಶ್ರೀಲಂಕಕ್ಕೆ ಹೋಗಿ ಐದನೇಯ ವಿಕ್ರಮ ಬಾಹುನನ್ನು ಸೋಲಿಸಿ ಕಪ್ಪವನ್ನು ಸಂಗ್ರಹಿಸಿದನು. ನಂತರ ಪೆನುಗೊಂಡವನ್ನು ವಶಪಡಿಸಿಕೊಂಡು, ಪೆನುಗೊಂಡೆಗೆ ನೀರು ಸರಬರಾಜು ಮಾಡಲು ಹೊನ್ನೇ ನದಿಯಿಂದ ಕಾಲುವೆಯನ್ನು ನಿರ್ಮಿಸಿದನು[೩೩೦].

ಇಮ್ಮಡಿ ಹರಿಹರನಿಗೆ ವಿರೂಪಾಕ್ಷ ದೇವರಾಯ, ಇಮ್ಮಡಿ ಬುಕ್ಕರಾಯ ಎಂಬ ಮಕ್ಕಳಿದ್ದು, ರಾಜ್ಯಾಡಳಿತದಲ್ಲಿ ಬದಲಾವಣೆ ತಂದು, ತನ್ನ ಮಕ್ಕಳನ್ನು ಮಂಡಲಾಧಿಪತಿಗಳಾಗಿ ನಿಯೋಜಿಸಿದನು. ಇದರಿಂದಾಗಿ ಒಂದನೇಯ ದೇವರಾಯನು ಉದಯಗಿರಿ ರಾಜ್ಯದ ಮಂಡಲಾಧಿಪತಿಯಾದನು[೩೩೧].

ಮಹಾಮಂಡಳೇಶ್ವರನಾಗಿದ್ದಂತಹ ಹರಿಹರನನ್ನು ಕ್ರಿ.ಶ.೧೩೮೦ರಲ್ಲಿ ರಾಜಾಧಿರಾಜ, ರಾಜ ಪರಮೇಶ್ವರ[೩೩೨] ಎಂದು ಕರೆದಿರುವುದನ್ನು ಗಮನಿಸಿದರೆ ಇಮ್ಮಡಿ ಹರಿಹರನು ಶತ್ರುಗಳನ್ನು ಸೋಲಿಸಿ

---

೩೨೬ ಎ.ಕ-೯, ಹೊ.ತಾ.೧೦೩, ಕ್ರಿ.ಶ.೧೩೬೯, ತಮಿಳು, ಚಿಕ್ಕನಲ್ಲೂರು.

೩೨೭ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೩

೩೨೮ ಡಾ.ಬಿ.ಪಿ. ಸಾಬೆತ್ತೂರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೬೬.

೩೨೯ Suryanath.U.Kamath :- Karnataka State Gazetter, Bangalore Rural District, Page.no-62.

೩೩೦ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೫.

೩೩೧ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೬೨.

೩೩೨ ಎ.ಕ-೯, ಹೊ.ತಾ.೧೧೩, ಕ್ರಿ.ಶ.೧೩೮೦, ಜೋಡಿಲಕ್ಕೊಂಡನಹಳ್ಳಿ.

ಚಕ್ರಾಧಿಪತಿಯಾರಿ ಬೇಕು. ಹರಿಹರನು ರಾಜಾಧಿರಾಜ ಎಂಬ ಬಿರುದನ್ನು ಪಡೆದ ವಿಜಯನಗರ ಅರಸರಲ್ಲಿ ಮೊದಲವನೆಯವನು ಎಂದು ಸೂರ್ಯನಾಥ ಕಾಮತ್ ಅಭಿಪ್ರಾಯ ಪಟ್ಟಿದ್ದಾರೆ[೩೩೩].

ಹರಿಹರನ ಅಧೀನದಲ್ಲಿ ಕ್ರಿ.ಶ.೧೩೭೯ರಲ್ಲಿ ಪ್ರಧಾನರಾದ ನಾಗಣ್ಣ ಒಡೆಯರ್[೩೩೪], ಕ್ರಿ.ಶ.೧೩೭೬ ರಲ್ಲಿ ಸೇನಾಧಿಪತಿ ದೇವಪ್ಪ ಒಡೆಯರು[೩೩೫], ಸೇನಾನಿ ನಾಗಣ್ಣ ಒಡೆಯರು ಈ ಹಿಂದೆ ಬುಕ್ಕರಾಯನ ಮಂಡಳೇಶ್ವರನಾಗಿದ್ದರೆ, ಇಮ್ಮಡಿ ಹರಿಹರನ ಕಾಲದಲ್ಲಿ ನಾಗಣ್ಣ ಒಡೆಯರ ಮಗ ದೇವಪ್ಪ ಒಡೆಯರು ಸೇನಾಧಿಪತಿಯಾಗಿ ಕಾರ್ಯ ನಿರ್ವಾಹಿಸುತ್ತಿದ್ದು, ತಂದೆಯ ಜೊತೆಗೆ ಮಗನು ಆಳರಸರಿಗೆ ನಿಷ್ಟಾವಂತರಾಗಿ ತಮ್ಮ ಪ್ರಾಂತದಲ್ಲಿ ಅಧಿಕಾರ ಮುಂದುವರೆಸಿರಬೇಕು.

ಕ್ರಿ.ಶ.೧೩೮೫ರಲ್ಲಿ ನಾಗಣ ಒಡೆಯರು ಶಾಂತಿಯಿಂದ ಪೃಥ್ವೀರಾಜ್ಯಂಗೆಯ್ಯುತ್ತಿರಲು ಶ್ರೀರಾಸರಸರು[೩೩೬], ಕ್ರಿ.ಶ.೧೪೦೪ರಲ್ಲಿ ಮುಟ್ಟೆಯನಾಯಕರು[೩೩೭] ಆಳ್ವಿಕೆ ನಡೆಸಿದ್ದಾರೆ. ಹಾಗೂ ಕ್ರಿ.ಶ.೧೪೦೬ರ ಮಕರ ಸಂಕ್ರಾಂತಿಯ ಪುಣ್ಯ ಕಾಲದಲ್ಲಿ[೩೩೮] ಚಿಕ್ಕ ಹರಿಹರರಾಯ ಒಡೆಯರ ಮನೆಯ ಬೆವಹಾರಿಗಳು ವೊಗಟ್ಟದ ವರದರಾಜ ದೇವರಿಗೆ ದಾನ ನೀಡಿದರು[೩೩೯].

ಕ್ರಿ.ಶ.೧೪೦೪ರಲ್ಲಿ ಮೃತನಾದ ಹರಿಹರನ ಹಿರಿಯ ಮಗನಾದ ವಿರೂಪಾಕ್ಷನು ತಮ್ಮಂದಿರನ್ನು ಮೂಲೆಗೆ ತಳ್ಳಿ ಪಟ್ಟವೇರಿದರೂ ಇವನ ಆಳ್ವಿಕೆ ಹೆಚ್ಚು ಕಾಲ ಉಳಿಯಲಿಲ್ಲ. ಕ್ರಿ.ಶ.೧೪೦೫ರಲ್ಲಿ ಇಮ್ಮಡಿ ಬುಕ್ಕನು ಪಟ್ಟಕ್ಕೆ ಬಂದು ೨ ವರ್ಷಗಳೊಳಗೆ ಅವನ ಆಡಳಿತ ಅಂತ್ಯವಾಯಿತು[೩೪೦]. ಕ್ರಿ.ಶ.೧೩೮೨ರಲ್ಲಿ ವೀರ ಹರಿಯಣರಾಯರ ಕುಮಾರ ಬುಕ್ಕಣ ಒಡೆಯರ ಸಾಮ್ರಾಜ್ಯದಲ್ಲಿ ಚೋಳಮಂಡಲದ ತೊರವಳನಾಡ ಬನಹಳ್ಳಿಯ ಮೂಡಣದೆಸೆಯ ಪೆಂಮ ಸಮುದ್ರದ ಸೀಮೆಯಲ್ಲಿ ಪುರುಷೋತ್ತಮನಿಗೆ ದಾನ ನೀಡಿದನು[೩೪೧].

---

೩೩೩ ಡಾ.ಸೂರ್ಯನಾಥ ಕಾಮತ್ :- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೪.

೩೩೪ ಎ.ಕ-೯, ಹೊ.ತಾ.೧೦೮ ಮತ್ತು ೧೧೯, ಕ್ರಿ.ಶ.೧೩೭೯, ತಮಿಳು, ಹನಸಿಗಾಳು.

೩೩೫ ಎ.ಕ-೯, ಆ.ತಾ.೨೯, ಕ್ರಿ.ಶ.೧೩೭೬, ತಮಿಳು, ಕತ್ತರಿಗುಪ್ಪೆ.

೩೩೬ ಎ.ಕ-೯, ಹೊ.ತಾ.೯೩, ಕ್ರಿ.ಶ.೧೩೮೫, ತಮಿಳು, ಚೋಳಪ್ಪನಹಳ್ಳಿ.

೩೩೭ ಎ.ಕ-೯, ಹೊ.ತಾ.೧೬೦, ಕ್ರಿ.ಶ.೧೪೦೪, ತಮಿಳು, ಪಂಡಿತ ಅಗ್ರಹಾರ.

೩೩೮ ಎ.ಕ-೯, ದೇ.ತಾ.೬೬ಎ, ಕ್ರಿ.ಶ.೧೪೦೬, ತಮಿಳು, ಮೈಲಪ್ಪನಹಳ್ಳಿ.

೩೩೯ ಎ.ಕ-೯, ಅನುಬಂಧ, ಹೊ.ತಾ.೧೭೫, ಕನ್ನಡ, ವಾಗಟ.

೩೪೦ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೬೩.

೩೪೧ ಎ.ಕ-೯, ಹೊ.ತಾ.೧೫೪, ಕ್ರಿ.ಶ.೧೩೮೨, ಕನ್ನಡ, ಚಿಕ್ಕಬನಹಳ್ಳಿ.

## ಒಂದನೇಯ ದೇವರಾಯ (ಕ್ರಿ.ಶ.೧೪೦೪–೨೨)

ಮಹಾಮಂಡಳೇಶ್ವರ, ರಾಜಾಧಿರಾಜ, ರಾಜ ಪರಮೇಶ್ವರ, ಅಶ್ವಪತಿ, ಗಜಪತಿ, ನರಪತಿ, ಮೂವರು ರಾಯರ ಗಂಡನಾದ[೩೪೨] ಒಂದನೇಯ ದೇವರಾಯನು ಕ್ರಿ.ಶ.೧೪೦೬ನೇಯ ನವೆಂಬರ್ ೫ ರಂದು ವಿಜಯನಗರದ ಚಕ್ರವರ್ತಿಯಾದನು. ಇವನ ಕಾಲದಲ್ಲಿ ವಿಜಯನಗರ ಸೇನೆಯು ಒರಿಸ್ಸಾದವರೆಗೂ ಹೋಗಿ ಗಣಪತಿಯೊಡನೆ ಯುದ್ಧ ನಡೆಸಿತ್ತು. ಗುಲ್ಬರ್ಗದ ಬಹುಮನಿ ಅರಸರನ್ನು ಸೋಲಿಸಿದನು[೩೪೩]. ಹಾಗೆಯೇ ತೆಲಂಗಾಣ ಮತ್ತು ಆಂಧ್ರದ ಪೂರ್ವ ತೀರದವರೆಗೂ ವಿಸ್ತರಿಸಿದ ಸಾಮ್ರಾಜ್ಯಕ್ಕೆ ಅರೇಬಿಯಾ ಮತ್ತು ಪರ್ಶಿಯಾಗಳಿಂದ ಹೇರಳವಾಗಿ ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ತುಂಗಭದ್ರಗೆ ದೊಡ್ಡ ಅಣೆಕಟ್ಟನ್ನು ಕಟ್ಟಿ ನದಿಯಿಂದ ೧೫ ಮೈಲಿಗಳ ದೂರದವರೆ ಕಾಲುವೆಯನ್ನು ಕಟ್ಟಿಸಿ, ನೀರನ್ನು ಸರಬರಾಜು ಮಾಡಿದನು. ಹಳೆಯನಗರದ ಬಹುಭಾಗದಲ್ಲಿರುವ ಅನೇಕ ಹೊಲಗಳಿಗೂ ಇಂದಿಗೂ ನೀರಿನ ಪೂರೈಕೆ ಮಾಡುತ್ತಿರುವುದು ಇದೇ ಕಾಲುವೆಯಾಗಿದೆ. ತನ್ನವರೇ ಆದ ಬಿಲ್ಲುಗಾರರಿಗೆ ತರಬೇತಿ ನೀಡುವಂತೆ ತುರ್ಕಿ ಬುಡಕಟ್ಟಿನ ನಿಪುಣ ಬಿಲ್ಲುಗಾರರನ್ನು ನೇಮಿಸಿದನು[೩೪೪]. ಒಂದನೇಯ ದೇವರಾಯನ ಆಸ್ಥಾನಕ್ಕೆ ಇಟಲಿ ದೇಶದ ನಿಕೊಲೋಕೊಂಟಿ ಎಂಬ ಪ್ರವಾಸಿಯು ಭೇಟಿ ನೀಡಿದ ನಂತರ ಪೋರ್ಚುಗೀಸ್ ಪ್ರವಾಸಿ ನ್ಯೂನಿಸ್‌ರವರು ಇಮ್ಮಡಿ ಬುಕ್ಕನಂತೆ ಒಂದನೇಯ ದೇವರಾಯನೂ ವಿಜಯನಗರ ಪಟ್ಟಣವನ್ನು ಬಹಳವಾಗಿ ವಿಸ್ತರಿಸಿದನು. ಹಲವಾರು ನೂತನ ಪ್ರಸಾದಗಳನ್ನು ನಿರ್ಮಿಸಿದನು. ಅನೇಕ ಕೋಟೆ–ಕೊತ್ತಲುಗಳನ್ನು ಕಟ್ಟಿಸಿದನು ಎಂದು ಅಭಿಪ್ರಾಯಪಟ್ಟಿದ್ದಾರೆ[೩೪೫].

೧ನೇ ದೇವರಾಯನ ಅಧೀನದಲ್ಲಿ ಕ್ರಿ.ಶ.೧೪೦೭ರಲ್ಲಿ ಸಾಮಂತಾಧಿಪತಿ[೩೪೬], ಕ್ರಿ.ಶ.೧೪೧೦ರಲ್ಲಿ ಯಲಹಂಕ ನಾಡಪ್ರಭುವಾದ ಹಿರಿಯಣ್ಣ ದಣ್ಣಾಯಕರು[೩೪೭], ಕ್ರಿ.ಶ.೧೪೧೨ರಲ್ಲಿ ಸೊಂಣ್ನಯ ನಾಯಕರು[೩೪೮], ಕ್ರಿ.ಶ.೧೪೧೧ರಲ್ಲಿ ವಯ್‌ನಾಡಿನ ಸುಂಕಾಧಿಕಾರಿ ತಿಯಗ, ಎರುಮರೈನಾಡಿನ ಸುಂಕಾಧಿಕಾರಿ ಕರೈಕಿಲನ್, ಪುಲಿಯೂರು ಮತ್ತು ಅಲಗಿಯವರದರ್ ಸೊಕ್ಕರು[೩೪೯] ಕಾರ್ಯ ನಿರ್ವಾಹಿಸುತ್ತಿದ್ದರು. ದೇವರಾಯನು ಕ್ರಿ.ಶ.೧೪೨೨ರಲ್ಲಿ ಮೃತನಾದ ನಂತರ ಮಗನಾದ ರಾಮಚಂದ್ರನು

---

[೩೪೨] ಎ.ಕ-೯, ದೊ.ತಾ.೧೬, ಕ್ರಿ.ಶ.೧೪೧೬, ಹಾಡೋನ ಹಳ್ಳಿ.

[೩೪೩] Suryanath.U.Kamath :- Karnataka State Gazetter, Bangalore Rural District, 1989, Page-63, 62.

[೩೪೪] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೫. ೨೨೬.

[೩೪೫] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೬೪.

[೩೪೬] ಎ.ಕ-೯, ದೇ.ತಾ.೩೨, ಕ್ರಿ.ಶ.೧೪೦೭, ಮಂಕಸಂದ್ರ.

[೩೪೭] ಎ.ಕ-೯, ದೇ.ತಾ.೧೨, ಕ್ರಿ.ಶ.೧೪೧೦, ಸೊಲೂರು.

[೩೪೮] ಎ.ಕ-೯, ಹೊ.ತಾ.೬೩, ಕ್ರಿ.ಶ.೧೪೧೨, ಕನ್ನಡ, ಬೆಂಡಗಾನಹಳ್ಳಿ.

[೩೪೯] ಎ.ಕ-೯, ಹೊ.ತಾ.೧೪೯, ಕ್ರಿ.ಶ.೧೪೧೧, ತಮಿಳು,ಸಮೇತಹಳ್ಳಿ.

ಪಟ್ಟಕ್ಕೆ ಬಂದರೂ ಕೆಲವೇ ತಿಂಗಳಲ್ಲಿ ಆಳ್ವಿಕೆ ಮುಗಿದು, ದೇವರಾಯನ ಇನೊಬ್ಬ ಮಗನಾದ ವೀರ ವಿಜಯನು ಪಟ್ಟವೇರಿದನು. ಅದರೆ ವೀರ ವಿಜಯರಾಯನು ಅಷ್ಟೇನು ಪ್ರಸಿದ್ಧ ರಾಜನಾಗಿರಲಿಲ್ಲ ಎಂದು ನ್ಯೂನಿಸ್ ಹೇಳಿದ್ದಾರೆ[೩೫೦].

## ಇಮ್ಮಡಿ ದೇವರಾಯ (ಕ್ರಿ.ಶ.೧೪೨೬–೪೩)

ವೀರ ವಿಜಯನು ಮೃತನಾಗುತ್ತಲೇ ಅವನ ಮಗನಾದ ಪ್ರೌಢದೇವರಾಯ, ವೀರದೇವರಾಯ, ಪ್ರತಾಪ ದೇವರಾಯ ಎಂಬ ಅಭಿದಾನಗಳಿಂದಲೂ ಕರೆಯಲ್ಪಟ್ಟ ಇಮ್ಮಡಿ ದೇವರಾಯನು ಪಟ್ಟಕ್ಕೆ ಬಂದನು[೩೫೧]. ಎರಡು ದಶಕಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ ರಾಯನು ಪ್ರಾರಂಭದಿಂದಲೇ ರಾಜ್ಯಭಾರದಲ್ಲಿ ತಂದೆಯೊಡನೆ ಸಹಭಾಗಿಯಾಗಿದ್ದನು.

ಇಮ್ಮಡಿ ದೇವರಾಯನು ಬಹುಮನಿ ವಿರುದ್ಧ ೩ ಬಾರಿ ಯುದ್ಧ ಮಾಡಿದರೆ, ಕೊಯಿಲಾನ್ (ಕೇರಳ) ಶ್ರೀಲಂಕಾ, ಪುಲಿಕಾಟ್ (ಮದ್ರಾಸಿನ ಸಮೀಪ), ಪೆಗು, ಟೆನ್ನಾಸ್ಸೆರಿಮ್ (ಬರ್ಮ) ಹಾಗೂ ಅನೇಕ ದೇಶಗಳ ಅರಸರು ಕಪ್ಪವನ್ನು ಸಲ್ಲಿಸುತ್ತಿದ್ದರು. ದೇವರಾಯನ ಆಸ್ಥಾನಕ್ಕೆ ಕ್ರಿ.ಶ.೧೪೪೩ರಲ್ಲಿ ಪರ್ಶಿಯಾ ದೇಶದ ಅಬ್ದುಲ್ ರಜಾಕನು ಭೇಟಿ ನೀಡಿ "ವಿಜಯನಗರ ಪಟ್ಟಣವು ಕಣ್ಣಿನ ಪಟಲ ಹಿಂದೆಂದೂ ಇದಕ್ಕೆ ಸಮನಾದವನ್ನು ನೋಡದಂತಹದಾಗಿತ್ತು"[೩೫೨] ಎಂದಿದ್ದಾರೆ. ಇವನ ದಕ್ಷ ದಂಡನಾಯಕನಾದ ಲಕ್ಕಣದಂಡೇಶನು ಶ್ರೀಲಂಕಾದ ಮೇಲೆ ಯುದ್ಧ ಮಾಡಿ ಕಪ್ಪ ಕಾಣಿಕೆಯನ್ನು ಪಡೆದಿದ್ದರ ಜೊತೆಗೆ ಕೇರಳದ ಕೆಲವು ಭಾಗಗಳು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಸಿದನು ಹಾಗೂ ಬರ್ಮಾ ದೇಶದವರೆಗೂ ವಿಜಯನಗರದ ಕೀರ್ತಿ ಹಬ್ಬಿತ್ತು[೩೫೩]. ಚಾಮರಸ, ಕುಮಾರವ್ಯಾಸ, ತೆಲುಗು ಕವಿ ಶ್ರೀನಾಥರುಗಳಿಗೆ ಆಶ್ರಯ ನೀಡಿದನು[೩೫೪] ಹಾಗೇಯೇ ವಿಜಯನಗರ ಸೈನ್ಯದಲ್ಲಿ ೧೦,೦೦೦ ಮುಸ್ಲಿಂಮರನ್ನು ಸೇರಿಸಿ ಕೊಂಡಿದರ ಕಾರಣ ಶತ್ರುಗಳ ಯುದ್ಧ ಕ್ರಮಗಳನ್ನು ಅರಿಯುವ ವಿವೇಕ ಬುದ್ಧಿ ಸ್ವಲ್ಪಮಟ್ಟಿಗೆ ಕಾರಣವಾಯಿತು[೩೫೫].

[೩೫೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೬೪.

[೩೫೧] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೬.

[೩೫೨] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೬,೨೨೭.

[೩೫೩] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೪೬.

[೩೫೪] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೬.

[೩೫೫] ಡಾ.ಬಿ.ಎ. ಸಾಬೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೬೬.

ರಾಜಾಧಿರಾಜ ಪರಮೇಶ್ವರ ವೀರಪ್ರತಾಪ ದೇವರಾಯ ಒಡೆಯರ್‌ರವರ ಆಳ್ವಿಕೆಯಾವಧಿಯಲ್ಲಿ[೩೫೬] ಕ್ರಿ.ಶ.೧೪೨೬ರಲ್ಲಿ ಪೊಲಿಸೆಟ್ಟಿ ಸೋಮೇಶ್ವರ ದೇವಾಲಯದ ಮುಂದಿನ ಗರುಡ ಕಂಬವನ್ನು[೩೫೭], ಕ್ರಿ.ಶ.೧೪೩೦ರಲ್ಲಿ ತೊರವಳನಾಡ ಮಹಾಪ್ರಭು ದೇವಿಜೀಯನು ತಿರುಮಲ ದೇವರ ಸೇವೆಗೆ ಕಂಬವನ್ನು[೩೫೮], ಕ್ರಿ.ಶ.೧೪೪೦ರಲ್ಲಿ ಮುಳುವಾಗಲಿ ನಾಡಿನ ಲಕ್ಕಣ ಒಡೆಯರು ಹುಲ್ಲೂರುನಾಡು ವೊಗಟ್ಟದ ವರದರಾಜ ದೇವರಿಗೆ[೩೫೯], ಕ್ರಿ.ಶ.೧೪೬೭ರಲ್ಲಿ ಅಮರ ಗುಂಡದೇವರ ಸಹಿಯೊಂದಿಗೆ ಕಜಗಿಯ ಅಮರನಾಯಕರು ಜಾಲದ ಭೀಮಸೆಟ್ಟಿಯರಿಗೆ[೩೬೦], ಕ್ರಿ.ಶ.೧೪೩೧ರಲ್ಲಿ ಶ್ರೀ ಮಹಾ ಪ್ರಧಾನ ಮಂಗಪ್ಪ ದಂಣಾಯಕರ ಮಕ್ಕಳು ಪ್ರತಾಪರಾಯರು ವಿಜಯನಗರಿಯ ಸಿಂಹಾಸನದಲು ದೇವರಾಯರು ಸುಖ ಸಂಕಾತ ವಿನೋದದಿಂದ, ಆಯುರಾರೋಗ್ಯ ವೃದ್ಧಿಯಾಗಲೆಂದು ಸೋಮೇದೇವರಿಗೆ[೩೬೧], ಕ್ರಿ.ಶ.೧೪೪೦ರಲ್ಲಿ ಸೊಂಡೆಯಕೊಪ್ಪದ ವೇಂಟಿಯದ ಸುಂಕದಾಧಿಕಾರಿ ಮಲ್ಲರಸರು ಡೊಂಬಲೂರ ಚೊಕ್ಕನಾಥದೇವರಿಗೆ ದೇವರಾಯರು ಸಿಂಹಾಸನ ರೂಢರಾಗಿ ಇರಬೇಕೆಂದು[೩೬೨] ದಾನದತ್ತಿಗಳನ್ನು ನೀಡಿದ್ದರು. ಪೊನ್ನಲದೇವಿ ಮತ್ತು ಭೀಮದೇವಿ ಪ್ರಧಾನ ರಾಣಿಯಲ್ಲಿದ್ದು, ಇಮ್ಮಡಿ ದೇವರಾಯನ ಮರಣದ ನಂತರ ೪ ದಶಕಗಳ ಕಾಲ ವಿಜಯನಗರ ಸಾಮ್ರಾಜ್ಯವು ದೌಭಾರ್ಗ್ಯ ಅನರ್ಥಗಳಿಂದ ಕೂಡಿದಾಗಿತ್ತು[೩೬೩].

## ಮಲ್ಲಿಕಾರ್ಜುನ (ಕ್ರಿ.ಶ.೧೪೪೬–೬೫)

ಇಮ್ಮಡಿ ದೇವರಾಯ ಮತ್ತು ಪೊನ್ನಲಾದೇವಿ ಮಗನಾದ ಮುಮ್ಮಡಿ ದೇವರಾಯ ಎಂಬುವ ಮಲ್ಲಿಕಾರ್ಜುನ ಅಧಿಕಾರಕ್ಕೆ ಬಂದನು. ಇವನ ಅಧಿಕಾರವಾಧಿಯಲ್ಲಿ ಕ್ರಿ.ಶ.೧೪೬೪ರಲ್ಲಿ ಮಹಾಮಂಡಳೇಶ್ವರ ನರಸಿಂಹರಾಯರ ಕುಮಾರ ಸುತಿರಿದೇವನಾಯಕನ ಧರ್ಮಶಾಸನದಲ್ಲಿ ಜುಂಜನರಾಯರ ಸರ್ವನಾಯಕರು ಗಂಗಾಧರ ದೇವರಿಗೆ ಅಮೃತಪಡಿಗೆ ನೆಲವಂಗಲ ಸೀಮೆಗೆ

---

[೩೫೬] ಎ.ಕ-೯, ದೇ.ತಾ.೬೨, ಕ್ರಿ.ಶ.೧೪೩೨, ಬೇಚನಹಳ್ಳಿ.

[೩೫೭] ಎ.ಕ-೯, ಹೊ.ತಾ.೧೧೪, ಕ್ರಿ.ಶ.೧೪೨೬, ಕಸಬಾ (ಗುಬ್ಬಿ).

[೩೫೮] ಎ.ಕ-೯, ಹೊ.ತಾ.೧೫೫, ಕ್ರಿ.ಶ.೧೪೩೩, ಬೆಳತೂರು.

[೩೫೯] ಎ.ಕ-೯, ಹೊ.ತಾ.೧೩೦, ಕ್ರಿ.ಶ.೧೪೪೦, ಕನ್ನಡ, ವಾಗಟ.

[೩೬೦] ಎ.ಕ-೯, ದೇ.ತಾ.೫೬, ಕ್ರಿ.ಶ.೧೪೬೭, ಕನ್ನಡ, ದೊಡ್ಡಬಾಲ.

[೩೬೧] ಎ.ಕ-೯, ಬೆಂ. ೧೨೭, ಕ್ರಿ.ಶ.೧೪೩೧, ಕೊಡಗೆಹಳ್ಳಿ.

[೩೬೨] ಎ.ಕ-೯, ಬೆಂ.೮, ಕ್ರಿ.ಶ.೧೪೪೦, ಚೊಕ್ಕನಾಥ ದೇವಸ್ಥಾನದ ಮುಂದೆ, ದೊಮ್ಮಲೂರು.

[೩೬೩] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೬.

ಸಲುವ ಕನಸವಾಡಿಯನ್ನು[೩೬೪], **ಕ್ರಿ.ಶ.**೧೪೬೫ರಲ್ಲಿ ಶ್ರೀ ಪರ್ವತದ ಮಲ್ಲಿರಾಜ ದೇವಾಲಯಕ್ಕೆ ದಾನ ನೀಡಿದರು[೩೬೫].

## ವಿರುಪಾಕ್ಷ (ಕ್ರಿ.ಶ.೧೪೬೫–೮೫)

ಅರಮನೆಯ ಪಿತೂರಿಯೊಂದರ ಪರಿಣಾಮವಾಗಿ ದೇವರಾಯನ ಕಿರಿಯ ಸೋದರ ಪ್ರತಾಪ ದೇವನ ಮಗ ವಿರೂಪಾಕ್ಷನು ಸಿಂಹಾಸನ ಆಕ್ರಮಿಸಿ ಸುಮಾರು ೨೦ ವರ್ಷಗಳ ಕಾಲ ರಾಜನಾಗಿ, ಸಾಯುವರೆಗೂ ದೇಶ ಭ್ರಷ್ಟನಾಗಿಯೇ ಉಳಿಯ ಬೇಕಾಯಿತು[೩೬೬]. ಕ್ರಿ.ಶ.೧೪೪೭ರಲ್ಲಿ ವಿರೂಪಾಕ್ಷ ದೇವರಾಯ ಮಹಾರಾಯರು ದೇವರಿಗೆ ದಾನ ನೀಡಿದನು[೩೬೭]. ಕ್ರಿ.ಶ.೧೪೮೫ರಲ್ಲಿ ವಿರೂಪಾಕ್ಷ ದೇವನನ್ನು ಅವನ ಜೇಷ್ಟ ಪುತ್ರನೇ ಕೊಲೆ ಮಾಡಿದನು. ಪಿತೃಹತ್ಯೆ ಮಾಡಿದ ಮಗನು ಪಟ್ಟವನ್ನು ತ್ಯಜಿಸಿ ತನ್ನ ತಮ್ಮನಾದ ಪ್ರೌಢದೇವರಾಯನನ್ನು ಪಟ್ಟಕ್ಕೇರಿಸಿದನು. ಆದರೆ ಪಟ್ಟಗಳಿಸಿ ಕೊಟ್ಟ ಅಣ್ಣನ ಕೊಲೆ ಕ್ರಿ.ಶ.೧೪೮೫ರಲ್ಲಿ ಆಗಿದ್ದರಿಂದ ರಾಜ್ಯಭಾರವನ್ನು ಕೈಬಿಟ್ಟು ವ್ಯಸನ ನಿರತನಾದನು. ಇಲ್ಲಿಗೆ ಸಂಗಮ ವಂಶ ಅಂತ್ಯವಾಯಿತು[೩೬೮].

## ಸಾಳುವ ಮನೆತನ

ಮೂಲತಃ ಕನ್ನಡ ಕರಾವಳಿಯ ಹೊನ್ನಾವರ ಸಮೀಪ ಸಾಲ್ವಳ್ಳಿಯವನಾದ ಸಾಳ್ವನರಸಿಂಹನು ತೆಲುಗು ಪ್ರಭಾವಕ್ಕೆ ಒಳಗಾಗಿ ವಿಜಯನಗರ ಅರಸನ್ನು (ಸಂಗಮ ವಂಶದ ಅರಸ) ಬದಿಗಿರಿಸಿ, ರಾಜ್ಯದ ಹಿತದೃಷ್ಟಿಯಿಂದ ಸ್ವತಃ ತಾನೇ ಆಳಲಾರಂಬಿಸಿದನು[೩೬೯]. ವಿರೂಪಾಕ್ಷನ ಕಾಲದಲ್ಲಿ ನೆರೆಯ ರಾಜರು, ಮಾಂಡಲಿಕರು, ಸಾಮಂತರು, ಸ್ವತಂತ್ರವನ್ನು ಪಡೆಯಲು ಕಾತುರರಾಗಿದ್ದವರನ್ನು ದಮನ ಮಾಡಿ[೩೭೦], ರಾಜ್ಯಾಡಳಿತವನ್ನು ಮತ್ತೆ ಪುನರ್ ಸ್ಥಾಪಿಸಿದನು. ಚಂದ್ರಗಿರಿಯ ಮಂಡಲೇಶ್ವರನಾಗಿದ್ದ ಸಾಳುವ ನರಸಿಂಹನು ಸಾಮ್ರಾಜ್ಯದ ಆಗುಹೋಗುಗಳನ್ನು ಚಂದ್ರಗಿರಿಯಿಂದಲೇ ಪರಿಶೀಲಿಸುತ್ತಿದ್ದನು. ರಾಜ್ಯ ವ್ಯವಹಾರದಿಂದ ಸಾಳುವ ನರಸಿಂಹನು ವಿಜಯನಗರವನ್ನು ಸರ್ವನಾಶದ ವಿಪತ್ತಿನಿಂದ ರಕ್ಷಿಸಿದನೆಂದು ಹೇಳಬಹುದು[೩೭೧]. ವಿಜಯನಗರ ಸಾಮ್ರಾಜ್ಯಾಧಿಕಾರಿಯಾದ ಮೇಲೆ ವಿಜಯನಗರದ ಪೂರ್ವ ಭಾಗವಾದ ಉದಯಗಿರಿಯನ್ನು ಕ್ರಿ.ಶ.೧೪೬೯ರಲ್ಲಿ, ಕೊಂಡವೀಡುಗಳನ್ನು ಗಜಪತಿಯಿಂದ

---

೩೬೪ ಎ.ಕ-೯, ದೊ.ತಾ.೫೧, ಕ್ರಿ.ಶ.೧೪೬೪, ಕನಸವಾಡಿ.

೩೬೫ ಎ.ಕ-೯, ಕ.ತಾ.೩೬, ಕ್ರಿ.ಶ.೧೪೬೫, ಮರಳೇ ಬೇರುಪ್ಪ.

೩೬೬ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೭.

೩೬೭ ಎ.ಕ-೯, ದೇ.ತಾ.೩೮, ಕ್ರಿ.ಶ.೧೪೪೭, ಧರ್ಮಪುರ.

೩೬೮ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೭೩.

೩೬೯ ಡಾ.ಕೆ.ಜಿ.ವಸಂತ ಮಾಧವ :- ವಿಜಯಕಾಲದ ಇತಿಹಾಸ, ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ, ಪು.ಸಂ.೭೭.

೩೭೦ Suryanath.U.Kamath :- Karnataka State Gazetter, Bangalore Rural District, 1989, Page.no-64.

೩೭೧ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೭೪.

ಕ್ರಿ.ಶ.೧೪೮೦ರಲ್ಲಿ ಗೆದ್ದುಕೊಂಡನು. ಸಾಳುವಾಭ್ಯುದಯಂ ಎಂಬ ಕೃತಿಯು ಸಾಳ್ವ ಒಂದನೇ ನರಸಿಂಹನ ಸಾಧನೆಗಳನ್ನು ನಿರೂಪಿಸುತ್ತದೆ. ಹಾಗೆಯೇ ನರಸಿಂಹನು ರಾಮಾಭ್ಯುದಯಂ ಎಂಬ ರಾಮಕಥಾ ಕಾವ್ಯವನ್ನು ಬರೆದಿದ್ದಾನೆ[೩೭೨]. ಕ್ರಿ.ಶ.೧೪೮೯ರಲ್ಲಿ ನರಸಿಂಹರಾಯ ಮಹಾರಾಯರಿಗೆ ಧರ್ಮವಾಗಬೇಕೆಂದು ತಾಳಕೆರೆಯ ಗ್ರಾಮವನ್ನು ಕಾಳಸಾಲೆಯರು ಕಂಬಾಳ ಸಿದ್ಧರವೊಡೆಯರಿಗೆ ಕೊಟ್ಟರು[೩೭೩].

ನರಸಿಂಹರಾಯನ ಇಬ್ಬರು ಮಕ್ಕಳು ಕಿರಿಯರಾಗಿದ್ದ ಕಾರಣ ತನ್ನ ನಂಬುಗೆಯ ಸೇನಾಧಿಪತಿಯಾದ ನರಸನಾಯಕರನ್ನ ರಾಜ ಪ್ರತಿನಿಧಿಯಾಗಿ ವ್ಯವಹರಿಸಲು ನೇಮಿಸಿದ್ದನು[೩೭೪]. ಕ್ರಿ.ಶ.೧೪೯೧ರಲ್ಲಿ ಸಾಳುವ ವಂಶ ಸ್ಥಾಪಕನಾದ ನರಸಿಂಹನು ಮೃತನಾಗಿದ್ದ ಕೂಡಲೇ[೩೭೫], ನರಸನಾಯಕನು ನರಸಿಂಹನ ಹಿರಿಯ ಮಗ ತಿಮ್ಮನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದನು. ಆದರೆ ಮೋಸದಿಂದ ತಿಮ್ಮನನ್ನು ಕೊಲ್ಲಲ್ಪಟ್ಟ ಬಳಿಕ ೨ನೇ ಮಗನಾದ ಇಮ್ಮಡಿ ನರಸಿಂಹನನ್ನು ಸಿಂಹಾಸನದಲ್ಲಿ ಕೂರಿಸಲಾಯಿತು[೩೭೬]. ಈ ಇಮ್ಮಡಿ ನರಸಿಂಹನ ಅಧೀನದಲ್ಲಿ ಕ್ರಿ.ಶ.೧೪೯೫ರಲ್ಲಿ ಮಹಾಪ್ರಧಾನ ಗವುಡೇ ದಂಣಾಯಕ[೩೭೭], ಕ್ರಿ.ಶ.೧೪೯೫ರಲ್ಲಿ ತಿರುಮಲೆಭಟ್ಟ, ಶಂಭುಭಟ್ಟ, ಕೋನಭಟ್ಟ, ರಾಮಭಟ್ಟರಿಗೆ ವೃತ್ತಿಸಾಲವಾಗಿ[೩೭೮], ಕ್ರಿ.ಶ.೧೫೦೬ರಲ್ಲಿ ಸೊಮ್ಮಯಗಾರು ನಮ್ಮ ೨೧ ಮಾತಾಪಿತೃಗಳಿಗೆ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಸೋಮೇಶ್ವರ ದೇವರಿಗೆ[೩೭೯], ಕ್ರಿ.ಶ.೧೪೯೬ರಲ್ಲಿ ಅಳಿಯ ಕೃಷ್ಣರಾಯ ಒಡೆಯನು ವಾಗಟದ ವರದರಾಜ ದೇವರಿಗೆ[೩೮೦], ಕ್ರಿ.ಶ.೧೪೯೫ರಲ್ಲಿ ಅನಂತಯ್ಯಮಹಾದೇವ ಅರಸನು ಕುಕ್ಕಲನಾಡಿನಲ್ಲಿ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನು[೩೮೧].

ಇಮ್ಮಡಿ ನರಸಿಂಹನ ಮಗನಾದ ದೇವಪ್ಪನು ತಂದೆಯಾಧಿಕಾರವಾಧಿಯಲ್ಲಿ ಪ್ರಾಂತ್ಯಾಧಿಕಾರಿ ಆಡಳಿತ ನಡೆಸಿರುವುದನ್ನು ಪುಟ್ಟಯ್ಯನಅಗ್ರಹಾರದ ಕ್ರಿ.ಶ.೧೪೯೮ರ ಶಾಸನದಲ್ಲಿ ಕಟಾರಿ ಸಾಳುವ ಇಮ್ಮಡಿರಾಯ ಮಹಾರಾಯರ ಕುಮಾರ ಸಾಳುವ ದೇವಪ್ಪನಾಯಕರು ತಿಪ್ಪೂರಸೀಮೆಯಲ್ಲಿ ಸ್ಥಿರ

---

[೩೭೨] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೬, ೧೫೭.

[೩೭೩] ಎ.ಕ-೯, ನೆ.ತಾ.೪೭, ಕ್ರಿ.ಶ.೧೪೮೯, ಕನ್ನಡ, ತಾಳೇಕೆರೆ.

[೩೭೪] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೮.

[೩೭೫] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೭೪.

[೩೭೬] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೮.

[೩೭೭] ಎ.ಕ-೯, ಹೊ.ತಾ.೨೩, ಕ್ರಿ.ಶ.೧೪೯೫, ನಂದಗುಡಿ.

[೩೭೮] ಎ.ಕ-೯, ದೇ.ತಾ.೬೬, ಕ್ರಿ.ಶ.೧೪೯೫, ಹಂದರಹಳ್ಳಿ.

[೩೭೯] ಎ.ಕ-೯, ಹೊ.ತಾ.೧೨೧, ಕ್ರಿ.ಶ. ೧೫೦೬ ಜ್ಯೋತಿಪುರ.

[೩೮೦] ಎ.ಕ-೯, ಅನುಬಂಧ, ಹೊ.ತಾ.೧೭೪, ಕ್ರಿ.ಶ.೧೪೯೬, ಗೊಣಕನಹಳ್ಳಿ.

[೩೮೧] ಎ.ಕ-೯, ಬೆಂ.೧೨೩, ಕ್ರಿ.ಶ.೧೪೯೫, ಗೊಂಗಡಿಪುರ.

ರಾಜ್ಯಂಗೆಯುತಿದ್ದನು[೩೮೨]. ಈ ಶಾಸನದಿಂದ ದೇವಪ್ಪ ನಾಯಕನು ತಿಪ್ಪೂರ ಸೀಮೆಯ ಪ್ರಾಂತ್ಯಾಧಿಕಾರಿಯಾಗಿದ್ದನೆಂದು ಹಾಗೂ ಹುಲಕಡಿನಾಡು ಇವನ ಅಧೀನದಲ್ಲಿತ್ತೆಂದು ತಿಳಿಯಬಹುದು. ಈ ಶಾಸನದ ನಂತರ ದೇವಪ್ಪನ ಯಾವ ಶಾಸನಗಳು ಈ ಭಾಗದಲ್ಲಿ ದೊರೆತಿಲ್ಲ. ಬಹುಶಃ ದೇವಪ್ಪನು ಬಹುಬೇಗನೆ ಅಕಾಲಿಕ ಮರಣಕ್ಕೆ ಒಳಗಾಗಿರಬೇಕು.

ಇಮ್ಮಡಿ ನರಸಿಂಹ ಹಾಗೂ ನರಸನಾಯಕ ನಡುವಿನ ಬಾಂಧವ್ಯ ಹದಗೆಟ್ಟಿರುವುದರಿಂದಾಗಿ ೨ನೇ ನರಸಿಂಹನನ್ನು ಪೆನುಗೊಂಡ ಕೋಟೆಯಲ್ಲಿ ನರಸನಾಯಕನು ಬಂಧಿಸಿಟ್ಟಿದ್ದನು. ಕ್ರಿ.ಶ.೧೫೦೩ರಲ್ಲಿ ನರಸನಾಯಕ ತೀರಿಸಿಕೊಳ್ಳಲು ಅವನ ಮಗ ತುಳುವ ನರಸಿಂಹನು ಆಡಳಿತವನ್ನು ವಹಿಸಿಕೊಂಡ ೨ ವರ್ಷದ ನಂತರ ಕ್ರಿ.ಶ.೧೫೦೫ರಲ್ಲಿ ಇಮ್ಮಡಿ ನರಸಿಂಹನ ಕೊಲೆಯಾಗುವುದರಿಂದ ಸಾಳುವ ಮನೆತನವು ಅಂತ್ಯವಾಯಿತು. ಇದರಿಂದಾಗಿ ತುಳುವ ವೀರ ನರಸಿಂಹನು ಸ್ವತಂತ್ರ ಸಾಮ್ರಾಟವಾದನು.

## ತುಳುವ ಮನೆತನ

ವಿಜಯನಗರವನ್ನು ಆಳಿದ ೩ನೇ ಮನೆತನವಾದ ತುಳುವ ಮನೆತನದ ನರಸನಾಯಕನು ತಮ್ಮನ್ನು ತಾವು ಯಾದವ ವಂಶಸ್ಥರು ಎಂದು ಹೇಳಿಕೊಳ್ಳುತ್ತಾರೆ. ನರಸನಾಯಕನ ತಂದೆ ಈಶ್ವರ ನಾಯಕ ತುಳುವ ಮನೆತನದ ಮೊದಲ ಅರಸ[೩೮೩]. ಸಾಳುವ ರಾಜನನ್ನು ಅಡಗಿಸಿ ಕ್ರಿ.ಶ.೧೪೯೩ರಲ್ಲಿ ಸಿಂಹಾಸನವೇರಿದ ಸೇನಾಧಿಪತಿ ನರಸನು ಅನೇಕ ಸಾಹಸ ಕಾರ್ಯಗಳಲ್ಲಿ ಭಾಗಿಯಾಗಿದ್ದನು. ಜೊತೆಗೆ ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಮಾಡಿದನು. ಕಾವೇರಿ ನದಿಯು ಪೂರ್ಣ ಪ್ರವಾಹದಿಂದ ಹರಿಯುತ್ತಿರುವಾಗ ಅದಕ್ಕೆ ಅಡ್ಡ ಕಟ್ಟೆ ಕಟ್ಟಿ ದಾಟಿ ಶತ್ರುವನ್ನು ಹಿಡಿದು ಶ್ರೀರಂಗಪಟ್ಟಣವನ್ನು ೨ನೇ ರಾಜಧಾನಿಯಾಗಿ ಮಾಡಿಕೊಂಡಿದ್ದನು. ವಿಜಯನಗರ ಸೈನ್ಯಕ್ಕಾಗಿ ಪರ್ಶಿಯ, ಅರೇಬಿಯಾಗಳಿಂದ ಕುದುರೆಗಳನ್ನು ಪೋರ್ಚುಗೀಸರು ಗೋವಾಪಟ್ಟಣದ ಮೂಲಕ ಸಾಗಿಸುತ್ತ ಉತ್ತಮ ವ್ಯಾಪಾರ ಸಂಬಂಧವನ್ನು ಹೊಂದಿದ್ದರು[೩೮೪].

ಕ್ರಿ.ಶ.೧೫೦೩ರಲ್ಲಿ ನರಸನಾಯಕನು ತೀರಿಕೊಳ್ಳಲು ಅವನ ಮಗ ತುಳುವ ನರಸಿಂಹನು ಆಡಳಿತವನ್ನು ವಹಿಸಿಕೊಂಡ, ಪೆನುಕೊಂಡೆಯಲ್ಲಿ ಬಂಧನದಲ್ಲಿ ಇಡಲ್ಪಟ್ಟ ಸಾಳುವ ನರಸಿಂಹನ ಮಗ ೨ನೇ ನರಸಿಂಹನನ್ನು ಕ್ರಿ.ಶ.೧೫೦೫ರ ಸುಮಾರಿಗೆ ಕೊಲೆ ಮಾಡಲ್ಪಟ್ಟ ಕಾರಣದಿಂದ ನರಸಿಂಹನು

---

[೩೮೨] ಎ.ಕ-೯, ದೊ.ತಾ.೪೨ ಮತ್ತು ದೊ.ತಾ.೪೫, ಕ್ರಿ.ಶ.೧೪೯೮, ಪುಟ್ಟೈಯನಾಗ್ರಹಾರ.

[೩೮೩] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೮.

[೩೮೪] ಡಾ.ಬಿ.ಎ. ಸಾಬೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೬೭.

ಸ್ವತಂತ್ರ ಸಾಮ್ರಾಜ್ಯನಾದನು. ಕ್ರಿ.ಶ.೧೫೦೯ರಲ್ಲಿ ತೀರಿಕೊಳ್ಳಲು ತಮ್ಮನಾದ ಕೃಷ್ಣದೇವರಾಯನಿಗೆ ಪಟ್ಟವಾಯಿತು[೩೮೫].

## ಕೃಷ್ಣದೇವರಾಯ (ಕ್ರಿ.ಶ.೧೫೦೯–೨೯)

ನರಸನಾಯಕನ ಎರಡನೇಯ ಸತಿ ನಾಗಲಾಂಬಿಕೆಯ ಪುತ್ರ ಕೃಷ್ಣದೇವರಾಯನು ಮಂತ್ರಿಯಾದ ತಿಮ್ಮರಸನ ನೆರವಿನಿಂದ ಸಿಂಹಾಸನವನ್ನು ಶ್ರೀ ಕೃಷ್ಣ ಪರಮಾತ್ಮನ ಜನ್ಮದಿನದಂದು ೧೫೦೯ ಆಗಸ್ಟ್ ೮ ರಂದು ಪಟ್ಟಾಭಿಷೇಕವಾಗಿ ೨೦ ವರ್ಷಗಳ ಕಾಲ ಆಳ್ವಿಕೆ ನಡೆಸಿದನು[೩೮೬]. ವಿಜಯನಗರ ಸಾಮ್ರಾಜ್ಯದ ಆಳರಸರಲ್ಲೇ ಅತ್ಯಂತ ಪ್ರಬಲ, ಸಮರ್ಥ ಆಡಳಿತಗಾರನೂ, ಯಶಸ್ವಿ ಸೇನಾನಿಯೂ, ಘನ ವಿದ್ವಾಂಸರು ಆಗಿದ್ದನು. ಇವನ ಅಧಿಕಾರಾವಧಿಯಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಉನ್ನತಿಯ ಜೊತೆಗೆ ಶ್ರೀಮಂತ ರಾಜ್ಯವಾಗಿತ್ತು.

ಶ್ರೀರಂಗಪಟ್ಟಣದ ಸಾಮಂತರಾಜನ ಮಗಳಾದ ತಿರುಮಲದೇವಿಯನ್ನು ವಿವಾಹವಾಗಿದ್ದನು[೩೮೭]. ಜೊತೆಗೆ ಚೆನ್ನಾದೇವಿ, ಜಗನ್ಮೋಹಿನಿ ಎಂಬ ಪ್ರಮುಖ ರಾಣಿಯರಿದ್ದರು[೩೮೮]. ಆಸ್ಥಾನದಲ್ಲಿ ಅಷ್ಟ ದಿಗ್ಗಜರೆಂದೇ ಪ್ರಸಿದ್ಧರಾಗಿದ್ದ ೮ ಮಂದಿ ಪಂಡಿತರಿಗೆ ಆಶ್ರಯ ನೀಡಿದನು. ಅದರಲ್ಲಿ ಒಬ್ಬನಾದ ತೆಲುಗು ಕವಿ ಮುಕ್ಕು ತಿಮ್ಮನು (ನಂದಿ ತಿಮ್ಮಣ್ಣ) ನಂದಿ ಗ್ರಾಮದವನಾಗಿದ್ದು, ಕ್ರಿ.ಶ.೧೫೧೯ರಲ್ಲಿ ರಚಿತವಾದ ಪಾರಿಜಾತಾಪಹರಣಂ ಕೃತಿಯು ಲಭ್ಯವಾಗಿದ್ದು, ವಾಣೀವಿಲಾಸಂ ಎಂಬ ಕೃತಿಯು ಅಲಭ್ಯವಾಗಿದೆ[೩೮೯].

ಅನೇಕ ವಿದೇಶಿಯರು ಪ್ರವಾಸಿಗರು, ಯಾತ್ರಾರ್ಥಿಗಳು ಆಸ್ಥಾನಕ್ಕೆ ಭೇಟಿ ನೀಡಿದರು. ಪೋರ್ಚುಗೀಸರ ೩ ರಾಯಭಾರಿಗಳು ಭೇಟಿ ನೀಡಿದರು. ಕ್ರಿ.ಶ.೧೫೧೦ ಜನವರಿಯಲ್ಲಿ ಜೆಸ್ಯೂಇಟ್ ಪಾದ್ರಿಲೂಯ, ಅದೇ ವರ್ಷ ಮಾರ್ಚ್‌ನಲ್ಲಿ ಜಾಸ್ಟರ್‌ಚನೋಕ, ಕ್ರಿ.ಶ.೧೫೧೭ರಲ್ಲಿ ಕ್ರಿಸೊವಾಪಡೆ ಫಿಗಿರೆಡೊ[೩೯೦], ಕ್ರಿ.ಶ.೧೫೧೧ರಲ್ಲಿ ಪರ್ಶಿಯದ ಯದ್ಗಾರ್ ಬೇಗ್‌ನು ಭೇಟಿ ನೀಡಿದನು. ಅಣ್ಣ ವೀರ ನರಸಿಂಹನೊಂದಿಗೆ ಯುವರಾಜನಾಗಿ ಆಡಳಿತ ನಡೆಸುತ್ತಿದ್ದ ಸಂದರ್ಭದಲ್ಲಿ ವಿಜಾಪುರ, ಗಜಪತಿ, ಬಹುಮನಿ ಸುಲ್ತಾನರ ವಿರುದ್ಧ ನಡೆದ ಯುದ್ಧಗಳಲ್ಲಿ ಜಯ ಸಾಧಿಸಿದ್ದ ಜೊತೆಗೆ ಉಮ್ಮತ್ತೂರು

[೩೮೫] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೭.

[೩೮೬] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೮.

[೩೮೭] Suryanath.U.Kamath :- Karnataka State Gazetter, Bangalore Rural District, 1989, Page-97.

[೩೮೮] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೯.

[೩೮೯] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೮೩, ೩೮೬.

[೩೯೦] ಡಾ.ಬಿ.ವಿ. ಸಾಬೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೬೭.

ನಾಯಕರನ್ನು ಸೋಲಿಸಿದನು[೩೯೧]. ತೆಲಂಗಾಣದ ಬಹುತೇಕ ಭಾಗಗಳನ್ನು, ಕಳಿಂಗ ರಾಜ್ಯಗಳನ್ನು ಆಕ್ರಮಿಸಿದ, ಬಹುಮನಿ ರಾಜ್ಯಕ್ಕೆ ಹೊಸ ರಾಜ ಕುಮಾರನ್ನು ನೇಮಿಸಿ "ಯವನ ರಾಜ್ಯ ಪ್ರತಿಷ್ಠಾಪನಾ ಚಾರ್ಯ" ಎಂಬ ಬಿರುದು ಹೊಂದಿದ್ದನು[೩೯೨]. ಕ್ರಿ.ಶ.೧೫೧೩ರಲ್ಲಿ ಕೃಷ್ಣದೇವರಾಯನು ಉದಯಗಿರಿ ವಶಪಡಿಸಿಕೊಂಡ ಮೇಲೆ ತಿರುಮಲದೇವಿ, ಚೆನ್ನದೇವಿ ಸಮೇತರಾಗಿ ರಾಜಧಾನಿಗೆ ಮರಳ ಬರುತ್ತಾ ದಾರಿಯಲ್ಲಿ ತಿರುಪತಿಯ ಶ್ರೀ ವೆಂಕಟೇಶ್ವರ ದೇವರಿಗೆ ಕೃತಜ್ಞಾರೂಪದ ಪೂಜೆ ಸಲ್ಲಿಸಿದ್ದರು[೩೯೩].

ರಾಜ್ಯದಲ್ಲಿ ಮದುವೆಯ ತೆರಿಗೆಯನ್ನು ತೆಗೆದು ಹಾಕಿದ್ದು ಮೊದಲು ಕೈಗೊಂಡ ಕ್ರಮಗಳಲ್ಲೊಂದು. ವಿಜಯನಗರ ಶಾಂತಿಗೆ ಕಂಟಕದಂತಿದ್ದ ಉಮತ್ತೂರಿನ ಪಾಳೆಯಗಾರನ ಪೆನುಗೊಂಡವನ್ನು ಆಕ್ರಮಿಸಿ, ಶ್ರೀರಂಗಪಟ್ಟಣದವರೆಗೂ ಬೆನ್ನಟ್ಟಿದನು. ಶಿವನಸಮುದ್ರವನ್ನು ಆಕ್ರಮಿಸಿ, ಉಮ್ಮತ್ತೂರಿನ ಸುತ್ತಲಿನ ಪ್ರದೇಶಕ್ಕೆ ತಿಮ್ಮರಸನ ಸೋದರನಾದ ಸಾಳುವ ಗೋವಿಂದರಾಜನನ್ನು ಪ್ರಾಂತಾಧಿಕಾರಿಯಾಗಿ ನೇಮಿಸಿದನು[೩೯೪]. ಕ್ರಿ.ಶ.೧೫೨೦ರಲ್ಲಿ ಸಾಳುವ ತಿಮ್ಮರಸಯ್ಯನ ಅಳಿಯ ಅಪ್ಪರಸಯ್ಯ ಸೋಲೂರು ಸೀಮೆಯಲ್ಲಿ ಆಳ್ವಿಕೆ ನಡೆಸುತ್ತಿದ್ದನು[೩೯೫]. ಉದಯಗಿರಿ ಆಕ್ರಮಣ, ಕೊಂಡವೀಡಿಯಪತನ, ಕೊಂಡಪಲ್ಲಿಯವಶನ, ಸಿಂಹಾದ್ರಿ ಪೋಟ್ನೂರಿನಲ್ಲಿ ವಿಜಯ ಸ್ತಂಭ ಸ್ಥಾಪನೆ, ಗಜಪತಿಯ ರಾಜಧಾನಿಯಾದ ಕಟಕದ ಮುತ್ತಿಗೆ ಈ ಐದು ದಂಡೆಯಾತ್ರೆಗಳ ಬಗ್ಗೆ ಕೃಷ್ಣದೇವರಾಯನಿಂದ ರಚಿತವಾದ ಅಮುಕ್ತಮೌಲ್ಯದಲ್ಲಿ ವಿವರಿಸಲಾಗಿದೆ[೩೯೬].

ಕೃಷ್ಣದೇವರಾಯನಿಗೆ ಮಹಾರಾಜಾಧಿರಾಜ, ರಾಜ ಪರಮೇಶ್ವರ, ವೀರಭುಜಬಲ ಪ್ರತಾಪ ಎಂಬ ಬಿರುದುಗಳಿದ್ದು[೩೯೭], ಜಿಲ್ಲಾ ವ್ಯಾಪ್ತಿಯಲ್ಲಿ ಹಲವಾರು ಧರ್ಮ ಕಾರ್ಯಗಳು, ಜನಪದ ಕಾರ್ಯಗಳು, ದೇವಾಲಯಗಳಿಗೆ ದಾನಗಳನ್ನು, ಕೆರೆಕಟ್ಟೆಗಳ ನಿರ್ಮಾಣದ ಕಾರ್ಯಗಳು ನಡೆಯಲೆಂದು ಪೂರ್ವ–ಪಶ್ಚಿಮ, ದಕ್ಷಿಣ ಸಮುದ್ರಾಧೀಶ್ವರನಾದ ಕೃಷ್ಣದೇವರಾಯನು ಕೆಲವು ದಾನಗಳನ್ನು ನೇರವಾಗಿ ನೀಡಿದ್ದರೆ, ಇನ್ನು ಹೆಚ್ಚಿನ ದಾನಗಳನ್ನು ಕೃಷ್ಣದೇವರಾಯನ ಅಧೀನದಲ್ಲಿ ಆಡಳಿತ ನಡೆಸುತ್ತಿದ್ದ ಮಂಡಳೇಶ್ವರ, ಸಾಮಂತಾಧಿಪತಿ, ದಣ್ಣಾಯಕರು, ನಾಡಪ್ರಭುಗಳು ಕೃಷ್ಣದೇವರಾಯನ ಪರವಾಗಿ ದಾನದತ್ತಿಗಳನ್ನು ನೀಡಿರುವುದನ್ನು ಶಾಸನಗಳಲ್ಲಿ ಕಾಣಬಹುದು.

[೩೯೧] Suryanath.U.Kamath :- Karnataka State Gazetter, Bangalore Rural District, 1989, Page-65.

[೩೯೨] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೪೨.

[೩೯೩] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೮೦.

[೩೯೪] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೮.

[೩೯೫] ಎ.ಕ-೯, ಮಾ.ತಾ.೧೧, ಕ್ರಿ.ಶ.೧೫೨೦, ನಾಗಶೆಟ್ಟಿಹಳ್ಳಿ.

[೩೯೬] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೨೯, ೧೩೦.

[೩೯೭] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೭೭.

ಕ್ರಿ.ಶ.೧೪೯೬ರಲ್ಲಿ ಮಹಾಮಂಡಳೇಶ್ವರ ಕಠಾರಿ ಸಾಳ್ವ ಸಾಳವ ಇಮ್ಮಡಿ ನರಸಿಂಹರಾಯ ಮಹಾರಾಯರುಗಳ ಅಳಿಯ ಕೃಷ್ಣರಾಯ ಒಡೆಯರು ವೊಗಟ್ಟದ ವರದರಾಜದೇವರಿಗೆ[೩೯೮]. ಕ್ರಿ.ಶ.೧೫೧೦ರಲ್ಲಿ ತಂದೆ ನರಸಣ್ಣ ನಾಯಕರು ನೇಮಿಸಿದ್ದ ದಳವಾಯಿ ಗಂಡರಗೂಳಿ ನಾಯಕರ ಮಕ್ಕಳಿಗೆ ಗಂಡರಗೂಳಿ ಎಂಬ ಗ್ರಾಮವನ್ನು ಸ್ಥಾಪಿಸಿ, ದಾನ[೩೯೯]. ಈಗಲೂ ಈ ಗಂಡರಗೂಳಿ ಎಂಬ ಗ್ರಾಮವು ದೊಡ್ಡ ಬಳ್ಳಾಪುರ ತಾಲ್ಲೂಕಿನ ಮಧುರೆ ಹೋಬಳಿಯಲ್ಲಿದೆ.

ಅಣ್ಣ ವೀರ ನರಸಿಂಹನು ನೇಮಿಸಿದ ಅಧಿಕಾರಿಗಳನ್ನು ಕೃಷ್ಣದೇವರಾಯನು ತನ್ನ ಅಧಿಕಾರಾವಧಿಯಲ್ಲಿ ಮುಂದುವರೆಸಿದ ನಾಯಕನು ಕ್ರಿ.ಶ.೧೫೧೧ರಲ್ಲಿ ದೇವಾಲಯಕ್ಕೆ ಕಂಬವನ್ನು ನಿಲ್ಲಿಸಿದನು[೪೦೦]. ಕ್ರಿ.ಶ.೧೫೧೯ರಲ್ಲಿ ರಾಮಭಟ್ಟ ಪುರಾಣಿಕನು ಪಂಡಿತನೊಬ್ಬನಿಗೆ ಕಂಚಿಗಣಹಾಲು ಗ್ರಾಮವನ್ನು ಸಿಂಗಸಮುದ್ರಅಗ್ರಹಾರವೆಂದು ಮರುನಾಮಕರಣ ಮಾಡಿ[೪೦೧], ಕ್ರಿ.ಶ.೧೫೨೩ರಲ್ಲಿ ಕೊಮನಾಯಕರಿಗೆ ನಾಯ್ಕತನಕ್ಕೆ ಪಾಲಿಸಿದ ಕುಕ್ಕಲನಾಡೊಳಗಣ ತಿರುವೆಂಡನಾಥ ದೇವರಿಗೆ ದಾಸನಪುರದಲ್ಲಿ[೪೦೨]. ಕ್ರಿ.ಶ.೧೫೨೪ರಲ್ಲಿ ಸಾಕ್ಷಿ ಚೆನ್ನಮನಾಯಕರು ತಮಗೆ ಪಾಲಿಸಿದ ಮುಲುಬಾಗಿಲು ಸೀಮೆಯೊಳಗಣ ವೀರಂಣೊಡೆಯರಿಗೆ ಬೆಟ್ಟಹಳ್ಳಿಯ ಬೆಂಕಚೆಯ ಗೌಡರು ತಮ್ಮ ತಂದೆ ತಾಯಿಗೆ ಪುಣ್ಯವಾಗಬೇಕೆಂದು ಪುರವಾಗಿ[೪೦೩]. ಕ್ರಿ.ಶ.೧೫೨೪ರಲ್ಲಿ ಅಣ್ಣಜಿಆಯನವರ ಕಾರ್ಯಕ್ಕೆ ಕರ್ತರಾದ ದಾಮಂಲರಸಯನು ಸೋಮೇದೇವನು ತಿಮ್ಮಲದೇವರ, ಲಿಂಗೇಶ್ವರ ದೇವರ, ವೀರಭದ್ರ ದೇವರುಗಳಿಗೆ ಚಿಕ್ಕಮಾರಹಳ್ಳಿ ಪುರಕ್ಕೆ ಸಲ್ಲುವ ಹಣವನ್ನು[೪೦೪]. ಹುಲ್ಲೂರ ಸೀಮೆಯ ದೇವಿಶೆಟ್ಟಿಹಳ್ಳಿಯ ೨೯ ವೃತ್ತಿಗಳಲ್ಲಿ ವೊಗಟ್ಟ, ವರಾಹ ದೇವರಿಗೆ ಕೆಲವು ವೃತ್ತಿಗಳನ್ನು ದಾನ ನೀಡಿದರು[೪೦೫].

ಕೃಷ್ಣದೇವರಾಯರು ಕ್ರಿ.ಶ.೧೫೨೭ರಲ್ಲಿ ಕಾಡಕೇಶವ ದೇವಾಲಯ ಕಟ್ಟಿಸಿದರೆಂಬುದನ್ನು ತೂಬಗೆರೆ ಹೋಬಳಿಯ ಹಾಡೋನಹಳ್ಳಿಯ ಇಂದಿನ ಚೆನ್ನಕೇಶವ ದೇವಾಲಯ ಮೆಟ್ಟಿಲು ಪಕ್ಕದ ಶಾಸನದಲ್ಲಿ ಕಾಣಬಹುದು[೪೦೬]. ವಡಿಗೇನಹಳ್ಳಿಯ ಶಾಸನದಲ್ಲಿ ಕೃಷ್ಣರಾಯ ಮಹಾರಾಯರ ಹೆಸರು ಹೊರತು ಪಡಿಸಿ ಶಾಸನ ಹಾಳಾಗಿದೆ. ದೊಡ್ಡಬಳ್ಳಾಪುರ ತಾಲ್ಲೂಕಿನ ಚೆನ್ನದೇವಿಅಗ್ರಹಾರಕ್ಕೆ

---

[೩೯೮] ಎ.ಕ-೯, ಅನುಬಂಧ, ಹೊ.ತಾ.೧೭೪, ಕ್ರಿ.ಶ.೧೪೯೬, ಕನ್ನಡ, ವಾಗಟ.

[೩೯೯] ಎ.ಕ-೯, ದೊ.ತಾ.೧, ಕ್ರಿ.ಶ.೧೫೧೦, ಲಕ್ಷ್ಮೀ ದೇವಾಲಯದ ಗರ್ಭಗುಡಿಯಲ್ಲಿ, ಲಿಂಗಪುರ.

[೪೦೦] ಎ.ಕ-೯, ಹೊ.ತಾ.೧೭೭, ಕ್ರಿ.ಶ.೧೫೧೧, ಕನ್ನಡ, ವಾಗಟ.

[೪೦೧] ಎ.ಕ-೯, ದೊ.ತಾ.೧೯, ಕ್ರಿ.ಶ.೧೫೧೯, ಕನ್ನಡ, ಕಂಚಿಗನಾಳ.

[೪೦೨] ಎ.ಕ-೯, ಅನುಬಂಧ, ನೆ.ತಾ.೧೮೬, ಕಸಬಾ, ದಾಸನಪುರ ಹೋಬಳಿ.

[೪೦೩] ಎ.ಕ-೯, ಹೊ.ತಾ.೫೭, ಕ್ರಿ.ಶ.೧೫೨೪,ಸಿದ್ದೇನಹಳ್ಳಿ.

[೪೦೪] ಎ.ಕ-೯, ಅನುಬಂಧ, ನೆ.ತಾ.೧೦೨, ಕ್ರಿ.ಶ.೧೫೨೪, ಚಿಕ್ಕಮಾರನಹಳ್ಳಿ.

[೪೦೫] ಎ.ಕ-೯, ಅನುಬಂಧ, ಹೊ.ತಾ.೧೯೩, ಕ್ರಿ.ಶ.ಸೂ.೧೫೨೬, ದೇವಿಶೆಟ್ಟಿಹಳ್ಳಿ.

[೪೦೬] ಎ.ಕ-೯, ದೊ.ತಾ.೧೫, ಕ್ರಿ.ಶ.೧೫೨೭, ಹಾಡೋನಹಳ್ಳಿ.

ಕೃಷ್ಣದೇವರಾಯನು ಬಯಸಿ, ಪ್ರೀತಿಸಿ, ಮದುವೆಯಾದ ತನ್ನ ಪ್ರೀತಿಯ ರಾಣಿ ಚೆನ್ನದೇವಿಯ ಸವಿ ನೆನಪಿಗಾಗಿ ಒಂದು ಅಗ್ರಹಾರವನ್ನು ನಿರ್ಮಿಸಿ ಅದಕ್ಕೆ ಚೆನ್ನದೇವಿ ಅಗ್ರಹಾರ ಎಂದು ಹೆಸರಿಟ್ಟನು ಎಂಬುದು ಸ್ಥಳೀಯ ಐತಿಹ್ಯಕ್ಕೆ ಯಾವುದೇ ಸ್ಪಷ್ಟ ಆಧಾರಗಳಿಲ್ಲ. ಕ್ರಿ.ಶ.೧೫೨೮ರಲ್ಲಿ ವಿಜಯಾಪುರದ ಚಂದರಸ ಪಂಡಿತರ ಪಾರುಪತ್ಯದಲ್ಲಿ ಚೆನ್ನಣ ಸೆಟ್ಟಿಯರು ಪ್ರದಕ್ಷಿಣ ಪಲ್ಲಕ್ಕಿಯ[೪೦೭] ಮಾಡಿಸಿದ.

ಕ್ರಿ.ಶ.೧೫೨೪ರಲ್ಲಿ ಕೃಷ್ಣದೇವರಾಯನ ಆರು ವರ್ಷದ ಮಗ ತಿರುಮಲನಿಗೆ ಯುವರಾಜ ಪಟ್ಟಾಭಿಷೇಕವಾಯಿತು. ಈ ಸಂದರ್ಭದಲ್ಲಿ ತಿರುಮಲ ದೇವ ಮಹಾರಾಯರಿಗೆ ಧರ್ಮವಾಗಬೇಕೆಂದು ಕೋನಪ್ಪ ನಾಯಕರು ಕಲ್ಲೂರ ವರದರಾಜ ದೇವಾಲಯಕ್ಕೆ ದಾನ ನೀಡಿದನು[೪೦೮]. ತಿರುಮಲನಿಗೆ ಪಟ್ಟಾವಾದ ಒಂದು ವರ್ಷದಲ್ಲಿ ಸಾಳುವ ತಿಮ್ಮನ ಮಗನು ತಿರುಮಲರಾಯನಿಗೆ ವಿಷಪ್ರಾಶನ ಮಾಡಿಸಿದ ಪರಿಣಾಮ ಯುವರಾಜನು ಮೃತನಾದನೆಂದು ಎಂದು ನೂನಿಸ್ ಹೇಳುತ್ತಾನೆ.

ವಿಜಯನಗರ ಅರಸರು ತಮ್ಮ ವಿಶಾಲವಾದ ಸಾಮ್ರಾಜ್ಯವನ್ನು ರಾಜಧಾನಿ (ಹಂಪಿ)ಯಿಂದ ನಿಯಂತ್ರಿಸುವುದು ಕಷ್ಟಸಾಧ್ಯದ ಕಾರಣ ಹಾಗೂ ಪಾಳೆಯಗಾರರ, ಸಾಮಂತರ ಸಹಾಯವಿಲ್ಲದೆ ಶಾಂತಿ ಕಾಪಾಡಲು, ಉತ್ತಮ ಆಡಳಿತ ನಡೆಸಲು ಕಂದಾಯ ವಸೂಲು ಮಾಡಲು, ಹೊರಗಿನ ಶತ್ರುಗಳ ಆಕ್ರಮಣವನ್ನು ಎದುರಿಸಲು ಸಾಧ್ಯವಿರಲಿಲ್ಲ. ಹಾಗಾಗಿ ಪಾಳೇಗಾರರ ಆಳ್ವಿಕೆ ಆರಂಭವಾಗಿದ್ದೆ ಕೃಷ್ಣದೇವರಾಯನ ಕಾಲದಲ್ಲಿ. ಅವತಿಯ ಮಲ್ಲಭೈರೇಗೌಡನು ಕೃಷ್ಣದೇವರಾಯನ ನಿಷ್ಠಾವಂತ ಸಾಮಂತನಾಗಿದ್ದು, ಕೃಷ್ಣದೇವರಾಯನ ಅನುಮತಿ ಪಡೆದು ದೊಡ್ಡಬಳ್ಳಾಪುರ, ದೇವನಹಳ್ಳಿಯಲ್ಲಿ ಕೋಟೆಯನ್ನು ಕಟ್ಟಿಸಿದನು[೪೦೯]. ಕ್ರಿ.ಶ.೧೫೨೯ರಲ್ಲಿ ಕೃಷ್ಣದೇವರಾಯ ಮೃತನಾದನು. ಅಲ್ಲಿಗೆ ೨೦ ವರ್ಷಗಳ ಕಾಲ ಮಹತ್ವಪೂರ್ಣ ರಾಜ್ಯಭಾರ, ಕನ್ನಡ ನಾಡಿನ ಸುವರ್ಣಯುಗ ಅಂತ್ಯವಾಯಿತು.

## ಅಚ್ಯುತರಾಯ (ಕ್ರಿ.ಶ.೧೫೨೯–೪೨)

ಕೃಷ್ಣದೇವರಾಯನ ನಂತರ ಸೋದರ ಅಚ್ಯುತರಾಯರಿಗೆ ಕ್ರಿ.ಶ.೧೫೨೯ರಲ್ಲಿ ಪಟ್ಟವಾಯಿತು. ಅಚ್ಯುತರಾಯನಿಗೆ ಪಟ್ಟವಾಗಿದ್ದು, ಕೃಷ್ಣದೇವರಾಯನ ಅಳಿಯ ರಾಮರಾಯನಿಗೆ ಸಮ್ಮತವಿರಲಿಲ್ಲ. ಅದಕ್ಕಾಗಿ ಕ್ರಿ.ಶ.೧೫೩೦ರಲ್ಲಿ ಯುದ್ಧದಲ್ಲಿ ಅಚ್ಯುತರಾಯನು ರಾಮರಾಯನನ್ನು ಸೋಲಿಸಿದರೂ ಒಳ

[೪೦೭] ಎ.ಕ-೯, ಅನುಬಂಧ, ನೆ.ತಾ.೧೧೬, ಕ್ರಿ.ಶ.೧೫೨೮, ಶಿವಗಂಗೆ.

[೪೦೮] ಎ.ಕ-೯, ಮಾ.ತಾ.೮೨, ಕ್ರಿ.ಶ.೧೫೨೪, ಮಾರೇನಹಳ್ಳಿ.

[೪೦೯] ಡಾ.ಎಸ್.ವೆಂಕಟೇಶ:-ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೩೦.

ಮತ್ತು ಹೊರಗಿನವರ ದಾಳಿಯಿಂದ ಬೇಸತ್ತು ಕೊನೆಗೆ ಅಚ್ಯುತರಾಯನು ರಾಮ ರಾಯನೊಡನೆ ಒಡಂಬಡಿಕೆಗೆ ಬಂದು ರಾಜ್ಯಾಧಿಕಾರವನ್ನು ಹಂಚಿಕೊಳ್ಳಲು ಒಪ್ಪಿದರು[೪೧೦].

ನರಸನಾಯಕನ ೩ನೇ ಪತ್ನಿಯಾದ ಓಬಲಾಂಬೆಯ ಮಗ ಅಚ್ಯುತರಾಯನು ಸಲಗ ರಾಜಮನೆತನದ ರಾಜಕುಮಾರಿ ವರದಾಂಬಿಕೆಯನ್ನು ವಿವಾಹವಾಗಿದ್ದನು[೪೧೧]. ಅಚ್ಯುತರಾಯರು ಕ್ರಿ.ಶ.೧೫೩೦ರಲ್ಲಿ ವೆಂಕಟೇಶ್ವರನಿಗೆ ಹೊಸಕೋಟೆ ಸೀಮೆಯ ಸಾಂಬಾಪುರ ಅಗ್ರಹಾರ ಉಪಗ್ರಾಮ ತಿಮ್ಮನಪಲ್ಲಿ ಪ್ರತಿನಾಮವಾದ ಅಚ್ಯುತರಾಯ ಅಂಬುಧಿ ಎಂಬ ಅಗ್ರಹಾರವನ್ನು[೪೧೨] ದಾನ ನೀಡಿದ್ದರೆ ಅಚ್ಯುತರಾಯನ ಅಧಿನದಲ್ಲಿ ಆಡಳಿತಾಧಿಕಾರಿಗಳು ಹಲವಾರು ಧರ್ಮ ಕಾರ್ಯಗಳನ್ನು ಮಾಡಿದ್ದಾರೆ. ಕ್ರಿ.ಶ.೧೫೩೦ರಲ್ಲಿ ಮುಳುಬಾಗಲು ಕೆಂಚನಾಯಕರವರ ಕುಮಾರ ವೀರಪ್ಪನಾಯಕರು, ದಾಸಪ್ಪ ನಾಯಕರು ಸೋಮನಾಥ ದೀಕ್ಷಿತರಿಗೆ ೩೪ ಗ್ರಾಮವನ್ನು ಸಹಿರಣ್ಯೋೇಧಕವಾಗಿ[೪೧೩], ಕ್ರಿ.ಶ.೧೫೩೦ರಲ್ಲಿ ಶಿವರಾತ್ರಿಯಲ್ಲಿ ದೇವರಾಯನಾಯಕರು ಸುತೂರ ಗಂಗಣ ಮಗ ಚೆನ್ನಯದೇವನಿಗೆ[೪೧೪]. ಕ್ರಿ.ಶ.೧೫೩೧ರಲ್ಲಿ ತುಂಗಭದ್ರಾ ತೀರದಲ್ಲಿ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ಮಹಾರಾಯರಿಗೆ ಧರ್ಮವಾಗ ಬೇಕೆಂದು ಕಾಡನೂರು ಚೆನ್ನಕೇಶವ ದೇವರಿಗೆ ಗಂಡ್ರಗೊಳ್ಳೀ ದಳವಾಯಿ ಸೊಂಣಪ್ಪ ನಾಯಕರ ಮಕ್ಕಳು ನಾಗಪ್ಪನಾಯಕರು[೪೧೫]. ಕ್ರಿ.ಶ.೧೫೩೨ರಲ್ಲಿ ಕಟ್ಟಿಗೆಯ ಕಾಮಣನಾಯಕರೂ ಅಚ್ಯುತರಾಯರಿಗೆ ಧರ್ಮವಾಗಬೇಕೆಂದು ಶ್ರೀಪತಿಹಳ್ಳಿ ಎಂಬ ಗ್ರಾಮವನ್ನು ಪುರವಾಗಿ[೪೧೬], ಕ್ರಿ.ಶ.೧೫೩೨ರಲ್ಲಿ ಕೆಂಪದೇವರಸನು ಅಚ್ಯುತರಾಯನಿಗೆ ಧರ್ಮವಾಗ ಬೇಕೆಂದು ಎಲಹಂಕ ರಾಜ್ಯಕ್ಕೆ ಸಲುವ ಸಿವನಸಮುದ್ರದ ಸೀಮೆ ಒಳಗಣ ಚೊಕ್ಕನಹಳ್ಳಿ ಗ್ರಾಮವನ್ನು ಪರುಚೆಯ ದೇವರಿಗೆ[೪೧೭]. ಕ್ರಿ.ಶ.೧೫೩೫ರಲ್ಲಿ ಅಗ್ರಹಾರವಾಗಿ ರಾಮಪುರವನ್ನು[೪೧೮]. ಕ್ರಿ.ಶ.೧೫೩೮ರಲ್ಲಿ ಬಂಕಾಪುರದನಾಥ .....ಣ ನಾಯಕನು ಚನ್ನಕೇಶವ ದೇವರಿಗೆ ಅಮೃತಪಡಿಗೆ ದಾನ ನೀಡಿದನು[೪೧೯].

---

[೪೧೦] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೩೮೯.

[೪೧೧] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೩೨.

[೪೧೨] ಎ.ಕ-೯, ದೊ.ತಾ.೩೦, ಕ್ರಿ.ಶ.೧೫೩೦, ಸಂಸ್ಕೃತ, ಕೊಣಗಟ್ಟ.

[೪೧೩] ಎ.ಕ-೯, ಹೊ.ತಾ.೨೮, ಕ್ರಿ.ಶ.೧೫೩೦, ವಡ್ಡರಹಳ್ಳಿ.

[೪೧೪] ಎ.ಕ-೯, ಹೊ.ತಾ.೭೦, ಕ್ರಿ.ಶ.೧೫೩೦, ಬೇಚಿರಾಖ್ ರಾಮಪುರ.

[೪೧೫] ಎ.ಕ-೯, ದೊ.ತಾ.೫೦, ಕ್ರಿ.ಶ.೧೫೩೧, ಕಾಡನೂರು.

[೪೧೬] ಎ.ಕ-೯, ನೆ.ತಾ.೮೩, ಕ್ರಿ.ಶ.೧೫೩೨, ಶಿವಗಂಗೆ.

[೪೧೭] ಎ.ಕ-೯, ಬೆಂ.೫೭, ಕ್ರಿ.ಶ.೧೫೩೨, ದಾಸರಹಳ್ಳಿ.

[೪೧೮] ಎ.ಕ-೯, ದೊ.ತಾ.೨, ೧೫೩೫, ರಾಮಪುರ.

[೪೧೯] ಎ.ಕ-೯, ಹೊ.ತಾ.೮೦, ಕ್ರಿ.ಶ.೧೫೩೮, ಚಿಕ್ಕನಲ್ಲೂರು.

ಹರಿಹರರಾಯನು ಕ್ರಿ.ಶ.೧೪೦೮ ರಲ್ಲಿ ವಾರಣಾಸಿಯಿಂದ ಲಿಂಗವ ತರಿಸಿ ವಿಶ್ವೇಶ್ವರ ಪ್ರತಿಷ್ಠಾಪನೆ ಮಾಡಿದಂತೆ ಕ್ರಿ.ಶ.೧೫೩೩ರಲ್ಲಿ ಅಚ್ಯುತ ಮಹಾರಾಯರು ಗುಡಿಯನ್ನು ಕಟ್ಟಿಸಿ, ಕಾಶಿಯಿಂದ ಲಿಂಗ ತಂದು ಚಂದ್ರಮೌಳೇಶ್ವರ ದೇವರ ಪ್ರತಿಷ್ಟಾಪಿಸಿದರು[೪೨೦],

ಅಚ್ಯುತರಾಯನು ಕ್ರಿ.ಶ.೧೫೪೨ರಲ್ಲಿ ಮರಣ ಹೊಂದಿದ್ದಾಗ ವರದಾಂಬಿಕೆಯ ಮಗನಾದ ವೆಂಕಟನಿಗೆ ಸೋದರ ಮಾವ ಸಲಕ ರಾಜ ತಿರುಮಲನು ಅವಸರವಾಗಿ ಕಿರೀಟ ಧಾರಣೆ ಮಾಡಿದರ ಬಗ್ಗೆ ರಾಜಮಾತೆಗೆ ತನ್ನ ಸಹೋದರ ಉದ್ದೇಶ ಸಂದೇಹವಾಗಿ ಆದಿಲ್‌ಷಾಹಿನ ಮಧ್ಯಪ್ರವೇಶವನ್ನು ಯಾಚಿಸಿದಳು. ಆದರೆ ತಿರುಮಲನು ಮುಂದಾಲೋಚನೆಯಿಲ್ಲದೆ ವೆಂಕಟನನ್ನು ಕೊಂದ. ತತ್‌ಪರಿಣಾಮವಾಗಿ ನಡೆದ ಕದಿನಾಳ ಸರಣಿಯಲ್ಲಿ ಅಂತಿಮವಾಗಿ ತುಂಗಭದ್ರಾ ತೀರದಲ್ಲಿ ನಡೆದ ಯುದ್ಧದಲ್ಲಿ ತಿರುಮಲ್ಲನನ್ನು ಕೊಲ್ಲಲಾಯಿತ್ತು[೪೨೧].

ವೆಂಕಟಪತಿರಾಯ ಕಿರಿಯನಾದರು ತಂದೆ ಅಚ್ಯುತರಾಯನ ಆಳ್ವಿಕಾವಧಿಯಲ್ಲಿ ವೆಂಕಟಪತಿರಾಯನ ಹೆಸರಿನಲ್ಲಿ ಶಾಸನಗಳನ್ನು ಹೊರಡಿಸಿರುವುದನ್ನು ಕಾಣಬಹುದು. ಕ್ರಿ.ಶ.೧೫೩೩ರಲ್ಲಿ ಶಿವರಾತ್ರಿ ಪುಣ್ಯಕಾಲದಲ್ಲಿ ವೆಂಕಟಪತಿರಾಯನಿಗೆ ಪುಣ್ಯವಾಗಲೆಂದು ಮಲ್ಲಪ್ಪ ಅಣ್ಣನವರು ಮಲ್ಲಿಕಾರ್ಜುನ ದೇವರಿಗೆ ಸೊಂಟೇಕೊಪ್ಪದ ಹಾರೋಕ್ಯಾತನಹಳ್ಳಿ ಗ್ರಾಮವನ್ನು[೪೨೨]. ಕ್ರಿ.ಶ.೧೫೩೫ರಲ್ಲಿ ಶ್ರೀ ವಿರೂಪಾಕ್ಷ ಲಿಂಗನ ಸನ್ನಿಧಿಯಲ್ಲಿ ತಿರುಮಲದೇವಿ ಅಮ್ಮನವರ ಪಟ್ಟಣದ ವಿಜಯನಗರದ ಪೆನುಗೊಂಡ ರಾಜ್ಯದ ... ನಾಡ ಸೀಮೆವೊಳಾಗಣ ಬಿಂಣಮಂಗಲ ಗ್ರಾಮವನ್ನು ಆದಾಯವನ್ನು ಮಲ್ಲಿಕಾರ್ಜುನ ದೇವರಿಗೆ ದಾನ ನೀಡಿದರು[೪೨೩]. ಕ್ರಿ.ಶ.೧೫೪೨ರಲ್ಲಿ ಮಹಾರಾಜಾಧಿರಾಜ ರಾಜಪರಮೇಶ್ವರ ವೀರ ನರಸಿಂಗದೇವ ಮಹಾರಾಯರು ಸುಖ ರಾಜ್ಯಂಗೆಯ್ಯುತ್ತಿರಲು, ನರಸಿಂಗದೇವರು ನಮಗೆ ನಾಯಕ ತನಕೆ ಪಾಲಿಸಿದ ಹುಲುಕಡಿನಾಡೊಳಗಣ ಹಣಬೆಯ ಸೀಮೆಗೆ ಸಲುವ ಶಿಂಪಾಡಿಪುರದ ಸೀಮೆಯೊಳಗಣ ಒಂದು ಕುಂಟೆಯನ್ನು ನರಸಿಂಗದೇವ ಮಹಾರಾಯರಿಗೆ ಧರ್ಮವಾಗಲಿ ಎಂದು ಗಂಡರಗೊಳ್ಳೀ ದಳವಾಯಿ ಭೈರಪ್ಪನಾಯಕರು ಶಿಷ್ಯ ಪರಂಪರೆಯಾಗಿ ಶಿವಗಂಗೆ ಮೇಲಣ ಗವಿಯ ಸಿಂಹಾಸನ ಮಲೆಯಕಾಂತ ದೇವರಿಗೆ ದಾನ ನೀಡಿದರು[೪೨೪].

---

[೪೨೦] ಎ.ಕ-೯, ನೆ.ತಾ.೩೧, ಕ್ರಿ.ಶ.೧೫೩೩, ಹೆಸರುಘಟ್ಟ.

[೪೨೧] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೩೨.

[೪೨೨] ಎ.ಕ-೯, ನೆ.ತಾ.೧೦, ಕ್ರಿ.ಶ.೧೫೩೩,ಹಾರೋಗ್ಯಾತನಹಳ್ಳಿ

[೪೨೩] ಎ.ಕ-೯, ನೆ.ತಾ.೨, ಕ್ರಿ.ಶ.೧೫೩೫, ಭಿನ್ನಮಂಗಲ.

[೪೨೪] ಎ.ಕ-೯, ದೊ.ತಾ.೪೦, ಕ್ರಿ.ಶ.೧೫೪೨, ಗಂಡ್ರಗೋಳ್ಳಿಪುರ.

## ಸದಾಶಿವರಾಯ (ಕ್ರಿ.ಶ.೧೫೪೩–೭೧)

ಶ್ರೀ ವೆಂಕಟಪತಿರಾಯನ ನಂತರ ತುಳುವಂಶದ ಕೊನೆಯ ದೊರೆಯಾಗಿ ಅಚ್ಯುತರಾಯನ ತಮ್ಮ ರಂಗರಾಯನ ಮಗ ಸದಾಶಿವರಾಯನನ್ನು ಚಿಕ್ಕ ವಯಸ್ಸಿನಲ್ಲಿ ಕ್ರಿ.ಶ.೧೫೪೩ರಲ್ಲಿ ಅಳಿಯ ರಾಮರಾಯನು ಪಟ್ಟವೇರಿಸಿ ತಾನೇ ಏಳೆಂಟು ವರ್ಷ ಕಾಲ ಅಧಿಕಾರ ಚಲಾಯಿಸಿದನು. ಹಾಗೆಯೇ ಸಾಮ್ರಾಜ್ಯದಲ್ಲಿ ಹಿರಿಯ ಅಧಿಕಾರಿಗಳ ಸ್ಥಾನದಲ್ಲಿ ತಮ್ಮ ಹಿತೈಷಿಗಳನ್ನು ನೇಮಿಸಿಕೊಂಡಿದ್ದರಿಂದ ಸಾಮ್ರಾಜ್ಯವು ಅಶಕ್ತವಾಯಿತು[೪೨೫]. ಸದಾಶಿವನು ವಯಸ್ಕನಾದ ಮೇಲೆ ಬಂಧನದಲ್ಲಿಟ್ಟು ಸದಾಶಿವನ ಹೆಸರಿನಲ್ಲಿ ಮತ್ತೆ ರಾಮರಾಯನೇ ಆಡಳಿತ ನಡೆಸಿದನು[೪೨೬]. ಸದಾಶಿವರಾಯನ ಆಡಳಿತಾವಧಿಯ ಕಾಲದಲ್ಲಿ ಕ್ರಿ.ಶ.೧೫೪೪[೪೨೭] ಮತ್ತು ಕ್ರಿ.ಶ.೧೫೬೧ರಲ್ಲಿ ರಾಮರಾಯ[೪೨೮] ಮತ್ತು ಅವನ ಸಹೋದರ ತಿರುಮಲರನ್ನು[೪೨೯] ಮಹಾಮಂಡಳೇಶ್ವರ, ಮಹಾ ಅರಸುಗಳು ಎಂದು ಉಲ್ಲೇಖಿಸಿರುವುದನ್ನು ಕಂಡರೆ ಸದಾಶಿವರಾಯರು ಮಹಾರಾಜಾಧಿರಾಜ, ರಾಜ ಪರಮೇಶ್ವರನಾಗಿ ಸಿಂಹಾಸನ ರೂಢರಾಗಿದ್ದರೂ ರಾಮರಾಯ, ತಿರುಮಲನನ್ನೇ ಮಹಾರಸುಗಳೆಂದು ಕರೆದಿರುವುದನ್ನು ಕಂಡರೆ ರಾಮರಾಯನೇ ಆಡಳಿತವನ್ನು ನಡೆಸುತ್ತಿದ್ದನೆಂದು ನೇರವಾಗಿ ಹೇಳಬಹುದು. ಹಾಗೂ ಕ್ರಿ.ಶ.೧೫೪೪ರ ದೊಡ್ಡಬಳ್ಳಾಪುರ ಶಾಸನದಲ್ಲಿ ರಾಮಗೌಡ ವೀರಣನಾಯಕರು ರಾಮರಾಯರ ಮಹಾ ಅರಸುಗಳ ಕಾರ್ಯಕ್ಕೆ ಕರ್ತನಾಗಿದ್ದವನು ಎಂದು ಹೇಳಿರುವುದು. ರಾಮರಾಯರ ಸರ್ವಾಧಿಕಾರಕ್ಕೆ ಉದಾಹರಣೆಯಾಗಿದೆ[೪೩೦]. **ಕ್ರಿ.ಶ**.೧೫೬೫ರಲ್ಲಿ ರಾಮರಾಜ ಮತ್ತು ತಿರುಮಲೆದೇವ ಒಟ್ಟಿಗೆ ಸೇರಿ ಸಾದುಹಳ್ಳಿ ದೇವಾಲಯಕ್ಕೆ ದಾನ ನೀಡಿರಬೇಕು[೪೩೧].

ಸದಾಶಿವ ದೇವರಿಗೆ ಪುಣ್ಯವಾಗಬೇಕೆಂದು ಶಿವರಾತ್ರಿ ಪುಣ್ಯಕಾಲದಲ್ಲಿ ಕೊರಮರ ಮರುಗನಾಥ, ರಾಮಯಗೌಡರು, ಹಲಗಸೆಟ್ಟಿಯರ ಅನುಮತದಿಂದ ಬಸವಣ್ಣ ನಾಯಕರು ಮಲೆನಾಡ ಗುಳೂರು ಮಣ್ಣೆಯ ಸೀಮೆಯಲ್ಲಿ ಶಿವಗಂಗೆ ಗಂಗಾಧರ ದೇವರಿಗೆ, ಹೊನ್ನಮನ ಸಿಂಹಾಸನ, ಮೇಲಣ ಗವಿಯ ಸಿಂಹಾಸನ, ಬೆನ್ನದ ಕಂಥೆಯ ಮಠಕ್ಕೆ[೪೩೨], ಕ್ರಿ.ಶ.೧೫೪೪ರಲ್ಲಿ ಕಾಮಗೌಡ ವೀರಣ ನಾಯಕರು

---

[೪೨೫] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೩೦.

[೪೨೬] ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-೧, ಪು.ಸಂ-೨೩೨.

[೪೨೭] ಎ.ಕ-೯, ಹೊ.ತಾ.೭೧, ಕ್ರಿ.ಶ.೧೬೪೯, ಬೇಚರಾಖ್ ಬತಗಾನಹಳ್ಳಿ.

[೪೨೮] ಎ.ಕ-೯, ನೆ.ತಾ.೭೩, ಕ್ರಿ.ಶ.೧೫೬೧, ದೇವರಹಳ್ಳಿ.

[೪೨೯] ಎ.ಕ-೯, ಹೊ.ತಾ.,೧, ಕ್ರಿ.ಶ.೧೫೫೯, ನಂದಗುಡಿ.

[೪೩೦] ಎ.ಕ-೯, ಅನುಬಂಧ ,ದೊ.ತಾ.೭೧, ದೊಡ್ಡಬಳ್ಳಾಪುರ.

[೪೩೧] ಎ.ಕ-೯, ದೇ.ತಾ.೬೪, ಕ್ರಿ.ಶ.೧೫೬೫, ಉತ್ತನಹಳ್ಳಿ.

[೪೩೨] ಎ.ಕ-೯, ನೆ.ತಾ.೮೧, ಕ್ರಿ.ಶ.೧೫೪೫, ಶಿವಗಂಗೆ.

ಮಾರಕದೇವರಿಗೆ ದಾಸಗೊಂಡನಹಳ್ಳಿಯ ಗ್ರಾಮವನ್ನು[೪೩೩], ಕ್ರಿ.ಶ.೧೫೪೯ರಲ್ಲಿ ಲಿಂಗರಾಜಗಳು ಮಂಚರಸವೊಳಗಾದ ಮಹಾಜನಂಗಳಿಗೆ[೪೩೪], ಕ್ರಿ.ಶ.೧೫೫೧ರಲ್ಲಿ ಸದಾಶಿವ ಮಹಾರಾಯರಿಗೆ ತಮ್ಮ ತಂದೆ ತಾಯಿಗೆ ಪುಣ್ಯವಾಗಲೆಂದು ಮಹಾಮಂಡಳೇಶ್ವರ ಅಲುಖಿಳೇಶ್ವರದೇವ ಮಹಾಅರಸುಗಳು ತಿರುಮಲ ದೇವರಿಗೆ[೪೩೫], ಕ್ರಿ.ಶ.೧೫೫೯ರಲ್ಲಿ ಸುಗುಟೂರು ತಿಮ್ಮಪಗೌಡ ಅಯ್ಯನು ತಮ್ಮ ತಂದೆ, ತಾಯಿ, ಗುರು, ದೈವಕ್ಕೆ ಪುಣ್ಯವಾಗಲೆಂದು ನಂಜಿಗುಳಿಯ ಅಮೃತಮಲ್ಲಿಕಾರ್ಜುನ ಲಿಂಗಕ್ಕೆ[೪೩೬], ಕ್ರಿ.ಶ.೧೫೫೯ರಲ್ಲಿ ಮಹಾಮಂಡಳೇಶ್ವರ ಶ್ರೀಮನು ನಾರಾಯಣ ಹಂಡಿಗಾಳ ವೀರ..... ತಮ್ಮ ತಂದೆ ತಾಯಿಗೆ ಪುಣ್ಯವಾಗಬೇಕೆಂದು ಅಮೃತಮಲ್ಲಿಕಾರ್ಜುನ ದೇವರಿಗೆ[೪೩೭], ಕ್ರಿ.ಶ.೧೫೬೦ರಲ್ಲಿ ಕೊಡಗಿಯ ಬೊಮ್ಮರಹಳ್ಳಿಯ ರಾಮಸಮುದ್ರದ ಕೆರೆ ಕೆಳಗಿನ ಭೂಮಿಯನ್ನು[೪೩೮], ಕ್ರಿ.ಶ.೧೫೬೦ರಲ್ಲಿ ಚಿಕ್ಕಣಸೆಟ್ಟಿಯರು ಹೊಸಹಳ್ಳಿಯ ವೀರಭದ್ರ ದೇವರಿಗೆ[೪೩೯], ಸುಗಟೂರು ಚಿಕ್ಕರಾಯ ತಮ್ಮಗೌಡರೈಯ್ಯನವರು ಇಷ್ಟ ದೇವರಾದ ಸೋಮೇಶ್ವರ ಮತ್ತು ವೀರಭದ್ರ ದೇವರಿಗೆ[೪೪೦], ಕ್ರಿ.ಶ.೧೫೬೫ರಲ್ಲಿ ಪುಣ್ಯವಾಗಬೇಕೆಂದು ದೇವಪ್ಪನು ಹಳೇವೂರ ಗ್ರಾಮವನ್ನು ದೇವರಿಗೆ[೪೪೧], ಮಹಾಮಂಡಳೇಶ್ವರನಾಗಿ ಮರಾಠ ವಿಠಲೇಶ್ವರ ದೇವನು. ಮಹಾಅರಸರ ಪ್ರತಿನಿಧಿಯಾಗಿ ಕ್ರಿ.ಶ.೧೫೪೪ರಲ್ಲಿ ಯಲಹಂಕನಾಡಿನ ಶಿವನಸಮುದ್ರದ ಸೀಮೆಯ ಅಲ್ಲಾಳಸಂದ್ರ ಗ್ರಾಮವನ್ನು ಜಕ್ಕೂರು ಅಲ್ಲಾಳನಾಥ ದೇವರಿಗೆ[೪೪೨] ಹಾಗೆಯೇ ವಿಠಲೇಶ್ವರನ ಪ್ರತಿನಿಧಿಯಾಗಿ ಕಾಮಗೌಡ ವೀರಣನಾಯಕರು ಮಾರಕ ದೇವರ ಅಮೃತಪಡಿಗೆ ದಾಸಗೊಂಡನಹಳ್ಳಿಯ ಗ್ರಾಮವನ್ನು ದಾನ ನೀಡಿದರು[೪೪೩].

## ರಾಮರಾಯ

ತುಳುವ ಅರಸರ ಕೈಕೆಳಗೆ ಸೇನಾನಿಯಾಗಿದ್ದ ಅರವೀಡು ರಂಗನ ಮಗನಾದ ರಾಮರಾಯನು ಕೃಷ್ಣದೇವರಾಯನ ಕಾಲದಲ್ಲಿ ಗಣ್ಯ ಸೇನಾನಿಯಾಗಿದಲ್ಲದೆ ಅವನು ಮತ್ತು ಅವನ ಸೋದರ ತಿರುಮಲನು ಕೃಷ್ಣದೇವರಾಯನ ಕನ್ಯೆಯರಾದ ತಿರುಮಲಾಂಬೆ ಮತ್ತು ವೆಂಗಳಾಂಬೆಯರನ್ನು

[೪೩೩] ಎ.ಕ-೯, ಅನುಬಂಧ ,ದೊ.ತಾ.೭೧, ದೊಡ್ಡಬಳ್ಳಾಪುರ.
[೪೩೪] ಎ.ಕ-೯, ಹೊ.ತಾ.೩೯, ಕ್ರಿ.ಶ.೧೫೪೯,ವೋಬಳಿಹಳ್ಳಿ.
[೪೩೫] ಎ.ಕ-೯, ನೆ.ತಾ. ೭೨, ಕ್ರಿ.ಶ.೧೫೫೧, ಬಿಲ್ಲನಕೋಟೆ.
[೪೩೬] ಎ.ಕ-೯, ಹೊ.ತಾ.,೧, ಕ್ರಿ.ಶ.೧೫೫೯, ನಂದಗುಡಿ.
[೪೩೭] ಎ.ಕ-೯, ಹೊ.ತಾ.೨, ಕ್ರಿ.ಶ.೧೫೫೯, ನಂದಗುಡಿ.
[೪೩೮] ಎ.ಕ-೯, ನೆ.ತಾ.೪೮, ಕ್ರಿ.ಶ.೧೫೬೦, ಕೊಡಗಿ ಬೊಮ್ಮನಹಳ್ಳಿ.
[೪೩೯] ಎ.ಕ-೯, ನೆ.ತಾ.೭೩, ಕ್ರಿ.ಶ.೧೫೬೧, ದೇವರಹಳ್ಳಿ.
[೪೪೦] ಎ.ಕ-೯, ಹೊ.ತಾ.೯೪, ಕ್ರಿ.ಶ.೧೫೬೪, ಮುಗಬಾಳ.
[೪೪೧] ಎ.ಕ-೯, ಹೊ.ತಾ.೮೮, ಕ್ರಿ.ಶ.೧೫೬೫, ಅಟ್ಟೂರು.
[೪೪೨] ಎ.ಕ-೯, ಬೆಂ.೩೦, ಕ್ರಿ.ಶ.೧೫೪೪, ಅಲ್ಲಾಳಸಂದ್ರ,
[೪೪೩] ಎ.ಕ-೯, ಅನುಬಂಧ ,ದೊ.ತಾ.೭೧, ದೊಡ್ಡಬಳ್ಳಾಪುರ.

ಅನುಕ್ರಮವಾಗಿ ವರಿಸಿ ಅಳಿಯ ಎಂಬ ಉಪನಾಮದಿಂದ ಖ್ಯಾತರಾಗಿದ್ದರು. ರಾಮರಾಯನಿಗೆ ವೆಂಕಟಾದ್ರಿ ಎಂಬ ಮತ್ತೊಬ್ಬ ಸಹೋದರನಿದ್ದನು[೪೪೪].

ಕ್ರಿ.ಶ.೧೫೬೫ರಲ್ಲಿ ನಡೆದ ರಕ್ಕಸತಂಗಡಿ ಕದನದಲ್ಲಿ ಷಾಹಿ ಸುಲ್ತಾನರು ರಾಮರಾಯನನ್ನು ಸೋಲಿಸಿ ಕೊಂದರು. ನಂತರ ಸಂಪದ್ಭರಿತವಾದ ವಿಜಯನಗರವನ್ನು ಲೂಟಿ ಹೊಡೆದು, ಅಲ್ಲಿನ ಕಲೆಗಳ ಸೌಂದರ್ಯವನ್ನು ಭಗ್ನಗೊಳಿಸುವುದರೊಂದಿಗೆ ಆ ನಗರವನ್ನು ಹಾಳು ಹಂಪೆಯನ್ನಾಗಿ ಮಾಡಿದರು[೪೪೫]. ಈ ಯುದ್ಧದ ನಂತರ ವಿಜಯನಗರದ ಉತ್ತರ ಭಾಗಗಳು ವಿಜಾಪುರ, ಗೋಲ್ಕಂಡದವರ ವಶವಾಯಿತು. ಕೆಳದಿ, ಮೈಸೂರು ರಾಜವಂಶಗಳು ಸ್ವತಂತ್ರರಾದರು.

ರಣರಂಗದಿಂದ ಪಲಾಯನ ಮಾಡಿದ ರಾಮರಾಯನ ಸೋದರಾದ ವೆಂಕಟಪತಿರಾಯನು ಸದಾಶಿವರಾಯರ ಜೊತೆಗೆ ಅಪಾರ ಸಂಪತ್ತಿನೊಂದಿಗೆ ಪೆನುಗೊಂಡಗೆ ಹೋಗಿ ಆಳ್ವಕೆ ಪ್ರಾರಂಭಿಸಿದರು. ಪೆನುಗೊಂಡೆಯಲ್ಲಿ ತಿರುಮಲನು ಸದಾಶಿವನನ್ನು ಕಾರಾಗೃಹದಲ್ಲಿರಿಸಿ ಸದಾಶಿವರ ಹೆಸರಿನಲ್ಲಿ ಆಡಳಿತ ನಡೆಸುತ್ತಿದ್ದು, ಕ್ರಿ.ಶ.೧೫೭೦ರಲ್ಲಿ ಕರ್ನಾಟಕ ಸಾಮ್ರಾಜ್ಯ ಜೀರ್ಣೋದ್ಧಾರಕನೆಂಬ ಬಿರುದು ಕಟ್ಟಿಕೊಂಡು ಪಟ್ಟವೇರಿದನು.

ತಿರುಮಲನಿಗೆ ೩ ಮಕ್ಕಳಿದ್ದು ಒಬ್ಬೊಬ್ಬರನ್ನು ಒಂದೊಂದು ಪ್ರಾಂತ್ಯಗಳಿಗೆ ಮಂಡಲೇಶ್ವರನಾಗಿ ನೇಮಿಸಿದನು. ಹಿರಿಯನಾದ ಶ್ರೀರಂಗನು ತೆಲುಗು ಪ್ರಾಂತ್ಯಕ್ಕೆ ಅವನ ರಾಜಧಾನಿ ಪೆನುಗೊಂಡೆ, ಎರಡನೆಯವನಾದ ರಾಮನು ಕನ್ನಡ ಪ್ರಾಂತ್ಯಕ್ಕೆ ಅವನ ರಾಜಧಾನಿ ಶ್ರೀರಂಗಪಟ್ಟಣ, ೩ನೇ ಪುತ್ರನಾದ ವೆಂಕಟಾದ್ರಿ ತಮಿಳು ಪ್ರಾಂತ್ಯಕ್ಕೆ ಅವನ ರಾಜಧಾನಿ ಚಂದ್ರಗಿರಿಯಾಗಿತ್ತು. ತಿರುಮಲನ ಪಟ್ಟಾಭಿಷೇಕದೊಡನೆ ವಿಜಯನಗರದ ೪ನೇಯ ವಂಶವಾದ ಅರವೀಡು ವಂಶದ ಸ್ಥಾಪನೆಯನ್ನು ಕ್ರಿ.ಶ.೧೫೭೦ರಲ್ಲಿ ಮಾಡಿ, ಪಟ್ಟವೇರಿದಾಗ ವೃದ್ಧನಾಗಿದ್ದ ತಿರುಮಲನು ಕೊಂಚ ಕಾಲ ರಾಜ್ಯಭಾರ ಮಾಡಿ ನಂತರ ಕ್ರಿ.ಶ.೧೫೭೨ರಲ್ಲಿ ಶ್ರೀರಂಗನಿಗೆ ಪಟ್ಟವನ್ನು ವಹಿಸಿಕೊಟ್ಟು ಮತ್ತೆ ವಾನಪ್ರಸ್ಥಾವನ್ನು ಸ್ವೀಕರಿಸಿದನೆಂದು ತೋರುವುದು[೪೪೬].

ಶ್ರೀರಂಗನು (ಕ್ರಿ.ಶ.೧೫೭೨–೧೫೮೬) ಕ್ರಿ.ಶ.೧೫೭೯ರಲ್ಲಿ ಪೃಥ್ವಿರಾಜ್ಯಂಗೆಯುತ್ತಿದ್ದನೆಂದು ದೊಡ್ಡಬೆಲೆ ಶಾಸನ ತಿಳಿಸುತ್ತದೆ[೪೪೭]. ಶ್ರೀರಂಗರಾಯನ ನಂತರ ಸಹೋದರ (ತಿರುಮಲನ ೩ನೇ ಮಗ)

---

[೪೪೪] ಡಾ.ಸೂರ್ಯನಾಥ ಕಾಮತ್:-ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೬೬.

[೪೪೫] ಡಾ.ಕೆ.ಜಿ.ವಸಂತ ಮಾಧವ :- ವಿಜಯಕಾಲದ ಇತಿಹಾಸ, ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ, ಪು.ಸಂ.೭೮.

[೪೪೬] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ ಪು.ಸಂ-೪೨೬, ೪೨೮.

[೪೪೭] ಎ.ಕ-೯, ನೆ.ತಾ.೪೯, ಕ್ರಿ.ಶ.೧೫೭೯, ದೊಡ್ಡಬೆಲೆ.

ವೆಂಕಟಪತಿರಾಯನಿಗೆ (ಕ್ರಿ.ಶ.೧೫೮೬–೧೬೧೪) ಕ್ರಿ.ಶ.೧೫೮೬ರಲ್ಲಿ ಪಟ್ಟವಾಯಿತು[448]. ಕ್ರಿ.ಶ.೧೬೦೯ರಲ್ಲಿ ವೀರ ವೆಂಕಟಪತಿರಾಯರು ಸಾಮ್ರಾಜ್ಯಂಗೆಯುವಲ್ಲಿ[449] ಕ್ರಿ.ಶ.೧೬೧೦ ರಲ್ಲಿ ಸಾಮಂತಾಧಿಪತಿಯಾದ ಇಮ್ಮಡಿ ಹಾವಳ ಬಯಿರೆಗೌಡರು[450], ಕ್ರಿ.ಶ.೧೬೧೦ ರಲ್ಲಿ ವೀರಯ್ಯಗೌಡನು[451] ಜಿಲ್ಲೆಯಲ್ಲಿ ಅಧಿಕಾರ ನಿರ್ವಹಿಸುತಿದ್ದರು.

ಚಂದ್ರಗಿರಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದ ವೆಂಕಟಪತಿರಾಯನಿಗೆ ಪುತ್ರ ಇಲ್ಲದಿದ್ದರಿಂದಾಗಿ ಸೋದರ ಪುತ್ರ ೨ನೇ ಶ್ರೀರಂಗನನ್ನು ಕ್ರಿ.ಶ.೧೬೧೪ರಲ್ಲಿ ಉತ್ತರಾಧಿಕಾರಿಯಾಗಿ ನೇಮಿಸಿದನು. ಆದರೆ ೨ನೇ ಶ್ರೀರಂಗನು ಕೊಲ್ಲಲ್ಪಟ್ಟು, ೨ನೇ ಶ್ರೀರಂಗನ ಮಗನಾದ ರಾಮದೇವನಿಗೆ ಕ್ರಿ.ಶ.೧೬೧೭ರಲ್ಲಿ ಪಟ್ಟವಾಗಿ ಕ್ರಿ.ಶ.೧೬೩೨ ತೀರಿಕೊಂಡನು. ರಾಮರಾಯನ ಮೊಮ್ಮಗ ೩ನೇ ವೆಂಕನಿಗೆ ಕ್ರಿ.ಶ.೧೬೩೨ರಲ್ಲಿ (ಕ್ರಿ.ಶ.೧೬೩೨–೧೬೪೨) ಪಟ್ಟವಾಗಿ ವೆಲ್ಲೂರನ್ನು ರಾಜಧಾನಿ ಮಾಡಿಕೊಂಡು, ಕ್ರಿ.ಶ.೧೬೪೨ರಲ್ಲಿ ತೀರಿಕೊಳ್ಳಲು, ಸೋದರ ಪುತ್ರ ೩ನೇ ಶ್ರೀರಂಗನಿಗೆ ಕ್ರಿ.ಶ.೧೬೪೨ ರಲ್ಲಿ ಪಟ್ಟವಾಗಿ[452] ಗೋಲ್ಕೊಂಡದ ಸುಲ್ತಾನರ ಸೈನ್ಯಗಳು ಚಂದ್ರಗಿರಿಯನ್ನು ವಶಪಡಿಸಿಕೊಂಡ ನಂತರ ಶ್ರೀರಂಗರಾಜ ಮಹಾರಾಯರು ೧೬೪೯ರಲ್ಲಿ ಪೆನುಗೊಂಡೆಯ (ಪೆನುಗೊಂಡಗೆ ಘನ ಗಿರಿದುರ್ಗ ಎಂಬ ಮತ್ತೊಂದು ಹೆಸರಿದ್ದು) ರತ್ನ ಸಿಂಹಾಸನದಲ್ಲಿ ರೂಢರಾಗಿರಲು[453] ಅವರ ಸಾಮಂತರಾಗಿ ಸುಗಟೂರು ನಾಡಪ್ರಭುಗಳಾದ ತಮ್ಮಪ್ಪಗೌಡ[454], ಮುಮ್ಮಡಿ ಚಿಕ್ಕರಾಯ ತಮ್ಮೇಗೌಡರಯ್ಯ[455] ಮಾಗಡಿ ಅಧಿಕಾರಾವಧಿಯಲ್ಲಿ ಯಲಹಂಕನಾಡಪ್ರಭುಗಳಾದ ಮುಮ್ಮಡಿ ಕೆಂಪಗೌಡಯ್ಯ[456], ಮುಮ್ಮಡಿ ದೊಡ್ಡ ವೀರಪ್ಪಗೌಡ[457], ಇಮ್ಮಡಿ ದೊಡ್ಡ ವೀರಪ್ಪಗೌಡರೈಯ್ಯ[458], ಮುಮ್ಮಡಿ ಕೆಂಪವೀರಪ್ಪಗೌಡರಯ್ಯ[459] ಸಾಮಂತರಾಗಿ ಆಡಳಿತ ನಡೆಸಿದರು.

[448] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೬೪.
[449] ಎ.ಕ-೯, ಅನುಬಂಧ, ಹೊ.ತಾ.೧೮೪, ಬೊಮ್ಮನಬಂಡೆ.
[450] ಎ.ಕ-೯, ದೊ.ತಾ.೪೯, ಕ್ರಿ.ಶ.೧೬೧೦, ನಾಗೇನಹಳ್ಳಿ.
[451] ಎ.ಕ-೯, ಹೊ.ತಾ.೧೧೯, ಕ್ರಿ.ಶ.೧೬೧೦, ಬೊಮ್ಮೇನಹಳ್ಳಿ.
[452] ಡಾ.ಸೂರ್ಯನಾಥ ಕಾಮತ್:-ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೬೪.
[453] ಎ.ಕ-೯, ಹೊ.ತಾ.೭೧, ಕ್ರಿ.ಶ.೧೬೪೯, ಬೇಬಿರಾಖ್ ಬತಗಾನಹಳ್ಳಿ.
[454] ಎ.ಕ-೯, ಹೊ.ತಾ.೭೯, ಕ್ರಿ.ಶ.೧೬೬೧, ದೊಡ್ಡ ನಲ್ಲೂರು.
[455] ಎ.ಕ-೯, ಹೊ.ತಾ.೧೦೫, ಕ್ರಿ.ಶ.೧೬೯೩ ಹೊಸಕೋಟೆ.
[456] ಎ.ಕ-೯, ಮಾ.ತಾ.೩೦, ಕ್ರಿ.ಶ.೧೬೬೮, ಹಾಲಶೆಟ್ಟಿಹಳ್ಳಿ.
[457] ಎ.ಕ-೯, ಮಾ.ತಾ.೮, ಕ್ರಿ.ಶ.೧೬೮೧, ತಿರುಮಲೆ.
[458] ಎ.ಕ-೯, ಅನುಬಂಧ. ಮಾ.ತಾ.೮೩, ಕ್ರಿ.ಶ.೧೬೯೭, ಮಾಗಡಿ.
[459] ಎ.ಕ-೯, ಮಾ.ತಾ.೪೨, ೧೭೧೨, ಮಾಯನಾಯಕನಹಳ್ಳಿ.

ಮುಸ್ಲಿಂ ಸೇನೆಗಳ ಕಾಟವನ್ನು ತಡೆಯಲಾಗದೆ ಕ್ರಿ.ಶ.೧೬೪೯ರಲ್ಲಿ ಮೈಸೂರಿಗೆ ಓಡಿದನು. ನಂತರ ಕೆಳದಿ ನಾಯಕರ ಆಶ್ರಯದಲ್ಲಿ ೨೫ ವರ್ಷಗಳು ಜೀವಿಸಿ, ಕ್ರಿ.ಶ.೧೬೭೫ರಲ್ಲಿ ಮೃತನಾದನು. ಅರವೀಡು ಶಾಖೆಯ ಕೊನೆಯ ಅರಸನಾದ ೭ನೇ ಶ್ರೀರಂಗನು ಕ್ರಿ.ಶ.೧೭೫೯ರಲ್ಲಿ ಮೃತನಾಗುವುದರೊಂದಿಗೆ ವಿಜಯನಗರ ರಾಜವಂಶವು ನಾಮಾವಶವಾಯಿತು[೪೬೦]. ಇದರಿಂದಾಗಿ ಮೈಸೂರು, ಇಕ್ಕೇರಿ, ಗೇರುಸೊಪ್ಪು, ಭಟ್‌ಕಲ್, ಉಮ್ಮತ್ತೂರು, ಅವರಿನಾಡು, ಯಲಹಂಕ, ಚಿತ್ರದುರ್ಗ, ನಿಡಗಲ್ಲು, ಚನ್ನಪಟ್ಟಣ, ಕೊಡಗು, ಕಾರ್ಕಳ ಮನೆತನಗಳು ಸ್ವತಂತ್ರರಾದರು[೪೬೧].

## ೩.೮ ಆವತಿ ನಾಡಪ್ರಭುಗಳು

ಒಂದೊಂದು ಚಿಕ್ಕ ಚಿಕ್ಕ ಪ್ರಾಂತಗಳಲ್ಲಿ ದೊಡ್ಡ ದೊರೆಗಳಂತೆ ಆಳಿಕೊಂಡು ಜನರಿಂದ ಕಂದಾಯ, ಕಾಣಿಕೆ ಮೊದಲಾದ ವರಿಗಳನ್ನು ತೆಗೆದು ಕೊಳ್ಳುತ್ತಾ ದುಷ್ಟರನ್ನು ನಿಗ್ರಹಿಸುತ್ತಾ, ಶಿಷ್ಟರನ್ನು ಕಾಪಾಡುತ್ತಾ ಇದ್ದ ಮುಖಂಡರನ್ನು ಪಾಳೆಯಗಾರರು ಎಂಬ ಹೆಸರಿನಿಂದ ಕರೆಯುತ್ತಿದ್ದರು[೪೬೨]. ವಿಜಯನಗರದ ಸಾಮ್ರಾಜ್ಯದ ಕಾಲಾವಧಿಯಲ್ಲಿ ಅನೇಕ ಸಣ್ಣ ಪುಟ್ಟ ಪಾಳೇಯಗಾರರು ನಾಯಕರಾಗಿ ಪ್ರವರ್ಧಮಾನಕ್ಕೆ ಬಂದರು. ಹಾಗೂ ಸಾಮ್ರಾಜ್ಯ ಸ್ಥಾಪನೆಗೂ ಮೊದಲೇ ಕೆಲವೊಂದು ಪಾಳೆಯಪಟ್ಟುಗಳು ಇದ್ದು, ಅವೆಲ್ಲಾ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರವೇ ಎನ್ನಬಹುದು. ವಿಜಯನಗರದ ಅರಸರು ವಿಶಾಲವಾದ ತಮ್ಮ ಸಾಮ್ರಾಜ್ಯವನ್ನು ಕೇಂದ್ರಾಡಳಿತ ಪ್ರದೇಶವಾಗಿದ್ದ ಹಂಪಿಯಿಂದಲೇ ಎಲ್ಲವನ್ನು ನಿಯಂತ್ರಿಸುವುದು ಕಷ್ಟ ಹಾಗೂ ಪಾಳೆಯಗಾರರ, ಸಾಮಂತರ ಸಹಾಯವಿಲ್ಲದೆ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಲು, ಉತ್ತಮ ಆಡಳಿತ ನಡೆಸಲು, ಕಂದಾಯ ವಸೂಲು ಮಾಡಲು, ಹೊರಗಿನ ಶತೃಗಳ ಆಕ್ರಮಣವನ್ನು ಎದುರಿಸಲು ಸಾಧ್ಯವಿರಲಿಲ್ಲ ಹಾಗಾಗಿ ಪಾಳೆಯಗಾರರ ಬೆಳವಣಿಗೆ ವಿಜಯನಗರ ಅರಸರು ಅವಕಾಶ ನೀಡಿದ್ದರು.

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಬೆಂಗಳೂರು, ಕೋಲಾರ, ತುಮಕೂರು ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ ಆವತಿನಾಡು, ಸುಗಟೂರುನಾಡು, ಯಲಹಂಕನಾಡು, ಮಹಾನಾಡು ಪ್ರಭುಗಳೆಲ್ಲರೂ ಒಂದೇ ಮೂಲದವರು ಅವರು ಕಂಚಿಯ ಸಮೀಪದ ಪುತ್ತೂರಿಗೆ ಸೇರಿದವರೆಂದು ಹಾಗೂ ಈ ವಂಶದ ಮೂಲಪುರುಷ ರಣಭೈರೇಗೌಡ ಮತ್ತು ಸಹೋದರರು ವಲಸೆ ಬಂದಿರುವುದು ಎಂದು ಪಿ.ವಿ.ಕೃಷ್ಣಮೂರ್ತಿರವರು ಅಭಿಪ್ರಾಯ ಪಡುತ್ತಾರೆ[೪೬೩]. ರಣಭೈರೇಗೌಡನು ವಿಜಯನಗರ

೪೬೦ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ -೪೨೯.

೪೬೧ ಡಾ.ಕೆ.ಜಿ.ವಸಂತ ಮಾಧವ :- ವಿಜಯಕಾಲದ ಇತಿಹಾಸ, ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ, ಪು.ಸಂ.೭೧.

೪೬೨ ಎಂ.ಎಸ್. ಪುಟ್ಟಣ್ಣ :- ಪಾಳಯಗಾರರು, ೧೯೨೩, ಪುಟ-೨ ಮತ್ತು ೩.ದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಚಿಕ್ಕಪೇಟೆ, ಬೆಂ.

೪೬೩ ಪಿ.ವಿ. ಕೃಷ್ಣಮೂರ್ತಿ :- ಆವಂತಿನಾಡು ಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ-೩೨೩.

ಸಾಮ್ರಾಜ್ಯದ ಮಾಂಡಳಿಕನಾಗಿ ತಮ್ಮಂದಿರಾದ ಭದ್ರೇಗೌಡನಿಗೆ ಮಿಡಿಗೇಸಿ, ವೀರಣಗೌಡನಿಗೆ ಮಧುಗಿರಿ, ಗಿಡ್ಡೇಗೌಡನಿಗೆ ಮುಳಬಾಗಿಲು, ಮುತ್ತೇಗೌಡನಿಗೆ ಸುಗಟೂರು, ಸಿದ್ಧೇಗೌಡನಿಗೆ ಕೋಲಾರ, ತಮ್ಮೇಗೌಡನಿಗೆ ಕುಣಿಗಲ್ ಹಾಗೂ ಮಕ್ಕಳಾದ ಜಯಪ್ಪಗೌಡನಿಗೆ ಯಲಹಂಕ, ಸಣ್ಣ ಭೈರೇಗೌಡನಿಗೆ ದೇವನಹಳ್ಳಿ, ಭೈರೇಗೌಡನಿಗೆ ಚಿಕ್ಕಬಳ್ಳಾಪುರ, ಮಲ್ಲಭೈರೇಗೌಡನಿಗೆ ದೇವನಹಳ್ಳಿಯನ್ನು ರಾಜ್ಯವಾಗಿ ಹಂಚಿದನು[೪೬೪] ಎಂದು ನಾರಾಯಣಮ್ಮ ಅಭಿಪ್ರಾಯ ಪಡುತ್ತಾರೆ.

ಕಂಚಿಯಿಂದ ಏಳು ಬಂಡಿಗಳಲ್ಲಿ ಬಂದು ನೆಲೆಸಿದ ಏಳು ಜನ ಅಣ್ಣ ತಮ್ಮಂದಿರಲ್ಲಿ ಕಿರಿಯವಾದ ಜಯಗೌಡನು ಸ್ವತಂತ್ರ ರಾಜ್ಯ ಕಟ್ಟುವ ಉದ್ದೇಶದಿಂದ ಪ್ರೇರಿತನಾಗಿ ಯಲಹಂಕಕ್ಕೆ ಒಂದು ಪಾಳೆಯ ಪಟ್ಟೊಂದನ್ನು ಕಟ್ಟಿಕೊಂಡು, ಕ್ರಿ.ಶ.೧೪೧೯ ರಿಂದ ೧೪೩೩ ರವರೆಗೆ ಆಳಿದ ಜಯಗೌಡನೇ ಕೆಂಪೇಗೌಡ ವಂಶಕ್ಕೆ ಮೂಲ ಪುರುಷ, ಆದರೆ ಯಲಹಂಕ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಹೊಸಕೋಟೆ, ಸುಗುಟೂರು, ಹೊಳವನಹಳ್ಳಿಯ ಪಾಳೆಯಗಾರರೆಲ್ಲ ಒಕ್ಕಲಿಗರೇ ಅದು ಅಲ್ಲದೇ ಯಣಮಂಜಿ ಪುತ್ತೂರಿನಿಂದ ವಲಸೆ ಬಂದ ರಣಭೈರೇಗೌಡ ನೆಲೆಸಿದ ಪ್ರದೇಶವು ಕಾಡಾಗಿತ್ತೆಂದು ಚರಿತ್ರೆಕಾರರ ಅಭಿಮತ. ಆದರೆ ಅವತಿ, ಹೊಸಕೋಟೆ ಮುಂತಾದವುಗಳೆಲ್ಲ ಗಂಗರ ಕಾಲದಿಂದಲೂ ಊರಾಗಿದ್ದು, ಯಲಹಂಕವು ಗಂಗರ ಕಾಲದಲ್ಲಿ ಊರಾಗಿಬಹುದು ಆದರೆ ಯಾವುದೇ ಶಾಸನಾಧರಗಳಿಲ್ಲ.

ಅದು ಅಲ್ಲದೆ ಯಲಹಂಕದಲ್ಲಿ ವೀರಣ್ಣ ಸ್ವಾಮಿ ದೇಗುಲದಲ್ಲಿ ಎರಡು ಅಡಿ ಎತ್ತರದ ಉದ್ದನೆಯ ಕಟ್ಟೆಯ ಮೇಲೆ ಸಾಲಾಗಿ ೭ ಶಿಲ್ಪಗಳನ್ನು ಪೂಜಿಸುತ್ತಿದ್ದಾರೆ. ಸ್ಥಳೀಯ ಐತಿಹ್ಯದ ಪ್ರಕಾರ ನಾಡಪ್ರಭುಗಳ ೭ ಸಹೋದರರ ಈ ೭ ಶಿಲ್ಪ ಮೂರ್ತಿಗಳೆನ್ನುತ್ತಾರೆ.

ಆದರೆ ಇವರೆಲ್ಲ ಒಂದೇ ಕುಲ ಅಥವಾ ಮೂಲದವರಲ್ಲ ಬಹುಶಃ ಒಂದೇ ಪ್ರದೇಶದವರಾಗಿರ ಬೇಕು. ಯಲಹಂಕನಾಡ ಪ್ರಭು ವಂಶಸ್ಥನಾದ ಇಮ್ಮಡಿ ಕೆಂಪೇಗೌಡನು ಸುಗಟೂರು ಪ್ರಭುಗಳಾದ ಮುಮ್ಮಡಿ ತಮ್ಮೇಗೌಡನಿಗೆ ತನ್ನ ಮಗಳಾದ ಹಲಸಮ್ಮನ ಕೊಟ್ಟು ವಿವಾಹ ಮಾಡಿ ವೈವಾಹಿಕ ಸಂಬಂಧ ಹೊಂದ್ದಿರುವುದನ್ನು ಗಮನಿಸಿದರೆ ಸೋದರಿಗೆ ಸಂಬಂಧ ಬರುವುದಕ್ಕೆ ಸಾಧ್ಯವಿಲ್ಲ.

ಆವತಿನಾಡ ಪ್ರಭುಗಳ ಉಗಮದ ಬಗ್ಗೆ ಅವರ ಶಾಸನಗಳಿಂದ ಯಾವುದೇ ಮಾಹಿತಿ ಸಿಗುವುದಿಲ್ಲ. ಚರಿತ್ರೆಕಾರರಲ್ಲೂ ಕೂಡ ಆವತಿಯ ಮನೆತನದ ಮೂಲದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಕೆಲವರು ತಮಿಳುನಾಡಿನವರೆಂದರೆ, ಇನ್ನು ಕೆಲವರು ಇವರ ಮನೆಮಾತು

[೪೬೪] ಪ್ರೋ.ಬಿ. ನಾರಾಯಣಮ್ಮ :- ಬೆಂಗಳೂರಿನ ನಿಮಾತೃ ಕೆಂಪೇಗೌಡ, ಪು.ಸಂ-೨೨.

ತೆಲುಗಾಗಿದ್ದ ಕಾರಣ ಇವರು ಆಂದ್ರದವರಾಗಿರ ಬೇಕೆಂದು ಅಭಿಪ್ರಾಯ ಪಡುತ್ತಾರೆ. ಇನ್ನು ಕೆಲವರು ಇವರು ಮೂಲತಃ ಕೋಲಾರ ಜಿಲ್ಲೆಯ ಮುಳಬಾಗಿಲು-ಬಂಗಾರಪೇಟೆ ಪ್ರದೇಶದವರಾಗಿರುವ ಸಾಧ್ಯತೆಗಳವೆಯೆಂದು ಹೇಳುತ್ತಾರೆ. ಕಾಂಚೀಪುರನಾಡಿಗೆ ಮೊರಸುನಾಡು ಎಂಬ ಹೆಸರಿದ್ದು ಅಲ್ಲಿಂದ ಬಂದಂತಹ ಒಕ್ಕಲಿಗರಾದ್ದರಿಂದ ಮೊರಸು ಒಕ್ಕಲಿಗರೆಂದು ಖ್ಯಾತರಾದ ಆವತಿ ನಾಡಪ್ರಭುಗಳ ಉಗಮದ ಬಗ್ಗೆ ಪ್ರಸ್ತಾಪಿಸುವ ಯಾವುದೇ ಶಾಸನಾಧಾರಗಳು ದೊರೆತಿಲ್ಲ. ಈ ಐತಿಹ್ಯಗಳಿಗೆ ಪೂರಕವಾದ ದಾಖಲೆಗಳು ಇನ್ನು ದೊರೆತಿಲ್ಲ.

ಆವತಿನಾಡಪ್ರಭುಗಳ ಆಳ್ವಿಕೆಯ ಮೊದಲೇ ಕ್ರಿ.ಶ.೧೧೩೩ರಲ್ಲಿ ಹೊಯ್ಸಳ ವೀರಗಂಗನ ಕಾಲದಲ್ಲಿಯೇ ಆವತಿಯೂರು ಅಸ್ತಿತ್ವದಲ್ಲಿತ್ತು ಎಂಬುದನ್ನು ಆವತಿಗ್ರಾಮದಲ್ಲಿ ದೊರೆತ ತಮಿಳು ಶಾಸನದಲ್ಲಿ ಕಾಣಬಹುದು. ವಿಜಯನಗರ ಅರಸರಾದ ಸದಾಶಿವರಾಯ, ಒಂದನೇಯ ರಂಗರಾಯ, ತಿರುವೆಂಕಟಪತಿರಾಯರ ಮಾಂಡಲಿಕನಾಗಿ ಆವತಿ, ದೇವನಹಳ್ಳಿ, ನಂದಿಗಿರಿಯ ಸುತ್ತಲಿನ ಪ್ರದೇಶಗಳನ್ನು ಒಳಗೊಂಡ ಪ್ರಾಂತ್ಯದಲ್ಲಿ ಮಾಂಡಳಿಕಾಧಿಕಾರಿಗಳಾಗಿ, ಆವತಿಯನ್ನು ರಾಜಧಾನಿಯಾಗಿ ಮಾಡಿಕೊಂಡು, ದೇವಣಾಪುರ ಅಥವಾ ದೇವನಹಳ್ಳಿ ರಾಜ್ಯದಲ್ಲಿ ರಾಜ್ಯಭಾರ ಮಾಡುತ್ತಾ ಹಲವಾರು ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿರುವ ಕುರುವುಗಳನ್ನು ಶಾಸನದಲ್ಲಿ ಕಾಣಬಹುದು. ಕುಲದೈವ ಭೈರವ ಹಾಗೂ ಮನೆದೇವರು ಕರಗದಮ್ಮ ಆರಾಧಕರಾಗಿರುತ್ತಾರೆ.

ಐತಿಹ್ಯಗಳಲ್ಲಿ ರಣಭೈರೇಗೌಡನನ್ನು ಆವತಿ ವಂಶದ ಸಂಸ್ಥಾಪಕ ಎಂದಿದ್ದಾರೆ. ಆದರೆ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿ ಹೋಬಳಿಯ ಕುಡುವತಿ ಗ್ರಾಮದ ಕ್ರಿ.ಶ.೧೪೩೮ ರ ತಾಮ್ರ ಶಾಸನದಲ್ಲಿ ಶ್ರೀ ಮಹಾ ಮರಿಭೈರೇಗೌಡ ಮತ್ತು ಮಾರೇಗೌಡರು ಆವತಿ ವಂಶದ ಆರಂಭಿಕ ಪ್ರಭುಗಳು ಎಂದು ಉಲ್ಲೇಖಿಸಲಾಗಿದೆ. ಜೊತೆಗೆ ಹೊಯ್ಸಳ ಸಾಮ್ರಾಜ್ಯದ ಬಹುತೇಕ ಮಾಂಡಲಿಕರು, ಸಾಮಂತರು ವಿಜಯನಗರ ಸಾಮ್ರಾಜ್ಯದಲ್ಲಿ ವಿಲೀನಗೊಂಡ ನಂತರ ಕೆಲವು ಮನೆತನಗಳಿಗೆ ಸಂಧಾನಗಳ ಮೂಲಕ ಆವತಿನಾಡ ಪ್ರಭುಗಳಿಗೆ ಪ್ರಾಪ್ತವಾದಂತೆ ಈ ಶಾಸನದಲ್ಲಿ ನಂದಿಮಂಡಲ ಪಂಚಕೋಶ ಪರಿಮಿತಾನನಿಗೆ ನನಗೆ ಕರುಣಿಸಿದ ಸಕಲ ಶ್ರೇಯಸ್ಸು ನಾವು ಈ ರಾಜ್ಯ ಪರಿಪಾಲನೆ ಮಾಡಿಕೊಂಡು, ತಂಮ್ಮಿಗೆ ಸಕಲ ಪೂಜಾ ಮಹೋತ್ಸವ, ವ್ರತ, ದಾನಾದಿಗಳು ಮಾಡಿಕೊಂಡು ಇರುತ್ತೇನೆ ಎಂದು ಮಾರೇಗೌಡನ ಪುತ್ರನಾದ ದೊಡ್ಡಭೈರೇಗೌಡನು ಹೇಳುತ್ತಿರುವುದನ್ನು ಗಮನಿಸಿದರೆ ವಿಜಯನಗರ ಅರಸರು ಕ್ರಿ.ಶ.೧೪೨೮ ರಲ್ಲಿ ದೊಡ್ಡಭೈರೇಗೌಡನಿಗೆ ರಾಜ್ಯವನ್ನು ಕರುಣಿಸಿರುವ ಸುಳಿವು ಸಿಗುತ್ತದೆ. ಜೊತೆಗೆ ಆವತಿಯ ನಾಡ ಪ್ರಭುಗಳ ಮೂಲ ಪುರುಷ ಮಾರೇಗೌಡನು ಎಂದು ದೃಢೀಕರಿಸುತ್ತದೆ. ಹಾಗೇಯೇ

ಶಿವದೇವಾಲಯಕ್ಕೆ ಕುಡುವತಿ ಗ್ರಾಮವನ್ನು ಮಾರೇಗೌಡನ ಪೌತ್ರ, ದೊಡ್ಡಭೈರೇಗೌಡನ ಪುತ್ರ ಕಾರೇಪುರದ ಭೈರವ ಭೂಪಾಲರು ನಂದಿಸ್ಥಳದ ಶಿವದೇವಾಲಯದಲ್ಲಿನ ನಂದೀಶ್ವರ ಗುರೆಕ್ಕಳ್ (ಗುರೆಕ್ಕಲ್ ಎಂದರೆ ಗುರುಗಳು ಎಂದರ್ಥ) ಎಂಬುವರಿಗೆ ಆಚಾರ್ಯ ಪೂಜೆಯನ್ನು ಸಲ್ಲಿಸಿ, ನಂದೀಶ್ವರಾರ್ಪಿತವಾಗಿ ಕುಡುವತಿ ಎಂಬ ಗ್ರಾಮವನ್ನು ದಾನ ನೀಡಿರುವ[೪೬೫] ಈ ಶಾಸನದಲ್ಲಿ ಆವತಿ ನಾಡಪ್ರಭುಗಳ ಪೂರ್ವಜರ ಬಗ್ಗೆ ಉಲ್ಲೇಖಿಸಿರುವುದು ವಿಶೇಷವಾಗಿದೆ. ಹಾಗೆಯೇ ಈ ಭೈರವ ಭೂಪಾಲಕನನ್ನು ಕಾರೇಪುರದ ಭೈರವ ಭೂಪಾಲಕ ಎಂದು ಕರೆದಿರುವುದನ್ನು ಗಮನಿಸಿದರೆ ನಂದಿಬೆಟ್ಟದ ದಕ್ಷಿಣದಲ್ಲಿರುವ ಕಾರೇಪುರ ಗ್ರಾಮದಲ್ಲಿ ನೆಲೆ ನಿಂತಿರಬೇಕು. ಇವನ ನಂತರ ಕ್ರಿ.ಶ.೧೫೬೫ ವರೆಗೂ ಈ ವಂಶಿಯರ ಬಗ್ಗೆ ಯಾವ ಪ್ರಸ್ತಾಪವು ಸಹ ಶಾಸನಗಳಲ್ಲಿ ಕಂಡು ಬರುವುದಿಲ್ಲ. ತಾಳೀಕೋಟೆ ಯುದ್ಧದ ನಂತರ ವಿಜಯನಗರ ಅರಸರ ಪ್ರಭಾವ ಕಡಿಮೆಯಾದಂತೆ ಸ್ಥಳೀಯ ಪ್ರಭುಗಳು ಹೆಚ್ಚು ಹೆಚ್ಚು ಸ್ವಾಯತತ್ತೆಯನ್ನು ಪಡೆದುಕೊಳ್ಳಲಾರಂಭಿಸಿದರು.

ಕ್ರಿ.ಶ.೧೫೬೫ರ ನಂತರ ಆವತಿನಾಡ ಪ್ರಭುಗಳು ಕ್ರಿಯಾಶೀಲರಾಗಿ ಹುಲುಕಡಿನಾಡನ್ನು ತಮ್ಮ ಅಧೀನಕ್ಕೆ ತೆಗೆದು ಕೊಂಡಿರಬೇಕು. ಇದಕ್ಕೆ ಪೂರಕವಾಗಿ ಹುಲುಕಡಿನಾಡಿನ ವ್ಯಾಪ್ತಿಯಲ್ಲಿದ್ದ ತಿಪ್ಪೂರು, ಅಂತ್ರಹಳ್ಳಿ, ನಾಗೇಶನಹಳ್ಳಿ ಗ್ರಾಮಗಳಲ್ಲಿ ಕ್ರಿ.ಶ.೧೫೮೬ರಿಂದ ೧೬೧೦ರ ಕಾಲಕ್ಕೆ ಸೇರಿದ ಆವತಿನಾಡಪ್ರಭುಗಳ ಶಾಸನಗಳು ದೊರೆತಿದೆ. ಹುಲುಕಡಿ ಪ್ರದೇಶವು ಗಂಡ್ರಗೊಳ್ಳಿ ದಳವಾಯಿಗಳ ಕೈತಪ್ಪಿ ಅವರ ಸಮಕಾಲೀನರೆ ಆಗಿದ್ದ ಅವರಂತೆಯೇ ವಿಜಯನಗರ ಅರಸರಿಗೆ ಸಾಮಂತರಾಗಿದ್ದ ಆವತಿನಾಡ ಪ್ರಭುಗಳ ಆಳ್ವಿಕೆಗೆ ಒಳಪಡುತ್ತದೆ.

## ಮಲ್ಲಭೈರೇಗೌಡ

ರಣಭೈರೇಗೌಡನ ಪುತ್ರನಾದ ಮಲ್ಲಭೈರೇಗೌಡನು ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರಗಳಲ್ಲಿ ಪಾಳೆಯಪಟ್ಟವನ್ನು ಸ್ಥಾಪಿಸಿದನು. ದೇವನಹಳ್ಳಿಯು ಮೂಲತ: ಒಂದು ಚಿಕ್ಕಹಳ್ಳಿಯಾಗಿದ್ದು ದೇವ ಎಂಬುವನು ಮುಖ್ಯಸ್ಥನಾಗಿದ್ದರಿಂದ ದೇವನದೊಡ್ಡಿ ಎಂಬ ಹೆಸರು ಬಂದಿದೆ. ದೇವನ ಅನುಮತಿ ಮೇರೆಗೆ ದೇವನ ಹೆಸರನ್ನು ಇಡುವುದಾಗಿ ವಚನ ನೀಡಿ ಮಲ್ಲಭೈರೇಗೌಡನು[೪೬೬] ಕ್ರಿ.ಶ.೧೫೦೧ರಲ್ಲಿ ದೇವನಹಳ್ಳಿಯಲ್ಲಿ ಕೋಟೆಯನ್ನು ನಿರ್ಮಿಸಿ ಅದರ ಅಧಿಪತ್ಯವನ್ನು ತನ್ನ

[೪೬೫] ಎ. ಕ-೧೦, ಚಿ. ತಾ.೪೦, ಕ್ರಿ.ಶ.೧೪೩೮, ಕುಡುಪತಿ.

[೪೬೬] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೦, ೪೬೬.

ಸಹೋದರನಾದ ಸಣ್ಣ ಭೈರೇಗೌಡನಿಗೆ ವಹಿಸಿಕೊಟ್ಟನು. ನಂತರ ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರದಲ್ಲಿ ಸಹ ಕೋಟೆಯನ್ನು ಕಟ್ಟಿಸಿದನು[೪೬೭].

ಮಲ್ಲಭೈರೇಗೌಡನು ದೊಡ್ಡಬಳ್ಳಾಪುರ ಸ್ಥಾಪನೆಯ ನಂತರ ಹೊಸಪಟ್ಟಣದಲ್ಲಿ ಕುಂಬಾರಪೇಟೆ, ಗಾಣಿಗರಪೇಟೆ, ಎಲೇಪೇಟೆ, ವಡ್ಡರಪೇಟೆ, ಕಲ್ಲುಪೇಟೆ, ನೇಕಾರರ ಬೀದಿ, ಶೆಟ್ಟರಬೀದಿ, ಸುಣ್ಣಕಲ್ಲುಬೀದಿ, ಶ್ರೇಣಿಗರಪೇಟೆ, ತಿಗಳರಪೇಟೆ, ಆಚಾರಿಬೀದಿ, ಬ್ರಾಹ್ಮಣರಬೀದಿ ಹೀಗೆ ಇನ್ನು ಅನೇಕ ಬೀದಿಗಳನ್ನು (ಪೇಟೆ) ವೃತ್ತಿಗನುಸಾರವಾಗಿ ನಿರ್ಮಾಣ ಮಾಡಿರುವ ಪೇಟೆಗಳನ್ನು ಈಗಲೂ ಸಹ ದೊಡ್ಡಬಳ್ಳಾಪುರದಲ್ಲಿ ಕಾಣಬಹುದು. ಹಾಗೇಯೇ ಪೇಟೆಗಳ ನಿರ್ಮಾಣದ ನಂತರ ಊರಿನ ರಕ್ಷಣೆಗಾಗಿ ಕೋಟೆಯನ್ನು ಕಟ್ಟಿಸಿದನು. ಕೋಟೆಯ ಒಳಗೆ ಸುಂದರವಾದ ವಿಜಯನಗರ ಶೈಲಿಯಲ್ಲಿ ಬೃಹತ್ತಾದ ಆದಿನಾರಾಯಣ ಸ್ವಾಮಿ ದೇವಾಲಯವನ್ನು ಅದಕ್ಕೆ ಅಂಟಿದಂತೆ ಒಂದು ಪುಷ್ಕರಣಿ, ಅರಮನೆ ಆವರಣ, ರಾಣಿವಾಸದ ಗೃಹಗಳು, ವಿಶ್ರಾಂತಿ ಕೊಠಡಿಗಳು, ಉದ್ಯಾನ, ಪೇಟೆ ಬೀದಿಗಳ ರಸ್ತೆಗಳು ಮುಂತಾದವುಗಳನ್ನು ಹಾಗೂ ಘಾಟಿಸುಬ್ರಮಣ್ಯ ಸ್ವಾಮಿದೇವಾಲಯದ ಗರ್ಭಗುಡಿಯನ್ನು ಮಲ್ಲಭೈರೇಗೌಡ ಕಟ್ಟಿಸಿದನು[೪೬೮].

ಕ್ರಿ.ಶ.೧೫೬೫ರಲ್ಲಿ ಸೊಣ್ಣಪ್ಪಗೌಡ ಅಯ್ಯನು ವಿಜಯನಗರದ ಸದಾಶಿವರಾಯನ ಸಾಮಾಂತಾಧಿಕಾರಿಯಾಗಿ ಅರಸರ ಆಜ್ಞೆಯ ಮೇರೆಗೆ ಮುದಿಗೆರೆ ಗ್ರಾಮದ ಚೆನ್ನಕೇಶವ ದೇವರಿಗೆ ಅಮೃತಪಡಿ, ದೀಪಾರಾಧನೆ, ರಥೋತ್ಸವ ಮುಂತಾದ ಸೇವೆಗಳಿಗೆ ಮುದಿಗೆರೆ ಗ್ರಾಮವನ್ನು ಸ್ಥಾನ ಮಾನ್ಯವಾಗಿ ದತ್ತಿ ಬಿಟ್ಟಿದ್ದನು[೪೬೯]. ಆದರೆ ಈ ಶಾಸನದಲ್ಲಿ ಆವತಿ ನಾಡಪ್ರಭುಗಳ ವಂಶದ ಬಗ್ಗೆ ಯಾವುದೇ ಮಾಹಿತಿಗಳಿಲ್ಲ. ನಂತರ ಮೊಲೆಯ ಭೈರೆಗೌಡನು ಅಧಿಕಾರಕ್ಕೆ ಬಂದನು. ನಂದಿಗ್ರಾಮದಲ್ಲಿನ ಕ್ರಿ.ಶ.೧೫೭೫ರ ಶಾಸನದಲ್ಲಿ ಮೊಲೆಯ ಭೈರಯ್ಯಗೌಡ ಮತ್ತು ಹಿರಿಯ ಭೈಯಕ್ಕ ದಂಪತಿಗಳಿಗೆ ಭೈರಯ್ಯ ಗೌಡ, ಮಾರಯ್ಯ ಗೌಡರೆಂಬ ಪುತ್ರರಿದ್ದು ಮಾರಯ್ಯ ಗೌಡನು ವಿಜಯನಗರ ಅರಸ ಶ್ರೀರಂಗ ದೇವರಾಯನ ಸಾಮಂತರಾಗಿ ತಮ್ಮ ಹಿರಿಯ ಪಿತೃಗಳಿಗೂ ಪುಣ್ಯವಾಗಲೆಂದು ಶ್ರೀಕಂಟೇಶ್ವರ ದೇವರಿಗೆ ಧರ್ಮವಾಗಿ ದಾನ ನೀಡಿದನು[೪೭೦].

## ಹಾವಳಿ ಬಯಪ್ಪ ಗೌಡ (ಹಾವಳಿ ಬಯಿರೆ ಗೌಡ)

---

೪೬೭ Suryanath.U.Kamath :- Karnataka State Gazetter, Bangalore Rural District, 1989, Page-75.

೪೬೮ ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೫೨.

೪೬೯ ಎ.ಕ-೧೦, ಗೌ.ತಾ.೫೨, ಕ್ರಿ.ಶ.೧೫೬೫, ಚನ್ನಕೇಶವ ದೇವಾಲಯದ ದ್ವಾರದಲ್ಲಿ, ಮುದಿಗೆರೆ.

೪೭೦ ಎ.ಕ-೧೦, ಚಿ.ತಾ.೨೭, ಕ್ರಿ.ಶ.೧೫೭೫, ನಂದಿಗ್ರಾಮ.

ಮಾರಯ್ಯಗೌಡನ ಪುತ್ರನಾದ ಹಾವಳಬಯಪ್ಪ ಹೆಚ್ಚು ಪ್ರಸಿದ್ಧನಾದ ನಾಡಪ್ರಭುವಾಗಿದ್ದು, ಆವತಿ ನಾಡಪ್ರಭುಗಳ ಮೂರು ತಲೆಮಾರುಗಳ ವಿವರಣೆಯನ್ನು ನೀಡುವ ಕ್ರಿ.ಶ.೧೫೮೪ ರ ದೇವನಹಳ್ಳಿಯ ತಾಮ್ರಶಾಸನದಲ್ಲಿ ಒಂದನೇ ಶ್ರೀರಂಗ ರಾಯನ ಸಾಮಂತನಾದ ಸೊಣ್ಣಪ್ಪ ಮೊಮ್ಮಗನು ಭೈರವನ ಮಗನಾದ ಬೇಚಯನ ಭೈರವನು ಇಮ್ಮಡಿ ಭೈರಾಪುರ ಎಂಬ ಅಗ್ರಹಾರವನ್ನು ದಾನ ನೀಡಿದನು[೪೭೧]. ಶಾಸನದ ಭೈರವನು ಬಹುಶಃ ಹಾವಳ ಬಯಪ್ಪನಾಗಿರಬೇಕು ಹಾಗೂ ಬೈಚಯನು ಹಿರಿಯ ಹಾವಳ ಭೈರಪ್ಪನಾಗಿರಬೇಕು[೪೭೨].

ಕ್ರಿ.ಶ.೧೫೮೬ ರಲ್ಲಿ ಹಣಬೆಯ ತಿಪ್ಪೂರು ಸೀಮೆಯೊಳಗಿನ ನಾಲ್ಕು ದಿಕ್ಕುಗಳ ಊರುಗಳ ಮೇಲಿನ ಮೂಲೆಗಾಸು ಎಂಬ ಸುಂಕವನ್ನು ತಿಪ್ಪೂರಿನಲ್ಲಿ ನಮಃ ಶಿವಾಯ ಕೆಂಸಿಸೆಟ್ಟಿ ಕಟ್ಟಿಸಿದ ಕಲ್ಲುಮಠಕ್ಕೆ ಆವತಿ ನಾಡಪ್ರಭುಗಳಾದ ಹಾವಳ ಬಯಪ್ಪಗೌಡರು ದಾನ ನೀಡಿವುದರ ಜೊತೆಗೆ ಆ ಮೂಲೆಗಾಸಿನ ಮೇಲೆ ಪಾರುಪತ್ಯಗಾರ, ಸರಕಾರದ ಗೌಡ, ಸೇನಬೋವ ಅಥವಾ ಸುಂಕದ ಮಣಿಗಾರರು ಅತಿಕ್ರಮೇಣ ಮಾಡಬಾರದೆಂದು ಆದೇಶಿಸಲಾಯಿತು[೪೭೩].

## ಇಮ್ಮಡಿ ಹಾವಳಿಯ ಬಯಿರಪ್ಪಗೌಡ

ಹಾವಳ ಬಯಿರಪ್ಪಗೌಡನ ನಂತರ ಮಗನಾದ ಇಮ್ಮಡಿ ಹಾವಳಯ ಬಯಿರಪ್ಪನು[೪೭೪] ವಿಜಯನಗರ ಅರವೀಡು ವಂಶದ ದೊರೆ ಇಮ್ಮಡಿ ವೆಂಕಟಪತಿರಾಯನ ಸಮಕಾಲೀನನಾಗಿದ್ದು, ಅವನ ಅಧೀನದಲ್ಲಿನ ೭೭ ಪಾಳೆಯಗಾರರಲ್ಲಿ ಒಬ್ಬನಾಗಿದ್ದನೆಂದು, ಸಮಕಾಲೀನರಾದ ಮಲ್ಲಿಕಾರ್ಜುನ ಕವಿ ವಿರಚಿತ ಇಮ್ಮಡಿ ಚಿಕ್ಕ ಭೂಪಾಲ ಸಾಂಗತ್ಯ ಕೃತಿಯಿಂದ ಖಚಿತವಾಗುತ್ತದೆ[೪೭೫].

ಕ್ರಿ.ಶ.೧೫೯೬ ರಲ್ಲಿ ತನ್ನ ಸೊದ್ರಳಯ ಪಂಣೆ ಸೊಂಣಯನಿಗೆ ಗೌಡ ಕೊಡುಗೆಯಾಗಿ ಅಂತರವಳ್ಳಿ ಗ್ರಾಮದಲ್ಲಿ ಭೂದಾನವನ್ನು ನೀಡಲಾಯಿತು[೪೭೬]. ಹಾಗೇಯೇ ಈ ಸೊಂಣಯನ ಗೌಡಾಳ್ವಿಕೆಗೆ ಹಲವು ಗ್ರಾಮಗಳು ಒಳಪಟ್ಟಿರುವುದನ್ನು ಸಹ ಶಾಸನದಲ್ಲಿ ಕಾಣಬಹುದು. ಕ್ರಿ.ಶ.೧೫೯೮ ರಲ್ಲಿ ಬಲ್ಲಾಳಪುರದ ಕಾಣ್ಯರುಣ್ಯಂಗಳು ಪರಿವಾರ ಮಾಡಿದಂತ ಧರ್ಮಕ್ಕೆ ಹಿರಿಯ ಹಾವಳ ಬಯಿರೈ ಗೌಡಯ್ಯನವರಿಗೆ (ತಂದೆಗೆ) ಪುಣ್ಯವಾಗಲೆಂದು ಶಾಮಗೊಂಡನಹಳ್ಳಿಯ ನಾಗಭಟ್ಟ, ಅಂಣಂಭಟ್ಟ,

[೪೭೧] ಎ.ಕ-೯, ಅನುಬಂಧ, ದೇ.ತಾ.೮೨, ಕ್ರಿ.ಶ. ೧೫೮೪, ತಾಮ್ರಶಾಸನ, ದೇವನಹಳ್ಳಿ.

[೪೭೨] Suryanath.U.Kamath :- Karnataka State Gazetter, Bangalore Rural District, 1989, Page.no-75.

[೪೭೩] ಎ.ಕ-೯, ದೊ.ತಾ.೫, ಕ್ರಿ.ಶ,೧೫೮೬, ತಿಪ್ಪೂರು.

[೪೭೪] ಎ.ಕ-೯, ದೊ.ತಾ.೬, ಕ್ರಿ.ಶ ೧೫೮೬, ತಿಪ್ಪೂರು.

[೪೭೫] ಡಾ.ಎಸ್.ವೆಂಕಟೇಶ :- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೫೩.

[೪೭೬] ಎ.ಕ-೯, ದೊ.ತಾ.೭, ಕ್ರಿ.ಶ೧೫೯೬, ಅಂತ್ರಹಳ್ಳಿ.

ಭೈರ್ಲಭಾನು ಭಟರಿಗೆ ಮೂರು ಕೊಳಗ ಲೇಖದಲ್ಲೂ ಸಕಲ ಪರಿವಾರವನ್ನು[೪೭೭], ಕ್ರಿ.ಶ.೧೬೧೦ ರಲ್ಲಿ ಹಾವಳ ಬಯಿರಗೌಡರು ಅಯ್ಯನವರ ಪುತ್ರರಾದ ಇಮ್ಮಡಿ ಹಾವಳ ಬಯಿರೆಗೌಡಡರು ಪುಟ್ಟಣ್ಣ ಪಂಡಿತ ಮತ್ತು ತಿಮ್ಮಣ್ಣ ಪಂಡಿತರಿಗೆ ಹಣಬೆ ಗ್ರಾಮಕ್ಕೆ ಇಮ್ಮಡಿ ಭೈರಾಪುರವೆಂದು ಪ್ರತಿನಾಮವಿಟ್ಟು ಸರ್ವಮಾನ್ಯ ಅಗ್ರಹಾರವನ್ನಾಗಿ[೪೭೮], ಇದೇ ಕಾಲದ (ಕ್ರಿ.ಶ.೧೬೧೦) ಮತ್ತೊಂದು ಶಾಸನದಲ್ಲಿ ಇಮ್ಮಡಿ ಹಾವಳ ಬಯಿರೆ ಗೌಡರು ಆಯಾ ದೇವರಿಗೆ[೪೭೯], ಕ್ರಿ.ಶ.೧೬೧೮ ರಲ್ಲಿ ಬಯನಹಳ್ಳಿಯ ಹೊಲವನ್ನು ಸೊಣ್ಣಪ್ಪ ಗೌಡರು ಪೆದ್ದಪನಿಗೆ ಕೊಟ್ಟ ಮಾನ್ಯ[೪೮೦].

## ಇಮ್ಮಡಿ ಬೈಚೆಗೌಡ

ವಿಜಯನಗರ ಅರಸ ಶ್ರೀವೆಂಕಟಪತಿರಾಯನ ಸಾಮಂತಾಧಿಕಾರಿಯಾಗಿ ಆಳ್ವಿಕೆ ನಡೆಸಿದ ಇಮ್ಮಡಿ ಹಾವಳ ಬಯಿರೆ ಗೌಡರ ನಂತರ ಇಮ್ಮಡಿ ಬೈಚೆಗೌಡರು ಕ್ರಿ.ಶ.೧೬೪೦ರಲ್ಲಿ ಸಜ್ಜನ ಗುರು ಸಿವಾಚಾರ ಸಂಪನ್ನರಾದ ಶ್ರೀಲಿಂಗ ಚಕ್ರಿ ಎಂಬುವರಿಗೆ ಬೂದಿಹಾಳು ಗ್ರಾಮವನ್ನು ದತ್ತಿಯಾಗಿ ನೀಡಿದರು[೪೮೧].

## ಇಮ್ಮಡಿ ಸೊಣ್ಣಭೈರೇಗೌಡ

ಕ್ರಿ.ಶ.೧೬೪೦ರ ನಂತರ ಕ್ರಿ.ಶ.೧೬೯೭ರ ವರೆಗೆ ಆವತಿ ನಾಡಪ್ರಭುಗಳ ಶಾಸನಗಳು ಕಂಡು ಬರುವುದಿಲ್ಲ. ಬೆಂಗಳೂರು ಜಿಲ್ಲೆ ಮತ್ತು ಸುತ್ತ ಮುತ್ತಲಿನ ಪ್ರದೇಶಗಳನ್ನು ಒಳಗೊಂಡ ಪ್ರಾಂತ್ಯವು ಮರಾಠನಾಯಕ ಷಹಜಿಗೆ ಜಹಗೀರಾಗಿ ಲಭಿಸಿತ್ತು. ಷಹಜಿಯ ನಂತರ ಏಕೋಜಿಯ ಅಧೀನಕ್ಕೆ ಒಳಪಟ್ಟು ಬೂದಿ ಮುಚ್ಚಿದ ಕೆಂಡದಂತೆ ಇರ ಬೇಕಾಯಿತು. ಈ ಸಂದರ್ಭದಲ್ಲಿ ಇಮ್ಮಡಿ ಭೈರೇಗೌಡ ಅಥವಾ ಮುದ್ದುಭೈರೇಗೌಡ ಎಂಬುವವನು ಆವತಿ ನಾಡಪ್ರಭುಗಳಾಗಿರ ಬೇಕು. ಕ್ರಿ.ಶ.೧೬೭೫ ರ ವೇಳೆಗೆ ಏಕೋಜಿಯು ತನ್ನ ರಾಜಧಾನಿಯನ್ನು ಬೆಂಗಳೂರು ಪ್ರದೇಶದಿಂದ ತಂಜಾವೂರಿಗೆ ಬದಲಿಸಿದನು[೪೮೨].

ಇದರಿಂದಾಗಿ ಇಮ್ಮಡಿ ಸೊಣ್ಣ ಭೈರೇಗೌಡ ಸ್ವತಂತ್ರನಾದನಾದರೂ ಇವನ ಆಳ್ವಿಕೆಗೆ ಸಂಬಂಧಿಸಿದ ಯಾವುದೇ ಶಾಸನಗಳು ಲಭ್ಯವಾಗಿಲ್ಲ. ಆದರೆ ಇವನ ಆಶ್ರಯದಲ್ಲಿದ್ದ ಚಿಕ್ಕರಸನೆಂಬ ಕವಿಯಿಂದ ರಚಿಸಲ್ಪಟ್ಟಿರುವ ಸಣ್ಣ ಭೈರೇಗೌಡನ ಚರಿತ್ರೆ ಎಂಬ ಕೃತಿಯಲ್ಲಿ ಈತನ ಶೌರ್ಯ,

---

೪೭೭ ಎ.ಕ.-೯, ಅನುಬಂಧ, ದೊ.ತಾ. ೬೯, ಕ್ರಿ.ಶ.೧೫೯೮, ದೊಡ್ಡಬಳ್ಳಾಪುರ.

೪೭೮ ಎ.ಕ-೯, ದೊ.ತಾ.೪೯, ಕ್ರಿ.ಶ. ೧೬೧೦, ನಾಗೇನಹಳ್ಳಿ.

೪೭೯ ಎ.ಕ.-೯, ಅನುಬಂಧ, ದೊ.ತಾ.೭೦, ಕ್ರಿ.ಶ ೧೬೧೦, ದೊಡ್ಡಬಳ್ಳಾಪುರ.

೪೮೦ ಎ.ಕ.-೯, ದೇ.ತಾ.೫೨, ಕ್ರಿ.ಶ. ೧೬೧೮, ಬಯನಹಳ್ಳಿ.

೪೮೧ ಎ.ಕ-೧೦, ಶಿ.ತಾ.೩೧, ಕ್ರಿ.ಶ ೧೬೪೦, ಬೂದಿಹಾಳು.

೪೮೨ ಡಾ.ಎಸ್.ವೆಂಕಟೇಶ:-ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೧೬೦.

ಸಾಹಸಗಳನ್ನು ಕುರಿತು ವರ್ಣಿಸುವುದರ ಜೊತೆಗೆ ಶಿವಾಜಿಯ ಮಗನಾದ ಸಂಭೋಜಿಯನ್ನು ಯುದ್ಧದಲ್ಲಿ ಸೋಲಿಸಿದ ಮಾಹಿತಿಯನ್ನು ಒದಗಿಸುತ್ತದೆ[೪೮೩]. ಇತನಿಗೆ ಕೇಂಪಮ್ಮ ಎಂಬ ಹೆಂಡತಿ ಹಾಗೂ ಗೋಪಾಲಗೌಡ ಎಂಬ ಮಗನಿದ್ದನು[೪೮೪].

## ಗೋಪಾಲಗೌಡ

ಆವತಿನಾಡಪ್ರಭುಗಳಲ್ಲಿ ಅತ್ಯಂತ ಪ್ರಸಿದ್ಧರಾದ ಗಣ್ಯರಲ್ಲಿ ಒಬ್ಬರಾದ ಗೋಪಾಲಗೌಡರ ಶಾಸನಗಳು ದೇವನಹಳ್ಳಿ ತಾಲ್ಲೂಕಿನ ಬೇಗೂರು, ದೇವನಹಳ್ಳಿ, ಸೋಮನಹಳ್ಳಿ, ಸಿಂಗರಹಳ್ಳಿ ಹಾಗೂ ಶಿಡ್ಲಘಟ್ಟ ತಾಲ್ಲೂಕಿನ ಮಳೂರು, ಮೆಡೂರು ಮುಂತಾದ ಗ್ರಾಮಗಳಲ್ಲಿ ದೊರಕಿರುತ್ತದೆ. ವೆಂಕಟರಾಯನ ಸಾಮಂತರಾದ ಗೋಪಾಲಗೌಡರ ಎಲ್ಲಾ ಶಾಸನಗಳಲ್ಲಿ ಸಾಮಾನ್ಯವಾಗಿ ೩ ತಲೆಮಾರುಗಳ ವಿವರಗಳಲ್ಲಿ ತಾತ ಮುದ್ದು ಬಯಿರೆಗೌಡ, ತಂದೆ ಸೊಣ್ಣ ಭೈರೇಗೌಡನ ಉಲ್ಲೇಖಗಳು ಇದ್ದೆ ಇರುತ್ತವೆ. ಜೊತೆಗೆ ಶ್ರೀವೆಂಕಟೇಶ್ವರ ಸ್ವಾಮಿಯವರು ವೆಂಕಟಾಚಲದಲ್ಲಿ ರತ್ನ ಸಿಂಹಾಸನ ರೂಢರಾಗಿ[೪೮೫] ಹಾಗೂ ಶ್ರೀ ಮದಾಲ್ಮೇಲ್ಮಂಗಾ ಸಮೇತ ಶ್ರೀ ವೆಂಕಟೇಶ್ವರ ಸ್ವಾಮಿ ಪಾದಾರವಿಂದ ಪರಿಪಾಲಕರಾದ[೪೮೬] ಎಂದು ಉಕ್ತವಾಗಿರುವುದನ್ನು ಕಂಡರೇ ಗೋಪಾಲಗೌಡನು ತಿರುಪತಿಯ ತಿಮ್ಮಪ್ಪನನ್ನು ಅದಿರಾಜನಾಗಿ ಸ್ವೀಕರಿಸಿರಬೇಕು.

ಗೋಪಾಲ ಗೌಡನು ಕ್ರಿ.ಶ.೧೬೯೭ ರಲ್ಲಿ ಬೇಗೂರಿಗೆ ಪ್ರತಿನಾಮ ಗೋಪಾಲ ಸಾಗರವೆಂಬ ಸರ್ವಮಾನ್ಯದ ಅಗ್ರಹಾರದಲ್ಲಿನ ೨೫ ವೃತ್ತಿಯನ್ನು ಶ್ರೀಮದನ ಗೋಪಾಲಸ್ವಾಮಿಗೆ[೪೮೭], ಕ್ರಿ.ಶ.೧೬೯೮ರಲ್ಲಿ ಶ್ರೀ ರುಕ್ಮಿಣಿ, ಸತ್ಯಭಾಮ ಸಮೇತನಾದ ಶ್ರೀ ಮದನ ಗೋಪಾಲ ಸ್ವಾಮಿಯ ಸೇವಾರ್ಥಕ್ಕೆ ನಲ್ಲೂರು ಹೋಬಳಿಯ ಚಿಕ್ಕೋಹಳ್ಳಿಗ್ರಾಮ, ಸಾವಕನಹಳ್ಳಿ, ಸೋಮತಹಳ್ಳಿ, ಸಿಂಗೋಹಳ್ಳಿ ಗ್ರಾಮಗಳು, ವಡಿಗೇನಹಳ್ಳಿ (ವಿಜಯಪುರ) ಹೋಬಳಿಯ ಮಡ್ಲೂರ ಗ್ರಾಮ, ಮೇಲೂರ ಗ್ರಾಮ ಹಾಗೂ ಹೊಸಕೆರೆ, ಹೊಸತೋಟ, ಹರಾಬಿಬಳಿಯ ತೋಟ, ಪಲ್ಲಕ್ಕಿ, ಬೀಸಣಿಯರಿಗೆ ಪಾದಸೇವೆಗಾಗಿ ಬಯಿಚಾಪುರ ಗ್ರಾಮ, ಬಯಿರಾ ಪುರಗಳನ್ನು, ಅರ್ಚಕರಿಗೆ ಉಪರಹಳ್ಳಿ ಗ್ರಾಮಗಳನ್ನು ದಾನ ನೀಡಿದ್ದನು[೪೮೮]. ಇದೇ ವಿಷಯವನ್ನು ತಿಳಸುವ ಶಾಸನಗಳು (ಬಹುಶಃ ಈ ಶಾಸನದ ನಕಲು ಪ್ರತಿಗಳು ಇರಬೇಕು)

[೪೮೩] ಪಿ.ವಿ.ಕೃಷ್ಣಮೂರ್ತಿ:-ಆವತಿನಾಡಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ-೩೨೮.
[೪೮೪] ಎ.ಕ-೯, ದೇ.ತಾ.೫೧, ಕ್ರಿ.ಶ. ೧೬೯೭, ಸಿಂಗರಹಳ್ಳಿ.
[೪೮೫] ಎ.ಕ-೯, ದೆ.ತಾ ೫೧, ಕ್ರಿ.ಶ.೧೬೯೭, ಬೇಗೂರು.
[೪೮೬] ಎ.ಕ-೯, ದೆ.ತಾ.೩೭, ಕ್ರಿ.ಶ.೧೬೯೮, ಸೋಮನಹಳ್ಳಿ.
[೪೮೭] ಎ.ಕ-೯, ದೆ.ತಾ ೫೧, ಕ್ರಿ.ಶ.೧೬೯೭, ಬೇಗೂರು.
[೪೮೮] ಎ.ಕ-೯, ದೇ.ತಾ.೭೧, ಕ್ರಿ.ಶ.೧೬೯೮, ಸಿಂಗರಹಳ್ಳಿ.

ದೇವನಹಳ್ಳಿ[೪೮೯], ಸೋಮನಹಳ್ಳಿ[೪೯೦], ಸಿಂಗರಹಳ್ಳಿ[೪೯೧], ಶಿಡ್ಲಘಟ್ಟ ತಾಲ್ಲೂಕಿನ ಮಳ್ಳೂರು[೪೯೨], ಮೇಲೂರು[೪೯೩] ಗಳಲ್ಲಿ ದೊರೆತಿದ್ದು, ಈ ಶಾಸನದಲ್ಲಿ ದಾನ ನೀಡಿರುವ ಗ್ರಾಮಗಳಾದ ಪ್ರತಿ ಗ್ರಾಮದಲ್ಲಿ ಶಾಸನದ ಒಂದು ಪ್ರತಿಯನ್ನು ಹಾಕಿಸಿರಬೇಕು. ಹಾಗಾದರೆ ಶಾಸನದಲ್ಲಿ ಉಲ್ಲೇಖವಾಗಿ ಶಾಸನ ಸಿಗದೆ ಇರುವ ಗ್ರಾಮಗಳಾದ ಬಯಿರಾಪುರ, ಬೈಚಾಪುರ, ಸಾವಕನಹಳ್ಳಿ, ವಡ್ಡರಹಳ್ಳಿ ಗ್ರಾಮಗಳನ್ನು ಶೋಧಿಸಿದರೆ ಶಾಸನಗಳು ಸಿಗಬಹುದು. ಇಲ್ಲ ಶಾಸನಗಳು ಹಾಳಾಗಿರ ಬೇಕು.

## ದೊಡ್ಡಭೈರಪ್ಪಗೌಡ

ಗೋಪಾಲಗೌಡನ ನಂತರ ಮಗನಾದ ದೊಡ್ಡಭೈರಪ್ಪಗೌಡರಯ್ಯರು ಶ್ರೀವೆಂಕಟರಾಯನ ಸಾಮಂತಾಧಿಪತಿಯಾಗಿ ಮುಂದುವರೆದನು. ತಂದೆ ಗೋಪಾಲಗೌಡರ ಹಾಗೇ ತಿರುಪತಿಯ ತಿಮ್ಮಪ್ಪನ ಭಕ್ತನಾಗಿದ್ದನೆಂಬುದನ್ನು ಹಾಗೂ ಪೂರ್ವಜರ ಸ್ಮರಣೆಯನ್ನು ಶಾಸನಗಳಲ್ಲಿ ಕಾಣಬಹುದು.

ಶ್ರೀ ವೆಂಕಟೇಶ್ವರ ಸ್ವಾಮಿ ವೆಂಕಟಾಚಲದಲ್ಲೂ ಸಿಂಹಾಸನ ರೂಢರಾಗಿ, ಶ್ರೀ ಮನ್ಮಹಾ ಆವತಿನಾಡ ಪ್ರಭುಗಳಾದ ಇಮ್ಮಡಿ ಸೊಂಣಭೈರೇಗೌಡರಯ್ಯನವರ ಪೌತ್ರರಾದ ಗೋಪಾಲಗೌಡರಯ್ಯನವರ ಪುತ್ರರಾದ ದೊಡ್ಡಭೈರಪ್ಪಗೌಡರಯ್ಯನವರು ಕುರುಬರಹಳ್ಳಿ ಉಪಗ್ರಾಮ ಸಹಿತವಾದ ಮಾವಳೀಪುರಕ್ಕೆ ಪ್ರತಿನಾಮವಾಗಿ ತನ್ನ ಹೆಸರನ್ನೆ ಇಟ್ಟು ದೊಡ್ಡ ಭೈರಸಾಗರವೆಂಬ ಅಗ್ರಹಾರವನ್ನು ಕ್ರಿ.ಶ.೧೭೧೬ ರಲ್ಲಿ ಶ್ರೀ ಗೋಪಾಲಸ್ವಾಮಿಗೆ ಪ್ರೀತಿಯಾಗಿ ತ್ರಿಕರಣ ತ್ರಿವಾಚವಾಗಿ ಸುಬ್ಬಾಭಟ್ಟರವರಿಗೆ ಏಕ ಭೋಗ್ಯವಾಗಿ[೪೯೪], ಹಾಗೇಯೇ ಕ್ರಿ.ಶ.೧೭೨೯ರಲ್ಲಿ ವಡಿಗೇನಹಳ್ಳಿಯಲ್ಲಿರುವ (ವಿಜಯಪುರ) ಚನ್ನಕೇಶವ ದೇವರಿಗೆ ಸಕಲ ವಿನಿಯೋಗಕ್ಕೆ ವಡಿಗೇನಹಳ್ಳಿ ಹೋಬಳಿಗೆ ಸಲುವ ಸೆಟ್ಟಹಳ್ಳಿ, ಅಂಗಟ್ಟಿ ಗ್ರಾಮಗಳನ್ನು ದಾನವಾಗಿ ನೀಡಿದನು[೪೯೫].

ದೊಡ್ಡ ಭೈರಪ್ಪ ಗೌಡರಯ್ಯನ ನಂತರ ವೆಂಕಟನಾರಾಯನ ಗೌಡನು ಅಧಿಕಾರ ನಡೆಸುತ್ತಿದ್ದಕ್ಕೆ ಕ್ರಿ.ಶ.೧೭೪೬ರಲ್ಲಿ ಬೋಡಂಪಲ್ಲಿ ಎಂಬ ಗ್ರಾಮದಲ್ಲಿ ದೊಡ್ಡ ಕೆರೆಯೊಂದನ್ನು ಕಟ್ಟಿಸಿದವನಿಗೆ ದಶವಂದ ದತ್ತಿಯಾಗಿ ಗದ್ದೆ ಭೂಮಿಯನ್ನು ದಾನ ನೀಡಿದ್ದನು[೪೯೬]. ಆದರೆ ಈ ಶಾಸನದಲ್ಲಿ ಪೂರ್ವಜರ ಬಗ್ಗೆ

[೪೮೯] ಎ.ಕ-೯, ದೇ.ತಾ.೧೫ & ೧೬, ಕ್ರಿ.ಶ.೧೬೯೮, ತಾಮ್ರ ಶಾಸನ, ದೇವನಹಳ್ಳಿ.
[೪೯೦] ಎ.ಕ-೯, ದೇ.ತಾ ೩೭, ಕ್ರಿ.ಶ.೧೬೯೮, ಸೋಮೇನಹಳ್ಳಿ.
[೪೯೧] ಎ.ಕ-೯, ದೇ.ತಾ ೭೦, ಕ್ರಿ.ಶ.೧೬೯೮, ಸಿಂಗರಹಳ್ಳಿ.
[೪೯೨] ಎ.ಕ-೧೦, ಶಿ.ತಾ, ೫೩,ಕ್ರಿ.ಶ.೧೬೯೮, ಮಳ್ಳೂರು,
[೪೯೩] ಎ.ಕ-೧೦, ಶಿ.ತಾ.೫೬ & ೫೭, ಕ್ರಿ.ಶ.೧೬೯೮, ಮೇಲೂರು.
[೪೯೪] ಎ.ಕ.-೯, ದೊ.ತಾ.೬೩. ಕ್ರಿ.ಶ,೧೭೧೧, ಮಾವಳೀಪುರ.
[೪೯೫] ಎ.ಕ-೯, ದೇ.ತಾ ೩೦, ಕ್ರಿ.ಶ ೧೭೨೯, ವಡಿಗೇನಹಳ್ಳಿ.
[೪೯೬] ಎ.ಕ-೧೦, ಚಿಂ.ತಾ.೧೪, ಕ್ರಿ.ಶ.೧೭೪೬, ಬೋಡಂಪಲ್ಲಿ ಬುರ್ರೋನ ಕುಂಟೇ ಕೋಡಿ ಬಳಿ.

ಯಾವುದೇ ಉಲ್ಲೇಖವಿಲ್ಲ. ಬಹುಶಃ ದೊಡ್ಡ ಭೈರಪ್ಪನ ಮಗನೇ ಇರಬೇಕು. ಚಿಂತಾಮಣಿ ಮತ್ತು ಬಾಗೇಪಲ್ಲಿ ತಾಲ್ಲೂಕಿನಲ್ಲಿ ಅಧಿಕಾರ ನಡೆಸುತ್ತಿದ್ದಿರ ಬೇಕು.

**ರಾಮಸ್ವಾಮಿ**

ಸೋರನಾಯಕನಹಳ್ಳಿ ಗ್ರಾಮಕ್ಕೆ ಸೇರಿದ ನಾಗರಕಲ್ಲು ಕಟ್ಟೆಯಲ್ಲಿನ ಕ್ರಿ.ಶ.೧೭೯೨ರ ಶಾಸನದಲ್ಲಿ ರಾಮಸ್ವಾಮಿಯ ಪೂರ್ವಜರ ೩ ತಲೆಮಾರುಗಳಾದ ದೊಡ್ಡ ಭೈರಪ್ಪಗೌಡನ ಪೌತ್ರನಾದ ಚನ್ನಣ್ಣಪ್ಪನ ಪುತ್ರನಾದ ರಾಮಸ್ವಾಮಿಯು ಶ್ರೀ ನಂದೀಶ್ವರ ಸ್ವಾಮಿಯ ಚರಣಾರವಿಂದಗಳಿಗೆ ಪ್ರೀತಿಯಾಗಿ ಹರಿಹರಾಧಿಗಳ ಸಾಕ್ಷಿಯಾಗಿ ಸಾದಲಿ ಗ್ರಾಮದ ಬಳಿಯ ನಾಗರಕಟ್ಟೆ ಹೊಲದ ಗದ್ದೆಯನ್ನು ರಾಮಾಶಾಸ್ತ್ರಿಗಳಿಗೆ ದಾನ ನೀಡಿದರು[೨೯೭]. ಈ ಶಾಸನದ ನಂತರ ಈ ಮನೆತನದ ಬಗ್ಗೆ ವಿವರಗಳು ದೊರೆಯುವುದಿಲ್ಲ. ಪ್ರತಿಷ್ಟಿತ ವರ್ಗವೊಂದರ ಕೊನೆಯ ತುಣುಕು ಇನ್ನು ಉಸಿರಾಡುತ್ತಿತ್ತು ಎನ್ನುವಂತಹ ಒಂದು ಹಂತದ ಸೂಚನೆಯಾಗಿ ಈ ಸ್ಥಳೀಯ ಪ್ರಭುವಿನ ಪ್ರಸ್ತಾಪ ಈ ಶಾಸನದಲ್ಲಿ ಕಂಡು ಬರುತ್ತದೆ[೨೯೮].

ರಂಗಪ್ಪ ಗೌಡ (ರಾಮಸ್ವಾಮಿ) ಸಂತತಿಗೆ ಇಲ್ಲದ ಕಾರಣ ಪಾಳೆಯಗಾರಿಕೆಯು ಚಿಕ್ಕಬಳ್ಳಾಪುರದ ಚಿಕ್ಕಪ್ಪಗೌಡನಿಗೆ ಪ್ರಾಪ್ತಿಯಾದ ೩ ತಿಂಗಳೊಳಗೆ ನಂಜರಾಜ ದಳವಾಯಿ ನೇತೃತ್ವದಲ್ಲಿ ಮೈಸೂರು ಸೇನೆಯು ಕ್ರಿ.ಶ.೧೭೪೯ ರಲ್ಲಿ ದೇವನಹಳ್ಳಿಯನ್ನು ಸುಮಾರು ೮ ತಿಂಗಳ ಕಾಲ ಮುತ್ತಿಗೆ ಹಾಕಲಾಗಿತ್ತು. ಕೊನೆಗೆ ದೇವನಹಳ್ಳಿಯು ಮೈಸೂರು ಸಂಸ್ಥಾನದ ಪ್ರಭುತ್ವಕ್ಕೆ ಒಳಪಟ್ಟಿತು[೨೯೯]. ರಂಗೆಗೌಡನು ಅನುಮತಿ ಪಡೆದು ಚಿಕ್ಕಬಳ್ಳಾಪುರ ಕೋಟೆಯಲ್ಲಿ ಆಶ್ರಯ ಪಡೆದನು[೩೦೦].

ಹೀಗೆ ಈ ವಂಶದ ಮೂಲ ಪುರುಷ ಮಾರೇಗೌಡನಿಂದ ಹಿಡಿದು ಕೊನೆಯ ಅರಸನಾದ ರಾಮಸ್ವಾಮಿಯ ಕಾಲದವರೆಗೆ ೧೪ ತಲೆಮಾರುಗಳಲ್ಲಿ ೧೫ ಜನ ಪ್ರಭುಗಳ ೧೯ ಜನ ವಂಶೀಕರನ್ನು ಒಳಗೊಂಡ ಆವತಿನಾಡಪ್ರಭುಗಳು ಕ್ರಿ.ಶ.೧೪೩೬ರಲ್ಲಿ ವಿಜಯನಗರ ಅರಸರ ಸಾಮಂತರಾಗಿ, ಮಾಂಡಲಿಕರಾಗಿ ನಂತರ ಬಹುಮನಿ ಸುಲ್ತಾನರು, ಮರಾಠರು, ಮೊಘಲರು ಮೈಸೂರಿನ ಒಡೆಯರಿನ ಅಧಿನದಲ್ಲಿ ಕ್ರಿ.ಶ.೧೭೮೨ ರ ವರೆಗೆ ಸುಮಾರು ೩೪೬ ವರ್ಷಗಳ ಕಾಲ ಆಳ್ವಿಕೆಯನ್ನು ನಡೆಸಿದ್ದಾರೆ.

## ೩.೯ ಸುಗುಟೂರು ಪ್ರಭುಗಳು

---

[೨೯೭] ಎ.ಕ-೧೦, ಶಿ.ತಾ.೯೫, ಕ್ರಿ.ಶ ೧೭೯೨, ಸೋರನಾಯಕನಹಳ್ಳಿ.

[೨೯೮] ಪಿ.ವಿ.ಕೃಷ್ಣಮೂರ್ತಿ :- ಆವತಿನಾಡಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ-೩೩೦.

[೨೯೯] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೭.

[೩೦೦] Suryanath.U.Kamath :- Karnataka State Gazetter, Bangalore Rural District, 1989, Page-76.

ಪಾಳೇಗಾರರು, ನಾಡಪ್ರಭುಗಳು ಸಣ್ಣ ಪುಟ್ಟ ಮನೆತನಗಳಾಗಿದ್ದರಿಂದ ತಮ್ಮ ಆದಾಯಕ್ಕೆ ಅನುಗುಣವಾಗಿ ತಮ್ಮದೇ ಆದ ರೀತಿಯಲ್ಲಿ ಕೋಟೆ-ಕೊತ್ತಲಗಳನ್ನು ನಿರ್ಮಾಣಮಾಡಿಕೊಂಡು ಆಡಳಿತ ನಡೆಸುತ್ತಿದ್ದ ಮನೆತನಗಳು ವಿಜಯನಗರೋತ್ತರ ಕಾಲದಲ್ಲಿ ಮೊಗಲರು, ಮರಾಠರು, ಬಿಜಾಪುರ ಸುಲ್ತಾನರ ದಾಳಿಯಿಂದಾಗಿ ಈ ಮನೆತನಗಳು ತಮ್ಮ ಅಸ್ಥಿತ್ವವನ್ನು ಉಳಿಸಿಕೊಳ್ಳಲು ಹೋರಾಟ ನಡೆಸುತ್ತಿದ್ದರು.

ವಿಜಯನಗರ ಮತ್ತು ವಿಜಯನಗರೋತ್ತರದ ಮೈಸೂರು ಒಡೆಯರು ಬ್ರಿಟೀಷರ ಕಾಲದವರೆಗೂ ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಆನೇಕಲ್ ತಾಲ್ಲೂಕು, ಡೆಂಕಣಿಕೋಟೆ ತಾಲ್ಲೂಕುಗಳ ಪ್ರದೇಶಗಳನ್ನು ಒಳಗೊಂಡ ವಿಶಾಲವಾದ ಪ್ರಾಂತ್ಯದಲ್ಲಿ ಕ್ರಿ.ಶ.೧೪೨೨ ರಿಂದ ೧೭೯೩ ರ ವರೆಗೆ ಆಳ್ವಕೆ ಮಾಡುತ್ತಾ ನಂತರ ಸ್ವಾತಂತ್ರ್ಯ ಬರುವವರೆಗೂ ಮೈಸೂರು ಸರ್ಕಾರದಿಂದ (ಕ್ರಿ.ಶ.೧೮೧೫ ರಿಂದ ೧೯೪೭ ರ ವರೆಗೂ) ಪೆನ್ಷನ್‌ನ್ನು ಪಡೆಯುತ್ತಿದ್ದರು.

ಹೊಸಕೋಟೆ ತಾಲ್ಲೂಕಿನ ಬಾಜಿಹೊಸಹಳ್ಳಿ, ನಂದಗುಡಿ, ಅನುಪಹಳ್ಳಿ, ಮುಗಬಾಳ, ಬೇಚಿರಾಖ್ ಎತ್ತಿನವೋಡೇರಹಳ್ಳಿ, ಸೂಲಿಬೆಲೆ, ಹೊಸಕೋಟೆ, ದೊಡ್ಡಬನಹಳ್ಳಿ, ಗೊಣಕನಹಳ್ಳಿ, ದೊಡ್ಡನಲ್ಲೂರು, ಬಿಸನಹಳ್ಳಿ, ಕಟ್ಟಿಗೇನಹಳ್ಳಿ, ಮುಳುಬಾಗಿಲು ತಾಲ್ಲೂಕು, ಆನೇಕಲ್ ತಾಲ್ಲೂಕು, ಕೋಲಾರ ತಾಲ್ಲೂಕು, ಶಿಡ್ಲಘಟ್ಟ ತಾಲ್ಲೂಕು, ಚಿಂತಾಮಣಿ ತಾಲ್ಲೂಕು, ಬಂಗಾರು ಪೇಟೆ ತಾಲ್ಲೂಕು, ಮಾಲೂರು ತಾಲ್ಲೂಕು, ಪುಂಗನೂರು ತಾಲ್ಲೂಕು, ಡೆಂಕಣಿಕೋಟೆ ತಾಲ್ಲೂಕುಗಳ ಗ್ರಾಮಗಳಲ್ಲಿ ಸುಗಟೂರು ಪ್ರಭುಗಳ ಶಾಸನಗಳು ದೊರಕಿದ್ದು, ಈ ಎಲ್ಲಾ ಪ್ರದೇಶಗಳು ಆಡಳಿತದ ವ್ಯಾಪ್ತಿಗೆ ಒಳಪಟ್ಟಿತೆನ್ನಿಸುತ್ತದೆ. ಪೂರ್ವಕ್ಕೆ ಕೋಲಾರ, ಮುಳುಬಾಗಿಲು, ಪುಂಗನೂರು, ದಕ್ಷಿಣಕ್ಕೆ ಬಿಲಗೊಂಡನಹಳ್ಳಿ (ಸರ್ಜಾಪುರ), ಆನೆಮಲೆ (ಆನೇಕಲ್), ಉತ್ತರಕ್ಕೆ ಶಿಡ್ಲಘಟ್ಟ, ಪಶ್ಚಿಮಕ್ಕೆ ಚಿಟ್ಟಹಳ್ಳಿಯು ಎಲ್ಲೆಯಾಗಿತ್ತು.

ವಿಜಯನಗರ ಅಧೀನರಾಗಿ ಅವರ ಆಡಳಿತ ಕ್ರಮವನ್ನೆ ಅನುಸರಿಸಲಾಗಿತ್ತು. ರಾಜ್ಯ, ಸೀಮೆ, ವಳಿತ, ಪಟ್ಟಡಿ, ಸ್ಥಳ ಗ್ರಾಮಗಳು ಎಂಬ ರೂಪದಲ್ಲಿ ಕೂಡಿದ್ದು, ಸುಗುಟೂರು ಸೀಮೆ, ಹೊಸಕೋಟೆ ಸೀಮೆ, ಕೋಳಾಲ ಸೀಮೆ, ಆನೇಕಲ್ಲು ಸೀಮೆ, ಮುಳುವಾಯಿ ಸೀಮೆ, ಬಿಳಗೊಂಡನಹಳ್ಳಿ ಸೀಮೆಗಳು, ಸಮೇತನಹಳ್ಳಿ ವಳಿತ, ಆನೇಕಲ್ ಸೀಮೆ ವಳಿತ, ಸ್ಥಳ ಸಮಾನಾಂತರದಲ್ಲಿ ಪಟ್ಟಡಿ ಬಳಕೆಯಾಗಿರುವುದು ಕೋತನೂರು ಪಟ್ಟಡಿ, ಹುಲೂರು ಪಟ್ಟಡಿ, ನೆಲವಾಗಿಲ ಸ್ಥಳ, ಕೊತನೂರು ಸ್ಥಳ, ಅತ್ತಿಬೆಲೆ ಸ್ಥಳಗಳು ಜಾರಿಯಲ್ಲಿದ್ದವು.

ಕ್ರಿ.ಶ.೧೪೦೦ ರಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನ ಜಂಗಮಕೋಟೆ ಸಮೀಪದ ಗ್ರಾಮಕ್ಕೆ ಬಂದು ನೆಲೆಸಿ, ಸುತ್ತಮುತ್ತಲ ಪ್ರದೇಶಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ಆಳ್ವಕೆ ನಡೆಸುತ್ತಿದ್ದ ವಂಶೀಯರ ಮೊದಲ ಉಲ್ಲೇಖ ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಜೋಡಿಪುರ ಗ್ರಾಮದಲ್ಲಿನ ವೀರಭದ್ರಸ್ವಾಮಿ ದೇವಾಲಯದ ಮುಂದೆ ನಿಲ್ಲಿಸುವ ಕ್ರಿ.ಶ.೧೪೨೨ ರ ಶಾಸನದಲ್ಲಿ ಸುಗುಟೂರು ತಮ್ಮಪ್ಪಗೌಡ ಅಯ್ಯನವರು ತಮ್ಮ ತಂದೆ ದೇವಪ್ಪಗೌಡರಿಗೆ ಪ್ರಾಯಃ ಪುಣ್ಯವಾಗಲೆಂದು ವೀರ ಶೈವ ಮಠಕ್ಕೆ ದಾನ ಬಿಟ್ಟ ವಿವರವಿದೆ[೨೦೧]. ವಿಜಯನಗರದ ಪ್ರೌಢ ದೇವರಾಯನ ಕಾಲಕ್ಕಾಗಲೇ ಪ್ರಭುಗಳು ಪ್ರಬಲರಾಗಿದ್ದರು ಎನ್ನಿಸುತ್ತದೆ.

ಸುಮಾರು ೧೪ನೇ ಶತಮಾನದ ಕೊನೆಯಿಂದ ಕ್ರಿ.ಶ.೧೪೨೧ ರ ವರೆಗೂ ದೇವಯ್ಯಗೌಡನು ಆಳ್ವಕೆ ನಡೆಸಿರಬೇಕು. ಆದರೆ ದೇವಯ್ಯನ ಒಂದು ಶಾಸನವು ಇದುವರೆವಿಗೂ ದೊರೆತಿಲ್ಲ ಎನ್ನುವುದೇ ಬೇಸರದ ಸಂಗತಿ. ಸುಗುಟೂರು ಮೂಲ ಪುರುಷನಾದ ದೇವಯ್ಯಗೌಡನ ಮಗನಾದ ತಮ್ಮೇಗೌಡನ ಶಾಸನಗಳು ಸಿಗುತ್ತವೆ. ಕ್ರಿ.ಶ.೧೪೨೨ ರಿಂದ ಆಳ್ವಕೆ ನಡೆಸಿದ ತಮ್ಮೇಗೌಡರು ಹೊಸಕೋಟೆಯ ನಿರ್ಮಾಪಕರಾಗಿದ್ದು, ಸುಗುಟೂರಿನಿಂದ ದಕ್ಷಿಣಕ್ಕೆ ೧೫ ಕಿ.ಮೀ ದೂರದಲ್ಲಿ ೨ ಮೈಲಿ ಉದ್ದದ ಕಟ್ಟೆಯನ್ನು ಕಟ್ಟಿ, ನಂತರ ಹೊಸದಾಗಿ ಕೋಟೆಯನ್ನು ನಿರ್ಮಿಸಿದ ವಿಷಯವನ್ನು ಕ್ರಿ.ಶ.೧೪೯೪ ರ ಖಾಜಿ ಹೊಸಹಳ್ಳಿಯ ತಾಮ್ರಶಾಸನದಲ್ಲಿ ಕಾಣಬಹುದು. ಹೊಸಕೋಟೆ ಕಟ್ಟಿದಂತಹ ತಮ್ಮೇಗೌಡನು ನಿಜಗುಣ ಸುಜ್ಞಾನ ಸ್ವಾಮಿಗಳಿಗೆ ಧರ್ಮ, ಅರ್ಥ, ಕಾಮ, ಮೋಕ್ಷಾರ್ಥ, ಚತುರ್ವಿದ ಫಲ ಉಂಟಾಗಲೆಂದು ಹೊಸಳ ಗ್ರಾಮವನ್ನು ಸ್ವಾಮಿಗಳಿಗೆ ಧಾರೆಯೆರೆದು ಗ್ರಾಮಕ್ಕೆ ಲಿಂಗಮುದ್ರೆ ಹಾಕಿಸಿ ಸ್ವಾಮಿಗಳಿಗೆ ಅರ್ಪಿಸಿದರು[೨೦೨].

## ಚಿಕ್ಕರಾಯ ತಮ್ಮೇಗೌಡ (ಕ್ರಿ.ಶ.೧೪೯೫-೧೫೪೨)

ಕ್ರಿ.ಶ.೧೪೯೬ ರಿಂದ ತಮ್ಮೇಗೌಡನ ಮಗನಾದ ಚಿಕ್ಕರಾಯ ತಮ್ಮೇಗೌಡನು ತನ್ನ ರಾಜ್ಯವನ್ನು ೪ ದಿಕ್ಕುಗಳಲ್ಲಿ ವಿಸ್ತರಿಸಿದನು. ಮುಸಲ್ಮಾನರು ಪೆನುಗೊಂಡೆಯನ್ನು ಆಕ್ರಮಿಸಿದಾಗ ತನ್ನ ಪರಾಕ್ರಮದಿಂದ ಸಲ್ಲಿಸಿದ ಸಹಾಯಕ್ಕೆ ಕೃತಜ್ಞತಾ ರೂಪವಾಗಿ ಪೆನುಗೊಂಡೆಯ ಅರಸರು ಚಿಕ್ಕರಾಯ ಎಂಬ ಬಿರುದನ್ನು ದಯಪಾಲಿಸಿದರಂತೆ. ಚಿಕ್ಕರಾಯ ತಮ್ಮೇಗೌಡನಿಗೆ ವೀರಮಾಂಬೆಯ ಎಂಬ ಪತ್ನಿ ಹಾಗೂ ಇಮ್ಮಡಿ ತಮ್ಮ ಭೂಪ ಎಂಬ ಪುತ್ರ ನಿದ್ದನು[೨೦೩].

[೨೦೧] ಎ.ಕ-೧೦, ಮಾ.ತಾ.೧೮೮, ಕ್ರಿ.ಶ.೧೪೨೨, ಜೋಡಿಪುರ.

[೨೦೨] ಎ.ಕ-೯, ಅನುಬಂಧ, ಹೊ.ತಾ.೧೮೬, ಕ್ರಿ.ಶ.೧೪೯೪, ಖಾಜಿಕೊಸಹಳ್ಳಿ.

[೨೦೩] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೨.

ಕ್ರಿ.ಶ.೧೫೬೪ ರ ತಾಮ್ರಶಾಸನದಲ್ಲಿ ಮುಮ್ಮಡಿ ಚಿಕ್ಕರಾಯ ತಮ್ಮಪ್ಪ ಗೌಡರಯ್ಯನವರ ಪೌತ್ರರಾದ ತಮ್ಮಯ್ಯ ಗೌಡರಯ್ಯನವರ ಪುತ್ರರಾದ ಚಿಕ್ಕರಾಯ ತಮ್ಮಗೌಡರೈಯ್ಯನವರು ನಮ್ಮ ಇಷ್ಟ ದೇವರು ಶ್ರೀ ಸೋಮೇಶ್ವರ ದೇವರು ಮತ್ತು ಶ್ರೀ ವೀರಭದ್ರ ದೇವರಿಗೆ ಮೊದಲಾದ ಸೇವೆಗಳು ನಡೆಯುವುದಕ್ಕೆ ಸಹಿರಂಣ್ಯೋದಕ ಪೂರ್ವಕವಾಗಿ ಕೊಟ್ಟರು[೫೦೪]. ಕ್ರಿ.ಶ.೧೫೭೨ ರಲ್ಲಿ ಬಿಲ್ಲಗೊಂಡನಹಳ್ಳಿ (ಸರ್ಜಾಪುರ) ದಲ್ಲಿ ಸುಂದರವಾದ ಚನ್ನಕೇಶವ ದೇವಾಲಯವನ್ನು ನಿರ್ಮಿಸಿದನು.

## ಇಮ್ಮಡಿ ತಮೇಗೌಡ (ಇಮ್ಮಡಿ ಚಿಕ್ಕರಾಯ ತಮ್ಮೇಗೌಡ)

ಕ್ರಿ.ಶ.೧೫೪೩ ರಿಂದ ಚಿಕ್ಕರಾಯ ತಮ್ಮೇಗೌಡನ ಮಗನಾದ ಇಮ್ಮಡಿ ತಮ್ಮೇಗೌಡನ ಆಳ್ವಿಕೆ ಪ್ರಾರಂಭವಾಗುತ್ತದೆ. ಕ್ರಿ.ಶ.೧೫೫೯ ರಲ್ಲಿ ವೀರ ಸದಾಶಿವ ಮಹಾರಾಯರು ಪೃಥ್ವೀರಾಜ್ಯಂಗೆಯ್ಯುತ್ತಿರಲು ಶ್ರೀ ಮನ್ಮಹಾ ಮಂಡಳೇಶ್ವರ ರಾಮರಾಯ ತಿರುಮಲ ರಾಜ ಮಹಾ ಅರಸುಗಳ ಕಾರ್ಯಕ್ಕೆ ಕರ್ತರಾದ ಸುಗುಟೂರು ತಮ್ಮಪ್ಪಗೌಡ ಅಯ್ಯನು ತಮ್ಮ ತಂದೆ, ತಾಯಿ, ಗುರು, ದೈವಕ್ಕೆ ಪುಣ್ಯವಾಗಬೇಕೆಂದು ಕ್ರಿ.ಶ.೧೫೫೯ ರಲ್ಲಿ ನಂಜಿಗುಳಿಯ ಅಮೃತ ಮಲ್ಲಿಕಾರ್ಜುನ ಲಿಂಗಕ್ಕೆ ಅಮೃತಪಡಿ ನೈವೇದ್ಯಕ್ಕೆ[೫೦೫], ಕ್ರಿ.ಶ.೧೫೬೦ ರಲ್ಲಿ ಮಕರ ಸಂಕ್ರಾಂತಿ ಪುಣ್ಯಕಾಲದಲ್ಲು ಸೋಮರಾಜಯ್ಯನವರಿಗೆ ಪುಣ್ಯವಾಗಬೇಕೆಂದು ಶಿವಗಂಗೆಯ ಪ್ರಸನ್ನ ಗಂಗಾಧರ ಲಿಂಗಕ್ಕೆ ಅಮೃತಪಡಿ ನೈವೇದ್ಯಕ್ಕೆ[೫೦೬], ಕ್ರಿ.ಶ.೧೫೬೬ ರಲ್ಲಿ ಸದಾಶಿವ ಮಹಾರಾಯರಿಗೆ ಪುಣ್ಯವಾಗಬೇಕೆಂದು ದಾಸರಹಳ್ಳಿಗೆ ಪ್ರತಿನಾಮವಾದ ದೇವಾಪುರವನ್ನು[೫೦೭], ಕ್ರಿ.ಶ.೧೫೮೧ ರಲ್ಲಿ ದೇವಾಪುರದ ಹಿರಿಯರಾಯ ಒಡೆಯರು ದೇವರಿಗೂ ಎತ್ತಿನ ಒಡೆಯ ದೇವರಿಗೂ ಕೊಟ್ಟ ಧರ್ಮ ಶಾಸನ[೫೦೮].

ಇತನಿಗೆ ಅಯ್ಯಮಗೌಡ, ನಂಜಪ್ಪಗೌಡ, ಕೆಂಪಗೌಡ, ತಿಮ್ಮಯ್ಯಗೌಡರೆಂಬ ಸಹೋದರರಿದ್ದು, ಮುಳುಬಾಗಿಲು ಮತ್ತು ಕೋಲಾರ ಪ್ರದೇಶದ ಆಡಳಿತವನ್ನು ಅಯ್ಯಮಗೌಡನು ನೋಡಿಕೊಳ್ಳುತ್ತಿದ್ದು, ಕ್ರಿ.ಶ.೧೬೦೮ ರ ಸುಮಾರಿನಲ್ಲಿ ಇಮ್ಮಡಿ ತಮ್ಮೇಗೌನು ಶಿವೈಕ್ಯನಾದಾಗ ಮಗನಾದ ಮುಮ್ಮಡಿ ತಮ್ಮೇಗೌಡನು ಪಟ್ಟಕ್ಕೆ ಬಂದ ತರುವಾಯದಲ್ಲಿ ಅಯ್ಯಮಗೌಡನು ರಾಜ್ಯ ಭ್ರಷ್ಟನಾಗಿ ಹೊಸಕೋಟೆ, ಬಿಲಗೊಂಡನಹಳ್ಳಿ ಮುಂತಾದ ಪ್ರದೇಶಗಳನ್ನು ಆಕ್ರಮಿಸಿದನು. ಈ ದೂರಾಕ್ರಮಣವನ್ನು ತಿಳಿದು ಬೆಂಗಳೂರಿನ ಇಮ್ಮಡಿ ಕೆಂಪೇಗೌಡನು ಕ್ರಿ.ಶ೧೬೧೭ ರ ಅಕ್ಟೋಬರ್ ತಿಂಗಳಿನಲ್ಲಿ ಹೊಸಕೋಟೆಯನ್ನು ಮುತ್ತಿ ಅಯ್ಯಮಗೌಡನನ್ನು ಕೊಂದು, ನಿಜವಾದ ಉತ್ತರಾಧಿಕಾರಿಯಾದ ಮುಮ್ಮಡಿ ತಮೇಗೌಡನ್ನು

[೫೦೪] ಎ.ಕ-೯, ಹೊ.ತಾ.೯೪, ಕ್ರಿ.ಶ ೧೫೬೪, ಮುಗಬಾಳು.
[೫೦೫] ಎ.ಕ-೯, ಹೊ.ತಾ, ೧, ಕ್ರಿ.ಶ. ೧೫೫೯, ನಂದಗುಡಿ.
[೫೦೬] ಎ.ಕ-೯, ಹೊ.ತಾ.೭೩, ಕ್ರಿ.ಶ.೧೫೬೦, ಅನುಪಹಳ್ಳಿ.
[೫೦೭] ಎ.ಕ-೯, ಹೊ.ತಾ .೩, ಕ್ರಿ.ಶ.೧೫೬೬, ನೆಲವಾಗಲಹಳ್ಳಿ.
[೫೦೮] ಎ.ಕ-೯, ಹೊ.ತಾ.೪, ಕ್ರಿ.ಶ.೧೫೮೧, ಬೇಚರಾಖ್ ಎತ್ತಿನ ವಡೇರಪುರ.

ಪುನಃ ಸಿಂಹಾಸನದಲ್ಲಿ ಪ್ರತಿಷ್ಠಾಪಿಸಿದನು. ಈ ಕಾಲಕ್ಕಾಗಲೇ ಕೋಲಾರ ಮತ್ತು ಮುಳಬಾಗಿಲು ಪ್ರದೇಶ ಇಮ್ಮಡಿ ತಮ್ಮೇಗೌಡನ ಮತ್ತೊಬ್ಬ ಸಹೋದರರಾದ ತಿಮ್ಮಯ್ಯಗೌಡನ ವಶಕ್ಕೆ ಸೇರಿರುತ್ತದೆ. ಈತನೇ ಮುಂದೆ ಪುಂಗನೂರು ಪ್ರದೇಶವನ್ನು ಗೆದ್ದು, ಕೋಟೆ ಕಟ್ಟಿಸಿ ಕೋಲಾರದಿಂದ ಆಡಳಿತವನ್ನು ನಿರ್ವಹಿಸುತಿದ್ದನು[೫೦೯].

ಮುಮ್ಮಡಿ ತಮ್ಮೇಗೌಡ ಮತ್ತು ಇಮ್ಮಡಿ ಕೆಂಪೇಗೌಡನಿಗೆ ವೈವಾಹಿಕ ಸಂಬಂಧ ಏರ್ಪಟ್ಟಿತ್ತು ಎನ್ನಬಹುದು. ಮುಮ್ಮಡಿ ತಮ್ಮೇಗೌಡನ ಹೆಂಡತಿಯಾದ ಹಲಸಮ್ಮಳು ಕೆಂಪೇಗೌಡನ ಮಗಳೇ ಆಗಿರಬೇಕು. ಇಮ್ಮಡಿ ತಮ್ಮೇಗೌಡನು ಕ್ರಿ.ಶ.೧೫೬೦ ರಲ್ಲಿ ಕೆಂಪೇಗೌಡನ ಆಳ್ವಿಕೆಯ ಶಿವಗಂಗೆಯ ಗಂಗಾಧರೇಶ್ವರನಿಗೆ ಹೊಸಕೋಟೆಯ ನೆಲವಾಗಿಲ ಸ್ಥಳದ ಅನುಪಹಳ್ಳೀಯನ್ನು ದತ್ತಿಯಾಗಿ ನೀಡಿದರೆ, ಇಮ್ಮಡಿ ಕೆಂಪೇಗೌಡನು ಕ್ರಿ.ಶ ೧೬೩೦ ರಲ್ಲಿ ತಮ್ಮೇಗೌಡನ ಆಳ್ವಿಕೆಯ ಸ್ಥಳವಾದ ಅವನಿ ಕ್ಷೇತ್ರಕ್ಕೆ ಕೊಡುಗೆಯಾಗಿ ಕೊಟ್ಟರು[೫೧೦].

## ಮುಮ್ಮಡಿ ತಮ್ಮೇಗೌಡ / ಮುಮ್ಮಡಿ ತಮ್ಮ ಭೂಪಾಲ (ಕ್ರಿ.ಶ.೧೬೦೦–೬೯)

ಮುಮ್ಮಡಿ ತಮ್ಮೇಗೌಡನ ಆಳ್ವಿಕೆಯಲ್ಲಿ ಹೊಸಕೋಟೆಯು ಪ್ರವರ್ಧಮಾನವಾಗಿ ಬೆಳೆಯಿತು. ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಪರಿಣಿತನಾಗಿ ಕನ್ನಡದಲ್ಲಿ ೪೦೦೦ ಷಟ್ಪದಿಗಳಿಂದ ಕೂಡಿದ ಶಂಕರ ಸಂಹಿತೆ ಎಂಬ ಅನರ್ಘ ಗ್ರಂಥ, ನಂದಾನಾಥ ಚರಿತ್ರೆ ಎಂಬ ಯಕ್ಷಗಾನವನ್ನು, ತೆಲುಗಿನಲ್ಲಿ ಸೌಂದರೇಶ ಚರಿತೆಮೂ, ರಾಜೇಂಧ್ರ ಚೋಳ ಚರಿತ್ರೆಮೂ, ಕುಮಾರಾರ್ಜುನೀಯ, ಸಂಸ್ಕೃತದಲ್ಲಿ ಕೌಮುದಿ ವ್ಯಾಖ್ಯಾನ, ರಸಿಕ ಮನೋರಂಜನಿ ಹೀಗೆ ಅಮೂಲ್ಯ ಗ್ರಂಥ ಭಂಡಾರವೇ ಇತ್ತು.[೫೧೧]

ಕ್ರಿ.ಶ.೧೬೦೦ ರಲ್ಲಿ ಕಾಡಜಕನಹಳ್ಳಿಯನ್ನು ರಕ್ತ ಕೊಡುಗೆಯಾಗಿ[೫೧೨], ಕ್ರಿ.ಶ.೧೬೦೨ ರಲ್ಲಿ ಎರಮಾದನಿಗೆ ರಕ್ತ ಕೊಡುಗೆಯಾಗಿ[೫೧೩], ಕ್ರಿ.ಶ.೧೬೧೮ ರಲ್ಲಿ ಯಲಪನಹಳ್ಳಿ ಗಬಿಗೆ ನೆತ್ತರ ಕೊಡುಗೆಯಾಗಿ[೫೧೪], ಕ್ರಿ.ಶ.೧೬೨೪ ರಲ್ಲಿ ಕಾಳನಾಯಕನಹಳ್ಳಿ ಗ್ರಾಮವನ್ನು ನೆತ್ತರ ಕೊಡುಗೆಯಾಗಿ[೫೧೫], ಕ್ರಿ.ಶ.೧೫೮೯ ರಲ್ಲಿ ಬೆಂನಯಗೆ ನೆತ್ತರ ಕೊಡುಗೆಯಾಗಿ[೫೧೬]. ಕೊಟ್ಟನು. ಕ್ರಿ.ಶ.೧೬೦೩ ರಲ್ಲಿ ಆನೇಕಲ್‌ನಲ್ಲಿ

---

[೫೦೯] ಪಿ.ವಿ.ಕೃಷ್ಣಮೂರ್ತಿ:- ಸುಗುಟೂರು ಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ-೩೬೭.

[೫೧೦] ಎ.ಕ-೯, ಅನುಬಂಧ, ಮು.ತಾ.೩೦೦, ಕ್ರಿ.ಶ.೧೬೩೦, ಅವನಿ,

[೫೧೧] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ:-ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೨.

[೫೧೨] ಎ.ಕ-೯, ಆ.ತಾ.೭೧, ಕ್ರಿ.ಶ. ೧೬೦೦, ಕಾಡಜಕನಹಳ್ಳಿ.

[೫೧೩] ಎ.ಕ-೯, ಹೊ.ತಾ.೫೪, ಕ್ರಿ.ಶ.೧೬೦೨, ಸೂಲಿಬೆಲೆ.

[೫೧೪] ಎ.ಕ-೯, ಹೊ.ತಾ.೧೫೦, ಕ್ರಿ.ಶ.೧೬೧೮, ದೊಡ್ಡ ಬನಹಳ್ಳಿ.

[೫೧೫] ಎ.ಕ-೯, ಆ.ತಾ.೫೮, ಕ್ರಿ.ಶ.೧೬೨೪, ಕಾಮನಾಯಕನಹಳ್ಳಿ.

[೫೧೬] ಮುನಿರತ್ನ.ಕೆ.ಹೆಚ್:- ಚಿಕ್ಕಬಳ್ಳಾಪುರಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಕೈವಾರದ ಸುಗುಟೂರು ಅರಸರ ಅಪ್ರಕಟಿತ ಶಾಸನ:-ಇ.ದ.೨೭, ಪು.ಸಂ-೮೦.

ಕೋಟೆಯನ್ನು ಕಟ್ಟಿಸಿದನು[೨೧೭]. ಕ್ರಿ.ಶ.೧೬೧೪ರಲ್ಲಿ ವೀರ ರಾಮದೇವ ಮಹಾರಾಯ ಅಯ್ಯನವರು ಪೆನುಗೊಂಡೆಯಲ್ಲಿ ರತ್ನ ಸಿಂಹಾಸನ ರೂಢರಾಗಿ ಸದಾಶಿವ ಗೋತ್ರದ ಸುಗುಟೂರು ನಾಡಪ್ರಭುಗಳಾದ ಮುಮ್ಮಡಿ ತಮ್ಮಪ್ಪಗೌಡರು ಹಲಸಿಹಳ್ಳಿ ಗ್ರಾಮ & ತಿಪ್ಪಸಂದ್ರ ಗ್ರಾಮವನ್ನು ಕಾಡು ಭಾರತಿ ತಿಮ್ಮಯ್ಯಗೆ ಪ್ರೀತಿಯಾಗಿ ಕೊಟ್ಟರು[೨೧೮]. ಸೆಜ್ಜೆ ಸಿದ್ಧ ಲಿಂಗದೇವರ ಮಗನು ಗುರು ಬಸವಣ್ಣ ಮಠಕ್ಕೆ[೨೧೯], ಕ್ರಿ.ಶ.೧೬೩೨ ರಲ್ಲಿ ಕರಪಹಳ್ಳಿಯಲ್ಲಿ ಕಟ್ಟೆ ಕಟ್ಟಿಸಿರಬೇಕು[೨೨೦]. ಕ್ರಿ.ಶ.೧೬೬೧ ರಲ್ಲಿ ಬಸವರಾಜ ದೇವರಯ್ಯನವರಿಗೆ ದೊಡ್ಡನಲ್ಲೂರ ನಮ್ಮ ಇಮ್ಮಡಿ ತೆಂಕಗೌಡರಿಗೆ ಪುಣ್ಯವಾಗಬೇಕೆಂದು ಕೊಟ್ಟ ಧರ್ಮ ಶಾಸನ[೨೨೧].

ಕ್ರಿ.ಶ.೧೬೯೩ ರಲ್ಲಿ ಶ್ರೀರಂಗ ಮಹಾರಾಯರು ಘನಗಿರಿ ದುರ್ಗದಲ್ಲಿ ರತ್ನ ಸಿಂಹಾಸನ ರೂಢರಾಗಿ ಮುಮ್ಮಡಿ ಚಿಕ್ಕ ತಮ್ಮೇಗೌಡರ ಪೌತ್ರರಾದ ಚಿಕ್ಕರಾಯ ತಮ್ಮೇಗೌಡರ ಪುತ್ರರಾದ ಮುಮ್ಮಡಿ ಚಿಕ್ಕರಾಯ ತಮ್ಮೇಗೌಡರಯ್ಯನವರು ಆನೇಕಲ್ಲು ವುಭಯ ಪೇಟೆಯಲ್ಲಿರುವಂತಹ ಶೆಟ್ಟಿ ವರ್ತಕರು ಮುಂತಾದ ಸಮಸ್ತ ಫಣ ಕಟ್ಟು ಜನರಿಗೆ ದೇಶದ ಪೇಟೆಯಲ್ಲಿ ನಂದಿಕೋಲು ಮೆರವಣಿಗೆ ನಿಮಿತ್ಯವಾಗಿ ನಗರ್ತಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆ ನಿಮಿತ್ಯವಾಗಿ ಸಮಯಗಾರ ಮುತ್ತದಾನರಿ ಮೂಲಕದಿಂದ ಕಲಹ ಬಂದು ಕಲಹ ನಿವಾರಣೆ ಮಾಡಿದ ಹೊಸಕೋಟೆ ಸ್ಥಳದ ವೆಂಕಟಾಚಾರ್ಯರಿಗೆ ಕೊಟ್ಟ ಭೂದಾನ ಧರ್ಮ ಶಾಸನ[೨೨೨] ಮುಮ್ಮಡಿ ತಮ್ಮೇಗೌಡನು ಅವಿಮುಕ್ತೇಶ್ವರ ದೇವಾಲಯವನ್ನು ಕಟ್ಟಿಸಿದ್ದನು[೨೨೩].

ಕ್ರಿ.ಶ.೧೭೭೨ ರಲ್ಲಿ ಹೊಸಕೋಟೆ ವರ್ತಕರ ವೃಂದದವರು ಹೊಸಕೋಟೆ ಕಿಲ್ಲೆಯೊಳಗೆ ನೂತನವಾಗಿ ದೇವಸ್ಥಾನ ಕಟ್ಟಿಸಿ ಪಡಿತರ ದೀಪಾರಾಧನೆಗಳಿಗೆ[೨೨೪], ಕ್ರಿ.ಶ.೧೭೭೧ರಲ್ಲಿ ಮೊದಲಾದ ೫೬ ದೇಶದ ಬಾರಾಮಾರ್ಗದವರು ಹೊಸಕೋಟೆ ಪೇಟೆಗೆ ಬರುವ ವಸ್ತುಗಳ ಮೇಲಿನ ತೆರಿಗೆಗಳನ್ನು[೨೨೫] ಕೊಟ್ಟನು. ಕ್ರಿ.ಶ.೧೬೩೮ರಲ್ಲಿ ಬಿಜಾಪುರ ಸುಲ್ತಾನನರ ದಾಳಿಯಿಂದ ಷಹಾಜಿಗೆ ಹೊಸಕೋಟೆಯನ್ನು ಜಹಾಂಗಿರಾಗಿ ಕೊಟ್ಟರು[೨೨೬]. ಷಹಾಜಿ ಮತ್ತು ಸುಗಟೂರು ವಂಶಿಯರ ಮಧ್ಯ ಏರ್ಪಾಟ್ಟ ಕರಾರಿನಂತೆ

---

[೨೧೭] Suryanath.U.Kamath :- Karnataka State Gazetter, Bangalore Rural District, Page.no-73.

[೨೧೮] ಎ.ಕ-೯, ಆ.ತಾ. ೪೭, ಕ್ರಿ.ಶ.೧೬೧೪, ಆನೇಕಲ್ಲು ತಾಮ್ರಶಾಸನ.

[೨೧೯] ಎ.ಕ-೯, ಅನುಬಂಧ, ಹೊ.ತಾ.೧೭೨, ಗೊಣಕನಹಳ್ಳಿ.

[೨೨೦] ಎ.ಕ-೯, ಹೊ.ತಾ.೭೮, ಕ್ರಿ.ಶ.೧೬೩೨, ಮುಮ್ಮಯಿ ಹೊಸಹಳ್ಳಿ.

[೨೨೧] ಎ.ಕ-೯, ಹೊ.ತಾ.೭೯, ಕ್ರಿ.ಶ.೧೬೬೧, ದೊಡ್ಡ ನಲ್ಲೂರು.

[೨೨೨] ಎ.ಕ-೯, ಹೊ.ತಾ.೧೦೫, ಕ್ರಿ.ಶ.೧೬೯೩, ತಾಮ್ರ ಪಟ ಹೊಸಕೋಟೆ.

[೨೨೩] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೩.

[೨೨೪] ಎ.ಕ-೯, ಅನುಬಂಧ, ಹೊ.ತಾ.೧೬೭, ಕ್ರಿ.ಶ.೧೭೭೨, ಹೊಸಕೋಟೆ.

[೨೨೫] ಎ.ಕ-೯, ಹೊ.ತಾ.೧೬೬, ಕ್ರಿ.ಶ.೧೭೭೧, ಹೊಸಕೋಟೆ.

[೨೨೬] Suryanath.U.Kamath :- Karnataka State Gazetter, Bangalore Rural District, Page.no-73.

ಹೊಸಕೋಟೆ, ಜಂಗಮಕೋಟೆ, ಸುಗಟೂರು, ಕೋಲಾರ ಪ್ರದೇಶಗಳನ್ನು ಷಹಾಜಿ ಉಳಿಸಿಕೊಂಡು, ಬಸವಗೌಡನ ಪೋಷಕರಾದ ಆತನ ಸೋದರತ್ತೆ ಹಲಸಮ್ಮನಿಗೆ ಪುಂಗನೂರು, ಸದ್ದಮು, ಕುಂದೂರು, ಪೀಳೇರ್, ಗೂಟಿಕಲ್ ಪ್ರದೇಶಗಳನ್ನು, ಹೊಸಕೋಟೆ ಆಳುತ್ತಿದ್ದ ಚಿಕ್ಕರಾಯ ಮುಮ್ಮಡಿ ತಮ್ಮೇಗೌಡನಿಗೆ ಆನೆಮಲೆ ಪ್ರದೇಶವನ್ನು ಮಾತ್ರ ನೀಡಲಾಗಿತ್ತು. ಮುಮ್ಮಡಿ ತಮ್ಮೇಗೌಡನು ಆನೆಮಲೆಯಲ್ಲಿ ಕೋಟೆಯನ್ನು, ಅಮೃತ ಮಲ್ಲಿಕಾರ್ಜುನ ದೇವಾಲಯ, ತಮ್ಮಾಂಬುಧಿ ಎಂಬ ದೊಡ್ಡ ಕೆರೆಯನ್ನು, ತಮ್ಮಪುರವೆಂಬ ಅಗ್ರಹಾರವನ್ನು ಮಾಡಿಸಿ ಆ ಸ್ಥಳಕ್ಕೆ ಆನೇಕಲ್ಲು ಎಂದು ನಾಮಕರಣ ಮಾಡಿದನು. ಅನಂತರ ಅತ್ತಿಬೆಲೆ, ಬಿಳಗೊಂಡನಹಳ್ಳಿಯಲ್ಲಿ ಕೋಟೆಗಳನ್ನು ನಿರ್ಮಿಸಿದನು.

ಕ್ರಿ.ಶ.೧೬೪೨ರ ಸುಮಾರಿಗೆ ಮುಮ್ಮುಡಿ ತಮ್ಮೇಗೌಡನು ಶಿವೈಕ್ಯನಾಗಿರಬೇಕು. ಅನಂತರ ಮಗನಾದ ಮುಮ್ಮಡಿ ಕರುಡು ತಮ್ಮೇಗೌಡನು ಮರಾಠರ ಅಧೀನನಾಗಿ ತಮ್ಮ ಆಳ್ವಿಕೆಯನ್ನು ಮುಂದುವರೆಸುತ್ತಾರಿರುವಾಗಲೇ ಕ್ರಿ.ಶ.೧೬೮೬ರಲ್ಲಿ ಹೊಸಕೋಟೆಯು ಮೊಘಲರ ವಶವಾಯಿತು. ಕ್ರಿ.ಶ.೧೬೯೩ರ ನಂತರ ಚಿಕ್ಕರಾಯ ತಮ್ಮೇಗೌಡನ ಮಗನಾದ ಚಿಕ್ಕರಾಯ ತಮ್ಮೇಗೌಡನನ್ನು ಪ್ರಸ್ತಾಪಿಸುತ್ತದೆ[೫೨೭]. ಕ್ರಿ.ಶ.೧೭೦೬ರಲ್ಲಿ ಹೊಸಕೋಟೆ ತಾಲ್ಲೂಕಿನ ಬಸನಹಳ್ಳಿ ಮತ್ತು ಕಟ್ಟಿಗೇನಹಳ್ಳಿ ಗ್ರಾಮಗಳಲ್ಲಿ ಶಿವನೇಗೌಡ ಎಂಬುವನನ್ನು ಪ್ರಸ್ತಾಪಿಸುತ್ತದೆ. ಶಿವಾಚಾರ ಸಂಪದರಾದ ಸುಗುಟೂರು ಶಿವನೆಗೌಡರು ಶರಣು ಮಾಡಿಕೊಟ[೫೨೮] ಬಿಶೀಲನಹಳ್ಳಿಯ ಕೆಂಪಣ್ಣಗೌಡರಿಗೆ ಕೊಟ್ಟ ಕೆರೆ ಕೊಡುಗೆ[೫೨೯].

ಅನಂತರದಲ್ಲಿ ವೀರ ನಂಜುಂಡ ತಮ್ಮೇಗೌಡನು ಪಟ್ಟಕ್ಕೆ ಬಂದನು. ಕ್ರಿ.ಶ.೧೭೫೮ರಲ್ಲಿ ಹೈದರಾಲಿ ಆನೇಕಲ್ಲನ್ನು ಗೆದ್ದು ಈತನನ್ನು ೩೪ ವರ್ಷಗಳ ಕಾಲ ಬೆಂಗಳೂರಿನ ಸೆರೆಮನೆಯಲ್ಲಿಟ್ಟನು. ಕ್ರಿ.ಶ.೧೭೯೧ರಲ್ಲಿ ಬ್ರಿಟಿಷರು ಬೆಂಗಳೂರನ್ನು ವಶಪಡಿಸಿಕೊಂಡ ನಂತರ ವೀರ ನಂಜುಂಡ ತಮ್ಮೇಗೌಡನ ಮಗನಾದ ಮುಮ್ಮಡಿ ಐಮ ಗೌಡನಿಗೆ ಸನ್ನದು ನೀಡಲಾಯಿತು ಮಕ್ಕಳಿಲ್ಲದ ಚಿಕ್ಕರಾಯನನ್ನು ದತ್ತುಗೆ ತೆಗೆದುಕೊಂಡನು. ನಂತರದಲ್ಲಿ ಚಿಕ್ಕರಾಯನ ಪತ್ನಿ ಚೊಕ್ಕಮ್ಮಣ್ಣಿಗೆ ಮುಮ್ಮುಡಿ ಕೃಷ್ಣರಾಜ ಒಡೆಯರ್ ಪೆನ್ಷನ್ ೧೮೧೫ ರಲ್ಲಿ ಮಂಜೂರು ಮಾಡಲಾಯಿತು. ಚಿಕ್ಕರಾಯನ ಮಗನಾದ ವೀರ ಚಿಕ್ಕರಾಜಯ್ಯನು ೧೮೬೦ ರವರೆಗೂ, ಅನಂತರ ಅವನ ಪತ್ನಿ ಅಕ್ಕಾಜಮ್ಮಣ್ಣಿಯು ೧೮೯೩ ರವರೆಗೆ ಹಾಗೂ ಆ ವಂಶವು ಸ್ವಾತಂತ್ರ್ಯ ಬರೋವರೆಗೂ ಪೆನ್ಷನ್ನಿಗೆ ಅರ್ಹನಾಗಿ ಮುಂದುವರೆದಿದ್ದರು[೫೩೦].

[೫೨೭] ಪಿ.ವಿ.ಕೃಷ್ಣಮೂರ್ತಿ:- ಸುಗುಟೂರು ಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ-೩೬೮.
[೫೨೮] ಎ.ಕ-೯, ಅನುಬಂಧ, ಹೊ.ತಾ.೧೮೧, ಕಟ್ಟಿಗೆಹಳ್ಳಿ.
[೫೨೯] ಎ.ಕ-೯, ಅನುಬಂಧ, ಹೊ.ತಾ.೧೮೭, ಬಿಸನಹಳ್ಳಿ.
[೫೩೦] ಪಿ.ವಿ.ಕೃಷ್ಣಮೂರ್ತಿ:- ಸುಗುಟೂರು ಪ್ರಭುಗಳು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.ಸಂ-೩೬೯, ೩೭೦.

## ೩.೧೦ ಮರಾಠರು

ಕ್ರಿ.ಶ.೧೬೩೬ರ ನಂತರ ಬಿಜಾಪುರದ ಆದಿಲ್ ಷಾಹಿನ ಸೇನಾಧಿಪತಿ ರಣದುಲ್ಲಾಖಾನನು ಮತ್ತು ಮರಾಠನಾಯಕ ಷಹಜಿ ಭೋಸ್ಲೆಯು ಜೊತೆಗೂಡಿ ಬೆಂಗಳೂರು ಮಾರ್ಗದಲ್ಲಿದ್ದ[೫೩೧] ಸಿರಾ ಒಡೆಯನಾಗಿದ್ದ ಕಸ್ತೂರಿ ರಂಗಪ್ಪ ನಾಯಕನನ್ನು ಕೊಂದು, ಸಿರಾ ಪಟ್ಟಣವನ್ನು ವಶಪಡಿಸಿಕೊಂಡರು. ನಂತರ ತುಮಕೂರನ್ನು ಕೊಳ್ಳೆ ಹೊಡೆದರು. ಶಿವಗಂಗೆಯ ಆಕ್ರಮಣದಲ್ಲಿ ಇಮ್ಮಡಿ ಕೆಂಪೇಗೌಡನು ಷಹಜಿಯ ವಿರುದ್ಧ ವೀರಾವೇಶದಿಂದ ಹೊರಾಡಿ ರಣರಂಗದಿಂದ ಪಲಾಯನ ಗೈದು ಬೆಂಗಳೂರು ಕೋಟೆಯಲ್ಲಿ ಅಡಗಿದರೂ ಬಿಡದೆ ಬೆನ್ನಟ್ಟಿ ಸೋಲಿಸಿದನು[೫೩೨]. ಇದರಿಂದಾಗಿ ಕ್ರಿ.ಶ.೧೬೩೮ ರಲ್ಲಿ ಕೋಟೆಯನ್ನು ಒಳಗೊಂಡ ಬೆಂಗಳೂರು, ದೊಡ್ಡಬಳ್ಳಾಪುರ, ಹೊಸಕೋಟೆ, ಚಿಕ್ಕಬಳ್ಳಾಪುರ, ಕೋಲಾರ ಪ್ರದೇಶಗಳನ್ನು ವಶಪಡಿಸಿಕೊಂಡರು. ನಂತರ ಸುಲ್ತಾನನು ಈ ಪ್ರದೇಶವನ್ನು ನೋಡಿಕೊಳ್ಳಲು ಷಹಜಿಯನ್ನು ರಾಜ್ಯಪಾಲನನ್ನಾಗಿ ನೇಮಿಸಿದನು. ಷಹಜಿ ಮತ್ತು ಹಿರಿಯ ಹೆಂಡತಿ ಜಿಜಾಬಾಯಿ ಮಗನಾದ ಶಿವಾಜಿಯು[೫೩೩] ಷಹಜಿಯ ಮತ್ತೊಂದು ಜಾಗೀರಾದ ಪುಣೆ ಸಮೀಪದಲ್ಲಿ ವಾಸವಿದ್ದು ಚಿಕ್ಕವಯಸ್ಸಿನಲ್ಲಿ ಶಿವಾಜಿಯು ಬೆಂಗಳೂರಿನಲ್ಲಿ ಇದ್ದನು. ಕ್ರಿ.ಶ.೧೬೪೦–೪೨ರಲ್ಲಿ ಶಿವಾಜಿಯು ಸಯೀಬಾಯಿಯನ್ನು ಬೆಂಗಳೂರಿನಲ್ಲಿಯೇ ವಿವಾಹವಾಗಿದ್ದನು[೫೩೪]. ಕ್ರಿ.ಶ.೧೬೪೮ರಲ್ಲಿ ಶಿವಾಜಿಯು ಬಿಜಾಪುರದ ಸುಲ್ತಾನರ ವಿರುದ್ಧ ದಂಗೆ ಎದ್ದಾಗ, ಸುಲ್ತಾನರು ಷಹಜಿಯನ್ನು ಕ್ರಿ.ಶ.೧೬೪೮ ರಲ್ಲಿ ಬಂಧಿಸಿ, ಬಿಜಾಪುರದ ಸೆರೆ ಮನೆಯಲ್ಲಿಟ್ಟಿದ್ದರು. ಈ ಸಂದರ್ಭದಲ್ಲಿ ಮೈಸೂರು ಕಂಠೀರವನು ಮಾಗಡಿಯನ್ನು ಕೆಂಪೇಗೌಡನಿಂದ ಕಸಿದು ಕೊಂಡನು[೫೩೫]. ಅನಂತರ ಸುಲ್ತಾನರು ಕ್ರಿ.ಶ.೧೬೪೯ರಲ್ಲಿ ಷಹಜಿಯನ್ನು ಬಿಡುಗಡೆಗೊಳಿಸಿ[೫೩೬]. ಬೆಂಗಳೂರು, ಹೊಸಕೋಟೆ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಚಿಂತಾಮಣಿ, ಕೋಲಾರ, ಸಿರಾ ಪ್ರದೇಶಗಳನ್ನು ಜಾಹಗೀರಾಗಿ[೫೩೭] ನೀಡಿದಾಗಲೇ ಕರ್ನಾಟಕದಲ್ಲಿ ಮರಾಠಿಗರ ರಾಜಕೀಯ ಚಟುವಟಿಕೆ ಆರಂಭವಾಗಿ ಮರಾಠಿ ಸಂಸ್ಕೃತಿಯು ಹರಡಲು ಕಾರಣವಾಯಿತು.

ಷಾಹಜಿಯು ಕಿರಿಯ ಪಾಳೇಗಾರರನ್ನು ಹತ್ತಿಕ್ಕಿ ಕ್ರಮೇಣ ತಾನೇ ಅಧಿಕಾರ ನಡೆಸಲು ಪ್ರಾರಂಭಿಸಿದನು[೫೩೮]. ಬೆಂಗಳೂರು ಸುತ್ತ ಮುತ್ತಲಿನ ನಗರ, ರಾಜ್ಯಗಳು ಎನಿಸಿದ್ದ ಕುಣಿಗಲ್ಲು,

---

[೫೩೧] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೪೭.

[೫೩೨] ಡಾ.ಎಸ್.ವೆಂಕಟೇಶ:-ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪುಟ-೨೨೫.

[೫೩೩] Suryanath.U.Kamath :- Karnataka State Gazetter, Bangalore Rural District, Page.no-77.

[೫೩೪] ಡಾ.ಎಸ್.ಹೆಚ್.ಕೆಂಪರಾಜು :- ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೬೦.

[೫೩೫] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೨೩.

[೫೩೬] ಡಾ.ಎಸ್.ಹೆಚ್.ಕೆಂಪರಾಜು :- ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೬೦.

[೫೩೭] Suryanath.U.Kamath :- Karnataka State Gazetter, Bangalore Rural District, Page.no-76.

[೫೩೮] ಡಾ.ಎಚ್.ಗುಡ್ಡದೇಶ್ವರಪ್ಪ :- ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೪೬.

ಚಿಕ್ಕನಾಯಕನಹಳ್ಳಿ, ರಾಮಗಿರಿದುರ್ಗ, ತುರುವೆಕೆರೆ, ಬಸವಪಟ್ಟನ, ಮುಂತಾದ ಪ್ರದೇಶಗಳೆಲ್ಲಾ ಒಂದೊಂದಾಗಿ ಷಹಜಿಯ ಆಳ್ವಿಕೆಗೆಯ ವ್ಯಾಪ್ತಿಗೆ ಒಳಪಟ್ಟಿತು. ಷಹಜಿಯು ಬೆಂಗಳೂರಿನ ಚಿಕ್ಕಪೇಟೆಯಲ್ಲಿನ ಗೌರಿಮಹಲ್ ಎಂಬ ಅರಮನೆಯಲ್ಲಿ ವಾಸವಿದ್ದನು[೫೩೯]. ಬೇಸಿಗೆಯಲ್ಲಿ ನಂದಿಬೆಟ್ಟ, ಯುದ್ಧಗಳಲ್ಲದ ಸಮಯದಲ್ಲಿ ದೊಡ್ಡಬಳ್ಳಾಪುರ ಮತ್ತು ಕೋಲಾರ ತಂಗುದಾಣವಾಗಿತ್ತು. ಷಹಜಿಯು ದಖ್ಖನಿನ ಆಡಳಿತ ಬದಲಾಗಿ ವಿಜಯನಗರ ಆಡಳಿತ ಪದ್ಧತಿಯನ್ನು ಅನುಸರಿಸಿದನು. ರಾಜ್ಯ, ನಾಡು, ಸೀಮೆ, ಹೋಬಳಿ, ಗ್ರಾಮ ಎಂಬ ಸ್ಥಳೀಯ ಹೆಸರುಗಳನ್ನು ಒಳಗೊಂಡ ಆಡಳಿತ ವಿಭಾಗಗಳನ್ನು ಶಾಸನಗಳಲ್ಲಿ ಕಾಣಬಹುದು. ಹಾಗೆಯೇ ಆಡಳಿತಲ್ಲಿನ ದೇಶಮುಖ, ದೇಶ ಪಾಂಡೆ, ದೇಶ ಕುಲಕರ್ಣಿ, ಕನಂಗೊ, ಸರನಾಡಗೌಡ ಮುಂತಾದ ಉನ್ನತ ಹುದ್ದೆಗಳನ್ನೆಲ್ಲಾ ಮರಾಠಿಗರಿಗೆ ಮೀಸಲಟ್ಟಿದ್ದನು. ಷಹಜಿಯು ಕನಕಗಿರಿಗೆ ಹೋಗಿದ್ದಾಗ ಜೀಜಾಬಾಯಿಯ ಹಿರಿಯ ಮಗ ಸಾಂಭಾಜಿಯು, (ಶಿವಾಜಿಯ ಅಣ್ಣ) ದೊಡ್ಡಬಳ್ಳಾಪುರದಿಂದ ತುಕಾಬಾಯಿ ಮೋಹಿತೆಯ ಮಗ ಏಕೋಜಿಯು, ಬೆಂಗಳೂರಿನಿಂದ ಮಣುಕೋಜಿಯು, ಹೊಸಕೋಟೆಯಿಂದ ಷಹಜಿಯ ಮಕ್ಕಳು ತಂದೆಯ ಗೈರು ಹಾಜರಿನಲ್ಲಿ ಜಹಾಗೀರನ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು[೫೪೦].

ಸಾಹೂಜಿ ಮಹಾರಾಜರ ಅಪ್ಪಣೆಯ ಮೇರೆಗೆ ಪಾರುಪತ್ಯಗಾರ ತುಕಾರಾಮ ರಾವುತರು ಶಿವಗಂಗೆಯ ಗಂಗಾಧರ ಸ್ವಾಮಿಯ ಸನ್ನಿಧಿಯಲ್ಲಿ ಕ್ರಿ.ಶ.೧೬೫೨ ಶಿವಗಂಗೆ ಬೆಟ್ಟದಲ್ಲಿ ಕಣುವ ತೀರ್ಥವನ್ನು ಕಟ್ಟಿಸಿದರು[೫೪೧]. ಅಬಾರಕಖಾನ ಮಹಾರಾಜ ರಾಜ ಶಾಹೂಜಿ (ಷಹಜಿ) ಸಾಹೇಬರು ತಮಗೆ ಧರ್ಮವಾಗಬೇಕೆಂದು ಬಾವಾನೂರ ಅಹಂಮದ್ದರಿಗೆ ದಾನ ಕೊಟ್ಟರು[೫೪೨]. ಈ ಶಾಸನದಲ್ಲಿ ಶಾಹೂಜಿಗೆ ಅಬಾರಕಖಾನ್ ಎಂಬ ಬಿರುದಿರುವುದನ್ನು ಗಮನಿಸಬಹುದು. ಹಾಗೂ ಬಿಜಾಪುರ ಸುಲ್ತಾನನ್ನು ಸಂತೃಪ್ತಿ ಪಡಿಸಲು ಮುಸ್ಲಿಂರಿಗೆ ದಾನ ನೀಡಿರಬೇಕು.

ಕ್ರಿ.ಶ.೧೬೬೩ ರಲ್ಲಿ ಬಹ್ಲೋಲ್‌ಖಾನ್‌ನ ಜೊತೆ ಕೆಳದಿಗೆ ದಂಡೆತ್ತಿ ಹೋದ ಷಹಜಿಯು ಅಲ್ಲಿಂದ ಮರಳುವಾಗ ಚನ್ನಗಿರಿ ತಾಲ್ಲೂಕಿನ ಹೂಡಿಗೆರೆಯಲ್ಲಿ ಕ್ರಿ.ಶ.೧೬೬೪ ರಲ್ಲಿ ಮರಣ ಹೊಂದಿದ್ದಕ್ಕೂ ಈಗಲೂ ಅಲ್ಲಿ ಷಹಜಿಯ ಸಮಾಧಿ ಇದೆ[೫೪೩].

---

[೫೩೯] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೨.

[೫೪೦] ಡಾ.ಎಸ್.ವೆಂಕಟೇಶ:- ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ, ಪು.ಸಂ-೨೨೬, ೨೨೭.

[೫೪೧] ಎ.ಕ-೯, ಅನುಬಂಧ, ನೆ.ತಾ.೧೨೭, ಕ್ರಿ.ಶ.೧೬೫೨, ಕಣ್ವ ತೀರ್ಥದ ಬಂಡೆಯ ಮೇಲೆ ಶಿವಗಂಗೆ.

[೫೪೨] ಎ.ಕ-೯, ನೆ.ತಾ.೬೯, ಕ್ರಿ.ಶ.೧೬೫೨, ಲಕ್ಕೂರು.

[೫೪೩] Suryanath.U.Kamath :- Karnataka State Gazetter, Bangalore Rural District, Page.no-77.

## ಸಾಂಭಾಜಿ

ಷಹಜಿ ಮತ್ತು ಜೀಜಾಬಾಯಿಯ ಜೇಷ್ಟ ಪುತ್ರನಾಗಿ ಕ್ರಿ.ಶ.೧೬೧೯ ರಲ್ಲಿ ಹುಟ್ಟಿದ ಸಾಂಭಾಜಿರಾಯನ ಶಾಸನಗಳು ದೊಡ್ಡಬಳ್ಳಾಪುರ, ನೆಲಮಂಗಲ, ಚಿಕ್ಕಬಳ್ಳಾಪುರ, ಕೋಲಾರಗಳಲ್ಲಿ ದೊರೆತಿವೆ. ತಂದೆ ಷಹಜಿಯ ಅಧಿಕಾರಾವಧಿಯಲ್ಲಿ ಪ್ರಾಂತ್ಯಾಢಳಿತದಲ್ಲಿ ಸಲಹೆಗಾರನಾಗಿ, ತಂದೆಯ ಅನುಪಸ್ಥಿತಿಯಲ್ಲಿ ದೊಡ್ಡಬಳ್ಳಾಪುರದಲ್ಲಿ ಜಾಹಗೀರನಾಗಿ ಆಳ್ವಿಕೆ ನಡೆಸಿದನು. ಜಯಂತಿಬಾಯಿಯನ್ನು ಮದುವೆ ಆಗಿದ್ದನು, ಕನ್ನರಾಯ ಎಂಬ ಮಗನಿದ್ದನು.

ಸಾಂಭಾಜಿರಾಯನು ವೀರಶೈವ ಮಠವಾದ ಸಜಿ ಮಠದ ಚನ್ನಬಸಪ್ಪ ಒಡೆಯರಿಗೆ ಕ್ರಿ.ಶ.೧೬೪೭ರಲ್ಲಿ ಹಂಚಿಪುರವನ್ನು ದಾನ ನೀಡಿದನು[೫೪೪]. ಕ್ರಿ.ಶ.೧೬೫೪ ರಲ್ಲಿ ಸಾಂಭಾಜಿ ಮರಣದ ನಂತರ ಅಧಿಕಾರವನ್ನು ಜೈತಬಾಯಿಯು ನೋಡಿ ಕೊಳ್ಳುತ್ತಿದ್ದಳು[೫೪೫]. ಕ್ರಿ.ಶ.೧೬೬೪ರಲ್ಲಿ ಷಹಜಿಯ ಮರಣದ ನಂತರ ಏಕೋಜಿರಾಯನು ಬೆಂಗಳೂರಿನ ಜಹಾಂಗಿರನಾಗಿ ಕ್ರಿ.ಶ.೧೬೬೯ರಲ್ಲಿ ಮಲ್ಲಾಪುರ (ಮಲ್ಲೇಶ್ವರಂ) ದ ಮಲ್ಲಿಕಾರ್ಜುನ ದೇವರಿಗೆ ನಿಂಗನಹಳ್ಳಿ ಎಂಬ ಗ್ರಾಮವನ್ನು ದಾನ ನೀಡಿದನು[೫೪೬].

ಮಧುರೆಯ ವ್ಯವಹಾರಕ್ಕೆ ಸಂಬಂಧಿಸಿದಂತೆ ಏಕೋಜಿಗೂ ಮೈಸೂರಿನ ದೊಡ್ಡದೇವರಾಯನೊಂದಿಗೆ ನಡೆದ ಯುದ್ಧದಲ್ಲಿ ಏಕೋಜಿಯು ಸೋತನು. ಕ್ರಿ.ಶ.೧೬೭೫ರಲ್ಲಿ ಏಕೋಜಿಯು ತಂಜಾವೂರನ್ನು ಗೆದ್ದು ಅಲ್ಲಿಯೇ ಇರಲಾರಂಭಿಸಿದನು[೫೪೭]. ಹಾಗೂ ಏಕೋಜಿಯು ಕ್ರಿ.ಶ.೧೬೭೭ರಲ್ಲಿ ಚಿಕ್ಕದೇವರಾಜ ಒಡೆಯರಿಗೆ ಬೆಂಗಳೂರನ್ನು ೩ ಲಕ್ಷ ವರಹಗಳಿಗೆ ಮಾರಲು ನಿರ್ಧರಿಸಿದನು[೫೪೮]. ಈ ವಿಷಯವನ್ನು ತಿಳಿದ ಶಿವಾಜಿಯು ಕ್ರಿ.ಶ.೧೬೭೭ರಲ್ಲಿ ಸೈನ್ಯ ಸಮೇತವಾಗಿ ಬಂದು ಬೆಂಗಳೂರನ್ನು ವಶಪಡಿಸಿಕೊಂಡ ನಂತರ ಏಕೋಜಿಯ ಹೆಂಡತಿಗೆ ಬೆಂಗಳೂರು, ಹೊಸಕೋಟೆಯನ್ನು ದಾನ ನೀಡಿ[೫೪೯]. ನಂದಿಬೆಟ್ಟ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಕೋಲಾರವನ್ನು ತನ್ನ ಅಧೀನದಲ್ಲಿಟ್ಟು ಕೊಂಡನು. ನಂತರ ಶಿವಾಜಿಯ ಮಗ ಸಂಭಾಜಿಯ ಕೈ ಸೇರಿತ್ತು[೫೫೦]. ನಂತರ ಕ್ರಿ.ಶ.೧೬೮೭-೮೯ರಲ್ಲಿ ಮೊಘಲರು ಈ ಪ್ರದೇಶಗಳನ್ನು ಗೆಲ್ಲೊವರೆಗೂ ಬೆಂಗಳೂರು ಜಿಲ್ಲೆಯಲ್ಲಿದ್ದ

---

[೫೪೪] ಎ.ಕ-೯, ದೊ.ತಾ.೨೮, ಕ್ರಿ.ಶ. ೧೬೪೭, ಹಂಚರಹಳ್ಳಿ.

[೫೪೫] Suryanath.U.Kamath :- Karnataka State Gazetter, Bangalore Rural District, Page.no-77.

[೫೪೬] ಎ.ಕ-೯, ಅನುಬಂಧ, ಬೆಂ.೧೫೯, ಕ್ರಿ.ಶ.೧೬೬೯, ಮಲ್ಲೇಶ್ವರಂ.

[೫೪೭] Suryanath.U.Kamath :- Karnataka State Gazetter, Bangalore Rural District, , Page.no-77.

[೫೪೮] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೩.

[೫೪೯] Suryanath.U.Kamath :- Karnataka State Gazetter, Bangalore Rural District, Page.no-77.

[೫೫೦] ಕೆ.ಚಂದ್ರಮೌಳಿ:- ಬೆಂಗಳೂರಿನ ನೋಟುಗಳು ಪು.ಸಂ-೨೭.

ಸಂಭಾಜಿಯ ಭಾವ ಹರಜಿ ರಾಜೇಮಹಾದಿಕ್‌ನ ಆಳ್ವಿಕೆಯ ಪ್ರದೇಶಗಳಾಗಿದ್ದವು[೫೫೧]. ಬೆಂಗಳೂರನ್ನು ಮೊಘಲರು ಆಕ್ರಮಿಸಿಕೊಳ್ಳುವುದರೊಂದಿಗೆ ಮರಾಠಿಗರ ಆಡಳಿತ ಅಂತ್ಯಗೊಂಡ ನಂತರವೂ ಮರಾಠರ ಶಾಸನಗಳು ಜಿಲ್ಲಾ ವ್ಯಾಪ್ತಿಯಲ್ಲಿ ದೊರೆತಿದೆ. ಬಹುಶಃ ಸಾಮಂತರು ಅಥವಾ ಅಧಿಕಾರಿಗಳಾಗಿ ಅಥವಾ ಮಂಡಳೇಶ್ವರರಾಗಿ ಆಡಳಿತ ನಡೆಸಿರ ಬೇಕು. ರಾಜಾಧಿರಾಜ ಮಾಣುಕೋಜಿರಾಜ ಸಾಹೇಬರವರು ಕ್ರಿ.ಶ.೧೭೨೭ರಲ್ಲಿ ಹಡಕನಹಳ್ಳಿ ಬೈರೇಗೌಡಗೆ[೫೫೨] ಮತ್ತು ಕ್ರಿ.ಶ.೧೭೨೮ರಲ್ಲಿ ಅಣ್ಣಾಜಿ, ಶೇಷೋಪಂತರಿಗೆ ಸೂಲಿಬೆಲೆ ಊರ ಮುಂದಣ ದೊಡ್ಡಕೆರೆ ಬೀರಣ್ಣನ ಕೆರೆ ಕಟ್ಟುಸ್ತ ಕಟ್ಟು ಕೊಡುಗೆ ಕೊಟ್ಟನು[೫೫೩].

## ೩.೧೧ ಹುಲುಕುಡಿ ನಾಡಪ್ರಭುಗಳು

ದೊಡ್ಡಬಳ್ಳಾಪುರ ತಾಲ್ಲೂಕಿನ ಪಶ್ಚಿಮವಾದ ದೊಡ್ಡಬೆಳವಂಗಲ ಹೋಬಳಿಗೆ ಸೇರಿದ ಹುಲುಕಡಿಬೆಟ್ಟದ ಸುತ್ತಮುತ್ತಲಿನ ಬಹುತೇಕ ಪ್ರದೇಶವೇ ವಿಜಯನಗರ ಅರಸರ ಕಾಲಾವಧಿಯಲ್ಲಿ ಹುಲುಕಡಿನಾಡು ಎಂದು ಪ್ರಸಿದ್ಧವಾಯಿತು. ಹುಲುಕಡಿಯಲ್ಲಿ ಗೌಡ, ನಾಯಕ, ದಳವಾಯಿಗಳು ನಾಡಪ್ರಭುಗಳಾಗಿ ಆಳ್ವಿಕೆ ನಡೆಸಿದ್ದಾರೆ. ಈ ನಾಡಿನ ಪೂರ್ವಕ್ಕೆ ಆವತಿನಾಡು, ದಕ್ಷಿಣಕ್ಕೆ ಎಲಹಕ್ಕನಾಡು, ಪಶ್ಚಿಮಕ್ಕೆ ಮಣ್ಣೆನಾಡು ಮತ್ತು ಉತ್ತರಕ್ಕೆ ಕೈವಾರನಾಡುಗಳು ಎಲ್ಲೆಗಳಾಗಿದ್ದವು.

ಶಾಸನಗಳಲ್ಲಿ ಹುಲುಕಡಿ ಬೆಟ್ಟಕ್ಕೆ ಹುರುಡಿ, ಪುರುಡಿ, ಪುರ್ಕೋಡಿ ಮತ್ತು ಹುಲುಕುಡಿ ಎಂದು ಉಲ್ಲೇಖಿಸಲಾಗಿದೆ. ಕ್ರಿ.ಶ.೧೧೧೫ ರ ವಿಷ್ಣುವರ್ಧನ ಶಾಸನದಲ್ಲಿ ಮೊದಲ ಬಾರಿಗೆ ಹುಲುಕಡಿ ಬೆಟ್ಟವನ್ನು ಪುರ್ಕೋಡಿ ಎಂದು, ಹಾಗೂ ಈ ಪ್ರದೇಶವು ಚೋಳ ಮಂಡಲದ ಮಣ್ಣೆನಾಡಿಗೆ ಸೇರಿದ ಭಾಗವಾಗಿತ್ತು[೫೫೪].

ಹುಲುಕಡಿ ಬೆಟ್ಟವನ್ನು ಕೇಂದ್ರವಾಗಿಟ್ಟು, ಸುತ್ತಮುತ್ತಲಿನ ಪ್ರದೇಶವಾದ ತಿಪ್ಪೂರು ಸೀಮೆ, ಗಂಡರಗೊಳ್ಳಿ ಸೀಮೆ, ಹಣಬೆ ಸ್ಥಳ ಎಂದು ಆಡಳಿತಕ್ಕಾಗಿ ಸಣ್ಣ ಪುಟ್ಟ ಘಟಗಳಾಗಿ ವಿಂಗಡಿಸಿರುವುದನ್ನು ಹಾಗೂ ಹಣಬೆ, ದೊಡ್ಡಬೆಳವಂಗಲ, ಮಧುರೆ, ಸಾಸಲು, ಕಸಬಾ ಹೋಬಳಿಗಳಿಗೆ ಸೇರಿದ ಕಾಡನೂರು, ಅಂಬಲಗೆರೆ, ಭೈರಾಪುರ, ಶಿಂಪಾಡಿಪುರ, ಇಸ್ತೂರು, ಹೊನ್ನಾವರ, ಶ್ಯಾಕಲದೇವಲಾಪುರ, ವರಡೋಹಳ್ಳಿ, ಪುಟ್ಟಯ್ಯನ ಅಗ್ರಹಾರ, ಗಂಡ್ರಗೊಳ್ಳಿಪುರ, ಅರಳುಮಲ್ಲಿಗೆ ಮುಂತಾದ ಗ್ರಾಮಗಳಲ್ಲಿ ದೊರೆತ ಹುಲುಕಡಿ ನಾಡಪ್ರಭುಗಳ ಶಾಸನಗಳಿಂದ ಈ ಪ್ರದೇಶವು ಹುಲುಕಡಿನಾಡಿನ ವ್ಯಾಪ್ತಿಯ ಎಲ್ಲೆಯಾಗಿತ್ತು.

[೫೫೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೩.

[೫೫೨] ಎ.ಕ-೯, ಹೊ.ತಾ.೪೬, ಕ್ರಿ.ಶ.೧೭೨೭, ಹಡಕನಹಳ್ಳಿ.

[೫೫೩] ಎ.ಕ-೯, ಹೊ.ತಾ.೫೩&೫೫, ಕ್ರಿ.ಶ.೧೭೨೮, ಸೂಲಿಬೆಲೆ.

[೫೫೪] ಎ.ಕ-೯, ದೊ.ತಾ.೧೧, ಕ್ರಿ.ಶ.೧೧೧೫, ತಮಿಳು, ಹುಲ್ಲುಕಡಿ.

ಅರಳು ಮಲ್ಲಿಗೆ ಗ್ರಾಮದ ಕ್ರಿ.ಶ.೧೩೬೭ ರ ಶಾಸನದಲ್ಲಿ ಪ್ರಪ್ರಥಮ ಬಾರಿಗೆ ಹುಲುಕಡಿ ನಾಡಪ್ರಭುಗಳ ಆಳ್ವಿಕೆಯ ಪ್ರಸ್ತಾಪವಿದ್ದು, ಈ ಶಾಸನದಲ್ಲಿ ಶ್ರೀವೀರ ಬುಕ್ಕಣ್ಣ ಒಡೆಯರು ರಾಜ್ಯವಾಳುತ್ತಿರಲು, ಶ್ರೀಮನ್ಮಹಾ ಸಾಮಂತಾಧಿಪತಿಯಾದ ಬೊಮ್ಮಯ್ಯನಾಯಕರು ಮತ್ತು ಅಣ್ಣಪ್ಪನವರು ಶ್ರೀಮನ್ಮಹಾ ಹುಲುಕಡಿ ನಾಡಪ್ರಭುವಾಗಿ ಬುಮ್ಮರಳ ಕೋಟಿ ಗೌಡನಿಗೆ ಈ ಪ್ರಾಂತದ ಗೌಡಿಕೆ ಕೊಟ್ಟರು[೫೫೫]. ಈ ಶಾಸನದ ನಂತರ ಬುಮ್ಮರಳನ ಬಗ್ಗೆ ಯಾವುದೇ ಮಾಹಿತಿಗಳಿಲ್ಲ.

ಕ್ರಿ.ಶ.೧೪೯೩ರಲ್ಲಿ ವಿಜಯನಗರ ಸಾಳುವ ಮನೆತನದ ಇಮ್ಮಡಿರಾಯ ಮಹಾರಾಯರ (ಇಮ್ಮಡಿನರಸಿಂಹ) ಆಳ್ವಿಕೆಯಾವಧಿಯಲ್ಲಿ ಸಾಳ್ವ ಇಮ್ಮಡಿ ನರಸಿಂಹನ ಪುತ್ರನಾದ ಸಾಳುವ ದೇವಪ್ಪ ನಾಯಕನು ತಿಪ್ಪೂರು ಪ್ರಾಂತದಲ್ಲಿ ಸ್ಥಿರ ರಾಜ್ಯಂಗೆಯ್ಯುವಲ್ಲಿ ಹುಲುಕಡಿ ನಾಡಪ್ರಭುಗಳಾಗಿ ಬಯಣ ಗೌಡರ ಮಕ್ಕಳು, ಬಯಪ್ಪಗೌಡರು [೫೫೬] ಆಳ್ವಿಕೆ ಮಾಡುತಿದ್ದರು.

ಕೃಷ್ಣದೇವರಾಯನ ಕಾಲಕ್ಕೆ ಸೇರಿದ ಕ್ರಿ.ಶ.೧೫೨೮ ರಲ್ಲಿ ಹುಲುಕಡಿನಾಡಿನ ತಿಪ್ಪೂರ ಸೀಮೆಯಲ್ಲಿರುವ ಭೈರಾಪುರದಲ್ಲಿ ಹೊನ್ನವೀರ ಸೆಟ್ಟಿಯು ತನ್ನ ಮಕ್ಕಳು ಶಿವಲೋಕ ಸೇರಿದಾಗ, ಒಂದು ಕೆರೆಯನ್ನು ಕಟ್ಟಿಸಿ, ಕನ್ಯಾದಾನ, ಗೋದಾನ ಸಹಿತವಾಗಿ, ಬ್ರಾಹ್ಮಣರಿಗೆ ದಾನ ಪೂರ್ವಕವಾಗಿ ಕೊಟ್ಟನು[೫೫೭].

ಅಚ್ಯುತರಾಯರ ಆಳ್ವಿಕೆಯಲ್ಲಿ ಸಾಮಂತರಾದ ಗಂಡ್ರಗೊಳ್ಳಿ ದಳವಾಯಿ ಸೊಂಣಪ್ಪನಾಯಕನ ಮಕ್ಕಳು ನಾಗಪ್ಪನಾಯಕನು ಸ್ವಾಮಿ ನಮಗೆ ನಾಯಕ ತನಕ್ಕೆ ಪಾಲಿಸಿದ ಹುಲುಕಡಿ ನಾಡಿಗೆ ಸಲುವ ಹಣಬೆಯ ಸೀಮೆಯೊಳಗಣ ಕಾಡನೂರು ಗ್ರಾಮವನ್ನು ಚನ್ನಕೇಶವ ದೇವರ ಅಮೃತಪಡಿ, ನೈವೇದ್ಯ, ಅಂಗರಂಗ ವೈಭವ ರಥೋತ್ಸವವನ್ನು ನಡೆಸಲೆಂದು ತುಂಗಭದ್ರಾ ತೀರದಲ್ಲಿ ವಿರೂಪಾಕ್ಷದೇವರ ಸಾನಿಧ್ಯದಲ್ಲಿ ಏದ್ವಾದಶೀ ಪುಣ್ಯಕಾಲದಲ್ಲಿ ಸಹಿರೋಣ್ಯೋಧಕವಾಗಿ ತ್ರಿವಾಚಧಾರೆಯನ್ನೆರೆದು ಕೊಟ್ಟನು[೫೫೮]. ಈ ಶಾಸನದಲ್ಲಿ ಮುಖ್ಯವಾಗಿ ಗಮನಿಸ ಬೇಕಾದ ಅಂಶವೆಂದರೆ ಹುಲುಕಡಿನಾಡ ದೊರೆಗಳ ಆಳ್ವಿಕೆ ಕೈತಪ್ಪಿ ದಳವಾಯಿಗಳಿಗೆ ಸೇರಿದ್ದ ಕಾರಣ ತಿಳಿದು ಬಂದಿಲ್ಲ. ಬಹುಶ: ಕಪ್ಪ ಕಾಣಿಕೆ, ಸಂದಾಯ ಮಾಡದ ಅಥವಾ ಸಂತಾನವಿಲ್ಲದುದರ ಕಾರಣ ಅಧಿಕಾರ ಹಸ್ತಾಂತರಗೊಂಡಿತೆಂದು ಊಹಿಸಬಹುದು, ಅಲ್ಲದೆ ಶಾಸನದಲ್ಲಿ ಸ್ವಾಮಿಗಳು ನಮ್ಮ ನಾಯಕ ತನಕ್ಕೆ ಪಾಲಿಸಿದ ಎಂದು ನೇರವಾಗಿ

---

[೫೫೫] ಎ.ಕ-೯, ದೊ.ತಾ-೩೯, ಕ್ರಿ.ಶ ೧೩೬೭, ಅರಳುಮಲ್ಲಿಗೆ.

[೫೫೬] ಎ.ಕ-೯, ದೊ.ತಾ.೪೨, ಕ್ರಿ.ಶ.೧೪೯೩, ಪುಟ್ಟಯ್ಯನಾಗ್ರಹಾರ.

[೫೫೭] ಸಾಸಲು ಜಿ.ವಿಶ್ವನಾಥ್ & ಎಂ.ಜಿ.ಮಂಜುನಾಥ್:- ಐದು ಅಪ್ರಕಟಿತ ಶಾಸನಗಳು, ಇ.ದ.ಸಂ-೧೩, ೧೯೯೮, ಪು.ಸಂ-೩೦.

[೫೫೮] ಎ.ಕ-೯, ದೊ.ತಾ.೫೦, ಕ್ರಿ.ಶ-೧೫೩೧, ಕಾಡನೂರು.

ಇರುವುದನ್ನು ಕಂಡರೆ ಅಚ್ಯುತರಾಯರೇ ಅಧಿಕಾರ ಹಸ್ತಾಂತರಿಸಿದ್ದಾರೆ ಎನ್ನಬಹುದು. ಹಾಗೂ ಈ ಶಾಸನದಲ್ಲಿ ಉಕ್ತವಾಗಿರುವ ದಾನವನ್ನು ದಳವಾಯಿಗಳು ತುಂಗಭದ್ರ ತೀರದ ವಿರೂಪಾಕ್ಷದೇವರ ಸಾನಿಧ್ಯದಲ್ಲಿಯೇ ಅಚ್ಯುತದೇವರಾಯರಿಗೆ ಪುಣ್ಯವಾಗಲೆಂದು ಗ್ರಾಮದಾನ ನೀಡಿದ್ದಾರೆ. ಹಾಗಾಗಿ ಅಧಿಕಾರ ಹಸ್ತಾಂತರ ವಿರೂಪಾಕ್ಷದೇವರ ಸನ್ನಿಧಿಯಲ್ಲೆ ನಡೆದಿರಬೇಕು.

ಆದರೆ ಅತ್ಯಲ್ಪ ಕಾಲದಲ್ಲೇ ಇದೇ ಅಚ್ಯುತರಾಯನ ಕಾಲದಲ್ಲಿ ಹುಲುಕಡಿನಾಡಿನ ಆಡಳಿತವು ಗಂಡ್ರಗೊಳ್ಳಿ ದಳವಾಯಿಗಳ ಕೈತಪ್ಪಿ ಅಮರದ ತಿಮ್ಮರಸರ ಮಕ್ಕಳಾದ ಕರಣಿಕ ರಾಮಕೃಷ್ಣಯ್ಯ ಮತ್ತು ರಂಗಪ್ಪರವರ ಕೈ ಸೇರಿರುವುದನ್ನು ದೊಡ್ಡಬೆಳವಂಗಲ ಹೋಬಳಿಯ ಅಂಬಲಗೆರೆ ಗ್ರಾಮದ ಆಂಜನೇಯ ದೇವಾಲಯದ ಬಳಿಯಿರುವ ಕ್ರಿ.ಶ.೧೫೩೪ ರ ಕಾಲದ ಶಾಸನದಲ್ಲಿ ಕಾಣಬಹುದ. ಅಮರದ ತಮ್ಮರಸನ ಮಕ್ಕಳಾದ ಕರಣಿಕ ರಾಮಕೃಷ್ಣಯ್ಯ, ರಂಗಪ್ಪನವರ ಮಕ್ಕಳು ಸ್ವಾಮಿ ನಮಗೆ ನಾಯಕತನಕ್ಕೆ ಪಾಲಿಸಿದ ಹುಲುಕಡಿನಾಡು[೫೨೯] ಎಂದು ನೇರವಾಗಿ ಹೇಳಿರುವುದನ್ನು ಗಮನಿಸಿದರೆ ಹುಲುಕಡಿನಾಡು ಕ್ರಿ.ಶ.೧೫೩೧ ರಲ್ಲಿ ಗಂಡ್ರಗೊಳ್ಳಿಪುರದ ದಳವಾಯಿ ನಾಯಕನ ಆಳ್ವಿಕೆಯಲ್ಲಿದ್ದು, ಕ್ರಿ.ಶ.೧೫೩೪ರಲ್ಲಿ ಮೂರು ವರ್ಷಗಳ ಅಂತರದಲ್ಲಿ ಅಮರದ ತಿಮ್ಮರಸನ ಮಕ್ಕಳ ಅಧೀನದಲ್ಲಿರುವುದನು ಈ ಶಾಸನದಿಂದ ತಿಳಿಯಬಹುದು.

ಅಧಿಕಾರ ವಹಿಸಿಕೊಂಡ ಮೇಲೆ ಕರಣಿಕ ರಾಮಕೃಷ್ಣಯ್ಯ, ರಂಗಪ್ಪನವರ ಮಕ್ಕಳು ಅಂಬಲಿಗೆರೆಯನ್ನು ಸರ್ವಮಾನ್ಯವಾಗಿ ಶ್ರೀ ತಿರುವೆಂಗಳನಾತನ ಜಾತ್ರೆ (ಪರುಶೆಗೆ)ಯಲ್ಲಿ ಮಕ್ಕಳಿಗೆ ಹಾಲು ಮತ್ತು ಬೆಣ್ಣೆಯನ್ನು ಹಂಚುವುದಕ್ಕಾಗಿ ಭಟ್ಟರಯ್ಯನವರ ಶಿಷ್ಯರಾದ ಮೊಕ್ತಗಾರನಾದ ಚಿಕ್ಕಣ್ಣ ದಾಸರಿಗೆ ದಾನ ನೀಡಿದ್ದರು. ಈ ಅಂಬಲಗೆರೆಯ ಮೊಕ್ತಗಾರನಾದ ಚಿಕ್ಕಣ್ಣದಾಸನು ಕೃಷ್ಣದೇವರಾಯನ ಕಾಲದಲ್ಲಿ ಶಿವಗಂಗೆ, ಗುಳೂರುರನ್ನು ದಾನ ಪಡೆದಿದ್ದನು. ಹಾಗೇಯೇ ಹೊಯ್ಸಳ ವೀರ ಬಲ್ಲಾಳ ಕಾಲದ ಕ್ರಿ.ಶ.೧೩೧೯ ರಲ್ಲಿ ತಿರುಮಲೆ ತಿರುನಾಳಿಗೆ ಹಾಲು-ಬೆಣ್ಣೆ ಸೇವೆಗೆ ಅಂಬಲಿಗೆರೆ, ಪುರುಷನಹಳ್ಳಿಯನ್ನು ಚಿಕ್ಕದಾಸರಿಗೆ ದಾನ ಕೊಡಲಾಗಿತ್ತು[೫೩೦]. ಹೊಯ್ಸಳರ ಕಾಲದಿಂದ ತಿರುವೆಂಗಳನಿಗೆ ಹಾಲು ಮತ್ತು ಬೆಣ್ಣೆ ಸೇವೆಗಾಗಿಯೇ ಈ ಅಂಬಲಗೆರೆ ಗ್ರಾಮವನ್ನು ಮೀಸಲಿಟ್ಟದ್ದರು ಎನ್ನಬಹುದು.

ಅಚ್ಯುತರಾಯನ ನಂತರ ಅಧಿಕಾರ`ಕ್ಕೆ ಬಂದ ವೀರ ನರಸಿಂಹ ಕಾಲದಲ್ಲಿ ಹುಲುಕಡಿ ನಾಡ ಪ್ರಭುತ್ವವನ್ನು ಮತ್ತೆ ಗಂಡ್ರಗೊಳ್ಳಿಪುರದ ನಾಯಕ ಮನೆತನಕ್ಕೆ ಸಿಗುವಾಗ ನಾಗಪ್ಪನಾಯಕನ

[೫೨೯] ಡಿ.ವಿ.ಪರಮಶಿವಮೂರ್ತಿ :- ಶಾಸನ ಸಂಶೋಧನೆ, ಪು.ಸಂ-೧೧.

[೫೩೦] ಎ.ಕ-೯, ನೆ.ತಾ.೫೭, ಕ್ರಿ.ಶ.೧೩೧೯, ಮಣ್ಣೆ.

ಸಹೋದರ ಭೈರಪ್ಪನಾಯಕನು ಅಧಿಪತಿಯಾಗಿದ್ದನೆಂಬುದನ್ನು ಹಾಗೂ ನರಸಿಂಗದೇವ ಮಹಾರಾಯರು ಅಧಿಕಾರ ಹಸ್ತಾಂತರಿಸಿದಕ್ಕಾಗಿ ಅವರಿಗೆ ಪುಣ್ಯವಾಗಲೆಂದು ಭೈರಪ್ಪನಾಯಕರು ಶ್ರೀ ನರಸಿಂಗ ದೇವರು ನಮ್ಮ ನಾಯಕತನಕ್ಕೆ ಪಾಲಿಸಿದ ಹುಲುಕಡಿನಾಡದೊಳಗಣ ಹಣಬೆಯ ಸೀಮೆಗೆ ಸಲುವ ಶಿಂಪಾಡಿಪುರದ ಸೀಮೆಯೊಳಗಣ ಭೂಮಿಯ ಹೊಲವನ್ನು ಶ್ರೀ ವೀರ ನರಸಿಂಗದೇವ ಮಹಾರಾಯರಿಗೆ ಧರ್ಮವಾಗಲೆಂದು ಶಿವಗಂಗೆಯ ಮೇಲಣಗವಿ ಸಿಂಹಾಸನದ ಮಲೆಯಕಾಂತ ದೇವರಿಗೆ ಶಿಷ್ಯಪಾರಂಪರೆಯಾಗಿ[೫೬೧] ಕೊಟ್ಟಿರುವುದನ್ನು ಗಂಡ್ರಗೊಳ್ಳಿಪುರದಲ್ಲಿನ ಕ್ರಿ.ಶ.೧೫೪೧ರ ಕಾಲದ ಶಾಸನದಲ್ಲಿ ಕಾಣಬಹುದು. ಹಾಗೇಯೇ ಗಂಡ್ರಗೊಳ್ಳಿಪುರದ ಕ್ರಿ.ಶ.೧೫೫೯ರ ಕಾಲದ ಮತ್ತೊಂದು ಶಾಸನದಲ್ಲಿಯೂ[೫೬೨] ಸಹ ಇದೇ ವಿಷಯವನ್ನು ಒಳಗೊಂಡಿರುವುದನ್ನು ಕಾಣಬಹುದು. ಈ ಎರಡು ಶಾಸನಗಳ ಅಂತರ ೨೮ ವರ್ಷಗಳದ್ದು, ಈ ೨ ಶಾಸನಾಧರದ ಮೇಲೆ ಭೈರಪ್ಪನಾಯಕನು ಸುಮಾರು ೩೦ ವರ್ಷಗಳ ಕಾಲ ಆಳ್ವಿಕೆ ನಡೆಸಿರಬೇಕು. ಭೈರಪ್ಪನಾಯಕನ ನಂತರ ಹುಲುಕಡಿನಾಡ ಪ್ರಭುಗಳ ಬಗ್ಗೆ ಯಾವುದೇ ಮಾಹಿತಿಗಳು ದೊರೆಯುವುದಿಲ್ಲ.

ಕ್ರಿ.ಶ.೧೩೬೭ರ ನಂತರದಲ್ಲಿ ಹುಲುಕಡಿ ನಾಡಪ್ರಭುಗಳ ಆಳ್ವಕೆಯನ್ನು ಪ್ರಸ್ತಾಪಿಸುವ ಶಾಸನಗಳು ಕಂಡು ಬಂದಿದ್ದು, ಕ್ರಿ.ಶ.೧೫೫೯ರ ನಂತರದ ಯಾವ ಶಾಸನಗಳಲ್ಲಿಯೂ ಉಲ್ಲೇಖವಿಲ್ಲ. ಬಹುಶಃ ಕ್ರಿ.ಶ.೧೫೬೫ರ ತಾಳಕೋಟೆ ಯುದ್ಧದ ನಂತರ ವಿಜಯನಗರ ಅರಸರ ಪ್ರಭಾವ ಕಡಿಮೆಯಾಗಿ ಪಾಳೆಯಗಾರರು ಹೆಚ್ಚು ಪ್ರಾಬಲ್ಯವನ್ನು ಪಡೆದುಕೊಂಡಿರಬೇಕು. ಅಂತೆಯೇ ಪಕ್ಕದ ಅವತಿ ನಾಡಪ್ರಭುಗಳು ಅಥವಾ ಚಿಕ್ಕಬಳ್ಳಾಪುರ ಮತ್ತೆ ಕ್ರಿಯಾಶೀಲರಾಗಿ ಹುಲುಕಡಿನಾಡನ್ನು ತಮ್ಮ ವಶಕ್ಕೆ ತೆಗೆದುಕೊಂಡಿರಬೇಕು. ವಿಜಯನಗರ ಅರಸರ ಕಾಲಾವಧಿಯಲ್ಲಿ ಜನ್ಮತಾಳಿ, ವಿಜಯನಗರ ಸಾಮ್ರಾಜ್ಯ ಅವನತಿಯ ನಂತರ ಹುಲುಕಡಿನಾಡು ವಿಲೀನಗೊಂಡಿರಬೇಕು. ಹಾಗಾಗಿ ಹುಲುಕಡಿ ನಾಡಿನ ವ್ಯಾಪ್ತಿಯಲ್ಲಿ ಅವತಿನಾಡಿನ ಪ್ರಭುಗಳ ಶಾಸನಗಳು ಲಭ್ಯವಾಗಿವೆ.

## ೩.೧೨ ಯಲಹಂಕ ನಾಡಪ್ರಭುಗಳು

ಬೆಂಗಳೂರು-ಮಾಗಡಿಯ ನಾಡಪ್ರಭುಗಳೆಂದೇ ಪ್ರಸಿದ್ಧಿಯಾದ ವಿಜಯನಗರದ ಮಾಂಡಳೀಕರಾಗಿದ್ದ ಯಲಹಂಕ ನಾಡಪ್ರಭುಗಳು ಬೆಂಗಳೂರನ್ನು ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಸಾಧನೆಯ ಹಾದಿಯಲ್ಲಿ ಮುನ್ನಡೆಸಿದವರು. ಹಾಗೂ ಕೆಂಪೇಗೌಡರ ಮನೆತನವೆಂದು ಪ್ರಸಿದ್ಧವಾಗಿರುವ

[೫೬೧] ಎ.ಕ-೯, ದೊ.ತಾ.೪೦, ಕ್ರಿ.ಶ.೧೫೪೧, ಗಂಡ್ರಗೊಳ್ಳಿಪುರ.
[೫೬೨] ಎ.ಕ-೯, ದೊ.ತಾ.೪೧. ಕ್ರಿ.ಶ.೧೫೫೯, ಗಂಡ್ರಗೊಳ್ಳಿಪುರ.

ಯಲಹಂಕ ನಾಡಪ್ರಭುಗಳ ಬಗ್ಗೆ ಅನೇಕ ಶಾಸನಗಳ ಜೊತೆಗೆ ವೀರಭದ್ರ ವಿಜಯಂ (ಸಂಸ್ಕೃತ) ಹಾಗೂ ಕೆಂಪೇಗೌಡ ಜಯ ಪ್ರಶಸ್ತಿ ಎಂಬ ಸಾಹಿತ್ಯ ಕೃತಿಗಳೂ ಮಾಹಿತಿ ನೀಡುತ್ತದೆ[೫೬೩]. ಈ ವಂಶದಲ್ಲಿ ಕೆಂಪೇಗೌಡ ಎಂಬ ಹೆಸರಿನ ಅನೇಕರಿದ್ದು, ಅದರಲ್ಲಿ ಮೂವರು ಕೆಂಪೇಗೌಡರು ಮಾತ್ರ ಪ್ರಖ್ಯಾತಿಗೆ ಬಂದವರು ಒಂದನೇಯ ಕೆಂಪೇಗೌಡ, ಇಮ್ಮಡಿ ಕೆಂಪೇಗೌಡ, ಮುಮ್ಮಡಿ ಕೆಂಪೇಗೌಡರು ತಮ್ಮನ್ನು ಕೌಶ್ಯಪ ಗೋತ್ರದವರೆಂದೂ ಹೇಳಿಕೊಂಡಿದ್ದು[೫೬೪], ತಮ್ಮ ಅಧಿಕಾರ ಕ್ಷೀಣಿಸುವರೆಗೂ ವಿಜಯನಗರ ಅರಸರ ಸಾಮಂತರಾಗಿದ್ದು, ವಿಜಯನಗರದ ಪತನದ ನಂತರ ಮರಾಠರಿಗೂ, ಮುಸ್ಲಿಮರಿಗೂ ಕಪ್ಪ ಸಲ್ಲಿಸುತ್ತಿದ್ದರು.

ಜಯಗೌಡನು (ಕ್ರಿ.ಶ.೧೪೧೮–೩೩) ಯಲಹಂಕ ಭೂಪಾಲನೆಂಬ ಬಿರುದು ಪಡೆದು ಹದಿನೈದು ವರ್ಷ ಕಾಲ ಅರಸನಾಗಾಳಿ ಮೃತನಾದನು. ನಂತರ ಅವನ ಮಗನಾದ ಗಿಡ್ಡೇಗೌಡನಿಗೆ ಬಹುಕಾಲ ಸಂತಾನ ಪ್ರಾಪ್ತಿಯಾಗಿರಲಿಲ್ಲ. ಆದ್ದರಿಂದ ಕೆಂಪಮ್ಮ ದೇವತೆಗೆ ಪುತ್ರ ಸಂತತಿಯನ್ನು ಕರುಣಿಸಿದರೆ ಆ ಪುತ್ರನಿಗೂ ಅವನ ವಂಶಜರಿಗೂ ನಿನ್ನ ಹೆಸರಿಡುವುದಾಗಿ ವ್ರತ ತೊಟ್ಟನು. ಗಿಡ್ಡೇಗೌಡನಿಗೆ ಬೇಗನೆ ಪುತ್ರ ರತ್ನವೊಂದು ಜನಿಸಿತು. ಆ ಮಗುವಿಗೆ ಕೆಂಪ ನಂಜೇಗೌಡ ಎಂದು ನಾಮಕರಣ ಮಾಡಿ, ಗಿಡ್ಡೆಗೌಡನು (ಕ್ರಿ.ಶ.೧೪೩೩–೪೩) ಹತ್ತು ವರ್ಷಗಳ ಆಳ್ವಿಕೆ ಮಾಡಿದನು[೫೬೫]. ಹೀಗೆ ಈ ವಂಶದವರಿಗೆಲ್ಲ ಸಮಾನ ನಾಮಧೇಯ ಪ್ರಾಪ್ತಿಯಾಗಿದ್ದರ ಕತೆ ಈ ರೀತಿಯಲ್ಲಿ ಇದೆ.

ಕೆಂಪೇಗೌಡರ ಪೂರ್ವಿಕರು ಯಲಹಂಕಕ್ಕೆ ಬರುವ ಮೊದಲೆ ಈ ನಾಡು ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಹಲವಾರು ಶಾಸನಗಳು ಸಾಕ್ಷಿಯಾಗಿದೆ. ಶಾಸನಗಳಲ್ಲಿ ಯಲಹಂಕವನ್ನು ಎಲಹಕ, ಎಲಹಂಕ, ಯಲವಂಕ, ಯಲಹಂಕನಾಡು ಎಂದು ಕನ್ನಡ ಶಾಸನದಲ್ಲಿ, ತಮಿಳು ಶಾಸನದಲ್ಲಿ ಇಲೈಪಾಕ್ಕನಾಡು ಎಂದು ಉಲ್ಲೇಖವಾಗಿದೆ.

ಚೋಳರ ರಾಜಾಧಿರಾಜ, ಹೊಯ್ಸಳರ ನರಸಿಂಹ ದೇವರು, ರಾಮನಾಥ, ವೀರ ಬಲ್ಲಾಳ, ವಿಜಯನಗರದ ಹರಿಯಪ್ಪ ಒಡೆಯರ್, ಬುಕ್ಕರಾಯನ ಅಧಿನದಲ್ಲಿ ಹಲವಾರು ನಾಡಪ್ರಭುಗಳು, ಸಾಮಂತಾಧಿಪತಿಗಳು, ಅಧಿಕಾರಿಗಳು, ಸೇನಬೋವರುಗಳು ಆಳ್ವಿಕೆಯನ್ನು ನಡೆಸಿದ್ದಾರೆ. ಅದರಲ್ಲಿ ಕ್ರಿ.ಶ.೧೫೩೨ರಿಂದ ಕೆಂಪೇಗೌಡರ ವಂಶಿಯರ ಆಳ್ವಿಕೆ ಪ್ರಾರಂಭವಾಗುತ್ತದೆ.

---

೫೬೩ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೨೩೧.

೫೬೪ ಎ.ಕ-೯, ಮಾ.ತಾ.೪೨, ಕ್ರಿ.ಶ.೧೭೧೨, ಮಾಯಿನಾಯಕನಹಳ್ಳಿ.

೫೬೫ ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ:- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೫೦೩, ೪೬೧.

# ೧ನೇ ಕೆಂಪೇಗೌಡ

ಅಚ್ಯುತರಾಯರು ಎಲಹಂಕ ಸೀಮೆ, ಮಾಗಡಿ, ಶಿವಗಂಗೆ, ಕುಣಿಗಲ್ ಪ್ರದೇಶಗಳನ್ನು ಒಳಗೊಂಡ ಎಲಹಂಕ ರಾಜ್ಯವನ್ನು ರೂಪಿಸಿ ಅದಕ್ಕೆ ಹಿರಿಯ ಕೆಂಪೇಗೌಡನನ್ನು ಸಾಮಂತಾಧಿಯಾಗಿ ಮಾಡಿರುವುದಕ್ಕೆ ಕ್ರಿ.ಶ.೧೫೩೨ ರ ದಾಸರಹಳ್ಳಿಯ ಶಾಸನದಲ್ಲಿ ಅಚ್ಯುರಾಯರು ಕೆಂಪದೇವರಸಗೌಡನ ನಾಯಕತನಕ್ಕೆ ಪಾಲಿಸಿದ ಎಲಹಂಕರಾಜ್ಯದ ಶಿವನಸಮುದ್ರ ಸೀಮೆಯ ಚೊಕ್ಕನಹಳ್ಳಿ ಗ್ರಾಮವನ್ನು ನಂಮ ಸ್ವಾಮಿ ಅಚ್ಯುತರಾಯರಿಗೆ ಧರ್ಮವಾಗ ಬೇಕೆಂದು ಪರುಚೆಯ ದೇವರಿಗೆ ದಾನ ನೀಡಿದರು[೫೬೬]. ಹಿರಿಯ ಕೆಂಪೇಗೌಡನಾಗಿರುವ ಈ ಕೆಂಪದೇವರಸನಿಗೆ ಅಚ್ಯುತರಾಯರು ಎಲಹಂಕರಾಜ್ಯವನ್ನು ವಹಿಸಿ ಸಾಮಂತಾಧಿಪತಿಯನ್ನಾಗಿ ಮಾಡಿರುವುದನ್ನು ಗಮನಿಸಿದರೆ, ಆ ಕಾಲಕ್ಕಾಗಲೇ ಕೆಂಪೇಗೌಡನು ಅಧಿಕಾರಕ್ಕೆ ಬಂದ ಮೇಲೆ ಸಾಮ್ರಾಜ್ಯಕ್ಕೆ ಪರಮ ವಿಧೇಯನಾಗಿ ಹಲವಾರು ಲೋಕ ಕಲ್ಯಾಣ ಕಾರ್ಯಗಳನ್ನು ಮಾಡಿ ವಿಜಯನಗರ ಕೃಷ್ಣದೇವರಾಯ ಮತ್ತು ಅಚ್ಯುತರಾಯನ ಕೃಪಾನುಗ್ರಹಕ್ಕೆ ಪಾತ್ರನಾಗಿರ ಬೇಕು. ಹಾಗೇಯೇ ಅಚ್ಯುತರಾಯನ ಆಜ್ಞೆಯಂತೆ ಆಯಕಟ್ಟಿನ ಸ್ಥಳದಲ್ಲಿ ಕ್ರಿ.ಶ.೧೫೩೭ ರಲ್ಲಿ ಬೆಂಗಳೂರಲ್ಲಿ ಕೋಟೆಯನ್ನು ಕಟ್ಟಿ ರಾಜಧಾನಿಯನ್ನಾಗಿ ಮಾಡಿಕೊಂಡು[೫೬೭], ಕೆಂಪಾಂಬುಧಿ, ಧರ್ಮಾಂಬುದಿ ಕೆರೆಗಳನ್ನು ನಿರ್ಮಾಣ ಮಾಡಿದ ನಂತರ ಗವಿ ಗಂಗಾಧರೇಶ್ವರ, ಬಸವನಗುಡಿ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ[೫೬೮], ಜೊತೆಗೆ ಶಿವಗಂಗೆಯ ಗಂಗಾಧರನಿಗೆ ಹಲವಾರು ದಾನ ದತ್ತಿಗಳನ್ನು ನೀಡಿರುವುದನ್ನು ಶಾಸನಗಳನ್ನು ಹಾಗೂ ಶಿವಗಂಗೆಯ ಶಾಸನವೊಂದರಲ್ಲಿ ಬೆಂಗಳೂರು ಕೆಂಪನಾಚೆಗೌಡರ ಕುಮಾರ ಕೆಂಪಯಗೌಡನು ಗಂಗಾಧರ ಸ್ವಾಮಿಯ ಪಾದಕ್ಕೆ ಸದಾ ನಮಸ್ಕಾರ ಎಂದಿರುವುದನ್ನು ಗಮನಿಸಿದರೆ ಬಹುಶಃ ಗಂಗಾಧರನ ಪರಮಭಕ್ತನಾಗಿರ ಬೇಕು.

ಹಾಗೇಯೇ ಕ್ರಿ.ಶ.೧೫೭೮ರಲ್ಲಿ ತಮಗೆ ಪುತ್ರ ಪೌತ್ರ ಪರಂಪರೆಯಾಭಿವೃದ್ಧಿಯಾಗಲೆಂದು, ತಮ್ಮ ಪಿತೃ ಮಾತೃಗಳಿಗೆ ಮೋಕ್ಷವಾಗಲೆಂದು ಪ್ರಾರಂಭದಲ್ಲಿ ಶಿವಗಂಗೆ ಗಂಗಾಧರನಿಗೆ ಘಂಟೆ ದಾನ ನೀಡುವಾಗ ಕೆಂಪನಾಚೆಗೌಡರ ಮಕ್ಕಳು ಕೆಂಪೇಗೌಡನು ಯಲಹಂಕ ನಾಡಪ್ರಭುವಾಗಿದ್ದು[೫೬೯], ಸುಮಾರು ಕ್ರಿ.ಶ.೧೬೦೮ ರಲ್ಲಿ ಗಂಗಾಧರನಿಗೆ ನಮಸ್ಕಾರ ಸಲ್ಲಿಸುವಾಗ ಬೆಂಗಳೂರು ಕೆಂಪಯಗೌಡನಾಗಿ[೫೭೦] ಆಡಳಿತ ನಡೆಸುತ್ತಿದ್ದರು. ಕೆಂಪೇಗೌಡರು ಯಲಹಂಕದಲ್ಲಿ ಅಧಿಕಾರ ಸ್ವೀಕರಿಸಿ ನಂತರ ಬೆಂಗಳೂರಿಗೆ ಆಡಳಿತವನ್ನು ವರ್ಗಾವಣೆ ಮಾಡಿಕೊಂಡಿರಬೇಕು. ತನ್ನದೇ ಟಂಕಶಾಲೆಯಲ್ಲಿ ಭೈರವ ನಾಣ್ಯಗಳನ್ನು

[೫೬೬] ಎ.ಕ-೯, ಬೆಂ.೫೭, ಕ್ರಿ.ಶ.೧೫೩೨, ದಾಸರಹಳ್ಳಿ.

[೫೬೭] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೧, ೨೩೯.

[೫೬೮] Suryanath.U.Kamath :- Karnataka State Gazetter, Bangalore Rural District, Page.no-70.

[೫೬೯] ಎ.ಕ-೯, ನೆ.ತಾ.೧೧೯, ಕ್ರಿ.ಶ.೧೫೭೮, ದೊಡ್ಡಗಂಟೆ ಮೇಲೆ, ಶಿವಗಂಗೆ.

[೫೭೦] ಎ.ಕ-೯, ಅನುಬಂಧ, ನೆ.ತಾ.೧೦೭, ಕೆಂಪೇಗೌಡ ಪೀಟದ ಮೇಲೆ, ಶಿವಗಂಗೆ.

ಮುದ್ರಿಸಿ ಚಲಾವಣೆಗೆ ತಂದಿದ್ದರ ಪರಿಣಾಮವಾಗಿ ಸಾಮ್ರಾಟನು ರಾಜದ್ರೋಹವೆಂದು ಪರಿಗಣಿಸಿ ಧೀರ್ಘಕಾಲ ವಿಜಯನಗರದಲ್ಲಿ ಬಂಧಿಸಿದ್ದರು.

## ಇಮ್ಮಡಿ ಕೆಂಪೇಗೌಡ

ಒಂದನೇಯ (ಹಿರಿಯ) ಕೆಂಪೆಗೌಡನ ತರುವಾಯ ಇಮ್ಮಡಿ ಕೆಂಪೆಗೌಡನು ಬೆಂಗಳೂರು ಮತ್ತು ಮಾಗಡಿ ಎರಡನ್ನು ಆಳ್ವಿಕೆ ನಡೆಸಿದನು. ಚಂದ್ರಗಿರಿಯಿಂದ ಆಳುತ್ತಿದ್ದ ವಿಜಯನಗರದ ಇಮ್ಮಡಿ ವೆಂಕಟನನ್ನು ಅಧಿನವನೆಂದು ಹೇಳಕೊಂಡಿರುವ ಕೆಂಪೇಗೌಡನು ಬೆಂಗಳೂರು ಸುತ್ತಲೂ ನಾಲ್ಕು ದಿಕ್ಕಿಗೆ ಗೋಪುರಗಳನ್ನು ನಿರ್ಮಿಸಿದ್ದರಿಂದ ಕೋಟೆಗಳ ರಕ್ಷಣೆಗೆ ಹೆಚ್ಚಿನ ಒಲವು ದೊರೆತಂತಾಯಿತು[೫೭೧].

ಕ್ರಿ.ಶ.೧೬೨೮ ರಲ್ಲಿ ವಿಜಯನಗರದ ರಾಮದೇವರಾಯನ[೫೭೨], ಕ್ರಿ.ಶ.೧೬೩೧ ರಲ್ಲಿ ಶ್ರೀ ರಂಗರಾಯನ ಸಾಮಂತನಾಗಿ ಆಳ್ವಿಕೆ ನಡೆಸಿದನು[೫೭೩], ಕೆಂಪನಂಜೇಗೌಡರ ಪೌತ್ರ ಹಿರಿ ಕೆಂಪೇಗೌಡರ ಪುತ್ರ ಇಮ್ಮಡಿ ಕೆಂಪೇಗೌಡರಿಗೆ ಪುಣ್ಯವಾಗಲೆಂದು ಕ್ರಿ.ಶ.೧೬೨೧ ರಲ್ಲಿ[೫೭೪], ಕ್ರಿ.ಶ.೧೬೨೮ ರಲ್ಲಿ ಅಯ್ಯವೊಳೆ ಐನೂರ್ವರ ವರ್ತಕ ಸಂಘದ ಪ್ರಮುಖರು ಪೆನುಗೊಂಡೆ, ಬೆಂಗಳೂರು, ಗೂಳೂರು, ಚಿಕ್ಕನಾಯಕ್ಕನಹಳ್ಳಿ, ಚಿಕ್ಕಬಳ್ಳಾಪುರ, ತಾಡಪತ್ರಿ, ಅವನಿ, ಚಂದ್ರಗಿರಿ, ಕೋಲಾರ, ಕೊತ್ತಕೋಟೆ, ಕಾವೇರಿಪಟ್ಟಣ, ರಾಯಕೋಟೆ, ಶ್ರೀರಂಗಪಟ್ಟಣ, ನರಸಿಪುರ, ಬೇಲೂರು, ಹೆಬ್ಬೂರು, ನಾಗಮಂಗಲ, ಇಕ್ಕೇರಿ, ಬಸ್ತಿಹಳ್ಳಿ ಮೊದಲಾದ ಸ್ಥಳಗಳ ವ್ಯಾಪಾರಿ ಶ್ರೇಣಿಯವರು ಮುತ್ಸಲ ಪೇಟೆಯಲ್ಲಿನ ರಂಗಸ್ವಾಮಿಯ ಪಡಿತರ, ನೈವೇದ್ಯ ತಿರುನಳು ಸೇವೆಗೆ ಇಮ್ಮಡಿ ಕೆಂಪೇಗೌಡರ ಅನುಮತಿ ಪಡೆದು ದಾನ[೫೭೫] ಕೊಟ್ಟರುವುದನ್ನು ಗಮನಿಸಿದರೆ ಆ ವೇಳೆಗಾಗಲೇ ಕೆಂಪೇಗೌಡನು ನಿರ್ಮಿಸಿದ ಪೇಟೆಯು ಪ್ರಮುಖ ವ್ಯಾಪಾರ ಕೇಂದ್ರವಾಗಿರಬೇಕು. ಕ್ರಿ.ಶ.೧೬೩೩ ರಲ್ಲಿ ಧರ್ಮಶಾಲ ಮಠವನ್ನು ಕಟ್ಟಿಸಿದನು[೫೭೬]. ಶಿವಗಂಗೆ ಬೆಟ್ಟದ ಮೇಲಿನ ಗಾರೆ ಬಸವಣ್ಣನ ಹತ್ತಿರ ಮೆಟ್ಟಿಲುಗಳ ಮೇಲೆ ಭಕ್ತನ ವಿಗ್ರಹದ ಕೆಳಭಾಗದಲ್ಲಿರುವ ಶಾಸನದಲ್ಲಿ ಶ್ರೀ ಮತು ಯಲಹಂಕನಾಡ ಪ್ರಭು ಕೆಂಪೇಗೌಡರ ಮಗ ಯಿಂಮಡಿ ಕೆಂಪೇಗೌಡರ ಧರ್ಮ[೫೭೭]. ಎಂದಿರುವುದನ್ನು ಗಮನಿಸಿದರೆ ಮೆಟ್ಟಿಲುಗಳ ರಚನೆಯನ್ನು ಇಮ್ಮಡಿ

[೫೭೧] Suryanath.U.Kamath :- Karnataka State Gazetter, Bangalore Rural District, Page.no-70.

[೫೭೨] ಎ.ಕ-೯, ಬೆಂ.೧, ಕ್ರಿ.ಶ.೧೬೨೮, ರಂಗಸ್ವಾಮಿ ದೇವಸ್ಥಾನ, ಬಳ್ಳಪುರದ ಪೇಟೆ.

[೫೭೩] ಎ.ಕ-೯, ಅನುಬಂಧ, ಮಾ.ತಾ.೮೪, ತಾಮ್ರ ಶಾಸನ, ಕ್ರಿ.ಶ.೧೬೩೧, ಮಾಗಡಿ.

[೫೭೪] ಎ.ಕ-೯, ಮಾ.ತಾ.೨೫, ಕ್ರಿ.ಶ.೧೬೨೧, ಕಲ್ಯಾ ಬೆಟ್ಟದ ಕಲ್ಲೇಶ್ವರ ದೇವಾಲಯದ ಬಳಿ, ಕಲ್ಯಾ.

[೫೭೫] ಎ.ಕ-೯, ಬೆಂ.೧, ಕ್ರಿ.ಶ.೧೬೨೮, ರಂಗಸ್ವಾಮಿ ದೇವಸ್ಥಾನ, ಬಳ್ಳಪುರದ ಪೇಟೆ.

[೫೭೬] ಎ.ಕ-೯, ಬೆಂ.೨, ಕ್ರಿ.ಶ.೧೬೩೩, ಚಿಕ್ಕಪೇಟೆ.

[೫೭೭] ಡಾ.ಎಂ.ಜಿ.ಮಂಜುನಾಥ:- ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಶಾ.ಸಂ.೪೬.

ಕೆಂಪೇಗೌಡ ಮಾಡಿಸಿದಕ್ಕೆ ಶಾಸನ ಹಾಕಿರ ಬೇಕು. ಇಮ್ಮಡಿ ಕೆಂಪೇಗೌಡನ ಹೆಚ್ಚು ಶಾಸನಗಳು ಮಾಗಡಿ ಸೀಮೆಯಲ್ಲಿ ದೊರೆಯುತ್ತದೆ.

**ಮುಮ್ಮಡಿ ಕೆಂಪೇಗೌಡನು (ಕ್ರಿ.ಶ.೧೬೩೩–೭೮)**

ಇಮ್ಮಡಿ ಕೆಂಪೇಗೌಡನ ಮಗ ಮುಮ್ಮಡಿ ಕೆಂಪೇಗೌಡನು ಅಧಿಕಾರಕ್ಕೆ ಬಂದನು. ವಿಜಯನಗರದ ಮುಮ್ಮಡಿ ವೆಂಕಟನ ಮಾಂಡಲೀಕನಾಗಿದ್ದ, ಸ್ವಾಮಿದ್ರೋಹಗಂಡ ಎಂಬ ಬಿರುದನ್ನು ಹೊಂದಿದ್ದ ಮುಮ್ಮಡಿ ಕೆಂಪೇಗೌಡನನ್ನು ಬಿಜಾಪುರದಿಂದ ಬಂದ ರಣದುಲ್ಲಾಖಾನನ ಸೇನೆಯು ಸೋಲಿಸಿ ಬೆಂಗಳೂರನ್ನು ವಶಪಡಿಸಿಕೊಂಡು, ಆತನನು ಮಾಗಡಿಯಿಂದ ಆಳುವಂತೆ ಮಾಡಿತು[೫೭೮]. ಮಾಗಡಿಯಲ್ಲಿ ಆಳ್ವಿಕೆ ನಡೆಸಿದ್ದರಿಂದಾಗಿ ಗ್ರಾಮಾಂತರ ಜಿಲ್ಲೆಯಲ್ಲಿನ ಕೆಂಪೇಗೌಡನ ಯಾವ ಶಾಸನಗಳು ದೊರೆಯುವುದಿಲ್ಲ, ಮಾಗಡಿ ಪ್ರಾಂತ್ಯದಲ್ಲಿ ಹೆಚ್ಚಿನ ಶಾಸನಗಳು ದೊರೆಯತ್ತದೆ. ಕ್ರಿ.ಶ.೧೬೭೪ ರಲ್ಲಿ ಶ್ರೀರಂಗರಾಯ ಸಾಮಂತನಾಗಿದ್ದು[೫೭೯], ಕ್ರಿ.ಶ.೧೬೬೭ ರಲ್ಲಿ ಕಾಶಿಯಲ್ಲಿ ಮಠವನ್ನು ಸ್ಥಾಪಿಸಿ, ಲಿಂಗ ಪ್ರತಿಷ್ಠಾಪಿಸಿ, ಅದರ ವೆಚ್ಚಗಳಿಗಾಗಿ ಅರಳುಕುಪ್ಪೆ ಗ್ರಾಮವನ್ನು[೫೮೦], ಕ್ರಿ.ಶ.೧೬೩೦ ರಲ್ಲಿ ವೀರೇಶ್ವರ ಸ್ವಾಮಿ ದೇವಸ್ಥಾನಕ್ಕೆ ದಾನ ನೀಡಿದ[೫೮೧], ಜೊತೆಗೆ ಕ್ರಿ.ಶ.೧೬೭೪ ರಲ್ಲಿ ಹಾರಂಗಹಳ್ಳಿ ಪ್ರತಿನಾಮವಾದ ಮುಮ್ಮುಡಿ ಕೆಂಪಸಾಗರ ಕೆರೆ[೫೮೨] ಮತ್ತು ಕ್ರಿ.ಶ.೧೬೭೪ ರಲ್ಲಿ ಹೆರಳಗನಹಳ್ಳಿ ಅಂಬೋಗ್ರಾಮಕ್ಕೆ ಪ್ರತಿನಾಮಧೆಯವಾದ ಮುಮ್ಮಡಿ ಕೆಂಪಸಾಗರ[೫೮೩] ಎಂದು ತನ್ನ ಹೆಸರಿನಲ್ಲಿ ಕೆರೆಗಳನ್ನು ನಿರ್ಮಿಸಿದನು. ನಂತರ ಸಾವನದುರ್ಗ ಕೋಟೆಯನ್ನು ಬಲಪಡಿ, ಬಹುಶಃ ಕೋಟೆಯ ಕೆಳಗಿರುವ ವೀರಭದ್ರ ದೇವಾಲಯವನ್ನು ಕಟ್ಟಿಸಿರಬೇಕು. ಸಾವನದುರ್ಗ ಬಳಿಯ ನೆಲಪಟ್ಟಣವು ಇವನ ಇನ್ನೊಂದು ರಾಜಧಾನಿಯಾಗಿತ್ತು[೫೮೪].

ಮುಮ್ಮಡಿ ಕೆಂಪೇಗೌಡನ ಉತ್ತರಾಧಿಕಾರಿಯಾದ ಇವನ ಮಗ ದೊಡ್ಡವೀರಪ್ಪನು (ಕ್ರಿ.ಶ.೧೬೭೮–೧೭೧೦) ಶ್ರೀ ರಂಗ ದೇವರಾಯನ ಸಾಮಂತನಾಗಿದ್ದು, ಕ್ರಿ.ಶ.೧೬೮೧ರಲ್ಲಿ ೧೫ ಜನ ಬ್ರಾಹ್ಮಣರಿಗೆ[೫೮೫] ಹಾಗೂ ಕ್ರಿ.ಶ.೧೬೮೫ ರಲ್ಲಿ ಶೃಂಗೇರಿ ಮಠಕ್ಕೆ ಶಿಗೆಕೊಪ್ಪ ಗ್ರಾಮವನ್ನು[೫೮೬] ದಾನ ನೀಡಿದನು. ಇವನಿಗೆ

---

[೫೭೮] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೧.

[೫೭೯] ಎ.ಕ-೯, ಮಾ.ತಾ.೩೦, ಕ್ರಿ.ಶ.೧೬೭೪, ಹಾಲು ಶೆಟ್ಟಿಹಳ್ಳಿ ಮತ್ತು ಮಾ.ತಾ.೨, ಕ್ರಿ.ಶ.೧೬೬೯, ಮಾಗಡಿ.

[೫೮೦] ಎ.ಕ-೯, ಮಾ.ತಾ.೩೫, ಕ್ರಿ.ಶ.೧೬೬೭, ಅಕಲಗುಪ್ಪೆ.

[೫೮೧] ಎ.ಕ-೯, ಮಾ.ತಾ.೧, ಕ್ರಿ.ಶ.೧೬೩೦, ತಾಮ್ರ ಶಾಸನ, ಮಾಗಡಿ.

[೫೮೨] ಎ.ಕ-೯, ಮಾ.ತಾ.೫, ಕ್ರಿ.ಶ.೧೬೭೪, ಮಾಗಡಿ.

[೫೮೩] ಎ.ಕ-೯, ಮಾ.ತಾ.೨೯, ಕ್ರಿ.ಶ.೧೬೭೪, ಕೆಂಪಸಾಗರ.

[೫೮೪] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೨.

[೫೮೫] ಎ.ಕ-೯, ಮಾ.ತಾ.೮, ಕ್ರಿ.ಶ.೧೬೮೧, ತಿರುಮಲೆ ತಾಮ್ರಶಾಸನ, ಮಾಗಡಿ.

[೫೮೬] ಎ.ಕ-೯, ಅನುಬಂಧ, ಮಾ.ತಾ-೮೫, ಕ್ರಿ.ಶ.೧೬೮೫, ೩ನೇ ತಾಮ್ರಶಾಸನ, ಮಾಗಡಿ.

ಮುಮ್ಮಡಿ ಕೆಂಪವೀರಪ್ಪ[೨೮೭] ಮತ್ತು ಇಮ್ಮಡಿ ಕೆಂಪವೀರಪ್ಪಗೌಡ[೨೮೮] ಎಂಬ ಇಬ್ಬರು ಮಕ್ಕಳಿದ್ದರು. ಮೈಸೂರು ಒಡೆಯರ ವಿರೋಧವನ್ನು ಎದುರಿಸ ಬೇಕಾಯಿತು,

ಈ ವಂಶದ ಕೊನೆಯ ದೊರೆ ಕೆಂಪವೀರಪ್ಪನು (ಕ್ರಿ.ಶ.೧೭೧೦-೨೮) ಮಾಗಡಿಯಲ್ಲಿ ವಿಶಾಲವಾದ ರಾಮೇಶ್ವರ ದೇವಾಲಯವನ್ನು ಕಟ್ಟಿಸಿದ್ದಲ್ಲದೆ ಅಲ್ಲಿಯೇ ವರ್ಣಚಿತ್ರಗಳಿಂದ ಅಲಂಕೃತವಾದ ಒಂದು ಹಜಾರವನ್ನು[೨೮೯] ನಿರ್ಮಿಸಿದಲ್ಲದೆ, ಕ್ರಿ.ಶ.೧೭೧೨ ರಲ್ಲಿ ಮಾಗಡಿಯಲ್ಲಿ ಸೋಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ ತಮ್ಮ ಅಗ್ರಹಾರದ ೨೪ ವೃತ್ತಿಯ ಮಹಾಜನಗಳಿಗೆ ದಾನ ನೀಡಿದನು[೨೯೦]. ಇವನ ತಮ್ಮ ಇಮ್ಮಡಿಕೆಂಪವೀರಪ್ಪಗೌಡನು ಸಹ ಬ್ರಾಹ್ಮಣರಿಗೆ ದಾನ ನೀಡಿರುವುದನ್ನು[೨೯೧] ಶಾಸನದಲ್ಲಿ ಕಾಣ ಬಹುದು.

ಕ್ರಿ.ಶ.೧೭೨೮ ರಲ್ಲಿ ಮೈಸೂರಿನ ದೊಡ್ಡಕೃಷ್ಣರಾಜ ಒಡೆಯರ ದಳವಾಯಿ ದೇವರಾಜನು ಮಾಗಡಿಯನ್ನು ಆಕ್ರಮಿಸಿ ಮುಮ್ಮಡಿ ಕೆಂಪವೀರಪ್ಪ ಗೌಡನನ್ನು ಶ್ರೀರಂಗಪಟ್ಟಣ ಸೆರೆಮನೆಯಲ್ಲಿಟ್ಟನು[೨೯೨]. ಕೆಂಪವೀರಪ್ಪಗೌಡನಿಗೆ ಸಂತತಿ ಇಲ್ಲದ ಕಾರಣ ಹಾಗೂ ಆರೋಗ್ಯ ಕ್ಷೀಣಿಸುತ್ತಾ ಇರಲು, ತನ್ನ ಸೋದರಿಯನ್ನು ಹುಲಿಕಲ್ಲು ದುರ್ಗದ ಕೃಷ್ಣರಾಜಗೌಡನಿಗೆ ವಿವಾಗ ಮಾಡಿ ಕೊಟ್ಟಿದ್ದು. ಕೃಷ್ಣರಾಜಗೌಡನಿಗೆ ಒಂದು ಪತ್ರ ಬರೆದು ತನ್ನ ರಾಜ ಲಾಂಛನಗಳು, ಮುದ್ರೆಯುಂಗುರ, ಪಟ್ಟದ ಕತ್ತಿ ಮುಂತಾದುವುಗಳನ್ನು ತನ್ನ ಭಂಟ ಸೋಮನ ಕೈಯಲ್ಲಿ ನಿಮಗೆ ಕಳುಹಿಸಿದ್ದೇನೆ ಹೀಗೆ ಇತ್ಯಾದಿ ವಿಷಯವನ್ನು ಪತ್ರದಲ್ಲಿ ಬರೆದಿದ್ದು, ಆದರೆ ಮುಂದೆ ಕೃಷ್ಣರಾಜಗೌಡನು ಏನು ಮಾಡಿದ, ಕೆಂಪವೀರಪ್ಪ ಗೌಡ ಏನಾದ ಎಂದು ತಿಳಿಯುವುದಿಲ್ಲ[೨೯೩].

ಹೀಗೆ ನಾಡಗೌಡ ಸ್ಥಾನದಿಂದ ಅಮರನಾಯಕ ಸ್ಥಾನವನ್ನು ಪಡೆದು ತಮ್ಮ ನಿಷ್ಠೆಯಿಂದ ಎಲಹಂಕ ರಾಜ್ಯದ ಪ್ರಭುವಾಗುವುದರೊಂದಿಗೆ ಹಿರಿಯ ಕೆಂಪೇಗೌಡನು ವಿಜಯನಗರ ಕಾಲದ ಪ್ರಸಿದ್ಧರಾದ ಸಾಮಂತರಾಗಿ, ಬೆಂಗಳೂರು, ಮಾಗಡಿಯಲ್ಲಿ ಕೋಟೆ, ದೇವಾಲಯ, ಕೆರೆಗಳನ್ನು ಕಟ್ಟಿ,

---

[೨೮೭] ಎ.ಕ-೯, ಮಾ.ತಾ.೪೨, ಕ್ರಿ.ಶ.೧೭೧೨, ಮಾಯಿನಾಯಕನಹಳ್ಳಿ.

[೨೮೮] ಎ.ಕ-೯, ಅನುಬಂಧ, ಮಾ.ತಾ.೮೩, ಕ್ರಿ.ಶ.೧೬೮೧, ತಾಮ್ರ ಶಾಸನ, ಮಾಗಡಿ.

[೨೮೯] ಡಾ.ಸೂರ್ಯನಾಥ ಕಾಮತ್ :- ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೭.

[೨೯೦] ಎ.ಕ-೯, ಮಾ.ತಾ.೪೨, ಕ್ರಿ.ಶ.೧೭೧೨, ಈಶ್ವರ ದೇವಾಲಯದ ಪೂರ್ವಕಡೆ,ಮಾಯಿನಾಯಕನಹಳ್ಳಿ,

[೨೯೧] ಎ.ಕ-೯, ಅನುಬಂಧ, ಮಾ.ತಾ.೮೩, ಕ್ರಿ.ಶ.೧೬೮೧, ತಾಮ್ರ ಶಾಸನ, ಮಾಗಡಿ.

[೨೯೨] Suryanath.U.Kamath :- Karnataka State Gazetter, Bangalore Rural District, Page.no-72.

[೨೯೩] ಹ.ಕ.ರಾಜೇಗೌಡ :- ಯಲಹಂಕ ನಾಡಪ್ರಭುಗಳು, ದಕ್ಷಿಣ ಕರ್ನಾಟಕ ದ ಅರಸು ಮನೆತನಗಳು, ಪು.ಸಂ-೩೦೪.

ಅಗ್ರಹಾರ, ಹಜಾರಗಳನ್ನು ನಿರ್ಮಿಸಿ ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಕೊಡುಗೆ ನೀಡಿದ್ದ ಮನೆತನ ವಂಶ ಕಣ್ಮರೆಯಾಯಿತು.

## ೩.೧೩ ತೊರವಳಿ ನಾಡಪ್ರಭುಗಳು

ಹೊಸಕೋಟೆ ಮತ್ತು ಬೆಂಗಳೂರು ಪೂರ್ವ ತಾಲ್ಲೂಕಿನ ಭಾಗಗಳು ತೊರವಳಿ ನಾಡಿನ ವ್ಯಾಪ್ತಿ ಪ್ರದೇಶವಾಗಿದ್ದು, ಹೊಯ್ಸಳರ ಕಾಲದಲ್ಲಿ ತುರವರ್, ತುರೈವಳವಿತ್ತೀಯ, ತೊರವಳಯನಾಡು, ತುರೈವಳನಾಟ್ಟು, ತುರೈವಳನಾಡು ಎಂದೆಲ್ಲಾ ಕರೆಯಲಾಗುತ್ತಿತ್ತು. ಹೊಯ್ಸಳರ ನಂತರ ವಿಜಯನಗರ ಅರಸರ ಕಾಲದಲ್ಲಿ ನಾಡಪ್ರಭುಗಳು ಆಳ್ವಕೆಯನ್ನು ನಡೆಸುತ್ತಾ ಹಲವಾರು ದಾನದತ್ತಿಗಳನ್ನು ನೀಡಿದ್ದಾರೆ.

ವೀರಬಲ್ಲಾಳ ದೇವರಸರು ಉಣಾಮಲೆ ಪಟ್ಟಣದ ಆಳ್ವಕೆಯ ಕ್ರಿ.ಶ.೧೩೩೨ ರ ಸತ್ಯವಾರದಲ್ಲಿನ ತಮಿಳು ಶಾಸನದಲ್ಲಿ ಮೊದಲ ಬಾರಿಗೆ ತುರವರ್‌ನ ಉಲ್ಲೇಖವಿದ್ದು, ಅಮೈನಾಯನ್ ಆಳ್ವಕೆ ನಡೆಸುತ್ತಿರುತ್ತಾರೆ[೫೯೪]. ಅನಂತರ ಕ್ರಿ.ಶ.೧೩೩೨ ರ ಹೂಡಿಯಲ್ಲಿನ ಕನ್ನಡ ಶಾಸನದಲ್ಲಿ ತೊರವಳಯನಾಡು ಎಂದು ಉಲ್ಲೇಖವಾಗಿದೆ. ಬೈರೋಜನು ಬರೆದಿರುವ ಈ ಶಾಸನದಲ್ಲಿ ಬೆಳಗನ ಬೆಮೆಯ ನಾಯ್ಕರು, ತಂಬಿನಾಯ್ಕನೂ ತೊರವಳನಾಡ ಸಮಸ್ತ ಪ್ರಭುಲೆಯರು ಭೂಮಿಯನ್ನು[೫೯೫], ಕ್ರಿ.ಶ.೧೩೩೪ ರಲ್ಲಿ ಮಹಾವೀರ ಸಾಮಂತಾಧಿಪತಿ ಲಕುಮ ನಾಯಕನ ಮಗ ಕಳ್ಳಿಯ ನಾಯಕ ತುರೈವಲಿನಾಡಿನ ವೈಚ್ಚಗಾಮುಂಡ ಮತ್ತು ಉಳಿದ ನಾಡಿನವರು ದಾನ ನೀಡಿದರು[೫೯೬]. ಕ್ರಿ.ಶ.೧೩೩೭ ರಲ್ಲಿ ವೀರ ಬಲ್ಲಾಳ ದೇವರ ಕಾಲದಲ್ಲಿ ತುರೈವಲ್ಲಿನಾಡಿನ ವೀರ ವಲ್ಲಾಳ ದೇವರ ಕುಮಾರ ಸರ್ವಮಾನ್ಯವಾಗಿ ಕೊಟ್ಟರು[೫೯೭]. ಕ್ರಿ.ಶ.೧೩೪೩ ರಲ್ಲಿ ಶ್ರೀಮನು ಮಹಾಸಾಮಂತಾಧಿಪತಿ ಬೆಕ್ಕ ಕಳಯ ನಾಯಕನು ಶ್ರೀ ಮನು ಮಹಾ ಸಣ್ಣೆನಾಡ ತೆಂಕಣ ಬಾಗೆಯ ತೊರವಳ ಉತ್ತಿಯ ಕಾಡಗೋಡಿಯ ಸ್ಥಳದ ಸಮಸ್ತ ಗವುಡಗಳು ಸಣ್ಣೆ ರಾಜ್ಯದ ಸೇನಭೋವರಸರು ಬಾಚರಿಯ ಸಾತುಬೆಲ ಅಲ್ಲಾಳನಿಗೆ ಶಿಲಾಶಾಸನ ಮಾಡಿಕೊಟ್ಟ ಕ್ರಮ[೫೯೮]

ಹೊಯ್ಸಳ ನಂತರ ವಿಜಯನಗರದ ವ್ಯಾಪ್ತಿಗೆ ತೊರವಳನಾಡು ಒಳಪಟ್ಟಿತ್ತು. ಕ್ರಿ.ಶ.೧೩೬೩ ರಲ್ಲಿ ವೀರ ಬುಕ್ಕಣ ಒಡೆಯರ ಮಗ ಕಂಪಣ ಒಡೆಯರು ಮುಳುಬಾಗಿಲ ಪಟ್ಟಣದೊಳು ಪೃಥ್ವಿಗೈಯ್ಯುತ್ತಿರಲು ಕಾಮೈಯನಾಯ್ಕರು ಈ ರಾಜ್ಯದ ಗೌಡುಗಳ ಮುಂದಿಟ್ಟು ಎಲಹಂಕನಾಡ ಅಲ್ಲಾಳಜೀಯನ ಮಗ

---

[೫೯೪] ಎ.ಕ-೯, ಹೊ.ತಾ.೧೦೪, ಕ್ರಿ.ಶ.೧೩೩೨, ತಮಿಳು, ಸತ್ಯವಾರ.

[೫೯೫] ಎ.ಕ-೯, ಬೆಂ.೬೧, ಕ್ರಿ.ಶ.೧೩೩೨, ಹೂಡಿ,

[೫೯೬] ಎ.ಕ-೯, ಬೆಂ.೪೪, ಕ್ರಿ.ಶ.೧೩೩೪, ತಮಿಳು, ಇಂಮಡಹಳ್ಳಿ.

[೫೯೭] ಎ.ಕ-೯, ಬೆಂ ೬೦, ಕ್ರಿ.ಶ.೧೩೩೭, ತಮಿಳು, ಸಾದರಮಂಗಲ.

[೫೯೮] ಎ.ಕ-೯, ಬೆಂ.೪೧, ಕ್ರಿ.ಶ.೧೩೪೩, ಪಟ್ಟಂದೂರು.

ತಣ್ಣಿಯಪ್ಪಂಗೆ ಶಿಲಾಶಾಸನವ ಮಾಡಿಕೊಟ್ಟ ಕ್ರಮವೆಂದರೆ ತೆಂಕಣ ಬಾಗೆಯ ತೊರವಳನಾಡ ಬೆಳತ್ತನಾಯೆ ಮೂಳ ಗದ್ದ ಬೆದ್ದಲು ಚತುಸ್ಸೀಮೆಯನ್ನಾಳದನು ಸರ್ವಮಾನ್ಯವಾದ ಕೊಡುಗೆಯಾಗಿ[೫೯೯], ಕ್ರಿ.ಶ.೧೩೮೨ ರಲ್ಲಿ ವೀರ ಹರಿಯಣರಾಯರ ಕುಮಾರ ಬುಕ್ಕಣ ಒಡೆಯರು ಸಾಮ್ರಾಜ್ಯಗೆಯ್ಯುತಿರಲು ಸೇನಾಧಿಪತಿಯಾದ ಶ್ರೀ ವೀರ ವಳಸಿಂಹ ರಾಯನವರ ಜಯಗೊಂಡ ಚೋಳ ಮಂಡಲದ ತೊರವಳನಾಡ ಬನಹಳ್ಳಿಯ ಮೂಡಣದೆಸೆಯ ಪೆಂಮಸಮುದ್ರದ ಸೀಮೆಯಲ್ಲಿ ಪುರುಷೋತ್ತಮ ದೇವನು ಕಟ್ಟಿಸಿದ ಕೆರೆ ಸಲುವ ಅಗ್ರಹಾರ ತೊರವಳನಾಡ ಪ್ರಭುಗಳು ಮಾರಪ್ಪ ಚೂಡಿಯಪ್ಪ, ಸಾಕಗೌಡ, ಬೇಲೂರ, ತಿರುಮಲೆ ಇತ್ಯಾದಿ ಸೇರಿ ದಾನ ನೀಡಿದರು[೬೦೦]. ಕ್ರಿ.ಶ.೧೪೩೩ ರಲ್ಲಿ ದೇವರಾಯ ಮಹಾರಾಯರು ಸಾಮ್ರಾಜ್ಯಗೈಯ್ಯುತ್ತಿರಲು ತೊರವಳನಾಡ ಪ್ರಭು ದೇವಿಜೀಯನು ತಿರುಮಲ ದೇವರ ಸೇವೆಗೆ ಮಾಡಿಸಿದ ಕಂಬಕ್ಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ[೬೦೧]. ಕ್ರಿ.ಶ.೧೪೩೩ ರ ನಂತರ ತೊರವಳನಾಡಿನ ಬಗ್ಗೆ ಉಲ್ಲೇಖಗಳು ಕಂಡು ಬರುವುದಿಲ್ಲ ಬಹುಶಃ ವಿಸ್ತಾರವಾಗಿದ್ದ ಸಣ್ಣೆನಾಡಿನೊಂದಿಗೆ ವಿಲೀನಗೊಂಡಿರಬೇಕು.

## ೩.೧೪ ಮೈಸೂರು ಒಡೆಯರು

ಮೈಸೂರು ಅರಸರು ವಿಜಯನಗರ ಸಾಮ್ರಾಜ್ಯದ ಹಿರಿಯ ಸಾಮಂತರಲ್ಲಿ ಒಬ್ಬರಾಗಿ, ವಿಜಯನಗರ ಪತನದ ನಂತರ ಸ್ವತಂತ್ರರಾಗಿ ಆಳ್ವಿಕೆಯನ್ನು ಸುಮಾರು ೫೦೦ ವರ್ಷಗಳ ಕಾಲ ನಡೆಸಿದ ದೊಡ್ಡ ಮನೆತನದ ಮೊದಲ ರಾಜಧಾನಿ ಶ್ರೀರಂಗಪಟ್ಟಣವಾಗಿದ್ದು ನಂತರ ಮೈಸೂರಿಗೆ ಬದಲಾಯಿಸಿದರು.

ತಾವು ದ್ವಾರಕೆಯ ಯಾದವ ವಂಶದವರೆಂದೂ, ಕ್ರಿ.ಶ.೧೩೯೯ ರಿಂದಲೇ ತಮ್ಮ ಆಳ್ವಿಕೆ ಆರಂಭವಾಯಿತೆಂದು ಮೈಸೂರು ರಾಜ ಮನೆತನದವರು ಹೇಳಕೊಂಡಿದ್ದರೂ ಅವರು ಸ್ವತಂತ್ರವಾಗಿ ಆಡಳತ ಆರಂಭಿಸಿದ್ದು ೧೭ನೇಯ ಶತಮಾನದಿಂದಲೇ[೬೦೨] ಎನ್ನಬಹುದು. ವಿಜಯ ಮತ್ತು ಕೃಷ್ಣ ಎಂಬ ಯಾದವ ಕುಲದ ಸಹೋದರರು ಉತ್ತರ ಭಾರತದ ಗುಜರಾತಿನ ದ್ವಾರಕೆಯಿಂದ ಹೊರಟು ಮೈಸೂರಿನ ಸಮೀಪದ ಹದಿನಾಡಿಗೆ ಬಂದಾಗ ಕಾರುಗಹಳ್ಳಿಯ ನಾಯಕನಿಗೆ ಬಲವಂತವಾಗಿ ಮದುವೆ ಮಾಡಿ ಕೊಡಬೇಕಾಗಿದ್ದ ಹದಿನಾಡು ಪ್ರಭುವಿನ ಕನ್ಯೆಗೆ ರಕ್ಷಣೆ ನೀಡಿದರು. ಆ ಬಳಕ ಒಡೆಯ ಎಂಬ ಬಿರುದನ್ನು ಧರಿಸಿ, ಹದಿನಾಡು ಮತ್ತು ಕಾರುಗಹಳ್ಳಿಗಳನ್ನೊಳಗೊಂಡ ರಾಜ್ಯವನ್ನು ರೂಪಿಸಿಕೊಂಡ ವಿಜಯವನ್ನು

---

೫೯೯ ಎ.ಕ-೯, ಬೆಂ.೮೧, ಕ್ರಿ.ಶ.೧೩೬೩, ಬೇಗೂರು.

೬೦೦ ಎ.ಕ-೯, ಹೊ.ತಾ ೧೫೫, ಕ್ರಿ.ಶ.೧೩೮೨, ಚಿಕ್ಕಬನಹಳ್ಳಿ.

೬೦೧ ಎ.ಕ-೯, ಹೊ.ತಾ.೧೫೫, ಕ್ರಿ.ಶ.೧೪೩೩, ಬೆಳತೂರು.

೬೦೨ ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೧೫.

ಆ ಕನ್ಯೆಯನ್ನು ಸಹಜವಾಗಿ ಮದುವೆಯಾದಳು. ಮತ್ತೊಂದು ಐತಿಹ್ಯ ಪ್ರಾಕಾರ ಯಾದವ ಕುಲಕ್ಕೆ ಸೇರಿದ ರಾಜಕುಮಾರರು ಅಭಿರುಚಿ ಪ್ರೇರಿತವಾಗಿಯೇ ಅಥವಾ ಮೇಲುಕೋಟೆಯಲ್ಲಿ ತಮ್ಮ ಕುಲದೈವವನ್ನು ಕಾಣಲೆಂದೋ ಕರ್ನಾಟಕಕ್ಕೆ ಬಂದು ತಾಯ್ನಾಡಿನ ಸೌಂದರ್ಯದಿಂದ ಆಕರ್ಷಿತರಾಗಿ ಮಹಿಷಪುರ (ಮೈಸೂರು) ದಲ್ಲಿ ನೆಲೆಸಿ ಒಡೆಯರ ರಾಜಮನೆತನದ ಮೂಲ ಪುರುಷರಾದರು[೬೦೩] ಎಂದು ಮೈಸೂರು ಒಡೆಯರ ಸ್ಥಾಪನೆಯ ಬಗ್ಗೆ ಐತಿಹ್ಯಗಳಿವೆ.

ಮೊದಲನೆಯ ರಾಜ ವಿಜಯನಿಗೆ ಯದುರಾಜ ಎಂಬ ಹೆಸರಿದ್ದು, ಕ್ರಿ.ಶ.೧೩೯೯ ರಿಂದ ೧೪೨೫ ರವರೆಗೆ ರಾಜ್ಯವಾಳಿದನು[೬೦೪]. ಇವನ ಉತ್ತರಾಧಿಕಾರಿಯಾಗಿ ಕೃಷ್ಣದೇವರಾಯನ ಸಮಕಾಲೀನರಾಗಿದ್ದು[೬೦೫], ಮುಮ್ಮಡಿ ಚಾಮರಾಜ ಒಡೆಯ, ಬೆಟ್ಟದ ಮುಮ್ಮಡಿ ಚಾಮರಾಜ ಒಡೆಯ ಎಂಬ ಹೆಸರಿನಿಂದ ಕರೆಯುವ ಒಂದನೇಯ ಹಿರೇ ಬೆಟ್ಟದ ಚಾಮರಾಜನು (ಕ್ರಿ.ಶ.೧೪೩೨–೫೮) ತನ್ನ ಮೂರು ಮಕ್ಕಳಿಗೆ ಪ್ರತ್ಯೇಕ ರಾಜ್ಯಗಳನ್ನು ತನ್ನ ಅಧಿಕಾರಾವಧಿಯಲ್ಲೆ ಹಂಚಿದನು. ಮೊದಲನೇಯವನಾದ ತಿಮ್ಮರಾಜರಿಗೆ (ಕ್ರಿ.ಶ.೧೪೫೮–೭೮) ಹೆಮ್ಮನಹಳ್ಳಿಯನ್ನು, ಎರಡನೇಯವನಾದ ಪ್ರತಿಕೈಯಲ್ಲಿ ೬ ಬೆರಳಿದ್ದ ಕೃಷ್ಣರಾಜ ಒಡೆಯರಿಗೆ (ಕ್ರಿ.ಶ.೧೪೭೮–೧೫೧೩) ಕಂಬಾಳವನ್ನು, ಮೂರನೇಯವನಾದ ನಾಲ್ವಡಿ ಚಾಮರಾಜ ಒಡೆಯನಾದ ಬೋಳ ಚಾಮರಾಜ ಒಡೆಯರಿಗೆ (ಕ್ರಿ.ಶ.೧೫೭೧–೭೬) ಮೈಸೂರು ಪ್ರಾಂತ್ಯವನ್ನು ಹಂಚಲಾಗಿತ್ತು[೬೦೬]. ಹಾಗೆಯೇ ತನ್ನ ನಿವಾಸವನ್ನು ಮೈಸೂರಿಗೆ ವರ್ಗಾಹಿಸಿ ಅಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ತಿಮ್ಮರಾಜರಿಗೂ, ಕೃಷ್ಣರಾಜರಿಗೂ ಮಕ್ಕಳಿಲ್ಲದ ಕಾರಣ ಎಲ್ಲ ಪ್ರಾಂತಗಳು ಮೈಸೂರಿನ ಬೋಳ ಚಾಮರಾಜ ಒಡೆಯರಿಗೆ ಪ್ರಾಪ್ತವಾಯಿತ್ತು. ಬೋಳ ಚಾಮರಾಜ ಒಡೆಯರ ತರುವಾಯ ಮಗನಾದ ಬೆಟ್ಟದ ಚಾಮರಾಜ ಒಡೆಯರು (ಕ್ರಿ.ಶ.೧೫೭೬–೭೮) ಪಟ್ಟಕ್ಕೆ ಬಂದರೂ, ಧೀರ ಶೂರನಾದರೂ ರಾಜ್ಯಭಾರ ಮಾಡುವ ಸಾಮರ್ಥ್ಯವಿರಲಿಲ್ಲ. ಅದುದರಿಂದ ಬಲು ಬೇಗನೆ ಅವರ ಸೋದರನಾದ ರಾಜ ಒಡೆಯರನ್ನು ಹಿರಿಯರು ಪಟ್ಟಕ್ಕೇರಿಸಿದರು.

---

[೬೦೩] ಕರ್ನಾಟಕ ರಾಜ್ಯ ಗ್ಯಾಜಿಟಿಯರ್, ಸಂಪುಟ-೧, ಪು.ಸಂ-೨೫೧, ೨೫೨.

[೬೦೪] ಡಾ.ಬಿ.ಷೇಕ್ ಅಲಿ :- ಕರ್ನಾಟಕ ಇತಿಹಾಸ , ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪು.ಸಂ-೮೧.

[೬೦೫] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೧೫.

[೬೦೬] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೫೨೫.

## ರಾಜ ಒಡೆಯರು (ಕ್ರಿ.ಶ.೧೫೭೮–೧೬೧೭)

ಮೊದಲು ಶ್ರೀರಂಗ ಪಟ್ಟಣದಲ್ಲಿ ವಿಜಯನಗರದ ರಾಜ ಪ್ರತಿನಿಧಿಯಾಗಿ ತಿರುಮಲನ ಕೈಕೆಳಗೆ ಅಧಿಕಾರಿಯಾಗಿದ್ದ ರಾಜ ಒಡೆಯರು ತಲಕಾಡು, ಕನ್ನಂಬಾಡಿ ಮುಂತಾದ ಸ್ಥಳಗಳ ಸಣ್ಣ ಸಣ್ಣ ರಾಜರನ್ನು ಅಡಗಿಸಿ ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡ ಸಂದರ್ಭದಲ್ಲಿ ವಿಜಯನಗರ ಚಕ್ರವರ್ತಿಯಾದ ಎರಡನೆಯ ವೆಂಕಟಪತಿದೇವನು ಶ್ರೀರಂಗಪಟ್ಟಣದಲ್ಲಿದ್ದ ತನ್ನ ಪ್ರತಿನಿಧಿಯಾದ ತಿರುಮಲನು ತೋರಿಸುತ್ತಿದ್ದ ಅಸಡ್ಡೆಯ ದೆಸೆಯಿಂದ ರಾಜವೊಡೆಯರು ತಿರುಮಲನನ್ನು ಶ್ರೀರಂಗ ಪಟ್ಟಣದಿಂದ ಓಡಿಸಿ, ಚಕ್ರವರ್ತಿಯ ಒಪ್ಪಿಗೆಯ ಮೇರೆಗೆ ಶ್ರೀರಂಗಪಟ್ಟಣವನ್ನು ಪಡೆದುಕೊಂಡ[೬೦೭]. ನಂತರ ತನ್ನ ರಾಜಧಾನಿಯನ್ನು ಕ್ರಿ.ಶ.೧೬೧೦ ರಲ್ಲಿ ಮೈಸೂರಿಂದ ಶ್ರೀರಂಗಪಟ್ಟಣಕ್ಕೆ ವರ್ಗಾಯಿಸಿದನು. ಮತ್ತು ವೆಂಕಟಪತಿಯಿಂದ ಮೈಸೂರಿನ ರಾಜ ಎಂಬ ಬಿರುದನ್ನು ಪಡೆದು, ದಳವಾಯಿ ಹುದ್ದೆಯನ್ನು ಸ್ಥಾಪಿಸಿ, ದಸರಾ ಉತ್ಸವವನ್ನು ಆರಂಭಿಸಿ, ಹಲವಾರು ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದನು[೬೦೮]. ರಾಜ ಒಡೆಯ ಕ್ರಿ.ಶ.೧೫೭೮ರಲ್ಲಿ ಅಭಿಷಕ್ತನಾಗುವಾಗ ೩೦ ಗ್ರಾಮಗಳಿದ್ದು ನಂತರ ಸಾಮ್ರಾಜ್ಯವನ್ನು ವಿಸ್ತರಣೆ ಮಾಡಿದನು.

## ಆರನೇಯ ಚಾಮರಾಜ ಒಡೆಯರ್(ಕ್ರಿ.ಶ.೧೬೧೭–೩೭)

ರಾಜ ಒಡೆಯರ ಮರಣ ಪೂರ್ವದಲ್ಲೆ ಮಕ್ಕಳೆಲ್ಲರೂ ನಿಧನ ಹೊಂದಿದ್ದರು. ಮೊಮ್ಮಕ್ಕಳಲ್ಲೊಬ್ಬರಾದ ಆರನೇಯ ಚಾಮರಾಜ ಒಡೆಯರ್ ಪಟ್ಟಕ್ಕೆ ಬಂದು ಸಾಮ್ರಾಜ್ಯ ವಿಸ್ತರಣೆ ಕಡೆ ಗಮನ ಹರಿಸಿದರು[೬೦೯]. ಹಾಗೂ ವಾಲ್ಮೀಕಿ ರಾಮಾಯಣದ ಕನ್ನಡ ಗದ್ಯರೂಪವನ್ನು "ಚಾಮರಾಜಕೋಟಿ ವಿಲಾಸ" ಎಂಬ ಹೆಸರಿನ ಕೃತಿಯನ್ನು ರಚಿಸಿದರು[೬೧೦]. ಆರನೇಯ ಚಾಮರಾಜ ಒಡೆಯರು ಕ್ರಿ.ಶ.೧೬೩೭ರಲ್ಲಿ ಮೃತವಾದ ನಂತರ ಇಮ್ಮಡಿ ರಾಜ ಒಡೆಯರು ಪಟ್ಟಕ್ಕೆ ಬಂದ ವರ್ಷದೊಳಗೆ ದಳವಾಯಿಯ ವಿಷಪ್ರಾಶನದಿಂದ ಸತ್ತಾಗ[೬೧೧], ಬೆಟ್ಟದ ಚಾಮರಾಜನ ಮಗ ಒಂದನೇಯ ಕಂಠೀರವ ನರಸರಾಜ ಒಡೆಯರು (ಕ್ರಿ.ಶ.೧೬೩೮–೫೯) ಸಿಂಹಾಸನಾಧಿಪತಿಯಾದ ಮೇಲೆ ಕ್ರಿ.ಶ.೧೬೩೮ರಲ್ಲಿ ಬಿಜಾಪುರದ ಸೇನಾಧಿಪತಿ ರಣದುಲ್ಲಾಖಾನ್, ಷಹಜಿಯ ಸೈನ್ಯವನ್ನು ಹಿಮ್ಮೆಟ್ಟಸಿ ಖ್ಯಾತಿಗೊಂಡವನಾಗಿದ್ದು, ತನ್ನ ಹೆಸರಲ್ಲೆ ಕಂಠಿರಾಯ ಹಣ ಮತ್ತು ವರಹ ಎಂಬ ನಾಣ್ಯಗಳನ್ನು

---

[೬೦೭] ಡಾ.ಬಿ.ವಿ. ಸಾಬೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೭೮.

[೬೦೮] ಡಾ.ಬಿ.ಷೇಕ್ ಅಲಿ :- ಕರ್ನಾಟಕ ಇತಿಹಾಸ, ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪು.ಸಂ-೮೧.

[೬೦೯] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೫೨೭, ೫೨೯.

[೬೧೦] ಡಾ.ಬಿ.ಷೇಕ್ ಅಲಿ :- ಕರ್ನಾಟಕ ಇತಿಹಾಸ, ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪು.ಸಂ-೮೧.

[೬೧೧] ಕರ್ನಾಟಕ ರಾಜ್ಯ ಗ್ಯಾಜಿಟಿಯರ್, ಸಂಪುಟ-೧, ಪು.ಸಂ-೨೫೭.

ತಯಾರಿಸಲು ಒಂದು ಟಂಕಸಾಲೆಯನ್ನು ಸ್ಥಾಪಿಸಿದನು[೬೧೨]. ಕಾವೇರಿಪುರ, ಹಂಸಾಪುರ, ಬೆಟ್ಟದಪುರ, ಪೆರಿಯಾಪಟ್ಟಣ, ಅರಕಲಗೂಡು, ಕುಣಿಗಲ್, ರತ್ನಗಿರಿ, ದಣ್ಣಾಯಕನ ಕೋಟೆ, ಸತ್ಯಮಂಗಲ, ಹೊಸೂರು ಹಾಗೂ ಕೆಂಪೇಗೌಡನಿಂದ ಮಾಗಡಿಯನ್ನು ವಶಪಡಿಸಿಕೊಂಡನು[೬೧೩]. ಕೋಟೆಯ ಒಳಗೆ ನರಸಿಂಹ ಸ್ವಾಮಿ ದೇವಾಲಯವನ್ನು ಕಟ್ಟಿಸಿದನು.

## ದೊಡ್ಡದೇವರಾಜ ಒಡೆಯರು (ಕ್ರಿ.ಶ.೧೬೬೨–೭೨)

ಕಂಠೀರವ ನರಸರಾಜ ಒಡೆಯರು ಸಂತತಿ ಹೀನರಾಗಿದ್ದು, ಬೋಳಚಾಮರಾಜ ಒಡೆಯ ಮೊಮ್ಮಗನಾದ ದೊಡ್ಡದೇವರಾಜ ಒಡೆಯ ಮತ್ತು ಮರಿಮೊಮ್ಮಗ ಚಿಕ್ಕದೇವರಾಜ ಒಡೆಯ ಇಬ್ಬರಿಗೂ ಒಂದೇ ಸಮನಾದ ೩೨ ವರ್ಷ ವಯಸ್ಸಾಗಿದ್ದು ದೊಡ್ಡದೇವರಾಜ ಒಡೆಯರಿಗೆ ಪಟ್ಟ ಕಟ್ಟಲಾಯಿತು[೬೧೪]. ದೊಡ್ಡದೇವರಾಜ ಒಡೆಯರು ಚಾಮುಂಡಿ ಬೆಟ್ಟಕ್ಕೆ ೧೦೦೦ ಮೆಟ್ಟಿಲುಗಳನ್ನು ಕಟ್ಟಿಸಿದ್ದರು[೬೧೫].

## ಚಿಕ್ಕದೇವರಾಜ ಒಡೆಯರು (ಕ್ರಿ.ಶ.೧೬೭೨–೧೭೦೪)

ದೊಡ್ಡದೇವರಾಜ ಒಡೆಯರು ಪಟ್ಟಕ್ಕೆ ಬಂದ ಕಾಲದಲ್ಲಿ ಚಿಕ್ಕದೇವರಾಜ ಒಡೆಯರು ಬಂಧಿಗ್ರಸ್ತರಾಗಿದ್ದರು, ಕ್ರಿ.ಶ.೧೬೭೨ರಲ್ಲಿ ಪಟ್ಟವಾದ ನಂತರ ಹಲವು ಶತೃಗಳ ಮೇಲೆ ಯುದ್ಧ ಮಾಡಿ ಜಯಶೀಲರಾಗಿದ್ದು, ಪ್ರಸಿದ್ಧನಾದ ಶಿವಾಜಿಯನ್ನು ಸೋಲಿಸಿ ಅಪ್ರತಿಮ ವೀರ ಬಿರುದನ್ನು ಪಡೆದಿದ್ದನು. ಒಡೆಯರಿಗೆ ತಿರುಮಲರಾಯ ನಂಜರಾಜ, ದೇವರಾಜ ಮುಂತಾದ ದಳವಾಯಿಗಳಿದ್ದರು[೬೧೬]. ಕ್ರಿ.ಶ.೧೬೮೯ರಲ್ಲಿ ಚಿಕ್ಕದೇವರಾಯನು ಮೊಘಲರಿಂದ ಬೆಂಗಳೂರನ್ನು ಗುತ್ತಿಗೆಗೆ ಪಡೆದನು[೬೧೭]. ಮೊಘಲರಿಂದ ರಾಜ ಜಗದೇವ, ಮರಾಠರನ್ನು ಅನೇಕ ಯುದ್ಧಗಳಲ್ಲಿ ಜಯಿಸಿ ಮಹಾರಾಷ್ಟ್ರ ಭೂಪಾಲ ಜಾಲರಿವು ಎಂಬ ಬಿರುದುಗಳನ್ನು ಪಡೆದಿದ್ದನು. ಚಿಕ್ಕ ದೇವರಾಜನು ೧೮ ಶಾಖೆಗಳನ್ನು ಒಳಗೊಂಡ ಅಠಾರ ಕಛೇರಿಯೆಂಬ ಕೇಂದ್ರ ಆಡಳಿತ ಕಛೇರಿಯನ್ನು ಸ್ಥಾಪಿಸಿದರು. ಜೊತೆಗೆ ಹೊಸದೊಂದು ಮಣ್ಣಿನ ಕೋಟೆ, ಬೆಂಗಳೂರು ಕೋಟೆ, ವೆಂಕಟರಮಣ ಮಂದಿರವನ್ನು ನಿರ್ಮಿಸಿದನು[೧೬]. ಸಿಂಗಾರಯ್ಯ, ಚಿಕ್ಕೊಪಾಧ್ಯಾಯ, ಸಂಚಿಯ ಹೊನ್ನಮ್ಮ, ಸಿಂಗಾರಮ್ಮ ನಂತಹ ಕವಿ–ಕವಿಯಾತ್ರಿಯನ್ನು ಬೆಳೆಸಿದನು. ಹಾಗೆಯೇ ಸ್ವತಃ ಕವಿಯಾಗಿದ್ದು ಮೇಲುಕೋಟೆಯ ಚೆಲುವ ನಾರಾಯಣ ಸ್ವಾಮಿಯನ್ನು ಕುರಿತು

---

[೬೧೨] ಡಾ.ಬಿ.ಪಿ. ಸಾಬೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೨೮.

[೬೧೩] ಡಾ.ಬಿ.ಷೇಕ್ ಅಲಿ :- ಕರ್ನಾಟಕ ಇತಿಹಾಸ, ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪು.ಸಂ-೮೧.

[೬೧೪] ಕರ್ನಾಟಕ ರಾಜ್ಯ ಗ್ಯಾಜಿಟಿಯರ್‌ಸಂಪುಟ-೧, ಪು.ಸಂ-೨೫೨.

[೬೧೫] ಡಾ.ಬಿ.ಷೇಕ್ ಅಲಿ :- ಕರ್ನಾಟಕ ಇತಿಹಾಸ, ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪು.ಸಂ-೮೧.

[೬೧೬] ಡಾ.ಬಿ.ಪಿ. ಸಾಬೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು :- ಕನ್ನಡ ನಾಡಿನ ಚರಿತ್ರೆ ಭಾಗ -೧, ಪು.ಸಂ-೨೮.

[೬೧೭] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೧೭, ೨೧೮

"ಚಿಕ್ಕದೇವರಾಜ ಬಿನ್ನಪಂ" ಎಂಬ ಕೃತಿಯನ್ನು ರಚಿಸಿದರು[೬೧೮]. ಚಿಕ್ಕದೇವರಾಜ ಒಡೆಯರೈಯನವರ ಆಳ್ವಿಕೆಯಲ್ಲಿ ಕ್ರಿ.ಶ.೧೬೯೮ ರಲ್ಲಿ ಈ ಅಳದ ಸ್ವಾಮಿಯವರ ಸೇವಕ ದಾಸರಾಜಯ್ಯನವರು ನಿಜಗಲು ದುರ್ಗಕ್ಕೆ ಕಲ್ಲುಕೋಟೆ ಕಟ್ಟಿಸುವುದಕ್ಕೆ ಪ್ರಾರಂಭ ಮಾಡಿ[೬೧೯], ಕ್ರಿ.ಶ.೧೭೦೫ ರಲ್ಲಿ ಕೋಟೆಗೆ ಊರು ಬಾಗಿಲು, ಹುಲಿಮುಖ ಬಾಗಿಲು, ಹಜಾರದ ಚಾವುಡಿ, ದಕ್ಷಿಣ ದಿಕ್ಕಿನ ಊರಿನ ಬಾಗಿಲ ಬಳಿಯಲ್ಲಿ ವಿಘ್ನೇಶ್ವರ ಗುಡಿಯನ್ನು ನಿರ್ಮಿಸಿದನು[೬೨೦]. ಆದರೆ ಕ್ರಿ.ಶ.೧೭೦೪ ರಲ್ಲೆ ಚಿಕ್ಕ ದೇವರಾಜ ಒಡೆಯರು ಮರಣ ಹೊಂದಿದ್ದರಿಂದ[೬೨೧] ಶಾಸನದಲ್ಲಿ ಸಹ ಅಳದ ಸ್ವಾಮಿಯವರು ಎಂದು ಉಲ್ಲೇಖಿಸಲಾಗಿದೆ ಹಾಗೂ ಚಿಕ್ಕದೇವರಾಜ ಒಡೆಯರ ಅಧಿಕಾರವಧಿಯಲ್ಲಿ ಕೋಟೆ ಕೆಲಸ ಪ್ರಾರಂಭವಾಗಿದ್ದು, ಕೋಟೆ ಮುಕ್ತಾಯದಲ್ಲಿಯೂ ಅವರ ನೆನಪಿಗೆ ಅಥವಾ ಕೃತಜ್ಞತೆಗೆ ಅವರ ಹೆಸರಲ್ಲೆ ಶಾಸನವನ್ನು ಹೊರಡಿಸಲಾಗಿದೆ.

ಚಿಕ್ಕದೇವರಾಜರು ಬೆಂಗಳೂರು ಕೋಟೆ ಒಳಗೆ ನೂತನವಾಗಿ ಶ್ರೀವೆಂಕಟೇಶ್ವರ ದೇವರ ಪ್ರತಿಷ್ಟೆ ಮಾಡಿದಕ್ಕೆ ಅವರ ಮಗ ಶ್ರೀ ಕಂಠೀರವ ನರಸರಾಜ ಒಡೆಯರು ಕ್ರಿ.ಶ.೧೭೦೫ ರಲ್ಲಿ ದೇವಾಲಯಕ್ಕೆ ೪ ಗ್ರಾಮಗಳನ್ನು ದಾನ ನೀಡಿದರು[೬೨೨]. ಕ್ರಿ.ಶ.೧೭೦೪ ರಲ್ಲಿ ಚಿಕ್ಕದೇವರಾಜ ಒಡೆಯರ್ ಮರಣದ ನಂತರ ಮಗನಾದ ಮೂಗನಾಗಿರುವ ೨ನೇ ಕಂಠೀರವ ನರಸರಾಜನಿಗೆ (ಕ್ರಿ.ಶ.೧೭೦೪–೧೩) ಪಟ್ಟವಾಯಿತು. ಚಿಕ್ಕ ದೇವರಾಜರ ಮರಣದ ನಂತರ ಆರು ದಶಕಗಳ ದುರ್ಬಲರಾದ ಅರಸರೇ ಅಧಿಕಾರ ನಡೆಸುವಂತೆ ಆಯಿತು[೬೨೩]. ಚಿಕ್ಕದೇವರಾಜ ಒಡೆಯರ ಉತ್ತರಾಧಿಕಾರಿಗಳ ಕಾಲವನ್ನು ದಳವಾಯಿಗಳ ಅಧಿಪತ್ಯ ಕಾಲವೆಂದು ಕರೆಯಬಹುದು.

ಇಮ್ಮಡಿಕಂಠೀರವನರಸರಾಜ ಒಡೆಯ ತರುವಾಯ ಅವನ ತಮ್ಮಂದಿರಾದ ದೊಡ್ಡಕೃಷ್ಣರಾಜ ಒಡೆಯರು (ಒಂದನೇ ಕೃಷ್ಣ ರಾಜ ಒಡೆಯರು ಕ್ರಿ.ಶ.೧೭೨೩–೩೪) ಸಂತತಿ ಹೀನರಾಗಿದ್ದರಿಂದಾಗಿ ಹೇಮನಹಳ್ಳಿ ಶಾಖೆಯ ಚಾಮರಾಜ ಒಡೆಯರನ್ನು ಕೃಷ್ಣರಾಜ ಒಡೆಯರು ದತ್ತು ಸ್ವೀಕಾರ ಮಾಡಿದ್ದರು. ದೊಡ್ಡಕೃಷ್ಣರಾಜ ಒಡೆಯರ್ ಮರಣದ ನಂತರ ಚಾಮರಾಜರು ಏಳನೇಯ ಚಾಮರಾಜ ಒಡೆಯರೆಂಬ ಹೆಸರಿನಿಂದ ಪಟ್ಟಕ್ಕೆ ಬಂದರು[೬೨೪]. ದೊಡ್ಡಕೃಷ್ಣರಾಜರು ಏಳನೇಯ ಚಾಮರಾಜ ಒಡೆಯರ ಜೊತೆಗೆ

---

[೬೧೮] Suryanath.U.Kamath :- Karnataka State Gazetter, Bangalore Rural District, Page.no-83.

[೬೧೯] ಎ.ಕ-೯, ನೆ.ತಾ.೬೬, ಕ್ರಿ.ಶ.೧೬೯೬, ನಿಜಗಲ್ಲು.

[೬೨೦] ಎ.ಕ-೯, ನೆ.ತಾ.೬೫. ಕ್ರಿ.ಶ.೧೭೦೫. ನಿಜಗಲ್ಲು.

[೬೨೧] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೧೮.

[೬೨೨] ಎ.ಕ-೯, ಬೆಂ.೧೧೪, ಕ್ರಿ.ಶ.೧೭೦೫, ಕೊತ್ತನೂರು.

[೬೨೩] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೧೮.

[೬೨೪] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೫೪೫.

ಇನ್ನೊಬ್ಬರಾದ ಕೆಂಚನಗೂಡು ಶಾಖೆಗೆ ಸೇರಿದ ಚಿಕ್ಕರಾಜ (ಇಮ್ಮಡಿ ಕೃಷ್ಣರಾಜ ಒಡೆಯ ಕ್ರಿ.ಶ.೧೭೩೪–೬೬) ಒಡೆಯರನ್ನು ದತ್ತು ಸ್ವೀಕರಿಸಿದ್ದರು. ೭ನೇ ಚಾಮರಾಜ ಒಡೆಯರು ಮೃತರಾದಾಗ ಚಾಮರಾಜ ಒಡೆಯರ ಉತ್ತರಾಧಿಕಾರಿ ಕ್ರಿ.ಶ.೧೭೩೪ ರಲ್ಲಿ ಸಿಂಹಾಸನವೇರಿದ ಇಮ್ಮಡಿಕೃಷ್ಣರಾಜ ಒಡೆಯರಿಗೆ ೫ ವರ್ಷ ವಯಸ್ಸಾಗಿದ್ದು.

ಅಪ್ರತಿಮ ವೀರ ನರಪತಿ ಮಹೀಶೂರ ಕೃಷ್ಣರಾಜ ಒಡೆಯರೈಯ್ಯನವರು ಹೊಯ್ಸಳ ದೇಶಾ ಕುರುವಂಕ ನಾಡ ಸ್ಥಳ ಕಾವೇರಿ ಮಧ್ಯ ಪಶ್ಚಿಮ ರಂಗನಾಥ ಸ್ವಾಮಿಯವರ ಶ್ರೀರಂಗ ಪಟ್ಟಣದಲ್ಲು ರತ್ನ ಸಿಂಹಾಸನ ರೂಢರಾಗಿ ಸುಖದಿಂದ ಇರಲು ಕ್ರಿ.ಶ.೧೭೨೦ರಲ್ಲಿ ಶೂರ ಗಿರಿದುರ್ಗದ ಲಕ್ಮಿ ನರಸಿಂಹ ಸ್ವಾಮಿಯ ಪಡಿತರ ದೀಪಾರಾಧನೆ ಮುಂತಾದ ಸಕಲ ಸೇವೆಗೆ ಬಿಳಗಲಿ ದಾಸರಾಜೈಯನು ವಿಜ್ಞಾಪವನೆ ಮಾಡಿಕೊಂಡು ದೆಶೆಯಿಂದ ಶೂರ ಗಿರಿ ಸ್ಥಳದ ಹೆಗ್ಗುಂದ ಹೋಬಳಿಯ ಗೋಟಿಗೆರೆಗೆ ಪ್ರತಿನಾಮವಾದ ನರಸಿಂಹ ಪುರದ ಗ್ರಾಮವನ್ನು ದಾನ ನೀಡಿದರು[೬೨೫]. ಕ್ರಿ.ಶ.೧೭೪೯ ರಲ್ಲಿ ಚಾಮುಂಡೇಶ್ವರಿ ದೇವಿಗೆ[೬೨೬], ಕ್ರಿ.ಶ.೧೭೫೦ರಲ್ಲಿ ನಂಜನಗೂಡು ನಂಜುಂಡೇಶ್ವರ ಸ್ವಾಮಿಗೆ, ಚನ್ನರಾಯ ಪಟ್ಟಣದ ಹೋಬಳಗೆ ದ್ಯಾವಂಡಹಳ್ಳಿ ಸ್ಥಳದ ಮಹದೇವ ಕೊಡಿಗೆಹಳ್ಳಿ, ಗೆರೆಪುರ, ಯಡಯೂರು ಗ್ರಾಮವನ್ನು[೬೨೭], ಕ್ರಿ.ಶ.೧೭೫೨ರಲ್ಲಿ ಮೇಲ್ಮಣ ಗವಿ ಸಿಂಹಾಸನದ ವೀರೇಶ್ವರ ದೇವರಿಗೆ ದಳವಾಯಿ ನಂಜುಂಡೈಯ ಅರಸಿನವರ ಸೇವೆ[೬೨೮], ಕ್ರಿ.ಶ.೧೭೬೩ರಲ್ಲಿ ಮಸೀದಿಗೆ[೬೨೯], ಕ್ರಿ.ಶ.೧೭೬೩ರಲ್ಲಿ ಕ್ರಯ ಭೂದಾನವಾಗಿ ನಾರಾಯಣಭಟ್ಟನಿಗೆ ಶೂರಗಿರಿಸ್ಥಳದ ಕಂಬಾಳು ಹೋಬಳಿ ಮಾಚನಹಳ್ಳಿ, ಗೊಟ್ಟಿಗೆರೆಪಾಳ್ಯ, ಕೆರೆ, ಹೆಗುಂದವಳಿತದ ಅಪ್ಪುಗೊಂಡನಹಳ್ಳಿಯನ್ನು ಕೊಟ್ಟರು[೬೩೦]. ಕ್ರಿ.ಶ.೧೭೦೦ರ ಸುಮಾರಿನಲ್ಲಿ ಮಹಾರಾಯನ ಮನೆಯ ಕುದುರೆ ಬಹರಿಚನ ಮಲಿ ಸೆಟ್ಟರ ಮಗ ಚನ್ನಣನು ಸೆಟ್ಟಿರು ಗಂಗಾಧರ ಮಜನದಕ್ಕೆ ದಾನ ನೀಡಿದ್ದರು[೬೩೧]. ಕೃಷ್ಣರಾಜ ಒಡೆಯರು ಶಿವಗಂಗೆ ಶ್ರಿ ಸ್ವರ್ಣಾಂಬಾ ಅಮ್ಮನವರ ಸನ್ನಿಧಿಗೆ ಬಿದಿಯ ಸೇವೆ[೬೩೨], ತಟ್ಟೆ ಸೇವೆ[೬೩೩], ಬೆಳ್ಳಿಯ ಚಾಮರದ ಸೇವೆ[೬೩೪], ಹಿತ್ತಾಳೆ ದೊಡ್ಡ ತಪ್ಪಲೆಯ

---

[೬೨೫] ಎ.ಕ-೯, ನೆ.ತಾ.೭೦. ಕ್ರಿ.ಶ ೧೭೨೦, ನರಸಿಂಹ ಪುರ.
[೬೨೬] ಎಮ್.ಎ.ಆರ್, ೧೯೧೪, ದೇವನಹಳ್ಳಿ, ಜಾಲಿ, ಪು.ಸಂ-೫೯.
[೬೨೭] ಎ.ಕ-೯, ದೇ.ತಾ.೬೯, ಕ್ರಿ.ಶ.೧೭೫೦, ಮಹದೇವ ಕೊಡಿಗೆಹಳ್ಳಿ.
[೬೨೮] ಎ.ಕ-೯, ನೆ.ತಾ.೭೬, ಕ್ರಿ.ಶ.೧೭೫೨, ಶಿವಗಂಗೆ.
[೬೨೯] ಎ.ಕ-೯, ನೆ.ತಾ.೮, ಕ್ರಿ.ಶ.೧೭೬೩, ತಾಮ್ರಶಾಸನ, ಸೊಂಡೆಕೊಪ್ಪ.
[೬೩೦] ಎ.ಕ-೯, ನೆ.ತಾ.೫೧, ಕ್ರಿ.ಶ.೧೭೬೩, ತ್ಯಾಮಗೊಂಡ್ಲು.
[೬೩೧] ಎ.ಕ-೯, ನೆ.ತಾ.೭೪, ಕ್ರಿ.ಶ.೧೭೦೦, ಶಿವಗಂಗೆ.
[೬೩೨] ಎ.ಕ-೯, ನೆ.ತಾ.೯೨, ಬೆಳ್ಳಿಯ ಕೊಡವ ಮೇಲೆ, ನೆಲಮಂಗಲ ಖಜಾನೆ
[೬೩೩] ಎ.ಕ-೯, ನೆ.ತಾ.೯೩, ತಟ್ಟೆ ಮೇಲೆ, ನೆಲಮಂಗಲ ಖಜಾನೆ
[೬೩೪] ಎ.ಕ-೯, ನೆ.ತಾ.೯೫, ನೆಲಮಂಗಲ ಖಜಾನೆ

ಮೇಲೆ ಮೈಸೂರು ಆಳಿದ ಮಹಾಸ್ವಾಮಿಯ ಭಕ್ತಿಸೇವೆ[೬೩೫], ಹೊನ್ನಾಂಬಿಕೆಯ ಬಂಗಾರದ ಕಂಠಾಭರಣದ ಪದಕದ ಮೇಲೆ ಮಹಿಶೂರ ಸಂಸ್ಥಾನದ ಚಾಮರಾಜ ಒಡೆಯರ ಧರ್ಮಪತ್ನಿಯವರಾದ ದ್ಯಾವಜ ಅಮ್ಮಣಿಯವರ ಸೇವಾರ್ಥವಾಗಿ[೬೩೬] ದಾನ ನೀಡಿದ್ದರು. ಕ್ರಿ.ಶ.೧೭೬೬ರಲ್ಲಿ ೨ನೇ ಕೃಷ್ಣರಾಜ ತೀರಿಕೊಳ್ಳಲು ಮಗ ನಂಜರಾಜನಿಗೆ ಪಟ್ಟವಾಯಿತು. ಈತ ಹೆಸರಿಗೆ ಮಾತ್ರ ಅರಸನಾಗಿ ಮೈಸೂರು ರಾಜಮನೆತನಕ್ಕೆ ಗ್ರಹನ ಹಿಡಿದಂತಾಯಿತು. ದಳವಾಯಿ ನಂಜರಾಜನ ಸೇನೆಯಲ್ಲಿ ಸಾಧಾರಣ ಸೇನಾನಿಯಾಗಿದ್ದ ಹೈದರ್ ಕ್ರಿ.ಶ.೧೭೪೯ ರಲ್ಲಿ ದೇವನಹಳ್ಳಿಯನ್ನು ಗೆಲ್ಲುವಾಗ ಅಸಾಧಾರಣ ಶೌರ್ಯ ತೋರಿ ಖ್ಯಾತಿಗೆ ಬಂದನು[೬೩೭]. ಹೈದರಾಲಿ, ಟಿಪ್ಪುಸುಲ್ತಾನನು ಸರ್ವಾಧಿಕಾರಿಯಾಗಿ ಆಳ್ವಿಕೆ ನಡೆಸಿದನು. ಸರ್ವಾಧಿಕಾರ ಅಂತ್ಯಗೊಂಡು ನಂತರ ಮೈಸೂರು ಅರಸರು ದುರ್ಬಲರಾಗಿದ್ದು, ಬ್ರಿಟಿಷರ ಅಧೀನದಲ್ಲಿ ಆಡಳಿತ ನಡೆಸಿದರು.

[೬೩೫] ಎ.ಕ-೯, ಅನುಬಂಧ, ನೆ.ತಾ.೧೪೦, ನೆಲಮಂಗಲ ಖಜಾನೆ

[೬೩೬] ಎ.ಕ-೯, ನೆ.ತಾ.೧೨೨, ನೆಲಮಂಗಲ ಖಜಾನೆ

[೬೩೭] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೧೮, ೨೧೯.

# ಅಧ್ಯಾಯ – ೪

## ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗಳು

ಶಾಸನಗಳು ನಾಡಿನಾಳಿದ ರಾಜರ ಇತಿಹಾಸವಾಗಿರದೆ ಅಲ್ಲಿ ಬದುಕಿದ ಜನತೆ ಬದುಕಿದ ರೀತಿ, ಜೀವನ ಮೌಲ್ಯ, ಅನುಸರಿದ ಧರ್ಮ, ಕಟ್ಟಿದ ಕಲೆ ಇತ್ಯಾದಿಯಾಗಿರುವುದನ್ನ ಶಾಸನಗಳು ಜನಜೀವನದ ಸಾಂಸ್ಕೃತಿಕ ಇತಿಹಾಸವನ್ನು ಹೇಳುವ ಪ್ರಮುಖ ಸಾಧನಗಳಾಗಿವೆ. ಸಮಾಜದಲ್ಲಿನ ಜನರು ರೂಡಿಸಿ ಕೊಂಡಿರುವ ಸಂಪ್ರದಾಯ, ಆಚರಣೆಗಳು ಇತ್ಯಾದಿಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಶಾಸನಗಳು ಪ್ರಾಚೀನ ಜನತೆಯ ಧಾರ್ಮಿಕ ಜೀವನ, ಸಾಮಾಜಿಕ ಕಟ್ಟುಪಾಡುಗಳು ಜೊತೆಗೆ ಶಾಸನಗಳು ಹೊರಡಿಸಿದ ಕಾಲದ ಜನರ ಜೀವನ ಮೌಲ್ಯಗಳನ್ನು ವ್ಯಕ್ತ ಪಡಿಸುತ್ತದೆ.

### ೪.೧ ಧಾರ್ಮಿಕ ಸ್ಥಿತಿಗಳು

ಮಾನವನು ನಿರ್ವಹಿಸಬೇಕಾದ ಕರ್ತವ್ಯಗಳು ಅವನು ಕೈಗೊಳ್ಳಬೇಕಾದ ಕರ್ಮಗಳನ್ನು 'ಧರ್ಮ'ವೆಂದೇ ಪರಿಗಣಿಸಲಾಗುತ್ತಿತ್ತು. ಭಾರತದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ವೈದಿಕ ಧರ್ಮವು ಒಂದು. ಪ್ರಾಚೀನ ನಂಬಿಕೆಗಳು ಮತ್ತು ಆಚರಣೆಗಳು ವೈದಿಕ ಧರ್ಮದ ನೆಲೆಗಳಾಗಿದ್ದು, ಈ ಧರ್ಮದ ಅಂಗಗಳಾಗಿ ಶೈವ, ವೈಷ್ಣವ ಧರ್ಮಗಳು ಜನರ ನಂಬಿಕೆಗಳಿಗೆ ಸಮಾಜದ ಅವಿಭಾಜ್ಯ ಅಂಗಗಳಾಗಿ, ಆಚರಣೆಗಳಿಗೆ ಪೂರಕವಾಗಿ ಹಲವಾರು ದೇವಾಲಯಗಳು ನಿರ್ಮಾಣವಾಗಿದೆ. ಒಂದು ಸಮಾಜ ಬದಲಾದಂತೆ ಸಹಜವಾಗಿಯೇ ಆ ಸಮಾಜವನ್ನು ನಂಬಿಕೊಂಡು ಬಂದಿದ್ದಂತಹ ರೀತಿ–ನೀತಿಗಳು, ಆದರ್ಶಗಳು, ಜೀವನ ಮೌಲ್ಯಗಳು ಬದಲಾವಣೆಯಾಗುತ್ತಿತ್ತು. ಧರ್ಮಗಳು ಬದಲಾದಂತೆ ಆಯಾ ಧರ್ಮದ ಮೌಲ್ಯಗಳು ಬದಲಾಗುತ್ತಿತ್ತು. ಜಿಲ್ಲೆಯಲ್ಲಿನ ದೇವಾಲಯಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಾದೇಶಿಕತೆಯ ಅನುಗುಣವಾಗಿ ಅಂದರೆ ಯಾವ ಪ್ರದೇಶದಲ್ಲಿ ಯಾವ ಮತಪಂಥದ ಪ್ರಭಾವ ಅಧಿಕವಾಗಿರುತ್ತದೆಯೋ ಅದಕ್ಕೆ ತಕ್ಕಂತೆ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇಲ್ಲಿ ಆಳಿದ ಎಲ್ಲ ಅರಸರೂ ದೇವಸ್ಥಾನಗಳ ನಿರ್ಮಾಣದ ಜೊತೆಗೆ ಬಸದಿ ನಿರ್ಮಾಣಕ್ಕೂ ಸಹ ಮಾಡಿದ್ದಾರೆ. ಧರ್ಮದತ್ತ ಆಸಕ್ತರಾಗಿದ್ದ ಜನರು ಪರಮಸಿದ್ಧಿಯನ್ನು ದೇವಾಲಯ ನಿರ್ಮಾಣ, ದಾನ–ದತ್ತಿಗಳ ಮೂಲಕ ಅಭಿವ್ಯಕ್ತಿಸಿದ್ದಾರೆ. ಒಂದು ದೇವಾಲಯ ನಿರ್ಮಾಣವಾದರೆ ಅದಕ್ಕೆ ಆಳಾರಸನಿಂದ ಹಿಡಿದು ಎಲ್ಲ ವರ್ಗದ ಜನರು ತಮ್ಮ ಕೈಲಾದ ಮಟ್ಟಿಗೆ ದಾನ–ದತ್ತಿಗಳ ನೆರವು ನೀಡುತ್ತಿದ್ದರು. ಧರ್ಮ ಕಾರ್ಯಗಳಿಗಾಗಿ ದಾನ ನೀಡುವುದನ್ನು ತಮ್ಮ ಪವಿತ್ರ ಕರ್ತವ್ಯವೆಂದೇ ಭಾವಿಸಿದ್ದರು. ಇದರಿಂದ ಗಂಗವಾಡಿಯ ಮೂಲೆ ಮೂಲೆಗಳಲ್ಲೂ ದೇವಾಲಯಗಳು ನಿರ್ಮಾಣಗೊಂಡಿವೆ.

ಪ್ರಾಚೀನ ಕಾಲದಿಂದಲು ವಿವಿಧ ಧಾರ್ಮಿಕ ನಂಬಿಕೆಗಳ, ಧಾರ್ಮಿಕ ಶ್ರದ್ದೆಯ ವಿವಿಧ ಧರ್ಮಗಳು ಬೆಳಕಿಗೆ ಬಂದಿದೆ. ಬ್ರಾಹ್ಮಣ ವಿರೋಧಿ ನೆಲೆಯಿಂದಲೇ ಕ್ಷತ್ರಿಯ ವರ್ಗಕ್ಕೆ ಸೇರಿದವರಾದ ಬುದ್ಧರ, ಸಿದ್ಧಾರ್ಥ, ಬೌದ್ದಧರ್ಮ ಹಾಗೂ ಜೈನಧರ್ಮ ಉಗಮಕ್ಕೆ ಕಾರಣವಾಯಿತ್ತು.

ಶೈವ ಧರ್ಮದಲ್ಲಿ ಶಿವನೇ ಪ್ರಮುಖ ಆರಾಧ್ಯ ದೈವನಾದರೆ, ವೈಷ್ಣವ ಧರ್ಮದಲ್ಲಿ ವಿಷ್ಣುವೇ ಪ್ರಮುಖ ಆರಾಧ್ಯ ದೈವ. ಶಿವ ಮತ್ತು ವಿಷ್ಣುವಿನ ವಿಭಿನ್ನ ಅವತಾರಗಳನ್ನು, ವಿಭಿನ್ನ ಹೆಸರುಗಳಿಂದ ಪೂಜಿಸುತ್ತಾ, ಆರಾಧಿಸುವ ನಂಬಿಕೆಗಳು ಉಳಿದುಕೊಂಡು ಬಂದಿದೆ. ಶೈವ, ವೈಷ್ಣವ ಧರ್ಮಗಳೆರಡನ್ನು ಪರಿಪಾಲಿಸುವ ಭಾಗವತರನ್ನು ಹಾಗು ವಿಭಿನ್ನ ಮಠಗಳು, ಯತಿಗಳು, ಧರ್ಮಗಳು ಹುಟ್ಟಿ ಕೊಂಡಿದ್ದವು. ಗಂಗರಸರಿಂದ ಮೈಸೂರು ಒಡೆಯರವರೆಗೆ ಹಲವಾರು ರಾಜವಂಶಗಳು ತಮ್ಮ ತಮ್ಮ ಪ್ರದೇಶದಲ್ಲಿ ತಮ್ಮ ರಾಜಧರ್ಮ ಮತ್ತು ಇತರ ಧರ್ಮವನ್ನು ಸಮನ್ವಯ ಪೂರಕವಾಗಿ ಅನೇಕತೆಯಲ್ಲಿ ಏಕತೆ ಎಂಬಂತೆ ಪೋಷಿಸಿದ್ದಾರೆ. ಬೌದ್ಧ, ಜೈನ, ಶೈವ, ವೀರಶೈವ, ಕಾಳಮುಖ, ನಾಥಪಂಥ, ವೈಷ್ಣವ ಮುಂತಾದ ಧರ್ಮಗಳು ಆಶ್ರಯ ಪಡೆದಿದ್ದವು.

## ಬೌದ್ಧಧರ್ಮ

ಅಶೋಕನ ಕಾಲದಲ್ಲಿ ಮೂರನೇ ಬೌದ್ಧ ಸಮ್ಮೇಳನವು ಪಾಟಲೀಪುತ್ರದಲ್ಲಿ ಥೇರಮೊಗ್ಗಲಿ ಪುತ್ರನ ನೇತೃತ್ವದಲ್ಲಿ ನಡೆದ ಮೇಲೆ ಬೌದ್ಧ ಧರ್ಮವನ್ನು ನೆರೆಯ ದೇಶಗಳಲ್ಲಿ ಪ್ರಚಾರ ಮಾಡುವುದಕ್ಕಾಗಿ ಅಶೋಕನು ಬೌದ್ಧ ಭಿಕ್ಷುಗಳನ್ನು ನಾನಾ ಭಾಗಗಳಿಗೆ ಕಳುಹಿಸಿ ಕೊಟ್ಟನು. ಅದರಲ್ಲಿ ಥೇರ ಮಹಾದೇವ ಮತ್ತು ಥೇರ ರಕ್ಷಿತರನ್ನು ಮಹಿಷ ಮಂಡಲದ ಬನವಾಸಿಗೆ ಕಳುಹಿಸಲಾಯಿತು[೧]. ಹೀಗೆ ಕ್ರಿ.ಪೂ.ಮೂರನೇಯ ಶತಮಾನದಿಂದ ಮೌರ್ಯರು ಕರ್ನಾಟಕದಲ್ಲಿ ಬೌದ್ಧ ಧರ್ಮವನ್ನು ಪ್ರಚಾರ ಮಾಡಿದರು. ಕರ್ನಾಟಕದ ಮಸ್ಕಿ, ಕೊಪ್ಪಳ, ನಿಟ್ಟೂರು, ಬಡೆಗೊಳ್ಳಂ, ಸಿದ್ದಾಪುರ, ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಗುಲ್ಬಾರ್ಗದ ಸನ್ನತಿಯಲ್ಲಿ ಅಶೋಕನ ಶಾಸನಗಳು ಹಾಗೂ ಬೌದ್ಧ ಧರ್ಮವನ್ನು ಪ್ರತಿಬಿಂಬಿಸುವ ಮಹಾ ಸ್ತೂಪಗಳು ಬೌದ್ಧ ಧರ್ಮದ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ಮೌರ್ಯರ ನಂತರದಲ್ಲಿ ಶಾತವಾಹನರು ಹಾಗೂ ಚುಟುಕುಲಾನಂದ ಮನೆತನಗಳ ಅರಸರು ಬೌದ್ಧ ಧರ್ಮದ ಪೋಷಣೆಯನ್ನು ಮಾಡಿದರು.

ದಕ್ಷಿಣ ಕರ್ನಾಟಕದ ದಕ್ಷಿಣ ಭಾಗದಲ್ಲಿ ಬೌದ್ಧಧರ್ಮಕ್ಕೆ ಮೊಟ್ಟ ಮೊದಲ ಪ್ರಾಚೀನ ನೆಲೆಯ ಉತ್ಖನನವೆಂದರೆ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟ. ರಾಜಘಟ್ಟ ಕ್ಕೆ ಈ ಹೆಸರು ಹೇಗೆ, ಏಕೆ

[೧] ಡಾ. ಎಸ್. ಗಣಪತಿಗೌಡ :- ಉತ್ತರ ಕನ್ನಡ ಜಿಲ್ಲೆಯಲ್ಲಿ ಬೌದ್ಧ ಧರ್ಮ, ಪು.ಸಂ-೨೦.

ಬಂತೆಂಬುದಕ್ಕೆ ದಾಖಲೆಗಳಿಲ್ಲ. ಬೌದ್ಧ ಸಂಸ್ಕೃತಿಯ ಕೇಂದ್ರವಾಗಿ ಹೊಂದಿರುವುದರಿಂದ ರಾಜಘಟ್ಟ ಎಂಬ ಹೆಸರು ಬಂದಿರಬೇಕು. ವಾರಣಾಸಿಯ ಬಳಿಯ ರಾಜಘಟ್ಟ ಪ್ರದೇಶದಲ್ಲಿ ನೆಲೆಸಿದ್ದ ಬೌದ್ಧ ಧರ್ಮಾತ್ಮರುಗಳು ದಕ್ಷಿಣಕ್ಕೆ ವಲಸೆ ಬಂದಿರುವ ಸಾಧ್ಯತೆಗಳಿಂದಾಗಿ ಈ ರೀತಿಯ ಹೆಸರು ಬರಲು ಕಾರಣವಾಗಿರಬೇಕು. ಗ್ರಾಮದ ಆಗ್ನೇಯಕ್ಕೆ ೧೦೦ ಎಕರೆ ಪ್ರದೇಶದ ವಿಸ್ತೀರ್ಣದಲ್ಲಿ ೮-೧೦ ಅಡಿ ಆಳದವರೆಗೆ ಬೂದಿ ಮಿಶ್ರಿತ ಮಣ್ಣುಗಳನ್ನು ಕಂಡರೆ ಯಾರಿಗಾದರೂ ಇದೊಂದು ಜನವಸತಿ ನಿವೇಶನವಾಗಿರಬೇಕು ಎಂದೆನಿಸುತ್ತದೆ.

ಈ ನಿವೇಶದಲ್ಲಿ ಕೆಂಪು ಮತ್ತು ಕಪ್ಪು ಬಣ್ಣದ ಮಡಕೆಗಳು, ಚಿತ್ರದ ಮಡಕೆಗಳು, ಶಂಕು ಮತ್ತು ದಂತದಲ್ಲಿ ಮಾಡಿದ ಆಭರಣಗಳ ಚೂರುಗಳು, ಗಾಜಿನ, ಕಲ್ಲಿನ ಮಣಿಗಳು ಹಾಗೂ ಚೈತ್ಯಾಲಯ, ವಿಹಾರ, ಸ್ತೂಪಗಳು ಮುಂತಾದವುಗಳನ್ನು ೧೯೭೫ ರಲ್ಲಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ, ಮೈಸೂರು ವಿಭಾಗ ವತಿಯಿಂದ ಶೋಧಿಸಲಾಗಿತ್ತು. ಬೌದ್ಧ ಭಿಕ್ಷುಗಳು ಇದ್ದು ಧಾರ್ಮಿಕ ಚಟುವಟಿಕೆಗಳನ್ನು ನಡೆಸುತ್ತಿದ್ದರು ಎಂಬುದಕ್ಕೆ ನೂರಾರು ಸಂಖ್ಯೆಯಲ್ಲಿ ಮಣ್ಣಿನಲ್ಲಿ ಮಾಡಿದ ಹರಕೆಯ ಸ್ತೂಪಗಳು ಬೌದ್ಧ ಮತಾವಲಂಬಿಗಳ ಭಾವನೆ ಮತ್ತು ನಂಬಿಕೆಗಳ ಪ್ರತೀಕವಾದ ಇವುಗಳನ್ನು ಕ್ರಿ.ಶ.೪-೫ ನೇ ಶತಮಾನಕ್ಕೆ ಸೇರಿಸ ಬಹುದೆಂದು ಡಾ.ಎಂ.ಎಸ್. ಕೃಷ್ಣಮೂರ್ತಿ ಅಭಿಪ್ರಾಯ ಪಟ್ಟಿದ್ದಾರೆ. ಈ ಅವಶೇಷದ ಆಧಾರದ ಮೇಲೆ ಬೌದ್ಧ ಧರ್ಮದ ಮಹಾಯಾನ ಪಂಥವು ಪ್ರಚಲಿತದಲ್ಲಿದ್ದರ ಬಗ್ಗೆ ಮಾಹಿತಿಯು ಲಭಿಸಿದಂತಾಯಿತ್ತು. ಹರಕೆಯ ಸ್ತೂಪಗಳ ಗರ್ಭದಲ್ಲಿ ಸುಡಾನೆ ಮಣ್ಣಿನ ವೃತ್ತಾಕಾರದ ಮಾತ್ರೆಗಳು ಇದ್ದು, ಬೌದ್ಧ ಮಂತ್ರವನ್ನು ಬ್ರಾಹ್ಮೀ ಲಿಪಿಯಲ್ಲಿ ಸೂಕ್ಷ್ಮವಾಗಿ ಕೆತ್ತಲಾಗಿದೆ.

ರಾಜಘಟ್ಟದಲ್ಲಿ ದೊರೆತ ಉತ್ಖನನದಲ್ಲಿ ಚೈತ್ಯಾಲಯದ ಅವಶೇಷವೇ ಪ್ರಮುಖವಾದ ಆಕರ್ಷಣೆಯಾಗಿದ್ದು, ಬೂದಿ ಗುಂಡಿಯ ನಿವೇಷನದಲ್ಲಿ ಸುಟ್ಟ ಇಟ್ಟಿಗೆಗಳಿಂದ ನಿರ್ಮಿಸಿದ ದಕ್ಷಿಣಾಭಿಮುಖವಾಗಿರುವ ಚೈತ್ಯಾಲಯಕ್ಕೆ ಯಾವುದೇ ಕಂಬಗಳಿಲ್ಲ. ಮುಖ್ಯದ್ವಾರದ ಮುಂಭಾಗದಲ್ಲಿ ಕಲ್ಲುಗಳಿಂದ ಮಾಡಲಾಗಿದೆ. ಹೊರಭಿತ್ತಿಯಲ್ಲಿ ಸುಂದರವಾದ ಮೂರ್ತಿಶಿಲ್ಪ, ಕಥಾನಕ ಶಿಲ್ಪ, ಪ್ರಾಣಿಶಿಲ್ಪ, ವಿಭಿನ್ನ ಭಾವ ಭಂಗಿಯ ಮಾನವನ ಶಿರೋಭಾಗಗಳು, ಪಾದಗಳು, ಸಿಂಹ ಮುಖಗಳು, ಆನೆ, ಕುದುರೆ, ಮುಂತಾದ ಪೌರಾಣಿಕ ಪ್ರಾಣಿಗಳ ಶಿಲ್ಪಗಳು, ಬುದ್ಧ ಶಿಲ್ಪಗಳು, ಭೌತಿಕ ಕತೆಗಳು ಕೆಲವು ಪಕ್ಷಿಗಳ ಶಿಲ್ಪಗಳು ಹೇರಳವಾಗಿ ದೊರೆತಿವೆ.

ಹೊಲವನ್ನು ಉಳುವಾಗ ನೆಲದಿಂದ ಹೊರ ಬರುತ್ತಿದ್ದ ಸಣ್ಣ ಸಣ್ಣ ಮಣ್ಣಿನ ಸ್ತೂಪಗಳನ್ನು ಗ್ರಾಮಸ್ಥರು ಕುತೂಹಲದಿಂದ ಪರೀಕ್ಷಿಸಿ, ಅವುಗಳ ಒಡೆದು ಭಾಗದಲ್ಲಿದ್ದ ಮಣ್ಣಿನ ನಾಣ್ಯ ರೀತಿಯ ಅಕ್ಷರ ಮುದ್ರೆಯನ್ನು ವೀಕ್ಷಿಸಿ ಬಿಸಾಕುತ್ತಿದ್ದರು. ಒಂದು ಕಡೆ ರಾಶಿಯಲ್ಲಿ ೩೦೦ ಹರಕೆಯ ಸ್ತೂಪಗಳ ಗುಡ್ಡೆ

ಕಂಡು ಬಿದ್ದಿದ್ದು, ಎಲ್ಲಾ ಸ್ತೂಪಗಳು ಒಂದೇ ರೀತಿಯಲ್ಲಿರದೇ ಭಿನ್ನವಾಗಿದ್ದವು. ಸ್ತೂಪದ ಒಳಗೆ ಒಂದೊಂದು ಬೌದ್ಧ ಧ್ಯಾನ ಶ್ಲೋಕದ ಮುದ್ರೆಯನ್ನು ಹೊಂದಿರುವ ಮಣ್ಣಿನ ಬಿಲ್ಲೆಯನ್ನು ಸೇರಿಸುತ್ತಿದ್ದರು[೨].

ಮನೆಯ ಗೋಡೆಯ ಅವಶೇಷದ ಭಾಗ, ಬೂದಿ ಮಿಶ್ರಿತ ಮಣ್ಣಿನಿಂದ ಕೂಡಿದ್ದಾಗಿದ್ದು, ಸುಮಾರು ೪ ಅಥವಾ ೫ನೇ ಶತಮಾನದ ನಂತರ ಬೇರೆ ಯಾವುದೋ ಕಾಯಿಲೆ ಅಥವಾ ಮಾರಕ ರೋಗ ಅಥವಾ ಪ್ರಾಕೃತಿಕ ವಿಕೋಪಗಳಿಂದ ಬೇರೆ ಕಡೆ ವಲಸೆ ಹೋಗಿರಬೇಕು. ಬೌದ್ಧ ಧರ್ಮಿಕರು ತಮ್ಮ ವಾಸ ಸ್ಥಳ ಬಿಟ್ಟು ಬೇರೆ ಕಡೆ ಹೋಗುವಾಗ ಹಳೆಯ ಪ್ರದೇಶದಲ್ಲಿನ ಎಲ್ಲಾ ವಸ್ತುಗಳಿಗೆ ಬೆಂಕಿಗೆ ಆವುತಿ ನೀಡಿ ಹೋಗುತ್ತಿದ್ದರು. ನೆಲಮಂಗಲ ತಾಲ್ಲೂಕಿನ ಮಣ್ಣೆಯಲ್ಲಿ ಸುಮಾರು ೪ ಎಕರೆ ವಿಸ್ತೀರ್ಣದಲ್ಲಿದ್ದ ಬೂದಿ ಮಣ್ಣನ್ನು ಸುತ್ತ ಮುತ್ತಲಿನ ಗ್ರಾಮಸ್ಥರು ಹಣ ಕೊಟ್ಟು ಕೊಂಡು ತಮ್ಮ ಹೊಲಗಳಿಗೆ ಗೊಬ್ಬರದ ಹಾಗೇ ಬಳಸುತ್ತಿದ್ದಾರೆ. ಟಿ.ಬೇಗೂರು ಸಮೀಪದ ಬೂದಿಹಾಳು ಗ್ರಾಮದಲ್ಲಿ ಸುಮಾರು ೮-೧೦ ಎಕರೆ ಪ್ರದೇಶದಲ್ಲಿ, ದೇವನಹಳ್ಳಿ ತಾಲ್ಲೂಕಿನ ಬೂದಿಗೆರೆ ಗ್ರಾಮದಲ್ಲಿ ಕೆರೆಯ ಪೂರ್ಣಭಾಗವು ಬೂದಿಯಿಂದ ಆವೃತ್ತವಾಗಿತ್ತು. ಹಿಂದೆ ಋಷಿ ಮುನಿಗಳು ವಾಸವಿದ್ದು ನಂತರ ಹೋಗುವಾಗ ಎಲ್ಲವನ್ನು ಸುಟ್ಟು ಬೂದಿ ಮಾಡಿ ಹೋಗಿದ್ದರಂತೆ ಕೆರೆಯ ತುಂಬೆಲ್ಲಾ ಬೂದಿಯಿದ್ದಿದ್ದರಿಂದ ಬೂದಿಗೆರೆ ಹೆಸರು ಬರಲು ಕಾರಣವಾಯಿತಂತೆ. ಅರದೇಶನಹಳ್ಳಿಯಲ್ಲಿ ಕೆರೆಗೆ ಹೋಗುವ ರಸ್ತೆಯಲ್ಲಿ ಎರಡು ಕಡೆಗಳಲ್ಲಿ ಬೂದಿಹಳ್ಳ ಎಂಬ ಹೆಸರಿನಿಂದ ಕರೆಯುವ ಪ್ರದೇಶವಿದೆ. ಇಲ್ಲಿ ಸುಮಾರು ೧೦-೧೨ ಹೆಕ್ಟೇರ್ ಪ್ರದೇಶದಲ್ಲಿ ಬೂದಿ ಮಿಶ್ರಿತ ಮಣ್ಣು ಕಂಡು ಬರುತ್ತದೆ. ಈ ಊರಿನ ಸುತ್ತಮುತ್ತಲಿನ ಜನರು ಈ ಭೂಮಿಯ ಮಣ್ಣನ್ನು ಗೊಬ್ಬರವಾಗಿ ಉಪಯೋಗಿಸಲು ತೆಗೆಯುತ್ತಿದ್ದಾಗ ಕೆಲವು ನಾಣ್ಯಗಳು, ಮಡಕೆಗಳು, ಮೂಳೆಗಳು ಲೋಹದ ತುಕ್ಕು ಹಿಡಿದ ವಸ್ತುಗಳು ಕಂಡು ಬಂದಿವೆ. ಮಣ್ಣೆ, ಬೂದಿಹಾಳು, ಬೂದಿಗೆರೆಯನ್ನು ಸೂಕ್ಷವಾಗಿ ಗಮನಿಸಿದರೆ ಈ ಪ್ರದೇಶಗಳಲ್ಲಿ ಬೌದ್ಧರು ವಾಸವಾಗಿರಬೇಕು. ರಾಜಘಟ್ಟದಿಂದ ಮಣ್ಣೆ ಮತ್ತು ಬೂದಿಹಾಳು, ಅರದೇಶನಹಳ್ಳಿ ಕೆಲವು ಕಿ.ಮಿ. ಹಂತದಲ್ಲಿರುವುದರಿಂದ ಈ ಅನುಮಾನಗಳು ಕಾಡುತ್ತದೆ.

ಶಿವಗಂಗೆಯ ಹೊನ್ನಾದೇವಿಯ ಪಾದವು ಗಂಗಾ ತೀರ್ಥದ ಬಳಿಯಿದೆ. ಸ್ತಂಭಗಳನ್ನಿಟ್ಟು ಪಾದಗಳನ್ನು ಕೆತ್ತುವುದು ಬೌದ್ಧ ಕಾಲದ ಪದ್ಧತಿಯಾಗಿದ್ದು ಈ ಹಿನ್ನೆಲೆಗಳಿಂದ ಗಮನಿಸಿದರೆ ಬೌದ್ಧ, ಸಿದ್ಧರು ಈ ಗಿರಿಯನ್ನು ನೆಲೆಯಾಗಿಸಿ ಕೊಂಡಿರಬೇಕು. ಈ ಎಲ್ಲಾ ಪಹರೆಗಳ ಚಾಲ್ತಿಯ ಮೂಲ ಬೌದ್ಧ,

[೨] ಡಾ. ಎಂ.ಎನ್. ಕೃಷ್ಣಮೂರ್ತಿ & ಎಂ.ಡಿ. ಮಹದೇವಯ್ಯ :- ಕರ್ನಾಟಕದ ಬೌದ್ದ ಧರ್ಮದ ಮೇಲೆ ಹೊಸ ಬೆಳಕು ರಾಜಘಟ್ಟ ಉತ್ಖನನ, ಪು.ಸಂ-೧ ರಿಂದ ೯.

ಸಿದ್ದರು ಇದ್ದೆಡೆಯಲ್ಲಿ ಇವೆಲ್ಲವನ್ನು ಅಡಕ ಮಾಡಿಕೊಂಡು ಜನಾರಾಧನೆಗೆ ಮಾಡಿರಬೇಕು. ಶಿವಗಂಗೆಯ ಪೂರ್ವಕ್ಕೆ ಇರುವ ಕುಕ್ಕಲನಾಡಿನ ಪ್ರದೇಶದಲ್ಲಿ ನಾಥ ಪಂಥದ ಕುರುಹುಗಳು ನಿಚ್ಚಳವಾಗಿ ಕಂಡು ಬಂದಿದೆ. ನಾಥ ಪಂಥಕ್ಕೆ ಮೂಲವಾದ ಬೌದ್ಧ ಸಿದ್ಧರ ಅವಶೇಷಗಳು ಶಿವಗಂಗೆಯ ಆಸು ಪಾಸಿನಲ್ಲಿ ವಿಶೇಷವಾಗಿ ಕಂಡು ಬಂದಿದೆ. ರಾಜಘಟ್ಟವನ್ನು ಬಿಟ್ಟರೆ ಮಾಗಡಿ ತಾಲ್ಲೂಕಿನ ಕಲ್ಯ ಅಥವಾ ಕಲಾವತಿ ನಗರವು ಒಂದು ಪ್ರಸಿದ್ಧ ಬೌದ್ಧ ಕೇಂದ್ರವಾಗಿತ್ತೆಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ. ಕ್ರಿ.ಶ.೧೫೩೩ ರ ತುರುವೆಕೆರೆ ಶಾಸನದಲ್ಲಿ "ಬೌದ್ಧವಾಸ ಮಗಾಪುರೀ ಕಲವತೀತ ವಿಖ್ಯಾತ ವತ್ತ ಹರಿಣಾವಟಿ" ಎಂಬ ಉಲ್ಲೇಖವಿರುವುದರಿಂದ[೩] ಕಲ್ಯದ ತಾರಕಾಚಲ ಗವಿ ಬೌದ್ದ ಸಿದ್ದರ ನೆಲೆಯಾಗಿದ್ದು, ಅನಂತರದಲ್ಲಿ ಬೌದ್ದ, ಸಿದ್ದರು ನಾಥ ಪಂಥದ ಮೂಲಕ ಶೈವೀಕರಣಗೊಂಡು ಕಾಳಾಮುಖರಾಗಿ ವೀರಶೈವರಾಗಿರ ಬಹುದೆಂದು[೪] ಎಂ.ಜಿ.ನಾಗರಾಜುರವರು ಅಭಿಪ್ರಾಯ ಪಟ್ಟಿದ್ದಾರೆ. ಜಿಲ್ಲೆಯಲ್ಲಿ ಬೌದ್ಧ ಧರ್ಮಕ್ಕೆ ಕುರಿತಂತೆ ಗಂಗರ ಯಾವುದೇ ದಾಖಲೆಗಳು ಜಿಲ್ಲೆಯಲ್ಲಿ ದೊರೆತಿಲ್ಲ. ಆದರೆ ತುಮಕೂರು ಜಿಲ್ಲೆಯಲ್ಲಿ ಮಾಧವ ಶರ್ಮನು ಬೌದ್ದ ವಿಹಾರಕ್ಕೆ ಭೂಮಿಯನ್ನು ದಾನ[೫] ನೀಡಿದ ವಿಷಯವು ದಾಖಲಾಗಿದೆ. ವಿಜಯನಗರ ಅರಸರ ಕಾಲಾವಧಿಗೆ ಸಂಪೂರ್ಣವಾಗಿ ಹೆಸರೇ ಇಲ್ಲದಂತಾಯಿತು. ಹಿಂದೂ ದೇವಾಲಯದಲ್ಲಿನ ವಿಷ್ಣುವಿನ ದಶಾವತಾರ ಶಿಲ್ಪಗಳಲ್ಲಿ ಬುದ್ಧನನ್ನು ಒಂಭತ್ತನೇ ಅವತಾರವೆಂದು ಪರಿಗಣಿಸಲಾಯಿತು.

## ಜೈನಧರ್ಮ

ಜೈನ ಧರ್ಮವು ಕ್ರಿಸ್ತ ಪೂರ್ವ ಕಾಲದಲ್ಲಿಯೇ ಕರ್ನಾಟಕಕ್ಕೆ ಪ್ರವೇಶಿಸಿ ಶತ ಶತಮಾನಗಳ ಕಾಲ ಗಂಗರು, ರಾಷ್ಟ್ರಕೂಟರು, ಹೊಯ್ಸಳರು ಮುಂತಾದ ಅರಸು ಮನೆತನಗಳ ಆಶ್ರಯದಿಂದಾಗಿ ಕರ್ನಾಟಕದ ಪ್ರಬಲ ಧರ್ಮವಾಗಿ ಹೊರ ಹೊಮ್ಮಿತ್ತು. ಇದಕ್ಕೆ ಬಿ.ಎ.ಸಾಲೆತೊರೆಯವರು ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕ ಜೈನಧರ್ಮದ ಇತಿಹಾಸವೇ ಆಗಿದೆ ಎಂದು ಹೇಳಿದ್ದಾರೆ.

ಆತ್ಮವು ಮೋಕ್ಷವನ್ನು ಪಡೆಯ ಬೇಕಾದರೆ ಪಾಪ ಪುಣ್ಯಗಳೆರಡನ್ನು ಮೀರಿ ನಿಲ್ಲಿಸಬೇಕು. ಮೋಕ್ಷಕ್ಕೆ ಮನುಷ್ಯನಿಗೆ ಕಠಿಣವಾದ ಸಾಧನೆ ಅವಶ್ಯ. ಜಿನನು ಮೋಕ್ಷವನ್ನು ಪಡೆಯಬೇಕಾದರೆ ಸಮ್ಯಾಗ್ ಜ್ಞಾನ, ಸಮ್ಯಾಗ್ ದರ್ಶನ, ಸಮ್ಯಾಗ್ ಚಾರಿತ್ರಗಳು ಪೋಷಕವಾಗಿ ಬಂದಾಗ ಮೋಕ್ಷ ಅಥವಾ ನಿರ್ಮಾಣ ಲಭಿಸುತ್ತದೆ. ಈ ಮೂರನ್ನು ತ್ರಿರತ್ನಗಳೆಂದು ಕರೆಯುತ್ತಾರೆ. ಜೈನ ಧರ್ಮದಲ್ಲಿ

[೩] ಎಂ. ಚಿದಾನಂದ ಮೂರ್ತಿ :- ಹೊಸತು ಹೊಸತು, ಪು.ಸಂ-೨೫೯.

[೪] ಎಂ.ಜಿ. ನಾಗರಾಜ್ :- ರಾಮಗಿರಿ, ಶಿವಗಂಗೆ ಮತ್ತು ಕಲ್ಯದ ಐತಿಹಾಸಿಕ ಸ್ಥಳಗಳು, ಅರ್ಕಾವತಿ ಸ್ಮರಣ ಸಂಚಿಕೆ, ಪು.ಸಂ-೨೪೫.

[೫] ಎ.ಕ.೧೬, ಅನುಬಂಧ, ತು.ತಾ.೭೮, ಮೆಳಕೋಟೆ.

ಇಪ್ಪತ್ತನಾಲ್ಕು ತೀರ್ಥಂಕರರನ್ನು ಪೂಜಿಸುತ್ತಿದ್ದು, ಕೊನೆಯ ತೀರ್ಥಂಕರನಾದ ಮಹಾವೀರನು ಬುದ್ಧನ ಸಮಕಾಲೀನನಾಗಿದ್ದು, ಮಹಾವೀರನ ನಂತರ ಧರ್ಮವು ದಿಗಂಬರ, ಶ್ವೇತಾಂಬರ ಎಂದು ೨ ಪಂಗಡಗಳಾಗಿ ಉದಯಿಸಿದವು. ಜೈನ ಮುನಿಗಳು ಅಲೌಕಿಕ ಸುಖವನ್ನು ಪಡೆಯುವುದಕ್ಕಾಗಿ ಸಕಲವನ್ನು ತ್ಯಾಗ ಮಾಡಿ, ಅಹಿಂಸೆಯೇ ಪರಮ ಧರ್ಮವೆಂದು ಜೀವನವನ್ನು ನಡೆಸುತ್ತಿರುತ್ತಾರೆ. ಜೈನ ಮುನಿಗಳ ಹೆಸರನ್ನು ಹೇಳುವಾಗ ಅವರ ಸಂಘ, ಗಣ, ಗಚ್ಚ, ಅನ್ವಯಗಳನ್ನು ಹೇಳುವುದು ಸಾಮಾನ್ಯ. ಜೈನ ಸನ್ಯಾಸಿಗಳು ಮಳೆಗಾಲದ ೪ ತಿಂಗಳು ಹೊರತು ಪಡಿಸಿ ಉಳಿದ ಕಾಲದಲ್ಲಿ ವಿಹಾರಿಸುತ್ತಿದ್ದು ಕಾಲ ಕ್ರಮೇಣ ಮುನಿಗಳು ಬಸದಿಗಳಲ್ಲಿ ವಾಸಿಸಲಾರಂಭಿಸಿದರು.

ಕ್ರಿ.ಪೂ. ಕಾಲದಿಂದಲೂ ಅಂದರೆ ಚಂದ್ರಗುಪ್ತ ಮೌರ್ಯನ ಕಾಲದಿಂದಲೂ ಶ್ರವಣಬೆಳಗೊಳ ಜೈನ ಧರ್ಮದ ಪ್ರಸಿದ್ಧ ಕೇಂದ್ರವಾಗಿ ಚಂದ್ರಗುಪ್ತ ಮೌರ್ಯ ಹಾಗೂ ಭದ್ರಬಾಹು ಅವರ ಸಂಗಡಿಗರು ನೆಲೆಸಿರುವುದಕ್ಕೆ ಹಲವಾರು ಶಾಸನಗಳು ಲಭಿಸುತ್ತದೆ. ಹಾಗೇಯೆ ಚಂದ್ರಗುಪ್ತ ಮೌರ್ಯನು ಇಲ್ಲಿಯೇ ಸಲ್ಲೇಖನ ವ್ರತ ಕೈಗೊಂಡು ಪ್ರಾಣತ್ಯಾಗ ಮಾಡಿದನೆಂದು ಹೇಳಲಾಗುತ್ತದೆ.

ಪ್ರಾಚೀನ ಆಳರಸರು ಮೂಲತಃ ವೈದಿಕ ಧರ್ಮದವರಾಗಿದ್ದವರು ಅಪ್ಪಿಕೊಂಡು ಜೊತೆಯಲ್ಲಿ ಜೈನ ಧರ್ಮದ ಶ್ರೇಯೋಭಿವೃದ್ಧಿಗೆ ಕಾರಣೀ ಭೂತರಾದರು. ಗಂಗರು ಜೈನ, ಶೈವ, ವೈಷ್ಣವ ಪಂಥಗಳಿಗೆ ಮಹತ್ವದ ಸ್ಥಾನವನ್ನು ನೀಡಿದ್ದಾರೆ. ಆದರೆ ನಾವು ಗಂಗರನ್ನು ಜೈನರಂದೇ ಭಾವಿಸುತ್ತೇವೆ. ಅದಕ್ಕೆ ಕಾರಣ ಕರ್ನಾಟಕದ ಸಾಮ್ರಾಜ್ಯಗಳಲ್ಲಿ ಬೇರೆ ಯಾವುದೇ ರಾಜ ಮಹಾರಾಜರು ನೀಡದಷ್ಟು ಪ್ರೋತ್ಸಾಹವನ್ನು ಗಂಗರು ಜೈನ ಧರ್ಮಕ್ಕೆ ನೀಡಿರುವುದು. ಪ್ರಸಿದ್ಧ ಜೈನ ಕೇಂದ್ರವಾದ ಶ್ರವಣಬೆಳಗೊಳದಲ್ಲಿ ಗಂಗರು ಜೈನ ಧರ್ಮಕ್ಕೆ ಸಂಬಂಧಿಸಿದ ಹಲವು ಬಸದಿಗಳ ಜೊತೆಗೆ ವಿಶ್ವ ಪ್ರಸಿದ್ಧ ಗೊಮ್ಮಟ ಮೂರ್ತಿಯನ್ನು ನಿರ್ಮಿಸಿದ್ದಾರೆ. ಗಂಗರ ಮನೆತನದ ಪ್ರಾರಂಭಕ್ಕೆ ಸಿಂಹನಂದಿ ಎಂಬ ಜೈನ ಮುನಿಯು ಕಾರಣನಾದನೆಂದು ಹೇಳಲಾಗಿದ್ದರು. ಮೂಲತಃ ವೈದಿಕ ಸಂಪ್ರದಾಯದವರಾದ ಗಂಗರು ಜೈನ ಧರ್ಮವನ್ನು ನಂತರದ ಕಾಲದಲ್ಲಿ ಪಾಲಿಸಲು ಆರಂಭಿಸಿದರು. ಗಂಗರಲ್ಲಿ ಒಬ್ಬ ಗಣ್ಯನಾದ ಶಿವಮಾರನು ಜೈನನಾಗಿದ್ದು, ಶ್ರವಣ ಬೆಳಗೊಳದಲ್ಲಿ ಚಂದ್ರಪ್ರಭ ಬಸದಿಯನ್ನು ಕಟ್ಟಿಸಿದನು[೬]. ಬಸದಿಯ ಸಮೀಪದಲ್ಲಿರುವ ಪೂರ್ವೋಕ್ತದಲ್ಲಿ ಶಿವಮಾರನ ಶಾಸನ ಇದ್ದು, ಲಿಪಿಯ ದೃಷ್ಟಿಯಿಂದ ೮ನೇ

[೬] ಡಾ.ಸೂರ್ಯನಾಥ ಕಾಮತ್:-ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೩೮.

ಶತಮಾನವೆಂದು ನಿರ್ಧರಿಸಲಾಗಿದೆ[೭]. ಬಹುಶಃ ಪಟ್ಟವೇರಿದ ನಂತರ ಬಸದಿಯನ್ನು ನಿರ್ಮಿಸಿರಬೇಕು. ಯಾಕೆಂದರೆ ಅನಂತರ ಧೃವನ ಜೊತೆಗಿನ ಯುದ್ಧದಲ್ಲಿನ ಸೋಲಿನಿಂದ ಕಾರಗೃಹದಲ್ಲಿದ್ದನು.

ಶಿವಮಾರನ ಮಗ ಮಾರಸಿಂಹನ ಸಾಮಂತಾಧಿಪತಿಯಾದ ಶ್ರೀವಿಜಯನು ಮಾನ್ಯಪುರದಲ್ಲಿ ಕ್ರಿ.ಶ.೭೯೭ ರಲ್ಲಿ ನಿರ್ಮಿಸಿ, ದಾನ ನೀಡಿದ ಜಿನೇಂದ್ರ ಭವನಕ್ಕೆ ಕ್ರಿ.ಶ.೮೦೨ ರಲ್ಲಿ ರಾಷ್ಟ್ರಕೂಟರ ೩ನೇ ಗೋವಿಂದನ್ನು ದಾನ ನೀಡುವಾಗ ಜೈನ ಗುರುಗಳಾದ ತಾರಣಾಚಾರ್ಯನನ್ನು ಉಲ್ಲೇಖಿಸುವುದನ್ನು ಗಮನಿಸಿದರೆ ಆ ಕಾಲಕ್ಕಾಗಲೇ ಮಣ್ಣೆಯಲ್ಲಿ ಜೈನಗುರು ಪರಂಪರೆ, ಅರ್ಹತರು ಇದ್ದರೆಂದರೆ ಜೈನರು ಮಣ್ಣೆಯಲ್ಲಿ ಹೆಚ್ಚಾಗಿರಬೇಕು. ಜೈನ ಸಾಂಸ್ಕೃತಿಕ ಕೇಂದ್ರವಾಗಿದ್ದ ಮಣ್ಣೆಯಲ್ಲಿ ಪಿಳ್ಳಲಬ್ಬೆ ಮತ್ತು ಮಾರಬ್ಬೆ ಕಂತಿಯರ ನಿಷಿಧಿಗಳಿವೆ. ಮಾರಬ್ಬೆ ಕಂತಿಯೂ ಶ್ರೀದೇವೇಂದ್ರ ಪಂಡಿತ ಭಟ್ಟರ ಶಿಷ್ಯೆಯಾಗಿದ್ದಳು. ಈಕೆ ಸಲ್ಲೇಖನ ವ್ರತದಿಂದ ಮರಣಿಸಿದಾಗ ಕಲಿಜಗಬ್ಬೆ ಕಂತಿಯು ಆಕೆಯ ನೆನಪಿಗಾಗಿ ನಿಷಧಿಗಲ್ಲನ್ನು ಹಾಕಿಸಿದ್ದರು. ಜಿನಾಲಯದ ನರ್ತಕಿಯರಿಗೆ, ಹಾಡುಗಾರ್ತಿಯರಿಗೆ, ವಾದ್ಯಗಳನ್ನು ಬಡಿಯುವವರಿಗೆ, ದೇವರ ಪೂಜೆ, ಊದು ಬತ್ತಿಗಳಿಗಾಗಿ ಪೆರ್ವಡಿಯೂರು ಗ್ರಾಮವನ್ನು ದತ್ತಿ ನೀಡಿದನು. ಹಿಂದೂ ದೇವಾಲಯಗಳಂತೆಯೇ ಜಿನಾಲಯಗಳಲ್ಲಿಯೂ ಸಹ ದೇವದಾಸಿಯರಿಂದ ನೃತ್ಯ ಕಾರ್ಯಕ್ರಮಗಳು ಜರುಗುತ್ತಿದ್ದವೆಂಬುದು ಸ್ಪಷ್ಟವಾಗುತ್ತದೆ. ಸೂಳೆ ಬಸದಿಯ ಬಳಿಯಲ್ಲಿ ಜಿನನ ರುಂಡವನ್ನು ೨೦೦೦ ದಲ್ಲಿ ಸಿದ್ಧಗಂಗಾ ಕಾಲೇಜಿನ ವಿದ್ಯಾರ್ಥಿಗಳು ಎನ್.ಎಸ್.ಎಸ್. ಶಿಬಿರದ ಸಂದರ್ಭದಲ್ಲಿ ಹೊರತೆಗೆದು ಸರ್ಕಾರಿ ಹೈಸ್ಕೂಲ್ ಆವರಣದಲ್ಲಿಸಿದ್ದಾದೆ.

ಅವನೀತನ ಹೆಂಡತಿಯಾದ ಜೇಷ್ಟಾದೇವಿಯು ಜೈನಧರ್ಮದ ಆರಾಧಕಳಾಗಿದ್ದು, ಜೈನಧರ್ಮದ ಗುರುವಾದ ವಿಜಯಕೀರ್ತಿ[೮] ಶಿಷ್ಯೆಯಾಗಿರುತ್ತಾಳೆ. ಅವನೀತನು ತನ್ನ ೧೨ನೇ ವರ್ಷದ ಆಳ್ವಿಕೆಯಲ್ಲಿ ಪಲ್ಲವ ಅಧಿರಾಜ ಸಿಂಹ ವಿಷ್ಣುವಿನ ತಾಯಿಯು ತನ್ನ ಭಾತ್ರ್ಯಕುಲದ ಯಶಸ್ವಿಗಾಗಿ, ತನ್ನ ಶ್ರೇಯೋಭಿವೃದ್ಧಿಗಾಗಿ ಯಾಪನೀಯ ಸಂಘದ ಅಚಾರ್ಯರಿಗಾಗಿ ಕೊರಿಕುಂದ ಭಾಗದ ಪುಲಿಯೂರಲ್ಲಿ ಕಟ್ಟಿಸಿದ ಬಸದಿಗೆ ಮಹಾಕೆರೆಯ ಕೆಳಗೆ ನೀರಾವರಿ ಭೂಮಿಯನ್ನು ದಾನ ನೀಡಿದನು[೯]. ಈ ಯಾಪನೀಯರು ತಮ್ಮದೇ ಆದ ಆಚಾರ ವಿಚಾರಗಳಿಂದ ತುಂಡು ಬಟ್ಟೆಗಳಿಂದ ಅರ್ಧ ಶರೀರವನ್ನು ಮುಚ್ಚಿಕೊಳ್ಳುತ್ತಿದ್ದರಿಂದ ಅರ್ಧಪಾಲಕರೆಂದು ಬೇಗೂರು, ಮಣ್ಣೆ, ಹೂಜಿಗಲ್ಲು, ಸಂಕೀಘಟ್ಟ, ಮಾಳೂರು, ಸಾತನೂರು, ಬಸ್ತೂರು, ಕುಪ್ಪಪಾಳ್ಯ, ಮಾಯಸಂದ್ರ ಮುಂತಾದ ಪ್ರದೇಶಗಳಲ್ಲಿ ನೆಲೆಸಿದ್ದರು.

[೭] ಕೆ.ವಸಂತಲಕ್ಷ್ಮಿ :- ಶ್ರವಣ ಬೆಳಗೊಳದ ಶಿವಮಾರನ ಬಸದಿ, ಇ.ದ.ಸಂ-೩, ಪು.ಸಂ-೧೧೨.

[೮] ಎ.ಕ-೯, ರೈಸ್ ಆವೃತ್ತಿ, ಪು.ಸಂ-೧೮.

[೯] ಎಂ.ಎ.ಆರ್, ೧೯೩೮, ಮೈಸೂರು, ೫ ನೇ ಶತಮಾನ, ಅವನೀತ, ಹೊಸಕೋಟೆ, ಪು.ಸಂ-೮೦ ರಿಂದ ೮೧.

ಹೊಯ್ಸಳರ ಪ್ರಾರಂಭ ಕಾಲದಲ್ಲಿ ವಿವಿಧ ಧರ್ಮಗಳ ನಡುವೆ ಉತ್ತಮ ಸಂಬಂಧವಿತ್ತು. ವಿಷ್ಣುವರ್ಧನನ ಪಟ್ಟದ ರಾಣಿ ನಾಟ್ಯರಾಣಿಯರಾದ ಶಾಂತಲಾ ದೇವಿಯು ಶಿವಗಂಗೆಯಲ್ಲಿ ಸಲ್ಲೇಖನ ವ್ರತ ಕೈಗೊಂಡು ಮುಕ್ತಿ ಪಡೆದ ಸಂಗತಿ ಕ್ರಿ.ಶ.೧೧೩೧ ರ ಶ್ರಾವಣ ಬೆಳಗೊಳದ ಸವತಗಂಧವಾಣಿ ಬಸದಿಯ ಶಾಸನದಲ್ಲಿ ಉಲ್ಲೇಖವಾಗಿದೆ. ಅದರಂತೆ "ಸಿವಗಂಗಾ ಕ್ಷೇತ್ರ ತೀರ್ಥದೊಳ್ ಮುಡುಪಿ" ಎಂದಿದೆ. ಈಕೆಯ ನೆನಪಿಗಾಗಿ ವಿಷ್ಣುವರ್ಧನನು ಶಿವಗಂಗೆಯಲ್ಲಿ ಶಾಂತಳೇಶ್ವರ ದೇವಾಲಯವನ್ನು ಕಟ್ಟಿಸಿದ್ದಾನೆ[೧೦]. ಈ ದೇವಾಲಯವು ಶಿವಗಂಗೆಯ ಮಹಾದ್ವಾರದ ಹತ್ತಿರ ಇದೆ, ಶಿವಗಂಗೆಯನ್ನು ಸಲ್ಲೇಖನ ವ್ರತಕ್ಕೆ ಅರಿಸಿಕೊಂಡಿರುವುದಕ್ಕೆ ಅದು ಜೈನ ಧರ್ಮದ ಚಟುವಟಿಕೆಗಳ ಆಗರವಾಗಿತ್ತೆನ್ನಿಸುತ್ತದೆ. ಇನ್ನೊಂದು ಮಾಹಿತಿಯ ಪ್ರಕಾರ ಶಾಂತಲೆಯು ಬೆಟ್ಟದ ಮೇಲಿಂದ ಬಿದ್ದು ಆತ್ಮಹತ್ಯೆಯು ಮಾಡಿಕೊಂಡಳೆಂದು ಹೇಳಲಾಗುತ್ತಿದೆ ಶಾಂತಲೆ ಬಿದ್ದ ಬೆಟ್ಟದ ಒಂದು ಸ್ಥಳಕ್ಕೆ ಬೆಟ್ಟದ ಒಂದು ಸ್ಥಳಕ್ಕೆ ಶಾಂತಲಾ ಡ್ರಾಪ್ ಎಂದು ಕರೆಯುವರು.

ಜಿಲ್ಲೆಗೆ ಹೊಂದಿಕೊಂಡಿರುವ ಮಾಗಡಿ ತಾಲ್ಲೂಕಿನ ಕಲ್ಯಾ (ಕಲಾವತಿಪುರ)ನು ಒಂದು. ಕಲ್ಯಾ ಸುತ್ತ ಮುತ್ತ ೧೫ ಕಿ.ಮೀ. ಅಂತರದಲ್ಲಿ ಗ್ರಾಮಗಳಲ್ಲಿ ಜೈನ ಬಸದಿಯ ಅವಶೇಷ, ಜೈನ ಶಾಸನಗಳು, ದಿಗಂಬರ ಶಿಲ್ಪಗಳು ದೊರೆಯುತ್ತದೆ. ಹೂಜಿಗಲ್ಲಿನಲ್ಲಿ ನಿಷಿಧಿ ಬಂಡೆಯ ಮೇಲೆ ನಿಷಿಧಿ ಶಾಸನಗಳನ್ನು ಕಾಣಬಹುದು. ಶಿಲ್ಪಗಳಲ್ಲಿ ಜೈನ ಗುರು ಮತ್ತು ಶಿಷ್ಯರ ಚಿತ್ರಗಳ ಕೆತ್ತನೆಯಿರುವ ಶಿಲ್ಪಗಳನ್ನು ಹಲವಾರು ಗ್ರಾಮಗಳಲ್ಲಿ ಕಾಣಬಹುದು. ಕಲ್ಯಾದಲ್ಲಿದ್ದ ಪಂಚ ಬಸದಿಗಳು ನಾಶವಾಗಿದ್ದು, ಮೂವತ್ತೆರಡು ಅಡಿ ಎತ್ತರದ ಮಾನಸ್ತಂಭ ಮಾತ್ರಯಿದೆ. ಈ ಪಂಚ ಬಸದಿಗಳಿಗೆ ಸಂಬಂಧಿಸಿದಂತೆ ವಿಜಯನಗರ ಆಳ್ವಿಕೆಯಾವಧಿಯಾದ ಕ್ರಿ.ಶ.೧೩೬೮ ರಲ್ಲಿ ಜೈನರು ತಮ್ಮ ಪಂಚ ಬಸದಿಗಳಲ್ಲಿ ನಡೆಯುವ ಉತ್ಸವಗಳಲ್ಲಿ ಮಹಾವಾದ್ಯಗಳನ್ನು ನುಡಿಸುವುದಕ್ಕೆ ಮತ್ತು ಕಳಸವನ್ನು ಕೊಂಡೊಯ್ಯುವುದಕ್ಕೆ ಶ್ರೀವೈಷ್ಣವರು ಅಡ್ಡಿಪಡಿಸಿದರು. ಆ ಸಂದರ್ಭದಲ್ಲಿ ಶ್ರೀ ವೈಷ್ಣವ ಮತ್ತು ಜೈನರ ನಡುವೆ ಧಾರ್ಮಿಕ ಸಂಘರ್ಷ ಉಂಟಾಗಿ ಜೈನರು ಹೆಚ್ಚು ಹಾನಿಗೊಳಗಾದರು. ಅಂದರೆ ವೈಷ್ಣವರು ಅನೇಕ ಜೈನರನ್ನು ಕೊಂದರು. ಈ ಸುದ್ದಿ ತಿಳಿದ ಆನೆಗುಂದಿ, ಹೊಸಪಟ್ಟಣ, ಪೆನುಗೊಂಡೆ, ಕಲ್ಯದಲ್ಲಿನ ಜೈನ ಮುಖಂಡರು ಒಂದಾಗಿ ಸೇರಿ ಶ್ರೀ ವೈಷ್ಣವರ ವಿರುದ್ಧ ಆಳರಸರಾದ ಒಂದನೇಯ ಬುಕ್ಕರಾಯನಿಗೆ ದೂರು ಕೊಟ್ಟಾಗ, ದೂರಾನ್ವಯ, ಬುಕ್ಕರಾಯನು ೧೮ ನಾಡ ಶ್ರೀ ವೈಷ್ಣವ ಮುಖಂಡರನ್ನು ಕರೆಸಿಕೊಂಡು ಎಲ್ಲರ ಸಮ್ಮುಖದಲ್ಲಿ ವೈಷ್ಣವರೂ ಜೈನರು ಒಂದೇ ಎಂದು ಹೇಳಿ ಎರಡು ಧರ್ಮದ ಮುಖಂಡರಿಗೂ ಪರಸ್ಪರ ಸ್ನೇಹವನ್ನು ಏರ್ಪಡಿಸಿ, ಪಂಚ ಬಸದಿಗಳಲ್ಲಿ ಕಳಸ, ಜಗಳೆ, ಜಾಗಟೆ ಮೊದಲಾದ ಪಂಚ ಮಹಾ ವಾದ್ಯಗಳು ಹಿಂದಿನ ಯಥಾ

[೧೦] ಆರ್.ಎಸ್. ಕೃಷ್ಣಪ್ಪ :- ಶ್ರೀ ಶಿವಗಂಗಾ ಬೆಟ್ಟದಲ್ಲಿ ಶಾಂತಲಾದೇವಿಯ ಅಮರತ್ವ, ಪು.ಸಂ-೩೬.

ಪ್ರಕಾರದಂತೆ ಜೈನರಿಗೆ ಸಲ್ಲಬೇಕೆ ಹೊರತು ಅನ್ಯರಿಗೆ ಸೇರತಕ್ಕದಲ್ಲ ಎಂದು ತೀರ್ಥ ನೀಡಿ ಧಾರ್ಮಿಕ ಸಂಘರ್ಷವನ್ನು ಅಂತ್ಯಗೊಳಿಸಿದ ವಿವರವನ್ನ ಮಾಗಡಿ ತಾಲ್ಲೂಕಿನ ಕಲ್ಯಾ ಶಾಸನದಲ್ಲಿ[೧೧] ಹಾಗೂ ಇದರ ಪ್ರತಿಯನ್ನು ಶ್ರವಣಬೆಳಗೊಳದಲ್ಲಿ[೧೨] ಕಾಣಬಹುದು. ಬಹುಶಃ ಜೈನರು ಹೆಚ್ಚಾಗಿದಂತಹ ಸ್ಥಳಗಳಲ್ಲಿ ಮುಖ್ಯವಾಗಿ ಕಲಹ ನಡೆದಿರುವ ಸ್ಥಳಗಳಲ್ಲಿ ಈ ಶಾಸನದ ಪ್ರತಿಯನ್ನು ಹಾಕಿಸಿರ ಬೇಕು. ಈಗಾಗಲೇ ಕಲ್ಯಾ, ಶ್ರವಣಬೆಳಗೊಳದಲ್ಲಿ ದೊರೆತಿದ್ದು, ಉಳಿದಂತೆ ಆನೆಯಗೊಂದಿ, ಹೊಸಪಟ್ಟಣ, ಪೆನುಗೊಂಡಗಳಲ್ಲಿ ಈ ಶಾಸನದ ಪ್ರತಿ ದೊರೆತಿಲ್ಲ, ಬಹುಶಃ ಶಾಸನ ಹಾಳಾಗಿರ ಬೇಕು ಇಲ್ಲ ಮುಚ್ಚೋಗಿರ ಬೇಕು.  ಈ ಶಾಸನದಲ್ಲಿ ೧೮ ನಾಡ ಶ್ರೀವೈಷ್ಣವರು ಮತ್ತು ೪ ನಾಡ ಜೈನರನ್ನು ಉಲ್ಲೇಖಿಸುವುದನ್ನು ಗಮನಿಸಿದರೆ ಆಕಾಲಕ್ಕಾಗಲೇ ವೈಷ್ಣವರು ಬಹು ಸಂಖ್ಯಾತರಾಗಿದ್ದು, ಜೈನರು ಅಲ್ಪಸಂಖ್ಯಾತರಾಗಿ ಆಕ್ರಮಣಕ್ಕೆ ಒಳಗಾಗಿದ್ದರೆಂದು ಅಲ್ಲದೆ ಶ್ರವಣಬೆಳಗೊಳದ ಶಾಸನವು ಜೈನರ ಬಸದಿಗಳನ್ನು ಶ್ರೀವೈಷ್ಣವರು ರಕ್ಷಿಸಬೇಕೆಂದು ಹೇಳಿರುವುದು. ೧೪ನೇ ಶತಮಾನದಲ್ಲಿ ಕಲ್ಯಾದಲ್ಲಿ ಶ್ರೀವೈಷ್ಣವರಿಂದ ತೊಂದರೆಗೆ ಒಳಗಾದ ಜೈನರು ಬೇರೆ ಬೇರೆ ಸ್ಥಳಗಳಲ್ಲಿ ಫಲಾಯಾನ ಮಾಡಿ ನೆಲೆಸಿದವರನ್ನು ಹೂಜಿಗಲ್ಲು, ಉಪ್ಪಾರ್ತಿ, ತಾವರೆಕೆರೆ ಮುಂತಾದ ಗ್ರಾಮಗಳಲ್ಲಿ ಈಗಲೂ ಕಾಣಬಹುದು.

ಬೇಗೂರಿನಲ್ಲಿದ್ದ ಜಿನಾಲಯಕ್ಕೆ ಕಿ.ಶ.೧೪೨೬ ರಲ್ಲಿ ಮೊರಸು ನಾಡಿನ ಅಧಿಕಾರಿ ನಾಗಿಯ ಕರಿಯಪ್ಪ ದಣ್ಣಾಯಕರು ಕಲಿಯೂರು ಅಗ್ರಹಾರವನ್ನು[೧೩] ನೀಡಿದ್ದು, ಈಗ ಬಸದಿಯು ನಾಶಗೊಂಡಿದ್ದು ಎತ್ತರವಾದ ಪ್ರದೇಶದಲ್ಲಿ ಒಂದು ತೀರ್ಥಂಕರನ ವಿಗ್ರಹ ಮತ್ತೊಂದು ಮುಕ್ಕಾದ ಪಾರ್ಶ್ವನಾಥನ ವಿಗ್ರಹಗಳಿವೆ. ಸಂಕೀಘಟ್ಟದಲ್ಲಿ ಶ್ರೀವರ್ಧಮಾನಸ್ವಾಮಿ ಬಸದಿಯು ಸುಸ್ಥಿತಿಯಲ್ಲಿದೆ. ಈ ಜಿನಾಲಯಕ್ಕೆ ನಾಗಣ್ಣನು ಹಿತ್ತಾಳೆ ತಟ್ಟೆಯನ್ನು, ಜಿನದತ್ತನು, ಹಿತ್ತಾಳೆ ಘಂಟೆಯನ್ನು, ದರಣಪ್ಪನು ಜಯಗಂಟಿಯನ್ನು[೧೪] ದಾನ ನೀಡಿದ್ದಾರೆ.

ಗಂಗರ ಕಾಲಕ್ಕೆ ರಾಜಾಶ್ರಯ ಪಡೆದಿದ್ದ ಜೈನಧರ್ಮವು ಹೊಯ್ಸಳರ ಕಾಲಕ್ಕೆ ರಾಮಾನುಜಚಾರ್ಯರ ಪ್ರಭಾವದಿಂದ ಕಳೆಗುಂದಿತು. ವಿಜಯನಗರ ವೇಳೆಗಾಗಲೆ ಜೈನ ಧರ್ಮದ ಕಠೋರ ತಪಸ್ಸು, ವೈದಿಕ ಧಾರ್ಮಿಕ ಕಟ್ಟುಪಾಡುಗಳಿಂದಾಗಿ ಶೈವ ವೈಷ್ಣವ ಪಂಥಗಳು ಹೆಚ್ಚು ಪ್ರವರ್ಧಮಾನಕ್ಕೆ ಬಂದವು. ಕೆಲವರು ಜಂಗಮರಿಂದ ಲಿಂಗಾಧಾರಿಗಳಾದರೆ ಮತ್ತೆ ಕೆಲವರು ಬಲತ್ಕಾರದಿಂಧ ವೈಷ್ಣವ ಧರ್ಮವನ್ನು ಸ್ವೀಕರಿಸಿದರು.

---

[೧೧] ಎ.ಕ-೯, ಮಾ.ತಾ.೧೮, ಕ್ರಿ.ಶ.೧೩೬೮.ಕಲ್ಯಾ.
[೧೨] ಎ.ಕ-೨, ಶ್ರವಣಬೆಳಗೊಳ.೧೩೬, ಕ್ರಿ.ಶ.೧೩೬೮. ಬಂಡಾರ ಬಸ್ತಿಯ ಪೂರ್ವ ದಿಕ್ಕಿನಲ್ಲಿ, ಶ್ರವಣಬೆಳಗೊಳ.
[೧೩] ಎ.ಕ-೯, ಬೆಂ.೮೨, ಕ್ರಿ.ಶ.೧೪೨೬, ಬೇಗೂರು.
[೧೪] ಎ.ಕ-೯, ಅನುಬಂಧ, ಮಾ.ತಾ.೧೧೩, ೧೧೨, ೧೧೧, ಸಂಕೀಘಟ್ಟ.

# ಶೈವಧರ್ಮ

ಶೈವಧರ್ಮಕ್ಕೆ ಸಂಬಂಧಿಸಿದಂತೆ ಗಂಗರ ಕಾಲದಿಂದ ಹಿಡಿದು ಮೈಸೂರು ಒಡೆಯರ ಕಾಲದವರಗೂ ಹಲವಾರು ಶಿವನ ದೇವಾಲಯಗಳ ನಿರ್ಮಾಣ, ಜೀರ್ಣೋದ್ದಾರ, ಪೂಜೆ, ಪುನಸ್ಕಾರಗಳಿಗೆ ದತ್ತಿಗಳನ್ನು ನೀಡಿರುವುದನ್ನು ಕಾಣಬಹುದು. ಶೈವ ಅನುಯಾಯಿಗಳಿಗೆ ದಾನ ನೀಡಿದ ಭೂಮಿಯಾಗಿದ್ದರೆ ಅದರ ಮೇರೆಗಳಿಗೆ ಲಿಂಗಮುದ್ರೆಯ ಕಲ್ಲನ್ನು ಹಾಕಿಸುತ್ತಿದ್ದರು. ಕ್ರಿ.ಶ.೧೫೨೪ ರಲ್ಲಿ ವೀರಣ್ಣ ಒಡೆಯರೆಂಬರು ಶೈವ ಯತಿಗಳಿಗೆ ಲಿಂಗಮುದ್ರೆಯ ಕಲ್ಲನ್ನು ಹಾಕಿಸಿ[೧೫] ಭೂ ದಾನ ನೀಡಿದ್ದರು.. ಶೈವ ಧರ್ಮ ಅಂಗವಾಗಿ ನಾಥಪಂಥ, ಲಾಕುಳ, ಕಾಳಾಮುಖ, ಮಾಹೇಶ್ವರರು, ಪಾಶುಪತ ಪಂಥಗಳು ಬೆಳೆದವು. ನಾಥಪಂಥ ಮುಂದುವರೆದ ಭೈರವ ಮತ್ತು ಮೈಲಾರ ದೇವರುಗಳ ಆರಾಧನೆಗಳು ಸಮಾಜದ ಕೆಳವರ್ಗದ ಜನ ಸಮೂಹದಲ್ಲಿ ಕಾಣಬಹುದು. ಸಾಮಾನ್ಯವಾಗಿ ಶೈವ ಗುರುಗಳು ದೇವಾಲಯಗಳು ಮತ್ತು ಮಠಗಳಲ್ಲಿ ವಾಸಿಸುತ್ತಿದ್ದರು. ಕಾಳಾಮುಖ ಶೈವರು ಶಿಕ್ಷಣ, ಸಾಹಿತ್ಯ, ಕಲೆಗಳಿಗೆ ಜಾತಿ ಮತ ಭೇದವಿಲ್ಲದೆ ಎಲ್ಲರಿಗೂ ಆಶ್ರಯ ನೀಡುತ್ತಿದ್ದರು. ಶೈವ ಬ್ರಾಹ್ಮಣರು ಶಿವ ದೇವಾಲಯಗಳಲ್ಲಿ ಅರ್ಚಕರಾಗಿ ಸೇವೆ ಸಲ್ಲಿಸುತ್ತಿರುವರು[೧೬]. ಕೇವಲ ಬ್ರಾಹ್ಮಣರು ಮಾತ್ರ ಶಿವನ ಆರಾಧಕರಾಗಿರಲಿಲ್ಲ. ಜೊತೆಗೆ ಅಕ್ಕಸಾಲಿಗ, ಬಡಗಿ, ಕಮ್ಮಾರ, ಕಂಚುಗಾರ, ಕಲ್ಲಿನ ಕೆಲಸ ಮಾಡುವ ಶಿಲ್ಪಿಗಳು ಇವರೆಲ್ಲರೂ ಶಿವಾರಾಧಕರಾಗಿದ್ದರು. ಇವರನ್ನು ಪಂಚಾಳರು ಮತ್ತು ವಿಶ್ವಕರ್ಮ ಎಂದೂ ಕರೆಯುತ್ತಿದ್ದರು[೧೭].

ಜಿಲ್ಲೆಯಲ್ಲಿ ಶೈವಧರ್ಮದ ಪ್ರಬಲವಾಗುವುದಕ್ಕೂ ಮುನ್ನ ಜೈನಧರ್ಮವು ಹೆಚ್ಚು ಜನಪ್ರಿಯವಾಗಿತ್ತು. ನಂತರದಲ್ಲಿ ಶೈವಧರ್ಮವು ಹೆಚ್ಚು ಪ್ರಬಲಗೊಂಡಿತು. ಗಂಗರು ಜೈನಧರ್ಮಕ್ಕಲ್ಲದೆ ಶೈವಧರ್ಮಕ್ಕೂ ಪ್ರೋತ್ಸಾಹ ನೀಡಿದ್ದರು. ಜಿಲ್ಲೆಯಲ್ಲಿ ಇವರ ಕಾಲದಲ್ಲಿ ನಿರ್ಮಿತವಾದ ಹೆಚ್ಚಿನ ದೇವಾಲಯಗಳೆಂದರೆ ಅದು ಶಿವನ ದೇವಾಲಯಗಳು, ದೇವಾಲಯಗಳಲ್ಲಿ ನಿರಾಕಾರ ರೂಪದ ಶಿವಲಿಂಗಗಳು ಕಂಡು ಬರುತ್ತದೆ. ಮಣ್ಣೆಯಲ್ಲಿ ಕಪಿಲೇಶ್ವರ & ಸೋಮೇಶ್ವರ, ಇಸ್ತೂರಿನ ನೀಲಕಂಠೇಶ್ವರ, ಗಂಡರಾಜಪುರದ ಕಲ್ಲೇಶ್ವರ, ಗಂಗವಾರದ ಸೋಮೇಶ್ವರ ಇತ್ಯಾದಿ ದೇವಾಲಯಗಳು.

ಬಿಸ್ಕೂರಿನಲ್ಲಿ ೭೫ ಬಸದಿಗಳಿದ್ದ ಭಾಗದಲ್ಲಿ ಶಿವಾಲಯವಿದೆ. ಪ್ರಾಚೀನ ಕಾಲದಲ್ಲಿ ನಾಥಪಂಥದ ಶೈವ ಕ್ಷೇತ್ರವಾಗಿ ಕಾಲಾಂತರದಲ್ಲಿ ಕಾಳಮುಖ ಆಗಮನದಿಂದಾಗಿ ಶಿವ ಕ್ಷೇತ್ರವೆನಿಸಿ ದಕ್ಷಿಣ ಕೈಲಾಸ, ದಕ್ಷಿಣ ಕಾಶಿ, ವಾರಣಾಸಿ ಎಂದು ಮುಂತಾಗಿ ಕರೆಯಿಸಿ ಕೊಂಡ ಶಿವಗಂಗೆಯಲ್ಲಿ ಅಗಸ್ತ್ಯತೀರ್ಥದ ಸುತ್ತಲೂ ಅ ಕಾರದಿಂದ ಹ ಕಾರದವರೆಗಿನ ಹೆಸರಿನ ೧೦೮ ಲಿಂಗಗಳಿವೆ. ಶಿವಗಂಗೆಯ ಪೂರ್ವಕ್ಕೆ

[೧೫] ಎ.ಕ-೯, ಹೊ.ತಾ.೩೭, ಕ್ರಿ.ಶ.೧೫೨೪, ಸಿದ್ದನಹಳ್ಳಿ,

[೧೬] ಎ.ಕ-೯, ನೆ.೬೭, ಕ್ರಿ.ಶ.೧೧೧೫, ಹೆಗ್ಗುಂದ.

[೧೭] ಕೆ.ಎಸ್. ಕುಮಾರಸ್ವಾಮಿ :- ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಗಳು, ಪು.ಸಂ-೮೬.

ಇರುವ ಕುಕ್ಕಲನಾಡಿನ ಪ್ರದೇಶದಲ್ಲಿ ನಾಥಪಂಥದ ಕುರುಹುಗಳು ನಿಚ್ಚಳವಾಗಿ ಕಂಡು ಬಂದಿದೆ. ನಾಥ ಪಂಥಕ್ಕೆ ಮೂಲವಾದ ಬೌದ್ಧ ಸಿದ್ಧರ ಅವಶೇಷಗಳು ಶಿವಗಂಗೆಯ ಆಸು ಪಾಸಿನಲ್ಲಿ ವಿಶೇಷವಾಗಿ ಕಂಡು ಬಂದಿದೆ. ಅನಂತರದಲ್ಲಿ ಬೌದ್ಧ ಸಿದ್ಧರು, ನಾಥ ಪಂಥದ ಮೂಲಕ ಶೈವೀಕರಣಗೊಂಡು ಕಾಳಾಮುಖರಾಗಿ ವೀರಶೈವರಾಗಿರ ಬಹುದೆಂದು[೧೮] ಎಂ.ಜಿ.ನಾಗರಾಜುರವರು ಅಭಿಪ್ರಾಯ ಪಟ್ಟಿದ್ದಾರೆ.

ರಾಷ್ಟ್ರಕೂಟರ ದೊರೆ ಕನ್ನಡ ದೇವಪ್ರಿಯನ ಕ್ರಿ.ಶ.೯೬೭ ರ ಅಧೀನದಲ್ಲಿ ಗಂಗರ ದಡಿಗನು ಮುಜುರೆ ಮೂಡ್ಲುಪಾಳ್ಯದಲ್ಲಿ ದಡಿಗೇಶ್ವರ ಎಂಬ ಶೈವ ದೇವಾಲಯವನ್ನು ನಿರ್ಮಿಸಿದನು. ಶೈವ ಧರ್ಮದ ಸುವರ್ಣ ಕಾಲವೆಂದು ಕರೆಯಬಹುದಾದ ಚೋಳರ ಕಾಲಾವಧಿಯಲ್ಲಿ ಕುಕ್ಕಲನಾಡು ಒಂದು ಪ್ರಸಿದ್ಧ ಶೈವ ಕೇಂದ್ರವಾಗಿ ಪ್ರಸಿದ್ಧಿಯಾಗಿರಬೇಕು, ಮುಕ್ತೀಶ್ವರ, ಸಿದ್ಧೀಶ್ವರ, ಐವರಕಂಡೇಶ್ವರ ಒಡೆಯ ಮಹಾದೇವರುಗಳಿಗೆ ಹಲವು ದಾನಗಳನ್ನು ನೀಡಿರುವುದನ್ನು ಗಮನಿಸಿದ್ದರೆ ೧೧ನೇ ಶತಮಾನದಲ್ಲಿ ಕುಕ್ಕಲನಾಡು ಪ್ರಸಿದ್ಧ ಶೈವ ಕೇಂದ್ರವಾಗಿರಬೇಕು,

ನಾಥಪಂಥ ಮತ್ತು ಮೌನಿಪಂಥ ಮುನಿಯ ಪರಂಪರೆಯ ಬಗ್ಗೆ ಕ್ರಿ.ಶ.೧೦೨೯ ರಲ್ಲಿ ಆದಿನಾಥ (ಕೈತೋದಿನಾಥ), ಛಾಯಾಧಿನಾಥ, ಸ್ತಂಭನಾಥ (ದಹಳಾದಿನಾಥ) ದ್ವೀಪನಾಥ ಮತ್ತು ಮೌನಿನಾಥ ಮುನಿಯ ಗುರು ಪರಂಪರೆಯ ಬಗ್ಗೆ ವರ್ಣಿಸಲಾಗಿದೆ. ರಾಜೇಂದ್ರ ಚೋಳನ ಮಂತ್ರಿಯಾದ ವಾಮನಯ್ಯನು ಮುನಿಯ ಪರಮಭಕ್ತನಾಗಿದ್ದು, ಆ ಮುನಿಯು ಕಾಲಾತೀತನಾದಾಗ ಗುರುವಿನ ನೆನಪಿಗಾಗಿ / ವಿನಯಕ್ಕಾಗಿ ಶಿಲಾಮಂಚ, ಸಿದ್ದೇಶ್ವರ ಗುಡಿಯನ್ನು ಕಟ್ಟಿಸಿರುವುದು ಗುರುಭಕ್ತಿಯನ್ನು ತೋರುತ್ತದೆ. ಮೌನಿನಾಥ ಮುನಿಯನ್ನು ಪರವಾದ್ಯ ದೃಷ್ಯ ನಿಜ ರುದ್ರರೂಪ ಎಂದು, ಶ್ರೀ ಸಿದ್ದೇಶ್ವರದ ಸ್ಥಾನಕ್ಕೆ ಶ್ರೀ ರೂಪಶಿವದಂತಿ ಒಡೆಯರ್ ಎಂದು ಹೇಳಿರೋದನ್ನು ಕಂಡರೇ, ಈ ಮುನಿಗಳು ತಮಿಳು ಪ್ರದೇಶದಿಂದ ಬಂದು ಇಲ್ಲಿ ನೆಲೆಸಿದ ನಾಥಪಂಥದ ಮುನಿಯು ಯತಿಗಳಾಗಿ ಬಹುಶಃ ಶೈವ ಧರ್ಮದ ಪರಿಪಾಲಕರಾಗಿರಬೇಕು. ಈ ಶಾಸನದಲ್ಲಿ ವಿಶೇಷವಾಗಿ ಶೈವಾಗಮ ಪಂಡಿತರು, ಶೈವ ಸಿದ್ಧಾಂತಿಗಳನ್ನು ಹೆಸರಿಸಲಾಗಿದೆ. ನೊಳಂಬ ರಾಜಗುರು ಪರಂಪರೆಯಲ್ಲಿ ಮೌನಿನಾಥ ಮುನಿ ಇದ್ದರು. ಈ ಹಿನ್ನೆಲೆಯಲ್ಲಿ ಕಾಳಾಮುಖ ಗೊರಪವಾಡದ ಗುರು ಸ್ಥಾನದಲ್ಲಿ ಬಿದಲೂರು, ಬೇಗೂರು, ಛಿನ್ನಮಂಗಲ ಪ್ರದೇಶಕ್ಕೆ ದ್ವೀಪನಾಥ ಮುನಿ ಇದ್ದಿರ ಬೇಕೆನಿಸುತ್ತದೆ. ಮುಕ್ತಿನಾಥೇಶ್ವರ ಕುಕ್ಕಲನಾಡಿನಲ್ಲೆ ಹೆಚ್ಚು ಪ್ರಸಿದ್ಧವಾದ ನಾಥ ಪರಂಪರೆಯ ಕೇಂದ್ರವಾಗಿರುವುದಕ್ಕೆ ನಾಡಿನಲ್ಲಿ ಹೊರಡಿಸುತ್ತಿದ್ದ ಹಲವಾರು ಶಾಸನಗಳಿಗೆ ಮುಕ್ತಿನಾಥನ ಒಪ್ಪವನ್ನು ಹಾಕಿರುವುದನ್ನು ಕಾಣಬಹುದು. ವೀರ ಬಲ್ಲಾಳನ ಕಾಲಾವಧಿಯಾದ ಕ್ರಿ.ಶ.೧೩೨೧ ರಲ್ಲಿ

[೧೮] ಎಂ.ಜಿ. ನಾಗರಾಜ್ :- ರಾಮಗಿರಿ, ಶಿವಗಂಗೆ ಮತ್ತು ಕಲ್ಯದ ಐತಿಹಾಸಿಕ ಸ್ಥಳಗಳು, ಅರ್ಕಾವತಿ ಸ್ಮರಣ ಸಂಚಿಕೆ, ಪು.ಸಂ-೨೪೫.

ಕುಕ್ಕಲನಾಡಿನ ಮುದುಗೆರೆಯನ್ನು[೧೯] ಕ್ರಿ.ಶ.೧೩೩೬ರ ಬ್ಯಾಡರಹಳ್ಳಿಯ ಶಾಸನದಲ್ಲಿ, ಕ್ರಿ.ಶ.೧೩೩೭ರಲ್ಲಿ ಚೊಕ್ಕಂಣ ಗೌಡನಿಗೆ[೨೦] ದಾನ ನೀಡುವಾಗ ನಾಡವೊಪ್ಪ ಶ್ರೀ ಮುಕ್ತನಾಥ ಎಂದು ಇರುವುದು ಭಿನ್ನಮಂಗಲ ಮುಕ್ತನಾಥೇಶ್ವರನೇ ಇರಬೇಕು. ಅದು ಅಲ್ಲದೇ ದೇಗುಲದ ಭಿತ್ತಿಗಳಲ್ಲಿ ಶೈವ ಯತಿಗಳ ಶಿಲ್ಪವಿರುವುದು ಗಮನಿಸಿದರೆ ಕಾಳಮುಖ ಶೈವ ಯತಿಗಳ ಮಠ ಇಲ್ಲಿದ್ದಿರಬೇಕು. ಆದರೆ ಪ್ರಸ್ತುತ ಈಗ ಯಾವ ಮಠವು ಇಲ್ಲ.

ಅಲ್ಲಾಳನಾಥ, ಚೊಕ್ಕನಾಥ ದೇವಾಲಯಗಳು ವೈಷ್ಣವ ಪಂತಕ್ಕೆ ಸೇರಿದಾಗಿದೆ. ನಾಥ ಅಂತ ಇರುವುದರಿಂದ ಶೈವ ಪಂತಕ್ಕೆ ಸೇರುವುದಿಲ್ಲ, ಇವು ೧೨ನೇ ಶತಮಾನದಲ್ಲಿ ಶಂಕರಾಚಾರ್ಯರ ಪ್ರಭಾವದಿಂದ ನಿರ್ಮಾಣವಾದ ದೇವಾಲಯಗಳು. ಕಂಚಿಯಲ್ಲಿನ ವರದರಾಜ ದೇವರಿಗೆ ಅಲ್ಲಾಳನಾಥ ಎಂದು ಕರೆಯುತಿದ್ದು, ಯಲಹಂಕದಲ್ಲಿನ ಅಲ್ಲಾಳನಾಥ ದೇವಾಲಯಲ್ಲಿ ವಿಗ್ರಹವಿಲ್ಲದಿದ್ದರಿಂದ ಇದು ಶೈವನ ಅಥವಾ ವೈಷ್ಣವ ಅಂತ ಅನುಮಾನಗಳು ಕೆಲವರಿಗೆ ಬಂದಿರ ಬಹುದು. ಆದರೆ ಮದ್ದೂರಿನ ವರದರಾಜ, ಕೋಲಾರದ ಅಲ್ಲಾಳನಾಥ ದೇವಾಲಯವೆಲ್ಲವೂ ವೈಷ್ಣವ ಪಂತಕ್ಕೆ ಸೇರಿದಾಗಿದೆ. ಗಂಗರ ನಂತರ ನೊಳಂಬರ ಕಾಲದಲ್ಲಿ ಶೈವ ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡಿದ್ದರು.

ಹೊಯ್ಸಳರು ಜೈನ, ವೈಷ್ಣವ ಧರ್ಮದ ಜೊತೆಗೆ ಶೈವ ಧರ್ಮಕ್ಕೂ ಆಶ್ರಯ ನೀಡಿದ್ದರು. ಮೂಲತಃ ಹೊಯ್ಸಳರು ವೈಷ್ಣವರಾಗಿದ್ದರೂ ಜಿಲ್ಲೆಯಲ್ಲಿ ಶೈವ ದೇವಾಲಯಗಳೇ ಅಧಿಕ ಸಂಖ್ಯೆಯಲ್ಲಿ ಇರುವುದನ್ನು ಮತ್ತು ಶೈವ ಧರ್ಮಕ್ಕೆ ವಿಶೇಷವಾದ ದಾನದತ್ತಿಗಳು (ನೆರವು), ಪೋಷಣೆಯು ದೊರೆತಿದೆ ಎನ್ನಬಹುದು. ಶಂಕರಾಚಾರ್ಯರು ಶಿವಗಂಗೆಗೆ ಭೇಟಿ ನೀಡಿದಾಗ ಶಂಕರ ಮಠವನ್ನು ಸ್ಥಾಪಿಸಿದರೆಂಬ ಪ್ರತೀತಿ ಇದೆ. ಸಾಮಂತನಾದ ಅಡಳ ವಂಶದ ವಿಷ್ಣುವರ್ಧನನು ಕ್ರಿ.ಶ.೧೧೪೦ ರಲ್ಲಿ ಶಿವಗಂಗೆಯ ಶ್ರೀಗಂಗಾಧರೇಶ್ವರನಿಗೆ ಗುಹಾಂತರ ದೇವಾಲಯವನ್ನು ನಿರ್ಮಿಸಿದನು[೨೧]. ಮೂರನೇ ನರಸಿಂಹನ ಕಾಲವಾದ[೨೨] ಕ್ರಿ.ಶ.೧೨೫೭ ರಲ್ಲಿ ಶೈವ ಗುರುಗಳು ಮತ್ತು ದೇವರ ಕುರಿತು ಸ್ವಸ್ತಿ ಸಮಸ್ತ ಭುವನ ವಿಖ್ಯಾತಪಂಚಸತವೀರ ಸಾಸನಲಬ್ಧನೇಕ ಗುಣಗಣಾಣಂಕ್ರ್ತ ಸತ್ಯಸೌಚಚಾರುಚಾರಿತ್ರ ನಯವಿನಯ ವಿಜ್ಞಾನ ವೀರಾವತಾರ ವೀರ ಬಣಂಜುಸಮಯ ಧರ್ಮಪ್ರತಿಪಾಲಕರುಂ ವಿಶುಧ್ಧ ಗುಡ್ಡ ಗರುಡ ಧ್ವಜರುಂ ವಿರಾಜಿತಾನೂನ ಸಹಸೋತ್ತುಂಗರುಂ ಕೀರ್ತ್ಯಂಗನಾವಲ್ಲಭರುಂ ನಿಜಭುಜವಿಜಯ ಲಕ್ಷ್ಮಾಲಿಂಗಿತ ವಿಶಾಲ ವಕ್ಷ್ಯಸ್ತಳರುಂ ತ್ರಿಭುವನ ಪರಾಕ್ರಮೋನ್ನತರುಂ ಅಹಿಚ್ಛತ್ರ ಪುರಾವರಾಧೀಶ್ವರರುಂ ಬಲದೇವ

[೧೯] ಹೆಚ್.ಎಸ್.ಗೋಪಾಲರಾವ್ :- ಬೈಲ ಕೋನೇನಹಳ್ಳಿ ಶಿಲಾಶಾಸನ, ಇ.ದ.ಸಂ-೨, ಪುಟ ೫೮-೫೯.
[೨೦] ಎ.ಕ-೯, ಅನುಬಂಧ, ನೆ.ತಾ.೧೦೩, ಭಿನ್ನಮಂಗಲ.
[೨೧] ಎ.ಕ-೯, ನೆ.ತಾ.೮೪, ಕ್ರಿ.ಶ.೧೧೪೦, ಶಿವಗಂಗೆ.
[೨೨] ಎ.ಕ-೯, ದೊ.ತಾ.೩೧, ಕ್ರಿ.ಶ.೧೨೫೭, ದೊಡ್ಡಬಳ್ಳಾಪುರ.

ವಾಸುದೇವ ಖಂಡಳಮೂರ ಭದ್ರ ವಂಶೋದ್ಭವರುಂ ಚಲ್ಲುಂಕಿ ದಂಡಹಸರೂಕನಕ ಕಂಚುಳಕ ಕಾಮದೇವರುಂ ಚೇಳಾಭರಣ ಭೂಷಿತರುಂ ಚೋಳಾಕುಳಾನ್ವಿತರಂ ಚಾಳುಕ್ಯಾಂನ್ವಯರುಂ ಎಂದು ಗುರುಗಳ ಬಗ್ಗೆ ವಿವರಿಸಲಾಗಿದೆ. ನಂತರದಲ್ಲಿ ವರ್ತಕರ ವೃಂದದವರು ಶ್ರೀ ಗೌರವೇಶ್ವರ ದೇವರಿಗೆ, ಕ್ರಿ.ಶ.೧೨೩೫ ರಲ್ಲಿ ನಿಟ್ಟೂರ ಶ್ರೀ ಸೋಮನಾಥ ದೇವಾಲಯಕ್ಕೆ ಜೀಯಗವುಡನಹಳ್ಳಿಯನ್ನು ದಾನ ನೀಡಿದರು.

ವಿಜಯನಗರ ಆಳ್ವಿಕೆಯಾವಧಿಯಲ್ಲಿ ಹುಲುಕಡಿ ನಾಡಪ್ರಭು ಭೈರಪ್ಪ ನಾಯಕನು ಕ್ರಿ.ಶ.೧೩೬೨ ರಲ್ಲಿ ಶಿವಗಂಗೆಯ ಮೇಲಣಗವಿಯ ಸಿಂಹಾಸನದ ಮಲೆಯ ಕಾಂತದೇವರಿಗೆ ಗಂಡ್ರಗೊಳ್ಳಿಪುರವನ್ನು[೨೩], ಕ್ರಿ.ಶ.೧೩೭೦ರಲ್ಲಿ ನಂದಿನಾಥ, ಬೃಂಗಿನಾಥ, ವೀರಭದ್ರದೇವರು, ಶ್ರೀ ಶಿವಗಂಗಿನಾಥ ದೇವರು, ಶ್ರೀಮಲ್ಲಿಕಾರ್ಜುನ, ವೀರಭದ್ರ ಗಂಗಾಧರ, ಚಂದ್ರಮೌಳಿ ಹೀಗೆ ಶಿವನ ಹಲವಾರು ಹೆಸರುಗಳು ಪ್ರಚಲಿತದಲ್ಲಿರುವುದು[೨೪] ಕಂಡು ಬರುತ್ತದೆ.

ಸುಗಟೂರು ಪ್ರಭುಗಳಾದ ತಮ್ಮಪ್ಪ ಗೌಡರು ಅನುಪಹಳ್ಳಿ ಗ್ರಾಮವನ್ನು ಶಿವಗಂಗೆಯ ಪ್ರಸನ್ನ ಗಂಗಾಧರ ಲಿಂಗಕ್ಕೆ[೨೫] ಚಿಕ್ಕರಾಯ ತಮ್ಮಗೌಡರು ತಮ್ಮ ಇಷ್ಟ ದೇವರಾದ ಶ್ರೀ ಸೋಮೇಶ್ವರ, ವೀರಭದ್ರ ದೇವರುಗಳ ಅಮೃತಪಡಿಗೆ[೨೬], ಶ್ರೀಕೃಷ್ಣದೇವರಾಯನು ಕ್ರಿ.ಶ.೧೫೧೧ ರಲ್ಲಿ ಶಿವಗಂಗೆಯ ಕಕುದ್ಗಿರಿ ಗಂಗಾಧರೇಶ್ವರ ದೇವರಿಗೆ ಕೊರಟಗೆರೆ ಸೇರಿದಂತೆ ೨೨ ಹಳ್ಳಿಗಳನ್ನು[೨೭], ಕ್ರಿ.ಶ.೧೫೨೪ರಲ್ಲಿ ಚಿಕ್ಕಮಾರನಹಳ್ಳಿಯ ವೀರಭದ್ರ ಮತ್ತು ಲಿಂಗೇಶ್ವರ ದೇವರುಗಳಿಗೂ[೨೮], ಕ್ರಿ.ಶ.೧೫೩೫ ರಲ್ಲಿ ಶಿವನಸಮುದ್ರದ ಅಗ್ರಹಾರದಲ್ಲಿ ಗುಡಿಯನ್ನು ಕಟ್ಟಿಸಿ ಚಂದ್ರಮೌಳೇಶ್ವರ, ವಿಘ್ನೇಶ್ವರ, ದೇವತೆಗಳನ್ನು ಪ್ರತಿಷ್ಠಾಪಿಸಿ[೨೯], ಕ್ರಿ.ಶ.೧೫೪೪ ರಲ್ಲಿ ಸದಾಶಿವರಾಯನು ಶಿವಗಂಗೆಯ ಹೊನ್ನಮ್ಮ ಗವಿಮಠ, ಮಹತ್ತಿಗೆ ಮಠ, ಮೇಲಣಗವಿಮಠ, ಚಿನ್ನದಕಥೆಯ ಮಠ ಮುಂತಾದವುಗಳಿಗೆ ಶಿವರಾತ್ರಿ ಪುಣ್ಯಕಾಲದಲ್ಲಿ ಅನೇಕ ಕೊಡುಗೆಗಳನ್ನು[೩೦] ನೀಡಿದ್ದರು.

---

[೨೩] ಎ.ಕ-೯, ದೊ.ತಾ.೪೧, ಕ್ರಿ.ಶ.೧೫೭೯, ಗಂಡ್ರಗೊಳ್ಳೀ.
[೨೪] ಎ.ಕ-೯, ಮಾ.ತಾ.೭೯, ಕ್ರಿ.ಶ.೧೫೧೧, ಬಿಟ್ಟಸಂದ್ರ.
[೨೫] ಎ.ಕ-೯, ಹೊ.ತಾ.೭೩, ಕ್ರಿ.ಶ.೧೫೬೦, ಅನುಪುಹಳ್ಳಿ.
[೨೬] ಎ.ಕ-೯, ಹೊ.ತಾ.೯೪, ಕ್ರಿ.ಶ.೧೫೬೪, ಮುಗಬಾಳ.
[೨೭] ಎಂ.ಎ.ಆರ್. ೧೯೧೫, ಕ್ರಿ.ಶ.೧೫೧೧, ಪು.ಸಂ-೬೦.
[೨೮] ಎ.ಕ-೯,ಅನುಬಂಧ, ನೆ.ತಾ.೧೦೨, ಚಿಕ್ಕಮಾರನಹಳ್ಳಿ.
[೨೯] ಎ.ಕ-೯, ನೆ.ತಾ.೩೧, ಕ್ರಿ.ಶ೧೫೩೩, ಹೆಸರುಘಟ್ಟ.
[೩೦] ಎ.ಕ-೯, ನೆ.ತಾ.೮೧, ಕ್ರಿ.ಶ.೧೫೪೫, ಶಿವಗಂಗೆ.

ಮೈಸೂರು ಅರಸರು ವೈಷ್ಣವರಾಧಕರಾಗಿದ್ದರೂ ಶೈವಧರ್ಮಕ್ಕೂ ಆಶ್ರಯದಾತರಾಗಿದ್ದರು. ದಾಸರಾಜಯ್ಯನು ಕ್ರಿ.ಶ.೧೬೯೮ ರಲ್ಲಿ ನಿಜಗಲ್ಲು ಬೆಟ್ಟದ ಮೇಲೆ ವಿಘ್ನೇಶ್ವರನ ಗುಡಿಯನ್ನು[೩೧]. ಗ್ರಾಮದಲ್ಲಿನ ಮಲ್ಲಿಕಾರ್ಜುನ ದೇವಾಲಯವನ್ನು[೩೨] ನಿರ್ಮಿಸಿದನು.. ಶಿವನಿಗೆ ಇಷ್ಟವಾದ ಬಿಲ್ವ ಪತ್ರೆ ಮತ್ತು ತುಂಬೆ ಹೂವಿನ ಪೂಜೆಗಾಗಿ ಹಣವನ್ನು ಕ್ರಿ.ಶ.೧೭೦೭ ರಲ್ಲಿ ಶಿವಗಂಗೆಯ ಗಂಗಾಧರೇಶ್ವರನಿಗೆ[೩೩] ದಾನ ನೀಡಿದರು.

ಶಾಸನೋಕ್ತ ಉಲ್ಲೇಖಗಳನ್ನು ನೋಡಿದಾಗ ಶೈವ ದೇವಾಲಯಗಳು ಇಂದಿಗೂ ಶಿವಗಂಗೆಯ ಪ್ರಸನ್ನ ಗಂಗಾಧರ ದೇವಾಲಯ, ದೇವನಹಳ್ಳಿ ತಾಲ್ಲೂಕಿನ ಚಂದ್ರಮೌಳೇಶ್ವರ, ಮುಗಬಾಳದ ಸೋಮೇಶ್ವರ ಮತ್ತು ವೀರಭದ್ರ, ಹೊಸಹಳ್ಳಿಯ ಧರ್ಮೇಶ್ವರ ಹೀಗೆ ಇಂದಿಗೂ ಕೂಡ ಆ ಕಾಲದ ಶೈವ ಧರ್ಮದ ಪ್ರತೀಕಗಳಾಗಿ ದೇವಾಲಯಗಳು ಜಿಲ್ಲೆಯಲ್ಲಿದೆ. ಕಾಳಮುಖ, ಲಾಕುಳ ಅಥವಾ ಪಾಶುಪಥ ಶೈವ ಪಂಥಗಳನ್ನು ನಿಖರವಾಗಿ ಉಲ್ಲೇಖಿಸುವ ದಾಖಲೆಗಳಿಲ್ಲ ಎಂಬುದೇ ಬೇಸರದ ಸಂಗತಿ.

## ವೀರಶೈವಧರ್ಮ

ಬ್ರಾಹ್ಮಣರಷ್ಟೇ ಅಲ್ಲದೆ ವೀರಶೈವರಿಗೂ ವಿಶಿಷ್ಟವಾದ ಗೌರವವಿತ್ತು. ವೀರಶೈವ ಉತ್ತರ ಕರ್ನಾಟಕದಲ್ಲಿ ಬಸವ ಚಳುವಳಿಯ ನಂತರ ಅನೇಕ ಜಂಗಮರು ಮತ್ತು ಶಿವ ಶರಣರು ದಕ್ಷಿಣದ ಕಡೆಗೆ ಬಂದು ಜಿಲ್ಲೆಯಲ್ಲಿ ತಮ್ಮ ಚಟುವಟಿಕೆಗಳನ್ನು ಆರಂಭಿಸಿದರು. ಬಸವಣ್ಣನವರ ಅನುಯಾಯಿಗಳನ್ನು ಲಿಂಗಾಯಿತರೆಂದೂ, ಅವರ ಧರ್ಮವನ್ನು ವೀರಶೈವವೆಂದೂ ಕರೆಯಲಾಗುತ್ತದೆ.

೧೨ನೇ ಶತಮಾನ ಕಾಲದಲ್ಲಿ ಹೆಚ್ಚು ಪ್ರವರ್ಧಮಾನಕ್ಕೆ ಬಂದಂತಹ ವೀರಶೈವಧರ್ಮವನ್ನ ಜಿಲ್ಲೆ ವ್ಯಾಪ್ತಿಯಲ್ಲಿ ಹೊಯ್ಸಳರು ನಂತರ ವಿಜಯನಗರ ಅರಸರು, ಮೈಸೂರು ಒಡೆಯರು ಕಾಲಾವಧಿಯಲ್ಲಿನ ವೀರಶೈವಧರ್ಮದ ಕೇಂದ್ರವೇ ಮಠಗಳನ್ನು ನಿರ್ಮಿಸಿದ್ದರು.

ವೀರಶೈವ ಗುರುಗಳಿಗೆ ಅಂದಿನ ಆಳರಸರು ಮಠಗಳನ್ನು ಕಟ್ಟಿಸಿ, ಮಠದ ನಿರ್ವಾಣೆಗೆ ಹಲವಾರು ದಾನಗಳನ್ನು ಕೊಡುತ್ತಿದ್ದರು. ಈ ಮಠಗಳು ದಾಸೋಹ ಮತ್ತು ವಿದ್ಯಾಕೇಂದ್ರಗಳಾಗಿದ್ದವು. ಹೊಯ್ಸಳರ ಕಾಲದ ಶಾಸನಗಳಲ್ಲಿ ಹಲವಾರು ವೀರಶೈವ ಮಠಗಳ ಉಲ್ಲೇಖಗಳನ್ನು ಕಾಣಬಹುದು. ಶಿವಗಂಗೆಯ ಮೇಲಣ ಗವಿಮಠ, ಕಂಬಾಳ ಮಠಗಳು ವೀರಶೈವರ ಪ್ರಮುಖ ಕೇಂದ್ರಗಳಾಗಿದ್ದವು. ಈ ಮೇಲಣ ಗವಿ ಮಠದ ವೀರಭದ್ರ ದೇವರಿಗೆ ಶಿವರಾತ್ರಿಯ ಪುಣ್ಯಕಾಲದಲ್ಲಿ, ಸಂಕ್ರಾಂತಿಯ ದಿನಗಳಲ್ಲಿ

[೩೧] ಎ.ಕ-೯, ನೆ.ತಾ.೬೫, ಕ್ರಿ.ಶ.೧೭೦೫, ನಿಜಗಲ್ಲು.
[೩೨] ಎ.ಕ-೯, ನೆ.ತಾ.೬೩, ಕ್ರಿ.ಶ.೧೨೮೮, ನಿಜಗಲ್ಲು.
[೩೩] ಡಾ. ಬಿ. ನಂಜುಂಡಸ್ವಾಮಿ :- ಬೆಟ್ಟದ ಕೋಟೆ ಪ್ರಭುಗಳ ವಂಶಸ್ಥರು ಶಿವಗಂಗೆಯ ಗಂಗಾಧರೇಶ್ವರನಿಗೆ ಕೊಟ್ಟ ಪೂಜಾ ದತ್ತಿ ತಾಮ್ರಶಾಸನ. ಇ.ದ.ಸಂ.೧೩, ಪು.ಸಂ-೩೪.

ಹಲವಾರು ದಾನ ಧರ್ಮಗಳನ್ನು ನೀಡಿರುವ ಶಾಸನಗಳನ್ನು ಕಾಣಬಹುದು. ಕ್ರಿ.ಶ.೧೫೪೪ ರಲ್ಲಿ ಹಲವು ಗ್ರಾಮಗಳನ್ನು ಮತ್ತು ಕಂಬಾಳ ಮರುಳಸಿದ್ದ ದೇವರಿಗೆ, ವಿಜಯನಗರ ಕಾಲದಲ್ಲಿ ಕಾಳನಾಲೆಯರು ಕಂಬಾಳ ಸಿದ್ದ ಒಡೆಯರಿಗೆ ತಾಳೆಕೆರೆ ಗ್ರಾಮವನ್ನು[೩೪], ಕಂಬಾಳ ಮಠದ ಚೆನ್ನವೀರ ದೇವರು ಕೆಂಡೋಹಳ್ಳಿಯ ಕೆಂಪ ಒಡೆಯರಿಗೆ, ಆ ಮಠದ ಗುರುಗಳು. ಮೇಲಣಗವಿ ಸಿಂಹಾಸನ ಮಠದ ಶಿಷ್ಯರಾಗಿ ೧೭೬೭ ರಲ್ಲಿ ಲಿಂಗೈಕ್ಯರಾದ ಈ ಮಠದ ಶ್ರೀವೀರಭದ್ರ ಶಿವಾಚಾರ್ಯರು ವೀರಶೈವ ಮತಸ್ಥರೆಂದು ಕೊಡಗಿನ ಅರಸರು ತಮ್ಮ ಶಾಸನದಲ್ಲಿ ಹೇಳಿಕೊಂಡಿದ್ದಾರೆ. ಇಲ್ಲಿ ಶಾಂತಮ್ಮ ಎಂಬ ಶರಣೆ ತಪಗೈದು ಲಿಂಗೈಕ್ಯಳಾದಳಂತೆ ಈಕೆಯ ಆರಾಧನೆ ನಡೆಯುತ್ತದೆ. ಹೊಸಕೋಟೆಯ ಮಹಂತೇಶ ಮಠಕ್ಕೂ ಬೆಂಗಳೂರಿನ ಬೇಲಿಮಠಕ್ಕೂ ಎಲ್ಲಿಂದ ಎಲ್ಲಿಗೆ ಸಂಬಂಧ ಎಂಬಂತೆ ಗುರು ಶಿಷ್ಯರ ಸಂಬಂಧವನ್ನು ತಿಳಿಸುವ ಶಾಸನದಲ್ಲಿ ಹೊಸಕೋಟೆಯ ಮಹಂತೇಶ್ವರ ಪ್ರಭುವು ಶಿವೈಕ್ಯವಾದಾಗ ಶಿಷ್ಯರಾದ ಮರಿಸಿದ್ಧ ದೇಶಿಕರು ಸಮಾಧಿಯನ್ನು ನಿರ್ಮಿಸಿವುದರನ್ನ ಬೇಲಿಮಠ ಶಾಸನದಲ್ಲಿ[೩೫] ಕಾಣಬಹುದು. ಶಿವಗಂಗೆಯಲ್ಲಿ ೬೪ ವೀರಶೈವ ಮಠಗಳಿದ್ದು, ಜಂಗಮ ಕೇಂದ್ರವಾಗಿತ್ತು. ಬಿಜ್ಜಳ ದೇವನ ಕಾಲದಲ್ಲಿ ಕೆಂಚಸೋಮನ ಹೆಸರಿನಲ್ಲಿ ೧೨ ಸಾವಿರ ಜಂಗಮರಿಗೆ ದಾಸೋಹ ನಡೆಯುತ್ತಿತ್ತು. ೧೨ ಸಾವಿರ ಗಣಂಗಳಿಗೆ ದಾಸೋಹ ಎಂದರೆ ಈ ಎಲ್ಲಾ ಮಠಗಳಲ್ಲಿ ಏಕಕಾಲಕ್ಕೆ ನಡೆಯುತ್ತಿದ್ದ ದಾಸೋಹ ಅಡಗಿರಬೇಕು[೩೬].

ವೀರಶೈವ ಧರ್ಮದಲ್ಲಿನ ಮಠಾಧಿಪತಿಗಳನ್ನ ಗುರುಗಳಾಗಿ ಹೊಂದಿದ್ದಂತಹ ಪಾಳೇಗಾರರು, ನಾಡಪ್ರಭುಗಳು ತಮ್ಮ ಪ್ರೀತಿಯ ಗುರುಗಳಿಗೆ ದಾನ ನೀಡಿರುವುದಕ್ಕೆ ಹಲವಾರು ಶಾಸನಗಳಲ್ಲಿ ಕಾಣಬಹುದು. ರೇವಣ್ಣಸಿದ್ದೇಶ್ವರ ಸಂಪ್ರದಾಯಸ್ಥರಾದ ನಂಜೇದೇವರು ಅಯ್ಯನವರು ಇಮ್ಮಡಿ ಕೆಂಪೇಗೌಡ ಮತ್ತು ಮುಮ್ಮಡಿ ಕೆಂಪೇಗೌಡರಿಬ್ಬರಿಗೂ ಗುರುಗಳಾಗಿ ಗುಮ್ಮಳಾಪುರದ ಸಿಂಹಾಸನಕ್ಕೂ ಕಾರಣ ಕರ್ತರಾಗಿದ್ದರು[೩೭]. ಸುಗುಟೂರು ನಾಡಪ್ರಭುಗಳು ವೀರಶೈವ ಧರ್ಮದ ಗುರುಗಳಿಗೆ ಅನೇಕ ಮಠಗಳನ್ನು ಕಟ್ಟಿಸಿ, ದಾನಗಳನ್ನು ನೀಡಿದ್ದಾರೆ. ಹೊಸಕೋಟೆ ಕಟ್ಟಿಸಿದ ತಮ್ಮೇಗೌಡನಿಗೆ ನಿಜಗುಣ ಸುಜ್ಞಾನದ ಸ್ವಾಮಿಗಳು ರಾಜಗುರುಗಳಾಗಿದ್ದು, ಕ್ರಿ.ಶ.೧೪೯೪ ರಲ್ಲಿ ತನ್ನ ಗುರುವಿಗೆ ಹೊಸಹಳ್ಳಿಯನ್ನು[೩೮], ಕ್ರಿ.ಶ.೧೬೬೧ ರಲ್ಲಿ ಬಸವರಾಜ ದೇವಯ್ಯನವರಿಗೆ ದೊಡ್ಡ ಹುಲ್ಲೂರು ಗ್ರಾಮವನ್ನು[೩೯], ನಂತರ

[೩೪] ಎ.ಕ-೯, ನೆ.ತಾ.೪೭, ಕ್ರಿ.ಶ.೧೪೪೯, ತಾಳೇಕೆರೆ.
[೩೫] ಡಿ.ವಿ. ಪರಮಶಿವಮೂರ್ತಿ :- ಬೇಲಿಮಠ ಶಾಸನ, ಇ.ದ.ಸಂ.೩, ಪು.ಸಂ-೧೪೯-೧೫೧.
[೩೬] ಡಾ. ಹೆಚ್.ಎಸ್. ಗೋಪಾಲ್ ರಾವ್ :- ನೆಲದಸಿರಿ, ಪು.ಸಂ-೬೧.
[೩೭] ಎಂ.ವಿ. ವಸು :- ದಕ್ಷಿಣ ಭಾರತದ ಅರಸು ಮನೆತನಗಳು, ಪು.ಸಂ-೧೭೪.
[೩೮] ಎ.ಕ-೯, ಅನುಬಂಧ, ಹೊ.ತಾ.೧೮೬, ಕ್ರಿ.ಶ.೧೪೯೪, ಖಾಜಿ ಹೊಸಹಳ್ಳಿ.
[೩೯] ಎ.ಕ-೯, ಹೊ.ತಾ.೭೯. ಕ್ರಿ.ಶ.೧೬೬೧, ದೊಡ್ಡಹುಲ್ಲೂರು.

ದೇವಯ್ಯಗೌಡನು ಕ್ರಿ.ಶ.೧೫೫೦ ರಲ್ಲಿ ಸುತ್ತೂರ ಚೆನ್ನದೇವರ ಶಿಷ್ಯ ನಮಶಿವಾಯ ದೇವರಿಗೆ ಕದುಮನಪುರವನ್ನು[೪೦], ಮುಮ್ಮಡಿ ತಮ್ಮೆಗೌಡನು ಕ್ರಿ.ಶ.೧೬೧೪ ರಲ್ಲಿ ಸೆಜ್ಜೆ ಸಿದ್ದಲಿಂಗದೇವನ ಮಗ ಗುರುಬಸವಣ್ಣನಿಗೆ ಮಠವನ್ನು ಕಟ್ಟಿಸಿ[೪೧], ನಂತರ ಶಿವನೇಯಗೌಡನು ಶಿವಾಚಾರ ಸಂಪನ್ನರಾದ ವಿರಕ್ತ.....ದೇವನಿಗೆ ಮಠವನ್ನು ಕಟ್ಟಿಸಿ[೪೨], ಕ್ರಿ.ಶ.೧೫೮೬ ರಲ್ಲಿ ನಮಃ ಶಿವಾಲಯ ಕೆಂಪಿ ಶೆಟ್ಟಿಯೂ ತಿಪ್ಪೂರಿನಲ್ಲಿ ಕಟ್ಟಿಸಿದ ಕಲ್ಲುಮಠಕ್ಕೆ ಆವತಿನಾಡಪ್ರಭು ಹಾವಳಿ ಬಯಿಪ್ಪಗೌಡರು ಹಣಬೆ ಮತ್ತು ತಿಪ್ಪೂರು ಸೀಮೆಗಳ ಮೂಲೆಗಾಸಿನ ಮೇಲಿನ ಸುಂಕವನ್ನು[೪೩], ನಂತರ ಇಮ್ಮಡಿ ಬೈಚೇಗೌಡನು ಕ್ರಿ.ಶ.೧೬೫೧ ರಲ್ಲಿ ಶ್ರೀಮತು ಸಜ್ಜನ ಗುರು ಸದಾಚಾರ ಸಂಪನ್ನ ಶ್ರೀಲಿಂಗ ಚಕ್ರಿಯವರಿಗೆ ಪುರ ಧರ್ಮವಾಗಿ ಬುದಿಹಾಳ ಗ್ರಾಮವನ್ನು, ಹೆಂಮರೆನಾಡ ಕಂಟುಜೀಯರು ಕ್ರಿ.ಶ.೧೬೦೦ ರಲ್ಲಿ ಶಿವಾಚಾರ್ಯ ಅಯ್ಯನವರಿಗೆ ಚಿಕ್ಕಮುತ್ತುಕ್ಕೂರು ಅಗ್ರಹಾರವನ್ನು[೪೪], ಮರಾಠ ದೊರೆ ಸಾಂಬಾಜಿರಾಯನು ಕ್ರಿ.ಶ.೧೬೪೭ ರಲ್ಲಿ ಸಜಿ ಮಠದ ಜನರ ಮಠದ ಚನ್ನಬಸವ ಅಪ್ಪ ವಡೆಯರಿಗೆ ಹಂಚಿಪುರ ಗ್ರಾಮವನ್ನು ದಾನವನ್ನಾಗಿ ನೀಡಿದರು[೪೫].

ಶೈವ ಮತ್ತು ವೀರಶೈವ ಪರಂಪರೆಯಲ್ಲಿನ ಮುನಿಗಳು ಕಾಲಾತೀತನಾದರೆ ಗದ್ದುಗೆಗಳನ್ನು (ಶಿಲಾಮಂಟಪವನ್ನು) ನಿರ್ಮಿಸುತಿದ್ದರು. ಶಿವಗಂಗೆಯ ಮೇಲಣಗವಿ ಮಠದಲ್ಲಿನ ಶಾಸನವೊಂದು ಕ್ರಿ.ಶ.೧೭೪೬ ಕ್ಕೆ ತೋಟಕೆರೆ ಚಲನಪ ಅಯ್ಯ ಮಗ ನಿರುವಣ ಎಂಬುವನು ಗದ್ದುಗೆ ಮಂಟಪದ ಸೇವೆಯನ್ನು ಸಲ್ಲಿಸುತ್ತಾನೆ. ಶ್ರೀ ಸಿದ್ದರಾಮ ದೇವರು ಗಂಗಾಧರನೊಳಗಾದನು ಎಂದು ಹೇಳಿದೆ. ಸಿದ್ದರಾಮದೇವ ಎಂಬ ವೀರಶೈವ ಧರ್ಮದ ಯತಿಯು ಕಾಲವಾದ ವಿವರವಿದೆ[೪೬]. ಈಗಲೂ ಯತಿಗಳು ಕಾಲಾವಾದರೆ ಗದ್ದುಗೆಯನ್ನು ನಿರ್ಮಿಸುವ ಪದ್ಧತಿಗೆ ಶಿವಕುಮಾರಸ್ವಾಮಿಗಳು ದಿನಾಂಕ ೨೧ ಜನವರಿ ೨೦೧೯ ರಂದು ಕಾಲವಾಗಿದಕ್ಕೆ ಗದ್ದುಗೆಯನ್ನು ನಿರ್ಮಿಸಿರುವುದನ್ನ ಸ್ಮರಿಸ ಬಹುದು. ಹೀಗೆ ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ ನಿರಂತರವಾಗಿ ಶಾಸನ ದಾಖಲೆಗಳನ್ನು ಒಳಗೊಂಡಿರುವುದನ್ನು ಕಾಣಬಹುದು.

---

[೪೦] ಎ.ಕ-೯, ಹೊ.ತಾ.೬೯, ಕ್ರಿ.ಶ.೧೫೫೦, ಕದಮನಾಪುರ
[೪೧] ಎ.ಕ-೯, ಅನುಬಂಧ, ಹೊ.ತಾ.೧೭೨, ಗೊಣಕನಹಳ್ಳಿ.
[೪೨] ಎ.ಕ-೯, ಅನುಬಂಧ, ಹೊ.ತಾ.೧೮೧, ಕಟ್ಟಿಗೇನಹಳ್ಳಿ.
[೪೩] ಎ.ಕ-೯, ದೊ.ತಾ.೫, ಕ್ರಿ.ಶ.೧೫೮೬, ತಿಪ್ಪೂರು.
[೪೪] ಎ.ಕ-೯, ಅನುಬಂಧ, ಹೊ.ತಾ.೧೫೮, ಕ್ರಿ.ಶ.೧೬೦೦, ಮುತ್ತಕ್ಕೂರು ಅಗ್ರಹಾರ.
[೪೫] ಎ.ಕ-೯, ದೊ.ತಾ.೨೮, ಕ್ರಿ.ಶ.೧೬೪೭, ಹಂಚರಹಳ್ಳಿ.
[೪೬] ಎ.ಕ-೯, ನೆ.ತಾ.೮೦, ಕ್ರಿ.ಶ.೧೭೬೦, ಶಿವಗಂಗೆ.

# ವೈಷ್ಣವಧರ್ಮ

ವಿಷ್ಣುವೇ ಪ್ರಥಮ ಆಧ್ಯತೆಯ ದೇವನಾಗಿ ವಿಷ್ಣುವನ್ನು ಅಥವಾ ಅವನ ಅವತಾರದ ರೂಪಗಳನ್ನು ಪೂಜಿಸುವವರನ್ನ ವೈಷ್ಣವರು ಎಂದು, ಇವರು ವಿಷ್ಣುವಿನ ವಿಭಿನ್ನ ರೂಪಗಳಾದ ಮಾಧವ, ನರಸಿಂಹ, ಕೃಷ್ಣ, ಗೋಪಾಲ, ತಿರುಮಲ, ವೆಂಕಟೇಶ್ವರ, ರಂಗನಾಥ, ಚನ್ನಕೇಶವ, ವೆಂಗಳನಾಥ, ಅಲ್ಲಾಳನಾಥ, ಪೆರುಮಾಳ್ ದೇವರು, ವರದರಾಜ, ಅಲ್ಲಾಳನಾಥ ಹೀಗೆ ಹಲವಾರು ಹೆಸರುಗಳಿಂದ ವಿಭಿನ್ನ ಕಾಲಘಟ್ಟಗಳಲ್ಲಿ ವಿಭಿನ್ನ ಅರಸು ಮನೆತನದವರು ಪೂಜಿಸುತ್ತಾ ದೇವಾಲಯಗಳನ್ನು ನಿರ್ಮಿಸಿ ದಾನದತ್ತಿಗಳನ್ನು ನೀಡಿರುವುದನ್ನು ಕಾಣಬಹುದು.

ಗಂಗರು ಪ್ರಾರಂಭದಲ್ಲಿ ಜೈನ ಮತದವರಾಗಿದ್ದರೂ ಗಂಗರ ಬಹುತೇಕ ಎಲ್ಲಾ ಶಾಸನಗಳು **'ಸ್ವಸ್ತಿ ಜಿತಂ ಭಗವತಾಗತಘನಗಗನಾಭೇನಪದ್ಮನಾಭೇನ'** ಎಂದು ವಿಷ್ಣುವನ್ನು ಸ್ಮರಿಸುತ್ತವೆ. ವಿಷ್ಣುಗೋಪ, ಹರಿವರ್ಮ, ಮಾಧವ ಇತ್ಯಾದಿ ಅರಸರು ವೈಷ್ಣವ ಅವಲಂಭಿಗಳಾದರು. ಗಂಗ ದೊರೆ ದುರ್ವಿನೀತನನ್ನು ಕಾತ್ಯಾಯನೀ ಕಮಲೋದರ ಭಕ್ತನೆಂದು ಮಲ್ಲೋಹಳ್ಳಿ ತಾಮ್ರಶಾಸನದಲ್ಲಿ ಹೇಳಿದೆ. ಬಹುದಿನಗಳಿಂದ ನಷ್ಟವಾಗಿ ನಿಂತು ಹೋಗಿದ್ದ ದೇವಬೋಗ ಮತ್ತು ಬ್ರಹ್ಮದೇಯಗಳನ್ನು ಪುನಃ ಸ್ಥಾಪನೆಗೊಳಿಸಿದವನು. ಕೆಸರಿನಲ್ಲಿ ಸಿಕ್ಕಿಗೊಂಡಿದ್ದ ಧರ್ಮ ದೇವತೆಯನ್ನು ೩ನೇ ಮಾಧವನು ಉದ್ಧಾರ ಮಾಡಿದವನು. ತ್ರ್ಯೆಂಬಕನ ಕಮಲ ಚರಣಗಳ ರಜವನ್ನು ಅಂದರೆ ವಿಭೂತಿಯನ್ನು ಹಣೆಯಲ್ಲಿ ಧರಿಸುವುದರ ಮೂಲಕ ಪವಿತ್ರವಾದ ಶಿರಸ್ಸವುಳ್ಳವನ್ನು[೪೭] ತ್ರ್ಯೆಂಬಕನ ಭಕ್ತನಾಗಿದ್ದು, ಶಿವರಾಧನೆಯಲ್ಲಿ ಹೆಚ್ಚು ಆಸಕ್ತನಾಗಿದ್ದರೂ ಸಹ ಜೈನ ಮತ್ತು ಬೌದ್ಧಧರ್ಮಗಳಿಗೆ ಉದಾರ ನೆರವು ನೀಡಿದ್ದನು. ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದವನು. ಅವನೀತನು ಜೈನಧರ್ಮಕ್ಕೆ ಹಲವು ದಾನದತ್ತಿಗಳನ್ನು ನೀಡಿದ್ದರೂ ಅದರ ಪ್ರಭಾವಕ್ಕೆ ಒಳಗಾಗದೆ ವೈದಿಕ ಧರ್ಮದಲ್ಲಿ ನಿಷ್ಠಾವಂತನಾಗಿದ್ದನು. ವೈದಿಕ ಮತಾವಲಂಬಿಯಾಗಿದ್ದ ದುರ್ವಿನೀತನು ವಿಷ್ಣುವಿನ ಪರಮಾರಾಧಕನಾಗಿದ್ದನು. ಪ್ರತಿವರ್ಷ ಹಿರಣ್ಯಗರ್ಭ ಮಹಾಯಜ್ಞ ಮಾಡುತ್ತಿದ್ದು, ತಾನು ಕಮಲೋಧರ (ವಿಷ್ಣು) ಭಕ್ತ ಎಂದು ಕರೆದುಕೊಂಡಿರುವುದು ವೈದಿಕ ಮತಸ್ಥನೇ ಎಂದು ಡಾ॥ ಶ್ರೀಕಂಠಶಾಸ್ತ್ರಿಗಳ ಅಭಿಪ್ರಾಯ. ಶ್ರೀಪುರುಷನು ನಾರಾಯಣ ಚರಣ ಕಮಲಗಳಲ್ಲಿ ದ್ಯಾನಾಸಕ್ತನಾಗಿದ್ದನು ಎಂದು ಮಣ್ಣೆಯ ತಾಮ್ರಶಾಸನದಲ್ಲಿ ವಿವರಿಸಲಾಗಿದೆ. ಮಣ್ಣೆಯಲ್ಲಿ ರುಂಡವಲ್ಲದ ಗರುಡನ ಮೂರ್ತಿಯು ಪದ್ಮಾಸನದಲ್ಲಿ ಪದ್ಮಪೀಠದ ಮೇಲೆ ಕೈಮುಗಿದು ಧ್ಯಾನ ಭಂಗಿಯಲ್ಲಿ ಕುಳಿತಿದೆ. ಎದೆ ಮತ್ತು ಭುಜದ ಭಾಗಗಳಲ್ಲಿ ರೆಕ್ಕೆಯಿದ್ದು ಸರಳವಾದ ಉಡುಪನ್ನು ಧರಿಸಿ, ಕೊರಳಿಗೆ ಒಂದು ಕಂಠೀಹಾರವನ್ನು ಕೈಗಳಿಗೆ ಕಡಗವನ್ನು, ಮುಂಭಾಗ ಹಿಂಭಾಗ ಕಚ್ಚೆಯನ್ನು

[೪೭] ಎಂ.ಎ.ಆರ್, ೧೯೪೧, ಮೈಸೂರು, ೬ನೇ ಶತಮಾನ, ದುರ್ವಿನೀತ, ಕೊಂಡರಹಳ್ಳಿ, ಪು.ಸಂ-೧೨೭ ರಿಂದ ೧೨೮.

ಸಿಕ್ಕಿಸಲಾಗಿದೆ. ಕುತ್ತಿಗೆಯ ಹಿಂಭಾಗದಲ್ಲಿ ಕಂಠೀಹಾರದ ಕೊಂಡಿಯಿದೆ. ಕೆರೆಯಲ್ಲಿ ಹೂತು ಹೋಗಿದ್ದ ಗರುಡನ ಶಿಲ್ಪವು ಸಿಕ್ಕಿತ್ತು. ವಿಷ್ಣುವಿನ ಎದುರಿಗೆ ಗರುಡ ಇರುವುದು ಸಾಮಾನ್ಯ. ೩ ಅಡಿ ಎತ್ತರ, ಇಷ್ಟು ಭವ್ಯವಾದ ಮೂರ್ತಿಯು ೩ ಅಡಿ ಎತ್ತರವಾಗಿದೆ. ವಿಷ್ಣು ಶಿಲ್ಪವು ಎಷ್ಟು ಅಡಿ ಎತ್ತರವಾಗಿರಬೇಕು. ಬಹುಶಃ ಮಣ್ಣೆಯು ಸರ್ವಧರ್ಮ ಸಮನ್ವಯ ಕೇಂದ್ರವಾಗಿರಬೇಕು. ಇದು ಅಲ್ಲದೆ ಶೆಟ್ಟಿಗಣದವರು ನಿರ್ಮಿಸಿದ ಸೂರ್ಯ ದೇವಾಲಯಕ್ಕೆ ಮಾರಸಿಂಹನು ಕ್ರಿ.ಶ.೮೦೧ ರಲ್ಲಿ ವಾಮತ್ತೂರು ಗ್ರಾಮವನ್ನು[೪೮] ದಾನ ನೀಡಿದ್ದಾರೆ.

ಚೋಳರ ಆಳ್ವಿಕೆಗೆ ಒಳಪಟ್ಟಿದ್ದ ಸಂದರ್ಭದಲ್ಲಿ ಭಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯದಲ್ಲಿನ ಶಿವ ಮತ್ತು ವಿಷ್ಣು ಪರವಾದ ವಿಗ್ರಹಗಳ ಕೆತ್ತನೆಯಿಂದ ಇವರು ವೈಷ್ಣವ ಧರ್ಮ ಪ್ರೋತ್ಸಾಹಕರಿರ ಬಹುದು ಎಂಬುದಕ್ಕೆ ಕುರುಹಾಗಿ ದೇವಾಲಯದ ಎಡಭಾಗದಲ್ಲಿರುವ ತ್ರಿನೇತ್ರ ವೆಂಕಟೇಶ್ವರ, ಕ್ರಿ.ಶ.೧೦೪೩ ರಲ್ಲಿ ಕಾಡುಗೋಡಿಯಲ್ಲಿ ದುರ್ಗಿಯ ವಿಗ್ರಹವನ್ನು[೪೯], ಕ್ರಿ.ಶ.೧೦೩೮ ರಲ್ಲಿ ಚಾಮುಂಡೇಶ್ವರಿ ದೇವಸ್ಥಾನಕ್ಕೆ[೫೦] ದಾನಗಳನ್ನು ನೀಡಿದ್ದಾರೆ.

ಹೊಯ್ಸಳರ ಕಾಲದಲ್ಲಿ ಶ್ರೀ ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬಂದ ಮೇಲಂತೂ ಶ್ರೀ ವೈಷ್ಣವಧರ್ಮವು ಉತ್ತುಂಗ ಶಿಖರ ಏರಿತ್ತು. ಒಂದು ರೀತಿಯಲ್ಲಿ ಶ್ರೀವೈಷ್ಣವಧರ್ಮಕ್ಕೆ ಮತಾಂತರ ಮಾಡಿದರು ಎನ್ನಬಹುದು. ಸಮಾಜದ ಕೆಳವರ್ಗದ ಶೂದ್ರರನ್ನು ಹತ್ತಿರಕ್ಕೆ ಸೇರಿಸಿಕೊಂಡು ಅವರಿಗೂ ಮೋಕ್ಷವುಂಟೆಂದು ಸಾರಿತು[೫೧]. ಮೇಲುಕೋಟೆಯ ದೇವಾಲಯಕ್ಕೆ ಕೆಳವರ್ಗದ ಪ್ರವೇಶಕ್ಕೆ ಮುಕ್ತ ಅವಕಾಶ ನೀಡಿದ ಕ್ರಾಂತಿಕಾರಿ ಪರಿಣಾಮದಿಂದಾಗಿ ಬಹುಸಂಖ್ಯಾತರಾದ ಕೆಳವರ್ಗದವರು ವೈಷ್ಣವ ಧರ್ಮದತ್ತ ಆಕರ್ಷಿತರಾದರು. ಶ್ರೀವೈಷ್ಣವಧರ್ಮ ಪ್ರಚಾರಗೊಳ್ಳಲು ಹಲವಾರು ವೈಷ್ಣವ ಮಠಗಳು ಹುಟ್ಟಿಕೊಂಡವು. ಅವುಗಳಲ್ಲಿ ಶ್ರೀ ಮಧ್ವೇದ ಮಾರ್ಗ ಪ್ರತಿಷ್ಠಾಚಾರ್ಯರು ಸ್ಥಾಪಿಸಿದ ಆ ಹೋಬಳಿ ಮಠವೂ ಒಂದು[೫೨]. ರಾಮಾನುಜರು ಮತ್ತು ಮಾಧ್ವರ ಅನುಯಾಯಿಗಳಾಗಿ ಆಳಾರಸರು ವೈಷ್ಣವ ಧರ್ಮದ ಸ್ವೀಕರಿಸಿದರು. ಬಿಟ್ಟಿದೇವನು ರಾಮಾನುಜರ ಪ್ರಭಾವಕ್ಕೊಳಗಾಗಿ ವೈಷ್ಣವ ಧರ್ಮ ಸ್ವೀಕರಿಸಿ ವಿಷ್ಣುವರ್ಧನನಾಗಿ ಪರಿವರ್ತನೆ ಯಾದ ಮೇಲೆ ಹಾಗೂ ನಂತರದ ಹೊಯ್ಸಳ ಅರಸರುಗಳು ಶ್ರೀವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತೆ ಹಲವಾರು ದೇವಾಲಯಗಳನ್ನು ನಿರ್ಮಿಸಿ ತಮ್ಮ ತಮ್ಮ ಧರ್ಮ ಶ್ರದ್ಧೆಯನ್ನು

[೪೮] ಕ.ವೆಂ. ರಾಜಗೋಪಾಲ :- ಮಣ್ಣೆಯ ಅಹರ್ಪ್ರತಿ ಮಂದಿರ, ಕಪಿಲ, ಸೂರ್ಯ, ಇ.ದ.೧೬, ಪು.ಸಂ-೧೧೩.
[೪೯] ಎ.ಕ-೯, ಹೊ.ತಾ.೧೪೨, ಕ್ರಿ.ಶ.೧೦೪೩, ಕಾಡನೂರು.
[೫೦] ಎ.ಕ-೯, ನೆ.ತಾ.೭ಎ, ಕ್ರಿ.ಶ.೧೦೩೮, ತಮಿಳು, ಅಬೂರು.
[೫೧] Hemachandra Ray chaudry:- Materials for the study of early History of the Vaisnava sect, page.no-115 &117.
[೫೨] ಎ.ಕ-೯, ನೆ.ತಾ.೭೨, ಕ್ರಿ.ಶ.೧೫೫೧, ಬಿಲ್ಲನಕೋಟೆ.

ಮೆರೆದಿದ್ದಾರೆ. ಜಾಲದ ಚನ್ನಕೇಶವ ದೇವರು ಹೊಯ್ಸಳ ಕಾಲದಿಂದಲೂ ಪ್ರಸಿದ್ಧವಾದ ವೈಷ್ಣವ ದೇವಾಲಯವಾಗಿದ್ದು, ಹಲವಾರು ದತ್ತಿಗಳನ್ನು ನೀಡಿದ್ದಾರೆ.

ವಿಜಯನಗರ ಅರಸರು ಮತ್ತು ಸಾಮಂತಾಧಿಪತಿಗಳು, ನಾಡಪ್ರಭುಗಳ ಆಳ್ವಿಕೆಯಲ್ಲಂತೂ ವೈಷ್ಣವಧರ್ಮದ ಸುವರ್ಣಯುಗ ಎನ್ನಬಹುದು. ಆಳರಸರಿಂದ ಹಿಡಿದು ನಾಡಪ್ರಭುಗಳವರೆಗೂ ವೈಷ್ಣವ ಅವಲಂಭಿಯಾಗಿರುವುದಕ್ಕೆ ಹಲವಾರು ಹೊಸ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಹೀಗೆ ಹಲವಾರು ಅಭಿವೃದ್ಧಿ ಜನಪರ ಕಾರ್ಯಗಳು ನಡೆದಿರುತ್ತದೆ.

ಕ್ರಿ.ಶ.೧೩೮೨ ರಲ್ಲಿ ಚಿಕ್ಕಜಾಲದ ಶ್ರೀಕೇಶವನಾಥ ದೇವರಿಗೆ ಉಷಃ ಕಾಲದ ಉಪಹಾರಕ್ಕೆ[೫೩], ಕ್ರಿ.ಶ.೧೩೮೬ ರಲ್ಲಿ ತಿರುಮಲೆನಾಥ ದೇವರಿಗೆ ದೀಪಮಾಲೆಯ ಕಂಬವನ್ನು[೫೪], ಕ್ರಿ.ಶ.೧೪೩೦ ರಲ್ಲಿ ತಿರುಮಲ ದೇವರ ಸೇವೆಗೆ ಮತ್ತು ಗೋಪಾಲಸ್ವಾಮಿ ದೇವರಿಗೆ ಗರುಡ ಕಂಬವನ್ನು[೫೫], ಕ್ರಿ.ಶ.೧೪೯೬ ರಲ್ಲಿ ವಾಗಟದ ವರದರಾಜ ದೇವರಿಗೆ[೫೬], ಕ್ರಿ.ಶ.೧೫೨೩ ರಲ್ಲಿ ತಿರುವೆಂಡನಾಥ ದೇವಾಲಯಕ್ಕೆ[೫೭], ಕ್ರಿ.ಶ.೧೫೩೧ ರಲ್ಲಿ ಕಾಡನೂರು ಚನ್ನಕೇಶವ ದೇವರ ಅಮೃತಪಡಿ, ನೈವೇದ್ಯ, ಅಂಗರಂಗ ವೈಭೋಗಕ್ಕೆ, ರಥೋತ್ಸವಕ್ಕೆ[೫೮] ಹಲವಾರು ದಾನ ದತ್ತಿಗಳನ್ನು ನೀಡಿದ್ದಾರೆ.

ವೈಷ್ಣವಾರಾಧಕರಾದ ಆವತಿ ನಾಡಪ್ರಭುಗಳ ಎಲ್ಲಾ ಶಾಸನಗಳಲ್ಲೂ ವೈಷ್ಣವ ದೇವಾಲಯಕ್ಕೆ ದಾನ ನೀಡಿರುವುದನ್ನು ಕಾಣಬಹುದು. ಶ್ರೀಮದನು ಅಲಮೇಲು ಸಮೇತ ಶ್ರೀವೆಂಕಟೇಶ್ವರ ಸ್ವಾಮಿ ಪಾದಾರವಿಂದ ಪರಿಪಾಲಿತ ದೇವನಪುರದಲ್ಲಿ ಶ್ರೀ ರುಕ್ಮಿಣಿ ಸತ್ಯಭಾಮ ಸಮೇತ ಶ್ರೀಮದನು ಗೋಪಾಲಸ್ವಾಮಿಯವರ ಶ್ರೀಪಾದ ಪದ್ಮಾಂಗಗಳಿಗೆ ಎಂದು ತಮ್ಮ ಪ್ರೀತಿಯ ಇಷ್ಟ ದೇವರಿಗೆ ಹಲವಾರು ಗ್ರಾಮಗಳನ್ನು ನಿತ್ಯೋತ್ಸವ, ಮಾಸೋತ್ಸವ, ಪರ್ವಕಾಲ, ರಥೋತ್ಸವ ಮುಂತಾದ ಸೇವೆಗೆ[೫೯], ಕ್ರಿ.ಶ.೧೭೨೯ರಲ್ಲಿ ವಡಿಗೇನಹಳ್ಳಿಯ ಶ್ರೀ ಚೆನ್ನಕೇಶವ ಸ್ವಾಮಿ ದೇವಾಲಯಕ್ಕೆ[೬೦] ದತ್ತಿಗಳನ್ನು ನೀಡಿದ್ದರು. ಇವರ ಎಲ್ಲಾ ಶಾಸನಗಳನ್ನು ಗಮನಿಸಿದರೆ ಆವತಿಯ ಮನೆತನದವರು ಶ್ರೀಮದನ ಗೋಪಾಲ ಸ್ವಾಮಿಯ ಆರಾಧಕರಾಗಿರಬೇಕು.

[೫೩] ಎ.ಕ-೯, ದೇ.ತಾ.೫೭, ಕ್ರಿ.ಶ.೧೩೮೨ & ೫೯, ಕ್ರಿ.ಶ.೧೪೧೨, ಚಿಕ್ಕಜಾಲ.
[೫೪] ಎ.ಕ-೯, ದೇ.ತಾ.೪೦, ಕ್ರಿ.ಶ.೧೩೮೬, ನಲ್ಲೂರು.
[೫೫] ಎ.ಕ-೯, ಹೊ.ತಾ.೧೫೫, ಕ್ರಿ.ಶ.೧೪೩೩, ಬೆಳತೂರು.
[೫೬] ಎ.ಕ-೯, ಅನುಬಂಧ, ಹೊ.ತಾ.೧೭೨, ಗೊಣಕನಹಳ್ಳಿ.
[೫೭] ಎ.ಕ-೯, ಅನುಬಂಧ, ನೆ.ತಾ.೧೮೬, ಕ್ರಿ.ಶ.೧೫೨೩, ದಾಸನಪುರ.
[೫೮] ಎ.ಕ-೯, ದೊ.ತಾ.೫೦, ಕ್ರಿ.ಶ.೧೫೩೧,ಕಾಡನೂರು.
[೫೯] ಎ.ಕ-೯, ದೇ.ತಾ.೧೫, ಕ್ರಿ.ಶ.೧೬೯೮, ದೇವನಹಳ್ಳಿ.
[೬೦] ಎ.ಕ-೯, ದೇ.ತಾ.೩೦, ಕ್ರಿ.ಶ.೧೭೨೯, ವಡಿಗೇನಹಳ್ಳಿ.

ವೈಷ್ಣವ ಅವಲಂಭಿಯಾದ ಮೈಸೂರು ಒಡೆಯರು ವೈಷ್ಣವಧರ್ಮದ ಬೆಳವಣಿಗೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಕ್ರಿ.ಶ.೧೭೨೦ ರಲ್ಲಿ ಶೂರಗಿರಿ ದುರ್ಗದ ಶ್ರೀಲಕ್ಷ್ಮಿ ನರಸಿಂಹಸ್ವಾಮಿ ದೇವಾಲಯಕ್ಕೆ ಗೊಟ್ಟಿಗೆರೆ ಗ್ರಾಮವನ್ನು[೬೧] ದಾನ ನೀಡಿದ್ದರು. ಮಾಧವರ ನೇತೃತ್ವದಲ್ಲಿ ಆರಂಭವಾಗಿ ವೈದಿಕ ಮಾರ್ಗ ಪ್ರವರ್ತಕನೆಂಬ ಬಿರುದನ್ನು ಬುಕ್ಕನು ಧರಿಸಿದ್ದನು[೬೨].

ಹೀಗೆ ಬೌದ್ಧ, ಜೈನ, ಶೈವ, ವೈಷ್ಣವ ಈ ಎಲ್ಲಾ ಧರ್ಮಗಳೂ ಉಚ್ಛ್ರಾಯ ಸ್ಥಿತಿಗೇರಿರುವಂತೆಯೇ ಅವನತಿಯ ಹಾದಿಯನ್ನು ಕಂಡಿವೆ. ಜೈನ, ವೈಷ್ಣವಧರ್ಮಕ್ಕೆ ಪ್ರತಿಯಾಗಿ ವೀರಶೈವಧರ್ಮದ ಬೆಳವಣಿಗೆ, ವೀರಶೈವಧರ್ಮಕ್ಕೆ ಪ್ರತಿಯಾಗಿ ವೈಷ್ಣವಧರ್ಮ ಇವುಗಳೆಲ್ಲದರ ಮೇಲೆ ಮುಸ್ಲಿಂ ಸಂಸ್ಕೃತಿಯ ದಾಳಿ ಹೀಗೆ ಜೈನ, ಬೌದ್ಧ ಧರ್ಮಗಳು ಅಲ್ಪಸಂಖ್ಯಾತರಾಗಿ, ವೈಷ್ಣವ ಧರ್ಮವು ಈಗ ಹಿಂದೂ ಧರ್ಮವಾಗಿ ಚಾಲ್ತಿಯಲ್ಲಿದೆ.

## ೪.೨ ಸಾಮಾಜಿಕ ವ್ಯವಸ್ಥೆ

ಸಮಾಜವೆಂಬುದು ನಿತ್ಯವು ಪರಿವರ್ತನ ಶೀಲವಾದುದು. ಪರಿವರ್ತನೆಯ ವೇಗ ಹೆಚ್ಚಾದಂತೆ ಸಾಮಾಜಿಕವಾಗಿ ಜನರ ಜೀವನ ದೃಷ್ಟಿಗೆ ತಕ್ಕಂತೆ ಆ ಬದಲಾವಣೆಗಳು ನಡೆದಿರುತ್ತದೆ. ಅಂದಿನ ಸಮಾಜದ ಧಾರ್ಮಿಕ, ನಂಬಿಕೆಗಳು, ಆಚಾರ–ವಿಚಾರಗಳು, ಜೀವನ ಕ್ರಮ ಇವೆಲ್ಲವನ್ನು ಶಾಸನಗಳು ತಿಳಿಸುತ್ತದೆ. ಸಂಗೀತಗಾರ್ತಿ, ನೃತ್ಯಗಾರ್ತಿ, ಲತಾಂಗಿಯರು, ಸ್ತ್ರೀಯರು, ಕೈಯಲ್ಲಿ ಗಿಳಿ ಹಿಡಿದ ನಾರಿಯರು, ಕೋಲಾಟವಾಡುತ್ತಿರುವ, ವೀಣೆ ಹಿಡಿದು ನರ್ತನ ಮಾಡುತ್ತಿರುವ ಸ್ತ್ರೀಯರು, ಸ್ತ್ರೀಯರು ಧರಿಸಿರುವ ಸೀರೆಯಲ್ಲಿನ ನೆರಿಗೆಗಳು, ಕಚ್ಚೆಸೀರೆಗಳು, ನೃತ್ಯಗಾರ್ತಿಯರು ಮೊಣಕಾಲುವರೆಗಿನ ಲಂಗ, ತೊಟ್ಟಿರುವ ಆಭರಣಗಳು, ಕೇಶ ವಿನ್ಯಾಸ, ಕುಳಿತ ವಿವಿಧ ಭಂಗಿಗಳು. ಡೋಲು ಬಡಿಯುತ್ತಿರುವ ವಾದ್ಯಗಾರ, ಪುಂಗಿ ಊದುತ್ತಿರುವ ಹಾವಾಡಿಗ, ಪಿಳ್ಳಂಗೋವಿ ಊದುತ್ತಿರುವ, ಕಂಬಳಿ ಹೊದ್ದು, ಕೈಯಲ್ಲಿ ಕೋಲು ಹಿಡಿದಿರುವ ಗೊರವರು, ತಮಟೆ ಬಾರಿಸುತ್ತಿರುವವರು, ವಿವಿಧ ಆಯುಧಗಳನ್ನು ಹಿಡಿದಿರುವ ಜಟ್ಟಿಗಳು, ಕರುವಿಗೆ ಹಾಲು ಕುಡಿಸುತ್ತಿರುವ ಆಕಳು, ಸಿಂಹದ ದಾಳಿಗೆ ಸಿಲುಕಿದ ಜಿಂಕೆ, ಆನೆಯ ದಾಳಿಗೆ ಮಹಿಳೆ, ದೊಂಬರಾಟಗಳು ಹೀಗೆ ಸಾಮಾಜಿಕ ವ್ಯವಸ್ಥೆಯನ್ನು ನಿರೂಪಿಸುವ ಹಲವಾರು ಶಿಲ್ಪಗಳನ್ನ ಕಾಡನೂರು ಚೆನ್ನಕೇಶವ ದೇವಾಲಯದ ಕಂಬಗಳಲ್ಲಿ ಕಾಣಬಹುದು.

---

[೬೧] ಎ.ಕ-೯, ನೆ.ತಾ.೭೦, ಕ್ರಿ.ಶ.೧೭೨೦, ನರಸಿಂಹಪುರ.

[೬೨] ಡಾ.ಸೂರ್ಯನಾಥ ಕಾಮತ್:-ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೫೩.

ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ದೇವದಾಸಿ ಪದ್ಧತಿ, ಮಠಗಳು, ವಿಧ್ಯಾಭ್ಯಾಸ, ಸಂತೆಗಳು, ತೆರಿಗೆಗಳು, ನಾಣ್ಯಗಳು, ಅರವಟ್ಟಿಕೆಗಳು, ಛತ್ರಗಳು, ಉಡುಪು ಮತ್ತು ಆಭರಣಗಳು, ಕೆರೆಗಳು, ಕೋಟೆಗಳು ಮೊದಲಾದವುಗಳನ್ನು ಒಳಗೊಂಡಿದೆ.

## ವರ್ಣವ್ಯವಸ್ಥೆ

ಋಗ್ವೇದದ ಪುರುಷ ಸೂಕ್ತ ಮಂತ್ರದಲ್ಲಿ ಪುರುಷನ ಮುಖದಿಂದ ಬ್ರಾಹ್ಮಣನು, ತೋಳುಗಳಿಂದ ಕ್ಷತ್ರಿಯನು, ತೊಡೆಗಳಿಂದ ವೈಶ್ಯನು, ಪಾದಗಳಿಂದ ಶೂದ್ರನು ಹುಟ್ಟಿದನೆಂದು ಹೇಳಿದೆ[೬೩]. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುವರ್ಣ ಪದ್ಧತಿಯು ಅಂದಿನ ಸಮಾಜದ ನಾಲ್ಕು ಅಂಗಗಳಾಗಿ ಅವರವರ ಕಸುಬುಗಳ ಆಧಾರದ ಮೇಲೆ ಅವರ ಆಚಾರಗಳು, ಜೀವನ ವ್ಯವಸ್ಥೆಗಳು ನಿರ್ಮಾಣವಾಗಿದ್ದವು. ಬ್ರಾಹ್ಮಣರು ವೇದಾಧ್ಯಯನ, ಪಾಠ ಪ್ರವಚನ, ಪೂಜೆ ಪುನಸ್ಕಾರಗಳಲ್ಲಿ, ಕ್ಷತ್ರಿಯನಾದವನು ತನ್ನ ಶಕ್ತಿ ಯುಕ್ತಿಗಳಿಂದ ಪ್ರಜೆಗಳ, ರಾಜ್ಯದ ಸಂರಕ್ಷಣೆಯಲ್ಲಿ, ವೈಶ್ಯರುಗಳೆಂದರೆ ವ್ಯಾಪಾರಿ ವರ್ಗದವರಾಗಿ ವ್ಯಾಪಾರ ವಹಿವಾಟಿನಲ್ಲಿ ತೊಡಗುವುದು, ಶೂದ್ರನೆಂದರೆ ವ್ಯವಸಾಯ, ಕೃಷಿ, ಆಹಾರ ಉತ್ಪನ್ನಗಳನ್ನು ಬೆಳೆಯುವ ಹಾಗೂ ಮೇಲಿನ ೩ ವರ್ಗಗಳಿಗೆ ಸೇವೆ ಸಲ್ಲಿಸುತ್ತಿರುವವನು. ಶೂದ್ರರ ಹೊರತಾಗಿ ಉಳಿದವರಿಗೆ ತಮ್ಮ ವೃತ್ತಿಗಳನ್ನು ಬದಲಾಯಿಸ ಬಹುದಿತ್ತು. ವೃತ್ತಿಗಳ ವಿವರಣೆಯನ್ನು ಹಲವಾರು ಶಾಸನಗಳಲ್ಲಿ ಕಾಣಬಹುದು. ಕ್ರಿ.ಶ.೧೩೭೬ ರಲ್ಲಿ ೧೭ ವೃತ್ತಿಗಳ[೬೪], ಕ್ರಿ.ಶ.೧೪೦೭ ರಲ್ಲಿ ೧೫ ವೃತ್ತಿಗಳ[೬೫]ಕ್ರಿ.ಶ.೧೫೨೬ ರಲ್ಲಿ ೨೯ ವೃತ್ತಿಗಳು[೬೬] ಇದರ ಜೊತೆಗೆ ಕ್ರಿ.ಶ.೧೪೯೫ರಲ್ಲಿ ತಿರುಮಲೆಭಟ್ಟ, ಶಂಭುಭಟ್ಟ, ಕೋನಭಟ್ಟ, ರಾಮಭಟ್ಟರಿಗೆ ವೃತ್ತಿಸಾಲವಾಗಿ[೬೭] ನೀಡಿರುವುದನ್ನ ಕಾಣಬಹುದು. ಬ್ರಾಹ್ಮಣರು ರಾಜ್ಯಭಾರ ಅಥವಾ ವೈಶ್ಯ ವೃತ್ತಿಯನ್ನು, ವೈಶ್ಯರು ರಾಜಕೀಯದಲ್ಲಿ ಭಾಗವಹಿಸಬಹುದಿತ್ತು.

## ಬ್ರಾಹ್ಮಣ

ಸರ್ವ ಜಾತಿಗಳಲ್ಲಿ ಬ್ರಾಹ್ಮಣ ಜಾತಿಯೇ ಶ್ರೇಷ್ಠ ಎಂಬುದು ಹಿಂದಿನಿಂದಲೂ ಮಾಡಿಕೊಂಡು ಬಂದಿರುವ ನಂಬಿಕೆಯಾಗಿ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದು ಅಧ್ಯಾಪನಾದಿಗಳ ಜೊತೆಗೆ ಸೇನಾಭೋವರಾಗಿ ಸೇವೆಯನ್ನು ಸಲ್ಲಿಸುತ್ತಾ ಸಾಮಾಜಿಕ ಸ್ಥಾನದಲ್ಲಿ ಅತ್ಯಂತ ಗೌರವ–ಮರ್ಯಾದೆಗಳನ್ನು ಹೊಂದಿದ್ದರು. ಶಾಸನಗಳ ಮುಕ್ತಾಯದ ಹಂತದಲ್ಲಿ ಶಾಪಶಯದ ಸಾಲುಗಳಲ್ಲಿ ಈ

---

[೬೩] ಹೆಚ್. ತಿಪ್ಪೇರುದ್ರ ಸ್ವಾಮಿ :- ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.ಸಂ-೩೨.

[೬೪] ಎ.ಕ-೯, ಆ.ತಾ.೨೯, ಕ್ರಿ.ಶ.೧೩೭೬, ತಮಿಳು, ಕತ್ತರಿಗುಪ್ಪೆ.

[೬೫] ಎ.ಕ-೯, ದೇ.ತಾ.೩೨, ಕ್ರಿ.ಶ.೧೪೦೭, ಮಂಕಸಂದ್ರ.

[೬೬] ಎ.ಕ-೯, ಅನುಬಂಧ, ಹೊ.ತಾ.೧೯೩, ಕ್ರಿ.ಶ.ಸೂ.೧೫೨೬, ದೇವಿಶೆಟ್ಟಿಹಳ್ಳಿ.

[೬೭] ಎ.ಕ-೯, ದೇ.ತಾ.೬೬, ಕ್ರಿ.ಶ.೧೪೯೫, ಹಂದರಹಳ್ಳಿ.

ದಾನವನ್ನು ಕೆಡಿಸಿದವನಿಗೆ ವಾರಣಾಸಿಯಲ್ಲಿ ಬ್ರಾಹ್ಮಣರನ್ನು ಕೊಂದ ಪಾಪದಲ್ಲಿ ಹೋಗುವರು ಎಂದು ಭಯಗೊಳಸುವಷ್ಟು ಉನ್ನತಿಯನ್ನು ಹೊಂದಿದ್ದರು. ಹಾಗೇಯೇ ಭಾರದ್ವಾಜ, ಶ್ರೀವತ್ಸ, ವಿಶ್ವಾಮಿತ್ರ, ಕೌಶಿಕ, ಕೌಶ್ಯಪ, ಹತೀತ, ಹರಿತ, ಕೌಂಡಿನ್ಯ, ಮೌನ ಭಾರ್ಗದ ಮುಂತಾದ ಗೋತ್ರಗಳು ಹಾಗೂ ಆಪಸ್ತಂಭ, ಅಶ್ವರಾಯನ, ಭೋದಾಯನ ಮುಂತಾದ ಸೂತ್ರಗಳನ್ನು ವಿಭಿನ್ನ ಗೋತ್ರಗಳಗೆ ಸೇರಿದ ಬ್ರಾಹ್ಮಣರಿಗೆ ನೀಡಿದ ದಾನ ಹಾಗೂ ಅವರು ನಡೆಸುತ್ತಿದ್ದ ಕಾರ್ಯ ಕೆಲಸಗಳ ಬಗ್ಗೆ ಹಲವಾರು ಶಾಸನಗಳಲ್ಲಿ ಕಾಣಬಹುದು. ಒಬ್ಬರು ಋಗ್ವೇದದಲ್ಲಿ ಪಾರಂಗತರಾದರೆ ಮತ್ತೊಬ್ಬರು ಇನ್ನೊಂದು ವೇದದಲ್ಲಿ ಪಾರಂಗತರಾಗಿರುತ್ತಿದ್ದರು. ರಾಜ ಗುರುಗಳ ಸ್ಥಾನದಲ್ಲಿ ಬ್ರಾಹ್ಮಣರೂ ಮುಂದುವರೆದಿರುವುದನ್ನು ಕಾಣಬಹುದು. ಕ್ರಿ.ಶ.೧೬೯೩ ರಲ್ಲಿ ಮುಮ್ಮಡಿ ಚಿಕ್ಕರಾಯ ತಮ್ಮೇಗೌಡರು ತಮ್ಮ ರಾಜ ಗುರುಗಳಾಗಿ ಶ್ರೀ ಮದ್ವೇದ ಮಾರ್ಗ ಪ್ರತಿಷ್ಠಾಪನಾಚಾರ್ಯ ಉಭಯ ವೇದಾಂತ ಆಚಾರ್ಯರಾದ ಕೌಶಿಕ ಗೋತ್ರದ ಆಪಸ್ತಂಭ ಸೂತ್ರದ ಯಜು ಶಾಖೆಯ ಅಧ್ಯಾಯಿಗಳಾದ ತಿರುಮಲ ವೆಂಜಮೂರು ಗ್ರಾಮದ ವೆಂಕಟಾಚಾರ್ಯರು[೧೮] .

ಬ್ರಾಹ್ಮಣರು ಅರ್ಚಕರಾಗಿ ದೇವರ ಮುಂದೆ ಮಂತ್ರಗಳನ್ನು ಪಠಿಸುತ್ತಿದ್ದರು ಮತ್ತು ಗ್ರಾಮಗಳಲ್ಲಿ ದೇವರ ಪ್ರತಿಷ್ಠಾಪನೆ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಕ್ರಿ.ಶ.೧೦೭೫ ರಲ್ಲಿ ನಾರಾಯಣ ಪೆರುಮಾಳ್ ದೇವರ ಮುಂದೆ ಮಂತ್ರಗಳನ್ನು ಪಠಿಸಲು[೧೯] ದಾನ ನೀಡಲಾಯಿತ್ತು. ಪೂಜಾಕೈಕಾರ್ಯಗಳಗೆ ಬಾಣವರದ ಭಟ್ಟಾರಿಗೆ ೧೦ ಕೊಳಗ ಗದ್ದೆ, ನಾಗಮರದ ಭಟ್ಟಾರಿಗೆ ೧೦ ಕೊಳಗ ಗದ್ದೆಗಳನ್ನು[೨೦] (ಇಲ್ಲಿ ದಾನವನ್ನು ಕೊಳಗದ ಅಳತೆಯಲ್ಲಿ ಗದ್ದೆಯನ್ನು ಹಾಗೂ ಪ್ರಚಲಿತದಲ್ಲಿದ್ದ ನಾಣ್ಯವಾದ ಗದ್ಯಾಣವನ್ನು ಉಲ್ಲೇಖಸಲಾಗಿದೆ.). ಇದಲ್ಲದೆ ಸ್ಥಳೀಯ ಸಂಸ್ಥೆಯ ಸದಸ್ಯರಾಗಿರುವುದಕ್ಕೆ ಕ್ರಿ.ಶ.೧೦೪೬ ರಲ್ಲಿ ಕುರುಪ್ಪಿ ವಿಧಾನ ಸಭೆಯಲ್ಲಿ ದಾಸವ ನಾಯಕನ್, ಸಿಂಗಮಕ್ಕನ್, ಸಿರಿಗನ್, ಈಶ್ವರನ್ ಮುಂತಾದ ಬ್ರಾಹ್ಮಣರು ಸದಸ್ಯರಾಗಿದ್ದರು[೨೧].

ಸಾಮಾನ್ಯವಾಗಿ ಬ್ರಾಹ್ಮಣರುಗಳು ಅಗ್ರಹಾರಗಳಲ್ಲಿ ಅಥವಾ ಚತುರ್ವೇದಿ ಮಂಗಳಗಳಲ್ಲಿ ವಾಸಿಸುತ್ತಿದ್ದರು. ಬ್ರಾಹ್ಮಣರ ಜೀವನಾಧಾರಕ್ಕಾಗಿ ಬಿಟ್ಟು ಕೊಡುತ್ತಿದ್ದ ಗ್ರಾಮಗಳನ್ನು ಆಗ್ರಹಾರಗಳೆಂದು, ಅಗ್ರ+ಆಹಾರ ಎಂದೇ ಇದ್ದಿರ ಬೇಕು, ಬ್ರಾಹ್ಮಣರ ವಸತಿ ಮತ್ತು ವಿದ್ಯಾಭ್ಯಾಸಕ್ಕಾಗಿ ದಾನ ದತ್ತಿಗಳನ್ನು ನೀಡುವುದನ್ನು ಬ್ರಹ್ಮದೇಯಗಳೆಂದು ಈ ದಾನಗಳು ತೆರಿಗೆ ರಹಿತವಾಗಿರುತ್ತದೆ. ಕ್ರಿ.ಶ.೧೨೯೪ ರಲ್ಲಿ

---

[೧೮] ಎ.ಕ-೯, ಹೊ.ತಾ.೧೦೫, ಕ್ರಿ.ಶ.೧೬೯೩, ಹೊಸಕೋಟೆ.

[೧೯] ಎ.ಕ-೯, ಹೊ.ತಾ.೧೧೧, ಕ್ರಿ.ಶ.೧೦೭೫, ಬೇಚರಾಖ್ ಮಾರೇನಹಳ್ಳಿ.

[೨೦] ಕೆ.ಧನಪಾಲ್ & ಕೆ.ಆರ್.ನರಸಿಂಹನ್ :- ಹೆಸರುಘಟ್ಟದ ಅಪ್ರಕಟಿತ ಶಾಸನ, ಇ.ದ.ಸಂ.೩೩, ಪು.ಸಂ-೪೭.

[೨೧] ಎ.ಕ-೯, ದೇ.ತಾ.೩೫, ಕ್ರಿ.ಶ.೧೦೪೬, ಗಂಗಾವಾರ.

ಆಹಾರಕ್ಕಾಗಿ ಮತ್ತು ಸ್ಥಾನಪತಿಗಳ ಕಾರ್ಯಗಳನ್ನು ನಿರ್ವಹಿಸಲು ೨೮ ಬ್ರಾಹ್ಮಣರಿಗೆ[೭೨] ನೀಡಿದರು. ಹಲವಾರು ದಾನ ಶಾಸನಗಳಲ್ಲಿ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿ, ಹೊಸದಾಗಿ ಪುರಗಳನ್ನು ನಿರ್ಮಿಸಿ ಅಥವಾ ಪುರಧರ್ಮವಾಗಿ, ಪುರವಾಗಿ ಕೊಟ್ಟ ಉಲ್ಲೇಖವನ್ನು ಗಮನಿಸಿದರೆ ಆ ಕಾಲದಲ್ಲಿ ವ್ಯಕ್ತಿಯೋರ್ವನನ್ನು ಗೌರವಿಸುವ / ಪುರಸ್ಕರಿಸುವ ಕುರುಹಾಗಿ ಪುರಧರ್ಮಗಳನ್ನು ನೀಡುತ್ತಿದ್ದರು. ಈ ದಾನಗಳ ಮೇಲೆ ಯಾವ ಅರಸರೂ ದಾಳಿಯನ್ನು ಮಾಡುತ್ತಿರಲಿಲ್ಲ.

ಕ್ರಿ.ಶ.೪೫೯ ರಲ್ಲಿ ತೈತ್ತರೀಯ ಶಾಖೆಯ ಹೀರಣ್ಯ ಕೇಶಿ ಸೂತ್ರದ ಮರಗೆರೆಯ ರಾಷ್ಟ್ರದ ತಿಪ್ಪೂರ್ ಕಾಡಸ್ವಾಮಿಗಳಿಗೆ ಬ್ರಹ್ಮದೇಯವಾಗಿ[೭೩], ಕ್ರಿ.ಶ.೭೫೦ ರಲ್ಲಿ ಬ್ರಹ್ಮದಾಯವಾಗಿ ಸಕ್ಕರಶರ್ಮನಿಗೆ ಅತ್ತಿಗುನ್ದೂರ್ ಗ್ರಾಮವನ್ನು[೭೪], ಸುರದೇವಪುರದ ಗ್ರಾಮವನ್ನು ಸರ್ವಭೋಗ ದಾನವಾಗಿ ೨೪ ಜನ ಬ್ರಾಹ್ಮಣರಿಗೆ ದಾನ, ದಾನವನ್ನು ಪಡೆದವರಲ್ಲಿ ವೇದ ಪಂಡಿತರು, ವೇದಾಂಗ ಪಂಡಿತರು ವೈಷ್ಣವ ಸ್ಮಾರ್ಥ ಸಂಪ್ರದಾಯದ ಬ್ರಾಹ್ಮಣರು, ಭಾರದ್ವಾಜ, ವಷಿಷ್ಟ, ಶ್ರೀವತ್ಸ, ಮೌನ ಭಾರ್ಗವ ಗೌತಮರಾದಿ ತರ ವಿಶ್ವಾಮಿತ್ರ ಕಾಶ್ಯಪ ಕೌಂಡಿನ್ಯ ಗೋತ್ರದ ಬಂಧುಗಳಿಗೆ ಹಲವಾರು ಬ್ರಾಹ್ಮಣರನ್ನು ಅವರವರ ಗೋತ್ರಗಳನ್ನು[೭೫] ಕಾಣಬಹುದು.

ಕ್ರಿ.ಶ.೧೩೪೫ ರಲ್ಲಿ ಶ್ರೀಭವಭೂತಿಗಳಿಗೆ ಜಾಲಿಗೆ ಗ್ರಾಮವನ್ನು[೭೬], ವಿಜಯನಗರ ಕಾಲದಲ್ಲಿ ಮಂಡಲ ಪುರುಷನಿಗೆ ಲಕ್ಕಗೊಂಡನಹಳ್ಳಿಯನ್ನು[೭೭], ಕ್ರಿ.ಶ.೧೩೮೨ ರಲ್ಲಿ ಪುರುಷೋತ್ತಮ ದೇವನಿಗೆ ಬನಹಳ್ಳಿಯನ್ನು[೭೮], ಕ್ರಿ.ಶ.೧೪೦೭ ರಲ್ಲಿ ಮಹಾಜನಂಗಳಿಗೆ ಮಂಗಸಮುದ್ರವನ್ನು[೭೯], ಕ್ರಿ.ಶ.೧೪೨೫ ರಲ್ಲಿ ಮಾದಿಗೊಂಡನಹಳ್ಳಿ ಮತ್ತು ಸಾಧುಹಳ್ಳಿಗಳನ್ನು[೮೦], ಕೃಷ್ಣದೇವರಾಯನ ಕಾಲದಲ್ಲಿ ರಾಮಘಟ್ಟ ಮತ್ತು ಇತರೆ ಪಂಡಿತರಿಗೆ ಕಂಚಿಗನಾಳಗೆ ಸಿಂಗಸಮುದ್ರ[೮೧], ಕ್ರಿ.ಶ.೧೫೩೦ ರಲ್ಲಿ ಅಚ್ಯುತರಾಯರು ಸಂಭಾಪುರ ಗ್ರಾಮಕ್ಕೆ ಅಚ್ಯುತ ಮಹಾರಾಯಾಂಬುಧಿ ಎಂಬ ಪ್ರತಿನಾಮಾಂಕಿತವಿಟ್ಟು, ಅಗ್ರಹಾರವನ್ನಾಗಿ ಪರಿವರ್ತಿಸಿ ವಿವಿಧ ಗೋತ್ರದ ಬ್ರಾಹ್ಮಣರಿಗೆ ೨೪ ವೃತ್ತಿಯವರಿಗೆ[೮೨], ಕ್ರಿ.ಶ.೧೫೫೧ ರಲ್ಲಿ ಶ್ರೀನಿವಾಸಪುರ ಮತ್ತು

---

[೭೨] ಎ.ಕ-೯, ಬೆಂ.೧೦೦, ಕ್ರಿ.ಶ.೧೨೯೪, ಹೊಂಗಸಂದ್ರ.
[೭೩] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಮಲ್ಲೋಹಳ್ಳಿ.
[೭೪] ಎ.ಕ-೯, ನೆ.ತಾ.೩೩, ಕ್ರಿ.ಶ.೭೫೦, ತೋಟಗೆರೆ.
[೭೫] ಎ.ಕ-೯, ದೇ.ತಾ.೪೪, ಕ್ರಿ.ಶ.೧೪೬೭, ಸುರಧೇನುಪುರ.
[೭೬] ಎ.ಕ-೯, ದೇ.ತಾ.೩, ಕ್ರಿ.ಶ.೧೩೪೫, ಜಾಲಿ.
[೭೭] ಎ.ಕ-೯, ಹೊ.ತಾ.೪೯, ಕ್ರಿ.ಶ.೧೩೭೧, ಜೊಡಿಲಕ್ಕುಂಡನಹಳ್ಳಿ.
[೭೮] ಎ.ಕ-೯, ಹೊ.ತಾ.೧೫೪, ಕ್ರಿ.ಶ.೧೩೮೨, ಚಿಕ್ಕಬನಹಳ್ಳಿ.
[೭೯] ಎ.ಕ-೯, ದೇ.೩೨, ಕ್ರಿ.ಶ.೧೪೦೭, ಮಂಕಸಂದ್ರ.
[೮೦] ಎ.ಕ-೯, ದೇ.೮೧, ಕ್ರಿ.ಶ.೧೪೨೫, ಜೋಡಿ ಸಾದರಹಳ್ಳಿ.
[೮೧] ಎ.ಕ-೯, ದೊ.ತಾ.೧೯, ಕ್ರಿ.ಶ.೧೫೭೯, ಕಂಚಿಗನಾಡು.
[೮೨] ಎ.ಕ-೯, ದೊ.ತಾ.೩೦, ಕ್ರಿ.ಶ.೧೫೩೦, ಕೊಣಗಟ್ಟ.

ನರಸಿಂಹಪುರಗಳನ್ನು[೮೩], ಕ್ರಿ.ಶ.೧೬೦೦ ರಲ್ಲಿ ಶಿವಾಚಾರ್ಯ ಅಯ್ಯನಿಗೆ ಚಿಕ್ಕಮುತ್ತಕುರವನ್ನು[೮೪], ಅದೇ ವರ್ಷದಲ್ಲಿ ಗೋಪಾಲ ದೇವನಿಗೆ ದಂಡಿಗೇನಹಳ್ಳಿಯನ್ನು[೮೫], ಕ್ರಿ.ಶ.೧೬೧೦ ರಲ್ಲಿ ಪಟ್ಟಣ ಪಂಡಿತರಿಗೆ ಇಮ್ಮಡಿ ಬಯಿರಾಪುರವನ್ನು[೮೬], ಕ್ರಿ.ಶ.೧೭೧೫ ರಲ್ಲಿ ಸುಬ್ಬಾ ಭಟ್ಟರಿಗೆ ಮಾವಳಿಪುರಕ್ಕೆ ದೊಡ್ಡಭೈರಸಾಗರ, ಕುರುಬರಹಳ್ಳಿಗಳನ್ನು[೮೭], ಹೆಸರುಘಟ್ಟಕ್ಕೆ ಶಿವನಸಮುದ್ರ[೮೮], ಗೊಂಗಡಿಹಳ್ಳಿಗೆ ತಿಮ್ಮಣ್ಣ ರಾಜಪುರ[೮೯] ಎಂದು ಪ್ರತಿನಾಮಾಂಕಿತವಿಟ್ಟು, ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾಡಿ, ಇದು ಅಲ್ಲದೆ ವಡ್ಡರಹಳ್ಳಿ[೯೦], ಮಂಗಸಮುದ್ರ[೯೧], ಜಾಲಿಗೆ[೯೨], ವಿಮಲಾಸಾಗರ ಭಟ್ಟ ಅಗ್ರಹಾರ[೯೩], ವಿಶ್ವನಾಥ ಮಾಲಿಪುರ[೯೪], ಅನಂತಪುರ ಅಗ್ರಹಾರ[೯೫], ಓಬಳಾಪುರ[೯೬], ವಿಷ್ಣುವರ್ಧನ ಚತುರ್ವೇದಿ ಮಂಗಲ[೯೭], ಬೇಗೂರು[೯೮] ಮುಂತಾದ ಗ್ರಾಮಗಳು ದಾನ ನೀಡಿರುವ ಶಾಸನೋಕ್ತ ಅಗ್ರಹಾರಗಳಾಗಿದೆ. ರಾಜನೊಬ್ಬನು ಬ್ರಾಹ್ಮಣರಿಗೆ ಗ್ರಾಮವನ್ನು ದತ್ತಿ ನೀಡಿ ನಂತರ ಬಹಳ ವರ್ಷಗಳಾದ ಮೇಲೆ ಆ ದಾನವನ್ನು ಕೊಟ್ಟು ರಾಜನ ಹೆಸರು ಮರೆತು ಹೋದರೆ ಆ ಊರನ್ನು "ಶ್ರೀ ಮದನಾದಿ ಅಗ್ರಹಾರ" ಎಂದು ಕರೆಯುತ್ತಿದ್ದರು. ಚೋಳರ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿದ್ದ ಮಳೂರು ಹೊಯ್ಸಳರ ಕಾಲಕ್ಕಾಗಲೇ ಶ್ರೀ ಮದನಾದಿ ಅಗ್ರಹಾರವಾಗಿತ್ತು[೯೯].

## ಕ್ಷತ್ರಿಯರು

ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ಕ್ಷತ್ರಿಯರು ಪ್ರಮುಖವಾದ ಪಾತ್ರವನ್ನು ವಹಿಸುತ್ತಿದ್ದರು. ರಾಜ್ಯ ಚುಕ್ಕಾಣಿ ಹಿಡಿಯಲು ರಾಜನು ಕ್ಷತ್ರಿಯನೇ ಆಗಬೇಕೆಂದೇನಿಲ್ಲ. ಬ್ರಾಹ್ಮಣರು, ವೈಶ್ಯ, ಶೂದ್ರರು ಸಹ ರಾಜ್ಯಭಾರ ಮಾಡಿದ ವಿವರಗಳವೆ.

## ವೈಶ್ಯರು

[೮೩] ಎ.ಕ-೯, ನೆ.ತಾ.೪೨, ಕ್ರಿ.ಶ.೧೫೫೧, ಬೂದಿಹಾಳ.
[೮೪] ಎ.ಕ-೯, ಹೊ.ತಾ.೧೫೮, ಕ್ರಿ.ಶ.೧೬೦೦, ಮುತ್ತುಕೂರು ಅಗ್ರಹಾರ.
[೮೫] ಎ.ಕ-೯, ದೇ.ತಾ.೩೫, ಕ್ರಿ.ಶ.೧೬೦೦, ದಂಡಿಗಾನಹಳ್ಳಿ.
[೮೬] ಎ.ಕ-೯, ದೊ.ತಾ.೪೯, ಕ್ರಿ.ಶ.೧೬೧೦, ನಾಗೇನಹಳ್ಳಿ
[೮೭] ಎ.ಕ-೯, ದೊ.ತಾ.೬೩, ಕ್ರಿ.ಶ.೧೭೧೫, ಮಾವಳ್ಳಿಪುರ.
[೮೮] ಎ.ಕ-೯, ನೆ.ತಾ.೩೧, ಕ್ರಿ.ಶ.೧೫೩೩, ಹೆಸರುಘಟ್ಟ.
[೮೯] ಎ.ಕ-೯, ಬೆಂ.೧೨೩, ಕ್ರಿ.ಶ.೧೪೯೫, ಗೊಂಗಡಿಪುರ.
[೯೦] ಎ.ಕ-೯, ಹೊ.ತಾ.೨೮, ಕ್ರಿ.ಶ.೧೫೩೦, ವಡ್ಡರಹಳ್ಳಿ.
[೯೧] ಎ.ಕ-೯, ದೇ.ತಾ.೩೨, ಕ್ರಿ.ಶ.೧೪೦೭, ಮಂಕಸಂದ್ರ.
[೯೨] ಎ.ಕ-೯, ದೇ.ತಾ.೩, ಕ್ರಿ.ಶ.೧೩೪೫, ಜಾಲಿಗೆ.
[೯೩] ಎ.ಕ-೯, ನೆ.ತಾ.೧೫, ಕ್ರಿ.ಶ.೧೩೫೧, ಭಟ್ರಹಳ್ಳಿ.
[೯೪] ಎ.ಕ-೯, ದೊ.ತಾ.೫೮, ಕ್ರಿ.ಶ.೧೬೪೭, ಕಾಮಾಕ್ಷಿಪುರ.
[೯೫] ಎ.ಕ-೯, ನೆ.ತಾ.೧೬, ಕಡಬಗೆರೆ.
[೯೬] ಎ.ಕ-೯, ನೆ.ತಾ.೫೯, ಮಣ್ಣೆ.
[೯೭] ಎ.ಕ-೯, ದೇ.ತಾ.೫೯, ಕ್ರಿ.ಶ.೧೪೧೨, ಚಿಕ್ಕಜಾಲ.
[೯೮] ಎ.ಕ-೯, ದೇ.ತಾ.೫೧, ಕ್ರಿ.ಶ.೧೬೯೭, ಬೇಗೂರು.
[೯೯] ಎ.ಕ-೯, ಚ.ತಾ.೯೮, ಕ್ರಿ.ಶ.೧೩೨೬, ಮಳೂರು.

ಜೀವನಾವ್ಯಕ ವಸ್ತು, ಕ್ರಿಯೆಗಳಗೆ ಸಂಬಂಧಿಸಿದಂತೆ ಮಾನವನ ನೈಸರ್ಗಿಕ ವೃತ್ತಿಗಳು ಸಮಾಜ ಬೆಳೆದಂತೆ ಅನೇಕ ವೃತ್ತಿಗಳು ಹುಟ್ಟಿಕೊಂಡವು. ಇಂತಹ ವೃತ್ತಿಗಳಲ್ಲಿ ಪ್ರಧಾನವಾದ ವಿನಿಮಯ ಕ್ರಿಯೆಯೊಳಗೊಂಡ ವರ್ತಕ ವೃತ್ತಿಯಾಗಿ ಹುಟ್ಟಿಕೊಂಡವು. ಸಾಮಾಜಿಕ ಚಟುವಟಿಕೆಗಳ ಆಡಳಿತ ಯಂತ್ರದಲ್ಲಿ ವೈಶ್ಯರು ಅತ್ಯಂತ ಪ್ರಮುಖರಾಗಿ ಸಾಮಾಜಿಕ, ರಾಜಕೀಯ ಪ್ರಭಾವಿ ಸ್ಥಾನಗಳನ್ನು ಹೊಂದಿರುತ್ತಾರೆ. ವೈಶ್ಯ, ಸೆಟ್ಟಿ, ಕೋಮಟಿ, ಉಭಯ ನಾನಾದೇಶಿ (ಉಭಯ ನಾನಾದೇಸಿ ಎಂಬುದು ವಿಭಿನ್ನ ಭಾಗಗಳಲ್ಲಿ ವ್ಯವಹಾರ ನಡೆಸುವ ಬುದ್ಧಿ ಇರುವವನು ಎಂದು), ಒಡ್ಡೆ ವ್ಯವಹಾರಿ ಇತ್ಯಾದಿ ಹಲವಾರು ನಾಮಗಳಿಂದ ಕರೆಯಲ್ಪಡುತ್ತಿದ್ದ ಚತುವರ್ಣಗಳಲ್ಲಿ ಮೂರನೇಯ ಸ್ಥಾನ ಹೊಂದಿದ್ದ ವೈಶ್ಯರು ಪ್ರಬಲರಾಗಿರದೆ ಮಾತ್ರವಲ್ಲದೇ ಸ್ಥಳೀಯ ಆಡಳಿತದಲ್ಲೂ ಪಾಲುಗೊಳ್ಳುವಷ್ಟು ಪ್ರಭಾವ ಶಾಲಿಗಳಾಗಿದ್ದರು. ಈ ವೇಳೆಗಾಗಲೇ ಒಂದು ವರ್ತಕ ಸಂಘ ಅಸ್ತಿತ್ವದಲ್ಲಿತ್ತು. ಕರ್ನಾಟಕದ ಅತ್ಯಂತ ಮಹತ್ವವಾದ ಐಹೊಳೆ-೫೦೦ ಎಂಬುದು ಸಾಕಷ್ಟು ಪ್ರಭಾವಿಯಾಗಿದ್ದ ವ್ಯಾಪಾರಿ ಸಂಸ್ಥೆಯಾಗಿತ್ತು. ಚಾಲುಕ್ಯರ ಕಾಲದಲ್ಲಿ ಐಹೊಳೆಯನ್ನು ಕೇಂದ್ರವಾಗಿಟ್ಟುಕೊಂಡು ದೇಶ-ವಿದೇಶಗಳಲ್ಲಿ ವ್ಯಾಪಾರ, ವ್ಯವಹಾರ ನಡೆಸುತ್ತಿದ್ದ ಅತ್ಯುನ್ನತವಾದ ಸಂಘವು ಐಹೊಳೆಯಲ್ಲಿ ವಹಿವಾಟು ನಡೆಸುತ್ತಿದ್ದ ವ್ಯಾಪಾರಿ ಸಂಘಗಳು ೫೦೦ ಆಗಿರುವುದರಿಂದ ಐಹೊಳೆ-ಐನೂರು ಎಂಬ ಹೆಸರಿನ ಶೆಟ್ಟಿ ಸಂಘ ಪ್ರಸಿದ್ಧಿಯಾಗಿತ್ತು. ಶೆಟ್ಟಿಗಳೆಲ್ಲರೂ ತಮ್ಮನ್ನು ಈ ಸಂಘದ ಸದಸ್ಯರೆಂಬಂತೆ ಹೇಳ ಕೊಳ್ಳುವುದು ಪ್ರತಿಷ್ಠೆಯ ವಿಷಯವಾಗಿತ್ತು. ವೈಶ್ಯರು ಮಾತ್ರವಲ್ಲದೆ ಇತರೆ ಬೇರೆ ಬೇರೆ ವೃತ್ತಿಗಳವರು ವ್ಯಾಪಾರ ಮಾಡುತ್ತಿದ್ದರು.

ರಾಜಘಟ್ಟದಲ್ಲಿ ವಿವಿಧ ರೀತಿಯ ವರ್ತಕ ಶ್ರೇಣಿಗಳದ್ದು, ಬಹುದೊಡ್ಡ ಪ್ರಮಾಣದಲ್ಲಿ ಸಂತೆಯನ್ನು ನಡೆಸುತಿದ್ದರು. ೧೦ನೇ ಶತಮಾನಕ್ಕಾಗಲೇ ಪ್ರಸಿದ್ಧ ವಾಣಿಜ್ಯ ಕೇಂದ್ರವಾದ ಮಣ್ಣೆಯಲ್ಲಿ ಶ್ರೇಷ್ಠಗಣದವರು ಅಹರ್ಪ್ರತೀ (ಸೂರ್ಯ) ಮಂದಿರವನ್ನು ನಿರ್ಮಿಸಿ ಆ ಮಂದಿರದ ದೇವರ ಸೇವೆಗಾಗಿ ಅದೇ ಶ್ರೇಷ್ಠಗಣ ಪೊನ್ನುಡಿಕೆ ವಿಷಯದ ಮಸೆಕ್ಕಲ ಹೆಸರಿನ ಗ್ರಾಮವನ್ನು ಯುವರಾಜ ಮಾರಸಿಂಹನ ಆಜ್ಞೆಯಂತೆ ಸರ್ವಭಾಧಾ ಪರಿಹಾರವಾಗಿ ಕ್ರಿ.ಶ. ೮೦೧-೮೦೨ ರಲ್ಲಿ ದಾನ ನೀಡಿದರು. ಈ ಶಾಸನದಿಂದಾಗಿ ಯುವರಾಜ ಮಾರಸಿಂಹನ ಕಾಲಕ್ಕಾಗಲೇ ಮಾನ್ಯಪುರದಲ್ಲಿ ಭವ್ಯವಾದ ದೇವಾಲಯವನ್ನು ಕಟ್ಟಿಸಬಲ್ಲಷ್ಟು ಶ್ರೀಮಂತ ಶ್ರೇಷ್ಠಗಣ ಇದ್ದರು ಎಂಬುದು ಖಚಿತವಾಗುತ್ತದೆ. ಈ ಶಾಸನದಲ್ಲಿ ಉಲ್ಲೇಕವಾಗಿರುವ ಹದಿನೆಂಟು ಪಟ್ಟಣದ ಶೆಟ್ಟಿಗುತ್ತರು ಯಾವ ಹದಿನೆಂಟು ಪಟ್ಟಣಗಳಗೆ ಸೇರಿದವರು ಎಂದು ತಿಳಯದು. ಬಹುಶಃ ಗಂಗರ ಆಳ್ವಿಕೆಯ ಪ್ರಮುಖ ೧೮ ಪಟ್ಟಣಗಳಿರ ಬೇಕು.

ಹೊಯ್ಸಳರ ಕಾಲದಲ್ಲಿ ನಗರದ ಆಡಳಿತವನ್ನು ಪಟ್ಟಣ ಸ್ವಾಮಿಯು ನೋಡಿಕೊಳ್ಳುತಿದ್ದರು. ನರಸಿಂಹನ ಕಾಲದಲ್ಲಿ ಜಂಬುದ್ವೀಪ ಐಯಾವಳೆಯ ಐನೂರುರ್ಬ ಸ್ವಾಮಿಗಳುಂ ಉಭಯ ನಾನಾದೇಶಿ

ಮುಖ್ಯರಪ್ಪ ತ್ರೈಲೋಕ್ಯ ಪಟ್ಟಣಸ್ವಾಮಿ ಮತ್ತು ಇತರ ಉಭಯ ನಾನಾ ದೇಶಗಳು ಸೇರಿ ಶ್ರೀ ಗೌರವೇಶ್ವರ ದೇವರ ಶ್ರೀಕಾರ್ಯಕ್ಕೆ ಹಲವಾರು ದತ್ತಿಗಳನ್ನು[೧೦೦] ಬಿಟ್ಟ ವಿವರದ ಶಾಸನದಲ್ಲಿ ವೀರಶೆಟ್ಟಿಯನ್ನು ನಾನಾ ಉಭಯ ದೇಶಿಯೆಂದು, ಒಡ್ಡ ವ್ಯವಹಾರಿಯೆಂದು ಹಾಗೂ ಪಟ್ಟಣ ಸ್ವಾಮಿಯೆಂದು ಉಲ್ಲೇಖಿಸಿರುವುದನ್ನು ಕಂಡರೆ ಹೊಯ್ಸಳರ ಕಾಲದಲ್ಲಿಯೂ ಶೆಟ್ಟಿವರ್ಗವೂ ಪ್ರಾಬಲ್ಯವನ್ನು ಹೊಂದಿರುವುದನ್ನು ಕಾಣಬಹುದು.

ಶೆಟ್ಟಿಯು ಕೇವಲ ವ್ಯಾಪಾರ, ವ್ಯವಹಾರಕ್ಕೆ ಮಾತ್ರವಲ್ಲದೇ, ವ್ಯಾಪಾರದಿಂದ ಸಂಪಾದಿಸಿದ ಹಣವನ್ನು ಧಾರ್ಮಿಕ ಕಾರ್ಯಗಳಿಗೂ ಸಮಾಜದ ಅವಿಭಾಜ್ಯ ಅಂಗವಾಗಿ ಎಲ್ಲಾ ಕೆಲಸಗಳಲ್ಲಿಯೂ ಭಾಗವಹಿಸುತ್ತಿದ್ದರು. ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ಕೆರೆಗಳ ನಿರ್ಮಾಣ ಇತ್ಯಾದಿ ಕಾರ್ಯಗಳನ್ನು ಮಾಡುತ್ತಿದ್ದರು. ಗ್ರಾಮದ ಅಥವಾ ನಗರದ ಅಧಿಕಾರಿಯಾಗಿ, ಪಟ್ಟಣ ಸ್ವಾಮಿಯಾಗಿ ರಾಜಕೀಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಕ್ರಿ.ಶ.೧೩೩೩ ರಲ್ಲಿ ಮುಕಿತಶೆಟ್ಟಿಗೆ ಪಟ್ಟಣಸ್ವಾಮಿಯಾಗಿ ಸಂತೆಯನ್ನು[೧೦೧], ಕ್ರಿ.ಶ.೧೪೦೭ ರಲ್ಲಿ ಮಲ್ಲಿಶೆಟ್ಟಿಯು ಹನುಮಂತ ದೇವರನ್ನು ಪ್ರತಿಷ್ಠೆ ಮಾಡಿಸಿ ದೀಪಮಾಲೆಯ ಕಂಬವನ್ನು ನಿರ್ಮಿಸಿದನು[೧೦೨].

ವೈಶ್ಯರಲ್ಲಿ ಕೆಲವರೂ ಯೋಧರಾಗಿ ಕಾರ್ಯ ನಿರ್ವಹಿಸಿರುವುದಕ್ಕೆ ಹಲವು ವೀರಗಲ್ಲುಗಳನ್ನು ಕಾಣಬಹುದು. ತುರ್‌ಗಳನ್ನು ರಕ್ಷಿಸುತ್ತಾ ಸತ್ತು ಸ್ವರ್ಗ ಸೇರಿರುವುದಕ್ಕೆ ದೊಡ್ಡಬಳ್ಳಾಪುರ ತಾಲ್ಲೂಕಿನ ಚಬ್ಬಿ ಸೆಟ್ಟಿಯು ಕಾಯ್ದು ಸತ್ತು ಸ್ವರ್ಗಕ್ಕೆ ಮತ್ತೊಂದು ವೀರಗಲ್ಲಿನಲ್ಲಿ ಚಬ್ಬಿಸೆಟ್ಟಿಯ ತಮ್ಮ ಮಣಿಯ ಸೆಟ್ಟಿಯು ಗೋವುಗಳ ರಕ್ಷಣೆ ಮಾಡುತ್ತಾ ಹಸುನೀಗಿದನು[೧೦೩]. ಹೀಗೆ ವೈಶ್ಯ ಜನಾಂಗವು ಹಲವಾರು ಜನ ಸಂದರ್ಭಗಳಲ್ಲಿ ಸೈನ್ಯದಲ್ಲಿ ತಮ್ಮ ಧರ್ಮವನ್ನು ತೋರಿಸಿ ವೀರ ಸ್ವರ್ಗ ಸೇರಿದ ದಾಖಲೆಗಳಿವೆ. ಇದಲ್ಲದೆ ಮಹಾಪ್ರಧಾನ, ಮಹಾಮಂಡಲೇಶ್ವರ, ದಂಡನಾಯಕ ಮತ್ತು ಗೌಡ ಮೊದಲಾದವರು ಈ ಧಾರ್ಮಿಕ ಕಾರ್ಯಗಳ ಪ್ರೋತ್ಸಾಹ ಮತ್ತು ಉತ್ತೇಜನಗಳಿಗೆ ವರ್ತಕರಿಗೆ ಹಲವು ವಿಧದ ದತ್ತಿಗಳನ್ನು ನೀಡಿದ್ದಾರೆ.

## ಶೂದ್ರರು

ಚತುರ್ವರ್ಣಗಳಲ್ಲಿ ಆನೇಯ ವರ್ಗವಾದ ಶೂದ್ರರಲ್ಲಿ ಹಲವಾರು ಉಪಪಂಗಡಗಳಿವೆ. ಸಾಮಾಜಿಕವಾಗಿ ಮಾತ್ರವಲ್ಲದೇ, ರಾಜಕೀಯವಾಗಿ ಪಾಲ್ಗೊಳ್ಳುತ್ತಿದ್ದರು. ಶಾಸನಗಳು ಸಾಮಾಜಿಕವಾಗಿ

[೧೦೦] ಎ.ಕ-೯, ದೊ.ತಾ.೩೧, ಕ್ರಿ.ಶ.೧೨೬೭, ದೊಡ್ಡಬಳ್ಳಾಪುರ.
[೧೦೧] ಎ.ಕ-೯, ಬೆಂ.೬೧, ಕ್ರಿ.ಶ.೧೩೩೨, ಹೂಡಿ.
[೧೦೨] ಎ.ಕ-೯, ಹೊ.ತಾ.೧೪೧, ಕ್ರಿ.ಶ.೧೪೦೭, ಹೊಸಕೋಟೆ.
[೧೦೩] ಎ.ಕ-೯, ದೊ.ತಾ.೯ & ೧೦, ಕ್ರಿ.ಶ.೯೨೦, ಅರಳುಮಲ್ಲಿಗೆ.

ಹೇಗೆ ಪ್ರಾಮುಖ್ಯತೆ ಹೊಂದಿತ್ತು ಎಂದು ತಿಳಿಯುವುದಕ್ಕ ಶಾಸನಗಳಲ್ಲಿ ಸಿಗುವ ಹಲವಾರು ಕುಲಕಸುಬುಗಳ ವಿವರಗಳು, ಈಗ ಜಾತಿಗಳು ಎಂದು ಪರಿಗಣಿತವಾಗಿರುವ ಕುಲಗಳ ಬಗ್ಗೆ ಮಾಹಿತಿ ಸಿಗುತ್ತದೆ. ಶೂದ್ರರಲ್ಲಿ ಮಾದಿಗ, ಕ್ಷೌರಿಕ, ಕುಂಬಾರ, ಬೋವಿಗಳು, ಅಗಸ, ಗಾಣಿಗ, ಬಡಗಿ, ಕಮ್ಮಾರ, ನೇಕಾರ, ಒಕ್ಕಲಿಗ, ಅಕ್ಕಸಾಲಿಗ, ತೋಟಿಗ, ತಳವಾರ ಇನ್ನೂ ಮುಂತಾದವರು ವಿಭಿನ್ನ ಕುಲ ಕಸುಬನ್ನು ಆಧರಿಸಿ ದೈನಂದಿನ ಜೀವನ ಸಾಗಿಸುತ್ತಿದ್ದರು. ಇವರೆಲ್ಲರೂ ಕಾರ್ಮಿಕ ವರ್ಗಗಳಾಗಿದ್ದರೇ ವಿನಹಃ ಜಾತಿ ಸೂಚಿಕವಾಗಿ ಮೇಲು ಕೀಳೆಂಬ ಬೇದವು ಮೇಲೆ ತಿಳಿಸಿದ ಯಾವ ಕಸುಬುಗಳಲ್ಲೂ ಇರಲಿಲ್ಲ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಈ ಕುಲ ಕಸುಬುಗಳಿಗೆ ಕೆಲವು ಸಂದರ್ಭಗಳಲ್ಲಿ ತೆರಿಗೆಯಿಂದ ವಿನಾಯಿತಿ ಅಥವಾ ತೆರಿಗೆಗಳಿಂದ ಕೂಡಿರುತ್ತಿತ್ತು.

ಶಿಲ್ಪಿಗಳ ಕೆತ್ತನೆ, ದೇವಾಲಯಗಳ ನಿರ್ಮಾಣ, ಲೋಹದ ಕೆಲಸ, ಶಾಸನಗಳನ್ನು ಕೆತ್ತುವುದು, ಕುಸುರಿನಿಂದ ಕೂಡಿದ ಕ್ರಿಯಾತ್ಮಕ ಕೆಲಸಗಳಿಂದ ಕೂಡಿದವರ ಬಗ್ಗೆ ಶಾಸನಗಳಲ್ಲಿ ವಿಶ್ವಕರ್ಮ, ಸ್ಥಾನಪತಿ, ಕಮ್ಮಲಾನ, ಪಂಚಕಸುಭಿನವರು, ಪಾಂಚಾಳಕುಲ ಎಂಬಿತ್ಯಾದಿ ಉಲ್ಲೇಖಗಳಿವೆ. ಬಡಗಿಗಳು, ಕಮ್ಮಾರರು, ಅಕ್ಕಸಾಲಿಗರು, ಉಪ್ಪಾರರು, ಕಂಚುಗಾರರು, ವಿಶ್ವ ಕರ್ಮ ಕುಲಕ್ಕೆ ಸೇರಿದವರೆಂದು ಹಾಗೂ ವೀರ ಪಂಚಾಳರೆಂದು ಕರೆಯಲಾಗುತ್ತಿತ್ತು. ಶಿಲ್ಪಿಗಳ ಕಲೆಯು ವಂಶ ಪಾರಂಪರ್ಯವಾಗಿದ್ದು, ಮರದ ಕೆಲಸವನ್ನು ಮಾಡುವವನು ಬಡಗಿ, ಕಬ್ಬಿಣದ ಕೆಲಸ ಮಾಡುವವನು ಕಮ್ಮಾರ, ಚಿನ್ನದ ಕೆಲಸ ಮಾಡುವವನು ಅಕ್ಕಸಾಲಿಗ. ಕಂಚಿನ ಪ್ರತಿಮೆಗಳನ್ನು ತಯಾರಿಸುತ್ತಿದ್ದವರು ಕಂಚುಗಾರರು. ಶಿಲ್ಪಿಗಳನ್ನು ಕೆತ್ತುತ್ತಿರುವ ಚಾರಿಗಳು. ಇವರಿಗೆ ವೃತ್ತಿಯಾಧಾರಿತ ತೆರಿಗೆಯನ್ನು ವಿಧಿಸಲಾಗುತ್ತಿತ್ತು[೧೦೪]. ಕ್ರಿ.ಶ.೧೩೧೫ ರಲ್ಲಿ ನಾಡ ಬಡಗಿ, ಕಮ್ಮಾರ, ಅಕ್ಕಸಾಲಿಗ ಹಾಗೂ ಸಮಸ್ತ ವೀರ ಪಾಂಚಾಳರಿಗೆ ಕ್ರಮವಾಗಿ[೧೦೫], ಕ್ರಿ.ಶ.೧೫೦೭ ರಲ್ಲಿ ದೊಡ್ಡ ವೀರಯ್ಯನು ಬಿಲ್ಲಿನಕೋಟೆ ಗ್ರಾಮದ ಕಬ್ಬಿಣದ ಕೆಲಸಗಾರನಾಗಿದ್ದವನು[೧೦೬]. ಶಾಸನಗಳನ್ನು ಕೆತ್ತುತ್ತಿದ್ದ ಶಿಲ್ಪಿಗಳನ್ನು ಕೆಲವು ಶಾಸನಗಳು ಕಲ್ಲುಕುಟಿಗೆರೆಂದು ಕರೆದಿದೆ. ಇವರ ವೃತ್ತಿಗೆ ತೆರಿಗೆ ವಿಧಿಸಲಾಗುತ್ತಿತ್ತು.

ತಿರುಮಲ ದೇವರ ಶ್ರೀಪಾದುಕೆಯನ್ನು ಮಾಡಿದ ಆಚಾರಿ ಓಜನು[೧೦೭], ಕ್ರಿ.ಶ.೧೩೮೬ ರಲ್ಲಿ ದೇವಾಲಯದ ಮುಂದೆ ಕಂಬವನ್ನು ಮಾಡಿದ ಆಚಾರಿ ಒಡೆಯಪ್ಪ[೧೦೮], ಓಜರು ವೀರಗಲ್ಲುಗಳನ್ನು ಸಹ

[೧೦೪] ಎ.ಕ-೯, ದೇ.ತಾ.೫೭, ಕ್ರಿ.ಶ.೧೩೮೨, ಚಿಕ್ಕಜಾಲ.
[೧೦೫] ಎ.ಕ-೯, ಮಾ.ತಾ.೧೫, ಕ್ರಿ.ಶ.೧೩೧೫, ಕಲ್ಲೂರು.
[೧೦೬] ಎ.ಕ-೯, ನೆ.ತಾ.೭೧, ಕ್ರಿ.ಶ.೧೫೦೭, ಬಿಲ್ಲಿನಕೋಟೆ.
[೧೦೭] ಎ.ಕ-೯, ದೇ.ತಾ.೩೯, ಕ್ರಿ.ಶ.೧೪೦೧, ನಲ್ಲೂರು.
[೧೦೮] ಎ.ಕ-೯, ದೇ ೪೦, ಕ್ರಿ.ಶ.೧೩೮೬, ನಲ್ಲೂರು.

ಕೆತ್ತುತ್ತಿದ್ದರು. ಮಣ್ಣೆಯ ಜಿನ ಮಂದಿರವನ್ನು[೧೦೯], ಕ್ರಿ.ಶ.೯೬೬ ರಲ್ಲಿ ಗಂಗಾಚಾರಿಯು ದಡಿಗೇಶ್ವರ ದೇವಾಲಯವನ್ನು[೧೧೦] ನಿರ್ಮಿಸಿದ ಶಿಲ್ಪಿಗಳು.

ಬಟ್ಟೆಗಳನ್ನು ನೇಯುತ್ತಿದ್ದವರು ನೇಕಾರರು, ಈ ನೇಯ್ಗೆಯವರಲ್ಲಿ ಒಂದು ಒಳಪಂಗಡ ದೇವಾಂಗ[೧೧೧] ಎಂದು, ಈ ದೇವಾಂಗದ ವೆಂಕಟರವಣಯ್ಯನು ತ್ಯಾಮಗೊಂಡ್ಲು ಅಂಜನೇಯ ದೇವಾಲಯಕ್ಕೆ ಗಂಟೆಯೊಂದನ್ನು[೧೧೨] ನೀಡಿದನು. ನೇಕಾರರ ಮಗ್ಗಗಳಿಗೆ ಮಗ್ಗದೆರೆ, ಕ್ಷೌರದ ಕೆಲಸವನ್ನು ಮಾಡುವವರು ನಾವಿದ (ಕ್ಷೌರಿಕ)ನ ವೃತ್ತಿಗೆಗೆ, ಕ್ರಿ.ಶ.೧೩೮೨ ರಲ್ಲಿ ಜನರ ಬಟ್ಟೆಗಳನ್ನು ಶುಭ್ರಗೊಳಿಸುತ್ತಿದ್ದ ಅಗಸನಿಗೂ ವೃತ್ತಿಯ ಮೇಲೆ[೧೧೩], ಮಣ್ಣಿನ ಮಡಕೆಗಳನ್ನು ಮಾಡುವವರು ಕುಂಬಾರರು, ಇವರ ವೃತ್ತಿಯ ಮೇಲೆ[೧೧೪], ರೈತರ ಎಣ್ಣೆಯ ಬೀಜಗಳನ್ನು ಗಾಣಕ್ಕೆ ಹಾಕಿ ಎಣ್ಣೆಯನ್ನು ತೆಗೆಯುತ್ತಿದ್ದ ಗಾಣಿಗರು, ಗಾಣಗಳಲ್ಲಿ ಕೈಗಾಣ[೧೧೫] ಮತ್ತು ಎತ್ತು ಗಾಣಗಳೆಂದು[೧೧೬]. ಈ ಗಾಣಗಳಿಗೂ ತೆರಿಗಳನ್ನು ವಿಧಿಸುತಿದ್ದರು. ಗಾಣಗಳು ಗಾಣೀಗರಿಲ್ಲದೆ ಸಾರ್ವಜನಿಕವಾಗಿಯೂ ಉಪಯೋಗವಾಗುತ್ತಿತ್ತು. ಆದ್ದರಿಂದ ಗಾಣವನ್ನು ನಿರ್ಮಿಸುವುದು ಸಹ ಧರ್ಮದ ಕಾರ್ಯವಾಗಿ ನಂಜುಡ ಭಟ್ಟನು ಕಲ್ಲಿನ ಗಾಣವನ್ನು ನೀಡಿದನು[೧೧೭]. ಜೀವನಾಧಾರಕ್ಕಾಗಿ ಕುರಿಗಳನ್ನು ಕಾಯ್ದುಕೊಂಡು ಬದುಕುತ್ತಿದ್ದ ಕುರುಬರು, ಬೇಟೆಗಳನ್ನು ವೃತ್ತಿಯಾಗಿ ಬೇಡರು, ಕ್ರಿ.ಶ.೧೪೧೮ ರಲ್ಲಿ ಧನು ಕಾಡಿತನೆಂಬ ಬಿಲ್ಲುಗಾರನು ಮಧುರೆ ಗ್ರಾಮದಲ್ಲಿ ವಾಸವಾಗಿದ್ದನು[೧೧೮].

ಶೂದ್ರರು ಅಂದಿನ ಸಮಾಜದಲ್ಲಿ ಹಲವಾರು ಧರ್ಮ ಕಾರ್ಯಗಳನ್ನು ಕೈಗೊಂಡಿದ್ದರು. ಕೆರೆಗಳ ನಿರ್ಮಾಣ, ದೇವಾಲಯಗಳ ನಿರ್ಮಾಣ, ಜೀರ್ಣೋದ್ದಾರ ಮುಂತಾದ ಸಾಮಾಜಿಕ ಕಾರ್ಯಗಳನ್ನು ಮಾಡುತ್ತಿದ್ದರು. ನಾಡಿನ ಗ್ರಾಮದ ಅಧಿಕಾರಿಗಳನ್ನು ಹೊಂದಿದ್ದವರನ್ನು ಗೌಡಿಗೆ ಮಾಡಿದ್ದರಿಂದ ಗೌಡನೇ ಆಗಿದ್ದಾರೆ. ಸುಗುಟೂರು ಪ್ರಭುಗಳು, ಯಲಹಂಕ ನಾಡಪ್ರಭುಗಳು, ಆವತಿನಾಡಪ್ರಭುಗಳು ತಮ್ಮನ ತಾವು ಚತುರ್ಥಗೋತ್ರ, ಸದಾಶಿವಗೋತ್ರವೆಂದು ಹೇಳಿಕೊಂಡಿದ್ದಾರೆ. ರಾಜಕೀಯವಾಗಿ ಉನ್ನತ

---

[೧೦೯] ಕ.ವೆಂ. ರಾಜಗೋಪಾಲ್ :- ಮಣ್ಣೆಯ ಅಹರ್ಪ್ರತಿ ಮಂದಿರ, ಕಪಿಲ, ಸೂರ್ಯ, ಇ.ದ.ಸಂ,೧೬, ಪು.ಸಂ-೧೧೪.
[೧೧೦] ಎ.ಕ-೯, ಮಾ.ತಾ.೭೫, ಕ್ರಿ.ಶ.೯೬೬, ಮೂಜರೆ ಮೂಡ್ಲುಪಾಳ್ಯ.
[೧೧೧] ಎ.ಕ-೯, ದೇ.ತಾ.೭೩, ಕ್ರಿ.ಶ.೧೩೭೧, ಗಂಗವಾರ.
[೧೧೨] ಎ.ಕ-೯, ನೆ.ತಾ.೧೭೧, ತ್ಯಾಮಗೊಂಡ್ಲು.
[೧೧೩] ಎ.ಕ-೯, ದೇ.ತಾ.೫೭, ಕ್ರಿ.ಶ.೧೩೮೨, ಚಿಕ್ಕಜಾಲ.
[೧೧೪] ಎ.ಕ-೯, ದೇ.ತಾ.೭೧, ಕ್ರಿ.ಶ.೧೫೦೭, ಬಿಲ್ಲಿನ ಕೋಟೆ.
[೧೧೫] ಎ.ಕ-೯, ಬೆಂ.೧೬೨, ಕ್ರಿ.ಶ.೧೪೦೮, ದೊಮ್ಮಲೂರು
[೧೧೬] ಎ.ಕ-೯, ದೇ.ತಾ.೫೭, ಕ್ರಿ.ಶ.೧೩೮೨, ಚಿಕ್ಕಜಾಲ.
[೧೧೭] ಎ.ಕ-೯, ಅನುಬಂಧ, ಹೊ.ತಾ.೧೯೪, ಪರಮನಹಳ್ಳಿ.
[೧೧೮] ಎ.ಕ-೯, ದೊ.ತಾ.೫೬, ಕ್ರಿ.ಶ.೧೪೧೮, ಮಧುರೆ.

ಹಂತಕ್ಕೆ ಏರಿರುವುದರಿಂದ ತಮ್ಮ ಹೆಸರಿನ ಜೊತೆಯಲ್ಲಿ ಗೋತ್ರವನ್ನು ಸೇರಿಸಿಕೊಂಡಿರುವುದು ಪ್ರಾಯಶಃ ತಮ್ಮನ್ನು ಗೌರವಯುತವಾದ ಸ್ಥಾನಕ್ಕೆ ವಿಸ್ತರಿಸಿ ಕೊಂಡಿರಬೇಕು.

ಚೋಳರ ಕಾಲದಲ್ಲಿ ಗಂಡುಯ್ಯ ಗಾವುಂಡನು ಕೆರೆಯ ನಿರ್ಮಾಣಕ್ಕೆ[೧೧೯] ವ್ಯವಸಾಯವನ್ನು ಒಕ್ಕಲಿಗರು ಈ ಒಕ್ಕಲಿಗರಲ್ಲಿ ಹಲವಾರು ಉಪ ಪಂಗಡಗಳಿವೆ. ಇಮ್ಮಡಿ ಕೆಂಪೇಗೌಡನು ಮೊರಸು ಒಕ್ಕಲಿಗ ಕುಲದವನಾಗಿದ್ದನು[೧೨೦].

ಪ್ರಾಚೀನ ಕಾಲದಲ್ಲಿ ಧರ್ಮದ ಕಟ್ಟುಪಾಡುಗಳಿಗಿಂತಲೂ ಜಾತಿಯ ನಿಯಮಗಳೇ ಹೆಚ್ಚು ಕಠಿಣವಾಗಿದ್ದವು. ವ್ಯಕ್ತಿಯು ಜಾತಿಯ ಅಥವಾ ಸಮಾಜದ ಭಯದಿಂದ ಸಮಾಜದ ಬಹಿಷ್ಕಾರಕ್ಕೆ ಹೆಸರಿ ಅನಿವಾರ್ಯವಾಗಿ ನಿಯಮಗಳನ್ನು ಒಪ್ಪಿಕೊಳ್ಳ ಬೇಕಾಗುತ್ತಿತ್ತು.

ದೇವಾಲಯದ ಜಾತ್ರೆ ಉತ್ಸವಗಳಿಗೆ ಸಂಬಂಧಿಸಿದಂತೆ ಊರಿನ ಜನರು ಸೇರಿ ತಾವು ದೇವಸ್ಥಾನಕ್ಕೆ ಸಲ್ಲಿಸಬಹುದಾದ ಸೇವೆಯನ್ನು ಸಭೆಯ ಮೂಲಕ ತೀರ್ಮಾನಿಸಿ ಎಲ್ಲರೂ ಪಾಲಿಸದಿದ್ದರೆ ಅವರವರ ಕುಲದಿಂದ ಹೊರ ಹಾಕಲಾಗುತ್ತಿತ್ತು[೧೨೧]. ಹೊಸಕೋಟೆ, ಕೋಳಾಲ, ತೇಕಲು, ಬೂದಿಗುಟ್ಟ, ಕಗ್ಗೊಂದೀ ದುರ್ಗ, ವೆಂಕಟಗಿರಿಕೋಟೆ, ಮೇಕನಾಯಕನಪಾಳ್ಯ, ಮಾಸ್ತಿ, ಬಾಗಲೂರು, ಆನೇಕಲ್ಲು, ಡೆಂಕಣೀಕೋಟೆ, ರತ್ನಗಿರಿ, ಕಾವೇರಿಪಟ್ಟಣ, ಆಂದೂರು, ಪೆರಂದೂರು, ಪೆನ್ನಾಗರ, ಶಾಲ್ಯ, ಧರ್ಮಪುರಿ, ಅಜ್ಜೀಪುರ, ಕುರುಬರಹಟ್ಟಿ, ಶ್ರೀರಂಗಪಟ್ಟಣ ಮೊದಲಾದ ಸ್ಥಳಗಳಲ್ಲಿರುವ ಮೂರನೇ ಜಾತಿಯವರು ಎಲ್ಲಿಯೇ ಇದ್ದರೂ ಉಚಿತ ಪ್ರಕಾರಕ್ಕೆ ವರ್ತನೆಯನ್ನು ಮನೆಯೊಂದಕ್ಕೆ ಹಣ ಮತ್ತು ಮದುವೆಗೆ ೨ ಹಣ ನೀಡಬೇಕೆಂದು ಗ್ರಾಮಸ್ಥರ ಸಮ್ಮುಖದಲ್ಲಿ ನಿರ್ಧರಿಸಿರುವುದನ್ನು[೧೨೨], ಕ್ರಿ.ಶ.೧೬೯೮ ರಲ್ಲಿ ಕೊಲ್ಲುಟನಹಳ್ಳಿಯ ಹೊಲೆಯರು ದೊಡ್ಡಗಾವನಹಳ್ಳಿಯ ಕೆರೆಯನ್ನು ಜೀರ್ಣೋದ್ಧಾರ ಮಾಡಿದಕ್ಕಾಗಿ ರಾವುತರಾಯನು ಕೆರೆಯನ್ನು ಕೊಡುಗೆಯಾಗಿ[೧೨೩], ಕ್ರಿ.ಶ.೧೭೯೩ ರಲ್ಲಿ ಮಾದಿಗ ದೇವೆಗೌಡ[೧೨೪] ಕೊಟ್ಟನು. ಕೆಲವು ದಾನ ಶಾಸನಗಳ ಕೊನೆಯ ಶಾಪಶಯದಲ್ಲಿ ದಾನ ನಾಶಪಡಿಸಿದವರು ಚಂಡಾಲರ ಜನ್ಮದಲ್ಲಿ ಹುಟ್ಟುವವರೆಂದು[೧೨೫], ಹೊಲೆಯ ಮಾದಿಗರ ಬೀಜಕ್ಕೆ ಹುಟ್ಟಿದವನು[೧೨೬] ಎಂದು ಅಂದರೆ

---

[೧೧೯] ಎ.ಕ-೯, ಹೊ.ತಾ.೧೦, ಕ್ರಿ.ಶ.೧೦೨೩, ಜೋಡಿದಳಸಿಗೆರೆ.
[೧೨೦] ಕರ್ಲಮಂಗಲ ಶ್ರೀಕಂಠಯ್ಯ :- ಗೌಡ ಕುಲ, ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ, ಪು.ಸಂ-೫೭.
[೧೨೧] ಎ.ಕ-೯, ದೇ.ತಾ.೩೭, ಕ್ರಿ.ಶ.೧೬೯೭, ಸೋಮನಹಳ್ಳಿ.
[೧೨೨] ಎ.ಕ-೯, ಬೆಂ.೯೬, ಬೇಗೂರು ತಾಮ್ರ ಶಾಸನ.
[೧೨೩] ಎ.ಕ-೯, ಹೊ.ತಾ.೪೧, ಕ್ರಿ.ಶ.೧೬೯೮, ವೋಬಳೇನಹಳ್ಳಿ.
[೧೨೪] ಎ.ಕ-೯, ಕ.ತಾ.೪೬, ಕ್ರಿ.ಶ.೧೭೯೩, ಪುರುಸುಗೊಂಡಹಳ್ಳಿ.
[೧೨೫] ಎ.ಕ-೯, ಬೆಂ.೧೫೯, ಅನುಬಂಧ, ಕ್ರಿ.ಶ.೧೬೬೯, ಮಲ್ಲೇಶ್ವರ.
[೧೨೬] ಎ.ಕ-೧೨, ತು.ತಾ.೨೪, ಕ್ರಿ.ಶ.೧೭೨೦, ಹೆಬ್ಬೂರು ಗ್ರಾಮದ ಚಿಕ್ಕಕೆರೆ ಕಟ್ಟೇ ಮೇಲೆ ನೆಟ್ಟ ಕಲ್ಲು.

ಚಂಡಾಲರಾಗಿ ಹುಟ್ಟುವುದು ಒಂದು ಶಾಪದ ಅನ್ನೋ ರೀತಿಯಲ್ಲಿ ಭಯ ಹುಟ್ಟಿಸಿ ಸಮಾಜವನ್ನು ನಿಯಂತ್ರಿಸಲು ಈ ತರ ಶಾಪಶಯ ಹಾಕಿಸುತ್ತಿದ್ದರೆನಿಸುತ್ತದೆ. ಒಂದು ವರ್ಣದವರು ಇನ್ನೊಂದು ವರ್ಣದವರ ವೃತ್ತಿಗಳನ್ನು ಕೈಗೊಂಡಿಂದಿರಿಂದ ವರ್ಣವ್ಯವಸ್ಥೆಯು ಸಡಿಲವಾಗವಾಗುತ್ತಾ ಬೇರೆ ಬೇರೆ ಜಾತಿಗಳು ಹುಟ್ಟಿಕೊಂಡವು. ಕ್ರಿ.ಶ.೪೫೯ ರ ಶಾಸನದಲ್ಲಿ ೧೮ ಜಾತಿಗಳ ಉಲ್ಲೇಖ[೧೨೭], ಬ್ರಾಹ್ಮಣರಲ್ಲದೆ ಕ್ಷತ್ರಿಯ, ವೈಶ್ಯ, ಶೂದ್ರರಲ್ಲದೆ ನಾನಾವರ್ಣಗಳು[೧೨೮] ಸಹ ಅಸ್ತಿತ್ವದಲ್ಲಿತ್ತು.

## ಸ್ತ್ರೀಯರ ಸ್ಥಾನಮಾನ

'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾ' ಎಂಬುದು ಭಾರತೀಯ ಸಮಾಜದಲ್ಲಿ ಸರ್ವಕಾಲದಲ್ಲಿಯೂ ಚಾಲ್ತಿಯಲ್ಲಿರುವಂತೆ ಪುರುಷ ಪ್ರಧಾನ ಸಮಾಜವಾದರೂ ಎಲ್ಲಾ ಕಾಲಗಳಲ್ಲಿಯೂ ಸ್ತ್ರೀಯರಿಗೆ ಸಮಾನವಾದ ಸ್ಥಾನವನ್ನು ಕಲ್ಪಿಸಿದೆ. ಬ್ರಾಹ್ಮಣ, ಗೋವು, ಶಿಶು, ಭ್ರೂಣ, ಸ್ತ್ರೀ ಎಂಬ ಪಂಚ ಮಹಾ ಪಾತಕಗಳಲ್ಲಿ ಸ್ತ್ರೀ ಹತ್ಯೆಯು ಒಂದು. ಋಗ್ವೇದ ಕಾಲದಲ್ಲಿ ಗೋಶ ಎನ್ನುವ ನಾರಿಗೆ ಗಂಡನನ್ನು ಆಯ್ಕೆ ಮಾಡಿಕೊಳ್ಳುವ ಸ್ವತಂತ್ರ ಮತ್ತು ಸಮಾಜದಲ್ಲಿ ಸಮಾನ ಸ್ಥಾನಮಾನವಿತ್ತು ಎಂದು ಎಂ.ಜಿ.ನಾಗರಾಜ್ ನವರು ಹೇಳಿದ್ದರು.

ಪ್ರಾಚೀನ ಕಾಲದಲ್ಲಿ ಸ್ತ್ರೀಯರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಚಟುವಟಿಕೆಗಳಲ್ಲಿನ ಸ್ಥಿತಿಗತಿಗಳು ಕೇವಲ ಗೃಹಿಣಿಯರಾಗಿ ಮನೆ ಕೆಲಸಕ್ಕೆ ಸೀಮಿತವಾಗಿ ಇರಬೇಕಿತ್ತು. ಸ್ತ್ರೀಯರು ವಿದ್ಯಾವಂತರಾಗಿ, ಉನ್ನತ ಸ್ಥಾನ ಹೊಂದುತ್ತಿದ್ದು ರಾಜ ಮನೆತನ ಮತ್ತು ಶ್ರೀಮಂತ ಮನೆತನಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಿತ್ತು. ಕೃಷ್ಣವರ್ಮ ಮಹಾಧಿರಾಜಸ್ಯ ಸ್ತ್ರೀಯ ಭಾಗಿನೆಯೋ ವಿದ್ಯಾವಿನಯ ಸಂಪನ್ನ ಶ್ರೀಮಾನ್ಯವಿನೀತನ ಮಾತನ್ಯ ಎಂದು ವಿಷ್ಣು ಗೋಪನ ತಾಯಿಯು ವಿದ್ಯಾವಿನಯ ಸಂಪನ್ನಳೂ ಆದ ಎಂದು ಹೇಳಿದೆ. ಸ್ತ್ರೀಗೆ ವಿದ್ಯಾಭ್ಯಾಸಕ್ಕಿಂತ ನರ್ತನ ಸಂಗೀತಗಳಂತಹ ಲಲಿತ ಕಲೆಗಳ ಅಭ್ಯಾಸಕ್ಕೆ ಹೆಚ್ಚು ಪ್ರಧಾನ್ಯತೆ ಕೊಡುತಿದ್ದರು. ಆದರೆ ಅವಿದ್ಯಾವಂತ ಕುಟುಂಬಗಳ ಪರಿಸ್ಥಿತಿಯು ಬೇರೆಯದೇ ಆಗಿತ್ತು. ಸ್ತ್ರೀಯರ ವಿದ್ಯಾಭ್ಯಾಸ ಸ್ಥಿತಿಯು ಬಹಳ ಶೋಚನೀಯವಾಗಿತ್ತು.

ರಾಜಮನೆತನಗಳಲ್ಲಿ ಬಹುಪತ್ನಿತ್ವ ರೂಡಿಯಲ್ಲಿರುತ್ತಿತ್ತು. ಒಬ್ಬ ಪತ್ನಿಗಿಂತ ಹೆಚ್ಚಿನ ಸಂಖ್ಯೆಯ ದ್ವಿಪತ್ನಿಯರನ್ನು ಹೊಂದುವುದು. ರಾಜನಿಗೆ ಹೆಚ್ಚಿನ ಜನ ರಾಣಿಯರಿದ್ದಾಗ ಮುಖ್ಯರಾಣಿಗೆ ಹೆಚ್ಚಿನ ಪ್ರಾಮುಖ್ಯತೆ ಇರುತಿತ್ತು. ಯಲಹಂಕ ನಾಡಪ್ರಭು ಇಮ್ಮಡಿ ಕೆಂಪಭೂಪನಿಗೆ ಕೆಂಪಮ್ಮ, ಲಿಂಗಮ್ಮರೆಂಬ

---

[೧೨೭] ಎ.ಕ-೯, ದೊ.ತಾ.೬೭, ಕ್ರಿ.ಶ.೪೫೯, ಮಲ್ಲೋಹಳ್ಳಿ.
[೧೨೮] ಎ.ಕ-೯, ದೇ.ತಾ.೧೫, ಕ್ರಿ.ಶ.೧೬೯೭, ದೇವನಹಳ್ಳಿ.

ಇಬ್ಬರು ಉಪ ಪತ್ನಿಯರಿದ್ದರು[೧೨೯]. ರಾಣಿಯರಲ್ಲಿ ಕೆಲವರು ಆಳ್ವಿಕೆಯನ್ನು ಸಹ ನಡೆಸುತ್ತಿದ್ದರು. ರಾಜಕುಮಾರರು ಅಪ್ರಾಪ್ತ ವಯಸ್ಕರಾಗಿದ್ದಾಗ ರಾಜ ಮಾತೆಯರು ತಾವೇ ರಾಜ್ಯ ಭಾರವನ್ನು ಮಾಡುತ್ತಾ ಸ್ವಾತಂತ್ರವಾಗಿ ದಾನದತ್ತಿಗಳನ್ನು ನೀಡುತ್ತಿದ್ದರು. ಕ್ರಿ.ಶ.೧೬೯೭ ರ ಆವತಿ ನಾಡಪ್ರಭುಗಳ ಒಂದು ಶಾಸನದಲ್ಲಿ ಇಮ್ಮಡಿ ಸಣ್ಣ ಭೈರೇಗೌಡರ ಧರ್ಮಪತ್ನಿ ಕೆಂಪಮ್ಮನವರ ಪುತ್ರರಾದ ಗೋಪಾಲಗೌಡರು[೧೩೦] ದಾನ ನೀಡಿದ ವಿವರಗಳೊಳಗೊಂಡ ಈ ಶಾಸನದ ಕಾಲಕ್ಕೆ ಬಹುಶಃ ಗೋಪಾಲಗೌಡ ಅಪ್ರಾಪ್ತ ವಯಸ್ಕನಾಗಿರ ಬೇಕೆನಿಸುತ್ತದೆ. ಆ ಸಂದರ್ಭದಲ್ಲಿ ರಾಜಮಾತೆಯು (ತಾಯಿ) ಮಗನ ಹೆಸರಿನಲ್ಲಿ ಶಾಸನ ಹೊರಡಿಸಿರಬೇಕು.

ವಿಧವೆಯರು ಪಾತಿವ್ರತ್ಯ ಧರ್ಮದ ಉಳಿವಿಗಾಗಿ ಸಂತೋಷದಿಂದ ಇಲ್ಲ ಬಲವಂತದಿಂದ ಸಹಗಮನ ಮಾಡಬೇಕಿತ್ತು. ವಿಧವೆಯರಿಗೆ ಅಂದಿನ ಸಮಾಜದಲ್ಲಿ ಉತ್ತಮ ಸ್ಥಾನಮಾನಗಳಿರಲಿಲ್ಲ. ವಿಧವೆಯರೇನಾದರೂ ಗರ್ಭಿಣಿಯರಾದರೆ ಅವರಿಗೆ ಸಮಾಜದಿಂದ ಬಹಿಷ್ಕಾರ ಹಾಕಲಾಗುತ್ತಿತ್ತು[೧೩೧]. ಜೈನ ಧರ್ಮದಲ್ಲಿ ಹಲವು ಸ್ತ್ರೀಯರು ಸನ್ಯಾಸಿನಿಯಾಗಿ ವಿಧಿಯಿಂದ ಮರಣ ಹೊಂದುತ್ತಿದ್ದರು.

ಯುದ್ಧಗಳಲ್ಲಿ ಪುರುಷರು ಮಾತ್ರವಲ್ಲದೇ ಸ್ತ್ರೀಯರು ಹೋರಾಟ ಮಾಡಿದ ಅಪರೂಪದ ಸಂಗತಿಯಾಗಿ ಕ್ರಿ.ಶ.೧೦೪೧ ರ ರಾಜೇಂದ್ರ ಚೋಳನ ಕಾಲದಲ್ಲಿ ಮಾಚಗೌಡನ ಮಗಳು ಲಕ್ಷ್ಮಮ್ಮ ಗಾವುಂಡಿಯು ಸರಕ್ಕನೂರಿನ ಹಸು ಮತ್ತು ಎಮ್ಮೆಗಳನ್ನು ಕದ್ದುಕೊಂಡು ಹೋಗುತ್ತಿದ್ದ ಶತ್ರುಗಳನ್ನು ಸೋಲಿಸಿ ತುರುಗಳನ್ನು ರಕ್ಷಿಸಿ ನಂತರ ಸತ್ತು ಸ್ವರ್ಗ ಸೇರಿದಳು[೧೩೨].

ಕೆಲವೊಮ್ಮೆ ಗ್ರಾಮಗಳಿಗೆ ಸ್ತ್ರೀಯರ ಹೆಸರುಗಳನ್ನು ನೋಡಲಾಗುತ್ತಿತ್ತು. ನೊಳಂಬ ದೊರೆ ಅಯ್ಯಪ್ಪದೇವನು ಗಂಗರ ರಾಜಕುಮಾರಿ ಪೊಲ್ಲಬ್ಬರಸಿಯನ್ನು ವಿವಾಹವಾಗಿ ಅವಳ ಹೆಸರಿನಲ್ಲಿ ಪೊಲ್ಲರಸಿಯ ಮಂಗಲಪುರವನ್ನು[೧೩೩], ಕ್ರಿ.ಶ.೧೩೪೦ ರಲ್ಲಿ ಮೂರನೇ ಬಲ್ಲಾಳನ ಕಾಲದಲ್ಲಿ ಹೊನ್ನಪ್ಪನ ಮಗಳು ಬೈಯಿಚವ್ವಗೆ ದಂಡಿಗೀಯ ಬೀಯಕ್ಕೆ ತಾವರೆಕೆರೆಯಲ್ಲಿ ಭೂಮಿಯನ್ನು ಕೊಡುಗೆಯಾಗಿ[೧೩೪] ನೀಡಿದ ನಂತರ ಈ ಕೊಡುಗೆ ಭೂಮಿಗೆ ಬಯಿರವ್ವಹಳ್ಳಿ ಎಂದು ಆಕೆಯ ಹೆಸರನ್ನಿಡಲಾಯಿತು. ಈಗ ಬೈಚಗುಪ್ಪೆಯಾಗಿದೆ. ಕ್ರಿ.ಶ.೧೫೨೮ ತಿಪ್ಪೂರ ಹೊನ್ನ ವೀರಶೆಟ್ಟಿಯ ತನ್ನ ಮಕ್ಕಳು ಸಾವನ್ನಪ್ಪಿದಾಗ ಒಂದು

---

[೧೨೯] ಹೆ.ಚ್. ಜಯಣ್ಣ ಕರಿಯಣ್ಣ :- ಯಲಹಂಕ ಪ್ರಭುಗಳ ಕಾಲದ ಸ್ತ್ರೀ ಸಮಾಜ, ಬೆಂಗಳೂರು ಕೆಂಪೇಗೌಡರ ವಂಶಸ್ಥರು, ಪು.ಸಂ-೧.
[೧೩೦] ಎ.ಕ-೯, ದೇ.ತಾ.೩೦, ಕ್ರಿ.ಶ.೧೭೨೯, ವಡಿಗೇನಹಳ್ಳಿ.
[೧೩೧] ಎ.ಕ-೯, ಅನುಬಂಧ, ಮಾ.ತಾ.೯೬, ಹರತಿ ಗ್ರಾಮ.
[೧೩೨] ಎ.ಕ-೯, ಹೊ.ತಾ.೧೧, ಕ್ರಿ.ಶ.೧೦೪೧, ಸಿದ್ದನಹಳ್ಳಿ.
[೧೩೩] ಎಂ.ಜಿ. ನಾಗರಾಜ್ & ಹೆಚ್.ಎಂ. ಸಿದ್ದನಗೌಡ :- ಬೆಂಗಳೂರು ಮತ್ತು ಕೊಡಗು ಜಿಲ್ಲೆಯ ಕೆಲವು ಅಪ್ರಕಟಿತ ಶಾಸನಗಳು, ಇ.ದ.ಸಂ ೧೪, ಪು.ಸಂ-೩೦.
[೧೩೪] ಎ.ಕ-೯, ಮಾ.ತಾ.೮೧, ಕ್ರಿ.ಶ.೧೩೪೦, ಬೈಚಗುಪ್ಪೆ.

ಕೆರೆಯನ್ನು ಕಟ್ಟಿಸಿ, ಕನ್ಯಾದಾನಗಳನ್ನು ನೀಡಿದನು[೧೩೫]. ಸ್ತ್ರೀಯರು ಅನೇಕ ಸಾರ್ವಜನಿಕ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಶಿವಗಂಗೆ ಬೆಟ್ಟದ ಮೆಲೆ ತಿಮ್ಮಜ್ಜಿಯು ವರಳನ್ನು ಮಾಡಿಸಿದಳು[೧೩೬].

## ದೇವದಾಸಿ ಪದ್ಧತಿ

ದೇವದಾಸಿಯರು ಎಂದರೆ ದೇವಸ್ಥಾನಗಳಲ್ಲಿ ಗೀತ, ನೃತ್ಯಗಳ ಮೂಲಕ ಭಗವಂತನ ಸೇವೆಯನ್ನು ಮಾಡಿಕೊಂಡಿದ್ದ ದಾಸಿಯರು. ಸಾಮಾನ್ಯವಾಗಿ ದಾನ ಶಾಸನಗಳಲ್ಲಿ ಅಂಗಭೋಗ ಮತ್ತು ರಂಗಭೋಗಗಳ ಉಲ್ಲೇಖಗಳನ್ನು ಕಾಣಬಹುದು. ಅಂಗಭೋಗವೆಂದರೆ ದೇವರ ವಿಗ್ರಹಕ್ಕೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳ ಸೇವೆ. ರಂಗಭೋಗವೆಂದರೆ ದೇವರ ವಿಗ್ರಹದ ಎದುರಿಗೆ ರಂಗಮಂಟಪದ ಮೇಲೆ ಗೀತ, ನೃತ್ಯ, ಸಂಗೀತ ಮೊದಲಾದುವುಗಳ ಮೂಲಕ ದೇವರಿಗೆ ಸೇವೆ ಮಾಡುತ್ತಿರುವುದು. ಅಂಗ, ರಂಗ ಭೋಗಗಳ ಸೇವೆಗಳಿಗೆ ದಾನ ದತ್ತಿಗಳು ನೀಡಿರುವುದನ್ನು ಗಮನಿಸಿದರೆ ದೇವಾಲಯಗಳಲ್ಲಿ ರಂಗ ಭೋಗ ಸೇವೆಗಳು ಜರುಗುತ್ತಿದ್ದರಿಂದ ದೇವದಾಸಿಯರು ಇದ್ದಿರಬಹುದು. ದೇವದಾಸಿಯರಿಗೆ ಸಲ್ಲಿಸುತ್ತಿದ್ದ ಸೇವೆಗಳಿಗೆ ಪ್ರತಿಫಲವಾಗಿ ದಾನದತ್ತಿಗಳನ್ನು ಸಹ ನೀಡುತ್ತಿದ್ದರು.

ದೇವರ ಸೇವೆಗೆ ಮೀಸಲಾದ ದೇವದಾಸಿಯರೊಂದಿಗೆ ಸಂಬಂಧವಿಟ್ಟು ಕೊಳ್ಳುವುದು ಪುಣ್ಯವೆಂದು ಜನರು ನಂಬಿರಬೇಕು, ದೇವ ಪೂಜೆಯ ಸಂದರ್ಭದಲ್ಲಿ ಸಂಗೀತಕ್ಕಾಗಿ ಸ್ತ್ರೀಯರು ನೇಮಿಸಿಕೊಳ್ಳಬೇಕೆಂದು ಹಲವು ಪುರಾಣಗಳು ಹೇಳುತ್ತವೆ. ಈ ಸ್ತ್ರೀಯರು ಸಾಮಾನ್ಯವಾಗಿ ವೇಶ್ಯೆಯರು. ಇವರನ್ನು ದೇವಸ್ಥಾನಗಳಿಗಾಗಿ ಕಂಡು ಕೊಳ್ಳಬೇಕೆಂದು ಕೆಲವು ಪುರಾಣಗಳು ಸೂಚಿರುವುದು[೧೩೭].

ಪಾತ್ರದವರು, ನಟವರು, ಜೋಗತಿಯರು, ಬಸವಿಯರೆಂದು ಕರೆಯುವ ದೇವದಾಸಿಯರು ಸುಂದರಿಯರಾಗಿದ್ದು, ಕಲಾಪರಿಣಿತರಾಗಿರುತ್ತಾರೆ. ದೇವದಾಸಿಯರಲ್ಲಿ ಕೆಲವರು ವೇಶ್ಯಾವಾಟಿಕೆಯಲ್ಲಿ ತೊಡಗುವಂತೆ ಆಡಳಿತವರ್ಗ ಅಥವಾ ನೃತ್ಯಗಾರ್ತಿಯರು ವೇಶ್ಯಾವಾಟಿಕೆಯನ್ನು ನಡೆಸುತ್ತಿದ್ದರು. ಚಿಟ್ಟೆಯಂತೆ ಮೆರೆಯುವವಳನ್ನು ಪಾತರಗಿತ್ತಿ ಎಂದು, ಪಾತುರೀಯ ಎಂದರೆ ವೇಶ್ಯೆ ಎಂದರ್ಥ, ಚಂಚಲ ಸ್ವಭಾವದಳಾಗಿದ್ದರಿಂದ ಪಾತರಗಿತ್ತಿ ಎಂದು ಕರೆಯುತ್ತಿದ್ದಿರ ಬಹುದು. ಈ

[೧೩೫] ಎಂ.ಜಿ. ಮಂಜುನಾಥ & ವಿಶ್ವನಾಥ್.ಜೆ.ಸಾಸಲು :- ಐದು ಅಪ್ರಕಟಿತ ಶಾಸನಗಳು, ಇ.ದ.ಸಂ.೧೩, ಪು.ಸಂ-೩೦.
[೧೩೬] ಎ.ಕ-೯, ಅನುಬಂಧ, ನೆ.ತಾ.೧೪೬, ಶಿವಗಂಗೆ.
[೧೩೭] ಎಂ. ಚಿದಾನಂದಮೂರ್ತಿ :- ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೧೮೧.

ದೇವದಾಸಿಯರರೆಲ್ಲರೂ ವೇಶ್ಯೆಯರೇ ಆಗಿದ್ದರೂ, ವೇಶ್ಯೆಯರೆಲ್ಲರೂ ದೇವದಾಸಿಯರಾಗಿರಲಿಲ್ಲ. ಇವರಿಗೆ ಸೂಳೆ ಎಂಬ ಪದವನ್ನು ಸಹ ಬಳಸುತ್ತಾರೆ.

ಶ್ರೀ ವಿಜಯನು ಕ್ರಿ.ಶ.೭೯೭ರಲ್ಲಿ ಮಣ್ಣೆಯಲ್ಲಿ ಕಟ್ಟಿಸಿದ ಜಿನ ಬಸದಿಯಲ್ಲಿ ದೇವದಾಸಿಯರಿಂದ ವಾರ ವಿಲಾಸಿನೀ ವಿರಚಿತ ನೃತ್ಯ ಗೀತವಾದ್ಯ ಬಲಿವಿಲೋಚನ ಮುಂತಾದ ಸೇವೆಗಳು ಕ್ರಿ.ಶ.೮೦೨ರಲ್ಲೂ ಮುಂದುವರೆದಿದ್ದು, ಈ ನರ್ತಕಿಯರಿಗೆ ಮತ್ತು ಹಾಡುಗಾರ್ತಿಯರಿಗೆ ಪೆರ್ವಡಿಯೂರು[೧೩೮] ಎಂಬ ಗ್ರಾಮವನ್ನು ದಾನ ನೀಡಿದ್ದಾರೆ. ಕ್ರಿ.ಶ.೧೧೮೬ ರ ಮತ್ತೊಂದು ಶಾಸನದಲ್ಲಿ ಹೊನ್ನನಾಯಕನ ಬಸುವಿ ಮತ್ತು ಪಾತುರೀಯ ರಂಗದಲ್ಲಿ ಎಂಬ ಪದಗಳ ಉಲ್ಲೇಖವಿದ್ದು[೧೩೯] ಮಣ್ಣೆಯ ಜಿನಾಲಯದಲ್ಲಿ ಬಸದಿಯೂ ಪಾತರಗಿತ್ತಿಯಾಗಿ ಸೇವೆ ಸಲ್ಲಿಸುತ್ತಿದ್ದಳು. ಇದೇ ಜಿನಾಲಯವನ್ನು ಈಗ ಸೂಳೆಯರ ಬಸದಿ ಅಥವಾ ಗುಡಿ ಎಂದು ಕರೆಯುವುದನ್ನು ಗಮನಿಸಿದರೆ ನಿಜ ಇರಬಹುದು ಎಂದೆನಿಸುತ್ತದೆ. ನವರಂಗದಲ್ಲಿ ೨೪ ಚದುರದಡಿ ಮಧ್ಯೆ ಇರುವ ರಂಗ ಪೀಠವನ್ನ ನೃತ್ಯಕ್ಕಾಗಿ ಬಳಸುತ್ತಿರ ಬೇಕು ಹಾಗೂ ಜಾಲಾಂಧ್ರದಲ್ಲಿರುವ ಮಿಥುನ ಶಿಲ್ಪಗಳು ಮತ್ತು ಜಿನಾಲಯದಲ್ಲಿ ಮತ್ತು ಸೂರ್ಯ ದೇವಾಲಯದಲ್ಲಿ ಜಾರಿಯಲ್ಲಿದ್ದ ಬಸವಿ (ರಂಗಭೋಗ) ಸೇವೆಯು ಕಪಿಲೇಶ್ವರ ದೇಗುಲದಲ್ಲಿಯೂ ನಡೆಯುತ್ತಿದ್ದಿರಬೇಕು.

ಕ್ರಿ.ಶ.೧೫೩೩ ರಲ್ಲಿ ಅಚ್ಯುತರಾಯನ ಅಪ್ಪಣೆಯ ಮೇರೆಗೆ ಹೆಸರುಘಟ್ಟದ ಚಂದ್ರಮೌಳೇಶ್ವರ ದೇವಾಲಯದ ದೇವದಾಸಿಗೆ ದೇವರಗುಡಿಯನ್ನು[೧೪೦], ಕ್ರಿ.ಶ.೧೬೯೭ ರಲ್ಲಿ ದೇವನಹಳ್ಳಿಯ ಶ್ರೀ ಮದನ ಗೋಪಾಲ ಸ್ವಾಮಿ ದೇವಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಛತ್ರ ಪಾಲಕಿಯರು ಮತ್ತು ಮೇಳ ನಟುವರುಯರಿಗೆ[೧೪೧] ಕೊಡುಗೆಯಾಗಿ ಕೊಟ್ಟರು. ಅಂದಿನ ಸಮಾಜದಲ್ಲಿ ಸೂಳೆಯರು ಅನೇಕ ಸಾಮಾಜಿಕ ಕಾರ್ಯಗಳನ್ನು ಮಾಡಿರುತ್ತಾರೆ. ಸೂಳೆಯಬ್ಬೆಯ ವರಗಳ್ಳೆವಬ್ಬೆಯೂ ಬೇವೂರು ಕೆರೆಯ ತೂಬನ್ನು[೧೪೨] ನಿರ್ಮಿಸಿದರು. ಸೂಳೆಯರು ವಾಸಿಸುತ್ತಿದ್ದ ಪ್ರದೇಶಗಳನ್ನು ಸೂಳೆಗೇರಿಗಳೆಂದು[೧೪೩] ಕರೆಯುತ್ತಾರೆ.

## ಮಠಗಳು

ಪ್ರಾಚೀನ ಕಾಲದಲ್ಲಿ ದೇವಾಲಯಗಳು ಹಾಗೂ ಮಠಗಳ ನಡುವೆ ಉತ್ತಮ ಅನುಬಂಧವಿರುತ್ತಿತ್ತು. ದೇವಾಲಯಗಳಿಗೆ ಹೊಂದಿಕೊಂಡತೆ ಅವುಗಳ ಅಂಗಗಳಾಗಿ ಮಠಗಳಿರುತ್ತಿತ್ತು.

---

[೧೩೮] ಎ.ಕ-೯, ನೆ.ತಾ.೬೧, ಕ್ರಿ.ಶ.೮೦೨, ಮಣ್ಣೆ.
[೧೩೯] ಎಂ.ಜಿ. ನಾಗರಾಜು & ಪಿ.ವಿ.ಕೃಷ್ಣಮೂರ್ತಿ :- ಮಣ್ಣೆ, ಇ.ದ.ಸಂ.೧೮, ಪು.ಸಂ-೬೭, ೬೮.
[೧೪೦] ಎ.ಕ-೯, ನೆ.ತಾ.೩೧, ಕ್ರಿ.ಶ.೧೫೩೩, ಹೆಸರುಘಟ್ಟ.
[೧೪೧] ಎ.ಕ-೯, ದೇ.ತಾ.೧೫, ೧೬೯೭, ದೇವನಹಳ್ಳಿ.
[೧೪೨] ಎ.ಕ-೯, ಚ.ತಾ.೨೧೨, ಬೇವೂರು.
[೧೪೩] ಎ.ಕ-೯, ಚ.ತಾ.೧೦೦, ಚಿಕ್ಕಮಳೂರು.

ಮಠಗಳಲ್ಲಿ ಮುನಿಗಳು / ಸನ್ಯಾಸಿಗಳು ವಾಸಿಸುವ ಗೃಹಗಳು ಅವರು ಕೈಗೊಂಡ ವಿದ್ಯಾ ಪ್ರಸಾದ, ಉಪದೇಶ ಮುಂತಾದ ಚಟುವಟಿಗೆಗಳಿಂದಾಗಿ ಜನ ಜೀವನದ ಕೇಂದ್ರ ಬಿಂದುಗಳಾಗಿದ್ದವು. ಮಠಗಳು ದೇವಾಲಯಗಳ ಒಂದು ಭಾಗವಾಗಿದ್ದು ಶೈವ ಯತಿಗಳು ದೇವಸ್ಥಾನಗಳಲ್ಲಿ ಮಾಹೇಶ್ವರರಾಗಿ, ಮಠಗಳಲ್ಲಿ ಆಸ್ಥಾನ ಪತಿಗಳಾಗಿ ವಿದ್ಯಾದಾನ ಮಾಡುತ್ತಿದ್ದರು.

ಶಿವಗಂಗೆಯಲ್ಲಿ ಶ್ರೀ ರಂಭಾಪುರಿ ಸಂಪ್ರದಾಯದ ಮೇಲಣ ಗವಿ ಸಿಂಹಾಸನ ಮಠ, ಶ್ರೀ ಶೃಂಗೇರಿ ಪೀಠದ ದಕ್ಷಿಣ ಶಾಖೆಯಾಗಿ ಶಿವಗಂಗೆ ಮಠ (ಶೃಂಗೇರಿ, ಬಾಳೆಹೊನ್ನೂರಿನ ರಂಭಾಪುರಿ ಪೀಠಗಳ ಶಾಖೆಗಳು) ಉಜ್ಜಯಿನಿ ಪೀಠದ ಶಾಖೆಯಾದ ಹೊನ್ನಮ್ಮದೇವಿ ಮಠ, ಶ್ರೀ ಶೈಲ ಪಂಡಿತಾರಾಧ್ಯ ಪೀಠದ ಶಾಖೆಯಾಗಿ ಬಯಲುಮಠ, ರಾಚೋಟಿ ವೀರಭದ್ರನ ದೇಗುಲದ ಹಿಂಬದಿಗೆ ಸುಂದರ ಶಿಲ್ಪಗಳನ್ನು ಹೊಂದಿರುವ ರಾಚೋಟಿ ಮಠವು ಶಿಥಿಲಗೊಂಡಿದೆ. ಕಂಬಾಳುಮಠ, ಮುತ್ತಿನಕಂಥೆಮಠ, ಭೃಂಗಿಮಠ, ಬೆಂಡೆಕೆರೆಮಠ, ಚೆಲುವಮಠ, ತಮ್ಮಡಿಹಳ್ಳಿಮಠ, ಕರಿಆನೆಮಠ, ಚಿನ್ನಕಾಂತಿಮಠ, ದೇಶಮಠ, ಕಾಚಗಲ್ ಮಠ, ಫಲಹಾರಮಠ, ಸಿದ್ದರಮಠ, ಸಂಗಪ್ಪನಮಠ, ಬಿಟ್ಟ ಜಡೆಯರಮಠ, ಖಾನಿಮಠ, ಬೋಳಬಸವನಮಠ, ಶಾರದ ಮಠ (ಕ್ರಿ.ಶ.೧೬೧೫ರ ವೇಳೆಗೆ ಶಿವಗಂಗೆಯಲ್ಲಿ ಶಾರದಮಠ ಸ್ಥಾಪನೆಯಾಗಿದೆ.) ಇತ್ಯಾದಿಯಾದ ಮುಂತಾದ ೬೪ ಮಠಗಳಲ್ಲಿ ವೀರಭದ್ರನ ದೇಗುಲದ ಹಿಂಬದಿಗೆ ಸುಂದರ ಶಿಲ್ಪಗಳನ್ನು ಹೊಂದಿದ ರಾಚೋಡ ಮಠವು ಶಿಥಿಲಗೊಂಡಿದೆ. ಕ್ರಿ.ಶ.೧೫೪೪ ರಲ್ಲಿ ಸದಾಶಿವರಾಯನು ಹೊನ್ನಮ್ಮ ಗವಿಮಠ, ಮಹತ್ತಿಗೆ ಮಠ, ಚಿನ್ನದಕಥೆಯ ಮಠ ಮುಂತಾದವುಗಳಿಗೆ ಶಿವರಾತ್ರಿ ಪುಣ್ಯಕಾಲದಲ್ಲಿ ಅನೇಕ ಕೊಡಗೆಗಳನ್ನು[೧೪೪], ಮೇಲಣ ಗವಿಮಠಕ್ಕೆ[೧೪೫], ಕ್ರಿ.ಶ.೧೫೬೨ರಲ್ಲಿ ಗಂಡರಗೊಳ್ಳಿ ದಳವಾಯಿ ಭೈರಪ್ಪ ನಾಯಕರು ಮೇಲಣ ಗವಿಯ ಸಿಂಹಾಸನದ ಮಲೆಯ ಕಾಂತದೇವರಿಗೆ ಶಿಷ್ಯ ಪಾರಂಪರಿಕವಾಗಿ ಶಾಶ್ವತವಾಗಿ ಶಿವಪೂಜೆ ಮಾಡಿಕೊಂಡಿರಲು ಗಂಡರಗೊಳ್ಳಿಪುರವನ್ನು[೧೪೬] ನೀಡಿದರು. ೧೨ ಸಾವಿರ ಗಣಂಗಳಿಗೆ ದಾಸೋಹ ನಡೆಯುತಿತ್ತು ಎಂದರೆ ಈ ಎಲ್ಲಾ ಮಠಗಳಲ್ಲಿ ಏಕಕಾಲಕ್ಕೆ ನಡೆಯುತ್ತಿದ್ದ ದಾಸೋಹ ಅಡಗಿರಬೇಕು[೧೪೭]. ಕಂಬಾಳು ಮಠ, ಮುಂತಾದ ಮಠಗಳಲ್ಲಿ ಅನ್ನ ಸಂತರ್ಪಣೆ ಈಗಲೂ ನಡೆಯುತ್ತಿದೆ. ಬಳ್ಳಗಾವಿಯ ಕೋಡಿಮಠ ಕರ್ನಾಟಕದ ಪುರಾತನವಾದ ಪ್ರಸಿದ್ಧ ಮಠವು ಎಲ್ಲಾ ಮತಧರ್ಮದವರಿಗೂ ಅನ್ನದಾನ, ವಿದ್ಯಾದಾನ ಮಾಡುತಿದ್ದು, ಈ ಮಠದ ಶಾಖೆಯೊಂದು ಮಾಗಡಿ ಸಮೀಪದ ಭಾರ್ಗವತಿ ಕೆರೆಯ

[೧೪೪] ಎ.ಕ-೯, ನೆ.ತಾ.೮೧, ಕ್ರಿ.ಶ.೧೫೪೫, ಶಿವಗಂಗೆ.
[೧೪೫] ಎ.ಕ-೯, ಅನುಬಂಧ, ನೆ.ತಾ.೧೪೦, ಶಿವಗಂಗೆ.
[೧೪೬] ಎ.ಕ-೯, ದೊ.ತಾ.೪೧, ಕ್ರಿ.ಶ.೧೫೬೯, ಗಂಡರಗೊಳ್ಳಿಪುರ.
[೧೪೭] ಡಾ.ಹೆಚ್.ಎಸ್.ಗೋಪಾಲ್ ರಾವ್ :- ನೆಲದಸಿರಿ, ಪು.ಸಂ-೬೧.

ಪಕ್ಕದಲ್ಲಿದೆ[೧೪೮]. ಮಾಗಡಿ ಸೀಮೆಯಲ್ಲಿ ೫೦೦ ಮಠಗಳು ವಿದ್ಯೆ ಅಥವಾ ದಾಸೋಹಕ್ಕೆ ಇದ್ದವು[೧೪೯]. ಮಠಗಳು ಅನ್ನದಾನ ಕಾರ್ಯ ನಿರ್ವಹಿಸುತ್ತಿರುವುದಕ್ಕಾಗಿ ಹಲವಾರು ದಾನಗಳನ್ನು ನೀಡುತ್ತಿದ್ದರು. ಮಠಗಳ ನಿರ್ವಹಣೆಗಾಗಿ ಮಂಜೂರು ಮಾಡುತ್ತಿದ್ದ ಭೂಮಿಯನ್ನು ತಮಿಳು ಶಾಸನಗಳು ಮಂಡಪುರಂ[೧೫೦] ಎಂದು ಕರೆಯಲಾಗುತ್ತದೆ. ಹೊಸಕೋಟೆಯಲ್ಲಿ ಮಹಂತೇಶ್ವರ, ಶ್ರೀ ಶ್ರೀ ಶ್ರೀ ರಾಮಾವಧೂತ ಎಂಬ ಮಠಗಳಿವೆ.

## ವಿದ್ಯಾಭ್ಯಾಸ

ಪ್ರಾಚೀನ ಕಾಲದ ವಿದ್ಯಾಭ್ಯಾಸವು ಬಹುಮಟ್ಟಿಗೆ ಧಾರ್ಮಿಕವಾದುದಾಗಿತ್ತು. ವಿದ್ಯೆಯನ್ನು ಮೋಕ್ಷ ಸಾಧನವೆಂದೂ, ಆತ್ಮಜ್ಞಾನ ಪಡೆಯುವ ಒಂದು ಮಾರ್ಗವೆಂದೂ, ವಿದ್ಯಾಹೀನನಾದವನು ಪಶುವಿಗೆ ಸಮಾನವೆಂದು ಪ್ರಾಚೀನರು ಭಾವಿಸಿದ್ದರು. ವೈದಿಕ ಕಾಲದಲ್ಲಿ ಗುರುಕುಲಗಳೇ ಪಾಠಶಾಲೆಗಳಾಗಿದ್ದವು. ವಿದ್ಯಾರ್ಥಿಯು ಗುರುವಿನ ಮನೆಯಲ್ಲಿ ಗುರುಸೇವೆ ಮಾಡುತ್ತಾ ಗುರುವಿನಿಂದ ವಿದ್ಯೆಯನ್ನು ಕಲಿಯುವ ಗುರುಕುಲ ಪದ್ಧತಿಯು ಜಾರಿಯಲ್ಲಿತ್ತು. ಈಗಲೂ ಸಹ ಗುರುಕುಲ ಶಾಲೆಗಳು ಅಲ್ಲಲ್ಲಿ ಕಾಣ ಸಿಗುತ್ತದೆ. ತಾವರೆಕೆರೆ ಸಮೀಪ ಚನ್ನೇನಹಳ್ಳಿಯಲ್ಲಿ ಗಿಡದಪಾಳ್ಯ ರಸ್ತೆಯಲ್ಲಿ ಗುರುಕುಲ ಶಾಲೆಯಿದೆ. ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಗುರುಕುಲದಿಂದ ಹಿಂತಿರುಗಿದ ಬ್ರಾಹ್ಮಣರಿಗೆ ಗೃಹಸ್ಥರಾಗಿ ನೆಲೆಗೊಳ್ಳಲು ಸಹಾಯಕವಾಗಿ ಅಗ್ರಹಾರಗಳನ್ನು ದಾನವಾಗಿ ಕೊಡುತ್ತಿದ್ದರೆಂದು ಡಾ.ಡಿ.ಸಿ. ಸರ್ಕಾರ್ ರವರು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.

ವೈದಿಕ ಯುಗದ ನಂತರ ಬೌದ್ಧ ವಿಹಾರಗಳು ವಿದ್ಯಾಭ್ಯಾಸ ಕೇಂದ್ರಗಳಾಗಿ ಪರಿಣಮಿಸಿದವು. ವಿದ್ಯಾರ್ಥಿಗಳ ಊಟ ಬಟ್ಟೆಗಳಿಗೆ ಸಾರ್ವಜನಿಕರು ಮಠಗಳಿಗೆ ಮತ್ತು ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡುತ್ತಿದ್ದ ಅಂಶ ಕಂಡು ಬರುತ್ತದೆ. ವಿದ್ಯಾದಾನವು ಅಗ್ರಹಾರಗಳು, ಮಠಗಳ, ದೇಗುಲಗಳು, ಬ್ರಹ್ಮಪುರಿಗಳಲ್ಲಿ, ಪಟಿಕಾ ಸ್ಥಾನಗಳಲ್ಲಿ ನಡೆಯುತಿತ್ತು. ರಾಜರು, ಊರಗಾಂವುಡರು, ವರ್ತಕರು, ನರ್ತಕಿಯರು ಮತ್ತು ಅರಮನೆಯ ಉಳಿಗದವರು ದೇವಾಲಯಗಳಿಗೆ, ಅಗ್ರಹಾರ ಬ್ರಹ್ಮಪುರಿಗಳಿಗೆ ಮತ್ತು ವಿದ್ಯಾ ಶಾಲೆಗಳಿಗೆ ದತ್ತಿ ಬಿಡುತ್ತಾರೆ.

ಅಗ್ರಹಾರಗಳನ್ನು ದತ್ತಿಯಾಗಿ ಪಡೆದ ಬ್ರಾಹ್ಮಣರನ್ನು ಮಹಾಜನರೆಂದು ಕರೆಯುತ್ತಿದ್ದರು. ತಮಿಳು ದಾನ ಶಾಸನಗಳಲ್ಲಿ ಮಹಾಜನರ ಉಲ್ಲೇಖ ಸಾಮಾನ್ಯವಾಗಿ ಇದ್ದೆ ಇರುತ್ತದೆ. ಕನ್ನಡ ಶಾಸನದಲ್ಲಿ

[೧೪೮] ಮುನಿರಾಜಪ್ಪ :- ಮಾಗಡಿ ಸೀಮೆ ಇತಿಹಾಸ ಸಂಸ್ಕೃತಿ, ಪು.ಸಂ-೧೭೯.
[೧೪೯] ಎಂ.ಎ.ಆರ್, ೧೯೧೫, ಪು.ಸಂ-೩.
[೧೫೦] ಎ.ಕ-೯, ದೇ.ತಾ.೭೮, ಕ್ರಿ.ಶ.೧೫೦೦, ಗಂಗವಾರ.

ವಿದ್ವನ್ನ-ಮಹಾಜನಗಳೆಂಬುದಾಗಿ[೧೫೧] ಮಹಾಜನರು ಸಕಲ ವಿದ್ಯಾಪಾರಂಗತರಾಗಿ, ವಿದ್ವಾಂಸರಾಗಿ, ಅಗ್ರಹಾರಗಳಲ್ಲಿ ವಿದ್ಯೆಯ ಪ್ರಸಾರ ಮಾಡುತ್ತಿದ್ದರು.

## ಸಂತೆಗಳು

ನಾಡಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಔದ್ಯೋಗಿಕ ಪ್ರಗತಿ ಸಾಧಿಸುವಲ್ಲಿ ಜನರ ಆರ್ಥಿಕ ಮಟ್ಟವನ್ನು ಸುಧಾರಿಸುವಲ್ಲಿ, ವಿಸ್ತಾರಿಸುವಲ್ಲಿ ಸಂತೆಗಳು ಅತ್ಯಂತ ಮಹತ್ವದಾಗಿದೆ. ನಾಡಪ್ರಭು, ಅಧಿಕಾರಿಗಳು, ವರ್ತಕ ಮುಂತಾದವರು ಕೂಡಿಕೊಂಡು ಆಯಾ ಪ್ರದೇಶ, ಗ್ರಾಮ, ಪಟ್ಟಣಗಳಲ್ಲಿ ವಾರಕ್ಕೊಮ್ಮೆ ಒಂದು ಗೊತ್ತಾದ ಸ್ಥಳ, ದಿನದಂದು ಹತ್ತಾರು ಗ್ರಾಮಗಳ ಮಧ್ಯೆ ಸಂತೆಗಳು ನಡೆಸುತ್ತಿದ್ದರು. ಈ ಸಂತೆಯಲ್ಲಿ ಕಟ್ಟಡ ಅಂಗಡಿಗಳು, ಸಂತೆ ನಡೆಯುವ ಸ್ಥಳದ ಸುತ್ತಲೂ ಗೋಡೆಯಿದ್ದು, ಒಂದು ಕಡೆ ಮಾತ್ರ ಹೆಬ್ಬಾಗಿಲಿರುತ್ತಿತ್ತು. ಈ ಸಂತೆಯು ಪಟ್ಟಣದ ಹೊರವಲಯದಲ್ಲಿ ನೆರೆಯುತ್ತಿತ್ತು. ಸಂತೆ ಕೂಡುವ ಸ್ಥಳದ ಒಳಾಂಗಣದಲ್ಲಿ ದೇವಾಲಯಗಳು ಇರುತ್ತಿದ್ದವು. ವ್ಯವಹಾರದಲ್ಲಿ ಅಚಾತುರ್ಯ ಅನ್ಯಾಯಗಳು ಸಂಭವಿಸದಂತೆ ನೋಡಿಕೊಳ್ಳಲು ಈ ದೇವಾಲಯಗಳ ಮುಂದೆ ನನ್ನ ಕಂಬವನ್ನು ಸತ್ಯ, ಪ್ರಮಾಣಿಕತೆಗಳ ಸಂಕೇತವಾಗಿ ನಿಲ್ಲಿಸುತ್ತಿದ್ದರು. ಹೊಸದಾಗಿ ಆರಂಭಿಸಿದ ಸಂತೆಗೆ ವರ್ತಕರನ್ನು ಆಕರ್ಷಿಸಲು ಸರಕುಗಳಿಗೆ ತೆರಿಗೆ ರಿಯಾಯಿತಿಯನ್ನು ಸಹ ನೀಡುತ್ತಿದ್ದರು.

ಸಂತೆಯ ಕಟ್ಟಡಗಳು ಬಲವಾಗದೆ ಬಿದ್ದು ಹೊದರೆ ಅಂಥವುಗಳನ್ನು ಜೀರ್ಣೋದ್ದಾರ ಮಾಡಲಾಗುತ್ತಿತ್ತು. ಕ್ರಿ.ಶ.೧೨೬೭ ರಲ್ಲಿ ರಾಜಘಟ್ಟದಲ್ಲಿ ವಿವಿಧ ರೀತಿಯ ವರ್ತಕ ಶ್ರೇಣಿಗಳಿದ್ದು, ಬಹುದೊಡ್ಡ ಪ್ರಮಾಣದಲ್ಲಿ ಸಂತೆಯು ಜರುಗುತಿದ್ದು. ಸಂತೆಗಳನ್ನು ಸ್ಥಳೀಯ ವರ್ತಕರು ರಾಜ್ಯಾಢಳಿತದ ಅನುಮತಿ ಪಡೆದು ವ್ಯವಸ್ಥೆ ಮಾಡಲಾಗುತ್ತಿತ್ತು. ಕ್ರಿ.ಶ.೧೩೮೩ ರಲ್ಲಿ ಬಿಟ್ಟಿಯ ನಾಯಕ ಮತ್ತಿತರರು ಸೇರಿ ನೀಡುಮದದಲ್ಲಿ ಮೂರು ವರ್ಷಗಳ ಕಾಲ ಸತತವಾಗಿ ಸಂತೆಯನ್ನು ಏರ್ಪಡಿಸಿದ್ದರು[೧೫೨]. ಸಂತೆಗೆ ಹೋಗಿ ಬರುತ್ತಿದ್ದ ಸಂದರ್ಭದಲ್ಲಿ ಕಳ್ಳರಿಂದ ಆಕ್ರಮಣಗಳು ನಡೆಯುತಿದ್ದುದನ್ನು ಸಹ ಶಾಸನದಲ್ಲಿ ಕಾಣಬಹುದು[೧೫೩]. ಹೀಗೆ ಸಂತೆಗಳು ರಾಜ್ಯದ ಹಲವಾರು ಆರ್ಥಿಕ ಸಂಪನ್ಮೂಲಗಳಲ್ಲಿ ಅತ್ಯಂತ ಪ್ರಮುಖವಾಗಿ ಪರಿಣಮಿಸಿತ್ತು.

[೧೫೧] ಎ.ಕ-೯, ನೆ.ತಾ.೩೧, ಕ್ರಿ.ಶ.೧೫೩೩, ಹೆಸರುಘಟ್ಟ.
[೧೫೨] ಎ.ಕ-೯, ನೆ.ತಾ.೧೬೬, ಕ್ರಿ.ಶ.೧೩೮೩, ನಿಡಮೆದ.
[೧೫೩] ಎ.ಕ-೯, ಕ.ತಾ.೬೪, ಕ್ರಿ.ಶ.೧೨೯೧, ಕಬ್ಬಾಳ.

## ತೆರಿಗೆಗಳು

ಪ್ರಾಚೀನ ಕಾಲದಲ್ಲಿ ಒಂದು ದೇಶದ ಪ್ರಗತಿಯು ಆ ದೇಶದ ಸಂಪತ್ತನ್ನು ಅವಲಂಭಿಸಿರುತ್ತದೆ. ಆರ್ಥಿಕವಾಗಿ ಸುಭದ್ರತೆ ಇಲ್ಲದೇ ಪ್ರಗತಿ ಹೊಂದಲು ಸಾಧ್ಯವಿಲ್ಲ. ರಾಜ್ಯದ ಆಡಳಿತದಲ್ಲಿ ಹಣಕಾಸು ವಿಭಾಗ ಪ್ರಮುಖವಾದದ್ದು. ಆದಾಯದ ಭಾಗವಾಗಿ ತೆರಿಗೆ ಸಂಪನ್ಮೂಲಗಳ ಸಂಗ್ರಹವಾದ ಹಣವನ್ನು ರಾಜ್ಯದ ವಿವಿಧ ಅಭಿವೃದ್ಧಿ ಕಾರ್ಯಗಳಿಗೆ ಆಳರಸರು ಖರ್ಚು ಮಾಡುತ್ತಿದ್ದರು. ಕಂದಾಯ, ತೆರಿಗೆ, ಯುದ್ಧಗಳಲ್ಲಿ ದೊರೆಯುವ ಕಾಣಿಕೆ, ನೈಸರ್ಗಿಕ ಸಂಪತ್ತು ಪ್ರಮುಖ ಆರ್ಥಿಕ ವರಮಾನವಾಗಿದೆ.

ತೆರಿಗೆಗಳು ರಾಜ್ಯಾದಾಯವಾಗಿದ್ದು, ಆ ಆದಾಯದಲ್ಲಿ ಒಂದು ಪಾಲನ್ನು ತೆಗೆದು ಜನರಿಗೆ ಭಾರವಾಗದ ರೀತಿಯಲ್ಲಿ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಬರಗಾಲದ ಸಂದರ್ಭದಲ್ಲಿ ತೆರಿಗೆಗಳನ್ನು ಮನ್ನ ಮಾಡುತ್ತಿದ್ದರು. ಪ್ರಜೆಗಳ ಹಿತವನ್ನು ಕಾಪಾಡುವಲ್ಲಿ ರಾಜನ ಪ್ರಥಮ ಆದ್ಯತೆಯಾಗಿತ್ತು.

ಅನೇಕ ದಾನ ಶಾಸನಗಳಲ್ಲಿ ಹಲವಾರು ತೆರಿಗೆಗಳನ್ನು ಮಾನ್ಯ ಮಾಡಿದ ವಿವರಗಳನ್ನು ಕಾಣಬಹುದು. ದೇವಾಲಯಕ್ಕೆ ಅಥವಾ ವ್ಯಕ್ತಿಗಳಿಗೆ ಸರ್ವಮಾನ್ಯವಾಗಿ ನೀಡಿದ ದತ್ತಿಗಳು ಸಂಪೂರ್ಣವಾಗಿ ತೆರಿಗೆ ರಹಿತವಾಗಿದ್ದವು. ಸರ್ವಮಾನ್ಯದ ಉದ್ದೇಶವೇ ತೆರಿಗೆಯನ್ನು ಮನ್ನ ಮಾಡುವುದು. ಬ್ರಹ್ಮದೇಯ, ರಾಜಮಾನ್ಯ, ಕೆರೆ ಕೊಡುಗೆ, ನೆತ್ತರು ಕೊಡುಗೆ, ದತ್ತಿಗಳು ಇವುಗಳು ತೆರಿಗೆಯಿಂದ ವಿನಾಯಿತಿ ಪಡೆದಿದ್ದವು. ಕ್ರಿ.ಶ.೧೩೭೯ರಲ್ಲಿ ಪ್ರಧಾನರಾದ ನಾಗಣ್ಣ ಒಡೆಯರ್‌ನ ಅಪ್ಪಣೆಯಂತೆ ಪುಲಿಯೂರು ನಾಡಿನ ಮಹಾಪ್ರಭು ನಂಬಿ ಇರವಿ ಸೆಟ್ಟಿಯರು ಪುಲಿಯೂರುನಾಡಿನ ಪಸಿಗೈಪಲ್ಲಿಯಲ್ಲಿನ ಚಂದಾ ತೆರಿಗೆಯನ್ನು ಗೌರವವಾಗಿ ಕೊಟ್ಟರು.

ಭೂಮಿ, ಧಾನ್ಯ, ದ್ರವ್ಯ ಪದಾರ್ಥ ಮುಂತಾದವುಗಳನ್ನು ಅಳೆಯಲು ವಿವಿಧ ರೀತಿಯ ತೂಕ ಮತ್ತು ಅಳತೆಯ ಮಾಪಕಗಳಿದ್ದವು. ಹೊಲಗಳಲ್ಲಿ ಬಿತ್ತಬಹುದಾದ ಬೀಜಾವರಿಯ ಪ್ರಮಾಣ, ಅಳತೆ ಗೋಲುಗಳ ಸಹಾಯದಿಂದ ಭೂಮಿಯನ್ನು ಅಳತೆ ಮಾಡುತ್ತಿದ್ದರು. ಖಂಡುಗ, ಕೊಳಗಗಳನ್ನು ಅಳತೆಗೆ ಬಳಸಲಾಗುತ್ತಿತ್ತು.

ತೆರಿಗೆಗಳನ್ನು ಹಣದ ರೂಪದಲ್ಲಿ, ಧಾನ್ಯಗಳ ರೂಪದಲ್ಲಿ ಸಂಗ್ರಹವಾಗುತ್ತಿತ್ತು. ಯಾವ ರೀತಿಯ ತೆರಿಗೆಗಳು ದ್ವಾರಸಮುದ್ರದಲ್ಲಿ ಜಾರಿಯಲ್ಲಿದ್ದವು ಅನ್ನೋದ್ದನ್ನ ಕ್ರಿ.ಶ.೧೩೦೧ರ ನೆಲಮಂಗಲ ತಾಲ್ಲೂಕಿನ ಐವರು ಕಂಡಪುರದ ತಮಿಳು ಶಾಸನದಲ್ಲಿ[೧೫೪] ನಾಡುಗಳು ಮತ್ತು ನಾಡುಗಳಲ್ಲಿನ ತೆರಿಗೆಗಳ

[೧೫೪] ಎ.ಕ-೯, ನೆ.ತಾ.೩೮, ಕ್ರಿ.ಶ.೧೩೦೧, ತಮಿಳು, ಅಯಿಗಂಡಪುರ.

ಉಲ್ಲೇಖವನ್ನು ಕಾಣಬಹುದು. ಹಾಗೇಯೆ ಕ್ರಿ.ಶ.೧೩೦೬ರ ದೊಡ್ಡಬಳ್ಳಾಪುರದ ಇಸ್ತೂರು ಕನ್ನಡ ಶಾಸನದಲ್ಲಿ[೧೫೫] ೧೧ ಸಾಲುಗಳಲ್ಲಿ ತೆರಿಗೆಗಳ ಮಂಜೂರು ಬಗ್ಗೆಯೂ ಮಾಹಿತಿಯನ್ನು ನೋಡಬಹುದು.

ಸ್ಥಳೀಯ ಮುಖ್ಯಸ್ಥರೇ ತಮ್ಮ ಪಟ್ಟಣಗಳಿಗೆ ಅಥವಾ ನಗರಗಳಿಗೆ ಬರುತ್ತಿದ್ದ ವಸ್ತುಗಳ ಮೇಲೆ ಅವರೇ ತೆರಿಗೆ ವಿಧಿಸುತ್ತಿದ್ದರು. ಕ್ರಿ.ಶ.೧೨೬೭ ರಲ್ಲಿ ಸಗಟು ವ್ಯಾಪಾರದಾರರು ಕೊಡಬೇಕಾಗಿದ್ದ ಸುಂಕಗಳ ವಿವರಗಳೆಂದರೆ ಹತ್ತಿಯ ಹೇರು ೧೦ ಕ್ಕೆ ಪಣ ೧, ಬಳೆಯ ಮಳವೆ ೧೦ ಕ್ಕೆ ಪಣ ೧, ಅರಿಶಿಣದ ಹೇರು ೧೦ ಕ್ಕೆ ಪಣ ೧, ಬೆಲ್ಲದ ಹೇರು ೧೦ ಕ್ಕೆ ಪಣ ೧, ಓಲೆಯ ಹೇರು ೧೦ ಕ್ಕೆ ಪಣ ೧, ಉಪ್ಪಿನ ಹೇರು ೨೦ ಕ್ಕೆ ಪಣ ೧, ದವಸದ ಹೇರು ೨೦ ಕ್ಕೆ ಪಣ ೧ , ಅಡಕೆಯ ಹೇರು ೧೦ ಕ್ಕೆ ಪಣ ೧, ಮೆಣಸಿನ ಹೇರು ೨೦ ಕ್ಕೆ ಪಣ ೨, ಎಲಕ್ಕಿಯ ಹೇರು ೨೦ ಕ್ಕೆ ಪಣ ೨, ಕಂಬಳಿಯ ಮಳವೆ ೧೦ ಕ್ಕೆ  ಪಣ ೨, ನೂಲ ಮಳವೆ ೧೦ ಕ್ಕೆ  ಪಣ ೨, ಸಾಂಬಾರದ ಹೇರು ೧೦ ಕ್ಕೆ ಪಣ ೨, ಸಿರಿಯ ಮಳವೆ ೧೦ ಕ್ಕೆ ಪಣ ೨, ಸುಂಕಗಳನ್ನು ಹಾಗೆಯೇ ಚಿಲ್ಲರೆ ವ್ಯಾಪಾರಿಗಳು ಕೊಡಬೆಕಾದ ಸುಂಕಗಳ ವಿವರ ಅಡಿಕೆಯ ಹೇರಿಗೆ ೧೦ ಅಡಿಕೆ, ಎಲೆಯ ಹೇರಿಗೆ ೧ ಕವಳಿಗೆ, ಮೆಣಸಿನ ಹೆರಿಗೆ ಸೊ ೧, ಉಪ್ಪಿನ ಹೇರಿಗೆ ಮಾ.೧, ಹೆಡಗೆಯ ಹೆರಿಗೆ ಸೊ ೧, ದವಸದ ಹೇರಿಗೆ ಸೊ ೧, ದವಸದ ಹೆರಿಗೆ ಮಾ.೧, ವಿದಳದ ಹೇರಿಗೆ ಮಾ.೧, ಅರಿಶಿಣದ ಹೆರಿಗೆ ಮಾ.೧[೧೫೬] ಹೀಗೆ ಸಗಟು ಮತ್ತು ಚಿಲ್ಲರೆ ವ್ಯಾಪಾರಿಗಳ ಮೇಲೆ, ಭತ್ತ, ಎಳ್ಳು, ಜೋಳ ಮುಂತಾದ ಆಹಾರ[೧೫೭] ಬೆಳೆಗಳ ಮೇಲೆ ಸುಂಕವನ್ನು ವಿಧಿಸಿ ವಸೂಲಿ ಮಾಡಲಾಗುತ್ತಿತ್ತು. ಸಾಮಾನ್ಯವಾಗಿ ಸುಗ್ಗಿಯ ಕಾಲದಲ್ಲಿ ಬೆಳೆಗಳ ತೆರಿಗೆ ಸಂಗ್ರಹಿಸುತ್ತಿದ್ದರು. ಸುಗ್ಗಿಯು ಜನವರಿ, ಮಾರ್ಚ್ ತಿಂಗಳಲ್ಲಿ ಬರುತ್ತಿತ್ತು. ಈಗಲೂ ಸರ್ಕಾರಕ್ಕೆ ಆದಾಯವನ್ನು ಮಾರ್ಚ್ ಒಳಗೆ ಕಟ್ಟಬೇಕು ಅನ್ನೊ ಕಾನೂನು ಈಗಲೂ ಜಾರಿಯಲ್ಲಿದೆ.

ಮದುವೆ ಮತ್ತು ಜಾತಿಗಳಿಗೆ ಸಾಮಾಜಿಕ ತೆರಿಗೆಗಳು ಇದ್ದವು. ಒಂದು ಮದುವೆಗೆ ಎರಡು ಹಣ, ಮನೆ ಒಂದಕ್ಕೆ ಒಂದು ಹಣವನ್ನು ಜಾತಿ ತೆರಿಗೆಯಾಗಿ ನೀಡ ಬೇಕಾಗಿತ್ತು[೧೫೮]. ಈ ನಿಯಮ ಜಾರಿಯಲ್ಲಿದ್ದ ಸಂದರ್ಭದಲ್ಲಿ ಜನಾಭಿಪ್ರಾಯಕ್ಕೆ ಮಣಿದು ಶ್ರೀ ಕೃಷ್ಣ ದೇವರಾಯ ವಿವಾಹ ತೆರಿಗೆ ರದ್ದು

[೧೫೫] ಎ.ಕ-೯, ದೊ.ತಾ.೫೨, ಕ್ರ.ಶ.೧೩೦೬, ಕನ್ನಡ, ಇಸ್ತೂರು.
[೧೫೬] ಎ.ಕ-೯, ದೊ.ತಾ.೩೧, ಕ್ರಿ.ಶ.೧೨೬೭, ದೊಡ್ಡಬಳ್ಳಾಪುರ.
[೧೫೭] ಎ.ಕ-೯, ಬೆಂ.೬, ಕ್ರಿ.ಶ.೧೨೫೩, ಬೆಂಗಳೂರು ಮ್ಯೂಸಿಯಂ.
[೧೫೮] ಎ.ಕ-೯, ಬೆಂ.೯೬, ಕ್ರಿ.ಶ.೧೪೦೨, ಬೇಗೂರು.

ಪಡಿಸಿದ ನಂತರ ಅವರ ಅಧಿನದಲ್ಲಿರುವ ಪಾಳೇಯಗಾರರು ಸಹ ಪಾಲಿಸಿದ್ದರು ಎಂಬುದಕ್ಕೆ ಕ್ರಿ.ಶ.೧೫೩೭ ರಲ್ಲಿ ಸೋಲೂರ ಸೀಮೆಯಲ್ಲಿ[೧೫೯] ಮದುವೆ ಸುಂಕವನ್ನು ರದ್ದುಗೊಳಿಸಲಾಯಿತ್ತು.

ಸಾಮಾನ್ಯವಾಗಿ ತೆರಿಗೆಗಳನ್ನು ಅಥವಾ ಸುಂಕಗಳನ್ನು ಸಂಗ್ರಹಿಸಲು ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಸುಂಕದರ್ಗಡೆ, ಸುಂಕಾಧಿಕಾರಿ, ವಿಷಯಪತಿ, ಪಟ್ಟಣಸ್ವಾಮಿ, ಗಾವುಂಡ ಮಹಾಜನಗಳು, ಸೇನಭೋವ, ಕರಣಿಕ ಮುಂತಾದ ಅಧಿಕಾರಿಗಳಿದ್ದರು. ಕ್ರಿ.ಶ.೧೩೮೨ ರಲ್ಲಿ ದೇವರಸನು ಯಲಹಂಕನಾಡು[೧೬೦] ಮತ್ತು ಮೊರಸುನಾಡುಗಳೆರಡರ ಸುಂಕದ ಅಧಿಕಾರಿಯಾಗಿ[೧೬೧], ಕ್ರಿ.ಶ.೧೪೧೧ ರಲ್ಲಿ ಕರಿಕಾಳನ್ ಪುಳಿಯರ್ ಮತ್ತು ಆಳಗ್ಗೈಯ ವರದರ್‌ರವರು ಇರುಮರೈನಾಡಿನಲ್ಲಿ ತೆರಿಗೆ ವಸೂಲುದಾರನಾಗಿ[೧೬೨], ಗಂಗರಸಯ್ಯ[೧೬೩], ಕಡುಕಲ್ಲಿ ಪುಲ್ಲಮಂಗಳಂ[೧೬೪] ಅಧಿಕಾರಿಗಳಾಗಿದ್ದರು. ಕೆಲವು ಸಂದರ್ಭದಲ್ಲಿ ಶಾನುಭೋಗರು ಸಹ ಸುಂಕ ವಸೂಲು ಮಾಡುವ ಅಧಿಕಾರ ಹೊಂದಿದ್ದರು. ಇವರನ್ನು ಸುಂಕದ ಮಣಿಹ್ಯಗಾರ ಅಥವಾ ಸುಂಕದ ಸೇನಬೋವರೆಂದು ಕರೆಯುತ್ತಿದ್ದರು.

ಚೋಳರ ದೊರೆ ರಾಜಾಧಿರಾಜ ದೇವರ್‌ನ ಕ್ರಿ.ಶ.೧೦೫೦ರಲ್ಲಿ ವಿಕ್ರಮ ಚೋಳ ಮಂಡಲದ ಸಣ್ಣೈನಾಡಿನಲ್ಲಿ ಬೆಳೆಯುವ ಬೆಳೆಗಳ ತೆರಿಗೆಯಾದ[೧೬೫] ಬೆಳೆಗೆ ಭಾಗ ೧, ಒಣಭೂಮಿ ತೆರಿಗೆ ೧/೧೨ ಪಾಲು, ಕಾಡಿ ೧/೩ ಮತ್ತು ಕುಮಾರಿ ತೆರಿಗೆ ಈ ರೀತಿಯ ತೆರಿಗೆಗಳು ಜಾರಿಯಲ್ಲಿದ್ದವು.

ನಾಣ್ಯಗಳನ್ನು ಚಿನ್ನ, ಬೆಳ್ಳಿ, ತಾಮ್ರ ಮೊದಲಾದ ಲೋಹಗಳಿಂದ ತಯಾರಿಸುತ್ತಿದ್ದರು. ನಾಣ್ಯಗಳನ್ನು ಟಂಕುಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದು ಗದ್ಯಾಣ, ಕಳಂಚು, ವರಹ, ಪೋನ್, ಪಣ, ಹಾಗ, ಕಾಸು, ಭೈರವ ನಾಣ್ಯ, ಕಂಠರಾಯವರಹ ಚಾಲ್ತಿಯಲ್ಲಿತ್ತು. ಗದ್ಯಾಣ : ಅತ್ಯಂತ ಗರಿಷ್ಠ ಮೌಲ್ಯದ ಚಿನ್ನದ ನಾಣ್ಯಗಳನ್ನು ಸೂಚಿಸುವ ಗದ್ಯಾಣವು ೧೦ ಪಣಗಳಿಗೆ ಸಮವಾಗಿತ್ತು.

ವರಹ : ಗದ್ಯಾಣಕ್ಕೆ ಸಮಾನಾದ ಚಿನ್ನದ ನಾಣ್ಯವು ೧೦ ಪಣಗಳಿಗೆ ಸಮನಾದುದು.

ಪಣ : ಚಿನ್ನದ ನಾಣ್ಯವಾಗಿದ್ದು ಚೋಳರು, ಹೊಯ್ಸಳರು, ವಿಜಯನಗರ ಅರಸರ ಕಾಲದಲ್ಲಿ ಚಲಾವಣೆಯಾಗಿದ್ದು ೧ ಪಣವು ೪ ಹಾಗಗಳಿಗೆ ಸಮನಾಗಿದ್ದು.

---

[೧೫೯] ಎ.ಕ-೯, ಮಾ.ತಾ.೬೨, ಕ್ರಿ.ಶ.೧೫೩೭, ಸೋಲೂರು.
[೧೬೦] ಎ.ಕ-೯, ದೇ.ತಾ.೫೮, ಕ್ರಿ.ಶ.೧೩೮೨, ಚಿಕ್ಕಜಾಲ.
[೧೬೧] ಎ.ಕ-೯, ದೇ.ತಾ.೫೭, ಕ್ರಿ.ಶ.೧೩೮೨, ಚಿಕ್ಕಜಾಲ.
[೧೬೨] ಎ.ಕ-೯, ಹೊ.ತಾ.೧೪೯, ಕ್ರಿ.ಶ.೧೪೧೧, ಸಮೇತನಹಳ್ಳಿ.
[೧೬೩] ಎ.ಕ-೯, ದೇ.ತಾ.೯೧, ಕೊಯಿರ.
[೧೬೪] ಎ.ಕ-೯, ದೇ.ತಾ.೪೩, ಕ್ರಿ.ಶ.೯೦೦, ಅರದೇಶನಹಳ್ಳಿ.
[೧೬೫] ಎ.ಕ- ೯, ದೇ.ತಾ.೭೬, ಕ್ರಿ.ಶ.೧೦೫೦, ಗಂಗವಾರ.

ಹಾಗ : ಒಂದು ಹಾಗ ಎಂದರೆ ನಾಲ್ಕನೇ ಒಂದು ಭಾಗದ ಪಣ (ಹಣ) ೧೩೦೬ ಹೊಯ್ಸಳರ ಕಾಲದ ಶಾಸನದಲ್ಲಿ ಉಲ್ಲೇಖವಿದೆ.

ಕಾಸು : ವಿಜಯನಗರ ಕಾಲದ ತಾಮ್ರದ ನಾಣ್ಯ.

ಭೈರವ ನಾಣ್ಯ : ಮೊದಲನೇ ಕೆಂಪೇಗೌಡನು ಭೈರವ ನಾಣ್ಯಗಳನ್ನು ಪರಿಚಯಿಸಿದನು[೧೬೬].

ಶಾಸನಗಳ ಅಥವಾ ಸಾಮಾಜಿಕ ಸಾಂಸ್ಕೃತಿಕ ಅಧ್ಯಯನದ ಕ್ರಮಪದ್ಧತಿಯಲ್ಲಿ ಇಲ್ಲಿಯವರೆಗೂ ಬಹುಪಾಲು ಆಕರ ಸಾಮಗ್ರಿಯನ್ನು ವಿಶ್ಲೇಷಣಾತ್ಮಕವಾಗಿ ಅಭ್ಯಸಿಸಿ ಒಂದು ವಿಷಯದ ಅಥವಾ ಸಮಗ್ರ ಬದುಕಿನ ರೂಪನಿಷ್ಠ ಶೋಧವನ್ನು ಮಾತ್ರ ನಡೆಸಲಾಗಿದೆ. ಅವುಗಳನ್ನು ಇನ್ನೂ ವ್ಯಾಪಕವಾಗಿ ಅಂದರೆ ವ್ಯಾಖ್ಯಾನಾತ್ಮಕವಾಗಿ ಅಧ್ಯಯನ ಮಾಡಿ ಬದುಕಿನ ಗುಣನಿಷ್ಠ ಶೋಧವಾಗಿ ಮಾಡ ಬೇಕಾಗಿದೆ.

## ಅರವಟ್ಟಿಕೆಗಳು & ಛತ್ರಗಳು

ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸುವ ಪ್ರಯಾಣಿಕರಿಗೆ ಬಾಯಾರಿಕೆಯನ್ನು ಇಂಗಿಸಿಕೊಳ್ಳಲು ದಾರಿಯ ಪಕ್ಕದಲ್ಲಿ ಅರವಟ್ಟಿಕೆಗಳಿದ್ದವು. ಅರವಟ್ಟಿಕೆಗಳಲ್ಲಿ ಕುಡಿಯುವ ನೀರು ದೊರೆತರೆ, ಊರಿನ ಗಣ್ಯ ವ್ಯಕ್ತಿಗಳು ಅಥವಾ ದಾನಿಗಳು ಛತ್ರಗಳನ್ನು ನಿರ್ಮಿಸುತ್ತಿದ್ದರು. ದೇವಾಲಯ, ಮಠ, ಛತ್ರಗಳಲ್ಲಿ ಉಳಿದುಕೊಳ್ಳುವ ವ್ಯವಸ್ಥೆಯನ್ನು ಮಾಡಿರುತ್ತಿದ್ದರು. ಚನಪುರಾಯ ಅಯ್ಯನವರು ಆಶ್ರಯಕ್ಕಾಗಿ ಮಂಟಪವನ್ನು ಕಟ್ಟಿಸುತ್ತಾರೆ[೧೬೭]. ಸಾಮಾನ್ಯವಾಗಿ ದೇವಾಲಯ ಅಥವಾ ಮಠಗಳಿಗೆ ಹೊಂದಿ ಕೊಂಡಿರುವ ಛತ್ರಗಳಲ್ಲಿ ಪ್ರತಿನಿತ್ಯ ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಅನ್ನದಾನ ನಡೆಯುತ್ತಿತ್ತು. ಪ್ರಮುಖ ಧಾರ್ಮಿಕ ಕ್ಷೇತ್ರಗಳಲ್ಲಿ ಈಗಲೂ ಅನ್ನದಾನವು ನಡೆಯುತ್ತಿರುತ್ತದೆವೀ ರೀತಿಯಲ್ಲಿ ನಿತ್ಯ ದಾಸೋಹ / ನೈವೇದ್ಯಕ್ಕಾಗಿ ದಾನ ನೀಡಿರುವುದನ್ನ ಕಾಣಬಹುದು. ಕ್ರಿ.ಶ.೧೬೯೭ ರಲ್ಲಿ ಶ್ರೀ ಮದನಗೋಪಾಲ ಸ್ವಾಮಿಯ ನಿತ್ಯ ಮಹಾ ನೈವೇದ್ಯ ಕಾಲದಲ್ಲಿ ಬರುವಂತಹವರಿಗೆ ಅನ್ನದಾನವು ನೀಡ ಬೇಕೆಂದು[೧೬೮], ಛತ್ರದಲ್ಲಿ ಊಟ ಮಾಡುವ ಒಬ್ಬೊಬ್ಬ ಬ್ರಾಹ್ಮಣನಿಗೂ ಸಲ್ಲಬೇಕಾದ ವಸ್ತುಗಳ ವಿವರಗಳನ್ನು ಪಡಿ ಎನ್ನಲಾಗುತ್ತಿತ್ತು. ಕ್ರಿ.ಶ.೧೫೯೮ ರಲ್ಲಿ ಇಮ್ಮಡಿ ಹಾವಳಿ ಭೈರಪ್ಪ ಗೌಡರು ಚಾಮಗೊಂಡನಹಳ್ಳಿಯ ನಾಗರಭಟ್ಟ ಮತ್ತು ಇತರ ಬ್ರಾಹ್ಮಣರಿಗೆ ಪಡಿಯನ್ನು ನೀಡಿದನು[೧೬೯].

---

೧೬೬ ಎ.ವಿ. ನರಸಿಂಹಮೂರ್ತಿ :- ಕರ್ನಾಟಕ ನಾಣ್ಯ ಪರಂಪರೆ, ೭೩, ೯೦, ೯೪,೯೧.

೧೬೭ ಎ.ಕ-೯, ಹೊ.ತಾ.೩೦, ಹಳೇಊರು.

೧೬೮ ಎ.ಕ-೯, ದೇ.ತಾ.೩೭, ಕ್ರಿ.ಶ.೧೬೯೮, ಸೊಮನಹಳ್ಳಿ.

೧೬೯ ಎ.ಕ-೯, ನೆ.ತಾ.೧೪೯, ಶಿವಗಂಗೆ.

## ವೇಶ ಭೂಷಣಗಳು & ಆಭರಣಗಳು

ವೀರನ ವೇಷ ಭೂಷಣಗಳನ್ನು ಗಮನಿಸಿದರೆ ವೀರಗಲ್ಲುಗಳಲ್ಲಿ ವೀರನೇ ಕೇಂದ್ರ ಬಿಂದು, ವೀರನು ವೀರಗಚ್ಚೆ ಅಥವಾ ತುಂಡುದಟ್ಟಿ ಅಥವಾ ಮಲ್ಲಗಚ್ಚೆಯನ್ನು ಮಂಡಿಯ ಮೇಲ್ಭಾಗದವರೆಗೆ ಮಾತ್ರ ಧರಿಸಿರುವುದು, ಸೊಂಟಕ್ಕೆ ಅಲಂಕೃತ ಪಟ್ಟಿಯನ್ನು, ಬಲಭಾಗದಲ್ಲಿ ಕತ್ತಿಯನ್ನು ಸಿಕ್ಕಿಸಿ ಕೊಂಡಿರುತ್ತಾನೆ. ದೊಡ್ಡಹುಲ್ಲೂರು, ದೇವನಗುಂದಿ, ಕಾಮರಾಸನಹಳ್ಳಿಯ ವೀರಗಲ್ಲುಗಳಲ್ಲಿ ವೀರನು ಮಲ್ಲ ಗಚ್ಚೆಯನ್ನು ತಲೆ ಕೂದಲು ಗಂಡುಗೆ ಅಲಂಕಾರ ಬಟ್ಟೆಯನ್ನು, ಕೀವಿಯಲ್ಲಿ ಓಲೆಯನ್ನು, ಸೊಂಟದ ಪಟ್ಟಿಯನ್ನು ಬಿಗಿಯಾಗಿ ಮುಂಭಾಗದಲ್ಲಿ ಗಂಟು ಹಾಕಲಾಗಿದೆ.

ಸ್ತ್ರೀಯರ ಉಡುಪುಗಳು ಹೇಳುವುದಾದರೆ ವೀರಗಲ್ಲು, ಮಹಾಸತಿ ಕಲ್ಲುಗಳಲ್ಲಿ ಸೀರೆ ಪಾದದ ಬಳಿ ವಿಶಾಲವಾಗಿ ಹರಡಿಕೊಂಡು ಹೆಚ್ಚು ನೆರಿಗೆಗಳಿಂದ ಕೂಡಿರುತ್ತದೆ. ಸೊಂಟಕ್ಕೆ ಸುತ್ತಿರುವ ಬಟ್ಟೆಯು ಅನೇಕ ಮಡಿಕೆಗಳಿಂದ ಕೂಡಿರುತ್ತದೆ. ಸೀರೆಯ ಕುಚ್ಚು ಹೊಕ್ಕಳಿನಿಂದ ಕೆಳಕ್ಕೆ ಇಳ ಬಿಟ್ಟಿರುತ್ತಾರೆ. ಮಣಿಗಳಿಂದ ತೋಳುಗಳನ್ನು ಅಲಂಕರಿಸಿರುತ್ತಾರೆ. ಸೊಂಟಕ್ಕೆ ಅಲಂಕಾರ ಪಟ್ಟಿಯನ್ನು ಧರಿಸಿರುತ್ತಾರೆ. ಎರಡು ಸಾಲಿನ ಮಣಿಗಳ ಹಣೆ ಸರವನ್ನು, ಹೆಣ್ಣಿನ ಸೌಂದರ್ಯ ವಿಧ ವಿಧವಾದ ಕಿವಿಯೋಲೆಗಳಿಂದ ಎಂದು ಶಿಲ್ಪಿಗಳಿಗೂ ಗೊತ್ತಿದ್ದಿರಬೇಕು. ಸುಂದರವಾದ ಕಿವಿಯೋಲೆಗಳು, ಜುಮುಕಿ ಕಾಣಿಸುತ್ತದೆ. ಕೆಲವೊಂದು ಶಿಲ್ಪದಲ್ಲಿ ಸತಿಯರು ಧರಿಸಿರುವ ಓಲೆಯ ಭಾರಕ್ಕೆ ಕಿವಿಯು ಜಗ್ಗಿದಂತೆ ಕಾಣುತ್ತದೆ. ಮೈತುಂಬಾ ಆಭರಣ ಧರಿಸಿದಷ್ಟು ಅವರ ಸ್ಥಾನಮಾನ ಹೆಚ್ಚೆಂಬ ಭಾವನೆ ದಟ್ಟವಾಗಿ ಹಬ್ಬಿರಬೇಕು.

ಸ್ತ್ರೀಯರಲ್ಲದೆ ಪುರುಷನು ಸಹ ರಿಂಗುಗಳನ್ನು, ಕಂಠೀಹಾರಗಳನ್ನು ಧರಿಸುತಿದ್ದರು. ಕುತ್ತಿಗೆಯಿಂದ ಎದೆಯವರಗೂ ಎರಡು ಮೂರು ಹಂತಗಳಲ್ಲಿ ಕಂಠಿಹಾರವು ಹರಡಿರುತ್ತದೆ. ಈ ಕಂಠಿಹಾರದ ಜೊತೆಗೆ ಮುತ್ತುಗಳಿಂದ ಪೋಣಿಸಿದ ಮುತ್ತಿನಸರಗಳನ್ನು ಶಿಲ್ಪಗಳಲ್ಲಿ ಕಾಣಬಹುದು.

ಕಡಗವನ್ನು ಸ್ತ್ರೀಯರು ಪುರುಷರು ಇಬ್ಬರೂ ಧರಿಸುತ್ತಿದ್ದರು, ಎರಡು ಕೈಗಳಿಗೆ ಒಮ್ಮೊಮ್ಮೆ ಒಂದು ಕೈಗೆ ಮಾತ್ರ, ಬಹುತೇಕ ವೀರಗಲ್ಲುಗಳಲ್ಲಿ ವೀರರು ತಮ್ಮ ಎರಡೂ ಕಾಲುಗಳಲ್ಲಿ, ಕೆಲವು ಸಂದರ್ಭದಲ್ಲಿ ಕಾಲುಗಳಲ್ಲಿ ಕಡಗಗಳನ್ನು ಧರಿಸಿರುವುದನ್ನು, ಈಗಲೂ ಅನೇಕ ವೃದ್ಧ ಮಹಿಳೆಯರ ಕೈ, ಕಾಲುಗಳಲ್ಲಿ ಅಂತಹ ಕಡಗಗಳನ್ನು ಈಗಲೂ ಕಾಣಬಹುದಾಗಿದೆ.

ಬಳೆಗಳು:- ಬಳೆಗಳಂತೂ ಮುತ್ತೈದೆಯರ ಮಂಗಳಕರವಾದ ಲಕ್ಷಣವಾಗಿ ಸಾಮಾನ್ಯವಾಗಿ ಎಲ್ಲಾ ಮಹಾಸತಿ ಶಿಲ್ಪಗಳಲ್ಲಿ ಸತಿಯರು ವಿವಿಧ ರೀತಿಯ ಬಳೆಗಳನ್ನು ತೊಟ್ಟಿರುವುದನ್ನು ನೋಡಬಹುದು. ಬಳೆಗಳೇ ಇಲ್ಲದ ಸತಿ ಶಿಲ್ಪಗಳಲ್ಲ ಎಂದು ಹೇಳಬಹುದು.

ಕೇಶವಿನ್ಯಾಶ :– ಸ್ತ್ರೀಯರಲ್ಲದೆ ಪುರುಷನೂ ಸಹ ಉದ್ದವಾದ ಕೂದಲ್ಲನು ಬಿಟ್ಟು ಹಲವು ವಿಧಗಳಲ್ಲಿ ಸುಂದರವಾದ ಗಂಟು ಹಾಕಿಕೊಳ್ಳುತ್ತಿದ್ದರು. ಶಿಲ್ಪಗಳಲ್ಲಿ ಸ್ತ್ರೀಯರು ಸಾಮಾನ್ಯವಾಗಿ ಕೂದಲನ್ನು ಹಿಂದಕ್ಕೆ ಗಂಟು ಹಾಕಿಕೊಳ್ಳುತ್ತಿದ್ದರು. ತಲೆಯ ಎಡಭಾಗ, ಬಲಭಾಗದಲ್ಲಿ ಇರುವಂತೆ ಕೆತ್ತಲಾಗಿದೆ. ಸುಂದರವಾದ ವಿವಿಧ ರೀತಿಯ ಕೇಶವಿನ್ಯಾಸವನ್ನು ಕಾಣಬಹುದು. ಕೂದಲನ್ನು ಹಿಂದಕ್ಕೆ ಗಂಟುಹಾಕಿ ಆ ಗಂಟುಗಳಿಗೆ ಹಲವಾರು ರೀತಿಯ ಹೂವು, ಮಣಿಗಳ ಸಾಲಿನಿಂದ ಅಲಂಕರಿಸಲಾಗಿರುತ್ತದೆ. ಹಣೆಯ ಮೇಲೆ ತಲೆ ಮಣಿಯನ್ನು, ಪುರುಷರು ಸಹ ತಮ್ಮ ಕೇಶವಿನ್ಯಾಸಕ್ಕೆ ಹೆಚ್ಚಿನ ಮಹತ್ವದಂತೆ ಕೆಲವು ವೀರಗಲ್ಲುಗಳಲ್ಲಿ ಕೇಶವನ್ನು ತಲೆಯ ನೆತ್ತಿಯ ಮೇಲೆ ಕಿರೀಟದ ತರಹ ಕಟ್ಟಿಕೊಂಡಿರುತ್ತಾರೆ. ಗಂಟು ಬಿಚ್ಚಿ ಹೋಗದಂತೆ ರೇಷ್ಮೆ ಬಟ್ಟೆಯ ಪಟ್ಟಿಯನ್ನು ಕಟ್ಟಿಸಿ ಕೊಂಡಿರುವುದನ್ನು ದೇವನಗುಂದಿ, ಜೋಡಿದಳಸಿಗೆರೆ, ದೊಡ್ಡಹುಲ್ಲೂರು, ತರಬನಹಳ್ಳಿ ಇತ್ಯಾದಿ ಸ್ಥಳಗಳಲ್ಲಿನ ವೀರಗಲ್ಲುಗಳಲ್ಲಿ ಕಾಣಬಹುದು. ಕೆಲವು ವೀರಗಲ್ಲುಗಳಲ್ಲಿ ಕೂದಲನ್ನು ಗಂಟು ಹಾಕದೆ ಹಾಗೆಯೆ ಇಳೆ ಬಿಟ್ಟಿರುತ್ತಾರೆ. ಶತೃಗಳು ತಮ್ಮ ತಲೆಯ ಕೂದಲನ್ನು ಕೆದರಿಕೊಂಡು ಹುತ್ತದ ಮೇಲೆ ನಿಂತಿದ್ದರೆ ಅಥವಾ ಬಾಯಲ್ಲಿ ಹುಲ್ಲನ್ನು ಕಚ್ಚಿಕೊಂಡಿದ್ದರೆ, ಶಿವಲಿಂಗವನ್ನು ಅಪ್ಪಿ ಹಿಡಿದಿದ್ದರೆ, ಅದು ಅವರ ಎದುರಾಳಿಗಳಿಗೆ ಶರಣಾಗಿರುವ ಸಂಕೇತವಾಗಿರುತ್ತದೆ.

## ಶಾಸನೋಕ್ತ ಕೆರೆಗಳು

ಪ್ರಾಚೀನ ಕಾಲದಲ್ಲಿ ಕೆರೆಗಳು ನೀರಾವರಿಯ ಮೂಲಗಳಾಗಿದ್ದವು. ಮಾನವನು ಅಲೆಮಾರಿ ಜೀವನವನ್ನು ಬಿಟ್ಟು ಒಂದು ಕಡೆ ನೆಲೆ ನಿಂದು ಜೀವನ ಸಾಗಿಸಲು ಪ್ರಾರಂಭಿಸುವಾಗ ಬೇಟೆ, ಪಶುಪಾಲನಾ ನಂತರ ವ್ಯವಸಾಯದ ಮೇಲೆ ತುಂಬಾ ಅವಲಂಭಿತರಾಗಿ ಕೃಷಿಯನ್ನೇ ತನ್ನ ಜೀವಾಧಾರದ ಮುಖ್ಯ ಕಸುಬಾಗಿ ಆಯ್ದು ಕೊಂಡಾಗ ಮಳೆ ಅಥವಾ ಹೊಳೆ, ನದಿಯ ನೀರನ್ನು ಕೃಷಿ ಹಾಗೂ ತನ್ನ ದಿನ ನಿತ್ಯದ ಕೆಲಸಕ್ಕೆ ಉಪಯೋಗಿಸುತ್ತಿದ್ದು ನಂತರ ಹೊಳೆ ಮತ್ತು ನದಿಗಳು ತುಂಬಿ ಹರಿಯುತ್ತಿದ್ದು, ನೀರನ್ನು ಸಂಗ್ರಹಿಸಲು ಕೆರೆ, ಕಟ್ಟೆಗಳನ್ನು ನಿರ್ಮಿಸುತ್ತಿದ್ದನು.

ನಯಸೇನನ ಧರ್ಮಾಮೃತದಲ್ಲಿ "ಕೆರೆಯಂ ಕಂಡು ಕಳವೆಯಂ ಬಿತ್ತುವಂ" ಎಂಬುದಾಗಿ ಕೆರೆಯ ಮಹತ್ವವನ್ನು[೧೭೦], ಕೆರೆಯು ಕಟ್ಟಿಸು ಬಾವಿಯಂ ಸವಸು....... ಎಂದು ಲಕ್ಷ್ಮೀಧರಾನ ಕಿವಿಯಲ್ಲಿ ಅವರ ತಾಯಿ ಹೇಳುತ್ತಿದ್ದರಂತೆ[೧೭೧], ಹಾಗೇಯೇ ಪ್ರತಿಯೊಂದು ಜೀವಂಗಳಿಗೆಲ್ಲಾ ಉದಕವೇ ಪ್ರಾಣವಾಗಿದ್ದು, ಭೂಮಿಯ ಮೇಲಿನ ದೇವ, ನರ, ಮೃಗ, ಪಕ್ಷಿ ಮೊದಲಾದ ಯೋನಿ

---

[೧೭೦] ಡಾ. ಎಚ್. ಎಸ್. ಉಷಾರಾಣಿ:- ಹೊಯ್ಸಳರ ಕಾಲದ ಕೆರೆ ನೀರಾವರಿ-ಒಂದು ವಿಶ್ಲೇಷಣೆ, ಇ.ದ.ಸಂ.೭, ಪು.ಸಂ-೯೭.

[೧೭೧] ಎ.ಎಂ ಅಣ್ಣಿಗೇರಿ & ಡಾ.ಆರ್.ಶೇಷಶಾಸ್ತ್ರಿ :- ಶಾಸನ ಸಂಗ್ರಹ, ಶಾಸನ ಸಂಖ್ಯೆ.೩೧, ೪೪ನೇ ಸಾಲು, ಪು.ಸಂ-೧೧೯,

ಜೀವರಾಶಿಗಳೆಲ್ಲವನ್ನೂ ರಕ್ಷಿಸಲೇಂದೆ ಕೆರೆಗಳನ್ನು ಕಟ್ಟಿಸುತ್ತಿದ್ದರು[೧೭೨]. ಒಂದು ಕೆರೆಯನ್ನು ಕಟ್ಟಿ, ಅದರ ನೀರನ್ನು ಹಂಚುವ ರೀತಿ ಅದ್ಭುತವಾಗಿದೆ. ಕೆರೆಯಲ್ಲಿ ನೀರಿದ್ದರೆ ಹೇಗೆ ಹಂಚಿ ಕೊಳ್ಳಬೇಕು, ನೀರಿಲ್ಲದಿದ್ದಾಗ ಹೇಗೆ ಹಂಚಿಕೊಳ್ಳ ಬೇಕೆಂಬ ವೀವರವನ್ನ ವಿಸ್ತಾರವಾಗಿ ವಿವರಿಸಿರುವುದನ್ನ ರಾಜಗುಂಡ್ಲಹಳ್ಳಿಯ ಶಾಸನದಲ್ಲಿ ಕಾಣ ಬಹುದು[೧೭೩]. ಈ ಪದ್ಧತಿಯನ್ನ ನಮ್ಮ ಕೆ.ಆರ್.ಎಸ್. ಜಲಾಶಯದ ನೀರು ಹಂಚುವ ಕ್ರಮದಲ್ಲಿ ಅನುಸರಿಸಿದರೆ ದಶಮಾನಗಳ ಕಾಲದ ಕಾವೇರಿ ಜಗಳಕ್ಕೆ ಶಾಶ್ವತ ಪರಿಹಾರ ಸಿಕ್ಕಿದಂತಾಗುತ್ತದೆ. ಕ್ರಿ.ಶ.೧೪೯೬ರಲ್ಲೇ ನಮ್ಮ ವಿಜಯನಗರ ಅರಸರಿಗೆ ಹೋಳೆದ ಯೋಚನೆ ಯಾಕೆ ಕೆ. ಆರ್. ಎಸ್. ನಿರ್ಮಾಣದಲ್ಲಿ ಹೊಳೆಯಲಿಲ್ಲ ಎಂಬುದೇ ನನ್ನ ಅನುಮಾನ.

ಕಾಡನ್ನು ಕಡೆದು ಊರನ್ನು ಕಟ್ಟಿ, ಕೆರೆಯನ್ನು ನಿರ್ಮಿಸಿರುವುದನ್ನು ವೀರ ಬಲ್ಲಾಳ ದೇವನ ಕಾಲದ ಕ್ರಿ.ಶ.೧೩೦೭ ರಲ್ಲಿ ಮಾಸಂದಿನಾಡಿನ ಪಶ್ಚಿಮ ಭಾಗದ ಅಧಿಕಾರಿ ಸೆಂಬಿದೇವನ್, ನಾಡಗವಡ ವಿಲ್ಲಗವುಂಡನ್ ಮುಂತಾದವರು ಸೇರಿ ಕಾಡನ್ನು ಕಡಿದು, ಮರಗಳನ್ನು ತೆಗೆದು ಮಟ್ಟ ಮಾಡಿ, ಕೆರೆಯೊಂದನ್ನು ನಿರ್ಮಿಸಿ, ಊರೊಂದನ್ನು ಕಟ್ಟಿ ಆ ಊರಿಗೆ ವಾಚ್ಚಿದೇವಪುರವೆಂದು ನಾಮಕರಣ ಮಾಡಿ ವಾಚ್ಚಿದೇವ ಎಂಬುವ ಯತಿಗೆ ಮಡಪುರಂ ಅಂದರೆ ಪುರ ಧರ್ಮವಾಗಿ ದತ್ತಿ ಬಿಟ್ಟರು[೧೭೪].

ಕರ್ನಾಟಕದಲ್ಲಿ ಅತ್ಯಂತ ಪುರಾತನ ಕೆರೆವಾದ ಚಂದ್ರವಳ್ಳಿ ಕೆರೆಯ ದಂಡೆಯ ಮೇಲಿನ ಶಾಸನದಿಂದ ಕ್ರಿ.ಶ.೩೫೦ ರಲ್ಲಿ ಕದಂಬರ ಮಯೂರ ಶರ್ಮನು ಚಂದ್ರವಳ್ಳಿ ಕೆರೆಯನ್ನು ಕಟ್ಟಿಸಿದ ಹಾಗೂ ಹಾಳಾದ ಕೆರೆಯನ್ನು ಹೊಸ ತಂತ್ರಜ್ಞಾನದಿಂದ ಪುನರುತ್ಥಾನ ಮಾಡಿ, ಮತ್ತು ಗುಡ್ಡಗಳ ಮೇಲೆ ಬಿದ್ದಂತಹ ನೀರನ್ನು ಕೆರೆಗಳಲ್ಲಿ ಸಂಗ್ರಹಿಸಿ ಅದನ್ನು ಕೃಷಿಗೂ ಮತ್ತು ಕುಡಿಯುವುದಕ್ಕೂ ಉಪಯೋಗಿಸ ಬಹುದೆನ್ನುವುದನ್ನು ಸ್ವಲ್ಪಮಟ್ಟಿಗೆ ಚಿತ್ರದುರ್ಗದಲ್ಲಿ ನೋಡಬಹುದು. ಸಾಗುವಳಿ ಭೂಮಿಗೆ ನೀರನ್ನು ಒದಗಿಸಲು ನೀರಗಂಟಿ ಮತ್ತು ತೋಟಿಗಳನ್ನು ನೇಮಿಸುತ್ತಿದ್ದರು[೧೭೫].

ಆಳರಸರು, ಮಹಾಮಂಡಳೇಶ್ವರ, ಸಾಮಂತರು, ನಾಡಪ್ರಭುಗಳು, ಸ್ಥಳಿಯ ಅಧಿಕಾರಿಗಳು, ಜೊತೆಗೆ ಪ್ರಜೆಗಳು, ಸೆಟ್ಟಿ ವರ್ತಕರು, ಶ್ರೀಮಂತರು ತಮ್ಮ ಆಡಳಿತ ಪ್ರದೇಶ ವ್ಯಾಪ್ತಿಯಲ್ಲಿ ಜನರ ಹಾಗೂ ಊರಿನ ಅಭಿವೃದ್ಧಿಗಾಗಿ ನೀರಿನ ತಾಣಗಳಾದ ಕೆರೆ, ಬಾವಿ, ಕಟ್ಟೆ, ಕೊಳಗಳು, ಸಮುದ್ರ, ಸಾಗರ, ಆಣೆಕಟ್ಟು, ನಾಲೆಗಳು ಇತ್ಯಾದಿಗಳನ್ನು ನಿರ್ಮಿಸುತ್ತಿದ್ದರು. ನೀರಾವರಿ ಉದ್ದೇಶಕ್ಕಾಗಿ ಕೆರೆಗಳಿಗೆ ತೂಬು,

[೧೭೨] ಎ.ಕ-೯, ಬೆಂ.೧೧೧, ಕ್ರಿ.ಶ.೧೩೧೦, ರಾಮಸಮುದ್ರ.
[೧೭೩] ಎ.ಕ-೧೦, ಮು.ತಾ.೧೭೨, ಕ್ರಿ.ಶ.೧೪೯೬, ಗುಂಡ್ಲಹಳ್ಳಿ.
[೧೭೪] ಎ.ಕ-೯, ಬೆಂ.೧೩೩, ಕ್ರಿ.ಶ.೧೩೦೭, ವಿಭೂತಿಪುರ.
[೧೭೫] ಡಾ.ಜಿ.ಎಸ್.ದೀಕ್ಷಿತ್:- ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ. ಇ.ದ.ಸಂ.೭, ಪು.ಸಂ-೯೦, ೯೨.

ಕೋಡಿ, ನೀರೇತ್ತುವ ಕಾಲುವೆಗಳನ್ನು ನಿರ್ಮಿಸಿದರು. ರಾಜ ಅಥವಾ ಬೇರೆಯಾವ ವ್ಯಕ್ತಿಗಳು ನಿರ್ಮಿಸಿದ ಕೆರೆ ಕಟ್ಟೆಯನ್ನು ಅವರ ಹೆಸರಿನಿಂದಲೇ ಕರೆಯುವ ರೂಡಿಯನ್ನು ಶಾಸನದಲ್ಲಿ ಕಾಣಬಹುದು[೧೭೬]. ಹೀಗಾಗಿ ಇಂದು ಸಹ ಅದೆ ಹೆಸರುಗಳಾದ ವಿಷ್ಣುಸಮುದ್ರ, ಶಿವನಸಮುದ್ರ, ರಾಮಸಮುದ್ರ ಇತ್ಯಾದಿಗಳ ಹೆಸರು ಚಾಲ್ತಿಯಲ್ಲಿರುವುದನ್ನು ಗಮನಿಸಬಹುದು. ಕೆರೆಗಳ ನೀರನ್ನು ಕುಡಿಯಲು ಸಹ ಬಳಸುತ್ತಿದ್ದರು. ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ವಿಶೇಷ ಆದ್ಯತೆ ಕೊಟ್ಟು ಕೆರೆ, ಕಟ್ಟೆಗಳನ್ನು ನಿರ್ಮಿಸುತ್ತಿದ್ದರು.

ಕೆರೆಗಳ ನಿರ್ಮಾಣದೊಂದಿಗೆ ಅವುಗಳಿಗೆ ಪೂರಕವಾದ ಕೃಷಿ ಚಟುವಟಿಗೆ ನಡಿಯುತ್ತಿತ್ತು. ಸಾಗುವಳಿಯ ಜಮೀನನ್ನು ದೇವ ಮಾತೃಕ ಮತ್ತು ನದಿ ಮಾತೃಕಗಳೆಂದು ಸ್ಥೂಲವಾಗಿ ವಿಂಗಡಿಸಬಹುದು, ಕೇವಲ ಮಳೆಯ ನೀರನ್ನೇ ಆಶ್ರಯಿಸಿರುವ ಹೊಲಗಳು ದೇವಮಾತೃಕಗಳು. ನದಿ, ಕೆರೆ ಮುಂತಾದುವುಗಳನ್ನು ಆಶ್ರಯಿಸಿರುವ ಹೊಲಗಳು ನದಿ ಮಾತೃಕಗಳು ಎಂದು ಕರೆದರೆ, ನಮ್ಮ ಕನ್ನಡ ಶಾಸನಗಳಲ್ಲಿ ಬೆದ್ದಲೆ, ಗದ್ದೆಗಳೆಂದು ಕರೆದಿರುವುದು. ಬೆದ್ದಲೆ ಎಂದರೆ ನೀರು ನಿಲ್ಲುವಂತೆ ಕಟ್ಟೆಯನ್ನು ಕಟ್ಟಿ ಮಳೆಯ ನೀರನ್ನು ಸಂಗ್ರಹಿಸಿ ಭತ್ತವನ್ನು ಬೆಳೆಯುವ ತಾತ್ಕಾಲಿಕ ಗದ್ದೆಗಳು. ಕಟ್ಟೆಯಿದ್ದರೆ ಅವು ಗದ್ದೆಗಳು, ಕಟ್ಟೆಯೊಡದರೆ ಬೆದ್ದಲು ಭೂಮಿಗಳು ಎಂದು ಕರೆಯಲಾಗುತ್ತಿತ್ತು[೧೭೭].

ಶಾಸನಗಳಲ್ಲಿ ಕೆರೆಗಳ ನಿರ್ಮಾಣ', ತೂಬುಗಳ ನಿರ್ಮಾಣ, ಜೀರ್ಣೋದ್ಧಾರದ ಅಂಶಗಳನ್ನು ಕಾಣಬಹುದು. ನಿರ್ಮಾಣ ವೆಚ್ಚದ ಹಾಗೂ ವಿಸ್ತೀರ್ಣದ ಮೇಲೆ ಅನುಗುಣವಾಗಿ ದೊಡ್ಡ (ಹಿರಿ), ಕಿರಿಯ ಕೆರೆಗಳ ಎಂದು ಕರೆಯಲಾಗುತ್ತಿತ್ತು. ಕೆರೆ ಕಟ್ಟಲು ಮುಂದೆ ಬಂದವರಿಗೆ ಕಟ್ಟು ಕೊಡುಗೆಯಾಗಿ ಭೂಮಿಯನ್ನು, ಹಣವನ್ನು, ದವಸ ದಾನ್ಯವನ್ನು, ಕೆಲವು ಸಂದರ್ಭದಲ್ಲಿ ಆ ಕೆರೆಯ ನೀರನ್ನೇ ನೀಡುತ್ತಿದ್ದರು. ಕೆರೆಯ ನಿರ್ಮಾಣದೊಂದಿಗೆ ಕೆರೆಯ ನೀರನ್ನು ಎಷ್ಟು ಭೂಮಿ ನಿರುಣಿಸುತ್ತಿತ್ತು, ಯಾವ ಯಾವ ಬೆಳೆಗಳನ್ನು ಬೆಳೆಯುತ್ತಿದ್ದರು ಎಂದು ಸಹ ಶಾಸನೊಕ್ತ ದಾಖಲೆಗಳವೆ.

ಕೆರೆ ಕಟ್ಟೆಗಳ ಸಮೀಪದಲ್ಲಿ ಅಥವಾ ಏರಿಯ ಮೇಲೆ ಹಲವು ನಿರ್ದಿಷ್ಟ ದೇವತೆಗಳ ಶಿಲ್ಪಗಳ ಅಥವಾ ಅವುಗಳನ್ನೊಳಗೊಂಡ ಮಂಟಪ ಅಥವಾ ದೇವಾಲಯಗಳು ಅಸ್ತಿತ್ವ ಪಡೆದಿರುವುದನ್ನು ನಾವು ಅನೇಕ ಕಡೆ ಕಾಣಬಹುದು. ಬಹುಶಃ ಕೆರೆಯ ರಚನೆಯೊಂದಿಗೆ ಅದನ್ನು ನಿಯತವಾಗಿ ಪ್ರತಿಷ್ಠಾಪಿಸಬೇಕಾದ ಒಂದು ಸಂಪ್ರದಾಯ ಪ್ರಚಲಿತವಿದ್ದಿತೆಂದು ತೋರುತ್ತದೆ. ಅನೇಕ ಕೆರೆ ಕಟ್ಟೆಗಳ

[೧೭೬] ಎ.ಕ-೯, ನೆ.ತಾ.೮೪, ಕ್ರಿ.ಶ.೧೧೪೦, ಶಿವಗಂಗೆ.
[೧೭೭] ಡಾ. ಎಂ.ಚಿದಾನಂದ ಮೂರ್ತಿ:- ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೪೦೪, ೪೦೫.

ಮೇಲೆ ದುರ್ಗಾದೇವಿ, ಗಣಪತಿ ಚಿಕ್ಕ ಅಥವಾ ದೊಡ್ಡ ಗುಡಿಗಳ ರಚನೆ ಕಾಣಬಹುದು. ಕ್ರಿ.ಶ.೧೦೪೩ರಲ್ಲಿ ಪಟ್ಟಂದೂರು ಕೆರೆಯ ಮೇಲೆ ದುರ್ಗಾ, ಕ್ಷೇತ್ರಪಾಲ ಮತ್ತು ಗಣಪತಿ ದೇವರುಗಳನ್ನು ಸ್ಥಾಪಿಸಲಾಗಿದೆ.

ನೀರಾವರಿಗೆ ಸಂಬಂಧಿಸಿದಂತೆ ಒಂದು ಗ್ರಾಮ ಅಥವಾ ನಾಡಿನಲ್ಲಿ ನಿರ್ಮಿಸುತ್ತಿದ್ದ ಕೆರೆ, ಕಟ್ಟೆ, ಕಾಲುವೆ, ಆಣೆ ಕಟ್ಟು ಇತ್ಯಾದಿಗಳನೆಲ್ಲ ಒಂದೇ ಶಾಸನದಲ್ಲಿ ಉಲ್ಲೇಖಗೊಂಡಿರುವುದನ್ನು ಕ್ರಿ.ಶ.೧೫೦೫ರ ಎಡಮಾರನಹಳ್ಳಿದಲ್ಲಿ ಶಾಸನದಲ್ಲಿ ಕಾಣಬಹುದು ಇದನ್ನು ಗಮನಿಸಿದರೆ ಆಗಿನ ಕಾಲದಲ್ಲಿ ಕೃಷಿ, ನೀರಾವರಿಗೆ ಎಂತಹ ಮಾಹತ್ವ ನೀಡಿದ್ದಾರೆ ಎಂದು ಊಹಿಸಬಹುದು[೧೭೮]. ಕೆರೆಯ ನೀರನ್ನು ಕೃಷಿಗೆ ಬಳಸಬೇಕಾದರೆ ಆ ನಾಡಿನ ಪ್ರಭುಗಾವುಂಡರ ಒಪ್ಪಿಗೆ ಪಡೆಯುವುದು ಅನಿವಾರ್ಯವಾರುವುದನ್ನು ರಾಜೇಂದ್ರ ಚೋಳ ದೇವರ್ ಆಳ್ವಕೆಯಾವಧಿಯಲ್ಲಿ ಕ್ರಿ.ಶ.೧೦೧೪ರ ಮಳೂರು ಪಟ್ಟಣದ ತಮಿಳು ಶಾಸನದಲ್ಲಿ ಪುಂಗನೂರು ಸಭೆಯ ಸದಸ್ಯರು ಜಯಗೊಂಡ ಚೋಳ ವಿನ್ನಾಗರ್ ಆಳ್ವರ್ ದೇವರ್ ಜಮೀನುಗಳಿಗೆ ಮಳಲೂರು ಕೆರೆಯ ನೀರನ್ನು ಉಪಯೋಗಿಸಲು ಅವಕಾಶ ನೀಡಿದ್ದರು[೧೭೯] ಎಂದು ವಿವರಿಸುತ್ತದೆ.

**ಹೊಸ ಕೆರೆಗಳ ನಿರ್ಮಾಣ**

ಕೆರೆಗಳನ್ನು ಕಟ್ಟಿಸುವುದನ್ನು ಜನರು ಪುಣ್ಯಕಾರ್ಯವೆಂದು ಭಾವಿಸಿದ್ದರು. ಅದರೆ ಆ ಕಾರ್ಯವನ್ನು ಕೈಗೊಳ್ಳಲು ಅಪಾರ ಆರ್ಥಿಕ ಮತ್ತು ಮಾನವ ಸಂಪನ್ಮೂಲಗಳ ಆಗತ್ಯವಿದ್ದಿತು. ಅಂತಹ ಶಕ್ತಿ ಸಾಮರ್ಥ್ಯವನ್ನು ಹೊಂದಿರುವ ಸಂಘಟಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಯಶಸ್ವಿಯಾಗಿ ನಿರ್ವಾಹಿಸುತ್ತಿದ್ದವು. ಅದಕ್ಕಾಗಿ ಕೆರೆ ಕೆಳಗಿನ ಗದ್ದೆ ಭೂಮಿಯನ್ನು ಕೆರೆಕಟ್ಟು ಕೊಡುಗೆಯಾಗಿ ದಾನ ದತ್ತಿಗಳನ್ನು ಪಡೆಯುತ್ತಿದ್ದರು. ಜಿಲ್ಲೆಯ ಪರಿಸರದಲ್ಲಿ ಮೊದಲ ಶಾಸನಗಳು ಸಿಗುವುದೇ ಗಂಗರಿಂದ ಪ್ರಾರಂಭವಾಗಿ ಆಳರಸರುಗಳ ಕೊಡು ಕೊಡುಗೆಗಳಲ್ಲಿ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವಾರು ಕೆರೆಗಳನ್ನು ನಿರ್ಮಿಸಿದ್ದಾರೆ. ಕ್ರಿ.ಶ.೭೯೭ ರ ಶಾಸನದಲ್ಲಿ ತಟಾಕಕೆರೆ, ಪೂಲಿಕೆರೆ, ಕುರುಗೊಂದಕೆರೆ, ಕುಟ್ಟಕೆರೆ, ಪೆರ್ಜ್ಜರಿಯಕೆರೆ, ಮಂಗಲದಕೆರೆ, ಮಣ್ಣಿಯರಕೆರೆ, ಮುಂಗಾರಕೆರೆ[೧೮೦] ಎಂಬ ಒಟ್ಟು ೭ ಕೆರೆಗಳ ಉಲ್ಲೇಖಗಳನ್ನ ಗಮನಿಸಿದರೆ ಗಂಗರು ಜನರ ಅಭಿವೃದ್ಧಿಗಾಗಿ ಕೈಗೊಂಡ ಕೆಲಸ ಅಮೋಘವಾದದ್ದು ಎನಿಸುತ್ತದೆ.

---

[೧೭೮] ಎ.ಕ-೯, ಕ.ತಾ.೩೯, ಕ್ರಿ.ಶ.೧೫೦೫, ಎಡಮಾರನಹಳ್ಳಿ.
[೧೭೯] ಎ.ಕ-೯, ಚ.ತಾ.೧೨೭, ಕ್ರಿ.ಶ.೧೦೧೪, ತಮಿಳು, ಮಳೂರುಪಟ್ಟಣ.
[೧೮೦] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಣ್ಣೆ.

೧೦ನೇ ಶತಮಾನದ ಕೊನೆ ಕೊನೆಗೆ ಜಿಲ್ಲೆಯು ಚೋಳರ ಆಳ್ವಿಕೆಗೆ ಒಳಪಟ್ಟರೂ ಕೆರೆಗಳ ನಿರ್ಮಾಣ ಕಾರ್ಯ ಮುಂದುವರೆಯಿತ್ತು. ಚೋಳ ದೊರೆ ರಾಜೇಂದ್ರ ಚೋಳ ದೇವರ್ ಆಳ್ವಿಕೆಯ ಕ್ರಿ.ಶ.೧೦೨೩ರ ಕಾಲದಲ್ಲಿ ಮಣ್ಣೆಯಬ್ಬೆಯು ನೆಲ್ಲಿಗೆರೆಯ ಕೆರೆಗೆ ೫೭ ಚಿನ್ನದ ಗದ್ಯಾಣ, ೩೫೯ ಪೊನ್ನು ಭತ್ತ, ೪೨ ವಸ್ತುಗಳನ್ನು ಕೊಟ್ಟ[೧೮೧]. ಎಂಬ ವಿವರದ ಜೊತೆಗೆ ರಾಜೇಂದ್ರ ಚೋಳ ದೇವನ ಇನ್ನೊಂದು ಶಾಸನದಲ್ಲಿಯೂ ಸಹ ಏರಿಯನ್ನು ಕಟ್ಟಿಸಿ, ತೂಬನ್ನು ನಿರ್ಮಿಸಿ, ದೇವರ ವಿಗ್ರಹಗಳನ್ನು ಪ್ರತಿಸ್ಟಾಪಿಸಿ ದಾನ ನೀಡಿರುವುದರ ಬಗ್ಗೆ ಕ್ರಿ.ಶ.೧೦೪೩ರ[೧೮೨] ಶಾಸನದಲ್ಲಿ ಕಾಣಬಹುದು.

ಹನ್ನೇರಡನೇಯ ಶತಮಾನದ ವೇಳೆಗೆ ಜಿಲ್ಲೆಯು ಹೊಯ್ಸಳರ ಆಳ್ವಿಕೆಯ ವ್ಯಾಪ್ತಿಗೆ ಒಳಪಟುವುದರೊಂದಿಗೆ ಕೆರೆಗಳ ನಿರ್ಮಾಣ ಕಾರ್ಯ ಹಾಗೇಯೇ ಮುಂದುವರೆಯುವುದನ್ನು ಕಾಣಬಹುದು. ಶಿವಗಂಗೆಯಲ್ಲಿ ಕ್ರಿ.ಶ.೧೧೪೦ರಲ್ಲಿ ವಿಷ್ಣುವರ್ಧನನು ಬೋಚಸಮುದ್ರ ಎಂಬ ಕೆರೆಯನ್ನು ನಿರ್ಮಿಸಿದನು[೧೮೩]. ಕೆರೆ ಕಟ್ಟಿಸಿದಕ್ಕೆ ಕಟ್ಟು ಕೊಡುಗೆಯಾಗಿ ಕೆರೆಯ ನೀರನ್ನೇ ದಾನವಾಗಿ ನೀಡಿರುವುದನ್ನು ಸಹ ನರಸಿಂಹನ ಕ್ರಿ.ಶ.೧೧೪೫ ರಲ್ಲಿ ನಿಗರಿಲಿ ಚೋಳ ಮಂಡಲದ ಕೈವಾರನಾಡಿನ ಗಾವುಂಡನಾದ ಶ್ರೀ ನರಸಿಂಗ ಪೊಸಳ ಬ್ರಾಹ್ಮಾಧಿರಾಜನು ಕೈವಾರನಾಡಿನ ನೊನ್‌ದನ್ ಗೊಲಂಯಲ್ಲಿ ಹಿರಿಯಕೆರೆ ಎದುರಿಗೆ ಕೆರೆ ಕಟ್ಟಿಸಿ ಕರುಣಾಕರ ಸಮುದ್ರ ಎಂದು ಹೆಸರಿಟ್ಟು ತಮ್ಮ ದಾನವಾಗಿ ಈ ಕಟ್ಟೆಯ ನೀರನ್ನೇ ಕೊಟ್ಟರು[೧೮೪]. ಬಲ್ಲಾಳದೇವನ ಕ್ರಿ.ಶ.೧೧೮೬ ರ ಕಾಲದಲ್ಲಿ ಸರ್ವಾಧಿಕಾರಿ ವೀರಯ್ಯ ದಂಡನಾಯಕ ನೀರಾವರಿ ಸೌಲಭ್ಯವನ್ನು ಒದಗಿಸಲು ರುದ್ರಸಮುದ್ರ, ಗಂಗಸಮುದ್ರ, ಅಚ್ಯುತಸಮುದ್ರ, ವೀರಸಮುದ್ರ ಎಂಬ ಕೆರೆಗಳನ್ನು ನಿರ್ಮಿಸಿ, ಅಂತಹ ಕೆರೆ ಕಟ್ಟಿಸಿದವರಿಗೆ ೧೨ ವರ್ಷಗಳ ಕಾಲ ತೆರಿಗೆ ಮತ್ತು ೧೦ ಖಂ ಭತ್ತ ಭೂಮಿ ಮಾನ್ಯವೆಂದು ದಾನ ನೀಡಿದನು[೧೮೫]. ವೀರ ಬಲ್ಲಾಳನ ಕಾಲದಲ್ಲಿ ಜಿಲ್ಲೆಯಲ್ಲಿ ಸಾಕಷ್ಟು ಕೆರೆಗಳು ನಿರ್ಮಾಣ, ಕೆರೆಗಳ ಜೀರ್ಣೋಧಾರವಾಯಿತ್ತು. ಕ್ರಿ.ಶ.೧೩೧೦ ರ ಅವಧಿಯಲ್ಲಿ ಸಾಮಂತರಾದ ಚೆಂನೆಯ ನಾಯಕರು ೩೦೦೦ ಹೊನ್ನು ಇಕ್ಕಿ ರಾಮಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದ್ದರೇ[೧೮೬], ಕ್ರಿ.ಶ.೧೩೧೪ರಲ್ಲಿ ಮಹಾ ಪ್ರಧಾನ ತಮ್ಮ ಸಿಂಗಯ್ಯ ದಣ್ಣಾಯಕರು, ಪುಲಿಯೂರುನಾಡಿನಲ್ಲಿ ಕರ್‌ಕೆರೆ ಕಟ್ಟಿದಕ್ಕೆ ಕೊಡುಗೆಯಾಗಿ ೩ ಖಂಡುಗ ಕಳನಿಯನ್ನು

[೧೮೧] ಎ.ಕ-೯, ಹೊ.ತಾ.೧೦, ಕ್ರಿ.ಶ.೧೦೨೩, ಜೋಡಿದಳಸಿಗೆರೆ.
[೧೮೨] ಎ.ಕ-೯, ಹೊ.ತಾ.೧೪೨, ಕ್ರಿ.ಶ.೧೦೪೩, ತಮಿಳು, ಕಾಡನೂರು.
[೧೮೩] ಎ.ಕ-೯, ನೆ.ತಾ.೮೪, ಕ್ರಿ.ಶ.೧೧೪೦, ಶಿವಗಂಗೆ.
[೧೮೪] ಎ.ಕ-೯, ಹೊ.ತಾ.೪೦, ಕ್ರಿ.ಶ.೧೧೪೫, ವೋಬಳಹಳ್ಳಿ.
[೧೮೫] ಎ.ಕ-೫, ಬೇಲೂರು ತಾಲ್ಲೂಕು.೧೭೫, ಹಳೇಬೀಡು ಹೋಬಳಿ, ವೀರದೇವನಹಳ್ಳಿಯ ವೀರ ನಾರಾಯಣ ದೇವಸ್ಥಾನದ ಮುಂದೆ ಇಟ್ಟ ಕಲ್ಲು,
[೧೮೬] ಎ.ಕ-೯, ಬೆಂ.೧೧೧, ಕ್ರಿ.ಶ.೧೩೪೦, ರಾಮಸಮುದ್ರ.

ಸೊಮಿಯವರಿಗೆ[೧೮೭], ಅದೇ ಸಿಂಗೆಯ ದಣ್ಣಾಯಕರ ಮತ್ತೊಂದು ಶಾಸನವಾದ ಕ್ರಿ.ಶ.೧೩೩೦ ರಲ್ಲಿ ಪುಲಿಯೂರು ನಾಡಿನ ನಿವಾಸಿಗಳು, ಅಧಿಕಾರಿಗಳೆಲ್ಲ ಸೇರಿ ನಂಬಿರವಿ ಸೆಟ್ಟಿಯರು ಅತ್ತಿವಲ್ಲೈ, ಸುಲಿವಲ್ಲೈ ಇವೆರಡು ನಡುವಿನ ಪ್ರದೇಶಕ್ಕೆ ಇರವಿಗತ್ತ ಎಂದು ಹೆಸರಿಟ್ಟು ಏರಿ ಕಟ್ಟಿದಕ್ಕೆ ಸರ್ವಮಾನ್ಯವಾಗಿ[೧೮೮], ಕ್ರಿ.ಶ.೧೩೩೦ರಲ್ಲಿ ಸಿಂಗಯ ದಣ್ಣಾಯಕರ ನಾಯಕತನಕ್ಕೆ ಸೇರುವ ಮಹಾ ಸಾವಂತಾಧಿಪತಿ ಪುಲಿಯೂರು ನಾಡಿನ ....... ಸೋಮನಾಥನು, ನಾಡಿನ ನಿವಾಸಿಗಳು, ನಾಡಿನನಾಯಕ ತುರವರ್ ನಂಬಿರವಿಸೆಟ್ಟಿ, ಮಾರಸೆಟ್ಟಿ, ರಾಮಸೆಟ್ಟಿ, ಸಿಮ.....ಸೆಟ್ಟಿ, ಪುಲಿಮಲ್ಲೈಗಾವುಂಡರು, ಉಳಿದ ನಾಡಿನವರು ನಲ್ಲುರ್‌ಪಳ್ಳಿ, ವಡಕರುಪಲ್ಲಿಯಲ್ಲಿ...... ತಾಯಿಲ ಸಿಯರ್ ಮಗನಾದ ವೈಯನ್ನನು ಕಟ್ಟಿದ ತಾಯಿಲ ಸಮುದಿರಕ್ಕೆ (ಕೆರೆ) ಮಾನ್ಯವಾಗಿ[೧೮೯], ಕ್ರಿ.ಶ.೧೩೩೧ ರಲ್ಲಿ ತಿರುಕುಂಜಿನಾಡಿನ ಮೇಲ್ವಿಚಾರಕನಾದ ತಿರುಮಯಿಲಪುರ ಒಡೆಯನಾದ ಅಮ್ಮೈನಾಯನು ಕೆರೆಯನ್ನು ನಿರ್ಮಿಸಿದನು[೧೯೦]. ಕ್ರಿ.ಶ.೧೩೩೧ ರಲ್ಲಿ ಮಹಾ ಪ್ರಧಾನ ಸಿಂಗೆಯ ದಣ್ಣಾಯರು, ಪ್ರಧಾನರಾದ ವೈಚ್ಚಗಾವುಂಡ ಮತ್ತು ನಾಗದೇವರು, ನಾಡಿನ ನಿವಾಸಿಗಳು ಜೊತೆಗೆ ತುರುವರಾಮಬದ್ರಿ, ರವಿಸಿಟ್ಟಿಯರು, ಮಾರಿಸೆಟ್ಟಿಯರು, ಇರಾಮಸೆಟ್ಟಿಯರು, ಸಿಮರ ಗಾವುಂಡನು, ನಾಡಿನ ಮೇಲ್ವಿಚಾರಕರು ಇತರರು ಸೇರಿ ವೈಚ್ಚನು ಊರಿನ ಪೂರ್ವದಲ್ಲಿ ಕಿತ್ತರಿಪುಲ್ಲಂ ಕೆರೆಯನ್ನು ಕಟ್ಟಿಸಿದಕ್ಕೆ ಕೆರೆ ಕೆಳಗಿನ ಭೂಮಿಯನ್ನು ದಾನ ನೀಡಿದರು. ಮತ್ತೇ ಇದೇ ಶಾಸನದಲ್ಲಿ ಮಹಿಲಾ ಗವುಂಡನ ಮಗ ವೈಚ್ಚಯನು ಸಹ ಕೆರೆಯನ್ನು ನಿರ್ಮಿಸಿದ ಎಂಬ ಮಾಹಿತಿಯನ್ನು ನೋಡ ಬಹುದು[೧೯೧].

ಹೊಯ್ಸಳರ ನಂತರ ಬಂದಂತಹ ವಿಜಯನಗರ ಸಾಮ್ರಾಜ್ಯವು ಹೆಚ್ಚು ವಿಸ್ತಾರವಾಗಿದ್ದರಿಂದ ಏನೋ ಜಿಲ್ಲೆಯಲ್ಲಿ ಕೆರೆಗಳ ನಿರ್ಮಾಣ ಕಾರ್ಯಗಳು ಹೆಚ್ಚಾಗಿ ನಡೆದಿಲ್ಲ ಎನ್ನಬಹುದು. ಬುಕ್ಕಣ ಒಡೆಯರ ಆಳ್ವಕೆಯಲ್ಲಿ ಕ್ರಿ.ಶ.೧೩೮೨ ರಲ್ಲಿ ಜಯಗೊಂಡ ಚೋಳಮಂಡಲದ ತೊರೆವಳನಾಡಿನ ಬನಹಳ್ಳಿಯ ಪೂರ್ವ ದಿಕ್ಕಿನಲ್ಲಿ ಪೆಂಮಸಮುದ್ರ ಸೀಮೆಯಲ್ಲಿ ಪುರುಷೋತ್ತಮ ದೇವನು ಕೆರೆಯನ್ನು ಕಟ್ಟಿಸಿದನು[೧೯೨]. ಕ್ರಿ.ಶ.೧೪೧೦ರಲ್ಲಿ ಯಲಹಂಕ ನಾಡಪ್ರಭುವಾದ ಹಿರಿಯಣ್ಣ ದಣ್ಣಾಯಕರು[೧೯೩] ದೇವರಾಯನ ಹೆಸರಿನಲ್ಲಿ ಕೆರೆಯನ್ನ ಕಟ್ಟಿಸಿದ ಮಾಹಿತಿಯನ್ನು ಕಾಣಬಹುದು. ಅಚ್ಯುತದೇವರ ಆಳ್ವಕೆಯ ಕ್ರಿ.ಶ.೧೫೩೩ ರಲ್ಲಿ ಹೆಸರುಘಟ್ಟಕ್ಕೆ ಪ್ರತಿನಾಮ ಸಿವನಸಮುದ್ರವೆಂಬ ಹಾಗೂ ಆರ್ಕಾವತಿ ನದಿ

[೧೮೭] ಎ.ಕ-೯, ಹೊ.ತಾ.೧೩೯, ಕ್ರಿ.ಶ.೧೩೧೪, ತಮಿಳು, ಪರಮನಹಳ್ಳಿ.
[೧೮೮] ಎ.ಕ-೯, ಹೊ.ತಾ.೫೬, ಕ್ರಿ.ಶ.೧೩೩೦, ತಮಿಳು, ಸೂಲಿಬೆಲೆ.
[೧೮೯] ಎ.ಕ-೯, ಹೊ.ತಾ.೮೧, ಕ್ರಿ.ಶ.೧೩೩೦, ತಮಿಳು, ಚಿಕ್ಕನಲ್ಲೂರು.
[೧೯೦] ಎ.ಕ-೯, ಹೊ.ತಾ.೯೭, ಕ್ರಿ.ಶ.೧೩೩೧, ತಮಿಳು, ಮುಗಬಾಳ.
[೧೯೧] ಎ.ಕ-೯, ಹೊ.ತಾ.೧೪೦ಎ, ಕ್ರಿ.ಶ.೧೩೩೧, ದೇವಸೆಟ್ಟಿಹಳ್ಳಿ.
[೧೯೨] ಎ.ಕ-೯, ಹೊ.ತಾ.೧೫೪, ಕ್ರಿ.ಶ.೧೩೮೨, ಚಿಕ್ಕಬನಹಳ್ಳಿ.
[೧೯೩] ಎ.ಕ-೯, ದೇ.ತಾ.೧೨, ಕ್ರಿ.ಶ.೧೪೧೦, ಸೊಲೂರು.

ತಟಾಕ ತೀರ ಉಲ್ಲೇಖವನ್ನು[೧೯೪] ಗಮನಿಸಿದರೆ ಬೆಂಗಳೂರು ನಗರ ಜಿಲ್ಲೆಗೆ ವೃಷಭಾವತಿ ನದಿಯಾದರೆ, ಗ್ರಾಮಾಂತರ ಜಿಲ್ಲೆಗೆ ಅರ್ಕಾವತಿಯೇ ಕುಡಿಯುವ ನೀರಿನ ಮೂಲವಾಗಿರಬೇಕು. ತಮ್ಮೇಗೌಡರು ದಕ್ಷಿಣ ಪಿನಾಕಿನಿ ನದಿಯ ಎಡ ಬದಿಯ ಕಡೆಗೆ ಕೋಟೆಗೆ ಬೇಕಾದ ಕಂದಕಗಳನ್ನು ರಚಿಸಿ ನೀರಿನ ಪೂರೈಕೆಗಾಗಿ ಹರಿಯುವ ನದಿಗೆ ಕೆರೆಯನ್ನು ಕಟ್ಟುವ ಮೂಲಕ ನೀರನ್ನು ಸಂಗ್ರಹಿಸಲಾಯಿತು. ದೊಡ್ಡದಾದ ಈ ಅಮಾನಿಕೆರೆ (ಹೊಸಕೋಟೆ ಕೆರೆ) ಯು ತುಂಬಿದಾಗ ಸುಮಾರು ೧೫ ಕಿ.ಮೀ. ಸುತ್ತಳತೆಯುಳ್ಳದಾಗಿದೆ.

ವಿಜಯನಗರ ಅರಸರ ನಂತರ ಗ್ರಾಮಾಂತರ ಪ್ರದೇಶವು ಮರಾಠರ ವಶವಾಗಿ ಕೆರೆಗಳ ನಿರ್ಮಾಣದ ಕಡೆ ಗಮನ ಹರಿಸಿದ್ದರು. \ಕ್ರಿ.ಶ.೧೭೨೭ರಲ್ಲಿ ಮಾಣು ಕೋಜಿ ಪರವಾಗಿ ಬಯಿರೇಗೌಡನು ಕೆರೆ ನಿರ್ಮಿಸಿದನು[೧೯೫]. ಒಂದೇ ಕಾಲದ, ಸಂವತ್ಸರ, ದಿನದ ಎರಡು ಶಾಸನಗಳು ಒಂದೇ ಗ್ರಾಮದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿದ್ದ ಕ್ರಿ.ಶ.೧೭೨೮ರ ಕಾಲದಲ್ಲಿ ಅಂಣಾಜಿ ಶೇಷೋ ಪಂತರಿಗೆ ಸೂಲಿಬೆಲೆವೂರ ಮುಂದಣ ದೊಡ್ ಕೆರೆ ವೀರಂಣನ ಕೆರೆ ಕಟ್ಟುಸ್ತ ಕಟು ಕೊಡಗಿಯಾಗಿ ಹೊಲವನ್ನು[೧೯೬] ನೀಡಿದ್ದಾರೆ. ಮೈಸೂರು ಒಡೆಯರು ಕಾಲದಲ್ಲಿ ಬೆರಳೆಣಿಕೆಗಳಷ್ಟು ಮಾತ್ರ ಕೆರೆಗಳಿಗೆ ಸಂಬಂಧಿಸಿದ ಕಾರ್ಯಗಳು ನಡೆದಿದೆ. ಕ್ರಿ.ಶ.೧೭೨೦ರ ಕೃಷ್ಣರಾಜ ಒಡೆಯರ ಶಾಸನದಲ್ಲಿ ಕಾವೇರಿ ನದಿಯ ಉಲ್ಲೇಖವನ್ನು ಗಮನಿಸಬಹುದು[೧೯೭].

**ಕೆರೆಗಳ ಜೀರ್ಣೋದ್ಧಾರ**

ಕೆರೆಯ ನಿರ್ಮಾಣ, ಕೆರೆಯ ದುರಸ್ತಿ, ಕೆರೆಯ ಧರ್ಮವನ್ನು ಪಾಲಿಸದಿರುವುದು ಪಾಪವೆಂದು ಭಾವಿಸಲಾಗುತ್ತಿತ್ತು. ಬಹು ಮಟ್ಟಿಗೆ ಕೆರೆಗಳ ದುರಸ್ತಿ, ನಿರ್ವಹಣೆಯು ಕೆರೆಯನ್ನು ಕಟ್ಟಿಸಿದವರ ಜವಾಬ್ದಾರಿಯಾಗಿರುತ್ತಿತ್ತು, ಕೆರೆಗಳು ಒಡೆದಾಗ ಅಥವಾ ಶಿಥಿಲವಾದಾಗ ಅದರ ದುರಸ್ತಿ ಮಾಡಿಸಿದವರ ಹಾಗೂ ಮಾಡಿದ ಕಾಯಕ್ಕೆ ದಾನ ನೀಡಿರುವುದನ್ನು ಸಹ ಶಾಸನಗಳಲ್ಲಿ ಕಾಣಬಹುದು. ಕೆರೆ ಏರಿ ಶಿಥಿಲವಾಗಿದ್ದಕ್ಕೆ ಬಂಡಿಯಿಂದ ಮಣ್ಣನ್ನು ಹಾಕಿ ಭದ್ರ ಪಡಿಸುತ್ತಿದ್ದರು ಎಂಬುದನ್ನು ಕ್ರಿ.ಶ.೧೫೧೩ರ ಕಾಲದ ವೀರ ಪ್ರತಾಪ ಕೃಷ್ಣರಾಯ ಮಹಾರಾಯರ ಆಳ್ವಿಕೆಯಲ್ಲಿ ಹೊಟ್ಟೆಗಾನ ಹೊಸಹಳ್ಳಿಯ ಕನ್ನಡ ಶಾಸನದಲ್ಲಿ ಕಾಣಬಹುದು[೧೯೮].

---

[೧೯೪] ಎ.ಕ-೯, ನೆ.ತಾ.೩೧, ಕ್ರಿ.ಶ.೧೫೩೩, ಹೆಸರುಘಟ್ಟ.

[೧೯೫] ಎ.ಕ-೯, ಹೊ.ತಾ.೪೫, ಕ್ರಿ.ಶ.೧೭೨೭, ಹಡಕನಹಳ್ಳಿ.

[೧೯೬] ಎ.ಕ-೯, ಹೊ.ತಾ.೫೩, ೫೪, ಕ್ರಿ.ಶ.೧೭೨೮, ಸೂಲಿಬೆಲೆ.

[೧೯೭] ಎ.ಕ-೯, ನೆ.ತಾ.೭೦, ಕ್ರಿ.ಶ.೧೭೨೦, ನರಸಿಂಹಪುರ.

[೧೯೮] ಎ.ಕ-೯, ಚ.ತಾ.೧೫೬, ಕ್ರಿ.ಶ.೧೫೧೩, ಹೊಟ್ಟೆಗಾನ ಹೊಸಹಳ್ಳಿ.

ಹೊಯ್ಸಳ ನರಸಿಂಹನ ಕ್ರಿ.ಶ.೧೧೪೫ ರಲ್ಲಿ ನಿಗರಿಲಿ ಚೋಳ ಮಂಡಲದ ಕೈವಾರನಾಡಿನ ಗಾವುಂಡನಾದ ಶ್ರೀ ನರಸಿಂಗ ಪೊಸಳ ದೇವೆಸಭಟ್ಟರು ಹಿರಿಯ ಕೆರೆಯ ಏರಿಯ ಕಲ್ಲು ಸರಿಪಡಿಸಿದ್ದಕ್ಕಾಗಿ ಬ್ರಹ್ಮಧಿರಾಜನು ಈ ಏರಿಯನ್ನು ಗೋವಿಂದ ದೇವರಿಗೆ[೧೯೯], ಕ್ರಿ.ಶ.೧೩೦೨ರಲ್ಲಿ ಸುಗುಣಿಯಲ್ಲಿ ಶ್ರೀ ಕೋನಮಾರಪ್ಪನ್ ತನ್ನ ಸ್ವಂತ ಖರ್ಚಿನಲ್ಲಿ ಒಡೆದು ಹೋಗಿದ್ದ ಕೆರೆಯನ್ನು ಊರ್ಜಿತಗೊಳಿಸಿದ್ದಕ್ಕಾಗಿ ಆತನಿಗೆ ಕಂದಾಯ ರಹಿತ ಭೂಮಿಯನ್ನು[೨೦೦], ಕ್ರಿ.ಶ.೧೩೧೪ರಲ್ಲಿ ಪುಲಿಯೂರು ನಾಡಿನ ಕರಿಕಿರೈ ದುರಸ್ತಿಗೊಳಿಸಿದ್ದಕ್ಕಾಗಿ ಸಿಂಗೆಯ ದಂಡನಾಯಕರು ಕೊಡುಗೆಯಾಗಿ ಭೂಮಿಯನ್ನು[೨೦೧], ಕ್ರಿ.ಶ.೧೩೧೪ರಲ್ಲಿ ಕೆರೆ ಏರಿಯಲ್ಲಿನ ಕಲ್ಲು ಮಳೆಯಿಂದ ಹೋದದನ್ನು ಪುನಃ ನಿರ್ಮಾಣ ಮಾಡಿದಕ್ಕೆ ಪುಲಿಯೂರು ನಿವಾಸಿಗಳು[೨೦೨], ಒಡೆದು ಹೋಗಿದ್ದ ಕೆರೆಯನ್ನು ಜೀರ್ಣೋದ್ಧಾರಗೊಳಿಸಿದನ್ನು ಕ್ರಿ.ಶ.೧೬೫೨ ರಲ್ಲಿ ಬಗುಳ ಕೆರೆವೊಡೆಯಲಾಗಿ ಸೊಂಣಯಗೌಡರು ಬನಹಳ್ಳಿಯ ಶೇಖರಯ್ಯನಿಗೆ[೨೦೩], ಕ್ರಿ.ಶ.೧೭೦೫ರಲ್ಲಿ ಶಾನುಭೋಗ ಶಿವಯ್ಯನು ಭೀಮಾಪುರದ ಸುನ್ನಪಾಡಿ ಕೆರೆ ಕಟ್ಟೆ ಶಿಥಿಲವಾದ್ದರಿಂದ ಕೆರೆ ಕಟ್ಟು ಕೊಡಗಿಯಾಗಿ[೨೦೪] ದಾನ ಕೊಟ್ಟರು.

## ತೂಬು ಮತ್ತು ಕಾಲುವೆಗಳ ನಿರ್ಮಾಣ

ಕೆರೆಯಲ್ಲಿನ ನೀರನ್ನು ಕೃಷಿಗೆ ಬಳಸಲು ತೂಬು ಮತ್ತು ಕಾಲುವೆಗಳನ್ನು ನಿರ್ಮಿಸುತ್ತಿದ್ದರು. ಕ್ರಿ.ಶ.೮೭೦ ರಲ್ಲಿ ಗಂಗರ ಸಾಮಂತರಾಗಿದ್ದ ಸತ್ಯವಾಕ್ಯ ಪೆರ್ಮ್ಮಡಿಯ ಕಲಿಯುಗದಣುಗ ನಾಗತ್ತರನ ಆಳು ಸಿರಿಯಮಯ್ಯ ಎಂಬುವನು ಮೊದಲೇ ಇದ್ದಂತ ಕೆರೆಗೆ ೨ ತೂಬುಗಳನ್ನು ಇಟ್ಟು, ಮೂಡಣ ಕೆರೆಯಂ ಕಟ್ಟಿಸಿ ೩ ಕೆರೆಯ ಬಿತ್ತುವಟ್ಟವಂ ಪಡೆದನು[೨೦೫]. ಚೋಳ ದೊರೆ ರಾಜೇಂದ್ರ ಚೋಳ ದೇವನ ಕ್ರಿ.ಶ.೧೦೪೩ರಲ್ಲಿ ರಾಜ ರಾಜ ವೇಲನು ಪೆಟ್ಟಂದೂರಿನಲ್ಲಿ ಏರಿ ಕಟ್ಟಿಸಿ, ೩ ತೂಬುಗಳನ್ನು, ಹೊಯ್ಸಳ ವಲ್ಲಾಳ ದೇವನ ಆಳ್ವಿಕೆಯಾವಧಿಯಾದ ಕ್ರಿ.ಶ.೧೩೩೧ ರಲ್ಲಿ ಅಮ್ಮೈನಾಯನು ತೂಬನ್ನು[೨೦೬], ಕ್ರಿ.ಶ.೧೩೮೮ರಲ್ಲಿ ವಿಠಲನಾಥನು ಧರ್ಮವಾಗಿ ಕೆರೆಗೆ ಕಾಲುವೆಯನ್ನು[೨೦೭] ನಿರ್ಮಿಸಿದನು.

---

[೧೯೯] ಎ.ಕ-೯, ಹೊ.ತಾ.೪೦, ಕ್ರಿ.ಶ.೧೧೪೫, ತಮಿಳು, ವೋಬಳಹಳ್ಳಿ.
[೨೦೦] ಎ.ಕ-೯, ಆ.ತಾ.೮೦, ಕ್ರಿ.ಶ.೧೩೦೨, ಜಿಗಣಿ.
[೨೦೧] ಎ.ಕ-೯, ಹೊ.ತಾ.೧೩೯, ಕ್ರಿ.ಶ.೧೩೧೪, ಪರಮನಹಳ್ಳಿ.
[೨೦೨] ಎ.ಕ-೯, ಹೊ.ತಾ.೧೩೯, ಕ್ರಿ.ಶ.೧೩೧೪, ತಮಿಳು, ಪರಮನಹಳ್ಳಿ.
[೨೦೩] ಎ.ಕ-೯, ಹೊ.ತಾ.೧೭, ಕ್ರಿ.ಶ.೧೬೫೨, ಸಿದ್ದನಹಳ್ಳಿ.
[೨೦೪] ಎ.ಕ-೯, ಹೊ.ತಾ.೨೦, ಕ್ರಿ.ಶ.೧೭೦೫, ಭೀಮಾಪುರ.
[೨೦೫] ಎ.ಕ-೯, ಬೆಂ.೭೯, ಕ್ರಿ.ಶ.೮೭೦, ಅಗರ.
[೨೦೬] ಎ.ಕ-೯, ಹೊ.ತಾ.೯೭, ಕ್ರಿ.ಶ.೧೩೩೧, ತಮಿಳು, ಮುಗಬಾಳ.
[೨೦೭] ಎ.ಕ-೯, ಮಾ.ತಾ.೨೦, ಕ್ರಿ.ಶ.೧೩೮೮, ಕಲ್ಯಾ.

## ಕೆರೆಗಳ ನಿರ್ವಹಣೆ

ಕೆರೆಯನ್ನು ಕಟ್ಟಿಸಿದ ನಂತರ ಅದರ ನಿರ್ವಾಹಣೆಗಾಗಿ ನೀಡುತ್ತಿದ್ದ ಭೂಮಿಯನ್ನು ಬಿತ್ತುವಾಟ ಎಂದು ಕರೆಯುತ್ತಿದ್ದರು. ಸಾಮನ್ಯವಾಗಿ ಕಟ್ಟಿಸಿದ ಕೆರೆಯ ಕೆಳಭಾಗದ ಕೆಲವು ಭೂ ಭಾಗಗಳನ್ನೆ ಬಿತ್ತುವಾಟವನ್ನಾಗಿ ನೀಡುತ್ತಿದ್ದರು[೨೦೮]. ಬಿತ್ತುವಾಟದಿಂದ ಬಂದಂತಹ ಆದಾಯದಿಂದ ಕೆರೆಯನ್ನು ದುರಸ್ಥಿಗೊಳಸಲಾಗುತ್ತಿತ್ತು.

ಕೆಲವು ಸಂದರ್ಭದಲ್ಲಿ ವೃತ್ತಿ ಮತ್ತು ಹಣವನ್ನು ಸಹ ದಾನವಾಗಿ ನೀಡುತ್ತಿದ್ದರು ಎಂಬುದಕ್ಕೆ ಹೊಯ್ಸಳ ಸೋಮೇಶ್ವರನು ಬ್ರಾಹ್ಮಣರಿಗಲ್ಲದೆ ಕೆರೆಯ ನಿರ್ವಾಹಣೆಗೆ ಎರಡು ವೃತ್ತಿಗಳನ್ನು ದಾನ ನೀಡಿದನು[೨೦೯]. ಕ್ರಿ.ಶ.೧೨೮೮ನಲ್ಲಿ ಮಹಾ ಪ್ರಧಾನ ಕಂಬಯ್ಯ ದಣ್ಣಾಯಕರು ನಿಜಗಲಪುರದ ನಿವಾಸಿಗಳು ಕೆರೆಯ ಕೆಲಸಕ್ಕೆ ದೇಣಿಗೆ ನೀಡ ಬೇಕೆಂದು ಶಾಸನ ಹೊರಡಿಸಿದನು[೨೧೦]. ಕ್ರಿ.ಶ.೧೬ನೇ ಶತಮಾನದಲ್ಲಿ ಕೃಷ್ಣರಾಯಸಮುದ್ರದ ಕೆರೆಯ ನಿರ್ವಹಣೆಗಾಗಿ ಒಂದು ಸುವರ್ಣ ವರಹವನ್ನು ದಾನವಾಗಿ ನೀಡಿರುವುದನ್ನು ಸಹ ಕಾಣ ಬಹುದು[೨೧೧].

## ಕೆರೆ ಕೆಳಗಿನ ಭೂ ಭಾಗವನ್ನು ದಾನ ನೀಡುತ್ತಿದ್ದರು

ದೇವಾಲಯಗಳಗೆ, ವೀರರಿಗೆ ದಾನಗಳನ್ನು ಸಾಮನ್ಯವಾಗಿ ಕೆರೆ ಕೆಳಗಿನ ಜಾಗವನ್ನು ನೀಡುತ್ತಿದ್ದರು. ದೇವಾಲಯಗಳಗೆ ಅಮೃತಪಡಿ, ದೀಪಾರಾದನೆ, ಅಂಗ ಬೋಗ, ನೈವೇದ್ಯಗಳ ಆರ್ಥಿಕ ನೇರವಿಗಾಗಿ ಕೆರೆ ಕೆಳಗಿನ ಫಲವತ್ತಾದ ಗದ್ದೆ ಭೂಮಿಯನ್ನು ದಾನ ನೀಡಿ ಅದರಿಂದ ಬರುವ ಆದಾಯದಿಂದ ದೇವಾಲಯಗಳ ಸಕಲ ಕಾರ್ಯಗಳನ್ನು ನಡೆಸುತಿದ್ದರು ಎಂಬುದನ್ನು ಹಲವಾರು ಶಾಸನಗಳಂದ ಮನಗಾಣಬಹುದು. ಕೆರೆಗಳ ತೆರಿಗೆಯಿಂದ ದೇವಾಲಯದ ದೇವಬೋಗ ನಡೆಯುತ್ತಿತ್ತು ಹಾಗೂ ಕೆರೆಗಳಗೆ ತೆರಿಗೆಗಳನ್ನು ವಿಧಿಸಿರುವುದನ್ನು ಕ್ರಿ.ಶ.೯೫೦ ರ ಪಲ್ಲವರ ಇರಿವ ನೊಳಂಬಧಿರಾಜನ ಶಾಸನದಲ್ಲಿ ಕಾಣ ಬಹುದು[೨೧೨]. ರಾಜೇಂದ್ರ ಚೋಳ ದೇವರ ೧೮ನೇ ಆಳ್ವಿಕೆಯಾವಧಿಯಲ್ಲಿ ವಾಮಯ್ಯನು ಸಿದ್ದೇಶ್ವರ ದೇವಾಲಯಕ್ಕೆ ಬಾಣಪುರದ ಕೆರೆ ಕೆಳಗೆ ೧೨ ಖಂಡುಗ ಗದ್ದೆಯನ್ನು[೨೧೩], ದೇವಾಲಯಕ್ಕೆ ಕೆರೆ ಕೆಳಗಿನ ಭೂಮಿಯನ್ನೇ ದಾನ ನೀಡ ಬೇಕೆಂದು ಕೆರೆ ಕೆಳಗಿನ ಭೂಮಿಯನ್ನು ಹೊನ್ನು ಕೊಟ್ಟು ಕೊಂಡು ಮತ್ತೆ ದೇವರಿಗೆ ದೇವಧನವಾಗಿ ನೀಡಿರುವುನ್ನು ಕ್ರಿ.ಶ.೧೦೩೩ರ

---

[೨೦೮] ಎ.ಕ-೯, ಅನುಬಂಧ, ಚ.ತಾ.೧೯೨, ರಾಮಪುರ.

[೨೦೯] ಎ.ಕ-೯, ಬೆಂ.೬, ಕ್ರಿ.ಶ.೧೨೫೩, ಬೆಂ ಮ್ಯೂಸಿಯಂ.

[೨೧೦] ಎ.ಕ-೯, ನೆ.ತಾ.೬೩, ಕ್ರಿ.ಶ.೧೨೮೮, ನಿಜಗಲ್ಲು.

[೨೧೧] ಸಾಸಲು ಜೆ ವಿಶ್ವನಾಥ್ & ಎಂ.ಜಿ.ಮಂಜುನಾಥ್:- ಐದು ಅಪ್ರಕಟಿತ ಶಾಸನಗಳು, ಇ.ದ.ಸಂ.೧೩, ಪು.ಸಂ-೨೯.

[೨೧೨] ಎ.ಕ-೯, ಹೊ.ತಾ.೩೭, ಕ್ರಿ.ಶ.೯೫೦, ಕೊಂಡಹಳ್ಳಿ.

[೨೧೩] ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ತಮಿಳು, ಸೋಲದೇವನಹಳ್ಳಿ.

ಅಯಿಗಂಡಪುರ ಗ್ರಾಮದ ಗೋಪಾಲಕೃಷ್ಣ ದೇವಾಲಯದ ತಮಿಳು ಶಾಸನದಲ್ಲಿ ಕಾಣಬಹುದು[೨೧೪]. ಕ್ರಿ.ಶ.೧೦೬೫ ರಲ್ಲಿ ಸೋಮೇಶ್ವರ ಒಡೆಯ ದೇವಸ್ಥಾನದ ನಿರ್ವಾಹಣೆಗೆ, ಕೆಲಸದ ವೆಚ್ಚಗಳು, ಅರ್ಚನೆ, ಭೋಗ ಇತ್ಯಾದಿಗಳಗಾಗಿ ೧೫೦ ಕುಳ ಕೆರೆಯ ಕೆಳಗಿನ ಭೂಮಿಯನ್ನು[೨೧೫], ಕ್ರಿ.ಶ.೧೦೭೫ರಲ್ಲಿ ಶ್ರೀರಾಮೇಶ್ವರ ಒಡೆಯ ಮಹಾ ದೇವರಿಗೆ[೨೧೬], ಕ್ರಿ.ಶ.೧೧೧೫ ರಲ್ಲಿ ಮಲ್ಲಿಕಾರ್ಜುನ ಒಡೆಯ ಮಹಾದೇವರಿಗೆ ಸಾಮಗಾವುಂಡನು ನಿಜಗಲ್ಲು ಊರ ವಿದಿಯಂ ಕಟ್ಟಿ ಕೆರೆ ಕೆಳಗೆ ೧೦ ಖಂಡುಗ ನಂಜೈನಿಲಯಂ, ೫ ಖಂಡುಗ ಪೂಜೈನಿಲಯಂ ಗೆ ದೇವಧನವಾಗಿ[೨೧೭], ಕ್ರಿ.ಶ.೧೨೯೭ ರಲ್ಲಿ ಚೋಳಶ್ವರ ಒಡೆಯನಿಗೆ[೨೧೮], ಕ್ರಿ.ಶ.೧೩೩೦ ರಲ್ಲಿ ವಲ್ಲಾಳ ದೇವರ ತೋಳಿನ ಖಡ್ಗದ ಜಯಕ್ಕೆ ನಾರಸಿಂಗಸ್ವಾಮಿಗೆ ಸಂಪ್ರದಾಯ ಸೇವೆಯಾಗಿ ತೇವಪೆರುಮಾಳು, ಸೊಕ್ಕ ಪೆರುಮಾಳುಗೆ[೨೧೯], ವಿಜಯನಗರದ ಶ್ರೀರಂಗದೇವನ ಕ್ರಿ.ಶ.೧೬೯೩ ರಲ್ಲಿ ತಿಮ್ಮರಾಯ ಸ್ವಾಮಿ ದೇವಸ್ಥಾನಕ್ಕೆ ಚೋಡೇನಹಳ್ಳಿ ಕೆರೆ ಕಟ್ಟೆ ಕೆಳಗೆ ಗದ್ದೆಗೆ ೧ ಖಂಡುಗ ಭೂದಾನ ಹಾಗೂ ದಾನ ನೀಡಿದ್ದ ಹೊಲ ಗದ್ದೆಗೆ ಶಂಖ, ಚಕ್ರ ಶಿಲಾ ಪ್ರತಿಷ್ಟೆಯು ವಾಮನಮುದ್ರೆ ಹಾಕಿರುವುದನ್ನು[೨೨೦] ಕಂಡರೆ ವೈಷ್ಣವ ಸಂಪ್ರದಾಯಕ್ಕೆ ಸೇರಿದ ದಾನ ಭೂಮಿಯ ಗುರುತಿಗಾಗಿ ನೆಟ್ಟಿರುವ ಕಲ್ಲು, ಒಂದು ವೇಳೆ ಶೈವ ಪಂತವಾದರೆ ಲಿಂಗ, ಬಸವದ ಮುದ್ರೆ ಇರುತ್ತಿತ್ತು.

ಇದು ಅಲ್ಲದೇ ದೇವಾಲಯದ ಪೂಜಾರಿಗಳಗೆ, ದೇವಾಲಯದ ನಿರ್ವಾಹಕರಿಗೆ, ಯುದ್ಧಗಳಲ್ಲಿ ಗೆದ್ದಾಗ ಜಯಕ್ಕಾಗಿ, ಹೊಸದಾಗಿ ದೇವಾಲಯ ಅಥವಾ ಕೆರೆಗಳ ನಿರ್ಮಾಣವಾದಾಗ ಬ್ರಾಹ್ಮಣರಿಗೆ ದಾನ ನೀಡಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಗಂಗರ ದೊರೆ ದುರ್ವಿನೀತನ ಕ್ರಿ.ಶ.೫೧೭ ರಲ್ಲಿ ದೇವಶರ್ಮನಿಗೆ ನೀರಿನಧಾರೆಯನ್ನು ಎರೆಯುವುದರ ಮೂಲಕ ಕೃಷ್ಣಕೆರೆ, ನಕುಲ (ಮುಂಗುಸುಕೆರೆ) ಕೆರೆ, ಮಹಾಕೆರೆ ಕೆಳಗೆ ನಿಯಮಿತ ಪ್ರದೇಶಗಳನ್ನು ನಿರ್ದಿಷ್ಟ ಅವಧಿ ಮೇರೆಗೆ ಹಾಗೂ ಪೆಣ್ಣೆನದಿ ಪೂರ್ವದಿಕ್ಕಿನಲ್ಲಿ ೧೫ ಖಂಡುಗ[೨೨೧], ಕ್ರಿ.ಶ.೧೦೭೫ ರಲ್ಲಿ ಶಿವ ಬ್ರಾಹ್ಮಣನಿಗೆ ದೊಡ್ಡ ಕೆರೆಯ ಕೆಳಗಿನ[೨೨೨], ಕ್ರಿ.ಶ.೧೨೮೭ ರಲ್ಲಿ ಬಳ್ಳಿಯನಾಡಿನ ರಾಮನಾಥ ದೇವರ ತೋಳಿನ ಜಯವು ನಾಡಿನ ಜಯವಾಗಿದ್ದು, ರಾಮನಾಥದೇವರ ಚತುವೇದಿ ಮಂಗಲದಲ್ಲಿ ಒಣ ಮತ್ತು ಗದ್ದೆ ಭೂಮಿಯನ್ನು ಕಂಜೈನಾರಯನ ಭಟ್ಟ,

---

[೨೧೪] ಎ.ಕ-೯, ನೆ.ತಾ.೩೭, ಕ್ರಿ.ಶ.೧೦೩೩, ತಮಿಳು, ಆಯಿಗಂಡಪುರ.
[೨೧೫] ಎ.ಕ-೯, ಹೊ.ತಾ.೩೬, ಕ್ರಿ.ಶ.೧೦೬೫, ತಮಿಳು, ಹೊಸಹಳ್ಳಿ.
[೨೧೬] ಎ.ಕ-೯, ಹೊ.ತಾ.೧೦೧, ಕ್ರಿ.ಶ.೧೦೭೫, ತಮಿಳು, ಬೇಚಿರಾಖ್ ಮಾರೇನಹಳ್ಳಿ.
[೨೧೭] ಎ.ಕ-೯, ನೆ.ತಾ.೬೭, ಕ್ರಿ.ಶ.೧೧೧೫, ತಮಿಳು, ನಿಜಗಲ್ಲು.
[೨೧೮] ಎ.ಕ-೯, ಹೊ.ತಾ.೧೩೬ & ೧೩೮, ಕ್ರಿ.ಶ.೧೨೯೭, ತಮಿಳು, ಪರಮನಹಳ್ಳಿ.
[೨೧೯] ಎ.ಕ-೯, ಹೊ.ತಾ.೧೦೦, ಕ್ರಿ.ಶ.೧೩೩೦, ತಮಿಳು, ಜೋಡಿ ದಾಸರಹಳ್ಳಿ.
[೨೨೦] ಎ.ಕ-೯, ಹೊ.ತಾ.೧೧೨, ಕ್ರಿ.ಶ.೧೩೪೩, ತಮಿಳು, ಕಮ್ಮಸಂದ್ರ.
[೨೨೧] ಎ.ಕ-೯, ದೊ.ತಾ.೬೮, ಕ್ರಿ.ಶ.೫೧೭, ಮಲ್ಲೋಹಳ್ಳಿ.
[೨೨೨] ಎ.ಕ-೯, ಹೊ.ತಾ.೧೦೧, ಕ್ರಿ.ಶ.೧೦೭೫, ತಮಿಳು, ಬೇಚಿರಾಖ್ ಮಾರೇನಹಳ್ಳಿ.

ಸಂದೂರಪಿಲ್ಲಿನ ಭಟ್ಟ ಉಳಿದ ಬ್ರಾಹ್ಮಣರಿಗೆ[೨೨೩]. ಕ್ರಿ.ಶ.೧೩೪೩ರಲ್ಲಿ ದಣ್ಣಾಯಕರು ನಂಬಿರವಿ ಸೆಟ್ಟಿಯರಿಗೆ ಗಂಗಪುರದ ಕೆರೆ ಕೆಳಗಿನ[೬೭], ಯುದ್ಧದಲ್ಲಿ ಮಡಿದ ವೀರರ ಕುಟುಂಬದವರಿಗೆ ದಾನ ನೀಡಿ, ಕೆಲವು ಸಂದರ್ಭದಲ್ಲಿ ವೀರಗಲ್ಲುಗಳನ್ನು ನೆಡಿಸುತ್ತಿದ್ದರು. ಗಂಗರ ಶ್ರೀ ಪುರುಷಯ್ಯನು ಕ್ರಿ.ಶ.೭೨೦ರಲ್ಲಿ ಗಂಗ ಮಹಾನಾಯಕ ಮತ್ತು ಪುರುಷ ನಾಯಕ ಎಂಬ ವೀರರಿಗೆ ನೀಡುವಂತ ಗೌರವ ಪಟ್ಟ ನೀಡಿ ಮೂವತ್ತು ಗುಳ ಪಾಲು ಭೂಮಿಯನ್ನು[೨೨೪], ಕ್ರಿ.ಶ.೧೧೨೮ ರಲ್ಲಿ ಮಾಚ್ಚನ್‌ಕಾರನು ಯುದ್ಧ ಮಾಡಿ ಸತ್ತಿದಕ್ಕೆ ಮಾಚಗಾವುಂಡನು ಹಿರಿ ಕೆರೆಯ ಕೆಳಗಿನ ೩ ಖಂಡುಗ ಕಳನಿಯನ್ನು ಕೊಡುಗೆಯಾಗಿ ಕೊಟ್ಟನು[೨೨೫].

ಹೀಗೆ ನೀರನ್ನು ಸಂಗ್ರಹಿಸಿಟ್ಟುಕೊಂಡು ಅದನ್ನು ತನ್ನ ಅಗತ್ಯಕ್ಕೆ ತಕ್ಕ ಹಾಗೆ ಉಪಯೋಗವಾಗುವಂತೆ ಮಾಡಿಕೊಂಡ ಮಾನವನ ಪ್ರಯತ್ನದ ಫಲವಾಗಿ ಕೆರೆ ಕಟ್ಟೆಗಳ ರಚನಾ ಕಾರ್ಯವು ನಾಗರೀಕತೆಯ ಬೆಳವಣಿಗೆಯಲ್ಲಿ ಒಂದು ಬಹುಮುಖ್ಯ ಸೋಪಾನವಾಗಿ ಆ ಕಾಲದಲ್ಲಿ ಕೆರೆಯ ನೀರಿನಿಂದ ಭತ್ತ, ರಾಗಿ, ಹತ್ತಿ, ತೆಂಗು, ಅಡಿಕೆ, ಏಲಕ್ಕಿ, ಅವಂಗ, ಮೆಣಸು, ಬಾಳೆ ಇತ್ಯಾದಿ ಬೆಳೆಗಳನ್ನು ಹೇರಳವಾಗಿ ಬೆಳೆಯುತ್ತಿದ್ದರು ಇದಕ್ಕೆ ದಾಖಲೆಯಾಗಿ ಹಲವಾರು ಶಾಸನಗಳಲ್ಲಿ ಇವುಗಳ ಉಲ್ಲೇಖಗಳಿವೆ. ಇದರಿಂದಾಗಿ ಜಿಲ್ಲೆಯಲ್ಲಿ ಸಮೃದ್ಧವಾದ ಕೃಷಿ ಚಟುವಟಿಕೆಗಳು ನಡೆಯುತ್ತಿತ್ತು.

## ಕೋಟೆಗಳು

ಪ್ರಾಚೀನ ಸಾಹಿತ್ಯ ಕೃತಿಗಳಾದ ಕೌಟಿಲ್ಯನ ಅರ್ಥಶಾಸ್ತ್ರ, ಮೂರನೇಯ ಸೋಮೇಶ್ವರನ ಮಾನಸೋಲ್ಲಾಸ, ಜನ್ನನ ಅನಂತನಾಥ ಪುರಾಣ, ನಂಜುಂಡನ ಕುಮಾರ ರಾಮ ಚರಿತೆ, ಕನಕದಾಸರ ಮೋಹನ ತರಂಗಿಣಿ, ಲಿಂಗಣ್ಣನ ಕೆಳದಿ ನೃಪವಿಜಯ, ಚಾಮರಸನ ಪ್ರಭುಲಿಂಗಲೀಲೆ, ಭೀಮ ಕವಿಯ ಬಸವ ಪುರಾಣ ಮುಂತಾದ ಕಾವ್ಯಗಳಲ್ಲಿ ಕೋಟೆಯ ಮಹತ್ವವನ್ನು ವರ್ಣಿಸಲಾಗಿದೆ. ಪ್ರಾಚೀನ ರಾಜನೀತಿಯಲ್ಲಿ ನಮೂದಿಸಿರುವ ರಾಜ್ಯದ ಸಪ್ತಾಂಗಗಳಲ್ಲಿ ಕೋಟೆಯು ಒಂದಾಗಿದ್ದು (ಉಳಿದ ಸಪ್ತಾಂಗಗಳು ರಾಜ, ಮಂತ್ರಿ, ರಾಜ್ಯ, ಕೋಶ, ಸೈನ್ಯ, ಮಿತ್ರ), ನಗರಗಳನ್ನು ಭದ್ರಗೊಳಸಲು, ತನ್ನ ಜನರ ಸಂಪತ್ತಿನ ರಕ್ಷಣೆಗಾಗಿ ರಾಜನು ತನ್ನ ರಾಜ್ಯದ ಎಲ್ಲೆಯ ನಾಲ್ಕು ದಿಕ್ಕುಗಳಲ್ಲಿಯೂ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ, ಭದ್ರವಾದ ಕೋಟೆಯನ್ನು ಕಟ್ಟಿ, ಒಬ್ಬ ಕಾವಲುಗಾರನನ್ನು ರಕ್ಷಣೆಗಾಗಿ ಇರಿಸಬೇಕಿತ್ತು.

[೨೨೩] ಎ.ಕ-೯, ದೇ.ತಾ.೫೩, ಕ್ರಿ.ಶ. ೧೨೮೭, ಬಯನಹಳ್ಳಿ.
[೨೨೪] ಎ.ಕ-೯, ಹೊ.ತಾ.೮೬, ಕ್ರಿ.ಶ.೭೨೦, ಬೇಚಿರಾಖ್ ಮಾರೇನಹಳ್ಳಿ.
[೨೨೫] ಎ.ಕ-೯, ಹೊ.ತಾ.೧೮, ಕ್ರಿ.ಶ.೧೧೨೮, ಸಿದ್ಧನಹಳ್ಳಿ.

ಶುಕ್ರನ ನೀತಿಸಾರದಲ್ಲಿ ಅನೇಕ ರೀತಿಯ ಗಿಡಮರಗಳ ಪೊದರುಗಳಿಂದ ಕೂಡಿದ, ದನಕರುಗಳು, ಹಕ್ಕಿಗಳು ಮತ್ತಿತರ ಪ್ರಾಣಿಗಳಿಂದ ಸಮೃದ್ಧವಾಗಿರುವ ಬೆಟ್ಟ, ನೀರುಗಳಿಂದ ಆವೃತ್ತವಾಗಿರುವ ಪ್ರದೇಶಗಳಲ್ಲಿ ಕೋಟೆಗಳನ್ನು ನಿರ್ಮಿಸಬೇಕು ಎಂದಿದ್ದಾರೆ[೨೨೬]. ಕೋಟೆಗಳಲ್ಲಿ ಶತ್ರುಗಳಿಗೆ ಆಗಮ್ಯವಾದ, ದುರ್ಗಮವಾದ ಕಟ್ಟಿರುವ ಗೋಡೆಗಳು, ಕಂದಕಗಳು, ಆಯುಧಗಳು, ಕೆಲವೊಮ್ಮೆ ಶತ್ರುಗಳ ಆಕ್ರಮಣವನ್ನು ಎದುರಿಸಲು ಬೇಕಾದ ರಕ್ಷಣಾ ಸಾಧನಗಳು, ಸೈನಿಕರುಗಳು ಸಾಮಾನ್ಯವಾಗಿ ಇರಬೇಕು. ಯುದ್ಧದಲ್ಲಿ ಸಾವಿರಾರು ಆನೆಗಳಿಂದ ಮತ್ತು ಲಕ್ಷಾಂತರ ಕುದುರೆಗಳಿಂದ ನಿರ್ವಹಿಸಲಾಗದ ಕಾರ್ಯವನ್ನು ಒಬ್ಬ ರಾಜ ಕೋಟೆಯ ಸಹಾಯದಿಂದ ಆಶ್ಚರ್ಯಕರವಾಗಿ ನಿರ್ವಹಿಸ ಬಲ್ಲನು ಎಂದು ಪಂಚತಂತ್ರದಲ್ಲಿ ಹೇಳಲ್ಪಟ್ಟಿದೆ. ಪ್ರತಿಯೊಂದು ಕೋಟೆಯು ದುರ್ಗಾಧ್ಯಾಕ್ಷ ಅಥಾವ ದುರ್ಗಪಾಲಕ ಎಂಬ ಅಧಿಕಾರಿಯ ಅಧೀನದಲ್ಲಿರುತ್ತದೆ. ಸೈನಿಕ ಸಂಸ್ಥೆಯವರೇ ಸೈನಿಕ ರಕ್ಷಣ ಕಾರ್ಯದಲ್ಲಿ ಚಾಣಾಕ್ಷನಾಗಿರುವವರನ್ನೇ ದುರ್ಗಪಾಲಕನಾಗಿ ನೇಮಿಸಿ ಕೊಳ್ಳುತ್ತಿದ್ದರು.

ಜನ್ನ ಕವಿಯು ಅನಂತನಾಥ ಪುರಾಣದಲ್ಲಿ ಬರುವ ಚಂಡ ಶಾಸನ ವೃತ್ತಾಂತದ ಸಂದರ್ಭದಲ್ಲಿ ಸೋಲನ್ನು ಒಪ್ಪುವ ಚಿಹ್ನೆಯಾಗಿ ಕೋಟೆ ಬೀಳುವ ಸ್ಥಿತಿಗೆ ಹೋಲಿಸಿದ್ದಾರೆ. ಯುದ್ಧದಲ್ಲಿ ಜಯ ಗಳಿಸ ಬೇಕಾದರೆ ಕೋಟೆಯನ್ನು ವಶ ಪಡಿಸಿಕೊಂಡರೆ ಸಾಕು ಜಯ ಲಭಿಸಿದಂತೆ, ವಡಿಗೇನಹಳ್ಳಿಯಲ್ಲಿ ಕೋಟೆಯನ್ನ ಸ್ವಾಧೀನವಾದ್ದರಿಂದ ಮೆಹರ್ಬಾನಾಗಿ ಉಂಬಳಿಯಾಗಿ ದಾನ ನೀಡಿರುವ ಶಾಸನವನ್ನು ಕಾಣಬಹುದು[೨೨೭]. ಆಕಾರ, ವೇದಸ್ರ, ವರ್ತುಲ, ದೀರ್ಘ ವರ್ತುಲ, ಪಂಚಕೋಣ, ಷಟ್‌ಕೋಣ, ಅಷ್ಟಶ್ರ, ಪದ್ಮ ಸನ್ನಿಭ ಎಂಬ ೮ ಪ್ರಕಾರದ ಕೋಟೆಗಳನ್ನು ಕಾಣಬಹುದು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ನಾಲ್ಕು, ಶುಕ್ರನೀತಿ, ೩ನೇ ಸೋಮೇಶ್ವರನ ಅಭಿಲಾಷಿತಾರ್ಥ ಚಿಂತಾಮಣಿ (ಮಾನಸೋಲ್ಲಾಸ) ಮತ್ತು ೧೭ನೇ ಶತಮಾನದ ಕೆಳದಿಯ ಬಸವರಾಜನ ಶಿವತತ್ವ ರತ್ನಾಕರದಲ್ಲಿ ಒಂಭತ್ತು ವಿಧದ ಕೋಟೆಗಳನ್ನು ರಚಿಸುವ ಬಗ್ಗೆ ಉಲ್ಲೇಖಿಸಲಾಗಿದೆ[೨೨೮].

ಕೋಟೆಯನ್ನು ಕನ್ನಡದಲ್ಲಿ ಗಡಿ, ಸಂಸ್ಕೃತದಲ್ಲಿ ದುರ್ಗ, ಇಂಗ್ಲಿಷ್‌ನಲ್ಲಿ ಪೋರ್ಟ್ ಎಂದು ಕರೆಯಲಾಗುತ್ತದೆ. ಕೋಟೆಗಳಲ್ಲಿ ಗಿರಿದುರ್ಗ, ವನದುರ್ಗ, ಜಲದುರ್ಗ ಹಾಗೂ ನೆಲದುರ್ಗಗಳು ಪ್ರಮುಖವಾದವು. ಬೆಟ್ಟ, ಗುಡ್ಡಗಳ ಮೇಲೆ ನಿರ್ಮಿಸಿರುವ ರಕ್ಷಣಾ ವಸ್ತುಗಳಾಗಿರುವ ಗಿರಿದುರ್ಗ

---

[೨೨೬] ರಮೇಶನಾಯಕ :- ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ, ಪು.ಸಂ-೬೭.

[೨೨೭].ಕ-೯, ದೇ.ತಾ.೩೪, ಕ್ರಿ.ಶ.೧೭೦೦, ದಂಡಿಗಾನಹಳ್ಳಿ.

[೨೨೮] ಡಾ.ರಾಧಾಕೃಷ್ಣಮೂರ್ತಿ:- ಸಂಸ್ಕೃತ ಗ್ರಂಥಗಳಲ್ಲಿ ಕೋಟೆಗಳ ವರ್ಣನೆ, ಇ.ದ.ಸಂ.೬, ೧೯೯೧. ಪು.ಸಂ-೧೫೭.

ಕೋಟೆಗಳನ್ನೇ ಜಿಲ್ಲಾ ವ್ಯಾಪ್ತಿಯಲ್ಲಿ ಹೆಚ್ಚಾಗಿ ಕಾಣಬಹುದು. ಗಿರಿದುರ್ಗಗಳ ಸುತ್ತ ಕಂದಕಗಳನ್ನು ಹೊಂದ್ದಿದ್ದರೆ ಜಲದುರ್ಗ, ದಟ್ಟವಾದ ಕಾಡು ಮಧ್ಯವಿದ್ದರೆ ಅದು ವನದುರ್ಗ ಕೋಟೆಗಳಾಗುತ್ತದೆ.

ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದಂತ ಗಂಗರು, ನೊಳಂಬರು, ಚೋಳರು, ಹೊಯ್ಸಳರು, ವಿಜಯನಗರ ಸಾಮ್ರಜ್ಯದ ಜೊತೆಗೆ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಹೊಯ್ಸಳ & ವಿಜಯನಗರ ಸಾಮ್ರಾಜ್ಯದ ಸಾಮಂತರು, ನಾಡಪ್ರಭುಗಳು, ಪಾಳೇಗಾರರಾದ ಆವತಿಯ ನಾಡಪ್ರಭುಗಳು, ದೊಡ್ಡಬಳ್ಳಾಪುರದ ಪಾಳೇಗಾರರು, ಸುಗುಟೂರು ಪ್ರಭುಗಳ ಆಳ್ವಿಕೆಯಲ್ಲಿ ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ತಾಲ್ಲೂಕಿನಲ್ಲಿ ರಕ್ಷಣೆ ದೃಷ್ಟಿಯಿಂದ ಹಲವು ಕೋಟೆಗಳು ರಚನೆಯಾಗಿದ್ದು, ಒಂದೆರಡು ಕೋಟೆಗಳನ್ನು ಬಿಟ್ಟರೆ ಉಳಿದವುಗಳೆಲ್ಲ ಶಿಥಿಲ ವ್ಯವಸ್ಥೆಯಲ್ಲಿದೆ. ಪಾಳೇಗಾರರು, ನಾಡಪ್ರಭುಗಳು ಸಣ್ಣ ಪುಟ್ಟ ಮನೆತನಗಳಾಗಿದ್ದರಿಂದ ತಮ್ಮ ಆದಾಯಕ್ಕೆ ಅನುಗುಣವಾಗಿ ತಮ್ಮದೇ ಆದ ರೀತಿಯಲ್ಲಿ ಕೋಟೆ–ಕೊತ್ತಲಗಳನ್ನು ನಿರ್ಮಿಸಿ ಕೊಂಡಿದ್ದಾರೆ. ಹೊಸದಾಗಿ ಕೋಟೆಗಳನ್ನು ನಿರ್ಮಿಸುವಾಗ ಶೈವ ಮತ್ತು ವೈಷ್ಣವ ದೇವಾಲುಯಗಳನ್ನು ಪ್ರತ್ಯೇಕವಾಗಿ ಒಂದೇ ಪ್ರಕಾರದಲ್ಲಿ ನಿರ್ಮಿಸಿರುವುದನ್ನು ಯಲಹಂಕ, ದೇವನಹಳ್ಳಿ, ಹೊಸಕೋಟೆಯಲ್ಲಿ ಕಾಣಬಹುದು. ಬಹು ಮುಖ್ಯವಾಗಿ ಪಾಳೇಗಾರರ ಕಾಲದಲ್ಲಿ ನಿರ್ಮಾಣಗೊಂಡಿದ್ದ ಬಹುತೇಕ ಕೋಟೆಗಳು ಬಿಜಾಪುರ ಸುಲ್ತಾನರು, ಮರಾಠಿಗರು, ಮೊಘಲ್, ಹೈದರ್, ಟಿಪ್ಪು, ಬ್ರಿಟಿಷ್ ದಾಳಿಗೆ ಸಿಕ್ಕಿ ಪತನಗೊಂಡಿದೆ.

ಜಿಲ್ಲಾ ವ್ಯಾಪ್ತಿಯಲ್ಲಿನ ಸ್ಥಳನಾಮಗಳ ಆಧಾರದ ಮೇಲೆ ಈ ಹಿಂದೆ ಕೋಟೆಯಿದ್ದವು ಎಂದು ತಿಳಿಯಲು ನೆಲಮಂಗಲ ತಾಲ್ಲೂಕಿನ ಮೊದಲಕೋಟೆ, ಬಿಲ್ಲನಕೋಟೆ, ದೊಡ್ಡಬಳ್ಳಾಪುರ ತಾಲ್ಲೂಕಿನ ಶ್ರೀಕೋಟೆ, ಮಲೆಕೋಟೆ, ಗಲಿಬಿಲಿಕೋಟೆ, ಕಲ್ಲುಕೋಟೆ, ದೇವನಹಳ್ಳಿ ತಾಲ್ಲೂಕಿನ ಬೆಟ್ಟಕೋಟೆ, ವೆಂಕಟಗಿರಿ ಕೋಟೆ, ನಲ್ಲೂರು ಕೋಟೆ, ಹೊಸಕೋಟೆ ತಾಲ್ಲೂಕಿನ ಹೊಸಕೋಟೆ ಹೀಗೆ ಕೋಟೆಯೊಂದಿಗೆ ಅಂತ್ಯವಾಗುವ ಗ್ರಾಮನಾಮಗಳನ್ನು ಮತ್ತು ಕೆಲವು ಗ್ರಾಮಗಳಲ್ಲಿ ಕೋಟೆಯಿರುವುದಕ್ಕೆ ಈಗಲೂ ಸಹ ಕೋಟೆ ಬೀದಿ, ಕೋಟೆ ದೇವಸ್ಥಾನ, ಕೋಟೆ ಬಾಗಿಲು ಇತ್ಯಾದಿ ಹೆಸರುಗಳು ಈಗಲೂ ಪ್ರಚಲಿತದಲ್ಲಿರುವುದನ್ನು ಗಮನಿಸಿದರೆ ಹಿಂದೆ ಕೋಟೆಯಿದ್ದುದ್ದರಿಂದ ಆ ಹೆಸರುಗಳು ಬಳಕೆಗೆ ಬಂದಿರುವುದು ಖಚಿತವಾಗುತ್ತದೆ. ಆದರೆ ಈ ಎಲ್ಲಾ ಪ್ರದೇಶಗಳಲ್ಲಿ ಹಿಂದೆ ಕೋಟೆ ಇದ್ದಿರ ಬಹುದಕ್ಕೆ ಕೆಲವು ಕಡೆ ಅವಶೇಷಗಳಿದ್ದರೆ, ಇನ್ನು ಕೆಲವು ಕಡೆ ಯಾವ ಅವಶೇಷಗಳು ದೊರೆತಿಲ್ಲ ಎಂಬುದೇ ದುರಾದೃಷ್ಟ.

**ಮಣ್ಣೆ** :– ನೆಲಮಂಗಲ ತಾಲ್ಲೂಕಿನಿಂದ ೨೫ ಕಿ.ಮೀ. ದೂರದಲ್ಲಿನ ತ್ಯಾಮಗೊಂಡ್ಲು ಹೋಬಳಿಯ ಮಣ್ಣೆಯು ಗಂಗರ ತಾತ್ಕಾಲಿಕ ರಾಜಧಾನಿಯಾಗಿದ್ದು, ಮಣ್ಣೆಯಲ್ಲಿ ಎತ್ತರವಾದ ಮಣ್ಣಿನ ದಿಬ್ಬ ಬಿಟ್ಟರೆ, ಕೋಟೆ ಇದ್ದಿದಕ್ಕೆ ಯಾವುದೇ ಅವಶೇಷಗಳಿಲ್ಲ. ಆದರೆ ಮಣ್ಣೆಯಲ್ಲಿ ಕೋಟೆಯಿದ್ದಿದ್ದರ ಬಗ್ಗೆ ಮೊದಲ ಬಾರಿಗೆ ಮರಳಕುಂಟೆ ಶಾಸನವು ಉಲ್ಲೇಖಿಸಿದ್ದು, ಶಿವಕುಮಾರ ಕಾಲಕ್ಕಾಗಲೇ ಕೋಟೆಯು ಇದ್ದು ಕಾಲಾಂತರದಲ್ಲಿ ನಾಶವಾಗಿರ ಬೇಕು. ಬಹುಶಃ ಮಣ್ಣೆ ಮತ್ತು ಮರಳುಕುಂಟೆ ಮಧ್ಯದಲ್ಲಿರುವ ದುಗ್ಗಲಮ್ಮ ಗುಡ್ಡದಲ್ಲಿ ಇದ್ದಿರಬೇಕು.

**ಬಿಲ್ಲನಕೋಟೆ** :– ಬೆಂಗಳೂರಿಂದ ತುಮಕೂರಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿ ೪ ರಲ್ಲಿ ಬೆಂಗಳೂರಿಂದ ೪೭ ಕಿ.ಮೀ, ನೆಲಮಂಗಲದಿಂದ ೨೦ ಕಿ.ಮೀ. ದೂರದಲ್ಲಿ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ ಬಿಲ್ಲನಕೋಟೆ ಗ್ರಾಮವಿದೆ. ಪಾಳೇಗಾರರು ಕೋಟೆಯಲ್ಲಿ ಯುದ್ಧಕ್ಕೆ ಬೇಕಾದ ಬಿಲ್ಲುಗಳನ್ನು ತಯಾರಿಸುತಿದ್ದರಿಂದ ಕೋಟೆಗೆ ಬಿಲ್ಲಿನ ಕೋಟೆ ಎಂಬ ಹೆಸರು ಬಂತ್ತು ಎಂದು ಸ್ಥಳೀಯರು ಹೇಳುತ್ತಾರೆ. ಬಿಲ್ಲಿನಕೊಡೆ[೨೨೯], ಬಿಲನಕೋಟೆ[೨೩೦] ಎಂದು ಶಾಸನದಲ್ಲಿಯೇ ಬಿಲನಕೋಟೆ ಉಲ್ಲೇಖವಾಗಿರುವುದನ್ನು ಗಮನಿಸಿದರೆ ಕೋಟೆಯಿರುವುದು ಖಚಿತವೆನಿಸುತ್ತದೆ. ಆದರೆ ಈಗ ಕೋಟೆಯ ಅವಶೇಷಗಳು ಮಾತ್ರ ಉಳಿದಿದೆ.

**ಮೊದಲಕೋಟೆ** :– ನೆಲಮಂಗಲದಿಂದ ೧೪ ಕಿ.ಮಿ.ದೂರದಲ್ಲಿ ಮೊದಲಕೋಟೆ ಗ್ರಾಮವಿದ್ದು, ಶಾಸನದಲ್ಲಿ ಮೊದಲಕೋಟೆ ಎಂದು ಕೋಟೆಯ ಬಗ್ಗೆ ಉಲ್ಲೇಖಿಸುತ್ತದೆ[೨೩೧]. ಆದರೆ ಈಗ ಕೋಟೆಯ ಯಾವ ಅವಶೇಷಗಳೇನು ಇಲ್ಲ, ಗ್ರಾಮನಾಮ ಮತ್ತು ಶಾಸನಾಧರದ ಮೇಲೆ ಕೋಟೆ ಇತ್ತು ಎಂದು ಸಮರ್ಥಿಸ ಬಹುದು.

**ನಿಜಗಲ್ಲು ಕೋಟೆ**:– ಹೊಯ್ಸಳರ ಕಾಲದಲ್ಲಿ ಪುರವಾಗಿ, ವಿಜಯನಗರ ಕಾಲದಲ್ಲಿ ಸ್ಥಳವಾಗಿ, ಮೈಸೂರು ಒಡೆಯರ ಕಾಲದಲ್ಲಿ ಅಠಾರ ಕಛೇರಿಯ ಶಾಖೆಯಾಗಿ, ಹೋಬಳಿಯಾಗಿ, ತಾಲ್ಲೂಕಾಗಿ, ಪಂಚಾಯಿತಿಯಾಗಿ ಪ್ರಸ್ತುತ ಒಂದು ಗ್ರಾಮವಾಗಿರುವ ನಿಜಗಲ್ಲನ್ನು ಶಾಸನಗಳಲ್ಲಿ ಹೊಯ್ಸಳರ ಕಾಲದಲ್ಲಿ ನಿಜಗಲಿಪುರ ಎಂದು, ವಿಜಯನಗರ ಕಾಲದಲ್ಲಿ ಶೂರಗಿರಿ, ಶರಗಿರಿ, ಸೂರಗಿರಿ ಎಂದು, ಮೈಸೂರು ಒಡೆಯರ ಕಾಲದಲ್ಲಿ ನಿಜಗಲ್ಲು ಎಂದು ಕರಿಯುವ ನಿಜಗಲಿಪುರಕ್ಕೆ ಪ್ರತಿನಾಮವಾದ ಶೂರಗಿರಿದುರ್ಗ ಎಂದು ಉಲ್ಲೇಖಿಸಲಾಗಿದೆ. ನೆಲಮಂಗಲದಿಂದ ಸುಮಾರು ೨೫ ಕಿ.ಮೀ.ದೂರದಲ್ಲಿನ

[೨೨೯] ಎ.ಕ-೯, ನೆ.ತಾ.೭೧, ಕ್ರಿ.ಶ.೧೫೦೭, ಬಿಲ್ಲಿನಕೋಟೆ.
[೨೩೦] ಎ.ಕ-೯, ನೆ.ತಾ.೭೨, ಕ್ರಿ.ಶ.೧೫೫೧, ಬಿಲ್ಲಿನಕೋಟೆ.
[೨೩೧] ಎ.ಕ-೯, ನೆ.ತಾ.೪೪, ಮೊದಲಕೋಟೆ.

ನಾಲ್ಕನೇಯ ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲೇ ದಾಬಸ್‌ಪೇಟೆ ಸನಿಹದಲ್ಲಿ ನಿಜಗಲ್ಲು ದುರ್ಗ, ಹಳೇ ನಿಜಗಲ್ಲು ಎಂಬ ಗ್ರಾಮಗಳಿವೆ.

ನೆಲದ ಮಟ್ಟದಿಂದ ೧೦೮೫ ಮೀಟರ್ (೩೫೭೨ ಅಡಿ) ಎತ್ತರವಾಗಿರುವ ನಿಜಗಲ್ಲು ದುರ್ಗಕ್ಕೆ ರಸ ಸಿದ್ಧರಬೆಟ್ಟ, ಉದ್ದಂಡಯ್ಯನ ಬೆಟ್ಟವೆಂದು ಸಹ ಕರೆಯುತ್ತಾರೆ. ನಿಜಗಲ್ಲು ಬೆಟ್ಟವನ್ನು ಪೂರ್ವ, ದಕ್ಷಿಣ ಭಾಗಗಳಿಂದ ಮಾತ್ರ ಹತ್ತಲು ಸಾಧ್ಯವಿದ್ದು, ಪಶ್ಚಿಮ ಭಾಗ ಅತಿ ಕಡಿದಾಗಿಯೂ, ಉತ್ತರಭಾಗ ಇಳಿಜಾರಾಗಿಯೂ ಇರುವುದರಿಂದ ಶತೃಗಳು ವಶಪಡಿಸಿಕೊಳ್ಳಲು ಸಾಧ್ಯವಿಲ್ಲ. ನಿಜ+ಕಲಿ= ನಿಜಗಲಿ, ನಿಜವಾದ ಕಲಿಗಳು ಇದ್ದಿರಬೇಕು ಹಾಗೂ ಪ್ರತಿನಾಮವಾದ ಶೂರಗಿರಿ ದುರ್ಗ ಎಂದು, ಇದೊಂದು ಗಡಿ ಪ್ರದೇಶವಾಗಿದ್ದು ಯಾವಾಗಲೂ ದುರ್ಗವನ್ನು ವಶಪಡಿಸಿಕೊಳ್ಳಲು, ಮರಾಠರು, ಮೈಸೂರು ಅರಸರು, ಬ್ರಿಟೀಷರ ನಡುವೆ ಪೈಪೋಟಿ ಇದ್ದುದ್ದರಿಂದಲೇ ಇದಕ್ಕೆ ಶೂರಗಿರಿ ಎಂಬ ಪ್ರತಿನಾಮ ಬಂದಿರಬೇಕು.

ಕೋಟೆಯ ಪೂರ್ವ, ದಕ್ಷಿಣ ಭಾಗಗಳು ಮಾತ್ರಯಿದ್ದು, ಹೊಯ್ಸಳ ವಿಜಯನಗರ, ಮರಾಠ, ಮೈಸೂರು ಒಡೆಯರ ಆಳ್ವಿಕೆ ಒಳಪಟ್ಟ ನಿಜಗಲ್ಲಿನಲ್ಲಿ ಲಕ್ಷ್ಮಿನರಸಿಂಹ, ವೀರಭದ್ರ, ಮಲ್ಲಿಕಾರ್ಜುನ, ಗಣಪತಿ ದೇವಾಲಯಗಳಿವೆ. ಸದಾಶಿವರಾಯ ದಳವಾಯಿಗಳಾದ ಕೆಂಪರಾಜಯ್ಯ, ಚಿಕ್ಕದೇವರಾಜ ಒಡೆಯರ ಸೇವಕನಾಗಿ ದಾಸರಾಜಯ್ಯರು ಆಡಳಿತ ನಡೆಸಿ ದೇವಾಲಯಗಳಿಗೆ ದಾನ ನೀಡಿದ್ದಾರೆ. ದಾಸರಾಜಯ್ಯನಿಗೆ ನಿಜಗಲ್ಲು ದುರ್ಗಸೀಮೆಯ ಆಡಳಿತಾಧಿಕಾರವನ್ನು ಕ್ರಿ.ಶ.೧೬೯೮ ರಿಂದ ೧೭೨೦ ರವರೆಗೆ ನಿರ್ವಹಿಸಿರ ಬೇಕು.

ಕ್ರಿ.ಶ.೧೬೯೮ ರಲ್ಲಿ ಚಿಕ್ಕದೇವರಾಜ ಒಡೆಯರ ಸೇವಕನಾದ ಕೆಂಪರಾಜಯ್ಯನವರ ಕೊಮಾರ ಬಿಳುಗಿಲಿ ದಾಸರಾಜಯ್ಯನು ನಿಜಗಲು ಎನಿಸಿಕೊಂಡಿರುವ ಪ್ರತಿನಾಮಾಂಕಿತ ಹೊಂದಿದ ಶೂರಗಿರಿದುರ್ಗಕ್ಕೆ ಕಲ್ಲುಕೋಟೆ ಕಟ್ಟಿಸಲು ಪ್ರಾರಂಭ ಮಾಡಿದ್ದರ ಬಗ್ಗೆ ನಿಖರವಾದ ಮಾಹಿತಿಯನ್ನು[೨೩೨] ಬೆಟ್ಟದ ಮೇಲಿನ ಅಕ್ಕ-ತಂಗಿಯ ಕೋಣೆ ಬಳಿಯ ಅರೆ ಬಂಡೆಯ ಮೇಲಿನ ಶಾಸನದಲ್ಲಿ ಕಾಣಬಹುದು. ಕ್ರಿ.ಶ.೧೭೦೫ ರಲ್ಲಿ ಕೋಟೆ-ಕೊತ್ತಲಗಳು, ಪೂರ್ವ ದಿಕ್ಕಿನ ಊರಬಾಗಿಲಾದ ಹುಲಿಮುಖ ಬಾಗಿಲು, ಹಜಾರದ ಚಾವಡಿಯನ್ನು ಮತ್ತು ದಕ್ಷಿಣ ದಿಕ್ಕಿನ ಊರ ಬಾಗಿಲಾದ ಆಗಸ ಬಾಗಿಲು, ಬಾಗಿಲ ಬಳಿ ಒಂದು ವಿಷ್ಣೇಶ್ವರ ಗುಡಿ ಪ್ರತಿಷ್ಟಾಪಿಸಿದ[೨೩೩] ವಿವರವನ್ನ ಬೆಟ್ಟದ ಮೇಲೆ ಶ್ರೀ ಪರಮೇಶ್ವರ ದೇವರ ಗುಡಿಯ ಬಲಭಾಗದ ಗೋಡೆ ಬಂಡೆ ಮೇಲಿರುವ ಶಾಸನದಲ್ಲಿ ದಾಖಲಾಗಿದೆ. ಹೀಗೆ ಶಾಸನದಲ್ಲಿ

[೨೩೨] ಎ.ಕ-೯, ನೆ.ತಾ.೬೬, ಕ್ರಿ.ಸ.೧೬೯೮, ನಿಜಗಲ್ಲು.
[೨೩೩] ಎ.ಕ-೯, ನೆ.ತಾ.೬೫, ಕ್ರಿ.ಶ.೧೭೦೫, ನಿಜಗಲ್ಲು.

ಕೋಟೆ ಮತ್ತು ಕೋಟೆಯ ಬಾಗಿಲು, ಬಾಗಿಲು ಬಳಿಯ ಗುಡಿ ನಿರ್ಮಾಣದ ಕಾರ್ಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ವಿವರವಾದ ಮಾಹಿತಿಯನ್ನು ಮತ್ತು ಕೋಟೆಯ ಒಳಗೆ ಪಾಳೇಗಾರರಿಗೆ ಸೇರಿದ ಫಿರಂಗಿ, ಮದ್ದು ಗುಂಡು ಸಂಗ್ರಹ, ರಾಗಿ ಕಣಜ, ನೀರಿನ ದೋಣಿಗಳನ್ನು ಈಗಲೂ ಸಹ ನೋಡಬಹುದು.

ನಿಜಗಲ್ಲು ದುರ್ಗವು ಗಡಿಯ ಸೀಮೆಯಾಗಿದ್ದು. ಶಿರ, ಕುಣಿಗಲ್, ರಾಮನಗರ, ಮಾಗಡಿ, ಮೈಸೂರುಗಳಿಗೆ ಈ ಭಾಗದಿಂದ ಆ ಭಾಗಕ್ಕೆ ಹೋಗಲು ನಿಜಗಲ್ಲನ್ನೆ ಅವಲಂಭಿಸಬೇಕಾಗುತ್ತಿತ್ತು. ಮಾರ್ಗಮಧ್ಯದಲ್ಲಿನ ಈ ಚಿಕ್ಕದುರ್ಗವನ್ನು ಗೆದಿಯದೆ ಮುಂದೆ ಸಾಗುವಂತಿರಲಿಲ್ಲ. ಅದಕ್ಕಾಗಿ ಚಿಕ್ಕದೇವರಾಜ ಒಡೆಯರು ಮೊದಲಿದ್ದ ಮಣ್ಣಿನ ಕೋಟೆಯ ಬದಲಿಗೆ ಕಲ್ಲಿನ ಕೋಟೆಯನ್ನು ಕಟ್ಟಲು ಅದಕ್ಕೊಬ್ಬ ದಳವಾಯಿಯನ್ನು ನೇಮಿಸಿದರು. ದಳವಾಯಿಯಾದ ದಾಸರಾಜಯ್ಯನು ಸುಮಾರು ೭ ವರ್ಷಗಳ ಆವಧಿಯಲ್ಲಿ ಕಲ್ಲಿನ ಕೋಟೆಯನ್ನು ನಿರ್ಮಿಸಿದನು. ಈ ದಳವಾಯಿಯು ಕ್ರಿ.ಶ.೧೬೯೮ರಿಂದ ೧೭೨೦ ರ ವರೆಗೆ ನಿಜಗಲ್ಲು ದುರ್ಗ ಸೀಮೆಯ ಆಡಳಿತವನ್ನು ನಿರ್ವಹಿಸಿರಬೇಕು. ಕೃಷ್ಣದೇವರಾಯ ವಡೆಯರ ಕಾಲದಲ್ಲೂ ಸಹ ದುರ್ಗವು ಗಡಿ ಸೀಮೆಯಾಗಿ ಮಾನ್ಯತೆ ಪಡೆದಿತ್ತು. ದುರ್ಗಕ್ಕಾಗಿ ಮರಾಠರು, ಬ್ರಿಟೀಷರು ಮತ್ತು ಹೈದಾರಾಲಿ ನಡುವೆ ಜಗಳಗಳು ನಡೆಯುತ್ತಲೇ ಇದ್ದವು. ಹೈದಾರಾಲಿಯು ಗಡಿ ಸೀಮೆಗಳ ಬಲವರ್ಧನೆಗಾಗಿ ಮರಾಠರೊಂದಿಗೆ ರಾಜಿಗೆ ಇಳಿದು ನಂತರ ಯುದ್ದದಲ್ಲಿ ಸೋತನು. ಮರಾಠ ಮಾಧವರಾಯನು ಹೈದರಾಲಿಯನ್ನು ಸೋಲಿಸಿ ನಿಜಗಲ್ಲು ದುರ್ಗವನ್ನು ವಶಪಡಿಸಿಕೊಳ್ಳಲು ಚಿತ್ರದುರ್ಗದ ಮದಕರಿ ನಾಯಕನನ್ನು ಕೇಳಿದನಂತೆ. ಇದರಂತೆ ನಾಯಕರ ಬೇಡರ ಪಡೆ ಯುದ್ಧ ಗೆಲ್ಲಲು ಪ್ರಮುಖ ಪಾತ್ರ ವಹಿಸಿತ್ತು.

ಕಾಲಾನುಕ್ರಮಾಣದಲ್ಲಿ ಪೇಶ್ವೆ ಮಾಧವರಾಯ, ಹೈದರಾಲಿ, ಮುಮ್ಮಡಿ ಕೃಷ್ಣರಾಜ ಒಡೆಯರ್ ನಿಜಗಲ್ಲಿನ ಆಡಳಿತವನ್ನು ನಡೆಸಿದರು. ಅನಂತರ ಬ್ರೀಟಿಷರು ಮೈಸೂರು ಮಹಾರಾಜರೊಡನೆ ಮಾಡಿಕೊಂಡ ಒಪ್ಪಂದದಂತೆ ಅನುಕೂಲಕರವಲ್ಲದ ಕೋಟೆಗಳನ್ನು ನಾಶ ಮಾಡುವಾಗ ನಿಜಗಲ್ಲಿನ ಕೋಟೆಯು ನಾಶವಾಗಿರಬೇಕು. ಕ್ರಿ.ಶ.೧೮೩೧ ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಅಧಿಕಾರ ವಹಿಸಿಕೊಂಡ ಬ್ರಿಟೀಷ್ ಕಾಲದಲ್ಲಿ ನಿಜಗಲ್ಲು ತಾಲ್ಲೂಕು ಕೇಂದ್ರವಾಗಿ, ನಂತರ ಕೆಲವು ವರ್ಷಗಳ ಕಾಲ ನಿಜಗಲ್ಲು ಹೋಬಳಿ ಕೇಂದ್ರವಾಗಿ, ಸೋಂಪುರ ಹೋಬಳಿಯಾದ ಮೇಲೆ ನಿಜಗಲ್ಲು ಅದಕ್ಕೆ ಸೇರಿತು. ೧೯೫೯ ರ ವರೆಗೆ ನಿಜಗಲ್ಲು ಗ್ರಾಮ ಪಂಚಾಯಿತಿಯ ಕೇಂದ್ರವಾಗಿತ್ತು.

ಮಾರ್ಕ್ ವಿಕ್ಸ್ (ಹಿಸ್ಟರಿ ಆಫ್ ಮೈಸೂರ್ ಮತ್ತು ಹೈದರ್‌ನಾಮಗಳು) ಎಂಬ ಆಂಗ್ಲ ಇತಿಹಾಸಕಾರ ಹೇಳುವಂತೆ ನಿಜಗಲ್ಲು ಬೆಟ್ಟದ ತುತ್ತತುದಿಯಲ್ಲಿ ಕೋಟೆಯನ್ನು ನಿರ್ಮಿಸಲಾಗಿತ್ತು. ಅರ್ಧಗೋಳಾಕೃತಿಯಲ್ಲಿ ಬೃಹತ್ತಾಗಿ, ಇಳಿಜಾರಿನ ಹೆಬ್ಬಂಡೆಗಳಿಂದ ೪ ದಿಕ್ಕುಗಳಲ್ಲಿ ಆವೃತ್ತವಾಗಿತ್ತು. ಈ ರೀತಿಯ ಕೋಟೆಗಳಿಂದಾಗಿ ಶತೃಗಳ ಆಕ್ರಮಣ ಕಷ್ಟವಾಗಿತ್ತು. ಕೋಟೆಯ ಎತ್ತರ ಸಿಡಿಮದ್ದಿಗೆ ಎಟುಕುವಂತಿರಲಿಲ್ಲ. ಕುದಿಯುವ ಎಣ್ಣೆ ಹಾಗೂ ನೀರು, ಕೋಟೆಯ ಹೊರಭಾಗದ ಕೋಟೆಯ ರಕ್ಷಣೆಗೆ ಸದಾ ಸಿದ್ಧವಾಗಿರುತ್ತಿತ್ತು. ಅಲ್ಲದೇ ಕೋಟೆಯ ಮೇಲ್ಭಾಗದಲ್ಲಿ ಪ್ರತ್ಯೇಕವಾಗಿ ನಿರ್ಮಿಸಿಲಾಗಿದ್ದ ಗುಂಡಿಗಳಿಂದ ಹೊಲಸನ್ನು ಹೊರಗೆ (ಶತೃಗಳ ಮೇಲೆ) ಎರಚ್ಚಲು ಸಿದ್ಧರಿಟ್ಟಿದ್ದರು. ಮಣ್ಣು, ಮರಳು, ಜಲ್ಲಿಪುಡಿಯಿಂದ ಕಟ್ಟಲಾಗಿದ್ದ ಗೋಳಾಕಾರದ ಬುರುಜು ಕಾವಲು ಗೋಪುರದಂತ್ತಿತ್ತು. ದಿನನಿತ್ಯವು ಈ ಗೋಪುರದಲ್ಲಿ ಸೈನಿಕರು ಗಸ್ತು ಮಾಡುತ್ತಿದ್ದರು. ಹೆಚ್ಚಿನ ಸುರಕ್ಷತೆಯ ದೃಷ್ಠಿಯಿಂದ ಕೋಟೆಯ ನೀರಿನ ಆಶ್ರಯದಲ್ಲಿ ಮೊಸಳೆಗಳನ್ನು ಸಾಕಲಾಗುತ್ತಿತ್ತು. ನೀರಿಗಾಗಿ ರಸಸಿದ್ದರ ದೋಣಿ, ಕಂಚಿನ ದೋಣಿ, ಅಕ್ಕ–ತಂಗಿಯರ ದೋಣಿಗಳು. ತುಮಕೂರು, ಮಧುಗಿರಿ, ಶಿರಾ ಮೊದಲಾದ ಸ್ಥಳಗಳಿಂದ ಮೈಸೂರಿನ ಕಡೆಗೆ ಹೋಗ ಬೇಕಾದರೆ ನಿಜಗಲ್ಲನ್ನು ದಾಟಿ ಮಾಗಡಿ, ರಾಮನಗರ ಮುಖಾಂತರ ಹೋಗ ಬೇಕಾಗಿತ್ತು. ಮುಮ್ಮಡಿಕೃಷ್ಣರಾಜ ಒಡೆಯರ್ ಕಾಲದಲ್ಲಿ ನಿಜಗಲ್ಲು ಅಠರ ಕಛೇರಿಯಂತೆ ಕಾರ್ಯ ನಿರ್ವಹಿಸುತ್ತಿತ್ತು[೨೩೪].

ನೆಲಮಂಗಲ ತಾಲ್ಲೂಕಿನ ಮಣ್ಣೆ, ಹೆಗ್ಗುಂದ, ಕಂಬಾಳು, ನರಸೀಪುರ, ಮಾಚನಹಳ್ಳಿ, ಗೊಟ್ಟಿಕೆರೆ, ತೆಪ್ಪದ ಬೇಗೂರು, ಶಿವಗಂಗೆ. ತ್ಯಾಮಗೊಂಡ್ಲು, ದಾಬಸ್‌ಪೇಟೆ, ನೆಲಮಂಗಲ, ತ್ಯಾಮಗೊಂಡ್ಲು, ಸೊಂಡೇಕೊಪ್ಪ, ತುಮಕೂರು ಜಿಲ್ಲೆಯ ತುಮಕೂರು, ಸಿರಾ, ಕೊರಟಗೆರೆ ತಾಲ್ಲೂಕಿನ ಕೋಳಾಲ ಮುಂತಾದ ಗ್ರಾಮಗಳು ಸೇರಿದ್ದವು. ಪೂರ್ವದಲ್ಲಿ ತೆಪ್ಪದ ಬೇಗೂರಿನಿಂದ ಪಶ್ಚಿಮದಲ್ಲಿ ಸೋಂಪುರದವರೆಗೆ, ಉತ್ತರದಲ್ಲಿ ಕೋಳಾಲದಿಂದ ದಕ್ಷಿಣ ಕಂಬಾಳು ವರೆಗಿನ ವ್ಯಾಪ್ತಿಯಲ್ಲಿ ನಿಜಗಲ್ಲು ದುರ್ಗದ ಸೀಮೆ ಆಥವಾ ಶೂರಗಿರಿ ಸ್ಥಳ ಹಬ್ಬಿತ್ತು.

**ದೊಡ್ಡಬಳ್ಳಾಪುರ ಕೋಟೆ :–** ಬೆಂಗಳೂರು ಉತ್ತರಕ್ಕೆ ೩೯ ಕೀ.ಮಿ.ದೂರದಲ್ಲಿನ ದೊಡ್ಡಬಳ್ಳಾಪುರದ ಕೋಟೆಯನ್ನು ಆವತಿ ಮನೆತನದ ಮಲ್ಲ ಭೈರೇಗೌಡನು ೧೫೧೦ರಲ್ಲಿ ಕಟ್ಟಿಸಿದನು. ೧೬೩೭–೩೮ರಲ್ಲಿ ರಣದುಲ್ಲಾಖಾನ್‌ನ ನೇತೃತ್ವದ ಬಿಜಾಪುರದ ಸೈನ್ಯ ವಶಪಡಿಸಿಕೊಂಡಿತ್ತು, ನಂತರ ೧೬೭೭ರಲ್ಲಿ ಷಾಜಿಯ ಜಹಾಗಿರಿನ ಭಾಗವಾಗಿ ಮರಾಠರ ದಾಳಿಗೂ ಬಲಿಯಾಯಿತ್ತು. ೧೬೮೯ರಲ್ಲಿ ಮೊಗಲರು ಮುತ್ತಿಗೆ

[೨೩೪] ವೇದಾವತಿ ಎಸ್.ಬಾಲು :- ಮೈಸೂರು ಸಂಸ್ಥಾನದ ಗಡಿರಾಜ್ಯ ನಿಜಗಲ್ಲು, ಇ.ದ.೨೬, ೪೦೭, ೪೦೮, ೪೦೯.

ಹಾಕಿದರು. ಕ್ರಿ.ಶ.೧೬೯೧ ರ ಫಾರ್ಸಿ ಶಾಸನದಲ್ಲಿ ಮೊಗಲರ ದೊರೆ ಔರಂಗಜೇಬನು ದೊಡ್ಡಬಳ್ಳಾಪುರ ಒಳಗೊಂಡಂತೆ ವಿಸ್ತಾರವಾದ ಪ್ರದೇಶವನ್ನು ಅಲಿ ಖುಲಿ ಖಾನ್‌ನಿಗೆ ಜಾಗೀರಾಗಿ ನೀಡಲಾಗಿತ್ತು. ಅಲಿ ಖುಲಿ ಖಾನ್‌ನ ಮರಣದ ನಂತರ ಸಿರಾದ ದರ್ಗಖುಲಿಖಾನ್‌ಗೆ ಜಹಾಗೀರನಾಗಿ ನೀಡಲಾಗಿತ್ತು[೨೩೫]. ನಂತರ ನಿಜಾಮನು ವಶಪಡಿಸಿಕೊಂಡು ಅಬ್ಬಾಸ್‌ಖುಲಿಖಾನ್‌ಗೆ ಜಹಾಗಿರಾಗಿ ನೀಡಲಾಯಿತ್ತು. ನಂತರ ೧೭೬೧ರಲ್ಲಿ ಹೈದರ್‌ಅಲಿಯು ವಶಪಡಿಸಿಕೊಂಡನು[೨೩೬].

**ತೋಡಲಬಂಡೆ ಕೋಟೆ** :– ದೊಡ್ಡಬಳ್ಳಾಪುರದಿಂದ ೩೦ ಕಿ.ಮೀ. ದೂರದ ಸಾಸಲು ಗ್ರಾಮಕ್ಕೆ ಅಂಟಿದಂತೆ ತೋಡಲಬಂಡೆ ಗ್ರಾಮದ ಪ್ರಾರಂಭದಲ್ಲಿ ದೊಡ್ಡದಾದ ಏಕಶಿಲಾ ಬಂಡೆಯ ಮೇಲೆ ಒಂದು ಎಕರೆ ವಿಸ್ತೀರ್ಣದಲ್ಲಿ ಆಯಾತಾಕಾರದಲ್ಲಿ ಸಂಪೂರ್ಣ ಕಲ್ಲಿನಿಂದ ನಿರ್ಮಿಸಲಾದ ಸಣ್ಣ ಗಿರಿದುರ್ಗ ಕೋಟೆಯಲ್ಲಿ ಬುರುಗುಗಳೇನು ಇಲ್ಲ, ಕಣಶಿಲೆಯ ತುಂಡುಗಳು ಹಾಗೂ ಸಣ್ಣ ಸಣ್ಣ ಚಪ್ಪಡಿ ತುಂಡುಗಳನ್ನು ಒಂದರ ಮೇಲೋಂದು ಸೇರಿಸಿ ಬಂಧಕ ಸಾಮಾಗ್ರಿಗಳನ್ನು ಬಳಸದೆ ನಿರ್ಮಿಸಿರುವ ದಕ್ಷಿಣಾಭಿಮುಖವಾದ ಕೋಟೆಯಲ್ಲಿ ಎರಡು ದ್ವಾರಗಳಿದ್ದು, ಉತ್ತರ ದಿಕ್ಕಿನ ಗೋಡೆಯಲ್ಲಿ ಒಂದು ದೊಡ್ಡ ಮಹಾದ್ವಾರದ ಪಕ್ಕದಲ್ಲಿ ಒಂದು ಸಣ್ಣ ಬಾಗಿಲಿದೆ. ಕೋಟೆಗೆ ಇರುವ ಮೂರು ಚಿಕ್ಕ ಬಾಗಿಲಗಳಲ್ಲಿ, ಒಂದು ದಕ್ಷಿಣ ದಿಕ್ಕಿನ ಪ್ರವೇಶ ದ್ವಾರದ ಪಕ್ಕದಲ್ಲಿದ್ದರೆ, ಇನ್ನೇರಡು ಉತ್ತರ ಮತ್ತು ಪಶ್ಚಿಮ ದಿಕ್ಕಿನಲ್ಲಿದೆ. ಆದರೆ ಇವುಗಳಲ್ಲಿ ಪ್ರವೇಶ ದ್ವಾರದ ಪಕ್ಕದಲ್ಲಿರುವ ಚಿಕ್ಕ ಬಾಗಿಲು ಮಾತ್ರ ಉಳಿದು ಕೊಂಡಿದೆ. ಉಳಿದೆರಡು ಚಿಕ್ಕ ಬಾಗಿಲುಗಳ ಅವಶೇಷಗಳು ಮಾತ್ರ ಕಾಣಿಸುತ್ತದೆ.

ಸುಮಾರು ೧೦–೧೨ ಅಡಿ ಎತ್ತರವಾದ ಗೋಡೆಯಿದ್ದು, ಕೋಟೆಯ ಪೂರ್ವ ದಿಕ್ಕಿನ ಗೋಡೆ ಶಿಥಿಲವಾಗಿ ಕುಸಿದಿದೆ. ಉಳಿದ ಭಾಗ ಸುಭದ್ರವಾಗಿದೆ. ಕೋಟೆಯ ಒಳಗೆ ಎರಡು ಚಿಕ್ಕದಾದ ಗುಡಿಗಳಿವೆ, ಒಂದು ವಿಗ್ರಹವಿಲ್ಲದ ಶ್ರೀರಾಮನ ಗುಡಿಯಾಗಿದ್ದು, ಎದುರಿಗಿನ ಕಂಬದ ಮೇಲೆ ಅಂಜನೇಯನ ಉಬ್ಬು ಶಿಲ್ಪವಿದೆ. ಇನ್ನೊಂದು ಗುಡಿಯಲ್ಲಿ ಯಾವುದೇ ವಿಗ್ರಹವಿಲ್ಲ, ಆದರೆ ಈ ಗುಡಿಯ ಬಾಗಿಲಿಗೆ ಮತ್ತು ನಾಲ್ಕು ಮೂಲೆಗಳಲ್ಲಿ ಉದ್ದವಾದ ಚಪ್ಪಡಿಗಳನ್ನು ನಿಲ್ಲಿಸಿ ಅದರ ಮೇಲೆ ಯಾವುದೇ ಅಲಂಕಾರವಿಲ್ಲದೆ ತೊಲೆಯನ್ನು ನಿಲ್ಲಿಸಿ, ಗುಡಿಯ ಮೇಲ್ಛಾವಣಿಗೆ ಚೌಕಾಕಾರದ ಒಂದು ಕಲ್ಲನ್ನು ಹಾಕಿರುವುದನ್ನು ಕಂಡರೆ ಗಂಗ, ಚೋಳರ ಕಾಲದ ದೇವಾಲಯಗಳ ಗರ್ಭಗೃಹಗಳ ರಚನಾ ಶೈಲಿಯಂತೆ ಕಂಗೊಳಿಸುತ್ತದೆ. ಶತ್ರುಗಳನ್ನು ಬಂಧನದಲ್ಲಿಡಲು ಕಿಲ್ಲೆಯನ್ನು ಬಳಸುತಿದ್ದರಂತೆ*, ದಟ್ಟವಾದ ಅರಣ್ಯಗಳಿಂದ ಕೂಡಿದ ಪ್ರದೇಶವಾಗಿದ್ದರಿಂದ ಬೇಟೆಯಾಡಲು ರಾಜವಂಶಸ್ಥರು ಈ ಸ್ಥಳಕ್ಕೆ ಬಂದಾಗ ಈ ಕಿಲ್ಲೆಯಲ್ಲಿ ವಿಶ್ರಾಂತಿ

[೨೩೫] ಎ.ಕ-೯, ದೊ.ತಾ.೩೧, ಕ್ರಿ.ಶ.೧೬೯೧, ಫಾರ್ಸಿ ಶಾಸನ, ದೊಡ್ಡಬಳ್ಳಾಪುರ.
[೨೩೬] ಸೂರ್ಯನಾಥ ಯು ಕಾಮಥ್:- ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩, ಪು.ಸಂ-೫೨೩.

ಪಡೆದು ಹೋಗುತ್ತಿದ್ದರಂತೆ** ಆದರೆ ಈ ಹೇಳಿಕೆಗಳಿಗೆ ಸಂಬಂಧಿಸಿದಂತೆ ಯಾವುದೇ ಸಾಕ್ಷ್ಯಗಳು ದೊರೆತಿಲ್ಲ. ಇದು ಕೇವಲ ಕಾಲ್ಪನಿಕ ಕಥೆಗಳು.

ಕೋಟೆಯಲ್ಲಿ ಚಿಕ್ಕದಾದ ಮದ್ದಿನ ಮನೆ ಅಥವಾ ಆಯುಧಗಳ ಸಂಗ್ರಹ ಕೊಠಡಿ, ರಾಗಿ ಕಣಜ, ಹಳೆಯ ದೊಡ್ಡ ಮನೆಯೊಂದರ ಅಡಿಪಾಯದ ಅವಶೇಷ, ನೀರಿನ ಆಸರೆಗಾಗಿ ಹಿಂಭಾಗದಲ್ಲಿ ನೈಸರ್ಗಿಕ ಸಿಹಿ ನೀರಿನ ದೋಣಿ ಇರುವುದನ್ನು ಗಮನಿಸಿದರೆ ಹಿಂದೆ ಈ ಪ್ರದೇಶವು ಜನವಸತಿಯ ನೆಲೆಯಾಗಿರಬೇಕು. ಹಾಗೇಯೆ ಕೋಟೆಯ ಹೊರ ಭಾಗವು ಇಳಿಜಾರಾದ, ಕಡಿದಾದ ಬಂಡೆಯಿಂದ ಕೂಡಿದ್ದು, ಶತ್ರುಗಳು ಸುಲಭವಾಗಿ ಪ್ರವೇಶಿಸಲು ಸಾಧ್ಯವಾಗುತ್ತಿರಲಿಲ್ಲ. ಅರಣ್ಯ ಮಧ್ಯದಲ್ಲಿ ಕೋಟೆಯಿದ್ದುದರಿಂದ ಶತ್ರುಗಳ ಕಣ್ಣಿಗೆ ಬೀಳದ ಕಾರಣದಿಂದಾಗಿ ಇಂದಿಗೂ ಸುರಕ್ಷಿತವಾಗಿ ಉಳಿದುಕೊಂಡಿದೆ. ಆದರೆ ತೋಡಲ ಬಂಡೆ ಕೋಟೆ ಬಗ್ಗೆ ಇದುವರೆಗೂ ಶಾಸನದಲ್ಲಾಗಲಿ, ಸಾಹಿತ್ಯ ಕೃತಿಗಳಲ್ಲಾಗಲಿ ಪ್ರಾಸ್ತಪವಿಲ್ಲ.

**ಹುಲುಕಡಿ ಬೆಟ್ಟ** :– ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡಬೆಳವಂಗಲ ಹೋಬಳಿಯಿಂದ ೬.೬ ಕಿ.ಮೀ. ದೂರದಲ್ಲಿನ ಸಕ್ಕರೆಗೊಲ್ಲಹಳ್ಳಿ ಸಮೀಪದಲ್ಲಿ ಹುಲುಕಡಿ ಗ್ರಾಮ ಮತ್ತು ಬೆಟ್ಟವಿದ್ದು. ಹುಲುಕಡಿಯನ್ನು ಶಾಸನದಲ್ಲಿ ಪುರುಡಿ[೨೩೭], ಪುರ್ಕೋಡಿ[೨೩೮], ಹುಲುಕಡಿ[೨೩೯] ಎಂದು ಕರೆಯಲಾಗಿದೆ. ಬೆಟ್ಟದ ಮೇಲೆ ಸುಮಾರು ೫ ರಿಂದ ೬ ಹೆಕ್ಟೇರ್‌ನಷ್ಟು ವಿಸ್ತಾರವಾದ ಸಮತಟ್ಟಾದ ಭೂಪ್ರದೇಶವಿದ್ದು, ಅದರ ಸುತ್ತಲೂ ಬೆಟ್ಟದ ಮೇಲಿನ ದೊಡ್ಡ ಬಂಡೆಗಳನ್ನೇ ತುಂಡರಿಸಿಕೊಂಡು ಒಂದರ ಮೇಲೊಂದು ಸೇರಿಸಿ ಗಿರಿದುರ್ಗ ಎಂದು ಕರೆಯುವ ಸುಭದ್ರವಾದ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆ ಗೋಡೆಯನ್ನು ಮಧ್ಯದಲ್ಲಿ ಕಲ್ಲು, ಮಣ್ಣುಗಳನ್ನು ತುಂಬಿ ಒಳ ಮತ್ತು ಹೊರ ಭಾಗದಲ್ಲಿ ಕಲ್ಲಿನ ತುಂಡುಗಳನ್ನು ಬಳಸಿಕೊಂಡು ಸುಮಾರು ೪ ರಿಂದ ೫ ಅಡಿಗಳಷ್ಟು ದಪ್ಪವಾಗಿ ನಿರ್ಮಿಲಾಗಿದೆ. ಕೋಟೆಯ ಸುತ್ತಲೂ ಪ್ರಭಾತವಿರುವುದರಿಂದ ಮೂಲೆಗಳಲ್ಲಿ ದೊಡ್ಡದಾದ, ಎತ್ತರವಾದ ಬುರುಜುಗಳನ್ನು ನಿರ್ಮಿಸಿ, ಅವುಗಳನ್ನೆ ಕಾವಲು ಗೋಪುರಗಳಾಗಿ ಬಳಸುತ್ತಿದ್ದರು ಎಂದೆನಿಸುತ್ತದೆ. ಮತ್ತೆ ಈ ಬುರುಜುಗಳ ಮೇಲೆ ನಿಂತು ನೋಡಿದರೆ ಬಹು ದೂರದವರೆಗಿನ ಪ್ರದೇಶವೆಲ್ಲ ಸ್ಪಷ್ಟವಾಗಿ ಕಾಣಿಸುತ್ತದೆ. ಪೂರ್ವ ಮತ್ತು ಉತ್ತರಕ್ಕೆ ಎರಡು ಮಹಾದ್ವಾರಗಳುಳ್ಳ ಕೋಟೆಯ ಮಧ್ಯದಲ್ಲಿ ಸುಭದ್ರವಾದ

[೨೩೭] ಸಾಸಲು ಜೆ ವಿಶ್ವನಾಥ್ ಮತ್ತು ಎಂ.ಜಿ.ಮಂಜುನಾಥ್:- ಐದು ಅಪ್ರಕಟಿತ ಶಾಸನಗಳು, ಇ.ದ.ಸಂ-೧೩, ಪುಟ-೩೧.

*. ಸ್ಥಳಿಯರ ಹೇಳಿಕೆಗಳು.

**. ಸ್ಥಳಿಯರ ಹೇಳಿಕೆಗಳು.

[೨೩೮] ಎ.ಕ-೯, ದೊ.ತಾ.೧೧, ಕ್ರಿ.ಶ.೧೧೧೫, ತಮಿಳು, ಹುಲ್ಲುಕಡಿ.

[೨೩೯] ಎ.ಕ-೯, ದೊ.ತಾ.೩೯, ಕ್ರಿ.ಶ.೧೩೬೭, ಅರಳುಮಲ್ಲಿಗೆ.

ಗೋಡೆಯುಳ್ಳ ಒಂದು ದೊಡ್ಡದಾದ ಕೋಣೆಗೆ ಬಾಗಿಲು, ಕಿಟಕಿಗಳಿಲ್ಲ ಸ್ಥಳೀಯರು ಮದ್ದಿನ ಮನೆಯೆಂದು ಕರೆಯುತ್ತಾರೆ. ಜೊತೆಗೆ ಸುಂದರವಾದ ನೀರಿನ ಕೊಳವಿದೆ. ಸೊಗಸಾದ ಕೋಟೆಯಲ್ಲಿ ವೀರಭದ್ರಸ್ವಾಮಿ ದೇವಾಲಯದೊಂದಿಗೆ ಬೆಟ್ಟದ ಸುತ್ತಲು ಬರೋಬ್ಬರಿ ಹನ್ನೊಂದು ದೇವಾಲಯಗಳಿವೆ, ಚೋಳರ ಶೈಲಿಯ ವೀರಭದ್ರಸ್ವಾಮಿ ದೇವಸ್ಥಾನದಲ್ಲಿನ ವೀರಭದ್ರ ಉತ್ತರಕ್ಕೆ ಮುಖ ಮಾಡಿರುವುದು ನಿಂತಿರುವ ವಿಶೇಷ. ಜೊತೆಗೆ ಬಸವಣ್ಣ, ಭದ್ರಕಾಳಮ್ಮ ಗುಡಿ ಇದೆ. ಬಯಲು ಸೀಮೆಯಲ್ಲಿನ ಕಾಡು, ಬೆಟ್ಟಗುಡ್ಡಗಳ ವಾತಾವರಣದಿಂದಾಗಿ ಆಕರ್ಷಣೀಯ ಬೆಟ್ಟ ಮತ್ತು ಕೋಟೆ ಗಮನ ಸೆಳೆಯುತ್ತಿದೆ. ಹಾಗೂ ಈ ಪರಿಸರದಲ್ಲಿ ದೊರೆತಿರುವ ಶಾಸನದ ಕಾಲ, ಚೋಳರ ಶೈಲಿಯ ವೀರಭದ್ರ ದೇವಾಲಯವನ್ನೆಲ್ಲ ಗಮನಿಸಿದರೆ ೧೦ನೇ ಶತಮಾನದ ಮೊದಲೇ ಹುಲುಕಡಿ ಕೋಟೆ ರಚನೆಯಾಗಿರಬೇಕು.

**ಮಾಕಳಿದುರ್ಗ** :- ದೊಡ್ಡಬಳ್ಳಾಪುರ ತಾಲ್ಲೂಕಿನಿಂದ ಸುಮಾರು ೧೯ ಕಿ.ಮೀ. ದೂರದಲ್ಲಿ ಸಾಸಲು ಹೋಬಳಿಯಿಂದ ೧೭ ಕಿ.ಮೀ, ಘಾಟಿ ಸುಬ್ರಮ್ಮಣ್ಯದಿಂದ ೪ ಕಿ.ಮೀ.ದೂರದಲ್ಲಿ ೪೪೩೦ ಅಡಿ ಎತ್ತರದಲ್ಲಿ ಮಾಕಳಿದುರ್ಗವಿದೆ. ಉತ್ತರ-ದಕ್ಷಿಣದಲ್ಲಿ ಇತರ ಬೆಟ್ಟಗಳಿಂದ ಸೇರಿ ಕೊಂಡಿರುವಷ್ಟು ಭಾಗವನ್ನು ಬಿಟ್ಟರೆ, ಉಳಿದ ಎಲ್ಲ ಭಾಗವು ಉದ್ದವಾದ ಶಿಲಾಮುಖಗಳಿಂದ ಕೂಡಿದೆ. ಬೆಟ್ಟದ ಬುಡದಲ್ಲಿ ಬಿಸಿಲ ವಾತವರಣ ಇದ್ದು, ಮೇಲಕ್ಕೆ ಹೊಂದಂತೆ ತಂಪಾದ ವಾತವರಣ, ಬೆಟ್ಟದ ಬುಡದಿಂದ ೩ ಕಿ.ಮೀ. ಕುರುಚಲು ಕಾಡಿನ ಒಳಗೆ ಸಾಗಿದರೆ ಮಾಕಳಿದುರ್ಗ ಸಿಗುತ್ತದೆ. ಈ ದುರ್ಗವು ಮಾರ್ಕಂಡಯ ಮುನಿಗಳ ತಪೋವನ ಆಗಿತ್ತೆಂಬುದು ಸ್ಥಳೀಯರ ಅಭಿಪ್ರಾಯ.

ಕೋಟೆಯ ಒಳ ಭಾಗವು ಪೊದೆ, ಕುರುಚಲು ಗಿಡಗಳಿಂದ ಆವೃತವಾಗಿದ್ದು, ಕರಡಿ, ಕಾಡುಹಂದಿ, ಮುಳ್ಳುಹಂದಿ, ತೋಳ, ನರಿ, ಹಾವು ಇತ್ಯಾದಿ ಪ್ರಾಣಿಗಳ ವಾಸಸ್ಥಾನವಾಗಿದೆ. ಘಾಟಿ ಸುಬ್ರಮಣ್ಯಸ್ವಾಮಿ ದೇವಾಲಯ ನಿರ್ಮಿಸಿದ ಸೊಂಡುರು ಮಹಾರಾಜರೇ ಕೋಟೆಯನ್ನು ನಿರ್ಮಿಸಿದರೆಂದು ಸ್ಥಳೀಯರ ವಾದ. ಆದರೆ ವಿಜಯನಗರ ಕಾಲಾವಧಿಯಲ್ಲಿ ಆವತಿನಾಡಪ್ರಭುಗಳಾದ ದೊಡ್ಡಬಳ್ಳಾಪುರದ ಪಾಳೇಗಾರರು ದೊಡ್ಡಬಳ್ಳಾಪುರದಲ್ಲಿ ಕೋಟೆಯನ್ನು ನಿರ್ಮಿಸುವ ಕಾಲದಲ್ಲಿ ಮಾಕಳಿ ಬೆಟ್ಟದಲ್ಲಿಯು ಸಹ ಬೃಹತ್ ಕೋಟೆಯನ್ನು ನಿರ್ಮಿಸಿ, ಸೈನ್ಯಕ್ಕೆ ತರಬೇತಿ ನೀಡುವ ಕೇಂದ್ರವಾಗಿಸಿದರು.

ದುರ್ಗವು ೨-೩ ಸುತ್ತುಗಳಿಂದ ಕೂಡಿದ್ದು, ಹಲವು ಬುರುಜುಗಳಿವೆ. ಒಂದು ಮದ್ದಿನ ಮನೆಯಿದ್ದು, ಅದರ ಒಂದು ಭಾಗದಲ್ಲಿ ದುಂಡನೆಯ ರಂಧ್ರ ಹಾಗೂ ಸನಿಹದಲ್ಲಿ ಶಿವಾಲಯವಿದೆ.

ಬೃಹತ್ ಗ್ರಾನೈಟ್ ಕಲ್ಲುಗಳಿಂದ ಕೂಡಿದ ಭದ್ರವಾದ ಕೋಟೆ, ಬೆಟ್ಟದ ಮೇಲೆ ವಿಸ್ತಾರವಾದ ಪ್ರಸ್ತ ಭೂಮಿಯನ್ನು ಅದು ಪಶ್ಚಿಮಕ್ಕೆ ಇಳಿಜಾರಾಗಿದೆ.

ಮಾಕಳಿ ಮಲ್ಲೇಶ್ವರ ಎಂಬ ಈಶ್ವರ ಗುಡಿಯಲ್ಲಿ ಶಿವಲಿಂಗ, ಗುಡಿ ಮುಂದೆ ಎದುರಿಗೆ ಬಸವಣ್ಣ ಮೂರ್ತಿ, ಗರುಡ ಕಂಬವಿದೆ. ದೇಗುಲದ ಪ್ರವೇಶ ದ್ವಾರದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟ ಒಂದು ಚಿಕ್ಕ ಗೂಡಿದೆ. ಅದರಲ್ಲಿ ಯಾವುದೇ ವಿಗ್ರಹವಿಲ್ಲ, ಗೂಡಿನ ಇಕ್ಕೆಲಗಳಲ್ಲಿ ಗಾರೆಯಿಂದ ನಿರ್ಮಿಸಿರುವ ಬಸವನ ವಿಗ್ರಹಗಳಿವೆ. ಈ ದೇವಾಲಯದ ಹಿಂಭಾಗದಲ್ಲಿ ಸ್ವಲ್ಪ ದೂರದಲ್ಲಿ ಅನೇಕ ಕಡೆ ಕಲ್ಲಿನಿಂದ ನಿರ್ಮಾಣವಾಗಿರುವ ವಸತಿ ಸಮುಚ್ಚಯಗಳು ಶೀಥಿಲವಾಗಿರುವ ಅವಶೇಷಗಳನ್ನು ಕಾಣ ಬಹುದು. ಇದರ ಸಮೀಪದಲ್ಲೆ ನೀರಿನ ಕೊಳವೊಂದಿದೆ. ಇವೆಲ್ಲವುಗಳೆಲ್ಲವು ಆವತಿ ನಾಡಪ್ರಭುಗಳ ಕಾಲದ ರಚನೆ.

ಪಾಳೇಗಾರರ ನಂತರ ಮರಾಠಿನಾಯಕ ಷಹಜಿಯು ಕ್ರಿ.ಶ.೧೭೬೧ ಹೊತ್ತಿಗೆ ಪೇಶ್ವೆ ಮಾಧವರಾಯನು ಕ್ರಿ.ಶ.೧೭೬೭ರ ವೇಳೆಗೆ ಹೈದರಾಲಿಯ ನಿದ್ದೆ ಗೆಡಿಸಿ ಬೆಂಗಳೂರಿನ ಸುತ್ತ ಮುತ್ತಲಿನ ಪ್ರದೇಶಗಳೆಲ್ಲವನ್ನು ಚನ್ನರಾಯನದುರ್ಗ, ಮಧುಗಿರಿ, ಸಿರಾ, ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ಮಾಕಳಿದುರ್ಗಗಳನ್ನು ಒಂದೊಂದಾಗಿ ಒಶಪಡಿಸಿಕೊಂಡು, ನೋಡಿಕೊಳ್ಳಲು ಗುತ್ತಿಗೆಯ ಮುರಾರಿರಾಯನನ್ನು ನೇಮಕ ಮಾಡಿದನು[೨೪೦]. ಆದರೆ ಅತ್ಯಲ್ಪ ಕಾಲದಲ್ಲಿ ಹೈದರ್‌ನ ಪ್ರಧಾನ ವೆಂಕಪ್ಪೈಯ್ಯನವರ ತಮ್ಮ ವೆಂಕಟೇಶೈಯ್ಯನವರು ತುಮಕೂರು, ಮಾಕಳಿದುರ್ಗ, ದೇವರಾಯದುರ್ಗವನ್ನು ಮರಾಠರಿಂದ ವಶಪಡಿಸಿಕೊಂಡು ನೋಡಿಕೊಳ್ಳಲು ತಮ್ಮ ಸಿಬ್ಬಂದಿಯನ್ನು ನೇಮಿಸಿದನು. ಹೀಗೆ ಮರಾಠರ ವಶದಲ್ಲಿದ್ದ ಮಾಕಳಿದುರ್ಗ ಹೈದರ್‌ನ ಕೈ ಸೇರಿತ್ತು. ಟಿಪ್ಪುಸುಲ್ತಾನ್‌ನ ಅಧಿಪತ್ಯಕ್ಕೆ ಒಳಪಟ್ಟ ನಂತರ ಟಿಪ್ಪು ದೊಡ್ಡಬಳ್ಳಾಪುರ ಕೋಟೆ ಮಾತ್ರವಲ್ಲದೆ, ಮಾಕಳಿ ಬೆಟ್ಟದಲ್ಲಿನ ಕೋಟೆಯನ್ನು ಮತ್ತಷ್ಟು ಅಬೇದ್ಯಗೊಳಿಸಿದನು.

ಮಾಕಳಿದುರ್ಗವನ್ನು ಪೂರ್ವ-ಪಶ್ಚಿಮದ ಕಡೆಯಿಂದ ಬಿಟ್ಟರೆ ಬೇರೆಯ ಕಡೆ ಏರಲು ಸಾಧ್ಯವಿಲ್ಲ. ಸಾಕಷ್ಟು ಮದ್ದು ಗುಂಡುಗಳ ಸಂಗ್ರಹ, ಬೆಟ್ಟದ ಮೇಲಿಂದ ಉರುಳಿಸುವುದಕ್ಕಾಗಿಯೇ ಸಂಗ್ರಹಿಸಿದ್ದ ದುಂಡನೆಯ ಗ್ರಾನೈಟ್ ಕಲ್ಲುಗಳ ರಾಶಿಯನ್ನು ಈಗಲೂ ಕಾಣ ಬಹುದು. ಕೋಟೆಯು ಅಂಡಾಕಾರವಾಗಿದ್ದು ಒಂದು ಮೈಲಿಗಿಂತ ಹೆಚ್ಚು ಸುತ್ತಳತೆಯನ್ನು ಹೊಂದಿದ್ದೆ. ಕೋಟೆಯ ಗೋಡೆಯಲ್ಲಿ ಎರಡು ಪದರಗಳಿವೆ. ಅದರಲ್ಲಿ ಕೆಳಗಿನ ಪದರ ದಪ್ಪನಾದ ಗ್ರಾನೈಟ್ ಕಲ್ಲುಗಳಿಂದ ಕೂಡಿದ್ದು,

[೨೪೦] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೨೩೫.

ಪಾಳೇಗಾರರ ರಚನೆಯಾದರೇ, ಮೇಲಿನ ಪದರವು ಕೆಳಗಿನ ಪದರಕ್ಕಿಂತ ಸ್ವಲ್ಪ ಚಿಕ್ಕದಾದ ಕಲ್ಲುಗಳಿಂದ ಕಟ್ಟಲ್ಪಟ್ಟು, ಕೋಟೆಯ ಗೋಡೆ ಎತ್ತರ, ಗೋಡೆಯ ಮೇಲಿನ ಬುರುಜುಗಳು ಟಿಪ್ಪು ಕಾಲದ ರಚನೆಯಾಗಿದೆ.

ಸೈನಿಕರು ಮತ್ತು ಕಾವಲುಗಾರರ ವಾಸಕ್ಕಾಗಿ ಕಟ್ಟಿಸಿದ್ದ ಹಲವಾರು ಕೋಣೆಗಳು, ಉಗ್ರಾಣಗಳು ಹಾಗೂ ಮನೆಗಳ ಅವಶೇಷಗಳನ್ನು ಕಾಣ ಬಹುದು. ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಾಣಗೊಂಡಿದ್ದ ಕಟ್ಟಡಗಳು, ಒಂದರೆಡು ಮದ್ದಿನ ಮನೆಗಳು ಸುರಕ್ಷಿತವಾಗಿ ಉಳಿದು ಕೊಂಡಿದ್ದು, ಗೊಮ್ಮಟದಂತೆ ನಾಲ್ಕು ಕಡೆ ಇಳಿಜಾರಾದ ಮಾಡು, ಅತೀ ಚಕ್ಕನಾದ ಕಮಾನಿಕಾರದ ಪ್ರವೇಶ ದ್ವಾರವಿದೆ. ಈ ಅವಶೇಷಗಳ ನಡುವೆ ಒಂದೆಡೆ ಎತ್ತರವಾದ ವೇದಿಕೆಯಂತಹ ಒಂದು ರಚನೆಯು ಈಗ ಸಂಪೂರ್ಣ ಹಾಳಾಗಿದ್ದು, ಟಿಪ್ಪು, ಮತ್ತಿತ್ತರ ಅಧಿಕಾರಿಗಳು ಇಲ್ಲಿಗೆ ಬಂದಾಗ ಪ್ರಾರ್ಥನೆ ಸಲ್ಲಿಸಲು ಬಳಸುತ್ತಿದ್ದರೆಂದು ಸ್ಥಳೀಯರು ಹೇಳುತ್ತಾರೆ.

ನೆಲಮಾಳಿಗೆಯೊಂದು ಇದ್ದು, ಅದರಲ್ಲಿನ ಸುರಂಗದಿಂದ ನಂದಿದುರ್ಗಕ್ಕೆ, ಮತ್ತು ದೊಡ್ಡಬಳ್ಳಾಪುರ ಕೋಟೆಗೆ ಹೋಗ ಬಹುದು. ಇನ್ನೊಂದೆಡೆ ಎರಡು ಬಂಡೆಗಳ ನಡುವೆ ಗುಹೆಯಂತೆ ಕಂಡು ಬರುವ ಸ್ಥಳ ರಹಸ್ಯ ಮಾರ್ಗ, ಈ ಮಾರ್ಗ ಮುಖಾಂತರ ಕೋಟೆ ಹೊರಗೆ ಹೋಗ ಬಹುದು. ಟಿಪ್ಪು ಕಾಲದಲ್ಲಿ ನಂದಿದುರ್ಗ ಮತ್ತು ಮಾಕಳಿದುರ್ಗಗಳೆರಡು ಲತೀಫ್ ಅಲಿಬೇಗ್ ಎಂಬ ಅಧಿಕಾರಿಯ ರಕ್ಷಣೆಯಲ್ಲಿತ್ತು.

ಕ್ರಿ.ಶ.೧೭೯೦ ರ ಹೊತ್ತಿಗೆ ಲಾಡ್ ಕಾರ್ನ್ ವಾಲೀಸ್‌ನು ಟಿಪ್ಪು ಸುಲ್ತಾನನು ಮಣಿಸಲು ಬೆಂಗಳೂರಿನ ಸುತ್ತ ಮುತ್ತಲಿನ ದುರ್ಗಗಳನ್ನು ವಶಪಡಿಸಿಕೊಂಡು ಮೇಜರ್ ಗೌಡಿಯನ್ನು ನೇಮಿಸಿದನು. ಬೆಂಗಳೂರು ಉತ್ತರಕ್ಕಿರುವ ಕೋಟೆಗಳತ್ತ ಗಮನಹರಿಸಿ ೧೭೯೦ ಸೆಪ್ಟೆಂಬರ್ ೧೦ ರಂದು ಮೇಜರ್ ಗೌಡಿಯು ಮಾಕಳಿದುರ್ಗದ ದಾಳಿ ಮಾಡಿದಾಗ ದೊಡ್ಡ ಮಟ್ಟದಲ್ಲಿ ರಕ್ಷಣೆ ಇರದ ಕೋಟೆ ಒಳಗಿದ್ದ ಕೆಲವು ಕೋವಿಗಳು ಮೊದಲ ಹಂತದಲ್ಲೆ ಶರಾಣಾಗತಿಯಾದರು. ಬ್ರಿಟಿಷ್ ಈಸ್ಟ್ ಇಂಡಿಯ ಕಂಪನಿಯ ಸರ್ವೆ ಅಧಿಕಾರಿ ಪ್ರಾನ್ಸಿಸ್ ಬುಕಾನನ್ ತನ್ನ ವರದಿಯಲ್ಲಿ ಕ್ರಿ.ಶ.೧೮೦೦ರಲ್ಲಿ ಮಾಕಳಿಕೊಂಡ (ಬೆಟ್ಟ) ದಲ್ಲಿ ಲಿಂಗವನ್ನು ಧರಿಸುವ ಅನೇಕ ಜಂಗಮ ಗುರುಗಳಿದ್ದು, ಅವರನ್ನೆಲ್ಲಾ ಮಲ್ಲೇಶ್ವರಸ್ವಾಮಿಯೆಂದು ಕರೆಯಲಾಗುತಿತ್ತು. ಇವರು ಆಗಾಗ್ಗೆ ಗ್ರಾಮ, ಪಟ್ಟಣಗಳಿಗೆ ಬಂದು ತಮ್ಮ ತಮ್ಮ ಜಾತಿಯ ಜನರಿಗೆ ಪವಿತ್ರ ತೀರ್ಥವನ್ನು ನೀಡಿ ಅವರಿಂದ ದವಸ ದಾನ್ಯಗಳನ್ನು ಪಡೆದು ಕೊಳ್ಳುತ್ತಿದ್ದರು ಎಂದು ಉಲ್ಲೇಖಿಸಲಾಗಿದೆ. ಕೋಟೆಗೆ ನಾಲ್ಕು ದ್ವಾರಗಳಿವೆ. ಕೋಟೆಯ ಮದ್ಯಭಾಗದಲ್ಲಿ

ಮಾಕಳ ಮಲ್ಲೇಶ್ವರ ಸ್ವಾಮಿ ದೇವಾಲಯವಿದೆ. ಹಿಂಭಾಗದಲ್ಲಿ ಒಂದು ಬಾವಿಯಿದ್ದು ಕುಡಿಯಲು ಇತರೆ ಕೆಲಸಗಳಗೆ ನೀರು ಬಳಸುತಿದ್ದರೆನಿಸುತ್ತದೆ. ದೇವಾಲಯದಲ್ಲಿ ನಿಧಿ ಎಂದು ಮಾಕಳ ಮಲ್ಲೇಶ್ವರ ಸ್ವಾಮಿ ವಿಗ್ರಹವನ್ನು, ನಂದಿ, ಧ್ವಜ ಸ್ತಂಭವನ್ನು ಹಾಳು ಮಾಡಿದ್ದಾರೆ. ಮಾಕಳ ಮಲ್ಲೇಶ್ವರ ಭಕ್ತರು ಹೊಸ ವಿಗ್ರಹವನ್ನು ಮರು ಸ್ಥಾಪಿಸಿದರು.

**ದೇವನಹಳ್ಳಿ ಕೋಟೆ** :– ಜಿಲ್ಲೆಯ ತಾಲ್ಲೂಕುಗಳಲ್ಲಿ ಒಂದಾದ, ಬೆಂಗಳೂರಿಂದ ಹೈದರಬಾದ್‌ನ ರಾಷ್ಟ್ರೀಯ ಹೆದ್ದಾರಿ ೪೪ ರಲ್ಲಿ ಬೆಂಗಳೂರಿನಿಂದ ೩೭ ಕಿ.ಮಿ. ದೂರದಲ್ಲಿ ದೇವನಹಳ್ಳಿಯಿದ್ದು. ಶಾಸನಗಳಲ್ಲಿ ದೇವನಹಳ್ಳಿಯನ್ನು ಧೇವಂಡಹಳ್ಳಿ, ದೇವನಪುರ, ದೇವಣಾಪುರ ಎಂದು ಕರೆಯಲಾಗಿದೆ. ಅರ್ಕಾವತಿ ಕಣಿವೆ ಪರಿಸರದ ದೇವನಹಳ್ಳಿಯಲ್ಲಿನ ಕೋಟೆ, ದೇವಾಲಯ, ಮಂಟಪಗಳು ಇತ್ಯಾದಿ ಆಧಾರದ ಮೇಲೆ ಆವತಿ ನಾಡಪ್ರಭುಗಳ ಕಾಲದಲ್ಲಿ ದೇವನಹಳ್ಳಿಯು ಒಂದು ಪ್ರಮುಖ ಊರಾಗಿದ್ದಿರ ಬಹುದು. ಹಾಗೆಯೇ ಕ್ರಿ.ಶ.೧೬, ೧೭ ನೇ ಶತಮಾನದಲ್ಲಿ ದೇವನಹಳ್ಳಿಯು ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರವಾಗಿರಬೇಕು ಹೇಗೆಂದರೆ ವ್ಯಾಪಾರ, ವಾಣಿಜ್ಯ ಮಾರ್ಗಗಳನ್ನು ನಿಯಂತ್ರಿಸಲು, ಸಾಗಾಣಿಕೆಗೆ ಸೂಕ್ತ ರಕ್ಷಣೆ ಒದಗಿಸುವ ಸಲುವಾಗಿ ವ್ಯಾಪಾರ ಸ್ಥಳಗಳಲ್ಲಿ ಕೋಟೆಗಳನ್ನು ನಿರ್ಮಿಸಿ, ಸೈನ್ಯವನ್ನು ಜಮಾಮಾಡಿ ಸುತ್ತ ಮುತ್ತಲಿನ ಪ್ರದೇಶವನ್ನು ನಿಯಂತ್ರಿಸುತಿದ್ದರು. ಅದೇ ರೀತಿಯಲ್ಲೆ ವ್ಯಾಪಾರ ಮಾರ್ಗಗಳಗೆ ರಕ್ಷಣೆ ಒದಗಿಸಲು, ವೈರಿಗಳ ಆಕ್ರಮಣ ತಡೆಯಲು ದೇವನಹಳ್ಳಿ ಊರ ಹೊರಗೆ ದೇವನಹಳ್ಳಿಯಲ್ಲಿ ೩೦೦ ಮೀ. ಉದ್ದ, ೧೮೫ ಮೀ. ಅಗಲವಾದ, ಆಮೆ ಅಥವಾ ಆಯಾತಾಕಾರದ ನೆಲದುರ್ಗ ಕೋಟೆಯನ್ನು ಕ್ರಿ.ಶ.೧೫೦೧ರಲ್ಲಿ ಆವತಿ ನಾಡಪ್ರಭುವಾದ ಮಲ್ಲ ಭೈರೇಗೌಡನು ನಿರ್ಮಿಸಿ, ಕೋಟೆಯ ಆಡಳಿತವನ್ನು ಸೋದರನಾದ ಸಣ್ಣ ಭೈರೇಗೌಡನಿಗೆ ನೀಡಿದನು[೨೪೧].

ಕೋಟೆಯು ಆಮೆಯಾಕಾರದಲ್ಲಿದ್ದು, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಪ್ರವೇಶ ದ್ವಾರಗಳಲ್ಲಿ ಪೂರ್ವದ್ವಾರವು ನಾಶವಾಗಿದ್ದು, ಪಶ್ಚಿಮದ್ವಾರ ಮಾತ್ರ ಉಳಿದುಕೊಂಡಿದೆ. ಪಶ್ಚಿಮ ದಿಕ್ಕಿಗೆ ಎರಡು ಪ್ರತ್ಯೇಕ ದ್ವಾರಗಳದ್ದು, ದ್ವಾರಕ್ಕೆ ರಕ್ಷಣೆ ಒದಗಿಸುವುದಕ್ಕಾಗಿ ವಿಶೇಷ ಬುರುಜುಗಳಂದ ಕೂಡಿದ ಇನ್ನೊಂದು ದ್ವಾರವನ್ನು ಟಿಪ್ಪುವಿನ ಕಾಲದಲ್ಲಿ ನಿರ್ಮಿಸಲಾಯಿತು. ಪೂರ್ವದ ಕೋಟೆಯ ರಚನೆಯಲ್ಲಿ ಗುರುತಿಸಬಹುದಾದ ಏಕೈಕ ಸಾಧನವೆಂದರೆ ಸಾಂಪ್ರದಾಯಿಕ ಚೌಕಾಕಾರದ ಕೆಲವು ಕೊತ್ತಲಗಳು,

[೨೪೧] Suryanath.U.Kamath :- Karnataka State Gazetter, Bangalore Rural District, Page, no-836.

***. ಮಾಗಡಿಯ ಕೋಟೆಯಲ್ಲಿನ ಚೌಕಾಕಾರದ ಕೊತ್ತಲುಗಳು.

ಒಳಾಂಗಣದ ಹಳೆಯ ವೇಣುಗೋಪಾಲಸ್ವಾಮಿ ದೇವಸ್ಥಾನ ಮತ್ತು ವಿಜಯನಗರ ಕಾಲಾದ ಶಿಲಾಶಾಸನ ನಾಡ ಪ್ರಭುಗಳ ಕೊಡುಗೆಗೆ ಸಿಗುವ ಸಾಕ್ಷ್ಯಗಳು. ಕೋಟೆ ಪುನರ್ ರಚಿಸುವಾಗ ಆವತಿ ನಾಡ ಪ್ರಭುಗಳು ನಿರ್ಮಿಸಿದ ಚೌಕಾಕಾರದ ಕೊತ್ತಲಗಳನ್ನು*** ವರ್ತುಲಾಕಾರಕ್ಕೆ ಪರಿವರ್ತಿಸಿದ್ದಾರೆ. ಮತ್ತು ವಿಜಯನಗರ ಪೂರ್ವಕಾಲದ ಕೋಟೆ ನಿರ್ಮಾಣಗಳಲ್ಲಿ ಮದ್ದಿನ ಮನೆಗಳು, ಇಳಿಜಾರಿನ ಕುಂಬಿ ಗೋಡೆಗಳು, ಪಹರೆ ಕಟ್ಟೆಗಳು ಇರುತಿರಲಿಲ್ಲ. ಈ ಎಲ್ಲಾ ಹೊಸ ರಕ್ಷಣಾ ವ್ಯವಸ್ಥೆಗಳು ಯುದ್ಧಗಳಲ್ಲಿ ಮದ್ದು ಗುಂಡುಗಳ ಬಳಕೆಗೆ ಬಂದ ನಂತರ ಸೂಚಿಸುತ್ತದೆ.

ಕ್ರಿ.ಶ.೧೮ನೇಯ ಶತಮಾನದ ಕಾಲಘಟ್ಟದಲ್ಲಿ ದಕ್ಷಿಣ ಕರ್ನಾಟಕದ ಕೋಟೆಗಳಲ್ಲಿ ಫಿರಂಗಿಗಳ ಬಳಕೆಗೆ, ಉದ್ದನೆಯ ತೋಪುಗಳನ್ನು ಬಳಸಲು ವರ್ತುಲಾಕಾರದ ಕೊತ್ತಲಗಳು ತುಂಬಾ ಅನುಕೂಲಕರವಾಗಿಲು ಕೋಟೆಗಳಲ್ಲಿ ಕೆಲವು ಕಡೆ ವರ್ತುಲಾಕಾರದ ಕೊತ್ತಲಗಳನ್ನು ನಿರ್ಮಿಸಲಾಯಿತು. ಈಗಾಗಲೆ ಅಸ್ಥಿತ್ವದಲ್ಲಿದ್ದ ಕೋಟೆಯ ಕೆಲವು ಚೌಕಾಕಾರದ ಕೊತ್ತಲಗಳನ್ನು ವರ್ತುಲಾಕಾರದ ಕೊತ್ತಲಗಳಾಗಿ ಮಾರ್ಪಾಡಿಸಲಾಗಿದೆ.

ಹಾಗೇಯೆ ಆಯಾತಾಕಾರದ ಕೋಟೆಯ ನಾಲ್ಕು ಮೂಲೆಗಳಲ್ಲಿ ಚೌಕಾಕಾರದ ಕೊತ್ತಲಗಳನ್ನು ನಿರ್ಮಿಸಲಾಗಿದೆ. ಒಟ್ಟು ೧೪ ಕೊತ್ತಲಗಳಿದ್ದು, ಪಶ್ಚಿಮದಲ್ಲಿ ಹೊಸದಾಗಿ ಸೇರಿಸಿದ ದ್ವಾರಕ್ಕೆ ೨ ಕೊತ್ತಲಗಳಿವೆ. ಕೋಟೆಯ ಗೋಡೆಗಳಲ್ಲಿ ನಿರ್ದಿಷ್ಟ ಅಂತರದಲ್ಲಿ ೭ ಕೊತ್ತಲಗಳನ್ನು ಸೇರಿಸಲಾಗಿದೆ. ಕೋಟೆಯ ಮೂಲೆಗಳಲ್ಲಿ ಚೌಕಾಕಾರದ ಕೊತ್ತಲಗಳನ್ನು ವರ್ತುಲಾಕಾರದ ಕೊತ್ತಲಗಳಾಗಿ ಮಾರ್ಪಾಡಿಸಲಾಗಿರುವ ಲಕ್ಷಣವನ್ನು ಕಾಣಬಹುದು.

ಕೋಟೆಯ ಗೋಡೆಯು ೩ ಮೀಟರ್ ಗಳಷ್ಟು ದಪ್ಪ, ೧೦-೧೨ ಮೀಟರ್ ಎತ್ತರವಾಗಿದೆ. ಕೋಟೆಯ ಒಳಗೆ ಗೋಡೆಯಲ್ಲಿ ಸುತ್ತಲೂ ಪಹರೆಗಾಗಿ ಅಗಲವಾದ ಸುಮಾರು ೫-೬ ಮೀ. ಅಗಲವಾದ ಪಹರೆ ಕಟ್ಟೆಗಳನ್ನು ನಿರ್ಮಿಸಲಾಗಿದೆ. ಕೋಟೆಯಲ್ಲಿ ಫಿರಂಗಿಯನ್ನು, ಸೈನ್ಯವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು, ಪೂರ್ವದಿಂದ ಪಶ್ಚಿಮಕ್ಕೆ, ಉತ್ತರದಿಂದ ದಕ್ಷಿಣಕ್ಕೆ ರಸ್ತೆಗಳನ್ನು ಮಾಡಲಾಗಿದೆ. ಕೊತ್ತಲಗಳಲ್ಲಿ ತೋಪುಗಳನ್ನು ಇರಿಸಲು ರಂಧ್ರಗಳನ್ನು, ಮದ್ದು ಶೇಖರಿಸಲು ನೆಲಮಾಳಿಗೆಯಲ್ಲಿ ಚಿಕ್ಕ ಮದ್ದಿನ ಮನೆಗಳನ್ನು ಕಟ್ಟಲಾಗಿದೆ. ಗೋಡೆಗಳಲ್ಲಿ ಬಂದೂಕಗಳನ್ನು ಇರಿಸಲು ಮತ್ತು ಹೊರಗಿನ ವೈರಿಗಳ ಚಲನವಲನ ಗಮನಿಸಲು ಚಿಕ್ಕ ಕಂಡಿಲನ್ನು ನಿರ್ಮಿಸಲಾಗಿದೆ. ಹೊಸ ರಕ್ಷಣ ವ್ಯವಸ್ಥೆಯು ಟಿಪ್ಪುವಿನ ಕಾಲದಲ್ಲಿ ರಚನೆಯಾದವು. ಕೋಟೆಯಲ್ಲಿನ ಪೂರ್ವ ಮತ್ತು ಪಶ್ಚಿಮದ ಹಳೆಯ

ದ್ವಾರಗಳನ್ನು ನಾಡ ಪ್ರಭುಗಳ ಕಾಲದಲ್ಲಿ ನಿರ್ಮಿಸಲಾಗಿದ್ದು ಅನಂತರ ಕಾಲದಲ್ಲಿ ಮಾರ್ಪಾಡಿಸಲಾಯಿತ್ತು ಎನ್ನಬಹುದು.

ಕೋಟೆಯಲ್ಲಿನ ವೇಣುಗೋಪಾಲಸ್ವಾಮಿ ದೇವಾಲಯ ಮುಖ್ಯಕೇಂದ್ರವಾಗಿದ್ದು, ಕೋಟೆಯಲ್ಲಿನ ಬಹುತೇಕ ಚಟುವಟಿಕೆಗಳು ದೇವಾಲಯದ ಸನ್ನಿಧಾನದಲ್ಲಿ ನಡೆಯುತ್ತಿತ್ತು ಎಂದೆನಿಸುತ್ತದೆ. ದೇವಸ್ಥಾನದ ಮುಂಭಾಗದ ಎಡಗಡೆಯ ಬಯಲಿನಲ್ಲಿ ಸೈನ್ಯಾಧಿಕಾರಿಗಳ ಅಥವಾ ಉನ್ನತಾಧಿಗಳ ವಾಸಗೃಹಗಳಿದ್ದು, ಈಗ ಅದರ ಅವಶೇಷ ಮಾತ್ರ ಇದೆ. ದೇವಾಲಯದ ಬಲಬದಿ ಸೈನಿಕರ ಜಮಾವಣೆ ಹಾಗೂ ಅವರ ವಾಸದ ನೆಲೆಯಾಗಿದೆ. ಕೋಟೆಯಲ್ಲಿ ಅಲ್ಲಲ್ಲಿ ಕಾವಲು ಗೋಪುರಗಳಿದ್ದು ಅವುಗಳ ಅವಶೇಷಗಳನ್ನು ಕಾಣ ಬಹುದು. ಕ್ರಿ.ಶ.೧೫೦೧ ರಿಂದ ೧೭೪೯ರ ವರೆಗೆ ಆವತಿ ನಾಡಪ್ರಭುಗಳು ಆಳ್ವಿಕೆ ನಡೆಸಿದರೆ, ಕ್ರಿ.ಶ.೧೭೪೯ರಲ್ಲಿ ದಳವಾಯಿ ನಂಜರಾಯ್ಯನು ಕೋಟೆಯನ್ನು ವಶ ಪಡಿಸಿಕೊಂಡ ಯುದ್ಧದಲ್ಲೇ ಹೈದರಾಲಿ ಬೆಳಕಿಗೆ ಬಂದಿದ್ದು. ಹಾಗೇಯೇ ಹೈದರಾಲಿ ಕಾಲದಲ್ಲಿ ದೇವನಹಳ್ಳಿ ಪ್ರಾಧಾನ್ಯತೆ ಪಡೆಯಿತ್ತು. ಕ್ರಿ.ಶ.೧೭೫೦ರಲ್ಲಿ ಟಿಪ್ಪು ದೇವನಹಳ್ಳಿಯಲ್ಲಿ ಹುಟ್ಟಿದನು. ಹೈದರಾಲಿ ಮತ್ತು ಟಿಪ್ಪು ತಮ್ಮ ರಾಜ್ಯದ ಉಳಿದ ಕೋಟೆಯಂತೆ ಪ್ರೆಂಚರ ಕೋಟೆ ರಕ್ಷಣಾ ತಜ್ಞರ ನೆರವಿನೋದಿಗೆ ಕೋಟೆಯನ್ನು ಪುನರ್ ಅಥವಾ ದುರಸ್ಥಿ ಮಾಡಿಸಿದ್ದಾರೆ[೨೪೨]. ಟಿಪ್ಪು ಬೇಟೆಗೆ ಬರುತ್ತಿದ್ದು, ದೇವನಹಳ್ಳಿಯನ್ನು ಸುಂದರಗೊಳಿಸಿ ಅದಕ್ಕೆ ಯೂಸುಫಾಬಾದ್ ಎಂದು ಪುನರ್ ನಾಮಕರಣ ಮಾಡಿದನು. ಕ್ರಿ.ಶ.೧೭೯೧ರಲ್ಲಿ ಕಾರ್ನ್‌ವಾಲೀಸ್ ವಶವಾಯಿತು[೨೪೩].

**ಆವತಿ** :– ದೇವನಹಳ್ಳಿಯಿಂದ ಚಿಕ್ಕಬಳ್ಳಾಪುರ, ಆನಂತಪುರ ರಾಷ್ಟ್ರೀಯ ಹೆದ್ದಾರಿಯಲ್ಲಿ ೭ ಕಿ.ಮಿ. ದೂರದಲ್ಲಿ ಎಡಭಾಗಕ್ಕೆ ಆವತಿ ಗ್ರಾಮವಿದೆ. ಆವತಿ ಪ್ರಭು ರಣ ಭೈರೇಗೌಡನ ಕಾಲದಲ್ಲಿ ಊರ ಸಮೀಪದಲ್ಲಿರುವ ಗುಡ್ಡದ ಮೇಲೆ ಮಣ್ಣಿನಿಂದ ಕೋಟೆ ನಿರ್ಮಿಸಿದ್ದು, ಈಗ ಕೇವಲ ಅದರ ಅವಶೇಷಗಳು ಮಾತ್ರ ಉಳಿದಿದೆ. ಈ ಗುಡ್ಡದ ಬಳಿಯ ಇನ್ನೊಂದು ಗುಡ್ಡಕ್ಕೆ ಕೋಳಿಗುಡ್ಡ ಎಂದು ಕರೆಯಲಾಗುತ್ತದೆ. ಇದು ಶತೃಗಳ ಆಗಮನವನ್ನು ಸೂಚಿಸುವುದಕ್ಕೆ ಕೋಳಿ ಗುಡ್ಡ ಎಂಬ ಹೆಸರು ಬಂದಿರಬೇಕು. ಅಂದರೆ ಕಾವಲು ಗೋಪುರದ ರೀತಿಯಲ್ಲಿ ರಕ್ಷಣೆಯ ಕಾರ್ಯ ನಿರ್ವಾಹಿಸಲು ಸಹಕಾರಿಯಾಗಿರಬೇಕು.

[೨೪೨] ಎಸ್.ಕೆ.ಅರುಣಿ :- ಯಲಹಂಕನಾಡಪ್ರಭುಗಳ ವಾಸ್ತುಶಿಲ್ಪ-ಶಿಲ್ಪಕಲೆ, ಪು.ಸಂ-೭೪.
[೨೪೩] ಸೂರ್ಯನಾಥ ಯು ಕಾಮಥ್:- ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩, ಪು.ಸಂ-೫೨೧.

**ಕುಂದಾಣ** :- ದೇವನಹಳ್ಳಿಯಿಂದ ೧೦ ಕಿ.ಮಿ.ದೂರದಲ್ಲಿ ಕುಂದಾಣ ಗ್ರಾಮವಿದೆ. ಕುಂದಾಣ ಸಮೀಪದಲ್ಲೆ ೬೧ ಮೀ. ಎತ್ತರದ ಬೆಟ್ಟದ ಮೇಲೆ ೪ ಸುತ್ತಿನ ಕೋಟೆಯಿದ್ದು, ಈ ಕೋಟೆಯನ್ನು ಪ್ರವೇಶಿಸಲು ೪ ಆಗಸೆ ಬಾಗಿಲುಗಳಿವೆ. ಈ ಕುಂದಾಣವು ಹೊಯ್ಸಳರ ರಾಮನಾಥನ ರಾಜಧಾನಿಯಾಗಿತೆಂದು ಕೇಲವರ ವಾದವಾದರೆ ವಾಸ್ತವವಾಗಿ ತಮಿಳುನಾಡಿನ ಕುಂದಾಣವೇ ರಾಮನಾಥನ ರಾಜಧಾನಿ. ಕ್ರಿ.ಶ.೧೨೯೧ರ ಅಬ್ಬೂರು ಶಾಸನದಲ್ಲಿ ಕುಂದಾಲುದುರ್ಗ ಎಂದು ಉಲ್ಲೇಖಗೊಂಡಿದೆ.

**ಚಿಕ್ಕಜಾಲ** :- ಸುಮಾರು ೧೫ ಅಡಿ ಎತ್ತರ, ೩ ಅಡಿ ದಪ್ಪದ ಕೋಟೆಯು ಸುಸ್ಥಿತಿಯಲ್ಲಿದ್ದು, ರಾಷ್ಟ್ರೀಯ ಹೆದ್ದಾರಿ ವಿಸ್ತರಣೆಯಲ್ಲಿ ಕೋಟೆಯ ಉತ್ತರ ಭಾಗವನ್ನು ಮಾತ್ರ ತೆರೆವು ಗೋಳಿಸಲಾಗಿದೆ. ಕೋಟೆಯ ಪಶ್ಚಿಮದ ಭಾಗದಲ್ಲಿ ಕೆಲವು ಪಾಳು ಬಿದ್ದ ಮಂಟಪಗಳಿವೆ. ಪಶ್ಚಿಮ ದ್ವಾರದ ನೇರಕ್ಕೆ ಸಾಲು ಕಂಬಗಳಿಂದ ಕೂಡಿದ ತೆರೆದ ಮಂಟಪ ಸರಳವಾಗಿದೆ. ಇದೊಂದು ಯಾತ್ರಿಕರ ತಂಗುದಾಣ ಮಂಟಪವಾಗಿತ್ತೆಂದೆನಿಸುತ್ತದೆ. ಈ ಮಂಟಪದ ಎಡಭಾಗದಲ್ಲಿ ಇನ್ನೊಂದು ಮಂಟಪವಿದ್ದು, ಅದನ್ನು ಇಲ್ಲಿಯ ಕೋಟೆಯ ಎಡಕ್ಕೆ ದೊಡ್ಡಕೆರೆಯಿದ್ದು ಕೋಟೆಗೆ ನೀರು ಒದಗಿಸುತ್ತಿತ್ತೆನಿಸುತ್ತದೆ. ಕೋಟೆಯ ಒಳಗಿನ ಆಂಜನೇಯ ದೇವಾಲಯ ಮಾತ್ರ ಉಳಿದುಕೊಂಡಿದೆ. ದೇವಾಲಯದ ಒಳಗೆ ಸುಮಾರು ೮ ಅಡಿ ಎತ್ತರದ ವ್ಯಾಸಾಂಜನೇಯ ವಿದೆ. ಈ ದೇವಾಲಯದ ಎದುರಿಗೆ ವಿಶಾಲವಾದ ಕಲ್ಯಾಣಿಯಿದ್ದು, ಕಲ್ಯಾಣಿಯ ಸುತ್ತಲಿನ ಕಲ್ಲಿನ ಮೇಲೆ ಹಲವಾರು ಉಬ್ಬು ಶಿಲ್ಪಗಳಿವೆ.

**ಹೊಸಕೋಟೆ** :- ಜಿಲ್ಲೆಯ ತಾಲ್ಲೂಕುಗಳಲ್ಲಿ ಒಂದಾದ ಹೊಸಕೋಟೆಯು ಬೆಂಗಳೂರು ನಗರದ ಪೂರ್ವಕ್ಕೆ ೨೭ ಕಿ.ಮಿ. ದೂರದಲ್ಲಿ ಬೆಂಗಳೂರು ಮತ್ತು ಕೋಲಾರ ರಾಷ್ಟ್ರೀಯ ಹೆದ್ದಾರಿಯಲ್ಲಿದೆ. ಶಾಸನಗಳಲ್ಲಿಯೂ ಸಹ ಹೊಸಕೋಟೆ ಎಂದೇ ಉಲ್ಲೇಖವಾಗಿದೆ[೨೪೪]. ಸುಗಟೂರು ತಮ್ಮೇಗೌಡನು ಹೊಸದಾಗಿ ಕೋಟೆಯನ್ನು ಕಟ್ಟಿಸಿ ಹೊಸಕೋಟೆಯೆಂದು ಕರೆದನು ಎಂಬುದಕ್ಕೆ ಕ್ರಿ.ಶ.೧೪೨೪ರ ಜೋಡಿಪುರ ಗ್ರಾಮದಲ್ಲಿನ ವೀರಭದ್ರ ಗುಡಿ ಮುಂದೆ ಇರುವ ವಿಜಯನಗರ ಕಾಲದ ಶಾಸನದಲ್ಲಿ ಸುಗಟೂರು ತಮ್ಮೇಗೌಡನು ಹೊಸಕೋಟೆಯನ್ನು ನಿರ್ಮಿಸಿದನು[೨೪೫]. ಹಾಗೂ ಕ್ರಿ.ಶ.೧೫೯೪ರ ಖಾಜಿ ಹೊಸಹಳ್ಳಿಯ ತಾಮ್ರಶಾಸನದಲ್ಲಿ ಹೊಸಕೋಟೆ ಕಟ್ಟಿಸಿದ ತಮ್ಮೇಗೌಡರು ಎಂದು ನೇರವಾಗಿಯೇ ಕೋಟೆ ಕಟ್ಟಿಸಿದ ಮಾಹಿತಿಯನ್ನು ಉಲ್ಲೇಖಿಸಲಾಗಿದೆ[೨೪೬]. ಕ್ರಿ.ಶ.೧೭೭೨ ರ ಕಾಲದ ಶಾಸನದಲ್ಲಿ

---

[೨೪೪] ಎ.ಕ-೯, ಅನುಬಂಧ, ಹೊ.ತಾ.೧೬೩ ಮತ್ತು ಹೊ.ತಾ.೧೬೬, ಕಿ.ಶ.೧೭೭೧, ತಾಮ್ರಶಾಸನ. ಹೊಸಕೋಟೆ.
[೨೪೫] ಎ ಕ-೧೦, ಅನುಬಂಧ, ಮಾ.ತಾ.೧೮೮, ಕ್ರಿ.ಶ.೧೪೨೨, ಜೋಡಿಪುರ.
[೨೪೬] ಎ.ಕ-೯, ಅನುಬಂಧ, ಹೊ.ತಾ.೧೮೬, ಕ್ರಿ.ಶ.೧೫೯೪, ತಾಮ್ರ ಶಾಸನ, ಖಾಜಿ ಹೊಸಹಳ್ಳಿ.

ಹೊಸಕೋಟೆ ಕಿಲ್ಲೆಯಲ್ಲಿ ನೂತನವಾಗಿ ದೇವಸ್ಥಾನ ಕಟ್ಟಿಸಿ[೨೪೭] ದಾನ ನೀಡಿದ ವಿವರಗಳನ್ನು ಗಮನಿಸಿದರೆ ಹೊಸದಾಗಿ ಕಟ್ಟಿಸಿದ ಕೋಟೆಯಲ್ಲಿ ಯಾವುದೇ ದೇವಸ್ಥಾನವಿಲ್ಲದ ಕಾರಣ ಹೊಸ ದೇವಸ್ಥಾನ ಕಟ್ಟಿಸಿರುವುದನ್ನು ಶಾಸನ ದೃಢಿಕರಿಸುತ್ತದೆ. ಕೋಟೆಯೊಳಗೆ ಮುಮ್ಮಡಿ ತಮ್ಮೇಗೌಡನು ೩ ಗರ್ಭಗೃಹಗಳ ದ್ರಾವಿಡ ಶೈಲಿಯ ಅವಿಮುಕ್ತೇಶ್ವರ ದೇವಾಲಯವನ್ನು ಕಟ್ಟಿಸಿದ್ದನು[೨೪೮]. ಕೋಟೆಯೊಳಗೆ ಅವಿಮುಕ್ತೇಶ್ವರ ದೇವಾಲಯದ ಜೊತೆಗೆ ವಿಠಲೇಶ್ವರ ದೇವಾಲಯ, ೨ ಆಂಜನೇಯ ದೇವಾಲಯ, ವರದರಾಜ ದೇವಾಲಯವಿದೆ.

ಸುಗಟೂರಿನಿಂದ ದಕ್ಷಿಣಕ್ಕೆ ಸುಮಾರು ೧೫ ಕಿ.ಮೀ. ದೂರದಲ್ಲಿ ಸುಗಟೂರು ಪ್ರಭುಗಳು ತಮ್ಮ ಮೂಲ ಆಳ್ವಿಕೆ ಸ್ಥಳಕ್ಕಿಂತಲೂ ಹೆಚ್ಚು ಸುರಕ್ಷಿತ ಮತ್ತು ಆಯಾಕಟ್ಟಿನ ಸ್ಥಳವೆಂದು, ಆಯ್ದುಕೊಂಡ ಸ್ಥಳದಲ್ಲಿ ಪೂರ್ವ–ಪಶ್ಚಿಮವಾಗಿ ೧೦೦೦ ಮೀ, ಉತ್ತರ–ದಕ್ಷಿಣವಾಗಿ ೫೫೦ ಮೀ, ಪ್ರದೇಶದಲ್ಲಿ ಆಯತಾಕಾರ ರೂಪದಲ್ಲಿ ಹೊರಭಾಗದಲ್ಲಿ ೨೦ ಮೀ. ನಿಂದ ೩೦–೩೫ ಮೀ ಅಗಲ, ೧೦–೧೫ ಮೀ, ಆಳದ ಕಂದಕಗಳಿಂದ ಕೂಡಿದ, ಕಂದಕಗಳಿಂದ ತೆಗೆದ ಮಣ್ಣನ್ನೇ ಕೋಟೆಯ ಗೋಡೆಗಳ ರಚನೆಗೆ ಬಳಸಲಾಗಿದೆ. ಕೋಟೆಯ ಹೊರಮೈಯನ್ನು ಸ್ಥಳೀಯವಾಗಿ ಲಭ್ಯವಿರುವ ಕಲ್ಲುಗಳನ್ನೆ ಬಳಸಲಾಗಿದ್ದು, ಈಗ ಅಳಿದುಳಿದಿರುವ ಕೋಟೆಯ ಒಳಭಾಗದ ಕಂದಕಗಳ ಅಗಲ ೫–೬ ಮೀ ಗಳಷ್ಟು ಇದೆ. ಕೋಟೆಯ ಹೊರಮೈಯನ್ನು ಸ್ಥಳೀಯವಾಗಿ ಲಭ್ಯವಿರುವ ಕಲ್ಲುಗಳನ್ನೆ ಬಳಸಲಾಗಿದ್ದು, ಈಗ ಅಳಿದುಳಿದಿರುವ ಕೋಟೆಯ ಒಳಭಾಗದ ಕಂದಕಗಳ ಅಗಲ ೫–೬ ಮೀ ಗಳಷ್ಟು ಇದೆ.

ನೆಲಮಂಗಲದಲ್ಲಿ ಕೋಟೆ ಇದ್ದಿದ್ದರ ನೆನಪಿಗಾಗಿ ಈಗಲೂ ಕೋಟೆ ಮಾರಮ್ಮ, ಕೋಟೆ ಚೌಡೇಶ್ವರಿ ಎಂದು ಒಂದು ಬೀದಿಯನ್ನು ಕೋಟೆ ಬೀದಿ ಎಂದು ಪ್ರಚಲಿತದಲ್ಲಿದೆ. ಬಹುಶಃ ಮೊಗಲರು, ಬಿಜಾಪುರ ಸುಲ್ತಾನರಿಂದ ನೆಲಮಂಗಲವನ್ನು ಆಕ್ರಮಿಸಿ ಕೊಂಡಿದ್ದಿರಬೇಕು.

ಹೀಗೆ ಶೈವನಾದವನು ವೈಷ್ಣವನಾಗಿ, ವೈಷ್ಣವನಾದವನು ಶೈವನಾಗಿ ಬದುಕಲು ಅಂದಿನ ಧಾರ್ಮಿಕ ಸಾಮರಸ್ಯವೇ ಸಮಾಜದ ಮುಖ್ಯ ಜೀವಾಳವಾಗಿತ್ತು, ಆಗಿನ ರಾಜರ ವ್ಯವಸ್ಥೆಯೇ ಈಗಿನ ರಾಜಕೀಯ ವ್ಯವಸ್ಥೆಗಿಂತ ಉತ್ತಮವಾಗಿತ್ತೆನಿಸುತ್ತದೆ. ತೆರಿಗೆ ವ್ಯವಸ್ಥೆ ಇದ್ದರೂ ಹಲವಾರು ಸಾಮಾಜಿಕ ಕಾರ್ಯಗಳು ನಡೆಯುತ್ತ ಪ್ರಜೆಗಳು ಸುಖಕರವಾಗಿದ್ದರು. ರಾಜನು ಸಮಾಜದ ಒಂದು ಭಾಗವಾಗಿ ಪ್ರಜೆಗಳಿಗೆ ಹಲವಾರು ಕಲ್ಯಾಣ ಕಾರ್ಯಗಳನ್ನು ಮಾಡುತ್ತಿದ್ದನು.

---

[೨೪೭] ಎ.ಕ-೯, ಅನುಬಂಧ, ಹೊ.ತಾ.೧೬೭, ತಾಮ್ರ ಶಾಸನ, ಹೊಸಕೋಟೆ.
[೨೪೮] ಡಾ. ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ :- ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೩.

## ಅಧ್ಯಾಯ – ೫

# ದೇವಾಲಯಗಳು

ಯಾವುದೇ ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ತಿಳಿಸುವಲ್ಲಿ ದೇವಾಲಯಗಳು, ಶಾಸನಗಳು ಅಮೂಲ್ಯವಾದ ಆಕಾರಗಳಾಗಿರುತ್ತದೆ. ಪ್ರಾಚೀನ ಕಾಲದ ಜನ ಜೀವನದ ಬದುಕು ಶಾಸನಗಳಲ್ಲಿ ಅಭಿವ್ಯಕ್ತಿಗೊಂಡಿರುವಂತೆ ಇನ್ನೆಲ್ಲೂ ವ್ಯಕ್ತವಾಗಿಲ್ಲ. ಸಮಾಜದ ನಂಬಿಕೆಗಳ ಸಂಕೇತವಾದ ಹಲವಾರು ದೇವಾಲಯಗಳು ಮೋಕ್ಷ ಸಾಧನೆಯ ಒಂದು ದಾರಿಯಾಗಿತ್ತು. ದೇವಾಲಯಗಳು ಧಾರ್ಮಿಕ ಚಟುವಟಿಕೆಗಳ ಜೊತೆಗೆ ಪ್ರಾಚೀನ ಕಾಲದಿಂದ ವಿದ್ಯಾಕೇಂದ್ರಗಳಾಗಿ, ನ್ಯಾಯ ಕೇಂದ್ರಗಳಾಗಿ ಮಾನವನ ಬದುಕಿನಲ್ಲಿ ಮಹತ್ವದ ಪಾತ್ರ ವಹಿಸಿವೆ. ದೇವಾಲಯ ಎಂದರೆ ದೇವ+ಆಲಯ, ದೇವ ಎಂದರೆ ಧಿವಿ ಸಂಬಂಧಿ, ಪುರುಷ ವೇದಗಳ ಕಾಲದಲ್ಲಿ ಆಕಾಶದ ದೇವರುಗಳು ಎಂದು ಗುರುತಿಸಿರುವ ದೇವತೆಗಳನ್ನು ಪೂಜಿಸಲು ನಿರ್ಮಿಸಿರುವ ಆಲಯಗಳೇ ದೇವಾಲಯಗಳು. ಆಲಯ ಎಂಬ ಶಬ್ದಕ್ಕೆ ಹೆರುವ ಜಾಗ, ನಿಕೇತ, ದೇವಾಯತನ ಎಂದು ಅರ್ಥ. ಆಯತನ ಎಂದರೆ ಆಶ್ರಯ ಸ್ವರೂಪ, ಈ ಕಲ್ಪನೆ ದೇಹದಿಂದ ಬಂದಿತು. ಆತ್ಮದ ಸಿದ್ಧಾಂತದ ಮೇಲೆ ದೇವಾಲಯದ ನಿರ್ಮಾಣವಾಗಿದೆ. ಮೂಲತಃ ದೇವಾಲಯ ಒಂದು ಕಟ್ಟಡ, ಸಾಮೂಹಿಕ ಪೂಜೆ, ಪ್ರಾರ್ಥನೆಗಳನ್ನು ಸಲ್ಲಿಸಲು ಅನುಕೂಲವಿರುವ ಒಂದು ಸ್ಥಳ. ಪೂಜೆಗಾಗಿ ಪ್ರತಿಮೆಗೊಂದು ನೆಲೆಯಾಗಿ, ಸರ್ವಾಜನಿಕ ಸಮಾವೇಶಕ್ಕೊಂದು ಸ್ಥಳವಾದ ಕಟ್ಟಡವೇ ದೇವಾಲಯ, ದೇವಸ್ಥಾನ, ಗುಡಿ, ದೇವಮಂದಿರ, ದೇಗುಲ, ದೇವಳ ಮುಂತಾದ ಹೆಸರುಗಳಿಂದ ಕರೆಯುವುದುಟುಂ.

ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಶವಯ್ಯ ಎಂದು ಬಸವಣ್ಣನವರು ವಚನೊಂದರಲ್ಲಿ ದೇಹವನ್ನು ದೇವಾಲಯಕ್ಕೆ ಹೋಲಿಸಿದ್ದಾರೆ. ದೇಹದ ಮೂಲ ಸ್ವರೂಪವನ್ನೆ ದೇವಾಲಯವಾಗಿ ನಿರ್ಮಿಸಲು ಪ್ರಾರಂಭಿಸಿದರು.

ಉದಾ : ದೇವಾಲಯದ ಅಧಿಷ್ಠಾನ – ಪಾದ, ಕಂಬ – ತೊಡೆ, ಪ್ರಸ್ತರ – ಹೊಟ್ಟೆ, ಗ್ರೀವ – ಕತ್ತು, ಶಿಖರ – ತಲೆ

ದೇವಾಲಯದ ತಳವಿನ್ಯಾಸದ ಭಾಗಗಳಲ್ಲಿ – ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ, ಏರುವಿನ್ಯಾಸ ಭಾಗಗಳಲ್ಲಿ – ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಸ್ತೂಪಿಗಳು ಕಂಡು ಬರುತ್ತದೆ. ದೇವಾಲಯಗಳು ಬೌದ್ಧ ಸ್ತೂಪಗಳಿಂದ ಉಗಮವಾದವೇ, ವೇದಗಳ ಕಾಲದಿಂದ

ಬೆಳೆದು ಬಂದುದೇ, ಸಮಾಧಿಗಳು ಮಂದಿರಗಳಾಗಿ ಬದಲಾವಣೆಯಾಗಿರ ಬಹುದು. ಗಂಗರ ಪ್ರಾರಂಭದ ಗುಡಿಗಳು ಬೃಹತ್ ಶಿಲಾಯುಗದ ಕಲ್ಮನೇಯನ್ನು ನೆನಪಿಸುತ್ತದೆ.

ವಿಮಾನದ ಶೈಲಿಯ ವಿನ್ಯಾಸಗಳು, ಕೂಟ, ಕೋಷ್ಠಕ, ಶಾಲೆಗಳ ಆಧಾರದ ಮೇಲೆ ದೇವಾಲಯದಲ್ಲಿ ಗರ್ಭಗುಡಿ, ನವರಂಗ, ಮಂಟಪ, ಪ್ರಕಾರ, ಗೋಪುರ ಹೀಗೆ ವಿಭಿನ್ನ ಭಾಗಗಳನ್ನು ಒಳಗೊಂಡ ದ್ರಾವಿಡ ಶೈಲಿಯಲ್ಲಿ ನಿಮಾಣವಾದ ದೇವಾಲಯಗಳೇ ಹೆಚ್ಚಾಗಿ ಜಿಲ್ಲಾದ್ಯಂತ ಕಂಡು ಬರುತ್ತದೆ.

ವಿವಿಧ ಕಾಲಘಟ್ಟದಲ್ಲಿ ವಿಭಿನ್ನ ಶೈಲಿಯ ದೇವಾಲಯಗಳ ನಿರ್ಮಾಣ, ಜೀರ್ಣೋದ್ದಾರ, ಗರುಡ ಕಂಬಗಳು, ದೀಪಸ್ತಂಭಗಳು, ಉಯ್ಯಾಲೆ ಮಂಟಪ, ಮಕರ ತೋರಣ, ತೀರ್ಥ ಕಂಬಗಳು ಇತ್ಯಾದಿಗಳ ನಿರ್ಮಾಣಕ್ಕೆ, ಅವುಗಳ ನಿರ್ವಹಣೆಗೆ, ಜೀರ್ಣೋದ್ದಾರಗಳಿಗಾಗಿ, ನಿತ್ಯದ ಪೂಜೆ ಪುನಸ್ಕಾರಗಳು ಕಾಲ ಕಾಲಕ್ಕೆ ನಡೆಸಿಕೊಂಡು ಹೋಗಲು ರಾಜ, ರಾಜನ ಮಾಂಡಲೀಕ, ಸಾಮಂತರು, ಅಧಿಕಾರಿಗಳು, ವರ್ತಕರ ವೃಂದ, ಭಕ್ತವೃಂದ ಹೀಗೆ ಆಳರಸರಿಂದ ಹಿಡಿದು ಭಕ್ತವೃಂದರಾದ ಜನ ಸಾಮಾನ್ಯರು ದೇವರ ಮೇಲಿನ ಭಕ್ತಿಯಿಂದ ತಮ್ಮ ಕೈಲಾದಷ್ಟು ಭೂಮಿ, ಹಣ, ದವಸ–ಧಾನ್ಯ, ಎಣ್ಣೆ, ಗಾಣ, ದನ–ಕರುಗಳು, ತೆರಿಗೆ–ಸುಂಕ, ಒಡವೆಗಳು, ಉಡುಗೊರೆಗಳು, ಗ್ರಾಮಗಳು, ಅಗ್ರಹಾರಗಳು ಇತ್ಯಾದಿಯಾಗಿ ಅನೇಕ ದಾನ ದತ್ತಿಗಳನ್ನು ನೀಡುತ್ತಿದ್ದರು. ಹೀಗೆ ಬಂದಂತಹ ದಾನ ದತ್ತಿಗಳಲ್ಲಿ ಪೂಜೆ ಪುನಸ್ಕಾರ, ಅಮೃತಪಡಿ, ನೈವೇದ್ಯ, ಅಂಗ ರಂಗ ವೈಭೋಗ, ಉತ್ಸವಗಳು, ರಥೋತ್ಸವ ಇತ್ಯಾದಿ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಕೊಂಡು ಹಾಗೂ ಪುಜಾರಿ, ಆಡಳಿತ ವರ್ಗಗಳ (ಸಿಬ್ಬಂದಿಯ) ಖರ್ಚು ವೆಚ್ಚಗಳಿಗಾಗಿ ನಿಯಂತ್ರಿಸಲು ಆಡಳಿತ ಮಂಡಳಿಯಂತಹ ಒಂದು ಸಮಿತಿಯು ಇದ್ದಿರಬೇಕು. ದೇವಾಲಯದ ಭೂಮಿಯಲ್ಲಿ (ದೇವಸ್ಥಾನದ ಆಸ್ತಿಯನ್ನು ದೇವ ಬೋಗ ಎಂದು ಕರೆಯುತ್ತಿದ್ದರು.) ಬೆಳೆದಂತಹ ಬೆಳೆಗಳನ್ನು ಸಂತೆಯಲ್ಲಿ ಮಾರಾಟವಾದ ವಸ್ತುಗಳಿಂದ ಸಂಗ್ರಹವಾದ ಹಣವನ್ನು, ದ್ರವ್ಯವನ್ನು ದೇವಾಲಯದ ಅಭಿವೃದ್ಧಿಗೆ ಖರ್ಚು ಮಾಡಲಾಗುತ್ತಿತ್ತು.

ಗಂಗರ ಕಾಲದಿಂದ ಪ್ರಾರಂಭವಾಗಿ ಮೈಸೂರು ಒಡೆಯರ ಕಾಲದವರೆಗೂ ಹಲವಾರು ಧಾರ್ಮಿಕ ಕಾರ್ಯಗಳು ಕಾಲ ಕಾಲಕ್ಕೆ ನಡೆಯಬೇಕೆಂದು ದಾನ ನೀಡಿರುವುದರ ಬಗ್ಗೆ ದೇವಸ್ಥಾನದ ಅಧಿಸ್ಥಾನ, ಪೀಠ, ಪಟ್ಟಿಕೆ, ಬಿತ್ತಿ, ಗೋಡೆಗಳು, ಬಾಗಿಲು, ಆವರಣದ ಮುಂದೆ ಮುಂತಾದ ಸ್ಥಳಗಳಲ್ಲಿನ ಶಾಸನಗಳು ಮಾಹಿತಿ ನೀಡುತ್ತದೆ. ಆಳರಸರು ಯಾವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಹ ನೀಡುತ್ತಾರೆ ಆ ಧರ್ಮವು ಉಚ್ಚಸ್ಥಿತಿಯಲ್ಲಿದ್ದು, ಆ ಧರ್ಮದ ಅನೇಕ ದೇವಾಲಯಗಳು ರಚನೆಯಾಗಿ ವಿಜೃಂಭಣೆಯಿಂದ ದೇವರ

ಸೇವೆಗಳು ನಡೆಯುತ್ತಿತ್ತು. ಪ್ರಾಚೀನ ಕಾಲದ ದೇವಾಲಯಗಳು ಅಂದಿನ ಕಾಲದ ಜನರಲ್ಲಿ ಬೇರೂರಿದ್ದ ಜೀವನದ ಶ್ರದ್ಧೆ, ಭಕ್ತಿ, ನಿಷ್ಠೆಗಳನ್ನು ತೋರಿಸುತ್ತದೆ. ಇದರಿಂದಾಗಿ ಪ್ರತಿಯೊಂದು ಊರಿನಲ್ಲಿ ದೇವಾಲಯಗಳು ನಿರ್ಮಾಣವಾಗುತ್ತಿತ್ತು.

ಶೆಟ್ಟಿಹಳ್ಳಿಯ ಚನ್ನರಾಯ ಸ್ವಾಮಿ ದೇವಸ್ಥಾನದ ಗರುಡ ಕಂಬದ ಕಲ್ಲನ್ನು[೧], ಸೋಮೇಶ್ವರ ದೇವಾಲಯದ ಗರುಡ ಕಂಬವನ್ನು ಪೋಲಿಸೆಟ್ಟಿಯು[೨], ಬೆಳತೂರು ಗೋಪಾಲಸ್ವಾಮಿಯ ಗರುಡ ಕಂಬವನ್ನು ದೇವೀಜಿಯನು[೩], ಶಾಸನೋಕ್ತವಾಗಿರುವ ತಿರುಮಲ ದೇವರು ಈಗ ಗೋಪಾಲ ಸ್ವಾಮಿಯಾಗಿ ಬದಲಾಗಿದೆ. ಮಂಡೂರು ಚನ್ನಕೇಶವ ದೇವಸ್ಥಾನದ ಗರುಡಕಂಬವನ್ನು ಮಂಜ ತಿಮ್ಮದ ದಣ್ನಾಯಕನು[೪], ರಾಮಸ್ವಾಮಿ ದೇವಾಲಯದ ಗರುಡ ಕಂಭವನ್ನು ಮಾರಪ್ಪನು[೫],

ಕ್ರಿ.ಶ.೧೩೮೬ ರಲ್ಲಿ ಚಿಕ್ಕ ಅಂಕಿಯ ನಾಯಕರು ತಿರುಮಲೆನಾಥ ದೇವರಿಗೆ ಪ್ರೀತ್ಯರ್ಥವಾಗಿ ದೀಪಮಾಲೆಯ ಕಂಬವನ್ನು[೬], ಕ್ರಿ.ಶ.೧೪೦೭ ರಲ್ಲಿ ಮಲ್ಲಿಸೆಟ್ಟಿಯು ದೀಪಮಾಲೆಯ ಕಂಬವನ್ನು[೭], ದುರ್ಮುಖಿ ಸಂವತ್ಸರದ ಚೈತ್ರ ಶು ೧ ಗುರುವಾರದಂದು ತಿರುಮಲೆ ದೀಪಕಂಬವನ್ನು ದೇವರಾಯ ಒಡೆಯರ ಆಳ್ವಿಕೆಯಲ್ಲಿ ಓಬಂಗಿರಿಯು[೮], ಶಾಸನೋಕ್ತ ತಿರುಮಲೆ ದೇವರ ಗರುಡ ಕಂಬವು ಈಗ ಹನುಮಂತ ದೇವರ ಗರುಡಕಂಬವಾಗಿದೆ. ಆಂಜನೇಯ ಸ್ವಾಮಿ ದೇವಸ್ಥಾನದ ದೀಪಸ್ತಂಭವನ್ನು ಕಾರ್ತಿಕ ಶು ೫ ಲು ಇಮ್ಮಡಿ ಹಾವಳ ಬಯಿರೇಗೌಡರು ದೇವರಿಗೆ[೯] ದೀಪಮಾಲೆ ಕಂಬವನ್ನು ನಿಲ್ಲಿಸಿದ್ದಾರೆ.

ದೀಪಕಂಬಗಳ ನಿರ್ಮಾಣದ ಜೊತೆಗೆ ದೀಪಾರಾಧನೆ ಒತ್ತು ನೀಡಿ ಹಲವಾರು ದಾನ ದತ್ತಿಗಳನ್ನು ನೀಡಿರುವುದನ್ನು ಕಾಣಬಹುದು. ರಾಜೇಂದ್ರ ಚೋಳ ದೇವರ ೨೭ ನೇ ವರ್ಷದಲ್ಲಿ ಮಾಣಿಕ ಶೆಟ್ಟಿ, ಕುಕ್ಕನೂರು ನಾಡಿನ ನಿವಾಸಿಗಳು, ವಿನ್ನಮಂಗಲದ ರಾಜೇಂದ್ರ ಚೋಳ ಗಾವುಂಡರು ಸೇರಿ ಕ್ರಿ.ಶ.೧೦೩೮ ರಲ್ಲಿ ಚಾಮುಂಡೇಶ್ವರಿಗೆ ಹಾಗೂ ಸಿದ್ದೀಶ್ವರನಿಗೆ ರೇಷ್ಮೆ, ಹತ್ತಿ, ಮರಗಳನ್ನು ಕೊಟ್ಟು, ನೈವೇದ್ಯ, ದೀಪಾರಾಧನೆಗೆ ದಿನಕ್ಕೆ ೩ ಬಾರಿ ಅಕ್ಕಿಯನ್ನು[೧೦], ಕ್ರಿ.ಶ.೧೩೨೧ ರಲ್ಲಿ ತೊಲಪ್ಪನ್ ನರಸಿಂಹ..... ಮುಂದಿಶ್ವರ

---

[೧] ಎ.ಕ-೯, ಹೊ.ತಾ.೫, ಶೆಟ್ಟಿಹಳ್ಳಿ.
[೨] ಎ.ಕ-೯, ಹೊ.ತಾ.೧೧೪, ಕ್ರಿ.ಶ.೧೪೨೬, ಕಸಬಾ.
[೩] ಎ.ಕ-೯, ಹೊ.ತಾ.೧೫೫, ಕ್ರಿ.ಶ.೧೪೩೩, ಬೆಳತೂರು.
[೪] ಎ.ಕ-೯, ಹೊ.ತಾ.೧೨೫, ಕ್ರಿ.ಶ.೧೪೦೮, ತಮಿಳು, ಕಿತಗನೂರು.
[೫] ಎ.ಕ-೯, ದೇ.ತಾ.೩೯, ಕ್ರಿ.ಶ.೧೪೦೧, ನಲ್ಲೂರು.
[೬] ಎ.ಕ-೯, ದೇ.ತಾ ೪೦, ಗರುಡ ಕಂಬದ ೨ನೇ ಕಲ್ಲು, ನಲ್ಲೂರು.
[೭] ಎ.ಕ-೯, ಹೊ.ತಾ.೧೪೧, ಕ್ರಿ.ಶ.೧೪೦೭, ಕಾಡುಗುಡಿ.
[೮] ಎ.ಕ-೯, ದೊ.ತಾ.೧೬, ಕ್ರಿ.ಶ.೧೪೧೬, ಹಾಡೋನಹಳ್ಳಿ.
[೯] ಎ.ಕ-೯, ದೊ.ತಾ.೭೦,ಅನುಬಂಧ, ಕ್ರಿ.ಶ.೧೬೧೦, ದೊಡ್ಡಬಳ್ಳಾಪುರ.
[೧೦] ಎ.ಕ-೯, ನೆ.ತಾ.೭ಎ, ಕ್ರಿ.ಶ.೧೦೩೮, ತಮಿಳು, ಆಬೂರು.

ದೇವರಿಗೆ ದೀಪಾರಾಧನೆಗೆ ಭೂದಾನ ಬಿಟ್ಟ ವಿವರವನ್ನು ದೇವಸೆಟ್ಟಿಹಳ್ಳಿ ಕೆರೆಯ ಪೂರ್ವ ಕೋಡಿಯ ತೂಬಿನಕಲ್ಲಿನ ಮೇಲೆ[೧೧], ಕ್ರಿ.ಶ.೧೪೧೧ ರ ವೀರ ವಿಜಯ ಬುಕ್ಕರಾಯರ ಮುಲವಯ್‌ನಾಡಿನ ಸುಂಕಾಧಿಕಾರಿ ಪೆರುಮಾಳುವಿನ ಸೇವಕನಾದ ತಿಯಗ, ಎರುಮರ್ೈನಾಡಿನ ಸುಂಕಾಧಿಕಾರಿ ಕರ್ೈಕಿಲನ್, ಪುಲಿಯೂರು ಮತ್ತು ಅಲಗಿಯ ವರದರ್ ಸೊಕ್ಕರು ಎರುಮರ್ೈನಾಡಿನ ಸಮ್ಮೆಯ ಮಂತ್ರಿಪಲ್ಲಿಯಲ್ಲಿನ ಕೇಶವನಾಥ ದೇವರಿಗೆ ದೀಪಾರಾಧನೆಗೆ ಜಮಯ ಮುಂದಿರಿಪಲ್ಲಿನ ತೆರಿಗೆ, ಆದಾಯದ ಹಣವನ್ನು[೧೨], ಕ್ರಿ.ಶ.೧೩೧೫ ರಲ್ಲಿ ವಲ್ಲಾಳದೇವರ ಜಯಾದನುಸಾರ ಮಹಾ ಸಾಮಂತಾಧಿಪತಿ ಸಕ್ಕಯ ನಾಯಕರ ಮಗ ವೈಸಂದಗಲಿ ದೇವನು, ನಾಡಿನ ನಿವಾಸಿಗಳು ಸೇರಿ ಸೆವಿದೈನಾಯನರು ದೇವರಿಗೆ ಕ್ಯೂರ್ ವಿಭಾಗದ ಅರ್ೈಯುರನ್‌ಪಳ್ಳಿ ಗ್ರಾಮದಲ್ಲಿನ ಮರಗಳು, ಭೂಮಿಯ ಒಳಗಿನ, ಹೊರಗಿನ ಹಾಗೂ ೪ ಕೊಳಗ ೧ ಊರಿಭತ್ತವು ದಿನಕ್ಕೆ ಒಂದು ಸಲ ದೀಪಾರಾಧನೆಗೆ ಸೂರ್ಯ, ಚಂದ್ರ ಇರುವವರೆಗೆ ಕೊಡಬೇಕು ಎಂದು[೧೩], ಆಷಾಡ ಸು ೧ ಲು ದಾಸನಾಯಕರಿಗೆ ಪುಣ್ಯವಾಗಬೇಕೆಂದು ತೂಬರೆಯ ತಿರುಮಲ ದೇವರಿಗೆ ನಂದಾದೀಪಕ್ಕೆ ತಿಮ್ಮಪ್ಪನು ಹೊಲವನ್ನು ಕೊಟ್ಟನು[೧೪].

ಹೀಗೆ ಗರ್ಭಗೃಹದಲ್ಲಿ ದೇವರ ಮುಂದಿನ ದೀಪಾಕ್ಕೆ ಏಕೆ ಅಷ್ಟೊಂದು ಪ್ರಮುಖ್ಯ ನೀಡುತ್ತಿದ್ದರು? ಅದು ಕೇವಲ ಧಾರ್ಮಿಕ ನಂಬಿಕೆನಾ? ಅಥವಾ ದೇವರ ಮುಂದಿನ ದೀಪ ಆರಬಾರದೆಂಬ ಮೂಢ ನಂಬಿಕೆನಾ? ಎಣ್ಣೆಗಾಣದ ಮಹತ್ವವೇನು? ಎಂಬ ಪ್ರಶ್ನೆಗಳು ಕಾಡುತ್ತವೆ. ಹಿಂದಿನ ಕಾಲದಲ್ಲಿ ವಿದ್ಯುತ್ ದೀಪಗಳು, ಬೆಂಕಿ ಪಟ್ಟಣಗಳು, ಬೆಂಕಿಯನ್ನು ಸುಲಭವಾಗಿ ಎಲ್ಲೆಂದರಲ್ಲಿ ಉತ್ಪಾದಿಸಲು ಸಾಧ್ಯವಿರಲಿಲ್ಲ ಹೀಗಾಗಿ ಊರಿನಲ್ಲಿ ಯಾವುದಾದರೂ ಸುರಕ್ಷಿತ ಸ್ಥಳದಲ್ಲಿ ದೀಪ ಆರಿಹೋಗದಂತೆ ಹತ್ತಿಸಿ ಬೆಂಕಿಯನ್ನು ೨೪ ಥ ೭ ರಂತೆ ಸಂರಕ್ಷಿಸ ಬೇಕಿತ್ತು. ಸಮಾಜದ ಎಲ್ಲ ಜನರಿಗೆ ಅತ್ಯಗತ್ಯವಾಗಿತ್ತು. ಈಗ ವಿದ್ಯುತ್ ಸರಬರಾಜು ಮಾಡುವಂತೆ ಅಂದು ಅಗತ್ಯ ಬಿದ್ದವರಿಗೆ ಕಿಡಿಯನ್ನು ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಸಾಗಿಸಲು ಗರ್ಭಗುಡಿಯ ದೇವರ ಮುಂದೆ ಅನಿರ್ವಾಣ ಅಥವಾ ನಂದಾ ದೀಪವನ್ನು ಹೊತ್ತಿಸಲಾಗುತ್ತಿತ್ತು. ಮೊದಲು ಗರ್ಭಗೃಹದ ದೀಪದಿಂದ ಹೊರಗಿನ ದೀವಟಿಕೆಯಲ್ಲಿನ ದೀಪಗಳನ್ನು ಹೊತ್ತಿಸುತ್ತಿದ್ದರು. ಇದರಿಂದ ಎಲ್ಲರೂ ತಮ್ಮ ಅಗತ್ಯಕ್ಕೆ ತಕ್ಕಂತೆ ದೀಪಗಳನ್ನು ಹೋಯ್ಯುತ್ತಿದ್ದರೆನಿಸುತ್ತದೆ. ಆದ್ದರಿಂದ ದೇವಾಲಯಗಳಲ್ಲಿ ದೀಪಗಳ ನಿರ್ವಾಹಣೆ ಮತ್ತು ಎಣ್ಣೆಗಳ ಅಗತ್ಯಗಳಿಗೆ ದಾನಗಳನ್ನು ನೀಡುತ್ತಿದ್ದರು. ಸಮಾಜದ ಒಳಿತಿಗಾಗಿ ಇರುವುದರಿಂದ ಎಣ್ಣೆ ಗಾಣಗಳನ್ನೆ ದಾನ ನೀಡಿರುವುದಕ್ಕೆ

---

[೧೧] ಎ.ಕ-೯, ಹೊ.ತಾ.೧೪೦.ಇ, ಕ್ರಿ.ಶ.೧೩೨೧, ತಮಿಳು, ದೇವಸೆಟ್ಟಿಹಳ್ಳಿ.
[೧೨] ಎ.ಕ-೯, ಹೊ.ತಾ.೧೪೯, ಕ್ರಿ.ಶ.೧೪೧೧, ತಮಿಳು, ಸಮೇತನಹಳ್ಳಿ.
[೧೩] ಎ.ಕ-೯, ಹೊ.ತಾ.೧೫೯, ಕ್ರಿ.ಶ.೧೩೧೫, ತಮಿಳು ಅರಹಳ್ಳಿ.
[೧೪] ಎ.ಕ-೯, ದೊ.ತಾ.೧೩, ತೂಬಗೆರೆ.

ಪರಮನಹಳ್ಳಿ ಊರಿನ ಗಾಣದ ಮೇಲೆ ನಂಜುಂಡ ಭಟ್ಟರು ಕೊಟ್ಟಿರುವುದನ್ನ ಕಾಣ ಬಹುದು[೧೫]. ಗರ್ಭಗೃಹದಲ್ಲಿನ ದೀಪ ಆರದಂತೆ ದೇವಾಲಯದ ಸಿಬ್ಬಂದಿ ವರ್ಗದವರ ಜವಾಬ್ಧಾರಿಯಾಗಿತೆನಿಸುತ್ತದೆ.

ಪ್ರತಿ ನಿತ್ಯ ದೇವಾಲಯದ ಕಾರ್ಯಗಳಿಗೆ ಅಗತ್ಯವಾದ ಸಿಬ್ಬಂದಿ ವರ್ಗವನ್ನು ಹೊಂದಿರುತ್ತಿದ್ದರ ಎಂಬುದಕ್ಕೆ ಕ್ರಿ.ಶ.೧೫೪೯ ರಲ್ಲಿ ಅಮೃತ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಅಪ್ಪಾಜಿಯು[೧೬], ಕ್ರಿ.ಶ.೧೪೪೪ ರಲ್ಲಿ ವರದರಾಜದೇವ ದೇವಸ್ಥಾನದಲ್ಲಿ ಕ್ರಿಯಾಸಕ್ತಿದೇವನು[೧೭], ಕ್ರಿ.ಶ.೧೫೬೨ ರಲ್ಲಿ ಹೊಸಹಳ್ಳಿಯ ಧರ್ಮೇಶ್ವರ ದೇವಾಲಯದಲ್ಲಿ ಹರಿಯಪ್ಪನು[೧೮], ಕ್ರಿ.ಶ.೧೫೭೪ ರಲ್ಲಿ ವಡಿಗೇನಹಳ್ಳಿಯ ಚನ್ನಯ್ಯ ದೇವರ ಗುಡಿಯಲ್ಲಿ[೧೯] ರಾಮಪ್ಪಯ್ಯನು ಸ್ಥಾನಿಕನಾಗಿ ಸೇವೆ ಸಲ್ಲಿಸುತ್ತಿದ್ದರು.

ದೇವರ ಪೂಜೆಯನ್ನು ಮಾಡುವವನಾದ ಅರ್ಚಕನು ಮಂತ್ರಗಳನ್ನು ಪಠಿಸುತ್ತಿದ್ದನು[೨೦], ಇಂತಹ ಪೂಜಾರಿಗೆ ತೆರಿಗೆ ರಹಿತವಾಗಿ ದಾನ ನೀಡಿರುವುದನ್ನು ನೆಲವಾಗಿಲುಹಳ್ಳಿಯ ದೊಡ್ಡ ಕೆರೆ ಏರಿ ಕೆಳಗಿನ ಶಾಸನದಲ್ಲಿ ಕಾಣಬಹುದು. ಕ್ರಿ.ಶ.೧೩೭೯ ರಲ್ಲಿ ಅಂಕಯನಾಯಕರು ನೊಂಡಂಗುಲನಾಡಿಗೆ ಸೇರುವ ಸೆಲ್ವ ನಾರಾಯಣ ದೇವರ ದೇವಸ್ಥಾನದ ಪೂಜಾರಿ ವೆಂಗದಂ ಒಡೆಯನಿಗೆ ತೆರಿಗೆ ರಹಿತವಾಗಿ ೨ ವರ್ಷ, ಅನಂತರ ತೆರಿಗೆ ಕಟ್ಟಬೇಕು[೨೧]. ಸತ್ತುವಯಾರ್ ತಿಯಗರನು ಪೂಜೆ ಪುನಸ್ಕಾರ ಎಲ್ಲವನ್ನು ಮಾಡಿಕೊಂಡು ಇರಲು ಚೊಕ್ಕನಾಯನು ರಾಮನಾಥ ದೇವರ ೩೯ ನೇ ಆಳ್ವಿಕೆಯ ರಾಮನಾಥರಿಗೆ ಒಳ್ಳೆಯದಾಗ ಬೇಕೆಂದು ಬ್ರಾಹ್ಮಣನಿಗೆ ಕೆಲವು ಭೂ ಭಾಗಗಳನ್ನು[೨೨] ಕೊಟ್ಟಿವುದನ್ನು ತಿಮ್ಮರಾಯ ಸ್ವಾಮಿ ದೇವಸ್ಥಾನದಲ್ಲಿನ ಶಾಸನದಲ್ಲಿ ನೋಡಬಹುದು. ಹಂದರಹಳ್ಳಿ ರಂಗಸ್ವಾಮಿ ದೇವಾಲಯದಲ್ಲಿ ಪೂಜೆ ಮಾಡುತ್ತಿದ್ದ ಭಟ್ಟರಿಗೆ ವೃತ್ತಿಯಾನ್ವಯವಾಗಿ ಕ್ರಿ.ಶ.೧೪೯೫ ರಲ್ಲಿ ನರಸಿಂಗರಾಯರ ಆಳ್ವಕೆಯಲ್ಲಿ ತಿರುಮಲೆ ಭಟ್ಟರಿಗೆ ವೃತ್ತಿ ಮೂರು, ಶಂಭು ಭಟ್ಟರಿಗೆ ವೃತ್ತಿವೊಂದು, ತಿರುಮಲೆ ಭಟ್ಟರಿಗೆ ಎತ್ತಿಯರಡು, ಪುಟ್ಟ ಭಟ್ಟರಿಗೆ ವೃತ್ತಿಯೆರಡು, ರಾಮಭಟ್ಟರಿಗೆ ವೃತ್ತಿವೊಂದುಯಾಗಿ[೨೩] ಕ್ರಿ.ಶ.೧೨೮೭ ರಲ್ಲಿ ರಾಮನಾಥ ದೇವರ ೩೩ ನೇ ಆಳ್ವಿಕೆಯಲ್ಲಿ ಮಕರ ಸಂಕ್ರಾಂತಿಯ ದಿನ ಬಳ್ಳಯನಾಡಿನ ರಾಮನಾಥ ದೇವರ ತೋಳನ ಖಡ್ಗದ

---

[೧೫] ಎ.ಕ-೯, ಹೊ.ತಾ.೧೯೪, ಪರಮನಹಳ್ಳಿ.
[೧೬] ಎ.ಕ-೯, ಹೊ.ತಾ.೧, ಕ್ರಿ.ಶ.೧೫೪೯, ನಂದಗುಡಿ.
[೧೭] ಎ.ಕ-೯, ಅನುಬಂಧ, ಹೊ.ತಾ.೧೭೬, ವಾಗಟ.
[೧೮] ಎ.ಕ-೯, ಹೊ.ತಾ.೨೫, ಕ್ರಿ.ಶ.೧೫೬೨, ಹೊಸಹಳ್ಳಿ.
[೧೯] ಎ.ಕ-೯, ದೇ.ತಾ.೩೩, ಕ್ರಿ.ಶ.೧೫೭೪, ಕೊಂಡೇನಹಳ್ಳಿ.
[೨೦] ಎ.ಕ-೯, ಹೊ.ತಾ.೧೦೧, ೧೦೭೫, ಬೇಚರಾತ್ ಮಾರೇನಹಳ್ಳಿ.
[೨೧] ಎ.ಕ-೯, ಹೊ.ತಾ.೫೦, ಕ್ರಿ.ಶ.೧೩೭೯, ತಮಿಳು, ನೆಲವಾಗಿಲುಹಳ್ಳಿ.
[೨೨] ಎ.ಕ-೯, ಹೊ.ತಾ.೧೬೧, ಕ್ರಿ.ಶ.೧೨೯೪, ತಮಿಳು, ಗುನ್ನೂರು.
[೨೩] ಎ.ಕ-೯, ದೇ.ತಾ.೬೬, ಕ್ರಿ.ಶ.೧೪೯೫, ಹಂದರಹಳ್ಳಿ.

ಜಯವು ನಾಡಿನ ಜಯವಾಗಿದ್ದು, ರಾಮನಾಥ ದೇವರ ಚತುರ್ವೇದಿ ಮಂಗಲದಲ್ಲಿ ಗದ್ದೆ ಭೂಮಿಯನ್ನು ಬ್ರಾಹ್ಮಣರಿಗೆ[೨೪] ದಾನ ನೀಡಿರುವುದನ್ನು ಕಾಣಬಹುದು.

ಮದ್ದಳೆ, ಕಾಳೆ, ಸಿತಾರ, ಕಂಸಾಳೆ ವಾದ್ಯಗಳನ್ನು ದೇವರ ಪೂಜೆಯ ಸಮಯದಲ್ಲಿ ನುಡಿಸುತ್ತಿದ್ದರು ಎನ್ನುವುದಕ್ಕೆ ಕ್ರಿ.ಶ.೧೪೩೧ರಲ್ಲಿ ಸೋಮದೇವರ ನೈವೇದ್ಯಕ್ಕೆ ದಾನ ನೀಡಿದ ಶಾಸನದಲ್ಲಿ ಪಾತ್ರಜನಕ್ಕೆ, ಮದ್ದಳೆ, ಕಾಳಯ ಜನಕ್ಕೆ, ಸೀತಾರ ಜನಕ್ಕೆ, ಕಂಸಾಳೆ ಜನಕ್ಕೆ, ಒಟ್ಟು ಹೀಗೆ ೭ ಜನರು ದೇವರ ಪೂಜೆಗೆ ಪೂರಕವಾದ ಕಾರ್ಯಗಳಲ್ಲಿ ನಡೆಸಿಕೊಂಡು ಬರಬೇಕೆಂದು ಹೇಳಿದೆ[೨೫]. ಅಂದರೆ ಪೂಜಾ ಸಮಯದಲ್ಲಿ ಆ ಎಲ್ಲಾ ವಾದ್ಯಗಳನ್ನು ನುಡಿವ ಸಂಪ್ರದಾಯ ಜಾರಿಯಲ್ಲಿತ್ತು.

ದೇವಸ್ಥಾನದಲ್ಲಿ ಪಲ್ಲಕ್ಕಿ ಹೊರುವವರಿಗೆ, ಬೀಸಣಿಗೆ ಬಿಸುವವರಿಗೆ[೨೬], ಹಾಗೇಯೇ ದೇವಸ್ಥಾನಕ್ಕೆ ಕೈಕೋಣೆಯ[೨೭] ಕೆಲಸ ಮಾಡುವಂತವರಿಗೆಲ್ಲಾ ದಾನಗಳನ್ನು ನೀಡಿದ್ದಾರೆ. ದೇವಾಲಯದಲ್ಲಿನ ದಾಸೋಹಕ್ಕಾಗಿ ದಾನಗಳನ್ನು ಸಹ ನೀಡಿರುವುದನ್ನು ರಾಮಾನುಜಪುರದಲ್ಲಿ ದಾಸೋಹ ಮಾಡುವುದಕ್ಕಾಗಿ ನಗರೂರಪುರದ ಗ್ರಾಮದಲ್ಲಿನ ಸರ್ವಮಾನ್ಯವಾಗಿ ಜಂಕೆಯಣ್ಣ ನಾಯ್ಕರು ಬಹುಧಾನ್ಯ ಸಂವತ್ಸರದ ಅಶ್ವಯುಜ ಶುದ್ಧ ೧೧ ರಲ್ಲಿ ದಾನ ನೀಡಿರುವುದನ್ನು ಮಾರಮ್ಮನ ಗುಡಿ ಹಿಂದಿರುವ ಶಾಸನದಲ್ಲಿದೆ[೨೮].

ನೆಲುವಾಗಲುಹಳ್ಳಿಯ ಈಶ್ವರ ದೇವಸ್ಥಾನಕ್ಕೆ ಕ್ರಿ.ಶ.೧೩೪೦ ರಲ್ಲಿ ಪೆರಿಯ ಗೋಮಾಲಿ ಮತ್ತು ಕರಿಯ ಗೋಮಾಲಿ ದಾಸುಗಳನ್ನು[೨೯] ದಾನ ನೀಡಿದ್ದರು. ಹಸುಗಳ ಮೇವುಗಾಗಿ ಗೋಶಾಲೆಯ ರೀತಿಯಲ್ಲಿ ಪ್ರತ್ಯೇಕವಾಗಿ ಒಂದು ಪ್ರದೇಶವನ್ನು ಮೀಸಲಟ್ಟಿದ್ದರು ಜೊತೆಗೆ ಆ ಕಾಲದ ಪ್ರಮುಖ ಹಸುಗಳ ತಳಿಯನ್ನು ಉಲ್ಲೇಖಿಸಲಾಗಿದೆ. ಹಲಸಿನ ಮರವನ್ನು ಶ್ರೀವೆಂಕಟೇಶ್ವರ ಪ್ರಸನ್ನಕ್ಕೆ ಧರ್ಮವಾಗಿ[೩೦] ನೀಡಿದ್ದಾರೆ.

ಜಿಲ್ಲಾ ವ್ಯಾಪ್ತಿಯಲ್ಲಿ ದೇವಾಲಯಗಳ ನಿರ್ಮಾಣದ ಚಟುವಟಿಕೆಗಳು ಗಂಗರ ಕಾಲದಿಂದಲೇ ಆರಂಭವಾಯಿತು, ಗಂಗರು ಕರ್ನಾಟಕದ ಇತಿಹಾಸದಲ್ಲಿ ಬಹು ದೀರ್ಘಕಾಲದವರೆಗೆ ಆಳ್ವಿಕೆ ಮಾಡಿದವರಲ್ಲಿ ಮೊದಲಿಗರು. ಹಲವಾರು ರಾಜಮನೆತನಗಳೊಂದಿಗೆ ನಿಕಟ ಸಂಬಂಧ ಹೊಂದಿರುವುದರ ಜೊತೆಗೆ ಅವರು ಸಾಮಂತರಾಗಿಯೂ ಬಹು ದೀರ್ಘ ಕಾಲದವರೆಗೆ ಆಳ್ವಿಕೆ ಮಾಡಿ, ತಾವು ಅಧೀನರಾಗಿದ್ದ ಸಾಮ್ರಾಜ್ಯದ ಕಲೆಯ ಪ್ರಭಾವವನ್ನು ತಮ್ಮ ಕಲೆಯ ಮೇಲೆ ಬೀಳಲು ಅನುವು ಮಾಡಿ ಕೊಡದೇ

---

[೨೪] ಎ.ಕ-೯, ದೇ.ತಾ.೫೩., ಕ್ರಿ.ಶ.೧೨೮೭, ತಮಿಳು, ಬಯನಹಳ್ಳಿ.
[೨೫] ಎ.ಕ-೯, ಬೆಂ.೧೨೭, ಕ್ರಿ.ಶ.೧೪೩೧, ಕೊಡಿಗೆಹಳ್ಳಿ.
[೨೬] ಎ.ಕ-೯, ದೇ.ತಾ.೩೭. ಕ್ರಿ.ಶ.೧೬೯೮, ಸೋಮನಹಳ್ಳಿ.
[೨೭] ಎ.ಕ-೯, ಹೊ.ತಾ.೭, ಜೋಡಿ ಗೆದ್ದಲಹಳ್ಳಿ.
[೨೮] ಎ.ಕ-೯, ನೆ.ತಾ.೧೮೫, ದಾಸನಪುರ, ಕಸಬಾ.
[೨೯] ಎ.ಕ-೯, ಹೊ.ತಾ.೪೯, ಕ್ರಿ.ಶ.೧೩೪೦, ನೆಲವಾಗಿಲುಹಳ್ಳಿ.
[೩೦] ಎ.ಕ-೯, ಹೊ.ತಾ.೬, ಶೆಟ್ಟಿಹಳ್ಳಿ.

ತಮ್ಮದೇ ಆದ ಶೈಲಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಮಾಡಿದ್ದಾರೆ. ಆದ್ದರಿಂದ ಇವರ ಕಲಾಶೈಲಿಯನ್ನು ಗಂಗಶೈಲಿ ಎಂದೇ ಪ್ರಸಿದ್ಧಿ ಗಳಿಸಿದೆ. ಗಂಗರ ದೇವಾಲಯದ ಲಕ್ಷಣಗಳನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದಾಗಿದೆ.

- ದೇವಾಲಯಗಳು ಚಿಕ್ಕದಾಗಿರುವುದರಿಂದ ಅದರ ಅಗಲ ಮತ್ತು ಉದ್ದ ಕೂಡ ಕಡಿಮೆಯಾಗಿರುತ್ತದೆ.
- ಸಿಲಿಂಡರಾಕೃತಿ ಅಥವಾ ರುದ್ರಕಾಂತ ಮಾದರಿಯ ಕಂಬಗಳನ್ನು ಸಾಮಾನ್ಯವಾಗಿ ಹೊಂದಿರುತ್ತದೆ. ಈ ಕಂಬಗಳ ಎತ್ತರ ಕಡಿಮೆ ಇರುವುದರಿಂದ ದೇವಾಲಯದ ಪ್ರವೇಶ ದ್ವಾರದ ಎತ್ತರವು ಸಹ ಕಡಿಮೆಯಾಗಿರುತ್ತದೆ.
- ಜಿಲ್ಲೆಯಲ್ಲಿ ದೊರೆತಿರುವ ಬಹುತೇಕ ಶಿವನ ದೇವಾಲಯಗಳಾಗಿದ್ದು ಊರಿನಿಂದ ಹೊರಗೆ ಹಾಗೂ ಕೆರೆ ಕೋಡಿಯ ಬಳಿ ಸಾಮಾನ್ಯವಾಗಿ ಕಂಡು ಬರುತ್ತದೆ.
- ಗರ್ಭಗುಡಿ ಚಿಕ್ಕದಾಗಿದ್ದು, ಬಹುತೇಕ ದೇವಾಲಯಗಳಲ್ಲಿ ಅಂತರಾಳವು ತೆರೆದಂತಿರುತ್ತದೆ.
- ಇವರ ದೇವಾಲಯಗಳು ಚಿಕ್ಕದಾಗಿರುವುದರಿಂದ ಹೆಚ್ಚಿನ ಅಲಂಕರಣೆ ಕಂಡು ಬರುವುದಿಲ್ಲ.
- ದೇವಾಲಯಗಳ ನವರಂಗದ ಮೇಲ್ಛಾವಣಿಯಲ್ಲಿ ಸಾಮಾನ್ಯವಾಗಿ ವೃತ್ತಾಕಾರದ ಕಮಲದ ಹೂವಿನ ರಚನೆ ಕಂಡುಬರುತ್ತದೆ.
- ದೇವಾಲಯಗಳಲ್ಲಿ ಹೆಚ್ಚಾಗಿ ಶಿಖರದ ರಚನೆ ಕಂಡುಬರುವುದಿಲ್ಲ. ಕಂಡು ಬಂದರು ಅವುಗಳು ಹೆಚ್ಚಾಗಿ ಏಕತಳ ದೇವಾಲಯಗಳಾಗಿರುತ್ತವೆ.

ದೇವಾಲಯಗಳ ಎತ್ತರ ಮತ್ತು ವಿಸ್ತೀರ್ಣ ಬಹಳ ಕಡಿಮೆ ಇರುವುದಕ್ಕೆ ಆ ಕಾಲದ ಆಚರಣೆಗಳು ಹಾಗೂ ಅಲ್ಲಿನ ಜನಸಂಖ್ಯೆ ಕಡಿಮೆ ಇರುವುದು. ಗಂಗರು ಜೈನ, ಶೈವ ಅವಲಂಬಿಯಾಗಿದ್ದರೆಂಬುದಕ್ಕೆ ಮಣ್ಣೆಯಲ್ಲಿನ ಜಿನೇಂದ್ರಭವ, ಶಿವಗಂಗೆಯ ಗುಹೆ ದೇವಾಲಯ, ಹೆಗುಂದದ ಮಲ್ಲಿಕಾರ್ಜುನ, ಬಿಲ್ಲಿನಕೋಟೆಯ ಲಿಂಗಪ್ಪನ ಗುಡಿ, ತೋಟಗೆರೆಯ ಅರ್ಜುನರಾಯ, ಕಿತ್ತನಲ್ಲಿಯ ಸೋಮೇಶ್ವರನ ಗುಡಿ, ಮಾಡೇಶ್ವರದ ಮುಕ್ಕಣ್ಣೇಶ್ವರ, ಇಸ್ಲೂರಿನ ನೀಲಕಂಠೇಶ್ವರ, ಹುಲುಕಡಿ ಬೆಟ್ಟದ ವೀರಭದ್ರ, ಗಂಡರಾಜಪುರದ ಕಲ್ಲೇಶ್ವರ, ಶ್ರವಣೂರಿನ ನೀಲಕಂಠಶ್ವರ, ಗಂಗವಾರದ ಸೋಮೇಶ್ವರ, ಬೇಚಿರಾಖ್ ಮಾರೇನಹಳ್ಳಿಯ ಭೀಮೇಶ್ವರ, ಕಮ್ಮಸಂದ್ರದ ಸೋಮೇಶ್ವರ, ಹಸಿಗಾಳದ ಸೋಮೇಶ್ವರ, ನಂದಗುಡಿಯ ಅಮೃತ ಮಲ್ಲಿಕಾರ್ಜುನ, ಮುಜುರೆ ಮೂಡ್ಲುಪಾಳ್ಯದ ದಡೀಗೇಶ್ವರ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣಬಹುದು.

ಗಂಗರ ನಂತರ ಆಳ್ವಿಕೆ ಮಾಡಿದ ಚೋಳರ ಆಳ್ವಿಕೆಯಲ್ಲಿ ಭಿನ್ನಮಂಗಲದ ಮುಕ್ತಿನಾಥೇಶ್ವರ, ಸೋಲದೇವನಹಳ್ಳಿಯ ಸಿದ್ದೇಶ್ವರ, ಕೊಂಡ್ರಹಳ್ಳಿಯ ಧಮೇಶ್ವರ, ಕಾಡುಗೋಡಿಯ ಕಾಶಿ ವಿಶ್ವೇಶ್ವರ ದೇವಾಲಯಗಳನ್ನು ನಿರ್ಮಿಸಿ ದಾನ ದತ್ತಿಗಳನ್ನು ನೀಡಿದ್ದಾರೆ. ಚೋಳರ ನಂತರ ಆಳ್ವಿಕೆ ಮಾಡಿದ ಹೊಯ್ಸಳರು ಮತ್ತು ವಿಜಯನಗರ ಅರಸರ ದೇವಾಲಯಗಳ ರಚನೆಯನ್ನು ನೋಡಿದಾಗ ಅವುಗಳ ಎತ್ತರ ಹೆಚ್ಚಾಗಿರುವುದರ ಜೊತೆಗೆ ವಿಸ್ತಾರವಾಗಿಯೂ ಇರುತ್ತವೆ. ವಿಜಯನಗರ ಅರಸರ ಕಾಲದಲ್ಲಂತೂ ಕಲ್ಯಾಣಮಂಟಪ, ಉತ್ಸವ ಮಂಟಪ, ವಸಂತೋತ್ಸವಮಂಟಪ ಹೀಗೆ ಹಲವಾರು ರಚನೆಗಳು ಆಚರಣೆಗೆ ತಕ್ಕಂತೆ ನಿರ್ಮಾಣಗೊಂಡು ದೇವಾಲಯಗಳ ವಿಸ್ತೀರ್ಣವು ಬಹಳಷ್ಟು ವಿಸ್ತಾರವಾಯಿತು. ಹೊಯ್ಸಳ ಕಾಲದಲ್ಲಿ ಹೊಸ ದೇವಾಲಯಗಳ ನಿರ್ಮಾಣಕ್ಕಿಂತ ಹಳೇ ದೇವಾಲಯಗಳ ವಿಸ್ತಾರಣೆ, ಜೀರ್ಣೋದ್ಧಾರ, ಅಭಿವೃದ್ಧಿ ಕಾರ್ಯಗಳಿಗೆ ದತ್ತಿಗಳನ್ನು ನೀಡಿರುವುದನ್ನು ಕಾಣಬಹುದು. ಶಿವಗಂಗೆ, ನಿಜಗಲ್ಲುವಿನ ಮಲ್ಲಿಕಾರ್ಜುನ, ಗೌರವೇಶ್ವರ, ಐವರು ಕಂಡೇಶ್ವರದ ಧರ್ಮೇಶ್ವರ, ವಾಗಟದ ವರದರಾಜಸ್ವಾಮಿ ಮುಂತಾದ ದೇವಾಲಯಗಳ ಜೀರ್ಣೋಧ್ಧಾರದ ಜೊತೆಗೆ ಶಿವಗಂಗೆಯ ಬೆಟ್ಟದ ಮೇಲೆ ಕ್ರಿ.ಶ.೧೧೫೫ ರಲ್ಲಿ ಭೈರವ ಗುಡಿಯನ್ನು, ದೊಡ್ಡಹುಲ್ಲೂರಿನ ಸೋಮೇಶ್ವರ ದೇವಾಲಯಗಳನ್ನು ನಿರ್ಮಿಸಿದ್ದಾರೆ. ವಿಜಯನಗರ ಕಾಲದ ದೇವಾಲಯದ ಪ್ರವೇಶದ್ವಾರದಿಂದ ಗರ್ಭಗುಡಿಯವರೆಗೆ ಗಾತ್ರ, ಭವ್ಯತೆಗಳಲ್ಲಿ ದೊಡ್ಡದಾಗಿದ್ದು, ಎತ್ತರ, ಉದ್ದ, ಅಗಲವಾಗಿ ವಿಶಾಲವಾದ ಪ್ರದೇಶಗಳಲ್ಲಿ ಹರಡಿರುತ್ತದೆ. ಕ್ರಿ.ಶ.೧೩೬೯ ರಲ್ಲಿ ಶಿವಗಂಗೆ ಗಿರಿಯ ಮೇಲೆ ಬಸವರಾಜ ದೇವರನ್ನು, ಕ್ರಿ.ಶ.೧೪೦೭ ರಲ್ಲಿ ಕಾಡುಗುಡಿಯಲ್ಲಿ ಹನುಮಂತ ದೇವರನ್ನು, ಕ್ರಿ.ಶ.೧೫೩೩ ರಲ್ಲಿ ಶಿವನಸಮುದ್ರದ ಅಗ್ರಹಾರದಲ್ಲಿ ಚಂದ್ರಮೌಳೀಶ್ವರ ದೇವಾಲಯವನ್ನು ಜೊತೆಗೆ ವಿಘ್ನೇಶ್ವರ, ನಂದಿಕೇಶ್ವರ ದೇವರುಗಳನ್ನು, ನಿಜಗಲ್ಲಿನ ಲಕ್ಷ್ಮಿನರಸಿಂಹಸ್ವಾಮಿ, ದೊಡ್ಡಬಳ್ಳಾಪುರದ ಆದಿ ನಾರಾಯಣಸ್ವಾಮಿ, ಕಾಡನೂರ ಚೆನ್ನಕೇಶವ, ಚನ್ನಾಪುರದ ಚನ್ನಕೇಶವ, ಹಾಡೋನಹಳ್ಳಿಯ ಚನ್ನಕೇಶವ, ಅಂಗಾಪುರದ ಲಕ್ಷ್ಮಿ ದೇವಾಲಯ, ದೊಡ್ಡಹೆಜ್ಜಾಜಿಯ ಚನ್ನಕೇಶವ, ತೂಬಗೆರೆ ವೆಂಕಟರಮಣ, ದೇವನಹಳ್ಳಿಯ ಗೋಪಾಲಸ್ವಾಮಿ, ವಡಿಗೇನಹಳ್ಳಿಯ ಚನ್ನಕೇಶವಸ್ವಾಮಿ, ಯಂಬ್ರಹಳ್ಳಿಯ ತಿಮ್ಮರಾಯಸ್ವಾಮಿ, ಚೌಡಪನಹಳ್ಳಿಯ ತಬ್ಲಿಂಗೇಶ್ವರ, ತಿರುಮಲೆನಾಥ, ಯಲಹಂಕದ ವೇಣುಗೋಪಾಲ, ಚಿಕ್ಕ ಜಾಲದ ಕೇಶವ ದೇವರು, ಮುಗಬಾಳದ ವೀರಭದ್ರ, ಸೋಮೇಶ್ವರ ದೇವಾಲಯಗಳು, ಕಂಚಿಗನಾಳ ಆಂಜನೇಯ ಎದುರಿನ ಉಯ್ಯಾಲೆ ಕಂಬ, ಇಸ್ತೂರಿನಲ್ಲಿ ಗಂಗರು ನಿರ್ಮಿಸಿದ ನೀಲಕಂಠೇಶ್ವರ ದೇವಾಲಯದ ಅರ್ಧಮಂಟಪ, ಹೊರ ಮಂಟಪ, ಪ್ರವೇಶ ದ್ವಾರದ ಸೋಪಾನ ಪಂಕ್ತಿಯ ಇಕ್ಕೆಲಗಳಲ್ಲಿರುವ ಆನೆಯ ಶಿಲ್ಪಗಳು ಹೀಗೆ ದೇವಾಲಯಗಳ ನಿರ್ಮಾಣ, ವಿಸ್ತರಣೆ, ಜೀರ್ಣೋದ್ಧಾರ, ದೇವರಿಗೆ ನೈವೇದ್ಯಕ್ಕೆ ದಾನ ದತ್ತಿಗಳನ್ನು ನೀಡಿದ್ದಾರೆ. ವಿಜಯನಗರ ಕಾಲದ ಅರಸರ ಆಳ್ವಿಕೆಯ

ಅವಧಿಯಲ್ಲಿ ಸಾಮಂತರ ದೇವಾಲಯಗಳಲ್ಲಿ ಜೀರ್ಣೋದ್ದಾರ, ನಿರ್ಮಿಸಿದವವರ ಶಿಲ್ಪಗಳನ್ನು ಕಂಬಗಳಲ್ಲಿ ಕಾಣಬಹುದು. ಶಿವಗಂಗೆಯ ಗಂಗಾಧರ ದೇವಾಲಯದ ಮುಖಮಂಟಪದ ಕಂಬ, ಕಾಡನೂರು ಚೆನ್ನಕೇಶವ ದೇವಾಲಯದ ನವರಂಗದಲ್ಲಿನ ಕಂಬಗಳಲ್ಲಿ ಕಾಣಬಹುದು.

ದೇವಾಲಯಗಳ ನಿರ್ಮಾಣದ ನಂತರ ಕೆಲವುಂದು ದೇವಾಲಯಗಳು ಶಿಥಿಲವಾಗುತ್ತಿದ್ದವು. ಅಥವಾ ಚಿಕ್ಕದಾದ ದೇವಾಲಯವನ್ನು ಜೀರ್ಣೋದ್ದಾರ ಮೂಲಕ ಪುನಃ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡುತ್ತಿದ್ದರು. ಕ್ರಿ.ಶ.೪೫೯ ರಲ್ಲಿ ಮರಗೆರೆ ರಾಷ್ಟ್ರದ ತಿಪ್ಪೂರ ಕಾಡಸ್ವಾಮಿಗಳಿಗೆ ಬ್ರಹ್ಮದೆಯ ಕ್ರಮವಾಗಿ ಮೇಲೂರು ಕೆರೆಯ ಕೆಳಗಿನ ಭೂಮಿಯನ್ನು, ಕ್ರಿ.ಶ.೮೦೧ ರಲ್ಲಿ ಮಾರಸಿಂಗನು ಸೂರ್ಯ ದೇವಾಲಯಕ್ಕೆ ಮಾವತ್ತೂರು ಗ್ರಾಮವನ್ನು, ಕ್ರಿ.ಶ.೯೫೦ ರಲ್ಲಿ ಕಯ್ವರನಾಡ, ನೆಕ್ಕುಂದಿನಾಡ ಉರಲಿಯ ದೇವಭೋಗಕ್ಕೆ ಕೆರೆಗೆ ಕೊಡುವ ತೆರಿಗೆಯನ್ನು, ಕ್ರಿ.ಶ.೧೦೩೩ರಲ್ಲಿ ಕುಕ್ಕನೂರುನಾಡಿನ ಕೊಲಿಸಂಬುಡ್ಯೆಯಲ್ಲಿನ ಸಿದ್ಧೇಶ್ವರ ದೇವರಿಗೆ ದೇವಧನವನ್ನು, ಕ್ರಿ.ಶ.೧೦೩೮ ರಲ್ಲಿ ವಾನಪುರದ ಮಾಣಿಕ ಶೆಟ್ಟಿಯು, ಕುಕ್ಕನೂರುನಾಡಿನ ನಿವಾಸಿಗಳು, ವಿನ್ನಮಂಗಲದ ರಾಜೇಂದ್ರ ಚೋಳಗಾವುಂಡ, ನಾಡಿನ ಗಾವುಂಡನು ೫೦೦ ಕುಳ ಭೂಮಿಯನ್ನು ಚಾಮುಂಡೇಶ್ವರಿ ದೇವರಿಗೆ, ವಿಕ್ರಮಚೋಳಮಂಡಲದ ಕುಕ್ಕನೂರುನಾಡಿನ ಕೊಲಿಯಂಬರಚೆಯ ಪಶ್ಚಿಮ ಸಿದ್ದೀಶ್ವರಿಗೆ ರೇಷ್ಮೆ, ಹತ್ತಿ, ಮರಗಳನ್ನು ಕೊಟ್ಟು ನಂತರ ನೈವೇದ್ಯ, ದೀಪಾರಾಧನೆಗೆ ದಿನಕ್ಕೆ ೩ ಬಾರಿ ಅಕ್ಕಿಯನ್ನು, ಒಂದು ಬಾರಿ ಪೂಜಾರಿಗೆ, ಕ್ರಿ.ಶ.೧೧೯೬ ರಲ್ಲಿ ಹೊಯ್ಸಳ ದೊರೆ ೨ನೇ ವೀರಬಲ್ಲಾಳನ ಕಾಲದಲ್ಲಿ ಶಿವಗಂಗೆಯ ಶಿವಗಂಗೆನಾಥ ದೇವರಿಗೆ ಕೆಂಕೆರೆ ಗ್ರಾಮವನ್ನು, ಕ್ರಿ.ಶ.೧೨೯೨ ರಲ್ಲಿ ರಾಮನಾಥನು ಆಯಿಗಂಡಪುರ ಐಯ್ವರ್ಕಂಡನಯ್ಯನರ್ ದೇವರಿಗೆ ದೇವಧನವಾಗಿ, ಕ್ರಿ.ಶ.೧೩೨೯ ರಲ್ಲಿ ಶ್ರೀ ಹೋಯ ದಣ್ಣಾಯಕರು ಜಾಲದ ಕೇಶವ ದೇವರಿಗೆ ತರಬರಹಳ್ಳಿ, ಅನೂಡಳವೆಂಬ ೨ ಗ್ರಾಮವನ್ನು, ಕ್ರಿ.ಶ.೧೩೩೦ ರಲ್ಲಿ ವೀರ ಬಲ್ಲಾಳನು ಕುಂದನೀಯ ಕೇಶವ ಪೆರುಮಾಳ್ ದೇವರಿಗೆ ಬೂಗದತ್ತಿಯ ಗ್ರಾಮವನ್ನು, ಕ್ರಿ.ಶ.೧೫೧೧ ರಲ್ಲಿ ಶ್ರೀ ಕೃಷ್ಣ ದೇವರಾಯನು ಶಿವಗಂಗೆಯ ಕಕುದ್ಗಿರಿ ಗಂಗಾಧರ ದೇವರಿಗೆ ಕೊರಟಗೆರೆ ಸೇರಿದಂತೆ ೨೨ ಹಳ್ಳಿಗಳನ್ನು ದಾನವಾಗಿ, ಕ್ರಿ.ಶ.೧೫೩೧ ರಲ್ಲಿ ಗಂಡರಗೊಳ್ಳಿ ನಾಗಪ್ಪ ನಾಯಕರು ಚನ್ನಕೇಶವ ದೇವರಿಗೆ ಕಾಡನೂರು ಗ್ರಾಮವನ್ನು, ಕ್ರಿ.ಶ.೧೫೩೫ ರಲ್ಲಿ ವೆಂಕಟತಿರಾಯರು ಮಲ್ಲಿಕಾರ್ಜುನ ದೇವರಿಗೆ ಬಿಂಣಮಂಗಲ ಗ್ರಾಮವನ್ನು, ಕ್ರಿ.ಶ.೧೫೬೦ ರಲ್ಲಿ ಶ್ರೀರಂಗ ರಾಜಯ್ಯನವರು ಹೊಸಹಳ್ಳಿಯ ವೀರಭದ್ರ ದೇವರಿಗೆ ಹೊಸಹಳ್ಳಿ ಗ್ರಾಮವನ್ನು, ಕ್ರಿ.ಶ.೧೫೬೦ ರಲ್ಲಿ ಸುಗಟೂರು ತಮ್ಮಪ್ಪ ಗೌಡರು ಶಿವಗಂಗೆಯ ಪ್ರಸನ್ನ ಗಂಗಾಧರ ಲಿಂಗಕ್ಕೆ ಅಮೃತಪಡಿ ನೈವೇದ್ಯಕ್ಕೆ ಅನುಪಹಳ್ಳಿಯನ್ನು, ಕ್ರಿ.ಶ.೧೫೫೯ ರಲ್ಲಿ ನಂಜಿಗುಳಿಯ ಸೀಮಸಂದ್ರವನ್ನು, ವಿಟ್ಟಸಂದ್ರವನ್ನು ಅಮೃತ ಮಲ್ಲಿಕಾರ್ಜುನ ಲಿಂಗಕ್ಕೆ ಅಮೃತಪಡಿ, ನೈವೇದ್ಯಕ್ಕೆ, ಕ್ರಿ.ಶ.೧೫೬೪ ರಲ್ಲಿ ಚಿಕ್ಕರಾಯ

ತಮ್ಮಗೌಡರಯ್ಯನವರು ಸೋಮೇಶ್ವರ, ವೀರಭದ್ರ ದೇವರುಗಳ ಅಮೃತಪಡಿ, ದೀಪಾರಾಧನೆ, ರಥೋತ್ಸವ ಸೇವೆಗಳಗಾಗಿ ಮೂಗಬಾಳು ರಾಮಗೌಡನಹಳ್ಳೀ ಮತ್ತು ಕೀಳು ಹೊಸಹಳ್ಳಿ ಗ್ರಾಮಗಳನ್ನು, ಬಸವ ಪಟ್ಟದ ಕುದುರೆ ಗುಂಡಿನ ಮೇಲೆ ಅಮೃತ ಅಂಗ ಗಂಗಾಧರನಿಗೆ[೩೧] ದಾನಗಳನ್ನು ನೀಡಿದ್ದರು.

ವಿಜಯನಗರ ಕಾಲದಲ್ಲಿ ವೈಷ್ಣವ ದೇವಾಲಯದಲ್ಲಿ ಯಾವ ಯಾವ ರೀತಿಯಲ್ಲಿ ಧಾರ್ಮಿಕ ಕಾರ್ಯಗಳು ನಡೆಯುತ್ತಿದ್ದವು ಎಂಬುದಕ್ಕೆ ಕ್ರಿ.ಶ.೧೬೯೭ ರಲ್ಲಿ ಅವತಿ ನಾಡಪ್ರಭುವಾದ ಗೋಪಾಲ ಗೌಡರು ಶ್ರೀ ಮದನಗೋಪಾಲ ಸ್ವಾಮಿಯ ಸೇವೆಗಾಗಿ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ, ರಥೋತ್ಸವ, ಪಡಿತರ ದೀಪಾರಾಧನೆಗಳು ನಡೆಯುತ್ತಿದ್ದವು. ದಾನ ನೀಡುವಾಗ ಶ್ಲೋಕಗಳಿಂದ ಆರಂಭವಾದರೆ ವಿಜಯನಗರ ಕಾಲದಲ್ಲಿ ಗಣಪತಿ, ವಿಷ್ಣು ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುವುದನ್ನು ನೋಡಬಹುದು.

ಗುರುಗಳು ಸಿದ್ಧಿಯಾದ ನೆನಪಿಗೆ ದೇವಸ್ಥಾನವನ್ನು ನಿರ್ಮಿಸಿ, ದೇವರಿಗೆ ನೈವೇದ್ಯ, ನಿರಂತರ ದೀಪಾರಾಧನೆಗೆ ದಾನ ಕೊಟ್ಟಿರುವುದನ್ನು ಸೋಲದೇವನಹಳ್ಳಿಯಲ್ಲಿನ ಕಂಬದ ಶಾಸನದಲ್ಲಿ ಕಾಣಬಹುದು. ರಾಜೇಂದ್ರ ಚೋಳದೇವರ ೧೮ನೇ ವರ್ಷದ ಅಧಿಕಾರವಧಿಯಲ್ಲಿ ವಾಮನಯ್ಯನು ತನ್ನ ಗುರುಗಳಾದ ಮೌನಿ ಭಟ್ಟಾರಕರು ಸಿದ್ಧಿಯಾದ ನೆನಪಿಗಾಗಿ ಸಿದ್ದೇಶ್ವರ ದೇವಾಲಯವನ್ನು ನಿರ್ಮಿಸಿ[೩೨]. ಹೊಸಕೋಟೆ ಕಟ್ಟಿದಂತ ತಮ್ಮೇಗೌಡನು ಹೊಸೂರು ನಿಜಗುಣ ಸುಜ್ಞಾನ ಸ್ವಾಮಿಗಳಿಗೆ ಧರ್ಮ, ಅರ್ಥ, ಕಾಮ, ಮೋಕ್ಷಾರ್ಥ ಫಲ ಉಂಟಾಗಲಿ ಎಂದು ಹೊಸಳ್ಳಿ ಗ್ರಾಮಕ್ಕೆ ಅಂಗಮುದ್ರೆ ಹಾಕಿಸಿ[೩೩] ಕ್ರಿ.ಶ.೧೪೯೪ ರಲ್ಲಿ ಕಾರ್ತಿಕ ಶುದ್ಧದಂದು ದಾನ ನೀಡಿದರು.

ಬೈಲಾಂಜನೇಯ (ರೈಲ್ವೆಗೊಲ್ಲಹಳ್ಳಿ) ಏಪ್ರಿಲ್‌ನಲ್ಲಿ ೫ ದಿನಗಳು, ದೇವರ ಹೊಸಹಳ್ಳಿ ವೀರಭದ್ರ ಏಪ್ರಿಲ್‌ನಲ್ಲಿ ೫ ದಿನಗಳು, ಮಹಿಮಾಪುರ ವೆಂಕಟರಮಣ ಫೆಬ್ರವರಿನಲ್ಲಿ ೧೦ ದಿನಗಳು, ಬೂದಿಹಾಳ್ ಮಾರಮ್ಮ ಏಪ್ರಿಲ್‌ನಲ್ಲಿ ೫ ದಿನಗಳು. ಶಿವಗಂಗೆ ಗಂಗಾಧರೇಶ್ವರ ಜನವರಿ ೧೦ ದಿನಗಳು, ಹೊನ್ನಾದೇವಿ ಏಪ್ರಿಲ್ ೫ ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಮಹಿಮಾಪುರ, ಶಿವಗಂಗೆಯಲ್ಲಿ ನಡೆಯುವ ಜಾತ್ರೆಗಳಲ್ಲಿ ದನದ ವ್ಯಾಪಾರ ನಡೆಯುತ್ತದೆ.

---

[೩೧] ಎ.ಕ-೯, ನೆ.ತಾ.೧೫೦, ಬಸವಪಟ್ಟಣ

[೩೨] ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಸೋಲದೇವನಹಳ್ಳಿ

[೩೩] ಎ.ಕ-೯, ಹೊ.ತಾ.೧೮೬, ಅನುಬಂಧ, ಕ್ರಿ.ಶ.೧೪೯೪, ಖಾಜಿಹೊಸಹಳ್ಳಿ.

ಗಂಗರ ಕಾಲದಲ್ಲಿ ಪೂಜೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ಅದಕ್ಕಾಗಿ ಮಾತ್ರವೇ ದೇವಾಲಯಗಳನ್ನು ಬಳಸುತ್ತಿದ್ದುದರಿಂದ ಹಾಗೂ ಇತರೆ ಆಚರಣೆಗಳು ಇಲ್ಲದೇ ಇದ್ದ ಕಾರಣದಿಂದಾಗಿ ಅವರ ಕಾಲದ ದೇವಾಲಯಗಳು ಕೇವಲ ಗರ್ಭಗುಡಿ, ಅಂತರಾಳ, ನವರಂಗ ಹಾಗೂ ಕೆಲವೊಂದು ಕಡೆ ಮುಖಮಂಟಪಕ್ಕೆ ಅಷ್ಟೇ ಸೀಮಿತಗೊಂಡಿವೆ. ಇವರ ಕಾಲದ ದೇವಾಲಯಗಳ ಬಾಗಿಲುವಾಡಗಳ ಎತ್ತರವು ಸಹ ಕಡಿಮೆ ಇರುವುದನ್ನು ನೋಡಬಹುದು. ಬಹುಶಃ ದೇವಾಲಯಕ್ಕೆ ದೇವರ ದರ್ಶನವನ್ನು ಮಾಡಲು ಹೋಗುವಾಗ ಅಹಂಕಾರವನ್ನು ತಗ್ಗಿಸಿ ಬಗ್ಗಿ ಹೋಗಬೇಕು ಎಂಬುದು ಆಗಿನ ಕಾಲದಲ್ಲಿದ್ದ ಜನರ ನಂಬಿಕೆಯಾಗಿರ ಬಹುದು. ಅಥವಾ ಇವರ ದೇವಾಲಯಗಳು ಚಿಕ್ಕದಾಗಿದ್ದು ಎತ್ತರ ಕಡಿಮೆ ಇರುತ್ತಿದ್ದುದರಿಂದ ಬಾಗಿಲುವಾಡವನ್ನು ಮತ್ತಷ್ಟು ಚಿಕ್ಕದಾಗಿ ಇರಿಸುತ್ತಿದ್ದಿರ ಬಹುದು.

ಗಂಗರ ದೇವಾಲಯಗಳು ಈ ಪ್ರದೇಶದಲ್ಲಿ ಪ್ರಾಚೀನ ದೇವಾಲಯಗಳಾಗಿರುವುದರಿಂದ ಹಾಗೂ ಈ ಪ್ರದೇಶದಲ್ಲಿ ಗಂಗರನ್ನು ನಿರ್ಮೂಲನೆ ಮಾಡಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ಚೋಳರ ಪ್ರಭಾವ ಅಧಿಕವಾಗಿದ್ದರಿಂದ ಸ್ಥಳೀಯರು ಗಂಗರ ದೇವಾಲಯಗಳನ್ನು ಚೋಳ ನಿರ್ಮಿಸಿದರು ಎಂದು ಕರೆಯುತ್ತಾರೆ. ಅಲ್ಲದೆ ಬಿದ್ದು ಹೋಗಿರುವ ಗಂಗರ ಕಾಲದ ದೇವಾಲಯಗಳನ್ನು ಕುರಿತು ಆಗಿನ ಕಾಲದಲ್ಲಿ ಚೋಳರು ಕೇವಲ ಒಂದೇ ರಾತ್ರಿಯಲ್ಲಿ ನಿರ್ಮಾಣ ಮಾಡಬೇಕಿತ್ತು. ಆದರೆ ಬೆಳಗ್ಗೆಯಾಗಿದ್ದರಿಂದ ಅರ್ಧಕ್ಕೆ ಬಿಟ್ಟು ಹೋದರು ಆದ್ದರಿಂದ ದೇವಾಲಯಗಳು ಪೂರ್ಣಗೊಂಡಿಲ್ಲ ಎಂಬುದಾಗಿ ಕತೆಯನ್ನು ಸಹ ಹೇಳುತ್ತಾರೆ. ಗಂಗರು ತಾವು ನಿರ್ಮಿಸಿದ ದೇವಾಲಯಗಳ ಬಳಿ ಯಾವುದೇ ರೀತಿಯ ಶಾಸನಗಳನ್ನು ಹಾಕಿಸದೇ ಇರುವುದು ಹಾಗೂ ಗಂಗರ ಕುರಿತು ಹೆಚ್ಚು ಮಾಹಿತಿ ಸ್ಥಳೀಯರಿಗೆ ಇಲ್ಲದೇ ಇರುವುದು ಸಹ ಈ ರೀತಿ ಹೇಳಲು ಕಾರಣವಾಗಿದೆ. ಚೋಳರಿಗೆ ಒಂದು ಶಾಪವಿತ್ತಂತೆ ಅದರಂತೆ ಒಂದು ರಾತ್ರಿಯಲ್ಲಿ ದೇವಾಲಯ ನಿರ್ಮಾಣ ಮಾಡಿ ಬೆಳ್ಳಿಗೆ ಪೂಜೆ ಮಾಡಿ ಅದರ ಪ್ರಸಾದವನ್ನು ತಿನ್ನಬೇಕಿತ್ತು ಅದೇ ಅವರ ಆ ದಿನದ ಊಟವಾಗಿದಂತೆ ಎಂದು ಕಿತ್ತನಲ್ಲಿ, ಹಳೇನಿಜಗಲ್ಲು, ತೋಟಗೆರೆಗಳಲ್ಲಿ ಸ್ಥಳೀಯರು ಹೇಳುತ್ತಿದ್ದಾರೆ. ಬಹುಶಃ ಕ್ರಿ.ಶ.೯೯೭ ರಿಂದ ಚೋಳರ ಆಕ್ರಮಣದಲ್ಲಿ ಶೈವ-ಜೈನ-ವೈಷ್ಣವ ಎಂಬ ಬೇದ ಭಾವವಿಲ್ಲದೆ ಎಲ್ಲಾ ದೇವಾಲಯಗಳನ್ನು ಲೂಟಿ ಮಾಡಿ ಮುಂದೆ ಹಲವಾರು ವರ್ಷಗಳ ಪೂಜಾ ಕೈಂಕರ್ಯಗಳು ನಡೆಯದಂತೆ ಸ್ಥಗಿತವಾಗಿರಬೇಕು. ಸುಮಾರು ೪೦-೫೦ ವರ್ಷಗಳ ನಂತರದಲ್ಲಿ ಜೀರ್ಣೋದ್ಧಾರ ಮಾಡಿ ಪೂಜೆ ಪುನಸ್ಕಾರಗಳನ್ನು ಚೋಳರು ವ್ಯವಸ್ಥೆ ಮಾಡಿರುವುದರಿಂದ ಚೋಳರು ಪ್ರತಿಷ್ಟಾಪಿಸಿರುವುದು ಎಂದು ಪ್ರಸಿದ್ಧಿಯನ್ನು ಪಡೆದುಕೊಂಡಿರಬೇಕು.

ಶಿವನ ದೇವಾಲಯವನ್ನು ಕೆರೆಯ ಕೋಡಿ ಬಳಿ ನಿರ್ಮಿಸಲು ಒಂದು ಪರಿಕಲ್ಪನೆಯ ಪ್ರಕಾರ ಅಷ್ಟದಿಕ್ಕುಗಳಲ್ಲಿ ಒಂದೊಂದು ದಿಕ್ಕಿಗೂ ಒಬ್ಬ ದೇವರಿರುತ್ತಾನೆ. ಆ ದಿಕ್ಕುಗಳಲ್ಲಿ ಈಶಾನ್ಯ ದಿಗ್ಭಾಗದ ಅಧಿಪತಿ ಶಿವನಾಗಿರುವುದರಿಂದ ಸಾಮಾನ್ಯವಾಗಿ ಊರಿನ ಹೊಭಾಗದಲ್ಲಿ ಈಶಾನ್ಯ ಭಾಗಕ್ಕೆ ಹಾಗೂ ಪೂರ್ವಾಭಿಮುಖವಾಗಿಯೇ ಶಿವನ ದೇವಾಲಯವನ್ನು ಸ್ಥಾಪನೆ ಮಾಡಿರುತ್ತಾರೆ. ಅಥವಾ ಎಲ್ಲಿ ನೀರು ತುಂಬಿ ಧುಮುಕುತ್ತದೆಯೊ ಆ ಜಾಗದಲ್ಲಿ ಶಿವನಿರುತ್ತಾನೆ. ಕಾರಣವೇನು ಎಂದರೆ ನಮ್ಮ ಪುರಾಣಗಳ ನಂಬಿಕೆಯ ಪ್ರಕಾರ ಶಿವ ಎಲ್ಲಿರುತ್ತಾನೋ ಅಲ್ಲಿ ಗಂಗೆ ನೆಲೆಸಿರುತ್ತಾಳೆ. ಸಾಮಾನ್ಯವಾಗಿ ನಮ್ಮಲ್ಲಿ ಹರಿಯುವ ನೀರಿಗೆ ಗಂಗೆ ಎಂದು ಹೆಸರು. ಗಂಗೆ ಎನ್ನುವ ಶಕ್ತಿ ಎಲ್ಲಿದೆಯೋ ಅಲ್ಲಿ ಶಿವನನ್ನು ಯಾವಾಗಲೂ ಸ್ಥಾಪನೆ ಮಾಡಿರುತ್ತಾರೆ. ಆದ್ದರಿಂದಾಗಿ ಕೆರೆಯ ಕೋಡಿ ಬಳಿ ಶಿವನ ದೇವಾಲಯಗಳನ್ನು ಸ್ಥಾಪಿಸಿರ ಬೇಕು.

## ಮಣ್ಣೆಯಲ್ಲಿನ ದೇವಾಲಯಗಳು

ಮಣ್ಣೆಯಲ್ಲಿ ಈಗ ಉಳಿದಿರುವ ದೇವಾಲಯಗಳು ಮತ್ತು ಅವಶೇಷಗಳೇಂದರೆ :– ಶಾಸನೋಕ್ತವಾಗಿರುವ ಆದಿತ್ಯ ದೇವಾಲಯ ಕಾಣಿಸುವುದಿಲ್ಲ, ಆದರೆ ದೊಡ್ಡ ಕೆರೆಯ ಏರೀ ಮದ್ಯಭಾಗದಲ್ಲಿರುವ ಸಪ್ತಮಾತೃಕೆಯ ಪಕ್ಕದಲ್ಲಿರುವ ಸುಮಾರು ೫ ಅಡಿ ಎತ್ತರದ ಸೂರ್ಯ ವಿಗ್ರಹವೇ ಆದಿತ್ಯ ದೇವಾಲಯದ ಮೂರ್ತಿಯಾಗಿರಬೇಕು[೩೪]. ಸುಮಾರು ೧೫ ವರ್ಷಗಳ ಹಿಂದೆ ಈ ಸೂರ್ಯ ವಿಗ್ರಹ ಕಳ್ಳತನವಾಗಿದೆ. ಕ್ರಿ.ಶ.೭೨೫ ರಿಂದ ೭೮೮ರ ವರೆಗಿನ ಗಂಗದೊರೆ ಶ್ರೀಪುರುಷನ ಪ್ರಮುಖ ರಾಜಕೀಯ ನೆಲೆವೀಡಾಗಿತ್ತು. ಮಗನಾದ ಶಿವಮಾರ ರಾಷ್ಟ್ರಕೂಟರ ಧ್ರುವರಿಂದ ಸೋತ ನಂತರ ಮಣ್ಣೆ ರಾಷ್ಟ್ರಕೂಟರ ಪಾಲಾಗಿ ಒಂದು ಪ್ರಮುಖ ನೆಲೆಯಾಗಿತ್ತು. ಮಣ್ಣೆಯೊಳಗೆ ಮಣ್ಣಾಗಿ ಹೋಗಿರುವ ಮಣ್ಣೆಯ ಅನೇಕ ಅವಶೇಷಗಳು ಇಂದಿಗೂ ಯಕ್ಷಪ್ರಶ್ನೆಯೇ. ಸೆಪ್ಟೆಂಬರ್೨೬, ೨೦೨೦ ರಂದು ಕಪೀಲೇಶ್ವರ ದೇವಾಲಯದ ಬಲಕ್ಕೆ ಹುಟ್ಟು ಬಂಡೆಯನ್ನ ರಸ್ತೆ ಅಗಲೀಕರಣಕ್ಕೆ ಎಂದು ಒಡೆದು ಹಾಕಲಾಗಿದೆ ಆ ಬಂಡೆಯ ಮೇಲೆ ವಿಜಯನಗರ ಕಾಲದ ೨ ಶಾಸನಗಳಿದ್ದು, ಈಗ ಅದರ ತುಂಡುಗಳನ್ನು ಮಾತ್ರ ಕಾಣಬಹುದು ಅಷ್ಟೆ.

ಊರಿನ ಎರಡೂ ಬದಿ ಎರಡು ಕೆರೆಗಳಿದ್ದು, ಅವುಗಳನ್ನು ಚಿಕ್ಕ ಕೆರೆ ಮತ್ತು ದೊಡ್ಡ ಕೆರೆ ಎಂಬುದಾಗಿ ಕರೆಯಲಾಗುತ್ತದೆ. ಚಿಕ್ಕ ಕೆರೆಯ ಪ್ರದೇಶದಲ್ಲಿ ಸೋಮೇಶ್ವರ ದೇವಾಲಯ, ಕಪಿಲೇಶ್ವರ ದೇವಾಲಯ, ಆಂಜನೇಯ ದೇವಾಲಯ, ಮಣ್ಣೆಯಮ್ಮ ದೇವಾಲಯ ಹಾಗೂ ಅಕ್ಕ–ತಂಗಿಯರ ಗುಡಿ,

[೩೪] ಡಾ. ದೇವರ ಕೊಂಡಾ ರೆಡ್ಡಿ :- ತಲಕಾಡಿನ ಗಂಗರ ದೇವಾಲಯಗಳು- ಒಂದು ಅಧ್ಯಯನ, ಪು.ಸಂ-೧೮೨.

ಊರಿನ ಮಧ್ಯಭಾಗದಲ್ಲಿ ಶಾಸನೋಕ್ತ ಜಿನಾಲಯ (ಸೂಳೆಯರ ಗುಡಿ), ದೊಡ್ಡ ಕೆರೆಯ ಏರಿಯ ಮೇಲೆ ಗಣಪತಿ ದೇವಾಲಯವನ್ನು ಕಾಣಬಹುದು. ಗ್ರಾಮದಲ್ಲಿ ಕಂಡು ಬರುವ ಮೇಲೆ ತಿಳಿಸಿದ ಗಂಗರ ಸ್ಮಾರಕಗಳನ್ನು ಈ ಕೆಳಗಿನಂತೆ ಗಮನಿಸಬಹುದು.

### ಕಪಿಲೇಶ್ವರ ದೇವಾಲಯ

ಚಿಕ್ಕ ಕೆರೆಯ ಏರಿಯ ಮೇಲೆ ಪ್ರಾರಂಭದಲ್ಲೇ ನೆಲಮಟ್ಟದಿಂದ ೧೫ ಅಡಿ ಎತ್ತರದಲ್ಲಿ ಸುಂದರವಾದ ಬಾಗಿಲವಾಡ, ಜಾಲಾಂಧ್ರಗಳು, ನವರಂಗದ ಕಂಬಗಳು, ಆಳೆತ್ತರದ ದ್ವಾರಪಾಲಕರಿಂದಲೇ ಆಕರ್ಷಿಸುವ ಕಪಿಲೇಶ್ವರ ದೇವಾಲಯ **(ಚಿತ್ರ ಸಂಖ್ಯೆ-೫೩)** ಸಂಪೂರ್ಣ ಶಿಥಿಲವಾಗಿದೆ. ಭಿತ್ತಿಯ ರಚನೆಯು ಸಂಪೂರ್ಣವಾಗಿ ನಾಶವಾಗಿರುವುದರಿಂದ ಪಾಳು ಮಂಟಪದಂತೆ ಕಾಣುವ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗುಡಿ, ನವರಂಗವನ್ನು ಮಾತ್ರ ಹೊಂದಿದೆ. ದೇವಾಲಯವನ್ನು ಪ್ರವೇಶಿಸಲು ಎತ್ತರವಾದ ಸುಮಾರು ೭ ಅಡಿ ಸೋಪಾನವಿದೆ.

ಬಾಗಿಲವಾಡವು ಸುಂದರವಾಗಿದ್ದು, ಎರಡೂ ಬದಿಯಲ್ಲಿ ಅರೆಗಂಬದಂತಹ ರಚನೆಯಿದೆ. ಐದು ಪದ್ಮ ಮತ್ತು ಐದು ವಜ್ರದ ಉಬ್ಬು ಶಿಲ್ಪದ ರಚನೆಯಿದೆ. ಪದ್ಮವು ಬಳ್ಳಿ ಸಮೇತ ಇರುವುದನ್ನು ಕಾಣಬಹುದು. ಮೇಲ್ಭಾಗದಲ್ಲಿ ಕಪೋತ ಮತ್ತು ಹಾರದ ರಚನೆ ಇದ್ದು ಸುಂದರವಾಗಿದೆ. ಕಪೋತದ ಮಧ್ಯಭಾಗದಲ್ಲಿ ಲತಾಬಳ್ಳಿಯ ರೀತಿಯ ರಚನೆಯು ಅಸ್ಪಷ್ಟವಾಗಿದೆ. ಬಹುಶಃ ಇಲ್ಲಿ ದೇವತೆಯನ್ನು ಖಂಡರಿಸಿರಬಹುದು. ಆದರೆ ಈಗ ಇಲ್ಲಿ ಇಲ್ಲ. ಕಪೋತದ ನಂತರ ವಲಭಿ, ಗಳ ಹಾಗೂ ಹಾರ ಕಂಡು ಬರುತ್ತದೆ. ಹಾರದಲ್ಲಿ ಶಾಲಾ, ಕೂಟ, ನಾಸಿಯನ್ನು ಕಾಣಬಹುದು. ಎರಡೂ ಕೂಟಗಳು ಬ್ರಹ್ಮಛಂದ ಮಾದರಿಯ ಶಿಖರದಂತೆ ಕಂಡು ಬರುತ್ತದೆ. ಎರಡು ಕರ್ಣಗಳಿದ್ದು ಅವುಗಳು ಸುಂದರವಾಗಿ ಶಾಲಾ, ಕೂಟಗಳಷ್ಟೇ ಎತ್ತರವಾಗಿವೆ.

ದ್ವಾರಬಂಧದಲ್ಲಿ ಎರಡೂ ಬದಿ ಸುಮಾರು ೫ ಅಡಿ ಎತ್ತರದ ಸುಂದರವಾದ ಆಭರಣ, ವಸ್ತ್ರ, ಆಯುಧಗಳನ್ನು ಧರಿಸಿ ಕಿರೀಟಧಾರಣೆಯೊಂದಿಗೆ ತ್ರಿಂಭಂಗಿಯಲ್ಲಿ ನಿಂತಿರುವ ದ್ವಾರಪಾಲಕರನ್ನು ಕಾಣಬಹುದು. ಬಲಭಾಗದ ದ್ವಾರಪಾಲಕ ಶಿಲ್ಪವು ಚತುರ್ಭುಜಗಳನ್ನು ಹೊಂದಿ ಉಗ್ರವಾದ ಮುಖಭಾವ, ದಪ್ಪ ಕಣ್ಣುಗಳು, ಕೇಶರಾಶಿಯು ಭುಜಗಳ ಮೇಲೆ ಹರಡಿದೆ. ಕರ್ಣ ಕುಂಡಲಗಳು, ಕಂಠೀಹಾರದ ಅಲಂಕರಣೆಯನ್ನು, ಮೂರು ಎಳೆಯುಳ್ಳ ಯಜ್ಞೋಪವೀತವು ಸೊಂಟದ ಮೇಲೆ ಇಟ್ಟಿರುವ ಬಲಗೈ ಹೊರಭಾಗದಿಂದ ಸುತ್ತುವರೆದಿದೆ. ಭುಜದಿಂದ ಮೊಣಕಾಲಿನವರೆಗೆ ಇಳಿಬಿಟ್ಟಿರುವ ಗಂಟಾಮಾಲವನ್ನು, ಕೈಗಳು ಸುಂದರವಾದ ಆಭರಣ ಅಲಂಕರಣೆಯಿಂದ ಅಲಂಕೃತಗೊಂಡಿವೆ. ಬಲಭಾಗದ ಮೇಲಿನ

ಕೈಯಲ್ಲಿ ಹೆಡೆ ಬಿಚ್ಚಿರುವ ಸರ್ಪವನ್ನು ಹಿಡಿದಿದ್ದರೆ ಮತ್ತೊಂದು ಕೈ ಕಟಿಹಸ್ತ ಮುದ್ರೆಯಲ್ಲಿದೆ. ಎಡಭಾಗದ ಮೇಲಿನ ಕೈಯಲ್ಲಿ ಹಿಡಿದಿರುವ ವಸ್ತು ಅಥವಾ ಆಯುಧ ಭಗ್ನಗೊಂಡಿದ್ದು ಗುರುತಿಸಲಾಗದಾಗಿದೆ. ಮತ್ತೊಂದು ಕೈಯನ್ನು ಅಧೋಮುಖವಾಗಿರುವ ಗದೆಯ ಮೇಲೆ ಇರಿಸಲಾಗಿದೆ. ಗದೆಯನ್ನು ಹೆಡೆ ಬಿಚ್ಚಿರುವ ಸರ್ಪವು ಸುತ್ತುವರೆದಿದೆ. ಉದರಬಂಧ, ಸುಂದರವಾದ ಕೀರ್ತಿಮುಖವುಳ್ಳ ಈ ದ್ವಾರಪಾಲಕ ಶಿಲ್ಪವು ಬಲಗಾಲನ್ನು ನೇರವಾಗಿರಿಸಿ ಎಡಗಾಲನ್ನು ಹಿಂದಕ್ಕೆ ಇರಿಸಿದೆ.

ಎಡಭಾಗದ ದ್ವಾರಪಾಲಕ ಶಿಲ್ಪವು ಸಹ ಅತ್ಯಂತ ಸುಂದರವಾಗಿದ್ದು, ಕಿರೀಟಮುಕುಟ, ಕರ್ಣಕುಂಡಲ, ಹಾರ, ಯಜ್ಞೋಪವೀತ, ಉದರರಬಂಧ, ಹಸ್ತಕಟಕ, ಪಾದಕಟಕ, ಗಂಟಾಮಾಲೆಯನ್ನು ಧರಿಸಿರುವ ಈ ಶಿಲ್ಪವೂ ಸಹ ಚತುರ್ಭುಜಗಳನ್ನು ಹೊಂದಿದೆ. ಬಲ ಮತ್ತು ಎಡಭಾಗದ ಮೇಲಿನ ಕೈಗಳಲ್ಲಿ ಹಿಡಿದಿರುವ ವಸ್ತುಗಳು ಅಸ್ಪಷ್ಟವಾಗಿ ಗೋಚರಿಸುತ್ತವೆ. ಬಲಭಾಗದ ಕೆಳಗಿನ ಕೈಯನ್ನು ಸರ್ಪ ಸುತ್ತುವರೆದಿರುವ ಅಧೋಮುಖವಾಗಿರುವ ಗದೆಯ ಮೇಲೆ ಇರಿಸಿದ್ದರೆ ಎಡಭಾಗದ ಕೈ ಕಟಿಹಸ್ತ ಮುದ್ರೆಯಲ್ಲಿದೆ. ಒಂದು ರೀತಿಯ ಕಚ್ಚೆ ಮಾದರಿಯ ವಸ್ತ್ರವನ್ನು ಧರಿಸಿರುವುದನ್ನು ಕಾಣಬಹುದು. ಸೊಂಟವನ್ನು ಎಡಭಾಗಕ್ಕೆ ತಿರುಗಿಸಿರುವುದನ್ನು ನೋಡಬಹುದು. ಈ ದ್ವಾರಪಾಲಕ ಶಿಲ್ಪವನ್ನು ಬಲಭಾಗದ ದ್ವಾರಪಾಲಕ ಶಿಲ್ಪಕ್ಕೆ ಹೋಲಿಸಿದರೆ ಅಷ್ಟೊಂದು ಆಭರಣದ ಅಲಂಕರಣೆಯನ್ನು ಕಾಣಲು ಸಾದ್ಯವಿಲ್ಲ ಹಾಗೂ ಇದು ಎತ್ತರದಲ್ಲಿ ಇನ್ನೂ ಎರಡು ಇಂಚು ಎತ್ತರವಾಗಿದೆ.

ದೇವಾಲಯದ ಮುಂಭಾಗವು ಕೇವಲ ದಿಂಡುಗಲ್ಲುಗಳಿಂದ ಕಟ್ಟಿದ ರಚನೆಯನ್ನು ಕಾಣಬಹುದು. ಜಾಲಾಂಧ್ರದ ಕೆಳಭಾಗದಲ್ಲಿ ಉಳಿದು ಬಂದಿರುವ ಸುಟ್ಟ ಇಟ್ಟಿಗೆಯಿಂದ ನಿರ್ಮಿಸಿರುವ ಪಾದಬಂಧ ಮಾದರಿಯ ಅಧಿಷ್ಠಾನ ಮಾದರಿಯು ಬಹುಶಃ ದೇವಾಲಯದ ಸುತ್ತಲೂ ಇದ್ದಿರಬಹುದು. ಇದು ಇಟ್ಟಿಗೆಯ ರಚನೆಯಾಗಿರುವುದರಿಂದ ಕಾಲಕ್ರಮೇಣ ನಾಶವಾಗಿರಬಹುದು.

ಭಿತ್ತಿಯ ರಚನೆಯು ಸಂಪೂರ್ಣವಾಗಿ ನಾಶವಾಗಿದ್ದು, ಬಹುಶಃ ಇದನ್ನು ಸಹ ಇಟ್ಟಿಗೆಯಿಂದಲೇ ನಿರ್ಮಿಸಿರಬೇಕು. ಆದರೆ ಒಳಭಾಗಕ್ಕೆ ಅಂದರೆ ನವರಂಗಕ್ಕೆ ಹೊಂದಿಕೊಂಡಂತೆ ೧೨ ಕಂಬಗಳನ್ನು ನಿಲ್ಲಿಸಿರುವುದನ್ನು ಕಾಣಬಹುದು. ಎರಡೂ ದಿಕ್ಕುಗಳಲ್ಲಿ ಉಳಿದು ಬಂದಿರುವ ಅದ್ಭುತವಾದಂತಹ ಜಾಲಾಂಧ್ರಗಳು. ದಕ್ಷಿಣ ಮತ್ತು ಉತ್ತರದ ಭಿತ್ತಿಯ ಮಧ್ಯದಲ್ಲಿ ಕಂಡು ಬರುವ ಈ ಜಾಲಾಂಧ್ರಗಳು **(ಚಿತ್ರ ಸಂಖ್ಯೆ–೫೪)** ೪.೩ x ೫.೯ ಅಡಿಯಷ್ಟು ಒಳ ವಿಸ್ತೀರ್ಣವನ್ನು ಹೊಂದಿವೆ. ಬಲಭಾಗದ ಜಾಲಾಂಧ್ರದಲ್ಲಿ ಆರು ಶಿಲ್ಪ ಸಮುಚ್ಛಯವಿದ್ದು, ಪ್ರತಿಯೊಂದು ೯ x ೧೦ ಇಂಚುಗಳಷ್ಟು ಅಗಲ ಎತ್ತರವನ್ನು ಹೊಂದಿವೆ. ಬಳ್ಳಿಗಳನ್ನು ಬಂಧಿಸಿರುವಂತೆ ಕಂಡು ಬರುವ ಜಾಲಾಂಧ್ರದಲ್ಲಿ ಎರಡು ಸಾಲುಗಳಲ್ಲಿ ಪುರುಷ ಮತ್ತು ಸ್ತ್ರೀ,

ರತಿ ಕ್ರೀಡೆಯಲ್ಲಿ ತೊಡಗಿರುವಂತೆ ಆರು ಮಿಥುನ ಶಿಲ್ಪಗಳು ಕಂಡು ಬರುತ್ತವೆ. ಎಡಭಾಗದ ಜಾಲಾಂಧ್ರವು ಸಹ ಅದೇ ಎತ್ತರವನ್ನು ಹೊಂದಿದ್ದು, ಬಳ್ಳಿಯು ಬಂಧಿಸಿರುವಂತೆ ಇರುವ ಯಕ್ಷ ಅಥವಾ ಕುಬ್ಜರ ಮೂರು ಶಿಲ್ಪಗಳನ್ನು ಕಾಣಬಹುದು.

ದೇವಾಲಯದ ಒಳಭಾಗದಲ್ಲಿ ಕೇವಲ ಗರ್ಭಗುಡಿ ಮತ್ತು ನವರಂಗ ಮಾತ್ರ ಇದ್ದು, ಸುಖನಾಸಿ ಕಂಡು ಬರುವುದಿಲ್ಲ. ಯಾವುದೇ ಭಿತ್ತಿಗಳು, ಶಿಲ್ಪಗಳು ಅಥವಾ ಮೂರ್ತಿಗಳು ಕಂಡು ಬರುವುದಿಲ್ಲ. ಆದರೆ ೬.೬ ಅಡಿಯಷ್ಟು ಉದ್ದವಿರುವ ಪ್ರನಾಳವನ್ನು ಕಾಣಬಹುದು. ಪಾಣಿಪೀಠದಿಂದ ಬಂದ ಅಭಿಷೇಕದ ನೀರು ಹೊರಗೆ ಹೋಗಲು ಇದನ್ನು ನಿರ್ಮಿಸಿರುವಂತೆ ಕಂಡು ಬರುವುದರಿಂದ ಇಲ್ಲಿ ಪಾಣಿ ಪೀಠದ ಮೇಲೆ ಲಿಂಗವಿದ್ದಿರ ಬೇಕು. ಗರ್ಭಗುಡಿಯ ಮೇಲ್ಛಾವಣಿಯಲ್ಲಿ ಯಾವುದೇ ರೀತಿಯ ಅಲಂಕರಣೆ ಕಂಡು ಬರುವುದಿಲ್ಲ.

೨೪ ಚದುರದಡಿ ವಿಸ್ತೀರ್ಣದ ನವರಂಗದಲ್ಲಿ ಸುಂದರವಾದ ನಾಲ್ಕು ರುದ್ರಕಾಂತ ಮಾದರಿಯ ಕಂಬಗಳನ್ನು ಕಾಣಬಹುದು. ಕಂಬದ ಪಾದವು ಸರಳವಾಗಿ ನಾಲ್ಕು ಮೂಲೆಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ೮ ಮುಖ ಅದರ ಮೇಲ್ಭಾಗದಲ್ಲಿ ೧೬ ಮುಖಗಳ ಜೊತೆಗೆ ಹಾರದಂತಹ ರಚನೆಯನ್ನು ನೋಡಬಹುದಾಗಿದೆ. ಕಂಠದ ಮೇಲೆ ವೃತ್ತಾಕಾರದ ಮುಚ್ಚಳದ ರಚನೆಯನ್ನು ಮಾಡಲಾಗಿದೆ. ಈ ಕಂಬಗಳು ಸರಳವಾದ ಅಲಂಕಾರ ರಹಿತವಾದ ಬೋದಿಗೆಯನ್ನು ಹೊಂದಿವೆ. ನವರಂಗದ ಮೇಲ್ಛಾವಣಿಯು ಯಾವುದೇ ರೀತಿಯ ಅಲಂಕರಣೆಯನ್ನು ಹೊಂದಿಲ್ಲ.

ಯಾವುದೇ ಸೂಕ್ತ ನಿರ್ವಹಣೆ ಇಲ್ಲದೆ, ಮದ್ಯಪಾನ, ಜೂಡು ಆಡೋರ ಕೇಂದ್ರವಾಗಿ, ಗರ್ಭಗುಡಿ, ದೇವಾಲಯದ ಸುತ್ತಲೂ ಪ್ಲಾಸ್ಟಿಕ್ ಕವರ್ಗಳು, ಇಸ್ಪೀಟ್ ಕಾರ್ಡ್‌ಗಳು, ಬೀರ್ ಬಾಟಲ್‌ಗಳು, ಕಸದ ರಾಶಿಯಿಂದ ದೇವಾಲಯ ಮತ್ತಷ್ಟು ಶಿಥಿಲಗೊಳ್ಳುತ್ತಾ ಸಾಗುತ್ತಿದೆ.

### ಅಕ್ಕತಂಗಿಯರ ಗುಡಿ

ಕಪಿಲೇಶ್ವರ ದೇವಸ್ಥಾನದ ಮುಂದೆ ಸುಮಾರು ೨೦೦ ಮೀ ಅಂತರದಲ್ಲಿ ಗಿಡಗೆಂಟೆಗಳು ಬೆಳೆದು ತುಂಬಾ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಅಕ್ಕತಂಗಿ ಗುಡಿಯನ್ನು ಕಾಣಬಹುದು. ಈ ದೇವಾಲಯವನ್ನು ಮುಂಭಾಗದಿಂದ **(ಚಿತ್ರ ಸಂಖ್ಯೆ–೫೬)** ನೋಡಿದರೆ ಪಾಳು ಮಂಟಪದಂತೆ ಗೋಚರಿಸುತ್ತದೆ. ಆದರೆ ಹಿಂಭಾಗದಲ್ಲಿ **(ಚಿತ್ರ ಸಂಖ್ಯೆ–೫೭)** ಅಧಿಷ್ಠಾನ, ಭಿತ್ತಿ, ಕೋಷ್ಠ, ವಲಭಿ, ಕಪೋತಗಳು ದೇವಾಲಯದ

ವೈಭವವನ್ನು ಸಾರುತ್ತವೆ. ಬಹುಶಃ ಈ ದೇವಾಲಯವು ತನ್ನ ವೈಭವತೆಯನ್ನು ಮೆರೆಯುವ ವೇಳೆಗೆ ಧಾಳಿಗೆ ಒಳಗಾಗಿ ನಾಶಗೊಂಡು ಅಪೂರ್ಣವಾಗಿರ ಬೇಕು.

ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗುಡಿ, ಸುಖನಾಸಿ ಭಾಗಗಳು ಮಾತ್ರ ಹೊಂದಿದ್ದೆ. ಯಾವುದೇ ರೀತಿಯ ಕಂಬಗಳಾಗಲಿ, ದ್ವಾರಬಂಧಗಳಾಗಲಿ, ವಿಗ್ರಹಗಳಾಗಲಿ ಕಂಡು ಬರುವುದಿಲ್ಲ. ಸುಖನಾಸಿಯಲ್ಲಿನ ಗೋಡೆಯ ದಪ್ಪವೇ ಸುಮಾರು ೮.೫ ಅಡಿಯಷ್ಟಿದೆ. ಗರ್ಭಗುಡಿಯ ಭಿತ್ತಿ ಮತ್ತು ಮೇಲ್ಛಾವಣಿಯ ನಡುವೆ ಊರ್ಧ್ವ ರಚನೆಯ ಕಮಲದಳಗಳನ್ನು ಕಾಣಬಹುದು. ನವರಂಗದ ಅಧಿಷ್ಠಾನವು ಗುಡಿಯ ಎಡಭಾಗದಲ್ಲಿ ಗೋಚರಿಸುತ್ತಿದ್ದು ಕೇವಲ ಜಗತಿ, ತ್ರಿಪಟ್ಟ ಕುಮುದ ಕಂಡು ಬರುತ್ತದೆ. ಅಧಿಷ್ಠಾನವು ವಿಶೇಷ ತ್ರಿಪಟ್ಟ ಕುಮುದದ ನಂತರ ವ್ಯಾಳ ಮುಖಗಳನ್ನು (ಸಿಂಹದ ಮುಖ) ಕೆಲವು ಕಡೆ ಆನೆಯ ಸೊಂಡಿಲಿರುವ ವ್ಯಾಳಗಳನ್ನೂ ಒಳಗೊಂಡಿರುವಂತೆ ಒಟ್ಟು ೪೨ ವ್ಯಾಳಗಳಿವೆ.

ಭಿತ್ತಿಯು ಅರೆಗಂಬಗಳು ಮತ್ತು ಕೋಷ್ಠಗಳಿಂದ ತುಂಬಿ ಹೋಗಿದೆ. ದಕ್ಷಿಣ, ಪಶ್ಚಿಮ, ಉತ್ತರ ಈ ಮೂರು ಭಾಗದ ಭಿತ್ತಿಯಲ್ಲಿ ನಾಲ್ಕು ಅರೆಗಂಬಗಳು, ಮೂರು ಕೋಷ್ಠಗಳನ್ನು ಕಾಣಬಹುದಾಗಿದೆ. ಬಹುಶಃ ಕೋಷ್ಠದ ಶಿಖರದ ಕೆತ್ತನೆ ಅಪೂರ್ಣವಾಗಿರಬಹುದು. ಈ ಕೋಷ್ಠಗಳಲ್ಲಿ ಯಾವುದೇ ರೀತಿಯ ಶಿಲ್ಪಗಳಾಗಲಿ, ಉಬ್ಬುಶಿಲ್ಪಗಳಾಗಲಿ ಕಂಡು ಬರುವುದಿಲ್ಲ. ಕೋಷ್ಠದ ನಡುವೆ ರುದ್ರಕಾಂತ ಮಾದರಿಯ ಕಂಬವನ್ನು ಹೋಲುವ ರಚನೆಯನ್ನು ನೋಡಬಹುದು. ಭಿತ್ತಿಯ ನಂತರ ವಲಭಿಯು ಕಪೋತದ ಕೆಳಭಾಗದಲ್ಲಿ ಉಬ್ಬಿದ ರಚನೆಯಂತೆ ಕಂಡು ಬರುವುದನ್ನು ಕಾಣಬಹುದು. ವಲಭಿಯು ಅಲಂಕೃತಗೊಂಡಿದ್ದು ಹಂಸಮಾಲೆಯನ್ನು ಕೆತ್ತಲಾಗಿದೆ. ಗರ್ಭಗುಡಿ ಮತ್ತು ಸುಖನಾಸಿಯ ಭಾಗದಲ್ಲಿ ಅತ್ಯಂತ ದಪ್ಪವಾದ ಗೋಡೆಯನ್ನು ನಿರ್ಮಾಣ ಮಾಡಿರುವುದರಿಂದ ಬಹುಶಃ ಎತ್ತರದ ಶಿಖರವನ್ನು ನಿರ್ಮಿಸಲು ಯೋಚಿಸಿರಬಹುದು. ಉತ್ತರ ದಿಕ್ಕಿಗೆ ಇರುವ ಪ್ರನಾಳವು ಸಿಂಹಮುಖವನ್ನು ಹೊಂದಿದ್ದು ಕೆಳಭಾಗ ಒಡೆದು ಹೋಗಿದೆ.

### ಸೋಮೇಶ್ವರ ದೇವಾಲಯ

ಮಣ್ಣೆಯ ಚಿಕ್ಕ ಕೆರೆಯ ಕೋಡಿಯ ಸಮೀಪ ಸೋಮೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು ಊರಿನಿಂದ ಸುಮಾರು ಒಂದು ಕಿ.ಮೀ ಅಂತರದಲ್ಲಿರುವ ದೇವಾಲಯ ಸಂಪೂರ್ಣವಾಗಿ ನವೀಕರಣಗೊಂಡಿದೆ. ಕೋಡಿಯ ಬಳಿ ನಿರ್ಮಾಣಗೊಂಡಿದ್ದರೂ ದೇವಾಲಯದ ಮುಂಭಾಗದಲ್ಲಿ ಕಲ್ಯಾಣಿಯನ್ನು ನೋಡಬಹುದಾಗಿದೆ. ದೇವಾಲಯವು ಗರ್ಭಗುಡಿ, ನವರಂಗ, ತೆರೆದ ಮಂಟಪವನ್ನು ಹೊಂದಿದೆ. ಸುಖನಾಸಿಯನ್ನು ಬಹುಶಃ ನವೀಕರಣದ ವೇಳೆ ಮುಚ್ಚಿಹಾಕಿರಬೇಕು.

ಏಕೆಂದರೆ ನಂದಿಯು ಶಿವಲಿಂಗಕ್ಕೆ ಕೇವಲ ೩ ಇಂಚು ಮಾತ್ರ ದೂರವಿದೆ. ಇಲ್ಲಿನ ಅರ್ಚಕರು ಹೇಳುವ ಪ್ರಕಾರ ಮೊದಲು ನಂದಿ ಗರ್ಭಗುಡಿಯ ಬಾಗಿಲ ಬಳಿ ಇದ್ದು, ನವರಂಗದ ಬಲಭಾಗದಲ್ಲಿ ಒಂದು ಬಾಗಿಲನ್ನು ಮಾಡಿಕೊಂಡು ಪ್ರವೇಶ ಮಾಡುತ್ತಿದ್ದರಂತೆ. ಆದರೆ ಈಗ ನಂದಿಯು ಶಿವಲಿಂಗಕ್ಕೆ ತುಂಬಾ ಸಮೀಪದಲ್ಲಿರುವುದರಿಂದ ಪ್ರಮುಖ ಗರ್ಭಗುಡಿ ದ್ವಾರವನ್ನೇ ಬಳಸಲಾಗುತ್ತಿದೆ. ಹಾಗೂ ನಂದಿಯು ಸ್ವತಃ ತಾನೇ ಚಲಿಸುತ್ತಿದೆ ಎಂಬುದು ಇವರ ನಂಬಿಕೆ. ಗರ್ಭಗುಡಿಯ ಬಾಗಿಲ ಬಳಿ ಎರಡು ಸರಳ ಕಂಬಗಳನ್ನು ಕಾಣಬಹುದು. ಗರ್ಭಗುಡಿಯಲ್ಲಿಯೇ ನಂದಿ ಕಂಡು ಬರುವುದು ಇಲ್ಲಿನ ವಿಶೇಷ.

ಗರ್ಭಗುಡಿಯಲ್ಲಿ ಸುಮಾರು ೨. ೧/೨ ಅಡಿ ಎತ್ತರದ ಪಾಣಿ ಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದಲ್ಲಿನ ನಂದಿಯ ಪಾದಗಳು ಜೀರ್ಣೋದ್ಧಾರದ ಸಮಯದಲ್ಲಿ ನೆಲಮಟ್ಟದಲ್ಲಿ ಮುಚ್ಚಿಹೋಗಿದೆ. ನಂದಿಯು ಗಂಟೆ ಮತ್ತು ವಸ್ತ್ರದಿಂದ ಅಲಂಕೃತಗೊಂಡಿದೆ. ಗರ್ಭಗುಡಿಯ ಮೇಲ್ಛಾವಣೆಯು ನಕ್ಷತ್ರಾಕಾರದ ವಿತಾನವನ್ನು ಹೊಂದಿದೆ. ನವರಂಗದಲ್ಲಿ ಕಾಲಾಂತರದಲ್ಲಿ ಮಾಡಿರುವ ನಾಲ್ಕು ಕಂಬಗಳನ್ನು ಕಾಣಬಹುದು. ನವರಂಗದಲ್ಲಿ ಬಲಭಾಗದಲ್ಲಿನ ವಿನಾಯಕ ಮತ್ತು ಪಾರ್ವತಿ ಶಿಲ್ಪಗಳನ್ನು ಹೊಸದಾಗಿ ರಚಿಸಲಾಗಿದೆ. ನವರಂಗದ ಕಂಬಗಳ ಮೇಲೆ ಅಡ್ಡ ಪಟ್ಟಿಯ ರೀತಿ ಹಾಕಿರುವ ಕಲ್ಲಿನ ತೊಲೆಯ ಮೇಲೆ ವಿಸ್ತಾರದ ಕಮಲವನ್ನು ನೋಡಬಹುದಾಗಿದ್ದು, ಇದು ಗಂಗರ ದೇವಾಲಯಗಳ ವಿತಾನದಲ್ಲಿ ಸಾಮಾನ್ಯವಾಗಿ ಕಂಡುಬರುವ ಅಂಶವಾಗಿದೆ. ದೇವಾಲಯದ ನವರಂಗ ದ್ವಾರದ ಬಲಭಾಗದಲ್ಲಿ ಪ್ರಾಚೀನವಾದ ಚತುರ್ಭುಜಗಳನ್ನು ಹೊಂದಿ ಸಮಭಂಗಿಯಲ್ಲಿ ನಿಂತಿರುವ ದೇವಿಯ ಶಿಲ್ಪವನ್ನು ಕಾಣಬಹುದು. ದೇವಾಲಯದ ಮುಂಭಾಗದಲ್ಲಿ ಕುಳಿತ ಭಂಗಿಯಲ್ಲಿರುವ ಎರಡು ಸಿಂಹಗಳನ್ನು ಕಾಣಬಹುದು. ಬಹುಶಃ ಇವುಗಳು ಕಂಬದ ಪೀಠಗಳಾಗಿರಬಹುದು. ದೇವಾಲಯದ ಜೀರ್ಣೋದ್ಧಾರವಾಗಿದ್ದು ಹೊರಭಾಗದ ಯಾವುದೇ ಲಕ್ಷಣಗಳನ್ನು ಉಳಿಸಿಕೊಂಡಿಲ್ಲ. ಭಿತ್ತಿಯು ಸಹ ಹೊಸದಾಗಿ ನಿರ್ಮಾಣಗೊಂಡಿದೆ. ಒಟ್ಟಾರೆ ದೇವಾಲಯದ ಹೊರಭಾಗದ ಮೂಲ ರಚನೆಗಳು ಯಾವುದು ಕಂಡು ಬರುವುದಿಲ್ಲ.

### ಆಂಜನೇಯ ದೇವಾಲಯ

ಮಣ್ಣೆಯಮ್ಮ ದೇವಾಲಯದ ಪಕ್ಕದಲ್ಲಿನ ಪಶ್ಚಿಮ ಬಾಗಿಲನ್ನು ಹೊಂದಿರುವ ಆಂಜನೇಯ ದೇವಾಲಯವನ್ನು ೧೯೮ರಲ್ಲಿ ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಲಾಗಿದೆ. ದೇವಾಲಯದ ಪಶ್ಚಿಮದ ಪೀಠದ ಕಲ್ಲಿನಲ್ಲಿ ಸುಮಾರು ೯೭೦ ರ ಶಾಸನವನ್ನು[೩೫] ದೇವಾಲಯವನ್ನ ಜೀರ್ಣೋದ್ಧಾರ ಗೊಳಿಸುವಾಗ ಮಾಡಲಾಗಿದೆ. ಮಾರಸಿಂಹನ ವೀರಗಲ್ಲನ್ನು ಹಳೆಯ ಗರುಡ ಗಂಭದ ನೇರದಲ್ಲಿ

[೩೫] ಎ.ಕ-೯, ನೆ.ತಾ.೫೪, ಕ್ರಿ.ಶ.೯೭೦, ಮಣ್ಣೆ.

ಇಡಲಾಗಿದೆ. ಸೋಪಾನದ ಪಕ್ಕದಲ್ಲಿ ಒಂದು ಗಣೇಶ, ಎರಡು ಭಗ್ನಗೊಂಡಿರುವ ನಂದಿ, ಭಗ್ನಗೊಂಡ ಪಾಣಿಪೀಠಗಳನ್ನು ನೋಡಬಹುದು. ಸುಮಾರು ೧೩-೧೪ ನೇ ಶತಮಾನಕ್ಕೆ ಸೇರಿದ ಗಣೇಶನ ಮೂರ್ತಿಯು ಅಂಬಾರಗುಂಡಿ ಸ್ಥಳದಲ್ಲಿ ಅನಾಥವಾಗಿ ಬಿದ್ದರುವುದನ್ನು ಎನ್.ಎಸ್.ಎಸ್. ಕ್ಯಾಂಪ್ ವಿದ್ಯಾರ್ಥಿಗಳು ಆಂಜನೇಯ ಸ್ವಾಮಿ ದೇವಾಲಯದ ಮುಂಭಾಗದಲ್ಲಿರಿಸಿದ್ದಾರೆ.ಪ್ರಸ್ತುತ ಅಂಜನೇಯ ದೇವಾಲಯದ ಸೋಪಾನ ಪಕ್ಕದಲ್ಲಿರುವ ೧.೧ x ೨.೮ ಅಡಿಯಷ್ಟು ಎತ್ತರವಾಗಿರುವ ಪೂರ್ವಾಭಿಮುಖವಾಗಿ ಕುಳಿತಿರುವ ಕಪ್ಪುಶಿಲೆಯ ನಂದಿಯ ಭಗ್ನ ವಿಗ್ರಹವನ್ನು, ನಾನು ೨೦೧೪ರಲ್ಲಿ ಕ್ಷೇತ್ರ ಕಾರ್ಯ ಕೈಗೊಂಡು ಭೇಟಿ ನೀಡಿದ ಸಂದರ್ಭದಲ್ಲಿ ಅಕ್ಕತಂಗಿ ಗುಡಿಯಲ್ಲಿದ್ದ ನಂದಿ ವಿಗ್ರಹವನ್ನು ೨೦೧೬ರಲ್ಲಿ ಕಪಿಲೇಶ್ವರ ದೇವಾಲಯದಲ್ಲಿ ಇರಿಸಲಾಗಿತ್ತು. ಅಕ್ಕತಂಗಿ ಗುಡಿಯಲ್ಲಿ ನಂದಿಯ ವಿಗ್ರಹವಿದ್ದ ವಿಷಯ ಕರ್ನಾಟಕ ರಾಜ್ಯ ಗ್ಯಾಜ಼ಟಿಯಾರ್‌ನಲ್ಲಿಯು ಉಲ್ಲೇಖವಾಗಿದೆ[೩೬]. ಈಗ ಅಂಜನೇಯ ಬಳಿಯಿದೆ. ಈ ನಂದಿಯ ಮುಖವು ಸಂಪೂರ್ಣವಾಗಿ ನಾಶವಾಗಿದೆ. ಅಷ್ಟೊಂದು ಅಲಂಕರಣೆಯನ್ನು ಕಾಣಲು ಸಾಧ್ಯವಿರದ ನಂದಿಯ ಶಿಲ್ಪದಲ್ಲಿ ಗಂಟೆಯ ಮಾಲೆಯನ್ನು ಗುರುತಿಸಬಹುದಾಗಿದೆ.

ಜೀರ್ಣೋದ್ಧಾರವಾದ ದೇವಾಲಯದಲ್ಲಿ ಗರ್ಭಗುಡಿ, ಕಂಬಗಳಿಲ್ಲದ ನವರಂಗವನ್ನು ಕಾಣಬಹುದು. ಗರ್ಭಗೃಹದಲ್ಲಿ ವಿಜಯನಗರ ಕಾಲದಲ್ಲಿ ರಚನೆಯಾದ ಸುಮಾರು ಆರು ಅಡಿ ಎತ್ತರವಾದ ಅಂಜನೇಯ ಮೂರ್ತಿ ಶಿಲ್ಪವಿದೆ. ದ್ವಾರಬಂಧದಲ್ಲಿ ತ್ರಿಭಂಗಿಯಲ್ಲಿ ಶಂಖ, ಚಕ್ರಗಳನ್ನು ಹಿಡಿದು ನಿಂತಿರುವ ಜಯ ವಿಜಯರ ಉಬ್ಬು ಶಿಲ್ಪವನ್ನು ಕಾಣಬಹುದು.

### ಮಣ್ಣೆಯಮ್ಮ ದೇವಾಲಯ

ಪೂರ್ವಾಭಿಮುಖವಾಗಿರುವ ಮಣ್ಣೆಯಮ್ಮ ದೇವಾಲಯವು ಹೊಸದಾಗಿ ಜೀರ್ಣೋದ್ಧಾರಗೊಂಡಿದೆ. ಗಂಗರ ಕಾಲದ ಕೆಲವು ಮೂರ್ತಿ ಶಿಲ್ಪಗಳು ದೇವಾಲಯದಲ್ಲಿದೆ. ಮಣ್ಣೆಯಮ್ಮನ ಮೂರ್ತಿಯು ಚತುರ್ಭುಜಗಳನ್ನು ಹೊಂದಿದ್ದು, ಎರಡು ಕೈಗಳಲ್ಲಿ ತ್ರಿಶೂಲ, ಡಮರುಗ ಹಿಡಿದಿದ್ದರೆ ಉಳಿದ ಕೈಗಳು ಅಭಯ, ವರದ ಮುದ್ರೆಯಲ್ಲಿವೆ ಗರ್ಭಗುಡಿಯ ದ್ವಾರದ ಬಲಭಾಗದ ಗೂಡಿನಲ್ಲಿ ಗಣೇಶ ಶಿಲ್ಪವನ್ನು ಕಾಣಬಹುದು. ಆಸೀನ ಭಂಗಿಯಲ್ಲಿರುವ ಗಣೇಶನು ಚತುರ್ಭುಜಗಳನ್ನು ಹೊಂದಿದ್ದಾನೆ. ಯಾವುದೇ ಆಭರಣಗಳ ಅಲಂಕರಣೆಯಿಲ್ಲದೆ ತುಂಬಾ ಸರಳವಾಗಿ ಕಂಡುಬರುತ್ತದೆ. ಎರಡು ಕೈಗಳಲ್ಲಿ ಯಾವ ವಸ್ತುವನ್ನು ಹಿಡಿದಿದ್ದಾನೆ ಎಂಬುದು ಅಸ್ಪಷ್ಟವಾಗಿದೆ. ಉಳಿದ ಎರಡು ಕೈಗಳನ್ನು ಹೊಟ್ಟೆಯ ಮೇಲೆ ಇರಿಸಿರುವುದನ್ನು ನೋಡಬಹುದು.

---

[೩೬] Suryanath. U. Kamath(CE) :– Karnataka state gazetteer, page.no-842.

ಬಲಭಾಗದ ಗೂಡಿನಲ್ಲಿ ಒಂದು ಸುಂದರ ಸ್ತ್ರೀ ಶಿಲ್ಪವಿದ್ದು ಕಿರೀಟಧಾರಣೆಯನ್ನು ಮಾಡಿದೆ. ಈ ಶಿಲ್ಪದಲ್ಲಿ ಸ್ತ್ರೀಯು ಸ್ತನಪಟ್ಟಿಯನ್ನು ಧರಿಸಿರುವುದನ್ನು ನೋಡಬಹುದು. ಬಲಗೈ ವರದ ಮುದ್ರೆಯಲ್ಲಿದ್ದರೆ, ಎಡಗೈ ಕಟಿಹಸ್ತ ಮುದ್ರೆಯಲ್ಲಿದೆ. ಕರ್ಣಕುಂಡಲ, ಕಂಠೀಹಾರ, ಕೇಯೂರ, ಹಸ್ತಕಟಕ ಮುಂತಾದ ಆಭರಣಗಳನ್ನು ಗುರುತಿಸಬಹುದು. ಯಜ್ಞೋಪವೀತವನ್ನು ಸಹ ನೋಡಬಹುದಾಗಿದೆ. ಮಂಡಿಯಿಂದ ಕೆಳಭಾಗ ಭೂಮಿಯಲ್ಲಿ ಮುಚ್ಚಿಹೋಗಿದೆ. ದೇವಾಲಯವು ೨೦೧೦ರಲ್ಲಿ ಜೀರ್ಣೋದ್ಧಾರಗೊಂಡಿದ್ದು, ನಾಯಕ ಜನಾಂಗಕ್ಕೆ ಸೇರಿದವರು ಮಣ್ಣೆಯಮ್ಮನನ್ನು ಪೂಜಿಸುತ್ತಾ ಬರುತ್ತಿದ್ದಾರೆ. ಈ ದೇವಾಲಯಕ್ಕೆ ಸೇರಿದ ಕಲ್ಲಿನ ಚಕ್ರವುಳ್ಳ ರಥವನ್ನು ಸಹ ನೋಡಬಹುದಾಗಿದೆ.

### ಸೂಳೆಯರಗುಡಿ

ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಸೂಳೆಯರ ಗುಡಿ ಎಂದು ಕರೆಯಲ್ಪಟ್ಟಿರುವ ಶಾಸನೋಕ್ತವಾದ ಜಿನಾಲಯವಿದ್ದು, ಮಾರಸಿಂಹನ ಆಳ್ವಿಕೆಯಲ್ಲಿ ಸೇನಾಧಿಪತಿಯಾದ ಶ್ರೀ ವಿಜಯನು ಮಾರಸಿಂಹನ ಆಜ್ಞೆಯಂತೆ ಮಾನ್ಯಪುರದಲ್ಲಿ ಕ್ರಿ.ಶ.೭೯೭ರಲ್ಲಿ ಸುಂದರವಾದ ಸ್ವರ್ಗಕ್ಕೆ ಸಮಾನವಾದ ಜಿನೇಂದ್ರ ಭವನವನ್ನು ನಿರ್ಮಿಸಿ, ಕಿರುವೆಕ್ಕೂರು ಗ್ರಾಮಾದಯವನ್ನು ನೀಡಿದನು[೩೭]. ಶ್ರೀ ವಿಜಯನು ನಿರ್ಮಿಸಿದ ಜಿನಾಲಯಕ್ಕೆ ೫ ವರ್ಷದ ನಂತರ ಮಣ್ಣೆಯನ್ನು ಗಂಗರಿಂದ ರಾಷ್ಟ್ರಕೂಟರು ವಶಪಡಿಸಿಕೊಂಡ ಮೇಲೆ ಮೂರನೇ ಗೋವಿಂದನು ಕ್ರಿ.ಶ.೮೦೨ ರಲ್ಲಿ ಪೆರ್ವ್ವಡಿಯೂರು ಎಂಬ ಹಳ್ಳಿಯನ್ನು ದಾನ ನೀಡಿದ್ದಾನೆ[೩೮].

ಸಿ.ಹಯವದನರಾಯರು ಹೇಳಿದ್ದಂತಹ ನಂದಿ ಮಂಟಪ, ಭುವನೇಶ್ವರಿ ಯಾವುದು ಇಲ್ಲ ಎಂದು ಆದರೆ ನವರಂಗದ ಒಳಭಾವಣಿಯಲ್ಲಿ ಗುರ್ತಿಸಿದ್ದ ಶಿಲ್ಪವು ನಾಗ ನಾಗಿಣಿಯರ ಶಿಲ್ಪವಾಗಿರದೆ ೨೩ನೇಯ ತೀರ್ಥಂಕರನಾದ ಪಾರ್ಶ್ವನಾಥನ ಯಕ್ಷ ಧರಣೇಂದ್ರ ಮತ್ತು ಪದ್ಮಾವತಿ ಯಕ್ಷಿಗಳಾಗಿದ್ದು, ಇದು ಪಾಶ್ವನಾಥನ ಬಸದಿಯಾಗಿದೆ[೩೯]. ಪಶ್ಚಿಮಕ್ಕೆ ದ್ವಾರ ಬಾಗಿಲಿದ್ದು ಪೂರ್ವ ಪಶ್ಚಿಮಕ್ಕೆ, ಉತ್ತರ ದಕ್ಷಿಣಕ್ಕೆ ೭ ಕಂಬಗಳ ಸಾಲುಗಳಿವೆ.

ಆದರೆ ಇಂದು ಗುರುತಿಸಲು ಸಾಧ್ಯವಾಗದಷ್ಟು ಹಾಳಾಗಿರುವ **(ಚಿತ್ರ ಸಂಖ್ಯೆ–೫೫)** ಬಸದಿಯಲ್ಲಿ ಕೇವಲ ಕಂಬಗಳು ಮಾತ್ರ ನಿಂತಿವೆ. ಈ ದೇವಾಲಯದ ಅಧಿಷ್ಠಾನ, ಭಿತ್ತಿ, ಗರ್ಭಗೃಹ ಯಾವುದು ಇಲ್ಲದೆ ಸಂಪೂರ್ಣ ನಾಶಗೊಂಡಿವೆ. ಬಸದಿಯನ್ನು ಎತ್ತರವಾದ ಅಧಿಷ್ಠಾನದ ಮೇಲೆ ನಿರ್ಮಿಸಿರಬಹುದು ಎಂಬುದಕ್ಕೆ ಸಾಕ್ಷಿಯಾಗಿ ಕಂಬಗಳ ತಳಭಾಗದಲ್ಲಿ ಸುಮಾರು ೪ ರಿಂದ ೫ ಅಡಿ ಎತ್ತರದ ದಪ್ಪ

[೩೭] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭ರ ಗಂಗರ ಮಾರಸಿಂಹನ ಶಾಸನ.
[೩೮] ಎ.ಕ-೯, ನೆ.ತಾ.೬೧, ಕ್ರಿ.ಶ.೮೦೨ರ ರಾಷ್ಟ್ರಕೂಟರ ಪ್ರಭುತವರ್ಷನ ಶಾಸನ.
[೩೯] ಹೆಚ್.ಎಸ್. ಗೋಪಾಲರಾವ್ :- ಇ.ದ.ಸಂ-೧೭, ಪು.ಸಂ-೧೦೪.

ಕಲ್ಲುಗಳನ್ನು ನಿಲ್ಲಿಸಿ ಅದರ ಮೇಲೆ ಒಂದು ಅಡಿಯ ದಿಂಡು ಹಾಕಿ ನಂತರ ಕಂಬಗಳನ್ನು ನಿಲ್ಲಿಸಲಾಗಿದೆ. ತಳಪಾಯವನ್ನು ಇಟ್ಟಿಗೆಗಳಿಂದ ಕಟ್ಟಿರುವುದು. ಈಗ ಬಿದ್ದಿರುವ ಅವಶೇಷವನ್ನು ಕಾಣಬಹುದು.

ಒಟ್ಟು ೧೩ ಕಂಬಗಳಿದ್ದು, ಅವುಗಳಲ್ಲಿ ನಾಲ್ಕು ಸ್ತಂಭಗಳ ದಿಂಡು ಎಂಟು ಮುಖಗಳನ್ನು ಹೊಂದಿದ್ದು, ವಿಷ್ಣುಕಾಂತ ಮಾದರಿಯ ಕಂಬಗಳಾಗಿವೆ. ಈ ಮಾದರಿಯ ಕಂಬಗಳನ್ನು ಬೇಗೂರಿನ ಚೋಳೇಶ್ವರ ದೇವಾಲಯಗಳಲ್ಲಿ ಕಾಣಬಹುದು. ಬೋದಿಗೆಯು ಸಹ ತುಂಬಾ ಸರಳವಾಗಿದೆ. ಇದು ನವರಂಗದ ಭಾಗವಿರಬೇಕು. ಈ ನಾಲ್ಕು ಕಂಬಗಳ ವಿತಾನದಲ್ಲಿ ವೃತ್ತಾಕಾರದಲ್ಲಿ ಯಕ್ಷ ಯಕ್ಷಿಯರ ಉಬ್ಬು ಶಿಲ್ಪವನ್ನು ಕಾಣಬಹುದು.

ನವರಂಗವನ್ನು ಸುತ್ತುವರೆದಿರುವ ಎಂಟು ಕಂಬಗಳು ಪಾದದಲ್ಲಿ ನಾಲ್ಕು ಕೋನ, ದಿಂಡಿನಲ್ಲಿ ಅಷ್ಟಕೋನ ಮೇಲೆ ಮತ್ತೆ ನಾಲ್ಕು ಕೋನಗಳನ್ನು ಹೊಂದಿವೆ. ಇವುಗಳಲ್ಲಿ ಉತ್ತರಕ್ಕೆ ಇರುವ ಮೂರು ಕಂಬಗಳು ಒಳಭಾಗದಲ್ಲಿ ಮಾತ್ರ ಪೂರ್ಣಗೊಂಡಿರುವುದರಿಂದ ಉಳಿದ ಅರ್ಧಭಾಗ ಗೋಡೆಯ ಒಳಗಿದ್ದಿರಬಹುದಾದ ಭಾಗವೆಂದು ತಿಳಿದು ಬರುತ್ತದೆ. ಪಶ್ಚಿಮಕ್ಕೆ ಮೂರು ಕಲ್ಲು ಚಪ್ಪಡಿ ಕಂಬಗಳಿದ್ದು ಇವು ಭಿತ್ತಿಯಲ್ಲಿ ಸೇರ್ಪಡೆಗೊಂಡ ಕಂಬಗಳಾಗಿರಬಹುದು. ಮತ್ತೊಂದು ಕಂಬವು ತಳದಿಂದ ಮೇಲಿನವರೆಗೂ ಸಂಪೂರ್ಣವಾಗಿ ಅಷ್ಟಕೋನವನ್ನೇ ಹೊಂದಿದೆ. ಇದರ ಬೋದಿಗೆಯು ಸಹ ತುಂಬಾ ಸರಳವಾಗಿದೆ. ಈ ದೇವಾಲಯವು ಸಹ ಧಾಳಿಗೊಳಗಾಗಿ ನಾಶವಾಗಿದೆ.

ಕ್ರಿ.ಶ.೭೯೨ರಲ್ಲಿ ಬಸದಿಯಲ್ಲಿ ದೇವದಾಸಿಯರಿಂದ ವಾರ ವಿಲಾಸಿನೀ ವಿರಚಿತ ನೃತ್ಯ ಗೀತವಾದ್ಯ ಬಲಿವಿಲೋಚನ ಮುಂತಾದ ಸೇವೆಗಳು ನಡೆಯುತ್ತಿದ್ದವು. ದೇವದಾಸಿಯರಲ್ಲಿ ಕೆಲವು ವೇಶ್ಯಾವಾಟಿಕೆಯಲ್ಲಿ ತೊಡಗುವಂತೆ ಆಡಳಿತವರ್ಗ ಮಾಡುತ್ತಿದ್ದರು ಅಥವಾ ನೃತ್ಯಗಾರ್ತಿಯರು ವೇಶ್ಯಾವಾಟಿಕೆಯನ್ನು ನಡೆಸುತ್ತಿದ್ದರು ಎಂದೆನಿಸುತ್ತದೆ. ಹಾಗೂ ಕ್ರಿ.ಶ.೧೧೮೩ರ ಮತ್ತೊಂದು ಶಾಸನದಲ್ಲಿ ಹೊನ್ನನಾಯಕನ ಬಸದಿ ಅಥವಾ ಪಾತುರೀಯ ರಂಗದಲ್ಲಿ[೪೦] ಎಂದು ಉಲ್ಲೇಖಗಳು ಬಸದಿ ಎಂದರೆ ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಕನ್ಯೆ, ಪಾತ ಎಂದರೆ ವೇಶ್ಯೆ, ಚಂಚಲ ಸ್ವಭಾವದಳಾಗಿದ್ದರಿಂದ ಪಾತರಗಿತ್ತಿ ಎಂದು ಕರೆಯುತ್ತಿದ್ದಿರಬಹುದು. ಆದ್ದರಿಂದ ಮಣ್ಣೆಯ ಜಿನಾಲಯದ ಬಸವಿಯೂ, ಪಾತರಗಿತ್ತಿಯಾಗಿ ಸೇವೆ ಸಲ್ಲಿಸುತ್ತಿದ್ದರಿಂದಾಗಿಯೇ ಜಿನಾಲಯವನ್ನು ಈಗ ಸೂಳೆಯರ ಬಸದಿ ಅಥವಾ ಗುಡಿ ಎಂದು ಕರೆಯುವುದನ್ನು ಗಮನಿಸಿದರೆ ನಿಜ ಇರಬಹುದು ಎಂದೆನಿಸುತ್ತದೆ.

[೪೦] ಡಾ.ಹೆಚ್.ಎಸ್. ಕೆಂಪರಾಜು :- ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ-೩೦.

ಚಿಕ್ಕಕೆರೆಯ ಏರಿಯ ಮೇಲೆ ಮಧ್ಯಭಾಗದಲ್ಲಿ ಸಪ್ತ ಮಾತೃಕೆಯರ ಶಿಲ್ಪವನ್ನು ಕಾಣಬಹುದು. ಗ್ರಾಮದ ಈಶಾನ್ಯ ದಿಕ್ಕಿನ (ಕೆರೆಯ ಪೂರ್ವದಲ್ಲಿರವ) ಗದ್ದೆಯ ಬಯಲಿನಲ್ಲಿ ಸಿಕ್ಕ ಸೂರ್ಯ ಶಿಲ್ಪವನ್ನು ಸಪ್ತಮಾತೃಕೆಯರ ಪಕ್ಕದಲ್ಲಿ ಇರಿಸಿದ ಮೇಲೆ ಸುಮಾರು ಏಳೆಂಟು ವರ್ಷದ ಹಿಂದೆ ಶಿಲ್ಪವು ಕಳುವಾಗಿದೆ. ವಿಶ್ವಕರ್ಮಾಚಾರ್ಯನೇ ಕತೃವಾದ ಕ್ರಿ.ಶ.೭೬೭ ರ ತಾಮ್ರ ಶಾಸನದಲ್ಲಿ ಮಣ್ಣೆ ವಿಷಯದ ಮಾವತ್ತೂರು ಗ್ರಾಮವನ್ನು ಮಾನ್ಯಪುರದಲ್ಲಿ ವರ್ತಕರ ವೃಂಧದವರು ಕಟ್ಟಿಸಿದ ಅಹರ್ಪ್ವತಿ ದೇಗುಲಕ್ಕೆ ದತ್ತಿ ಬಿಡಲಾಗಿದೆ. ವಾರ ವಿಲಾಸಿ ವಿರಚಿತ ಗೀತ–ವಾದ್ಯ–ಬಲಿವಲೇಪನ–ದೇವಪೂಜಾ ನವಕರ್ಮಾರ್ಥಂ ಅನುಕೂಲಗಳನ್ನು ಕಲ್ಪಿಸಲಾಗಿದೆ. ಬಾಲಾದಿತ್ಯನು ಯುವರಾಜ ಮಾರಸಿಂಹನನ್ನು ದೇಗುಲದಲ್ಲಿ ಪೂಜಾಕಾರ್ಯ ಜರುಗುವಂತೆ ಬೇಡಿಕೊಂಡಂತೆ ತಿಳಿದು ಬರುತ್ತದೆ. ಈ ತಾಮ್ರಶಾಸನ ಸಿಗೋವರೆಗೂ ಅಂದರೆ ೧೯೭೮ ರ ವರೆಗೂ ಮಣ್ಣೆಯಲ್ಲಿ ಸೂರ್ಯ ದೇವಾಲಯದವಿದ್ದರ ಸುಳಿವು ಇರಲಿಲ್ಲ.

ಕಪಿಲೇಶ್ವರ ದೇಗುಲದ ರಚನೆ ಸೂರ್ಯ ದೇಗುಲಗಳಿಗೆ ಸಂಬಂಧಿಸಿದಂತೆ ಕಾಣಿಸುತ್ತದೆ. ಕಪಿಲೇಶ್ವರ ದೇವಾಲಯವನ್ನು ಸೂರ್ಯ ದೇವಾಲಯವಾಗಿತ್ತು ಎಂಬ ವಾದವಿದೆ. ಡಾ. ಕ.ವೆಂ. ರಾಜಗೋಪಾಲ್ ರವರು ಕಪಿಲೇಶ್ವರ ದೇವಾಲಯವೇ ಮಣ್ಣೆಯಲ್ಲಿದ್ದ ಸೂರ್ಯ ದೇವಾಲಯ ಎಂಬ ಅನುಮಾನ ವ್ಯಕ್ತ ಪಡಿಸಿದ್ದಾರೆ. ಆದರೆ ಸೂರ್ಯಶಿಲ್ಪ ಕಪಿಲೇಶ್ವರ ದೇವಾಲಯದಿಂದ ಸುಮಾರು ೭೫೦ ಮೀಟರ್ ಅಂತರದಲ್ಲಿ ಸಿಕ್ಕಿರುವುದರಿಂದ ಸಿಕ್ಕ ಸ್ಥಳದಲ್ಲಿ ಗುಡಿಯಿದ್ದು, ಬಿದ್ದು ಹೋಗಿರಬೇಕು ಗದ್ದೆಯನ್ನು ಹದ ಮಾಡುವಾಗ ಮಣ್ಣಿನಲ್ಲಿ ಮುಚ್ಚಿಕೊಂಡಿದ್ದ ಸೂರ್ಯ ಶಿಲ್ಪ ದೊರೆತಿದೆ. ಆದ್ದರಿಂದ ಸೂರ್ಯ ದೇವಾಲಯ ಮತ್ತು ಕಪಿಲೇಶ್ವರ ೨ ಬೇರೆ ಬೇರೆ ಯಾದ ದೇವಾಲಯಗಳು. ಈ ಸೂರ್ಯ ಶಿಲ್ಪವನ್ನು ಕುಕ್ಕಲಮ್ಮನೆಂದು ಊರಿನ ಜನರು ಹಾಲು ಮೊಸರು ಎರೆದು ಹೋಗುತ್ತಿದ್ದರು.

ಎನ್.ಎಸ್.ಎಸ್ ವಿದ್ಯಾರ್ಥಿಗಳು ದೊಡ್ಡ ಕೆರೆಯ ಬಳಿ ಸ್ವಚ್ಛತಾ ಕಾರ್ಯ ಕೈಗೊಂಡಿದ್ದಾಗ ಭೈರವಿ ಶಿಲ್ಪ, ಜಿನನ ಶಿರ, ವೀರಗಲ್ಲುಗಳು, ಜಿನನ ಮುಂಡ ಇತ್ಯಾದಿಗಳಾಗಿ ದೊರೆತ ಶಿಲ್ಪಗಳನ್ನು ಮಣ್ಣೆಯಲ್ಲಿನ ಪ್ರೌಡಶಾಲೆಯ ಆವರಣದಲ್ಲಿ ಇರಿಸಲಾಗಿದೆ. ಮಣ್ಣೆಯ ಕೆರೆಯಲ್ಲಿ ರುಂಡವಿಲ್ಲದ ಭಗ್ನ ಗರುಡನ ವಿಗ್ರಹವೊಂದು ೨೦೦೬ ರಲ್ಲಿ ಪತ್ತೆಯಾಗಿದ್ದು, ಅದೇ ವರ್ಷದಲ್ಲಿ ದೊರೆತ ಸುಮಾರು ೧೦ನೇ ಶತಮಾನದ ಶಾಸನವೊಂದು ಮಣ್ಣೆಯ ಪದಿನೆಣ್ಣು ದೇವ ಭೋಗವನ್ನು ಉಲ್ಲೇಖಿಸುತ್ತದೆ. ಈ ಗರುಡ ಶಿಲ್ಪದಿಂದ ವಿಷ್ಣು ದೇವಾಲಯ ಇದ್ದಿರಬೇಕು ಗರುಡವನ್ನು ವಿಷ್ಣು ದೇವರ ಎದುರಿಗೆ ಇಡುತ್ತಾರೆ. ಭಗ್ನ ಗರುಡನ ಶಿಲ್ಪವನ್ನು ಸಹ ಶಾಲಾ ಆವರಣದಲ್ಲಿ ಕಾಣಬಹುದು. ದೊಡ್ಡ ಕೆರೆಯ ಏರಿಯ ಮೇಲೆ ಒಂದು ಗಣಪತಿಯ ಪ್ರಾಚೀನ ದೇವಾಲಯವಿದ್ದು ಅದು ಕೂಡ ಇತ್ತೀಚೆಗೆ ನವೀಕರಣಗೊಂಡಿದೆ.

ಮಣ್ಣೆಯಲ್ಲಿ ಇತ್ತೀಚೆಗಿನ ಶೋಧದಿಂದ ಹೊಸ ಶಾಸನಗಳು, ತಾಮ್ರಪಟಗಳು, ಮಣ್ಣಿನ ವಿಗ್ರಹಗಳು, ೧೯೭೮ ರಲ್ಲಿ ೨ ತಾಮ್ರಪಟಗಳು, ಗಣೇಶನ ಮಣ್ಣಿನಗೊಂಬೆ, ಪಂಚಲೋಹ ಉಂಗುರ (೧.೬ಸೆಂ.ಮಿಂ), ದುಗ್ಗಲಮ್ಮ ಗುಡ್ಡದ ಪೂರ್ವದಲ್ಲಿ ಮಹಿಷಾಸುರಮರ್ದಿನಿಯ ಭಗ್ನ ವಿಗ್ರಹ, ದುರ್ಗಿ ವಿಗ್ರಹವನ್ನು ಡಾ.ಹೆಚ್.ಎಸ್. ಗೋಪಾಲರಾವ್‌ರವರು ಶೋಧಿಸಿದ್ದಾರೆ. ಮಣ್ಣೆಯಲ್ಲಿ ೮ ಸಾಲುಗಳ ಪೂರ್ವದ ಹಳಗನ್ನಡ ಶೈಲಿಯಲ್ಲಿನ ೧೦ನೇ ಶತಮಾನದ ಶಾಸನದಲ್ಲಿ ಮಣ್ಣೇಯ ಹದಿನೆಂಟು ದೇವಭೋಗದವರು, ಶಾಸನಜದಲ್ಲಿ ಹದಿನೊಬ್ಬ ದೇವಭೋಗದವರನ್ನು ಉಲ್ಲೇಖಿಸಿರುವುದನ್ನು ಕಂಡರೆ ಮಣ್ಣೆಯಲ್ಲಿ ಹದಿನೆಂಟು ದೇವಾಲಯಗಳಿದ್ದು ಆ ಹದಿನೆಂಟು ದೇವಾಲಯಗಳ ದೇವರ ಸೇವೆ ಮಾಡುತ್ತಿದ್ದ ಮಾರ್ಗಗಳನ್ನು ಸೂಚಿಸುತ್ತದೆ. ಆದರೆ ಪ್ರಸ್ತುತ ೬ ದೇವಾಲಯಗಳಿದ್ದು, ೩ ದೇವಾಲಯಗಳಲ್ಲಿ ಮಾತ್ರ ಪೂಜಾಕಾರ್ಯಗಳು ಜರುಗುತ್ತಿದೆ.

## ಬಿಲ್ಲಿನಕೋಟೆಯ ಲಿಂಗಪ್ಪನ ಗುಡಿ

ಬಿಲ್ಲಿನಕೋಟೆ ಗ್ರಾಮದ ಎದುರಿನ ಕೆರೆ ಕೋಡಿಯ ಕಲ್ಲು ಬಂಡೆಯ ಮೇಲೆ ಕಲ್ಲುಗಳಿಂದ ನಿರ್ಮಿತವಾದ ಗುಡಿಯನ್ನು ಕಾಣಬಹುದು. ಈ ಗುಡಿಯ ಬಹುಭಾಗ (ಪಶ್ಚಿಮಭಾಗ) ಬಿದ್ದು ಹೋಗಿದ್ದು ಸ್ಥಳೀಯರು ಗುಡಿಯಲ್ಲಿ ಲಿಂಗ ಇದ್ದುದರಿಂದಾಗಿ ಲಿಂಗಪ್ಪನ ಗುಡಿ ಎಂದು ಕರೆಯುತ್ತಿದ್ದರು. ಈಗ ಶಿವಲಿಂಗವಿಲ್ಲ, ಪಾಣಿಪೀಠ ಮಾತ್ರ ದೇವಾಲಯದ ಹೊರಗೆ ಬಿದ್ದಿದೆ. ಮಳೆಗಾಲದಲ್ಲಿ ಕೆರೆ ತುಂಬಿದಾಗ ಗುಡಿಗೆ ಹೋಗಲು ಸಾಧ್ಯವಿಲ್ಲ, ಕೆರಯ ನೀರು ಕಡಿಮೆಯಾದಾಗ ಮಾತ್ರ ಹೋಗಲು ಸಾಧ್ಯ.

ಊರಿನ ಕೆರೆಯ ಕೋಡಿಗಳಲ್ಲಿ ಅಥಾವ ಬಯಲಿನಲ್ಲಿ ದೇವಸ್ಥಾನ ಇರುವುದು ಸಾಮಾನ್ಯವಾಗಿದೆ. ದೇವಾಲಯದ ಈಶಾನ್ಯಕ್ಕೆ ಗ್ರಾಮವಿದೆ. ಹಳೆಯ ಊರಿನ ಈಶಾನ್ಯಕ್ಕೆ ಕೆರೆಯ ಒಳಗಗೆ ಪೂರ್ವಾಭಿಮುಖವಾದ ದೇವಾಲಯ ಇತ್ತು. ಕೆರೆಯ ಕೋಡಿನ ಹಾಸು ಬಂಡೆಯ ಇಳಿಜಾರಿನ ಸ್ಥಳದಲ್ಲಿ ದೇವಾಲಯದ ಅಧಿಷ್ಠಾನವನ್ನು ನಿರ್ಮಿಸಲಾಗಿದೆ. ಮುಂಭಾಗದಲ್ಲಿ ಅರ್ಧ ಅಡಿಯು ಎತ್ತರವಿಲ್ಲದ ಅಧಿಷ್ಠಾನ ಹಿಂದಕ್ಕೆ ೧.೫ ಅಡಿ ಎತ್ತರವಿದೆ. ಅಧಿಸ್ಥಾನದ ಮೇಲೆ ೨ ಸಾಲಿನಲ್ಲಿ ಭಿತ್ತಿಯನ್ನು ನಿರ್ಮಿಸಲಾಗಿದೆ. ಮುಂಭಾಗ ೮ ಅಡಿ ಎತ್ತರವಿದ್ದರೆ, ಹಿಂಭಾಗ ೧೧ ಅಡಿ ಎತ್ತರವಿದ್ದು, ಗರ್ಭಗೃಹವು ೬.೫ ಅಡಿ ಉದ್ದ, ೭.೫ ಅಡಿ ಅಗಲದ ಆಯತಾಕಾರದಲ್ಲಿದೆ. ಮುಖಮಂಟಪವು ೭.೫ ಅಡಿ ಉದ್ದ, ೬.೫ ಅಡಿ ಅಗಲವಿದ್ದು, ಅಧಿಸ್ಥಾನದ ಮೇಲೆ ಸುತ್ತಲೂ ೦.೫ ಅಡಿ ಅಗಲ ಜಾಗ ಬಿಟ್ಟು ಭಿತ್ತಿಯನ್ನು ನಿರ್ಮಾಣ ಮಾಡಲಾಗಿದೆ. ಬಾಗಿಲುವಾಡ ಸರಳವಾಗಿ ೪ ಅಡಿ ಎತ್ತರ, ೨ ಅಡಿ ಅಗಲವಾಗಿದೆ, ದ್ವಾರ ಪಾಲಕರಾಗಲಿ, ಅಲಂಕಾರವಾಗಲಿ ಯಾವುದು ಇಲ್ಲ. ಬಹುಶಃ ಕಲ್ಲು ಚಪ್ಪಡಿಗಳಿಂದ ನಿರ್ಮಾಣವಾದ ಈ ಗುಡಿಯನ್ನು

ನೋಡಿದರೆ ಗಂಗರ ಕಾಲದಲ್ಲಿ ನಿರ್ಮಾಣವಾಗಿರಬೇಕು. ಏಕೆಂದರೆ ಗಂಗರೇ ಈ ತರದ ಗುಡಿಗಳನ್ನು ನಿರ್ಮಿಸುತ್ತಿದ್ದರು ಎನ್ನುವುದಕ್ಕೆ ತೋಟಗೆರೆ, ಕಿತ್ತನಲ್ಲಿಗಳಲ್ಲಿ ಗುಡಿಗಳನ್ನು ಕಾಣಬಹುದು.

## ಐವರಕಂಡಪುರದ ದೇವಾಲಯಗಳು

ಹೆಸರುಘಟ್ಟದಿಂದ ೫.೫ ಕಿ.ಮೀ ದೂರದಲ್ಲಿ ಯಲಹಂಕಗೆ ಹೋಗುವ ರಸ್ತೆಯಲ್ಲಿ ಐಗಂಡಪುರ, ಐವರು ಕಂಡಪುರ ಎಂದು ಕರೆಯುವ ಗ್ರಾಮವನ್ನು ಹೊಯ್ಸಳ ಕಾಲದ ವಿಕ್ರಮಚೋಳಮಂಡಲದ ಕುಕ್ಕನೂರುನಾಡಿನಲ್ಲಿನ ಪೆರಿಯಮತ್ತಕೂರು ಎಂದು ಕರೆಯುತ್ತಿದ್ದು, ಶಾಸನದಲ್ಲಿ ಧರ್ಮೇಶ್ವರ ದೇವರನ್ನು ಐವರಕಂಡೇಶ್ವರ, ಐವರುಗಂಡದೇವರು ಎಂದು ದೇವರ ಹೆಸರು ಹೇಳುತ್ತಿವೆಯೇ ಹೊರತು ಊರಿನ ಹೆಸರು ಎಲ್ಲೂ ಸಹ ಉಲ್ಲೇಖವಾಗಿಲ್ಲ. ಬಹುಶಃ ಐವರು ಕಂಡೇಶ್ವರ ದೇವರ ಪ್ರಸಿದ್ಧಿಯಿಂದಾಗಿ ಪೆರಿಯಮತ್ತಕೂರು ಮರೆಯಾಗಿ ಐವರುಕಂಡಪುರವಾಗಿ ದೇವರ ಹೆಸರಲ್ಲೇ ಗ್ರಾಮನಾಮವಾಗಿರ ಬೇಕು ಎಂದೆನಿಸುತ್ತದೆ. ಕರ್ನಮಂಗಲರವರ 'ಕೆಂಪೇಗೌಡ ಜಯ ಪ್ರಶಸ್ತಿ'ಯ ಪುಟ ೧೮ ರಲ್ಲೂ ಆಯಿವರುಕಂಡಪುರ ಎಂದು ಉಲ್ಲೇಖಿಸಲಾಗಿದೆ. ಪಾಂಡವರು ಇಲ್ಲಿನ ಲಿಂಗಗಳನ್ನು ಪ್ರತಿಷ್ಠಾಪನೆ ಮಾಡಿದ್ದರಿಂದ ಈ ಲಿಂಗಗಳಿಗೆ ಅವರ ಹೆಸರನ್ನೇ ಇಡಲಾಗಿದೆ ಎಂಬ ಐತಿಹ್ಯ ಪ್ರಚಲಿತದಲ್ಲಿದೆ. ಪಂಚಪಾಂಡವರು ಇಲ್ಲಿಗೆ ಬಂದಿದ್ದರು ಎಂಬುದರಿಂದಲೇ ಐವರ ಕಂಡಪುರವೆಂದು ಹೇಳಲಾಗುತ್ತದೆ.

ಧರ್ಮರಾಯ, ನಕುಲ, ಅರ್ಜುನ, ಸಹದೇವ, ಭೀಮ, ಕುಂತಿ ಹಾಗೂ ಕಾಲಭೈರವೇಶ್ವರ ಸ್ವಾಮಿ ದೇವಾಲಯಗಳ ಸಮೂಹವನ್ನು ಕಾಣಬಹುದು. **(ಚಿತ್ರ ಸಂಖ್ಯೆ-೫೮)** ಭೀಮ ದೇವಾಲಯ ಮಾತ್ರವೇ ಈ ಗುಂಪಿನಿಂದ ಸುಮಾರು ೫೦೦ ಮೀ ದೂರದಲ್ಲಿದೆ. ಮುಜರಾಯಿ ಇಲಾಖೆಯ ವ್ಯಾಪ್ತಿಗೆ ಬರುವ ಈ ದೇವಾಲಯಗಳಲ್ಲಿ ಧರ್ಮರಾಯ ದೇವರಿಗೆ ಪ್ರತಿದಿನ ಪೂಜೆ ಪುನಸ್ಕಾರಗಳು ಜರುಗುತ್ತವೆ. ಉಳಿದ ದೇವಾಲಯಗಳಲ್ಲಿ ಯಾವುದೇ ನಿರ್ವಹಣೆ ಕಂಡು ಬರುವುದಿಲ್ಲ. ಪೂರ್ವಾಭಿಮುಖವಾಗಿರುವ ಧರ್ಮರಾಯ ದೇವಾಲಯವು ಗರ್ಭಗುಡಿ, ಅಂತರಾಳ, ನವರಂಗವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪನೆ ಮಾಡಿದ್ದು, ಧರ್ಮರಾಯ ಸ್ವಾಮಿ ಎಂದು ಕರೆಯಲಾಗುತ್ತಿದೆ.

ನವರಂಗವು ಪೂರ್ವ ಮತ್ತು ಉತ್ತರಾಭಿಮುಖವಾಗಿರುವ ದ್ವಾರಗಳನ್ನು ಹೊಂದಿದೆ. ಇಲ್ಲಿ ನಾಲ್ಕು ರುದ್ರಕಾಂತ ಕಂಬಗಳನ್ನು ಕಾಣಬಹುದು ಇವುಗಳು ಪಾದಭಾಗದಲ್ಲಿ ನಾಲ್ಕು, ಎಂಟು, ಹದಿನಾರು ಕೋನಗಳನ್ನು ಹೊಂದಿದೆ. ಕಾಂಡವು ದುಂಡಾಗಿದ್ದು ಮಾಲೆಯ ಅಲಂಕರಣವನ್ನು ಹೊಂದಿದೆ. ಮೇಲೆ ಕಂಠ, ವೃತ್ತಾಕಾರದ ಮುಚ್ಚಳವನ್ನು ಹೊಂದಿರುವ ಈ ಕಂಬಗಳು ಸರಳವಾದ ಬೋದಿಗೆಯನ್ನು

ಹೊಂದಿವೆ. ನವರಂಗದಲ್ಲಿ ಪಶ್ಚಿಮಾಭಿಮುಖವಾಗಿ ಕುಳಿತಿರುವ ಎರಡು ನಂದಿ ಶಿಲ್ಪಗಳನ್ನು ಕಾಣಬಹುದು. ಅವುಗಳಲ್ಲಿ ಒಂದು ಭಗ್ನಗೊಂಡಿದೆ. ಗಣೇಶ, ವೀಣೆಯನ್ನು ನುಡಿಸುತ್ತಿರುವ ಶಿವ, ಲಿಂಗೋದ್ಭವಮೂರ್ತಿ, ದಕ್ಷಿಣಾಮೂರ್ತಿ, ಸಪ್ತಮಾತೃಕೆಯರ ನಾಲ್ಕು ಬಿಡಿ ಶಿಲ್ಪಗಳಿವೆ.

ನವರಂಗದ ಮುಖ್ಯ ದ್ವಾರವು ಸರಳವಾದ ಕಂಬವನ್ನು ಹೊಂದಿರುವಂತೆ ಕಂಡು ಬರುತ್ತದೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದಾಗಿದೆ. ಯಾವುದೇ ರೀತಿಯ ಸೋಪಾನ ಕಂಡು ಬರುವುದಿಲ್ಲ. ಉತ್ತರ ದ್ವಾರವು ಸಹ ಸರಳವಾಗಿದೆ. ದೇವಾಲಯದ ಮುಂಭಾಗದಲ್ಲಿ ಒಂದು ನಂದಿ ಸ್ತಂಭವನ್ನು ಕಾಣಬಹುದು.

ಗರ್ಭಗೃಹ ಹಾಗೂ ಅಂತರಾಳದ ಭಿತ್ತಿಯೂ ಸಹ ತುಂಬಾ ಸರಳವಾಗಿದೆ. ಇಲ್ಲಿ ದಪ್ಪ ದಪ್ಪ ಕಲ್ಲುಗಳನ್ನು ಮಾತ್ರವೇ ಕಾಣಲು ಸಾಧ್ಯ. ಅರೆಗಂಬಗಳಾಗಲಿ, ದೇವಕೋಷ್ಠಕಗಳಾಗಲಿ, ಜಾಲಾಂಧ್ರಗಳಾಗಲಿ ಅಥವಾ ಮತ್ತಿತರ ಅಲಂಕಾರಿಕ ಕೆತ್ತನೆಗಳಾಗಲಿ ಕಂಡು ಬರುವುದಿಲ್ಲ. ಗರ್ಭಗುಡಿಯ ಶಿಖರವು ಕಪೋತ ಭಾಗದಿಂದಲೇ ಪ್ರಾರಂಭವಾಗುತ್ತದೆ. ಇದು ಆರು ಹಂತಗಳನ್ನು ಹೊಂದಿದ್ದು, ಮೆಟ್ಟಿಲುಗಳಂತೆ ಮೇಲಕ್ಕೆ ಏರುತ್ತಾ ಹೋದಂತೆ ಕಿರಿದಾಗುತ್ತಾ ಹೋಗಿದೆ. ಗರ್ಭಗುಡಿಯ ಭಾಗವು ಶಿಥಿಲವಾಗಿರುವುದರಿಂದ ಪಶ್ಚಿಮ ಹಾಗೂ ಉತ್ತರದ ಭಾಗದಲ್ಲಿ ಸಹಾಯಕ ಗೋಡೆಗಳನ್ನು ಕಾಣಬಹುದು.

ಧರ್ಮರಾಯ ದೇವಾಲಯದ ಬಲಭಾಗಕ್ಕೆ ದಕ್ಷಿಣಾಭಿಮುಖವಾಗಿರುವ ಕುಂತಿ ಎಂಬ ಹೊಸದಾಗಿ ನಿರ್ಮಾಣ ಮಾಡಿದ ದೇವಾಲಯದಲ್ಲಿ ಗರ್ಭಗುಡಿ, ನವರಂಗದಂತಹ ರಚನೆ ಮಾತ್ರವೇ ಕಂಡು ಬರುತ್ತದೆ. ಇಲ್ಲಿ ಯಾವುದೇ ಪೂಜೆಗಳು ನಡೆಯುವುದಿಲ್ಲ. ಮಕ್ಕಳಾಗದ ಸ್ತ್ರೀಯರು ಕುಂತಿದೇವಿಗೆ ಪೂಜೆಯನ್ನು ಸಲ್ಲಿಸಿ ಒಂದು ರಾತ್ರಿ ಇಲ್ಲಿಯೇ ಕಳೆದರೆ ಮಕ್ಕಳಾಗುತ್ತವೆ ಎಂಬ ಪ್ರತೀತಿ ಇದೆ ಎಂಬುದಾಗಿ ಇಲ್ಲಿನ ಅರ್ಚಕರು ತಿಳಿಸಿದ್ದಾರೆ.

ಕುಂತಿ ದೇವಾಲಯದ ಬಲಕ್ಕಿರುವ ನಕುಲನ ಗುಡಿಯು ಗರ್ಭಗುಡಿ ಹಾಗೂ ಅಂಕಣವನ್ನು ಹೊಂದಿದೆ. ಮುಂಭಾಗದಲ್ಲಿ ನಾಲ್ಕು, ಎಂಟು, ನಾಲ್ಕು, ಎಂಟು, ನಾಲ್ಕು ಮೂಲೆಯುಳ್ಳ ಎರಡು ಕಂಬಗಳಿದ್ದು, ಸರಳ ಬೋದಿಗೆಯನ್ನು ಹೊಂದಿದೆ. ಬಾಗಿಲವಾಡದಲ್ಲಿ ಎರಡು ಶೈವ ದ್ವಾರಪಾಲಕರ ಶಿಲ್ಪಗಳನ್ನು ಕಾಣಬಹುದಾಗಿದೆ. ಗರ್ಭಗುಡಿಯಲ್ಲಿ ಸರಳವಾದ ಪಾಣಿಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪನೆಯನ್ನು ಮತ್ತು ಅಭಿಷೇಕದ ನೀರು ಉತ್ತರಕ್ಕೆ ಹೋಗುವ ವ್ಯವಸ್ಥೆಯನ್ನು ಮಾಡಲಾಗಿದೆ. ಗರ್ಭಗುಡಿಯು ನಕ್ಷತ್ರಾಕಾರ ಮಾದರಿಯ ವಿತಾನವನ್ನು ಹೊಂದಿದೆ. ಇಲ್ಲಿನ ಶಿವಲಿಂಗದ ಮುಂದೆ ನಂದಿಯ ವಿಗ್ರಹ ಕಂಡು ಬರುವುದಿಲ್ಲ. ಈ ಲಿಂಗವನ್ನು ಹೊರತುಪಡಿಸಿದರೆ ಬೇರೆ ಯಾವ ರಚನೆಯು

ಗಂಗರ ಕಾಲದಲ್ಲ. ಇವು ಕಾಲಾನಂತರದ ಅಂದರೆ ವಿಜಯನಗರೋತ್ತರ ಕಾಲದಲ್ಲಿ ರಚನೆಗಳಾಗಿರಬೇಕು. ಭಿತ್ತಿಯನ್ನು ಸರಳವಾಗಿ ದಪ್ಪ ದಪ್ಪ ಕಲ್ಲುಗಳಿಂದ ನಿರ್ಮಿಸಲಾಗಿದೆ. ಇದು ಶಿಖರವಾಗಲಿ, ಅಂಕಣದಲ್ಲಿ ಕಂಬಗಳನ್ನಾಗಲಿ ಹೊಂದಿಲ್ಲ. ಗರ್ಭಗುಡಿಯ ಒಳಭಾಗದಲ್ಲಿ ಭಿತ್ತಿಯಲ್ಲಿ ಸೇರ್ಪಡೆಗೊಂಡಿರುವ ಅರೆಗಂಬಗಳನ್ನು ಕಾಣಬಹುದಾಗಿದೆ. ಈ ಗುಡಿಯಲ್ಲಿ ಯಾವುದೇ ರೀತಿಯ ಪೂಜೆಗಳು ಜರುಗುವುದಿಲ್ಲ.

ನಕುಲ ಗುಡಿಯ ಬಲಭಾಗಕ್ಕೆ ಅರ್ಜುನನ ಗುಡಿಯನ್ನು ಕಾಣಬಹುದು. ಗರ್ಭಗುಡಿ ಹಾಗೂ ಒಂದು ಅಂಕಣವನ್ನು ಹೊಂದಿದೆ. ಇಲ್ಲಿನ ಲಿಂಗವು ಸಹ ಸರಳವಾದ ಪಾಣಿಪೀಠವನ್ನು ಹೊಂದಿದೆ. ಅಂಕಣದಲ್ಲಿ ಕುಬ್ಜ ರೀತಿಯಲ್ಲಿರುವ ನಂದಿಯ ವಿಗ್ರಹವನ್ನು ಕಾಣಬಹುದು. ಗರ್ಭಗುಡಿಯ ಅಂಕಣಕ್ಕೆ ತೆರೆದು ಕೊಂಡಿರುವಂತೆ ಇದೆ. ಇಲ್ಲಿ ಒಂದು ರುದ್ರಕಾಂತ ಕಂಬವನ್ನು ಕಾಣಬಹುದಾಗಿದೆ ಇನ್ನೊಂದು ಕಂಬ ನಾಲ್ಕು, ಎಂಟು, ನಾಲ್ಕು, ಎಂಟು ಮೂಲೆಗಳುಳ್ಳ ಕಂಬವಾಗಿದ್ದು ಮುಚ್ಚಳ ವೃತ್ತಾಕಾರವಾಗಿದೆ. ಹೊರಭಿತ್ತಿಯು ತುಂಬಾ ಸರಳವಾಗಿದೆ.

ಸಹದೇವ ಗುಡಿಯು ಸಹ ಕಾಲಾನಂತರದ ರಚನೆಯೇ ಇಲ್ಲಿ ದ್ವಾರದಲ್ಲಿ ದ್ವಾರಪಾಲಕರನ್ನು ಕಾಣಬಹುದು. ಇದು ಸಹ ಮೇಲೆ ತಿಳಿಸಿದ ಗುಡಿಗಳ ರಚನೆಯಂತೆಯೇ ಇದೆ. ಸರಳವಾದ ಪಾಣಿಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು, ಗರ್ಭಗುಡಿಯ ಮೇಲ್ಛಾವಣಿಯು ನಕ್ಷತ್ರಾಕಾರವಾಗಿ ಒಳಭಾಗಕ್ಕೆ ಹೋಗಿರುವಂತೆ ಇದೆ. ಗರ್ಭಗುಡಿಯ ಒಳಭಾಗದ ಭಿತ್ತಿಯ ಉತ್ತರ ಭಾಗದಲ್ಲಿ ಕಮಲದ ರಚನೆಯನ್ನು ಕಾಣಬಹುದು. ಈ ರೀತಿಯ ರಚನೆಗಳು ಗಂಗರ ಪ್ರಾಚೀನ ದೇವಾಲಯಗಳ ನವರಂಗದ ಮೇಲ್ಛಾವಣಿಯಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. ಅಂಕಣದಲ್ಲಿ ಬೃಹತ್ತಾದ ನಂದಿಯನ್ನು ಕಾಣಬಹುದು. ಹೆಚ್ಚು ಅಲಂಕರಣೆ ಹಾಗೂ ಸುಂದರವಾಗಿ ಕಾಣದಿದ್ದರೂ ಕಂಠದಲ್ಲಿ ಗಂಟಾಮಾಲೆಯ ಅಲಂಕರಣ ಇದೆ.

ಭೀಮ ಗುಡಿಯು ಮೇಲಿನ ನಾಲ್ಕು ದೇವಾಲಯಗಳಿಂದ ಸ್ವಲ್ಪ ದೂರದಲ್ಲಿ ಒಂದು ದಿಬ್ಬದ ಮೇಲೆ ಕಂಡುಬರುತ್ತದೆ ಇದು ಸಹ ಗರ್ಭಗುಡಿ ಹಾಗೂ ಒಂದು ಅಂಕಣವನ್ನು ಹೊಂದಿದೆ. ಅಂಕಣದಲ್ಲಿ ಉತ್ತರ ಗೋಡೆಯನ್ನು ಬಿಟ್ಟು ಉಳಿದವು ಬಿದ್ದು ಹೋಗಿವೆ. ಎತ್ತರವಾದ ಪಾಣಿಪೀಠವನ್ನು ಹೊಂದಿರುವ ಲಿಂಗದ ಮೇಲ್ಭಾಗ ಹೆಚ್ಚು ವೃತ್ತಾಕಾರವಾಗಿರುವಂತೆ ಮಾಡಲಾಗಿದೆ. ನಂದಿಯ ಶಿಲ್ಪವು ತುಂಬಾ ಉದ್ದವಾಗಿದೆ. ಇದು ಸರಳವಾಗಿದ್ದರು ಬಹಳ ಸುಂದರವಾಗಿ ಮೂಡಿಬಂದಿದೆ. ಕಂಠದಲ್ಲಿ ಘಂಟೆಯ ಮಾಲೆಯನ್ನು ಕಾಣಬಹುದು.

ಒಟ್ಟಾರೆಯಾಗಿ ಭೀಮ, ನಕುಲ, ಸಹದೇವ ಹಾಗೂ ಅರ್ಜುನ ದೇವಾಲಯಗಳು ತುಂಬಾ ಸರಳವಾಗಿದ್ದು ವಿಜಯನಗರೋತ್ತರ ಕಾಲದಲ್ಲಿ ರಚನೆಯಾಗಿರುವಂತಹವುಗಳಾಗಿವೆ. ಯಾವ ಭದ್ರತೆ ಹಾಗೂ ಬಾಗಿಲು ಇರದ ಕಾರಣ ಧನಕರುಗಳು ಬಂದು ಅಂಕಣದಲ್ಲಿ ಮಲಗಿಕೊಂಡು ಹೋಗುತ್ತವೆ. ಇವುಗಳ ಸಗಣಿಯಿಂದ ಗುಡಿಗಳು ತಿಪ್ಪೆಗುಂಡಿಗಳಾಗಿ ಮಾರ್ಪಾಡಾಗುತ್ತಿವೆ. ಗ್ರಾಮಸ್ಥರಾಗಲಿ, ಮುಜರಾಯಿ ಇಲಾಖೆಯವರಾಗಲಿ ಇವುಗಳ ಸೂಕ್ತ ರಕ್ಷಣೆಯನ್ನು ಮಾಡದೇ ಇರುವುದು ಬೇಸರದ ಸಂಗತಿ. ಧರ್ಮರಾಯ ಸ್ವಾಮಿ ಲಿಂಗವನ್ನು ಹೊರತುಪಡಿಸಿದರೆ ಬೇರೆ ಯವುದೇ ಲಿಂಗಗಳಿಗೆ ಇಲ್ಲಿ ಮಾನ್ಯತೆ ಇಲ್ಲದಾಗಿದೆ. ಈ ಲಿಂಗಗಳು ಸಹ ಧರ್ಮರಾಯ ಸ್ವಾಮಿಯಷ್ಟೇ ಹಳೆಯ ಲಿಂಗಗಳಾದರೂ ಅವುಗಳನ್ನು ಪೂಜಿಸುವುದಿರಲಿ ಅವುಗಳನ್ನು ಸುಸ್ಥಿತಿಯಲ್ಲಿಡುವ ಕಾರ್ಯವನ್ನು ಯಾರೂ ಮಾಡುತ್ತಿಲ್ಲ. ಮುಂದೊಂದು ದಿನ ನಿಧಿಗಳ್ಳರ ದುರಾಸೆಗೆ ಇವುಗಳು ಬಲಿಯಾದರೆ ಆಶ್ಚರ್ಯ ಪಡುವ ಸಂಗತಿಯೇನಿಲ್ಲ.

ಧರ್ಮರಾಯ ಸ್ವಾಮಿ ದೇವಾಲಯದ ಉತ್ತರದ ಭಾಗದಲ್ಲಿ ಒಂದು ಸುಂದರ ಆಸೀನ ಭೈರವನ ಮೂರ್ತಿಯನ್ನು ಕಾಣಬಹುದು. ಆಭರಣಗಳಿಂದ ಅಲಂಕೃತವಾಗಿರುವ ಈ ಶಿಲ್ಪವು ಬಲಗೈಯಲ್ಲಿ ಪರಶುವನ್ನು ಎಡಗೈಯಲ್ಲಿ ಕಪಾಲವನ್ನು ಹಿಡಿದಿದೆ. ಇಲ್ಲಿಯೇ ಮತ್ತೊಂದು ಚತುರ್ಭುಜವನ್ನು ಹೊಂದಿರುವ ಶಿಲ್ಪವನ್ನು ಕಾಣಬಹುದು. ಪಾಣಿಪೀಠದ ಮೇಲ್ಭಾಗ, ಭಗ್ನಗೊಂಡ ಕಾಲಿನ ಭಾಗಗಳು ಸಹ ಇಲ್ಲಿಯೇ ಬಿದ್ದಿವೆ.

ಈ ದೇವಾಲಯಕ್ಕೆ ದಾನ ನೀಡಿರುವ ಹಲವಾರು ತಮಿಳು ಶಾಸನಗಳನ್ನು ಕಾಣಬಹುದು. ಧರ್ಮೇಶ್ವರ ದೇವಾಲಯದ ಪೂರ್ವದ ಮುಂಭಾಗದಲ್ಲಿನ ಶಾಸನದಲ್ಲಿ ಶ್ರೀ ರಾಜಾಧಿರಾಜ ದೇವರರ ಆಳ್ವಿಕೆಯ ವರ್ಷದಲ್ಲಿ ವೀರ ಪಾಂಡಿಯನ್ ತಲೆ ತೆಗೆದಿರುವ ಕೇರಳನ್‌ನ ಸಲ್ಯೈ, ಇರಂಗಿ ಮತ್ತು ಇರತ್ತಪಡಿ....... ವಿಕ್ರಮ ಚೋಳ ಮಂಡಲದ ಕುಕ್ಕನೂರು ಗಾವುಂಡನಾದ ರಾಜಾಧಿರಾಜ ವೆಲನು ಕೆಲವು ಉದ್ದೇಶಕ್ಕಾಗಿ ಎಲ್ಲಾ ರೀತಿಯ ಆದಾಯವನ್ನು ಕ್ರಿ.ಶ.೧೦೫೦ರಲ್ಲಿ ದೇವರಿಗೆ ಕೊಡಿಗೆಯಾಗಿ[೪೧] ನೀಡಿದನು. ಈ ಶಾಸನದ ಇನ್ನೊಂದು ಬದಿಯಲ್ಲಿ ಕುಲೊತುಂಗ ಚೋಳ ದೇವರ ೪೩ ನೇ ಆಳ್ವಿಕೆ ಅವಧಿಯಲ್ಲಿ ರಾಜ ರಾಜನ್ ಪಾಂಡಿನಾಡುನ ಅರಿಕೇಸರಿವಳ ನಾಡಿನ ಸೆಯವರ ನಲ್ಲೂರ ಒಡೆಯನಾದ ರಾಜರಾಜನ್ ಕುಲೊತ್ತುಂಗ ಚೋಳ ಅದಿಮುರ್ಕ ಚೆಂಗಿರೈನು ವೆಲಪಲಹಳ್ಳಿಯ ಚತುಸ್ಸೀಮೆಯೊಳಗಣ ಗದ್ದೆ ಭೂಮಿಯನ್ನು ವಿಕ್ಕಿರಮ ಚೋಳ ಮಂಡಲದ ಕುಕ್ಕನೂರುನಾಡಿನ ಪೆರಿಯ ಮತ್ತಕೂರ ಐವರಕಂಡಿಶ್ವರ ಒಡೆಯ ಮಹಾದೇವರಿಗೆ ಪೂಜೆ ಪುನಸ್ಕಾರ ಇತ್ಯಾದಿಗಳು ಸೂರ್ಯ ಚಂದ್ರ ಇರೊವರೆಗೆ ನಡೆಲಿ ಎಂದು

[೪೧] ಎ.ಕ-೯, ನೆ.ತಾ.೩೮ ಸಿ, ಕ್ರಿ.ಶ.೧೦೫೦, ತಮಿಳು, ಅಯಿಗಂಡಪುರ.

ದೇವಧನವನ್ನು[೪೨] ಕೊಟ್ಟರು. ಈ ಶಾಸನದಲ್ಲಿ ಐಗಂಡಪುರದ ಹೆಸರನ್ನ ಉಲ್ಲೇಖಿಸಲಾಗಿದೆ. ದೇವಾಲಯ ಮುಂದಿರುವ ಶಾಸನದಲ್ಲಿ ಪೊಯ್ಸಳ ಶ್ರೀ ವೀರ ರಾಮನಾಥ ದೇವನು ಇಲ್ಯೈಪಕ್ಕನಾಡ ತಿಗೈಕೊಟ್ಟೈ ಪಯರುಗಟಂ ನಡುವಿನ ಒಡೆಯ ಐಯ್ವರ್ಕಂಡನಯ್ಯನರ್ ದೇವರಿಗೆ ದೇವಧನವಾಗಿ ಕೆಲವು ಭೂ ಭಾಗಗಳನ್ನು ಕೊಟ್ಟರು[೪೩].

ಧರ್ಮೇಶ್ವರ ದೇವಾಲಯದ ತಳಪಾದಿ ಕಲ್ಲಿನ ಮೇಲೆ ಶ್ರೀ ಹೊಯ್ಸಳ ವೀರ ವಲ್ಲಾಳ ದೇವರಸರು ಅಕ್ಕಸಾಲಿಗರ, ಎತ್ತು, ಒಳ್ಳೆಯ ಹಸುಗಳ ತೆರಿಗೆಗಳನ್ನು ದೇವಸ್ಥಾನಕ್ಕೆ ದೇವಧನವಾಗಿ ಕೊಟ್ಟರು. ಮುಖ್ಯ ಮಾತಾಸರ ಕೆಲಸಕ್ಕೆ ಸಾಕಷ್ಟು ಅವಕಾಶ ನೀಡಿ, ದೇವಸ್ಥಾನದ ಜೀರ್ಣೋದಾರ, ದೇವರಿಗೆ ಇಷ್ಟವಾಗುವ ಒಡವೆಗಳು, ಸಂತೋಷದಿಂದ ಮಹಾದೇವರ ಸೇವೆಗಳು ನಡೆಯ ಬೇಕೆಂದ್ದರು. ಈ ದಾನವು ನಾಡಿನ ನಿವಾಸಿಗಳು ಮತ್ತು ಮಹೇಶ್ವರ ದೇವರ ರಕ್ಷೆಯಲ್ಲಿರುತ್ತದೆ[೪೪].

## ತೋಟಗೆರೆಯ ಅರ್ಜುನರಾಯ ದೇವಾಲಯ

ನೆಲಮಂಗಲದಿಂದ ಸುಮಾರು ೧೧ ಕಿ.ಮೀ ದೂರದಲ್ಲಿನ ತೋಟಗೆರೆಯಲ್ಲಿ ಅರ್ಜುನ ದೇವರಾಯನ ದೇವಾಲಯವನ್ನು **(ಚಿತ್ರ ಸಂಖ್ಯೆ-೫೯)** ಕಾಣಬಹುದು. ಪೂರ್ವಾಭಿಮುಖವಾಗಿರುವ ಗರ್ಭಗೃಹ, ಅಂತರಾಳ ಇರುವ ಗುಡಿಯನ್ನ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾಗಿತ್ತು. ಯಾವುದೇ ಅಲಂಕಾರವಿಲ್ಲದ ತೆರೆದ ಅಂತರಾಳದ ಬಲಭಾಗದಲ್ಲಿ ವಿಷ್ಣು, ಸೂರ್ಯ, ಗಣೇಶ, ಚಂಡಿಕೇಶ್ವರನ ವಿಗ್ರಹಗಳಿದ್ದ ಈ ದೇವಾಲಯವನ್ನು ೨೦೧೬ರಲ್ಲಿ ಇಟ್ಟಿಗೆ ಹಾಗು ಸಿಮೆಂಟಿನಿಂದ ಹೊಸದಾಗಿ ನಿರ್ಮಾಣ ಮಾಡಲಾಗಿದೆ. ದೇವಾಲಯು ಕೇವಲ ಕಲ್ಲು ಚಪ್ಪಡಿಗಳಿಂದ ನಿರ್ಮಿತವಾಗಿತ್ತೆಂದು ದೇವಕೊಂಡರೆಡ್ಡಿಯವರು ಸಹ ಹೇಳಿದ್ದಾರೆ.

ಪ್ರಾಚೀನ ದೇವಾಲಯದ ಕಲ್ಲುಗಳನ್ನು ಗರ್ಭಗುಡಿಯ ತಳಪಾಯಕ್ಕೆ ಬಳಸಿಕೊಳ್ಳಲಾಗಿದೆಯಂತೆ. ಉಳಿದ ಪ್ರಾಚೀನ ಅವಶೇಷಗಳು ದೇವಾಲಯದ ಬಳಿಯೇ ಬಿದ್ದಿವೆ. ಅವುಗಳಲ್ಲಿ ೫ ಅಡಿ ಅಗಲ, ೧.೪ ಎತ್ತರವಾದ ಸಪ್ತಮಾತೃಕೆಯರ ಪಟ್ಟಿಕೆಯನ್ನು, ೬.೬ ಎತ್ತರದ ೪ ಅಡಿ ಅಗಲವಾದ ಶಾಸನ ರಹಿತ ವೀರಗಲ್ಲು ಕಾಣಬಹುದು. ಕಮಲದ ರಚನೆಯಿರುವ ಒಂದು ಚಪ್ಪಡಿ ಇದ್ದು ಬಹುಶಃ ಇದು ನವರಂಗದ ಮಧ್ಯದಲ್ಲಿನ ಮೇಲ್ಛಾವಣಿಯ ಚಪ್ಪಡಿಯಾಗಿರಬಹುದು ಸಾಮಾನ್ಯವಾಗಿ ಗಂಗರ ಪ್ರಾಚೀನ ದೇವಾಲಯಗಳ ನವರಂಗದ ಮಧ್ಯದಲ್ಲಿನ ಮೇಲ್ಛಾವಣಿಯಲ್ಲಿ ಈ ರೀತಿಯ ಕಮಲದ ರಚನೆಯನ್ನು

---

[೪೨] ಎ.ಕ-೯, ನೆ.ತಾ.೩೮ ಎ, ಕ್ರಿ.ಶ.೧೧೧೩, ತಮಿಳು, ಅಯಿಗಂಡಪುರ.
[೪೩] ಎ.ಕ-೯, ನೆ.ತಾ.೩೮ ಬಿ, ಕ್ರಿ.ಶ.೧೨೯೨, ತಮಿಳು, ಅಯಿಗಂಡಪುರ.
[೪೪] ಎ.ಕ-೯, ನೆ.ತಾ.೩೮, ಕ್ರಿ.ಶ.೧೩೦೧, ತಮಿಳು, ಅಯಿಗಂಡಪುರ.

ಕಾಣಬಹುದೆಂದು ಒಂದು ನಂದಿಗಂಬವು ಸಹ ಇದ್ದು ಇದರ ಕಂಬದ ಭಾಗವನ್ನು ಭೂಮಿಯ ಮಟ್ಟಕ್ಕೆ ಹೂಳಿ ನಂದಿ ಮಾತ್ರವೇ ಮೇಲ್ಭಾಗದಲ್ಲಿ ಕಾಣುವಂತೆ ಮಾಡಲಾಗುತ್ತಿತ್ತು. ದೇವಾಲಯದ ಬಲಭಾಗದಲ್ಲಿ ಉತ್ತರಾಭಿಮುಖವಾಗಿರುವ ಕ್ರಿ.ಶ.೭೫೦ರಲ್ಲಿ ಗಂಗರಾಜ ಶ್ರೀಪುರುಷನ ಕಾಲದಲ್ಲಿ ಹೊರಡಿಸಲಾದ[೪೫] ಶಾಸನವನ್ನು ಕಾಣಬಹುದು. ಪ್ರಸ್ತುತ ಈ ದೇವಾಲಯವನ್ನು ನಿರ್ಮಾಣ ಮಾಡಲಾಗುತ್ತಿದ್ದರೂ ಮೂಲ ಲಿಂಗಕ್ಕೆ ಪೂಜೆಯನ್ನು ಸಲ್ಲಿಸಲಾಗುತ್ತಿದೆ. ನೆಲಮಟ್ಟದಿಂದ ಸುಮಾರು ಮೂರು ಅಡಿಯಷ್ಟು ಭೂಮಿಯ ಒಳಭಾಗದಲ್ಲಿರುವ ಪಾಣಿಪೀಠದ ಮೇಲೆ ಲಿಂಗವಿರುವುದನ್ನು ನೋಡಬಹುದು. ದೇವಾಲಯದ ಮುಂಭಾಗದಲ್ಲಿ ಕಲ್ಲಿನಿಂದ ನಿರ್ಮಿಸಿರುವ ಒಂದು ಬಾವಿಯು ಸಹ ಇದೆ. ಒಟ್ಟಾರೆಯಾಗಿ ದೇವಾಲಯವನ್ನು ನವೀಕರಿಸುತ್ತಿರುವುದು ಒಳ್ಳೆಯ ವಿಷಯವೇ ಆದರೂ ಪ್ರಾಚೀನ ದೇವಾಲಯದ ಲಕ್ಷಣವನ್ನು ಸ್ವಲ್ಪವೂ ಉಳಿಸಿಕೊಳ್ಳದೆ ಇರುವುದು ಬೇಸರದ ಸಂಗತಿ.

## ಕಿತ್ತನಲ್ಲಿಯ ಸೋಮೇಶ್ವರ ದೇವಾಲಯ

ಊರಿನ ಹೊರಗೆ ಕೆರೆಯ ಕೋಡಿ ಬಳಿಯಿರುವ ಸೋಮೇಶ್ವರ ಗುಡಿಯು **(ಚಿತ್ರ ಸಂಖ್ಯೆ-೬೦)** ಶಿಥಿಲ ವ್ಯವಸ್ಥೆಯಲ್ಲಿದೆ. ಕಲ್ಲುಚಪ್ಪಡಿಯಿಂದ ೮ ಅಡಿ ಅಗಲ, ೮ ಅಡಿ ಉದ್ದ, ೪ ಅಡಿ ಎತ್ತರದ ಚೌಕಾಕಾರವಾಗಿ ನಿರ್ಮಿಸಿದ ಗರ್ಭಗುಡಿ ಮಾತ್ರಯಿದ್ದು, ಅಂತರಾಳ ಇದ್ದಿದ್ದಕ್ಕೆ ಅವಶೇಷಗಳು ಕಂಡು ಬರುತ್ತದೆ. ಗರ್ಭಗುಡಿಯ ನಾಲ್ಕು ಮೂಲೆಗಳಲ್ಲಿ ಕಂಬಗಳ ಮದ್ಯದಲ್ಲಿ ಚಪ್ಪಡಿ ಕಲ್ಲುಗಳನ್ನು ಸೇರಿಸಲಾಗಿದೆ. ಗರ್ಭಗುಡಿಯ ದ್ವಾರವು ೨ ಅಡಿಗಳ ಅಗಲ ಮತ್ತು ೧.೧/೨ ಅಡಿ ಅಗಲದ ದ್ವಾರವಿದ್ದು, ಒಳಗೆ ಪ್ರವೇಶಿಸಲು ಕುಂತು ತೆವಳಬೇಕು. ಏಕ ದಳ ಶಿಖರ ನಿರ್ಮಿಸಿರುವುದಕ್ಕೆ ೩ ಹಂತದ ಕಲ್ಲು ಚಪ್ಪಡಿಗಳು ಮಾತ್ರ ಇದೆ. ಬಹುಶಃ ಶಿಖರದ ಮೇಲ್ಭಾಗ ಬಿದ್ದು ಹೋಗಿರ ಬೇಕು. ಗುಡಿಯ ಎದುರಿಗೆ ೧೦ ಅಡಿ ಎತ್ತರವಾದ ದೀಪ ಕಂಬವಿದೆ. ಈ ಗುಡಿಯಲ್ಲಿ ಮತ್ತು ದೀಪಕಂಬದಲ್ಲಿ ಯಾವುದೇ ರೀತಿಯ ಅಲಂಕಾರಣಗಳು ಇಲ್ಲ, ಗರ್ಭಗುಡಿಯಲ್ಲಿ ಯಾವುದೇ ವಿಗ್ರಹವಿಲ್ಲ. ಈ ಗುಡಿಯನ್ನು ನೋಡಿದ್ದರೆ ಬಿಲ್ಲನಕೋಟೆಯ ಲಿಂಗಪ್ಪನ ಗುಡಿಯ ಹೋಲಿಕೆಯನ್ನು ಹೊಲುತ್ತದೆ. ನಿರ್ವಾಣೆಯಿಲ್ಲದೆ ಗಿಡಗಳು ಬೆಳೆದಿದೆ. ಗಂಗರ ಕಾಲದಲ್ಲಿ ನಿರ್ಮಾಣವಾದ ಗುಡಿಗೆ ಚೋಳರ ಕಾಲದಲ್ಲಿ ಜೀರ್ಣ್ಣೋದ್ಧಾರವಾಗಿರಬೇಕು. ಆ ಸಂದರ್ಭದಲ್ಲಿ ಅಂತರಾಳವನ್ನು ನಿರ್ಮಿಸಿರಬೇಕು. ಅದಕ್ಕೆ ಈ ಗುಡಿಯನ್ನು ಚೋಳರು ನಿರ್ಮಿಸಿದ್ದರು ಎಂಬ ಪ್ರತೀತಿ ಇದೆ. ಇಲ್ಲಿನ ಲಿಂಗವನ್ನು ಕದ್ದು ಮಾಗಡಿಯಲ್ಲಿ ಸೋಮೇಶ್ವರ ದೇವಾಲಯ ನಿರ್ಮಿಸಿದ್ದಾರಂತೆ ಎಂದು ಸ್ಥಳೀಯರು ಹೇಳುತ್ತಿದ್ದಾರೆ. ಆದರೆ ಕ್ರಿ.ಶ.೧೭೧೨ ರಲ್ಲಿ ಮಾಗಡಿಯಲ್ಲಿ

[೪೫] ಎ.ಕ-೯, ನೆ.ತಾ.೩೩, ಕ್ರಿ.ಶ.೭೫೦, ತೋಟಗೆರೆ.

ಸೋಮೇಶ್ವರ ಲಿಂಗವನ್ನು ಕೆಂಪ ವೀರಪ್ಪನು ಪ್ರತಿಷ್ಠಾಪಿಸಿದನು[೪೬] ಎಂದು ಶಾಸನೋಕ್ತ ಉಲ್ಲೇಖವಿದೆ. ಇದರಲ್ಲಿ ಸತ್ಯಾಂಶ ಯಾವುದು ಎಂಬುದೇ ಪ್ರಶ್ನೆಯಾಗಿ ಕಾಡುತ್ತಿದೆ.

## ಹುಲುಕಡಿ ಬೆಟ್ಟದ ವೀರಭದ್ರ ದೇವಾಲಯ

ದೊಡ್ಡಬೆಳವಂಗಲ ಹೋಬಳಿಯ ಹುಲುಕಡಿ ಬೆಟ್ಟದ ಗುಹಾಲಯದಲ್ಲಿ **(ಚಿತ್ರ ಸಂಖ್ಯೆ-೬೧)** ಉತ್ತರಕ್ಕೆ ಮುಖ ಮಾಡಿ ವೀರಭದ್ರನ ಮೂರ್ತಿ ಇದ್ದು, ಬಹುಶಃ ಹೊಯ್ಸಳ ಕಾಲದ ಪ್ರಾರಂಭದಲ್ಲಿ ರಚನೆಯಾಗಿರಬೇಕು. ಸುಮಾರು ನಾಲ್ಕು ಅಡಿ ಎತ್ತರದ ಪಾಣಿಪೀಠದ ಮೇಲೆ ನಿಲ್ಲಿಸಲಾಗಿದೆ. ಗರ್ಭಗುಡಿ, ನವರಂಗವು ದೊಡ್ಡ ಬಂಡೆಯೊಂದರ ಕೆಳಗಿದ್ದು, ನವರಂಗಕ್ಕೆ ಪ್ರವೇಶಿಸ ಬೇಕಾದರೆ ತೆವಳಕೊಂಡು ಹೋಗಬೇಕು. ಮೂರು ಅಡಿಗಳಷ್ಟು ಎತ್ತರವಾಗಿದ್ದು ಒಳಗೆ ಸರಿದಂತೆ ೮–೯ ಅಡಿಗಳಷ್ಟು ಎತ್ತರವಾಗಿದೆ. ಹೆಗ್ಗುಂದದ ಮಲ್ಲಿಕಾರ್ಜುನ ಗುಡಿಯನ್ನು ನೆನಪಿಸುತ್ತದೆ.

ಪ್ರವೇಶ ದ್ವಾರ ಪ್ರಾಚೀನ ಬಾಗಿಲುವಾಡದಂತೆ ಮರದಲ್ಲಿ ನಿರ್ಮಿಸಲಾಗಿದೆ. ಮೇಲಿನ ದ್ವಾರಬಂಧದ ಅಡ್ಡತೊಲೆಯ ಲಲಾಟ ಬಿಂಬದಲ್ಲಿ ಗಿರಿಜಾ ಕಲ್ಯಾಣದ ಚಿತ್ರವಿದೆ. ಶಿವ ಪಾರ್ವತಿಯರು ಅಕ್ಕ ಪಕ್ಕಗಳಲ್ಲಿ ನಿಂತಿದ್ದು, ಶಿವನನ್ನು ಸ್ವಲ್ಪ ದೊಡ್ಡದಾಗಿಯೂ ಪಾರ್ವತಿಯನ್ನು ಸ್ವಲ್ಪ ಚಿಕ್ಕದಾಗಿಯು, ಶಿವನು ಚತುರ್ಭುಜನಾಗಿದ್ದು, ಮೇಲಿನ ಎಡಗೈಯಲ್ಲಿ ಢಮರುಗ, ಕೆಳಗಿನ ಎಡಗೈಯಲ್ಲಿ ಮುಗ ಸಂಕೇತ, ಬಲಗೈಯಲ್ಲಿ ಪಾರ್ವತಿಯನ್ನು ಹಿಡಿದಿದ್ದು, ಬಲಗೈ ವರದ ಮುದ್ರೆಯಲ್ಲಿದೆ. ಇಬ್ಬರ ಮಧ್ಯೆ ನಂದಿ ಕುಳಿತಿರುವಂತೆ ಶಿವನ ಎಡಕ್ಕೆ ಇರುವ ಬ್ರಹ್ಮನಿಗೆ ಮೂರು ಮುಖಗಳನ್ನು ಚತುರ್ಭುಜನಾಗಿ, ಎರಡು ಕೈಗಳು ಅಭಯ, ವರದ ಮುದ್ರೆಯಲ್ಲಿದ್ದರೇ, ಹಿಂದಿನ ಬಲಗೈ ತನ್ನ ಮುಂದಿರುವ ಅಗ್ನಿ ಕುಂಡಕ್ಕೆ ಶುರ್ಕ್ರದಿಂದ ತುಪ್ಪವನ್ನು ಸುರಿಯುತ್ತಿದ್ದಾನೆ. ಅಗ್ನಿ ಕುಂಡದ ಜ್ವಾಲೆ ಧಗೆಸುತ್ತಿದೆ. ಬ್ರಹ್ಮನ ಪಕ್ಕದಲ್ಲಿ ಅಲಂಕಾರರಾದ ಸ್ತ್ರೀಯೊಬ್ಬಳು ಇದ್ದಾರೆ. (ಬಹುಶಃ ಬ್ರಹ್ಮನು ಮದುವೆ ಕಾರ್ಯದ ಪೌರೀಹಿತ್ಯ ನೆರವೇರಿಸುತ್ತಿರಬೇಕು) ಪಾರ್ವತಿಯನ್ನು ಶಿವನಿಗೆ ಕೊಟ್ಟು ಧಾರೆ ಎರೆಯಲು ಪಾರ್ವತಿಯ ಬೆನ್ನಿಗೆ ಹಿಮವತನು ನಿಂತಿದ್ದು, (ವೇಷ ಭೂಷಣ, ಗಡ್ಡಗಳಂದ ಋಷಿಮುನಿ) ಹಿಮವತ್‌ನ ಹಿಂದೆ ಇರೋದು ಅವನ ಪತ್ನಿಯಾಗಿರಬೇಕು. ಹೀಗೆ ಗಿರಿಜಾ ಕಲ್ಯಾಣೋತ್ಸವ ನೆರವೇರುತ್ತಿರುವ ದೃಶ್ಯ ಅದ್ಭುತವಾಗಿದ್ದು, ಸುತ್ತಲೂ ನಾಲ್ಕು ಮೂಲೆಗಳ ವಿನ್ಯಾಸವನ್ನು ಹೂವಿನಂತೆ ಪಟ್ಟಿಯಿದೆ. ದ್ವಾರದ ನಿಲುವಿನಲ್ಲಿ ನಾನಾ ಬಗೆಯ ಹೂಬಳ್ಳಿಗಳವೆ.

ಈ ಬಾಗಿಲುವಾಡದ ಇನ್ನೊಂದು ಹಂತದ ದ್ವಾರ ಬಂಧದಲ್ಲಿ ಶಿವನು ಪತ್ನಿ ಸಮೇತನಾಗಿ ಆಸನದ ಮೇಲೆ ಕುಳಿತಿದ್ದು, ಪಾರ್ವತಿಯನ್ನು ಎಡ ತೊಡೆಯ ಮೇಲೆ ಕೂರಿಸಿಕೊಂಡಿದ್ದಾನೆ. ಶಿವನ ನಾಲ್ಕು

[೪೬] ಎ.ಕ-೯, ಮಾ.ತಾ.೪೨, ಕ್ರಿ.ಶ.೧೭೧೨, ಈಶ್ವರ ದೇವಾಲಯದ ಪೂರ್ವಕಡೆ,ಮಾಯಿನಾಯಕನಹಳ್ಳಿ,

ಕೈಗಳಲ್ಲಿ ಆಯುಧಗಳಿದೆ. ಮುಂದಿನ ಬಲಗೈ ಅಭಯ ಮುದ್ರೆ, ಎಡಗೈಯಲ್ಲಿ ಪಾರ್ವತಿಯನ್ನು ಬಳಸಿ ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ಇಬ್ಬರು ಸ್ತ್ರೀಯರು ನಿಂತಿದ್ದಾರೆ. ಬಲಗಡೆಯವಳು ಶಿವನಿಗೆ ಚಾಮರ ಬೀಸುತ್ತಿದ್ದರೆ, ಎಡಗಡೆಯವಳು ಧೂಪಾರತಿ ಬೆಳಗುತ್ತಿದ್ದಾಳೆ. ಹೂಬಳ್ಳಿಗಳ ಅಲಂಕಾರ ಸುತ್ತಲೂ ಇದೆ.

ತಲಭಾಗದಲ್ಲಿ ಚಿಕ್ಕದಾಗಿ ಮಗುವನ್ನು ತನ್ನ ಸೊಂಟದ ಮೇಲೆ ಕುರಿಸಿಕೊಂಡಿರುವ ಸ್ತ್ರೀಯ ಶಿಲ್ಪವು ಪಾರ್ವತಿಯದ್ದು ಅಥವಾ ಮಕ್ಕಳಿಲ್ಲದ ದಂಪತಿಗಳ ಹರಕೆಯಿಂದ ಮಗುವಾಗಿರುವ ಭಕ್ತರ ಶಿಲ್ಪ ಇರಬೇಕು. ಮರದ ಎಲ್ಲಾ ಶಿಲ್ಪಗಳಲ್ಲೂ ಪುರುಷರಿಗೆ ಕಿರೀಟ, ಕಿವಿಯೋಲೆ, ಉಂಗುರ, ಕಂಠೀಹಾರ, ಭುಜಕೀರ್ತಿ, ಸ್ತ್ರೀಯರಿಗೆ ಕಿರೀಟದ ಜೊತೆ ಕಿವಿಯೋಲೆ, ಕೈಬಳೆಗಳು, ಉಂಗುರ, ಕಂಠೀಹಾರ, ಸೊಂಟಪಟ್ಟಿ, ಮೂಗುನತ್ತು, ಅಧೋ ವಸ್ತ್ರವಿದೆ. ಮೇಲುಡುಗೆ ಇಲ್ಲದೆ ತೆರೆದೆದೆ ಇದೆ.

ನವರಂಗದಲ್ಲಿ ಸುರಂಗ ಮಾರ್ಗದಂತೆ ದಾರಿಯಿದ್ದು, ಪಾಳೆಯಗಾರರ ರಹಸ್ಯ ಮಾರ್ಗ ಎಂದು ಸ್ಥಳೀಯರು ಹೇಳುತ್ತಾರೆ. ಇನ್ನು ಕೆಲವರು ದೇವನಹಳ್ಳಿ ಕೋಟೆಗೆ ಸುರಂಗ ಮಾರ್ಗ ಕಲ್ಪಿಸಿದೆ. ಶತ್ರುಗಳ ಆಕ್ರಮಣದಿಂದ ತಪ್ಪಿಸಿಕೊಂಡು ಹೋಗಲು ಗುಪ್ತಮಾರ್ಗವನ್ನು ನಿರ್ಮಿಸಿರಬೇಕು. ಕೆಲವು ವರುಷಗಳ ಹಿಂದೆ ಕೋಳಿಯೊಂದನ್ನು ವೀರಭದ್ರ ಸ್ವಾಮಿ ದೇವಾಲಯದ ಸುರಂಗದೊಳಗೆ ಬಿಟ್ಟಾಗ ಮುಕ್ಕಣ್ಣೇಶ್ವರ ದೇವಾಲಯದ ಹತ್ತಿರವಿರುವ ಸುರಂಗದಿಂದ ಹೊರ ಬಂದಿತ್ತೆಂದು ಸ್ಥಳೀಯರು ಹೇಳುತ್ತಾರೆ.

ನವರಂಗದಲ್ಲಿನ ನಾಲ್ಕು ಕಂಬಗಳಲ್ಲಿ ಎರಡು ನಂದಿ ಶಿಲ್ಪಗಳಿವೆ. ಪ್ರದೇಶದ ಇಕ್ಕೆಲಗಳಲ್ಲಿ ಚಿಕ್ಕದಾದ ದ್ವಾರ ಪಾಲಕರ ಉಬ್ಬು ಶಿಲ್ಪವಿದೆ. ಹೊಸ್ತಿಲ ಬಳಿ ಭಕ್ತನೊಬ್ಬನ ಉಬ್ಬು ಶಿಲ್ಪವಿದೆ. ಇದು ಪಾಳೇಯಗಾರನೊಬ್ಬನ ಶಿಲ್ಪವಿರಬೇಕು ಎಂಬುದು ಸ್ಥಳೀಯರ ವಾದ.

ವೀರಗಂಗ ಹೊಯ್ಸಳ ದೇವರ ೧೨ ನೇ ಸಂವತ್ಸರದಲ್ಲಿ ವಿಕ್ಕಿರಮ ಚೋಳಮಂಡಲದ ಮಣ್ಣೆನಾಡ ಗಾಮುಂಡನಾದ ವಿರುಂತರಾಯ ಭಯಂಕರನು ಪುರಕೋಡಿ ಬೆಟ್ಟದ ಮೇಲೆ ಮುತಿಸ್ವರ ಒಡೆಯ ಮಹಾದೇವರಿಗೆ ಶಿವ ಬ್ರಾಹ್ಮಣನಾದ ಪನ್ಮಭಟ್ಟನಿಗೆ ಪೂಜೆಯನ್ನು ಮಾಡಿಕೊಂಡು ಇರು ಎಂದು[೪೭] ದಾನ ನೀಡಿರುವುದನ್ನು ಕಾಣಬಹುದು.

## ಮಾಡೇಶ್ವರದ ಮುಕ್ಕಣ್ಣೇಶ್ವರ ದೇವಾಲಯ

ದೊಡ್ಡಬೆಳವಂಗಲ ಹೋಬಳಿಯ ಹುಲುಕಡಿ ಬೆಟ್ಟದ ಪೂರ್ವ ತಪ್ಪಲಿನಲ್ಲಿ ಮಾಡೇಶ್ವರ ಗ್ರಾಮದ ದೊಡ್ಡದಾದ ನೈಸರ್ಗಿಕವಾದ ಹುಟ್ಟು ಬಂಡೆಯೊಂದರ ತಳಭಾಗದ ಗುಹೆಯಲ್ಲಿನ ಮುಕ್ಕಣ್ಣೇಶ್ವರ

[೪೭] ಎ.ಕ-೯, ದೊ.ತಾ.೧೧, ಕ್ರಿ.ಶ.೧೧೧೫, ತಮಿಳು, ಹುಲ್ಲುಕಡಿ.

ದೇವಾಲಯವು (ಚಿತ್ರ ಸಂಖ್ಯೆ-೬೨) ಗರ್ಭಗುಡಿ, ನವರಂಗದಿಂದ ಕೂಡಿದೆ, ಗಂಗರ ಕಾಲದ ಚೌಕಾಕಾರದ ಗರ್ಭಗೃಹದಲ್ಲಿ ಚೌಕಾಕಾರದ ರೂಪದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ದ್ವಾರ ಬಂಧದಲ್ಲಿನ ಗಜಲಕ್ಷ್ಮಿಯು ಪದ್ಮಾಸನದಲ್ಲಿ ಕುಳಿತಿದ್ದು ಇಕ್ಕೆಡೆಗಳಲ್ಲಿನ ಆನೆಗಳು ಅಭಿಷೇಕ ಮಾಡುತ್ತಿದೆ. ದ್ವಾರ ಪಿಂಡಿಯಲ್ಲಿ ಎರಡು ಬದಿಯಲ್ಲಿ ವಿವಿಧ ಭಂಗಿಯ ಆನೆಗಳು ವಿರುದ್ಧವಾಗಿ ಇರುವುದನ್ನು, ಇದರ ಇಕ್ಕೆಲಗಳ ತುದಿಯಲ್ಲಿ ಕಮಲದ ಮೊಗ್ಗಿನ ರೇಖಾ ಚಿತ್ರಗಳಿವೆ. ದ್ವಾರದ ನಿಲುವಿನ ಕೆಳಭಾಗದಲ್ಲಿ ಕೈಯಲ್ಲಿ ಕಮಲದ ಮೊಗ್ಗು, ಶಂಕ, ಪದ್ಮ, ನಿಧಿಗಳನ್ನು ಇವುಗಳ ಪಕ್ಕದಲ್ಲಿ ದೀಪದ ಕಂಬಗಳನ್ನು ಕಾಣಬಹುದು. ದ್ವಾರ ಬಂದದ ಉಭಯ ಪಾರ್ಶ್ವಗಳಲ್ಲಿ ಮೂರು ಲಂಬ ಪಟ್ಟಿಕೆಗಳಿವೆ, ಒಂದು ಕಡೆ ನಾಲ್ಕು ಕಾಲಿನಲ್ಲಿ ಕುಂಡಿಯೂರಿ ಕುಳಿತ ಸಿಂಹ, ಇನ್ನೊಂದೆಡೆ ವಿಶ್ರಾಂತಿಯಲ್ಲಿರುವಂತೆ ಕುಳಿತಿರುವ ಸಿಂಹ, ಉತ್ತರ ಭಾಗದ ವೃತ್ತಾಕಾರದ ಬಳ್ಳಿಗಳ ಒಳಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಸಿಂಹ, ಬಸವ, ಆನೆ, ಯಕ್ಷ, ಕಿನ್ನರ, ಹಂಸ, ಆಮೆಯ ಶಿಲ್ಪಗಳಿವೆ.

ದಕ್ಷಿಣ ಭಾಗದ ಬಳ್ಳಿಗಳಲ್ಲಿ ಸಿಂಹ, ಬಸವ, ಯಕ್ಷರು, ಮೃದಂಗ ತಾಳ ಹಾಕುತ್ತಿರುವ, ನೃತ್ಯ ಮಾಡುತ್ತಿರುವ, ಹಾಡುತ್ತಿರುವ, ಇವುಗಳನ್ನೆಲ್ಲಾ ಹೊತ್ತಂತೆ ಬಳ್ಳಿಯ ಕೆಳಭಾಗದಲ್ಲಿ ಮಲಗಿದ ಮಾನವಾಕೃತಿಯೊಂದರ ಉಬ್ಬು ಶಿಲ್ಪವಿದೆ.

ತಮಟೆ, ಡೊಲು, ಕೊಳಲು, ಮೃದಂಗ, ವೀಣೆ, ಕಿನ್ನರಿ ಮುಂತಾದವನ್ನು ನುಡಿಸುತ್ತಿರುವ ವಾದ್ಯಗಾರರು, ನೃತ್ಯ ಗಾರ್ತಿಯರು, ಗಾಯಕನನ್ನು ಹಾಗೂ ಬಲಿಯು ದಾನ ನೀಡುತ್ತಿರುವುದು, ವಾಮನನು ದಾನ ಪಡೆಯುತ್ತಿರುವುದು, ನಂತರ ವಾಮನು ತ್ರಿವಿಕ್ರಮನಾಗಿ ಬಲಿಯನ್ನು ತುಳಿಯುತ್ತಿರುವುದು. ಗಾತ್ರದಲ್ಲಿ ಚಿಕ್ಕವಾಗಿದ್ದು, ಅಲಂಕಾರ ರಹಿತವಾಗಿ ವಿನೀತ ಭಾವದಿಂದ ತಲೆತಗ್ಗಿಸಿ ಕುಳಿತಿರುತ್ತದೆ. ಕೊರಳಿನಲ್ಲಿ ಗಂಟೆಸರ ಮಾತ್ರವಿರುವ ನಂದಿ ವಿಗ್ರಹವಿದೆ.

ನವರಂಗದ ದ್ವಾರವು ೫ ಅಡಿ ಎತ್ತರ, ಎರಡೂವರೆ ಅಡಿ ಅಗಲವಿದೆ. ಗಜಲಕ್ಷ್ಮಿಯ ಉಬ್ಬು ಶಿಲ್ಪದಲ್ಲಿ ಲಕ್ಷ್ಮಿಯು ಪದ್ಮಾಸನದಲ್ಲಿ ಕುಳಿತು ಕಮಲದ ಮೊಗ್ಗುಗಳನ್ನು ಹಿಡಿದಿರುವಳ ಇಕ್ಕೆಲಗಳಲ್ಲಿ ಆನೆಗಳಿವೆ. ಅವುಗಳ ಹಿಂದೆ ಅಷ್ಟಮಂಗಲ ಚಿಹ್ನೆಗಳಲ್ಲಿ ಶಂಖ, ಚಾಮರವನ್ನು ಲಲಾಟ ಬಿಂಬದ ಅಂತ್ಯದಲ್ಲಿ ಸೂರ್ಯ, ಚಂದ್ರ, ಕಲಶವನ್ನು ಬಿಡಿಸಿದ್ದಾರೆ. ಗಂಗರ ಬಹುತೇಕ ದೇವಾಲಯಗಳಲ್ಲಿ ಸರಳವಾದ ಪಾದಬಂಧ ಅಧಿಷ್ಠಾನದಂತೆ ಮುಕ್ಕಣ್ಣೇಶ್ವರ ದೇವಾಲಯದಲ್ಲಿ ಅಧಿಷ್ಠಾನವು ಜಗತಿ ಮೇಲೆ ತ್ರಿಪಟ್ಟ ಕುಮುದಗಳ, ಪಟ್ಟಿಯನ್ನು ಪಡೆದಿದೆ. ಗಂಗರ ಕಾಲದಲ್ಲಿ ರಚನೆಯಾದ ದೇವಾಲಯವನ್ನು ವಿಜಯನಗರ ಕಾಲದಲ್ಲಿ ಕಂಬಗಳನ್ನು ಸೇರಿಸಿ ಜೀರ್ಣೋದ್ಧಾರ ಮಾಡಲಾಗಿರ ಬೇಕು.

**ದುರ್ಗಾದೇವಿ**

ಕಮಲದ ಉಬ್ಬು ಶಿಲ್ಪವಿರುವ ಒಂದು ಅಡಿ ಎತ್ತರ ಚೌಕಾಕಾರದ ಪೀಠದ ಮೇಲೆ ದುರ್ಗದ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಕುಳಿತ (ದುರ್ಗಾ ಶಿಲ್ಪಗಳೆಲ್ಲಾ ಕೋಣನ ತಲೆಯ ಮೇಲೆ ಸಮಭಂಗಿಯಲ್ಲಿ ನಿಂತ ಚತುರ್ಭುಜದಾರಿ ಶಿಲ್ಪಗಳೇ ಇರುತ್ತವೆ) ಭಂಗಿಯಲ್ಲಿ ಸಿಂಹವಾಹಿನಿಯಾಗಿದ್ದು, ಎಡಗಾಲನ್ನು ಮಡಚಿಕೊಂಡು ಸಿಂಹದ ಮೇಲೆ ಇರಿಸಿಕೊಂಡಿದ್ದರೆ ಬಲಗಾಲನ್ನು ಇಳಿ ಬಿಟ್ಟು ಕೋಣನ ತಲೆಯ ಮೇಲಿಟ್ಟಿದ್ದಾಳೆ. ಚತುರ್ಭುಜಗಳಲ್ಲಿ ಶಂಖ, ಚಕ್ರ, ಅಭಯ, ವರದ ಮುದ್ರೆಯಲ್ಲಿದೆ. ಮಂದಹಾಸವಾಗಿರುವ ದುರ್ಗೆಗೆ ರತ್ನ ಕಿರೀಠ, ನಾಗಮುರಿ, ಕೊರಳಸರ, ಸ್ತನಬಂಧ, ಮಕರಕುಂದಲ, ಕೈಕಡಗ, ಬೆರಳಲ್ಲಿ ಉಂಗುರ, ಕಾಲಲ್ಲಿ ಕಿಂಕಿಣಿ, ನಡುಬಂದ, ತೋಳ್ಬಂದಿ, ಕಂಠಬಂಧ, ಕಂಠೀಹಾರ ಮುಂತಾದ ಆಭರಣಗಳಿಂದ ಅಲಂಕೃತಳಾಗಿದ್ದಾಳೆ.

## ಗಂಡರಾಜಪುರದ ಕಲ್ಲೇಶ್ವರ ದೇವಾಲಯ

ದೊಡ್ಡಬಳ್ಳಾಪುರದಿಂದ ರಾಜಘಟ್ಟ ಮಾರ್ಗವಾಗಿ ೧೭ ಕಿ.ಮೀ ದೂರದಲ್ಲಿ ರಾಜಘಟ್ಟ ಸಮೀಪದಲ್ಲಿನ ಗಂಡರಾಜಪುರ ಗ್ರಾಮದ ವಾಯುವ್ಯ ದಿಕ್ಕಿನಲ್ಲಿನ ಗಂಗರಸರ ಕಾಲದ ನಿರ್ಮಾಣವಾದ (ಕಲ್ಲೇಶ್ವರ ದೇವಾಲಯ) ಉಮಾಮಹೇಶ್ವರ ದೇವಾಲಯವು ಬಹಳಷ್ಟು ಶಿಥಿಲಗೊಂಡಿತ್ತು. ಆಗ ಗ್ರಾಮಸ್ಥರು ಧರ್ಮಸ್ಥಳದ ಧರ್ಮಾಧಿಕಾರಗಳ ಸಹಾಯದೊಂದಿಗೆ ದೇವಾಲಯವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಸಿರುವ **(ಚಿತ್ರ ಸಂಖ್ಯೆ-೬೪)** ಈ ದೇವಾಲಯವನ್ನು ಪ್ರಾಚೀನ ಕಾಲದಲ್ಲಿ ಸೋಮೇಶ್ವರ ಅಥವಾ ಅರ್ಕೇಶ್ವರ ಎಂಬಿತ್ಯಾದಿ ಹೆಸರನ್ನು ಹೊಂದಿದ್ದು ನಂತರ ಉಮಾಮಹೇಶ್ವರವೆಂದು ಮಾರ್ಪಾಡಾಗಿರ ಬಹುದು.

ಅಧಿಸ್ಥಾನದ ಮೇಲೆ ಇರುವ ಹೊಯ್ಸಳ ಕಾಲದ ತಮಿಳು ದಾನ ಶಾಸನದಲ್ಲಿ ಮತ್ತು ದೇವಾಲಯದ ಆವರಣದಲ್ಲಿರುವ ಶಾಸನದಲ್ಲಿ ಗಂಗರಾಜಪುರವೆಂದು ಉಲ್ಲೇಖಿಸಲಾಗಿದೆ. ಗಂಗ ರಾಜರು ನಿರ್ಮಿಸಿದ ದೇವಾಲಯದಿಂದ ಈ ಊರಿಗೆ ಗಂಗರಾಜಪುರ ಎಂದು ಹೆಸರು ಬಂದಿರಬಹುದು. ಹೊಯ್ಸಳ ಕಾಲದಲ್ಲಿ ಹೊಯ್ಸಳಾರಸರ ಸಾಮಂತರಾಗಿ, ಅಧಿಕಾರಿಗಳಾಗಿ, ದಂಡ ನಾಯಕರಾಗಿ ಆಳ್ವಿಕೆ ನಡೆಸಿದ ಸಂಧರ್ಭದಲ್ಲಿ ಗಂಗಾರಸರು ತಮ್ಮ ಇರಿವೆಗಾಗಿ ತಮ್ಮ ಹೆಸರಲ್ಲೆ ದೇವಾಲಯವನ್ನು ನಿರ್ಮಿಸಿರಬೇಕು. ಈ ಶಾಸನೋಕ್ತ ಗಂಗರಾಜಪುರವು ಗಂಡರಾಜವುರಾಗಿ ಬದಲಾಗಿರಬೇಕು.

ನೆಲದಿಂದ ಸುಮಾರು ೩ ಅಡಿ ಎತ್ತರದ ದಿಬ್ಬದ ಮೇಲೆ ನಿರ್ಮಿಸಿರುವ ಕಲ್ಲೇಶ್ವರ ದೇವಾಲಯವು ಉತ್ತರಾಭಿಮುಖವಾಗಿದ್ದು, ಚೌಕಾಕಾರದ ಗರ್ಭಗೃಹ, ನವರಂಗ, ಮುಖಮಂಟಪಗಳನ್ನು ಹೊಂದಿರುವ

ದೇವಾಲಯಕ್ಕೆ ಪೂರ್ವ, ಉತ್ತರ, ದಕ್ಷಿಣ ಭಾಗಗಳಿಂದ ಹೊಸದಾಗಿ ಸೋಪಾನಗಳನ್ನು ನಿರ್ಮಿಸಲಾಗಿದೆ. ಪ್ರಾರಂಭದಲ್ಲಿ ದೇವಾಲಯ ತುಂಬಾ ಚಿಕ್ಕದಾಗಿದ್ದು ಜೀರ್ಣೋದ್ಧಾರದ ಸಮಯದಲ್ಲಿ ಇದರ ಎತ್ತರವನ್ನು ಹೆಚ್ಚಿಸಲಾಗಿದೆ. ಗಂಗವಾರದಲ್ಲಿನ ಸೋಮೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಅದರ ಎತ್ತರವನ್ನು ಸಹ ಹೆಚ್ಚಿಸಿರುವುದನ್ನು ಗಮನಿಸಬಹುದಾಗಿದೆ. ಗಂಗರ ದೇವಾಲಯಗಳು ಸಾಮಾನ್ಯವಾಗಿ ಎತ್ತರ ಕಡಿಮೆ ಹೊಂದಿರುತ್ತವೆ. ಗಂಡರಾಜಪುರದ ದೇವಾಲಯವನ್ನು ಎತ್ತರಗೊಳಿಸಲು ಅಧಿಷ್ಠಾನ ಹಾಗೂ ಭಿತ್ತಿಯ ಭಾಗದಲ್ಲಿ ಹೊಸ ಸೇರ್ಪಡೆ ಮಾಡಿರುವುದನ್ನು ಕಾಣಬಹುದು.

ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಶಿವಲಿಂಗವಿದ್ದರೂ ಇದನ್ನು ಉಮಾಮಹೇಶ್ವರ ಎಂದು ಇಲ್ಲಿನ ಜನರು ಪೂಜಿಸುವುದು ವಿಶೇಷ. ಗರ್ಭಗುಡಿಯ ದ್ವಾರಬಂಧವು ಸರಳವಾಗಿದ್ದು, ಅಲಂಕಾರ ರಹಿತವಾಗಿದೆ. ನಂತರ ತೆರೆದ ಅಂತರಾಳವನ್ನು ಕಾಣಬಹುದು. ಇಲ್ಲಿ ಯಾವುದೇ ಕಂಬವಾಗಲಿ, ದ್ವಾರಬಂಧವಾಗಲಿ, ಕಂಡು ಬರುವುದಿಲ್ಲ. ಪ್ರಸ್ತುತ ಇಲ್ಲಿ ಹೊಸದಾಗಿ ನಿರ್ಮಿಸಿರುವ ನಂದಿಯ ವಿಗ್ರಹವಿದೆ. ಇಲ್ಲಿನ ಪ್ರಾಚೀನ ನಂದಿಯ ವಿಗ್ರಹವನ್ನು ಉತ್ಸವಮೂರ್ತಿ ಇರುವ ಮನೆಯಲ್ಲಿ ಇರಿಸಲಾಗಿದೆ. ಇದು ಸುಮಾರು ಎರಡು ಅಡಿಯಷ್ಟು ಉದ್ದವಾಗಿದೆ. ಕೊರಳು ಹಾಗೂ ಬೆನ್ನ ಮೇಲೆ ಸೇರಿದಂತೆ ಹಾಗೂ ಕೊರಳಿಗೆ ಪ್ರತ್ಯೇಕವಾಗಿ ಗಂಟೆಯ ಮಾಲೆ ಇರುವುದನ್ನು ಕಾಣಬಹುದು. ಅಂತರಾಳದಲ್ಲಿ ಇತರೆ ಯಾವುದೇ ಶಿಲ್ಪಗಳಾಗಲಿ ಅಲಂಕರಣೆಗಳಾಗಲಿ ಕಂಡು ಬರುವುದಿಲ್ಲ. ಅಂತರಾಳದ ಬಲಭಾಗದ ಭಿತ್ತಿಯಲ್ಲಿ ಹೊಸದಾಗಿ ವಜ್ರಾಕೃತಿಯಲ್ಲಿ ಸಣ್ಣದಾಗಿ ಜಾಲಾಂಧ್ರವನ್ನು ಅಳವಡಿಸಲಾಗಿದೆ. ಇಲ್ಲಿನ ಮೇಲ್ಛಾವಣಿಯಲ್ಲಿ ವೃತ್ತಾಕಾರದ ಕಮಲದ ರಚನೆಯನ್ನು ಕಾಣಬಹುದು. ಈ ಕಲ್ಲುಗಳು ಮೊದಲು ನೆಲಹಾಸಿನಲ್ಲಿದ್ದವು ಎಂದು ಗ್ರಾಮಸ್ಥರು ಹೇಳುತ್ತಾರೆ.

ನವರಂಗದಲ್ಲಿ ನಾಲ್ಕು ರುದ್ರಕಾಂತ ಕಂಬಗಳನ್ನು ಕಾಣಬಹುದು. ಕಂಬದ ಎತ್ತರವನ್ನು ಹೆಚ್ಚಿಸಲು ಸುಮಾರು ಒಂದೂವರೆ ಅಡಿಯಷ್ಟು ಎತ್ತರದ ಚೌಕಾಕಾರದ ಪೀಠವನ್ನು ಕಂಬದ ಪಾದದಲ್ಲಿ ಅಳವಡಿಸಲಾಗಿದೆ. ಈ ಕಂಬಗಳಲ್ಲಿ ಬ್ರಹ್ಮ, ವಿಷ್ಣು, ರುದ್ರಕಾಂತ ಭಾಗಗಳನ್ನು ಕಾಣಬಹುದು. ರುದ್ರಕಾಂತ ಭಾಗದಲ್ಲಿ ಮಾಲೆಯ ಅಲಂಕರಣೆಯನ್ನು ನೋಡಬಹುದು. ಇದು ಎಲ್ಲಾ ಕಂಬಗಳಲ್ಲಿಯೂ ಸಾಮಾನ್ಯವಾಗಿ ಕಂಡು ಬರುತ್ತದೆ. ಬೋದಿಗೆಗಳು ತುಂಬಾ ಸರಳವಾಗಿವೆ. ಪ್ರಸ್ತುತ ನವರಂಗದಲ್ಲಿ ನಾಲ್ಕು ಕಂಬಗಳು ಮಾತ್ರವಿದೆ. ಮಧ್ಯದ ಮೇಲ್ಛಾವಣಿಯಲ್ಲಿ ವೃತ್ತಾಕಾರದ ಪದ್ಮದ ರಚನೆಯನ್ನು ಕಾಣಬಹುದು ನವರಂಗದ ದ್ವಾರಬಂಧವು ಹೊಸ ರಚನೆಯಾಗಿದೆ. ಮುಂಭಾಗದಲ್ಲಿ ಹೊಸದಾಗಿ ನಿರ್ಮಿಸಿರುವ ಎರಡು ಕಂಬಗಳ ಅಂಕಣವನ್ನು ಕಾಣಬಹುದು. ದೇವಾಲಯದ ಹೊರಗಡೆ ಎರಡು ಹಾಗೂ ದೇವಾಲಯದ

ಹಿಂಭಾಗದಲ್ಲಿ ಎರಡು ರುದ್ರಕಾಂತ ಕಂಭಗಳಿದ್ದು, ಇವುಗಳು ಈ ಮೊದಲು ಮುಖಮಂಟಪದ ಕಂಬಗಳಾಗಿರಬಹುದು. ಇವುಗಳನ್ನು ಮುಖಮಂಟಪದ ಕಂಬಗಳಾಗಿ ಪ್ರಸ್ತುತ ಉಳಿಸ ಬಹುದಾಗಿತ್ತು. ಆದರೆ ಇಂದು ಇವುಗಳು ದಿಕ್ಕಾಪಾಲಾಗಿ ಬಿದ್ದಿವೆ. ಇವುಗಳಲ್ಲಿ ಎರಡು ಕಂಬಗಳು ನವರಂಗದಲ್ಲಿರುವ ಕಂಬಗಳ ಅಲಂಕರಣೆಯನ್ನೇ ಹೊಂದಿವೆ.

ದೇವಾಲಯದ ಸುತ್ತಲೂ ಇರುವ ಅಧಿಷ್ಠಾನದಲ್ಲಿ ಕೆಲವೊಂದು ಕಡೆ ಕುಮುದ ಹಾಗೂ ಪ್ರತಿಯ ಭಾಗದಲ್ಲಿ ಹೊಸ ಕಲ್ಲನ್ನು ಬಳಸಲಾಗಿದೆ. ತ್ರಿಪಟ್ಟ ಕುಮುದದ ಬಹುತೇಕ ಭಾಗವು ತಮಿಳು ಶಾಸನಗಳಿಂದ ತುಂಬಿ ಹೋಗಿದೆ. ನವರಂಗ ಭಾಗದ ಭಿತ್ತಿಯು ಸರಳವಾಗಿದ್ದು ಭಿತ್ತಿಯ ಭಾಗವನ್ನು ಸಹ ಹೊಸ ಕಲ್ಲನ್ನು ಬಳಸಿ ಸುಮಾರು ಒಂದು ಅಡಿಯಷ್ಟು ಎತ್ತರವನ್ನು ಹೆಚ್ಚಿಸಲಾಗಿದೆ. ಅಂತರಾಳ ಹಾಗೂ ದೇವಾಲಯದ ಎಡಭಾಗದ ಭಿತ್ತಿಯ ರಚನೆಯಲ್ಲಿ ಬಹುತೇಕ ಹೊಸ ಕಲ್ಲುಗಳನ್ನು ಸೇರ್ಪಡೆ ಮಾಡಲಾಗಿದೆ. ಬಲಭಾಗದ ನವರಂಗದ ಭಿತ್ತಿಯಲ್ಲಿ ಚೌಕಾಕಾರದ ಜಾಲಾಂಧ್ರವಿರುವುದನ್ನು ಕಾಣಬಹುದಾಗಿದೆ

ಗರ್ಭಗುಡಿಯ ಭಾಗದಲ್ಲಿ ಮಾತ್ರ ವಲಭಿ ಇದ್ದು, ಅದು ಸ್ವಲ್ಪ ಉಬ್ಬಿಕೊಂಡಂತೆ ಇರದೆ ಸಮಾನಾಂತರವಾಗಿಯೇ ಇದೆ. ನವೀಕರಣದ ವೇಳೆ ಸ್ಯಾಂಡ್‌ಬ್ಲಾಸ್ಟ್ (ಮರಳಿನ ಬಿರಸುಗಾಳಿ, ಮರಳು ಸಿಡಿತ) ಮಾಡಿರುವುದರಿಂದ ವಲಭಿಯಲ್ಲಿನ ಉಬ್ಬು ಶಿಲ್ಪಗಳು ಅರ್ಧದಷ್ಟು ಸವೆದು ಹೋಗಿವೆ. ಇಲ್ಲಿ ಹಂಸಮಾಲೆಯನ್ನು ಕಾಣಬಹುದು. ವಲಭಿಯ ನಂತರ ಸುಮಾರು ಅರ್ಧ, ಮುಕ್ಕಾಲು ಅಡಿಯಷ್ಟು ಹೊಸ ಕಲ್ಲುಗಳನ್ನು ಸೇರಿಸಿ ಗರ್ಭಗುಡಿಯ ಎತ್ತರವನ್ನು ಹೆಚ್ಚಿಸಲಾಗಿದೆ.

ಕಪೋತವು ಸ್ವಲ್ಪ ಮುಂಚಾಚಿದಂತಿದ್ದು ಇಲ್ಲಿ ನಾಸಿಯ ಬದಲು ಸಿಂಹಮುಖದ ರಚನೆಯಿದೆ. ಇಂತಹ ರಚನೆಯನ್ನು ಯಲಹಂಕದ ಅಳ್ಳಳ್ಳಪ್ಪ ದೇವಾಲಯದ ಕಪೋತದಲ್ಲಿಯೂ ಕಾಣಬಹುದು. ಈ ರೀತಿಯ ಅಲಂಕರಣೆ ನವರಂಗದ ಭಾಗದ ಕಪೋತದಲ್ಲಿ ಮಾತ್ರವಿದೆ. ಎಡಭಾಗದ ನವರಂಗದ ಮೇಲಿನ ಕಪೋತವನ್ನು ಸಂಪೂರ್ಣವಾಗಿ ಹೊಸದಾಗಿ ನಿರ್ಮಿಸಲಾಗಿದೆ. ಗರ್ಭಗುಡಿಯ ಮೇಲಿನ ಕಪೋತದಲ್ಲಿ ಕೀರ್ತಿಮುಖವಿರುವ ನಾಸಿಗಳನ್ನು ಕಾಣಬಹುದಾಗಿದೆ. ಕಪೋತದ ಮೇಲೆ ಒಂದು ಪಟ್ಟಿಯಾಕಾರದ ದಿಂಡನ್ನು ಹೊಸದಾಗಿ ಸೇರ್ಪಡೆ ಮಾಡಲಾಗಿದೆ. ಗರ್ಭಗುಡಿಯ ಕಪೋತದ ಮೇಲಿನ ಪಟ್ಟಿಕೆಯಲ್ಲಿ ವ್ಯಾಳಮಾಲೆಯನ್ನು ಕಾಣಬಹುದು. ಇಲ್ಲಿ ಸಿಂಹ, ಮೊಸಳೆಗಳ ಜೊತೆಗೆ ಕಾಲ್ಪನಿಕ ಪ್ರಾಣಿಗಳ ಉಬ್ಬು ಶಿಲ್ಪಗಳನ್ನು ಸಹ ಕಾಣಬಹುದಾಗಿದೆ.

ಈ ದೇವಾಲಯದ ಗರ್ಭಗುಡಿ ಹಾಗೂ ಅಂತರಾಳದ ಭಿತ್ತಿಯಲ್ಲಿ ಏಳು ಶಿಲ್ಪಗಳನ್ನು ಕಾಣಬಹುದು. ಪ್ರದಕ್ಷಿಣಾಪಥದ ಕ್ರಮದಲ್ಲಿ ಇವುಗಳನ್ನು ಗಮನಿಸುವುದಾದರೆ ಚತುರ್ಭುಜಗಳೊಂದಿಗೆ

ಪೀಠದ ಮೇಲೆ ಆಸೀನನಾಗಿರುವ ಗಣಪತಿಯ ಮೂರ್ತಿಯನ್ನು ಕಾಣಬಹುದು. ಪೀಠದಲ್ಲಿ ಮೂಷಿಕನನ್ನು ಚಿತ್ರಿಸಲಾಗಿದೆ. ಮುಂದಿನ ಶಿಲ್ಪವು ಸ್ಯಾಂಡಲ್ ಬ್ಲಾಸ್ಟ್‌ನಿಂದಾಗಿ ಅರ್ಧದಷ್ಟು ಸವೆದಿದ್ದು ಗುರುತಿಸಲು ಸಾಧ್ಯವಾಗದಾಗಿದೆ. ಅನಂತರದಲ್ಲಿ ಬ್ರಹ್ಮಕಾಂತ ಕಂಬಗಳ ಕೋಷ್ಠಕದಲ್ಲಿ ನಾಟ್ಯಶಿವ ಅಥವಾ ಅಪಸ್ಮಾರನ ಮೇಲೆ ನರ್ತಿಸುತ್ತಿರುವ ಅಪಸ್ಮಾರ ಸಂಹಾರ ಮೂರ್ತಿಯನ್ನು ಕಾಣಬಹುದು. ಗರ್ಭಗುಡಿಯ ಹಿಂಭಾಗದಲ್ಲಿ ಲಿಂಗೋದ್ಭವ ಮೂರ್ತಿ ಇದ್ದು ಬ್ರಹ್ಮ, ವಿಷ್ಣು ಸಹ ಅಂಜಲಿ ಮುದ್ರೆಯಲ್ಲಿ ನಿಂತಿರುವುದನ್ನು ಕಾಣಬಹುದು ಗರ್ಭಗುಡಿಯ ಎಡ ಪಾರ್ಶ್ವದಲ್ಲಿ ಭಿಕ್ಷಾಟನ ಭೈರವನ ಶಿಲ್ಪವಿದೆ. ಒಬ್ಬಳು ಸ್ತ್ರೀಯಿಂದ ಬಿಕ್ಷೆಯನ್ನು ಪಡೆಯುತ್ತಿರುವಂತೆ ತೋರಿಸಲಾಗಿದೆ. ಚತುರ್ಭುಜಗಳನ್ನು ಹೊಂದಿರುವ ಭೈರವನು ಜಟಾಮುಕುಟ, ಕಂಠಿಕೆ, ಯಜ್ಞೋಪವೀತ, ಉದರಬಂಧ, ಕೇಯೂರ, ಹಸ್ತಕಟಕ, ಪಾದಕಟಕಗಳನ್ನು ಧರಿಸಿದ್ದಾನೆ. ಕಾಲುಗಳ ಬಳಿಯಿರುವ ಶಿಲ್ಪಗಳು ಸವೆದಿವೆ. ಇವನ ನಂತರ ಶಿರಶ್ಚಕ್ರ, ಕಿರೀಟಮುಕುಟದೊಂದಿಗೆ ಚತುರ್ಭುಜಗಳನ್ನು ಹೊಂದಿ ಎಡಭಾಗದ ಒಂದು ಕೈಯಲ್ಲಿ ಗದೆಯನ್ನು ಆಸರೆಯಾಗಿ ಹಿಡಿದು ನಿಂತಿರುವ ವಿಷ್ಣುವಿನ ಶಿಲ್ಪವನ್ನು ಕಾಣಬಹುದು. ಅಭಯ ಮುದ್ರೆಯೊಂದಿಗೆ ಇರುವ ಇವನ ಉಳಿದ ಕೈಗಳಲ್ಲಿನ ಆಯುಧಗಳು ಗುರುತಿಸಲಾಗದಷ್ಟು ಸವೆದಿವೆ. ಮತ್ತೊಂದು ಬ್ರಹ್ಮಕಾಂತ ಕಂಬಗಳ ಕೋಷ್ಠಕದಲ್ಲಿ ಗಜಾಸುರ ಸಂಹಾರ ಮೂರ್ತಿಯನ್ನು ಕಾಣಬಹುದು. ಇಲ್ಲಿ ಶಿವನು ಆನೆಯ ತಲೆಯ ಮೇಲೆ ನರ್ತಿಸುತ್ತಿರುವಂತೆ ಚಿತ್ರಿಸಲಾಗಿದೆ.

ಏಕತಳ ದೇವಾಲಯ ಎಂದು ಕರೆಯಲು ಗರ್ಭಗುಡಿಯ ಮೇಲೆ ಏಕತಳ ಶಿಖರದಲ್ಲಿ ನಾಲ್ಕು ಮೂಲೆಗಳಲ್ಲಿ ಸಿಂಹ ಲಲಾಟವನ್ನು ನಿರ್ಮಿಸಿ, ಭಿತ್ತಿಯ ಮೇಲ್ಭಾಗದಲ್ಲಿ ಸಿಂಹಗಳ ಸಾಲನ್ನು ಬಿಡಿಸಲಾಗಿದೆ. ಕಳಸವನ್ನ ಹೊಸದಾಗಿ ನಿರ್ಮಿಸಿ ಜೋಡಿಸಲಾಗಿದೆ. ಗಜಾಸುರ ಸಂಹಾರ ಮೂರ್ತಿಯ ಉಬ್ಬು ಶಿಲ್ಪವನ್ನು ಗರ್ಭಗುಡಿಯ ಹಿಂಭಾಗದ ಹೊರಗೋಡೆಯಲ್ಲಿದೆ. ಗಣಪತಿ, ಎರಡು ದ್ವಾರ ಪಾಲಕರು. ಸಪ್ತ ಮಾತೃಕೆಯಲ್ಲಿನ ಎರಡು ಉಬ್ಬು ಶಿಲ್ಪವನ್ನು, ನರಸಿಂಹನ ಉಬ್ಬು ಶಿಲ್ಪಗಳನ್ನು ದೇವಾಲಯದ ಎದುರಿನ ನಂದಿ ಶಿಲ್ಪದ ಪಕ್ಕದಲ್ಲಿ ಕಾಣಬಹುದು. ಹೊರ ಭಿತ್ತಿಯ ಮೂರು ಕಡೆಗಳಲ್ಲಿ ಶಿವಲೀಲೆಯ ಮೂರು ಶಿಲ್ಪಗಳನ್ನು ಬಿಡಿಸಲಾಗಿದೆ. ಕಲ್ಲೇಶ್ವರ ದೇವಾಲಯದ ಗರ್ಭಗುಡಿಯ ರಚನಾ ರೀತಿ, ಮುಖ ಮಂಟಪ, ನವರಂಗ ಮಂಟಪದಲ್ಲಿನ ಕಂಬಾಳು ಹೊರಭಿತ್ತಿ, ಪ್ರಕಾರ ಎಲ್ಲವೂ ಗಂಗರ ರಚನಾಶೈಲಿಯನ್ನು ಹೋಲುತ್ತದೆ.

ಒಟ್ಟಾರೆಯಾಗಿ ಹೊಸ ಸೇರ್ಪಡೆಯೊಂದಿಗೆ ಇದರ ಮೂಲ ಸ್ವರೂಪವನ್ನು ಉಳಿಸಿ ಪುನರ್‌ನಿರ್ಮಾಣ ಮಾಡಿರುವುದು ಬಹಳ ಒಳ್ಳೆಯ ಸಂಗತಿ. ಶಿವಲಿಂಗವನ್ನು ಉಮಾಮಹೇಶ್ವರ ಎಂದು

ಪೂಜಿಸುತ್ತಿರುವುದು ವಿಶೇಷವಾಗಿದೆ. ನಂದಿ, ಯೋಗನರಸಿಂಹ, ಬ್ರಹ್ಮ, ಭಗ್ನಗೊಂಡಿರುವ ದೇವ ಶಿಲ್ಪವನ್ನು ಅನಾತವಾಗಿ ಹೊರಗೆ ಹಾಕಿರುವುದು ಬೇಸರದ ಸಂಗತಿ. ದೇವಾಲಯದ ಹೊರಭಾಗದಲ್ಲಿ ಗಂಟಾಮಾಲೆಯ ಅಲಂಕರಣೆಯನ್ನು ಹೊಂದಿರುವ ಸುಮಾರು ನಾಲ್ಕು ಅಡಿ ಉದ್ದವಾದ ನಂದಿ ಶಿಲ್ಪವನ್ನು ಕಾಣಬಹುದಾಗಿದೆ.

## ಶ್ರವಣೂರ ನೀಲಕಂಠೇಶ್ವರ ದೇವಾಲಯ

ದೊಡ್ಡಬೆಳವಂಗಲ ಹೋಬಳಿಯ ಶ್ರವಣೂರಿನ ಗಂಗರ ಕಾಲಕ್ಕೆ ಸೇರಿದ ಊರ ಕೆರೆಯಂಚಿನಲ್ಲಿರುವ ನೀಲಕಂಠೇಶ್ವರ **(ಚಿತ್ರ ಸಂಖ್ಯೆ-೬೫)** ದೇವಾಲಯವು ಪೂರ್ವಾಭಿಮುಖವಾಗಿ ಚೌಕಾಕಾರದ ಗರ್ಭಗೃಹ, ಅಂತರಾಳ, ವಿಶಾಲವಾದ ನವರಂಗ ಮಂಟಪವನ್ನು ಹೊಂದಿದ್ದು, ಗರ್ಭಗುಡಿ, ಅಂತರಾಳ ಹಳೆಯದಾಗಿದ್ದು, ನವರಂಗವನ್ನು ಅನಂತರ ಕಾಲದಲ್ಲಿ ಸೇರಿಸಲಾಗಿದೆ. ನಾಲ್ಕು ಅಡಿ ಎತ್ತರದ ಗರ್ಭಗುಡಿಯಲ್ಲಿ ವೃತ್ತಾಕಾರದ ಪಾಣಿಪೀಠದ ಮೇಲೆ ಶಿವಲಿಂಗವಿದೆ. ಗಂಗರ ಸಾಕಷ್ಟು ದೇವಾಲಯಗಲ್ಲಿ ಚೌಕಾಕಾರದ ಪಾಣಿ ಪೀಠಗಳಿರುತ್ತದೆ.

ಗರ್ಭಗೃಹದ ಮೇಲ್ಛಾವಣಿಯು ನಕ್ಷತ್ರಾಕಾರದಲ್ಲಿದ್ದು, ಮಧ್ಯದಲ್ಲಿ ಮೂರು ಸುತ್ತಿನ ವೃತ್ತಾಕಾರದ ಕಮಲ, ಅದರ ಸುತ್ತಲೂ ನಾಲ್ಕೂ ಮೂಲೆಯಲ್ಲಿ ಕಮಲದ ಮೊಗ್ಗು ಇದೆ. ಬಾಗಿಲುವಾಡದ ತಳಭಾಗದಲ್ಲಿ ಕಲಶ (ಪೂರ್ಣಕುಂಭ) ಉಬ್ಬು ಶಿಲ್ಪವನ್ನು, ಅದರ ಮೇಲೆ ಎರಡೂ ಕಡೆ ಬಳ್ಳಿಯ ಅಲಂಕಾರವಿದ್ದು ಆದರೆ ಗಜಲಕ್ಷ್ಮಿ ಶಿಲ್ಪವಿಲ್ಲ, ಇದರ ಮೇಲಿನ ಪಟ್ಟಿಯಲ್ಲಿ ಅಷ್ಟಮಂಗಲ ಚಿಹ್ನೆಗಳಾದ ಜೋಡಿ ಮೀನು, ಪೂರ್ಣಕುಂಭ, ಬಸವ, ಚಾಮರ, ದೀಪಮಾಲೆ ಕಂಬ, ಸೂರ್ಯ, ಚಂದ್ರ, ಶಂಖ, ಚಕ್ರ ಇತ್ಯಾದಿ ಶಿಲ್ಪಗಳನ್ನು ಕಾಣಬಹುದು. ನಂದಿಯ ಶಿಲ್ಪವನ್ನು ವಿಜಯನಗರೋತ್ತರ ಕಾಲದಲ್ಲಿ ಸ್ಥಾಪಿಸಿರಬೇಕು.

ಕೆರೆಯ ತೂಬಿನ ಮೇಲೆ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ, ಕೆರೆಯ ಸಮೀಪದಲ್ಲಿ ಗಂಗರ ಕಾಲದ ವೀರಗಲ್ಲು ಇದ್ದು, ನೀಲಕಂಠೇಶ್ವರ ದೇವಾಲಯವನ್ನು ಜೀರ್ಣೋದ್ದಾರ ಮಾಡಿರುವುದರಿಂದ ಮೂಲ ರಚನೆ ಕಣ್ಮರೆಯಾಗಿದೆ.

## ಗಂಗವಾರದ ಸೋಮೇಶ್ವರ ದೇವಾಲಯ

ದೇವನಹಳ್ಳಿಯಿಂದ ೧೫ ಕಿ.ಮೀ ಹಾಗೂ ಹೊಸಕೋಟೆಯಿಂದ ೧೩ ಕಿ.ಮೀ ಅಂತರದಲ್ಲಿನ ಗಂಗವಾರದ ಸೋಮೇಶ್ವರ ದೇವಾಲಯವು **(ಚಿತ್ರ ಸಂಖ್ಯೆ-೬೬)** ಜಿಲ್ಲೆಯಲ್ಲಿ ಉಳಿದಿರುವ ಹಾಗೂ ಇಂದಿಗೂ ಪೂಜಿಸುತ್ತಾ ಬಂದಿರುವ ಗಂಗರ ದೇವಾಲಯಗಳಲ್ಲಿ ಒಂದು. ಈ ಗ್ರಾಮವನ್ನು ಶಾಸನಗಳಲ್ಲಿ

ಗಂಗಪುರ[೪೮], ಗಂಗವಾರ[೪೯] ಎಂದು ಸಹ ಕರೆಯಲಾಗಿದೆ. ಚೋಳರು ಗಂಗರ ಹಲವಾರು ದೇವಾಲಯಗಳು ಹಾಗೂ ಸ್ಮಾರಕಗಳನ್ನು ಇತರೇ ಪ್ರದೇಶಗಳಲ್ಲಿ ಧಾಳಿ ಮಾಡಿ ನಾಶಗೊಳಿಸಿದ್ದಾರೆ. ಆದರೆ ಈ ದೇವಾಲಯವನ್ನು ರಾಜರಾಜ ಚೋಳನು ಜೀರ್ಣೋದ್ಧಾರಗೊಳಿಸಿ ದಾನದತ್ತಿಗಳನ್ನು ನೀಡಿರುವುದು ಶಾಸನೋಕ್ತವಾಗಿದೆ[೫೦].

ಗಂಗರು ಗಂಗವಾರದಲ್ಲಿ ಕ್ರಿ.ಶ.೮ನೇ ಶತಮಾನದಲ್ಲಿಯೇ ತಮ್ಮ ಚಟುವಟಿಕೆಗಳನ್ನು ಪ್ರಾರಂಭಿಸಿರುವಾಗಲೇ ಸೋಮೇಶ್ವರ ದೇವಾಲಯವನ್ನು ಗಂಗರು ಸ್ಥಾಪಿಸಿದ್ದರು. ತದ ನಂತರ ಚೋಳರು ವಿಸ್ತರಿಸಿ ಜೀಣ್ಣೋದ್ಧಾರ ಮಾಡಿರುವುದಕ್ಕೆ ದೇವಾಲಯದ ಮುಂಭಾಗದಲ್ಲಿ ಹಾಗೂ ಗರ್ಭಗುಡಿಯ ಅಧಿಷ್ಠಾನದ ಹಾಗೂ ಭಿತ್ತಿಗಳಲ್ಲಿ ಹಲವು ತಮಿಳು ಶಾಸನಗಳನ್ನು ಕಾಣಬಹುದು. ಗಂಗರು ಕಟ್ಟಿದ ದೇವಾಲಯಗಳಲ್ಲಿ ಇದು ಒಂದು ಎಂದು ಹೇಳಬಹುದು. ಕಾಲಾನಂತರದಲ್ಲಿ ಚೋಳರಿಂದ ಜೀರ್ಣೋದ್ಧಾರಗೊಂಡಿದೆ ಎಂದು ನಿರ್ದಿಷ್ಟವಾಗಿ ಇದು ಚೋಳರ ದೇವಾಲಯ ಎಂದು ಹೇಳಲು ಸಾಧ್ಯವಿಲ್ಲ.

ಈ ದೇವಾಲಯಕ್ಕೆ ನಾನು ಜನವರಿ ೨೦೧೪ರಲ್ಲಿ ಕ್ಷೇತ್ರಕಾರ್ಯ ಕೈಗೊಂಡಿದ್ದಾಗ ದೇವಾಲಯ ಸಂಪೂರ್ಣವಾಗಿ ಶೀತಲಾವ್ಯವಸ್ಥೆಗೆ ತಲುಪಿತ್ತು. ದೇವಾಲಯವು ಗಿಡಗೆಂಟೆಗಳಿಂದ ಆವರಿಸಿತ್ತು ಗೋಪುರದ ಮೇಲೂ ಗಿಡಗಳು ಬೆಳೆದಿದ್ದವು. ಭಗ್ನಗೊಂಡ ಮೂರ್ತಿಗಳು ಅಲ್ಲಲ್ಲಿ ಬಿದ್ದಿರುವುದು ಕಂಡು ಬರುತ್ತಿತ್ತು. ಮತ್ತೊಮ್ಮೆ ಈ ದೇವಾಲಯಕ್ಕೆ ಜೂನ್ ೨೦೧೬ ರಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಭೇಟಿ ನೀಡಿದಾಗ ಈ ದೇವಾಲಯವನ್ನು ಸಂಪೂರ್ಣವಾಗಿ ನವೀಕರಣ ಮಾಡಲಾಗಿತ್ತು. ಮೂಲ ದೇವಾಲಯದ ಶೈಲಿಯನ್ನು ಮಾರ್ಪಡಿಸದೇ ಹಳೆಯ ವಸ್ತುಗಳನ್ನೇ ಬಳಸಿಕೊಂಡು ಅವುಗಳಿಗೆ ಸ್ಯಾಂಡ್‌ಬ್ಲಾಸ್ಟ್ ಮೂಲಕ ಹೊಳಪನ್ನು ನೀಡುವುದರ ಜೊತೆಗೆ ಎತ್ತರದಲ್ಲಿ ಕಡಿಮೆ ಇದ್ದ ಕಾರಣ ದೇವಾಲಯವನ್ನು ಎತ್ತರಗೊಳಿಸಲು ಕಂಬಗಳಿಗೆ ಹಾಗೂ ಗೋಡೆಗಳಿಗೆ ಹೊಸದಾಗಿ ಪೀಠ ಹಾಗೂ ದಿಂಡುಗಳನ್ನು ಬಳಸಲಾಗಿದೆ. ಇದೊಂದನ್ನು ಹೊರತು ಪಡಿಸಿದರೆ ಮೂಲ ದೇವಾಲಯದ ಶೈಲಿಗೆ ಎಲ್ಲಿಯೂ ಹಾನಿಯಾಗಿಲ್ಲ.

ಸ್ಥಳೀಯವಾಗಿ ಈ ಸೋಮೇಶ್ವರನನ್ನು ತಬ್ಲೇಶ್ವರ ಸ್ವಾಮಿ ಎಂದು ಸಹ ಕರೆಯಲಾಗುತ್ತದೆ ಎಂದು ಹೇಳಲಾಗಿದೆ[೫೧]. ಬಹುಶಃ ಗಂಗವಾರದಿಂದ ೩ ಕಿ.ಮೀ ದೂರದಲ್ಲಿರುವ ತಬ್ಬಿಂಗೇಶ್ವರ ದೇವರ ಹೆಸರನ್ನು ಐ.ಕೆ.ಶರ್ಮರವರು ತಬ್ಲೇಶ್ವರ ಎಂದು ಕರೆದಿರಬಹುದು. ಈ ದೇವಾಲಯವು ಪೂರ್ವಾಭಿಮುಖವಾಗಿದ್ದರೂ

---

[೪೮] ಎ.ಕ-೯, ದೇ.ತಾ.೭೪, ಕ್ರಿ.ಶ.೭೮೦, ಗಂಗವಾರ.

[೪೯] Suryanath. U. Kamath(CE) :– Karnataka state gazetteer, page.no-811.

[೫೦] ಎ.ಕ-೯, ದೇ.ತಾ.೭೫, ಕ್ರಿ.ಶ.೧೦೪೬, ಗಂಗವಾರ.

[೫೧] Sharma.I.K, Temples of the Gangas of Karnataka, page no-58.

ಪ್ರವೇಶದ್ವಾರ ಉತ್ತರಾಭಿಮುಖವಾಗಿದೆ. ಸುತ್ತಲೂ ಪ್ರಾಕಾರದಿಂದ ಕೂಡಿರುವ ಈ ದೇವಾಲಯ ಗರ್ಭಗುಡಿ, ಅಂತರಾಳ, ನವರಂಗ, ಮುಖಮಂಟಪವನ್ನು ಹೊಂದಿದೆ. ಗರ್ಭಗುಡಿಯಲ್ಲಿರುವ ಲಿಂಗವನ್ನು ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಲಿಂಗದಲ್ಲಿ ರುದ್ರಕಾಂತ ಭಾಗವು ಹೆಚ್ಚಾಗಿದೆ. ಈ ರೀತಿಯ ಲಿಂಗಗಳನ್ನು ಶಿವಾಧಿಕ ಲಿಂಗವೆಂದು ಕರೆಯಬಹುದಾಗಿದೆ[೫೨].

ಸುಖನಾಸಿ ಅಥವಾ ಅಂತರಾಳವು ಈ ಮೊದಲು ಬಾಗಿಲನ್ನು ಹೊಂದಿದ್ದು ಈಗ ಅಂದರೆ ಜೀರ್ಣೋದ್ಧಾರಗೊಂಡ ಮೇಲೆ ತೆರೆದಿರುವಂತೆ ಕಂಡು ಬರುತ್ತದೆ. ಈ ಗರ್ಭಗುಡಿ ಮತ್ತು ಅಂತರಾಳಕ್ಕೆ ಯಾವುದೇ ವಿನ್ಯಾಸಗೊಳಸಿದ ಬಾಗಿಲುವಾಡಗಳು ಕಂಡು ಬರುವುದಿಲ್ಲ. ಅತ್ಯಂತ ಸರಳವಾದವುಗಳಾಗಿವೆ.

ನವರಂಗವು ೧೪ ಕಂಬಗಳನ್ನು ಹೊಂದಿದೆ. ಮಧ್ಯದ ನಾಲ್ಕು ಕಂಬಗಳು ಮಾತ್ರ ರುದ್ರಕಾಂತ ಸ್ತಂಭವಾಗಿವೆ. ಇವುಗಳ ಪಾದ ನಾಲ್ಕು ಕೋನ, ಮೇಲೆ ಅಷ್ಟಕೋನ ನಂತರ ದುಂಡಾಗಿರುವುದನ್ನು ಕಾಣಬಹುದು. ದಿಂಡಿನ ಮಧ್ಯಭಾಗದಲ್ಲಿ ಮಾಲಾಲಂಕಾರದ ರಚನೆಯನ್ನು ಕಾಣಬಹುದು. ಕೆಲವೊಂದು ಕಂಬಗಳಲ್ಲಿ ಕಂಠದ ಭಾಗವನ್ನು ಹೊಸದಾಗಿ ಸೇರಿಸಲಾಗಿದೆ. ಮುಚ್ಚಳವು ದುಂಡಾಗಿದೆ. ಬೋದಿಗೆಯು ಸರಳವಾಗಿದ್ದು, ಉಳಿದ ಕಂಬಗಳು ಸರಳವಾಗಿ ನಾಲ್ಕು, ಎಂಟು, ನಾಲ್ಕು ಕೋನ ಹೊಂದಿರುವುದರ ಜೊತೆಗೆ ಮೇಲ್ಭಾಗದಲ್ಲಿ ದುಂಡಾಗಿರುವುದನ್ನು ಕಾಣಬಹುದು. ಈ ಕಂಬಗಳ ಬೋದಿಗೆಯು ಸಹ ಸರಳವಾಗಿದೆ. ಈ ಕಂಬಗಳ ಎತ್ತರವನ್ನು ಹೆಚ್ಚಿಸಲು ಪಾದದಲ್ಲಿ ಸುಮಾರು ೩/೪ ಅಡಿಯಿಂದ ಒಂದು ಅಡಿಯವರೆಗೆ ಪೀಠವನ್ನು ರಚಿಸಿ ಅದರ ಮೇಲೆ ಕಂಬವನ್ನು ನಿಲ್ಲಿಸಲಾಗಿದೆ. ಕೆಲವು ಕಡೆ ವೃತ್ತಾಕಾರದ ಕಂಠಗಳನ್ನು ಮಾಡಿ ಬೋದಿಗೆಯ ಕೆಳಗೆ ಇಡಲಾಗಿದೆ. ಅಂತರಾಳದ ಮುಂಭಾಗದಲ್ಲಿ ಚಿಕ್ಕದಾದ ನಂದಿ ವಿಗ್ರಹವಿದ್ದು ಅದನ್ನು ಹೊಸದಾಗಿ ನಿರ್ಮಿಸಿ ಜೀರ್ಣೋದ್ಧಾರದ ನಂತರ ಪ್ರತಿಷ್ಠಾಪಿಸಲಾಗಿದೆ.

ನವರಂಗದ ಮೇಲ್ಛಾವಣಿಯಲ್ಲಿ ಯಾವುದೇ ವಿತಾನ ಅಥವಾ ಗಂಗರ ಇತರೇ ದೇವಾಲಯಗಳಲ್ಲಿ ಇರುವಂತೆ ಕಮಲದ ಉಬ್ಬು ಶಿಲ್ಪಗಳಾಗಲಿ ಕಂಡುಬರುವುದಿಲ್ಲ. ಅಂತರಾಳದ ಎರಡು ಬದಿಯಲ್ಲಿರುವ ಕಂಬಗಳಲ್ಲಿ ಒಳಮುಖವಾಗಿ ಆನೆಗಳ ಉಬ್ಬು ಶಿಲ್ಪಗಳನ್ನು ಬಿಡಿಸಲಾಗಿದೆ. ಇಲ್ಲಿ ಆನೆಯ ಮುಂಭಾಗವಾ ತಲೆ ಮತ್ತು ಎರಡು ಕಾಲುಗಳು ಮಾತ್ರ ಕಂಡುಬರುತ್ತದೆ. ಅಂತರಾಳದ ಬಲಭಾಗಕ್ಕೆ ಪಾಣಿಪೀಠದ ಮೇಲೆ ಗಣಪತಿಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ.

ನವರಂಗದ ಬಲಭಾಗಕ್ಕೆ ಒಂದು ದೇವಾಲಯವಿದ್ದು ಅಲ್ಲಿ ಪ್ರಸ್ತುತ ಸಮಾನಾಂತರವಾಗಿ ಮೂರು ಗರ್ಭಗುಡಿಗಳನ್ನು ಮಾಡಲಾಗಿದೆ. ಮಧ್ಯದ ಗರ್ಭಗುಡಿಯಲ್ಲಿ ಸಮಭಂಗಿಯಲ್ಲಿ ನಿಂತಿರುವ ಪಾರ್ವತಿ

[೫೨] ಜಿ.ಜ್ಞಾನಾನಂದ :- ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ, ಪು.ಸಂ-೧೭೭.

ದೇವಿಯನ್ನು ಪ್ರತಿಷ್ಠಾಪಿಸಲಾಗಿದೆ. ಉಳಿದ ಎರಡು ಗರ್ಭಗುಡಿಗಳಲ್ಲಿ ಒಂದರಲ್ಲಿ ದೇವಾಲಯಕ್ಕೆ ಸೇರಿದ ವಸ್ತು, ಆಭರಣಗಳನ್ನು ಮತ್ತೊಂದರಲ್ಲಿ ಪೂಜಾ ಸಾಮಾಗ್ರಿಗಳನ್ನು ಪ್ರಸ್ತುತದಲ್ಲಿ ಇಡಲಾಗಿದೆ. ನವೀಕರಣಕ್ಕೆ ಮೊದಲು ಈ ಜಾಗದಲ್ಲಿ ಮಧ್ಯ ನಾಲ್ಕು ಕಂಬಗಳಿದ್ದವು. ಇವುಗಳು ನಾಲ್ಕು, ಎಂಟು, ನಾಲ್ಕು, ಎಂಟು ಮೂಲೆಗಳುಳ್ಳ ಕಂಬಗಳಾಗಿದ್ದವು. ಮೊದಲು ಈ ಸ್ಥಳವನ್ನು ಭಜನೆ, ನೃತ್ಯ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಬಳಸಿಕೊಂಡಿರಬಹುದು. ಇಲ್ಲಿನ ಭಿತ್ತಿಯು ಅರೆಗಂಬಗಳನ್ನು ಸಹ ಹೊಂದಿತ್ತು. ಪ್ರಸ್ತುತ ಈ ಜಾಗದಲ್ಲಿ ನಾಲ್ಕು ಕಂಬಗಳ ಬದಲಾಗಿ ಕೇವಲ ಎರಡು ಕಂಬಗಳು ಮಾತ್ರ ಕಂಡುಬರುತ್ತದೆ. ಈ ಕಂಬಗಳ ಮಧ್ಯೆ ಪಾರ್ವತಿ ದೇವಿಯ ವಾಹನವಾದ ಸಿಂಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಜೀರ್ಣೋದ್ಧಾರಕ್ಕೆ ಮೊದಲು ನವರಂಗದಲ್ಲಿ ಹಳೆಯ ನಂದಿಯ ವಿಗ್ರಹವಿತ್ತು. ಈಗ ನವರಂಗದಿಂದಲೇ ಪೂರ್ವಕ್ಕೆ ಹೊಸದಾಗಿ ದ್ವಾರವನ್ನು ನಿರ್ಮಿಸಲಾಗಿದೆ. ಹೊರಗೆ ಹೊಸ ಧ್ವಜಸ್ತಂಭ ಹಾಗೂ ಹಳೆಯ ನಂದಿಯನ್ನು ಇಡಲಾಗಿದೆ. ಪ್ರಧಾನ ನವರಂಗದ ಎಡಭಾಗಕ್ಕೆ ಮುಖಮಂಟಪವಿದ್ದು, ಇದು ನಾಲ್ಕು ರುದ್ರಕಾಂತ ಕಂಬಗಳನ್ನು ಹೊಂದಿದೆ. ಈ ಕಂಬಗಳ ಎತ್ತರವನ್ನು ಹೆಚ್ಚಿಸಲು ಸುಮಾರು ಅರ್ಧ ಅಡಿಯಷ್ಟು ಎತ್ತರದ ಕಲ್ಲಿನ ಪೀಠವನ್ನು ನಿರ್ಮಿಸಿ ಅದರ ಮೇಲೆ ಕಂಬಗಳನ್ನು ನಿಲ್ಲಿಸಲಾಗಿದೆ. ಇಲ್ಲಿನ ಮೇಲ್ಛಾವಣಿಯಲ್ಲಿ ಯಾವುದೇ ರಚನೆಯು ಕಂಡುಬರುವುದಿಲ್ಲ. ಈ ಮುಖಮಂಟಪದಲ್ಲಿ ನಂದಿಯಾಗಲಿ ಅಥವಾ ಇತರೆ ಶಿಲ್ಪಗಳಾಗಲಿ ಕಂಡು ಬರುವುದಿಲ್ಲ. ಈ ಮುಖಮಂಟಪವನ್ನು ಪ್ರವೇಶಿಸಲು ಮೂರು ದಿಕ್ಕುಗಳಿಂದಲೂ ದ್ವಾರಗಳಿವೆ. ಅಂದರೆ ಉತ್ತರ, ಪೂರ್ವ, ಪಶ್ಚಿಮ ದಿಕ್ಕುಗಳಲ್ಲಿ ದ್ವಾರಗಳಿವೆ. ಉತ್ತರ ದ್ವಾರದಿಂದ ನವರಂಗಕ್ಕೆ ಪ್ರವೇಶ ದೊರೆಯುತ್ತದೆ.

ದೇವಾಲಯದ ಹೊರ ಭಾಗದ ವಾಸ್ತು ಲಕ್ಷಣಗಳನ್ನು ಗಮನಿಸುವುದಾದರೆ ಮುಖಮಂಟಪ ಮತ್ತು ನವರಂಗದ ಭಾಗವು ಯಾವುದೇ ಅಧಿಷ್ಠಾನವನ್ನು ಹೊಂದಿಲ್ಲ. ಈ ಭಾಗದ ಭಿತ್ತಿಯಲ್ಲಿ ಯಾವುದೇ ಅರೆಗಂಬಗಳಾಗಲಿ ದೇವಕೋಷ್ಠಗಳಾಗಲಿ ಕಂಡುಬರುವುದಿಲ್ಲ. ಪ್ರಸ್ತರದ ಭಾಗಗಳಾದ ಉತ್ತರ, ವಲಭಿ, ಕಪೋತ, ವಾಜನಗಳನ್ನು ಕಾಣಬಹುದು ವಲಭಿಯು ಇಲ್ಲಿ ಸ್ವಲ್ಪ ಉಬ್ಬಿರುವ ಬದಲು ಉತ್ತರದ ಮಾದರಿಯಲ್ಲಿದೆ. ಹಾಗೂ ಉತ್ತರಕ್ಕಿಂತ ಸ್ವಲ್ಪ ಮುಂದಕ್ಕೆ ಬಂದಿದೆ. ಈ ವಲಭಿಯಲ್ಲಿ ಹಂಸಮಾಲೆಯನ್ನು ಕಾಣಬಹುದಾಗಿದೆ. ಕಪೋತವು ಸರಳವಾಗಿದ್ದು ಯಾವುದೇ ನಾಸಿಗಳು ಕಂಡುಬರುವುದಿಲ್ಲ.

ದಕ್ಷಿಣಕ್ಕೆ ಇರುವ ಮಂಟಪವು ಪಾದಬಂಧ ಅಧಿಷ್ಠಾನವನ್ನು ಹೊಂದಿದೆ ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ, ಪ್ರತಿಗಳು ಇಲ್ಲಿ ಕಂಡುಬರುತ್ತವೆ. ಈ ಭಾಗದ ಭಿತ್ತಿಯಲ್ಲಿ ಅರೆಗಂಬಗಳನ್ನು ಕಾಣಬಹುದಾಗಿದೆ. ಪೂರ್ವ ಮತ್ತು ಪಶ್ಚಿಮಕ್ಕೆ ಎರಡು ಸರಳವಾದ ಜಾಲಾಂಧ್ರಗಳಿವೆ. ಇಲ್ಲಿಯೂ ವಲಭಿ

ಸ್ವಲ್ಪ ಉಬ್ಬಿರುವ ಬದಲು ಸಮವಾಗಿಯೇ ಇದೆ. ಈ ವಲಭಿಯಲ್ಲಿ ಹಂಸಗಳ ಜೊತೆಗೆ ಅಸ್ಪಷ್ಟವಾದ ಇತರೆ ಪ್ರಾಣಿ, ಪಕ್ಷಿಗಳ ಶಿಲ್ಪಗಳನ್ನು ಸಹ ಕಾಣಬಹುದಾಗಿದೆ. ಇಲ್ಲಿನ ಕಪೋತದಲ್ಲಿ ನಾಸಿಗಳನ್ನು ಕಾಣಬಹುದು. ಈ ನಾಸಿಗಳು ಹೆಚ್ಚಿನ ಅಲಂಕರಣೆಗಳಿಲ್ಲದೆ ಸರಳವಾಗಿವೆ. ನವೀಕರಣಕ್ಕೆ ಮೊದಲು ಈ ಭಾಗದಲ್ಲಿ ಯಾವುದೇ ರೀತಿಯ ಶಿಖರದ ರಚನೆ ಇರಲಿಲ್ಲ. ಈಗ ಇಟ್ಟಿಗೆ ಹಾಗೂ ಸಿಮೆಂಟಿನಿಂದ ಒಂದು ಶಿಖರವನ್ನು ರಚನೆ ಮಾಡಲಾಗಿದೆ.

ಗರ್ಭಗುಡಿಯು ಸಹ ಪಾದಬಂಧ ಅಧಿಷ್ಠಾನವನ್ನು ಹೊಂದಿದೆ ಈ ಅಧಿಷ್ಠಾನ ಜಗತಿ, ತ್ರಿಪಟ್ಟ ಕುಮುದ, ಗಳ, ಪ್ರತಿಗಳನ್ನು ಒಳಗೊಂಡಿದೆ. ಅರೆಗಂಬಗಳಿಂದ ಅಲಂಕರಿಸಲ್ಪಟ್ಟಿದೆ. ವಲಭಿಯಲ್ಲಿ ಶಿಲ್ಪಗಳ ಕೆತ್ತನೆಯನ್ನು ಕಾಣಬಹುದು. ಕಪೋತವು ನಾಸಿಗಳ ಅಲಂಕಾರದ ಜೊತೆಗೆ ಕಮಲದಳದ ರಚನೆಯನ್ನು ಸಹ ಹೊಂದಿದೆ. ಗರ್ಭಗೃಹದ ಶಿಖರವು ಮೆಟ್ಟಿಲುಗಳಂತೆ ಮೇಲೇರುತ್ತದೆ ಸ್ತೂಪಿಯ ಭಾಗ ಸಿಮೆಂಟಿನಿಂದ ರಚನೆಯಾಗಿರುವಂತೆ ಕಂಡುಬರುತ್ತದೆ. ಇಲ್ಲಿ ನಾಲ್ಕು ನಾಸಿಗಳಿದ್ದು ಅವುಗಳ ಮೇಲೆ ಸಿಂಹಮುಖವನ್ನು ಕಾಣಬಹುದಾಗಿದೆ. ಈ ಶಿಖರದ ಮೊದಲನೇ ತಲದಲ್ಲಿ ಕುಳಿತಿರುವಂತೆ ಹಲವು ನಂದಿ ಶಿಲ್ಪಗಳನ್ನು ಕಡೆಯಲಾಗಿದೆ. ಈ ಮೇಲೆ ತಿಳಿಸಿದ ಗರ್ಭಗುಡಿಯ ಶಿಖರದ ಭಾಗವು ನವೀಕರಣ ಮಾಡುವುದಕ್ಕೆ ಮೊದಲು ಇದ್ದಂತಹ ರಚನೆ ಪ್ರಸ್ತುತ ಈ ಮೊದಲು ಇದ್ದಂತಹ ಸಿಂಹಲಲಾಟದ ಮೇಲ್ಭಾಗವನ್ನು ಮತ್ತಷ್ಟು ಹೆಚ್ಚಿಸಿ ಮೇಲೆ ತಾಮ್ರದ ಕಳಸವನ್ನು ಹೊಸದಾಗಿ ಪ್ರತಿಷ್ಠಾಪನೆ ಮಾಡಲಾಗಿದೆ.

ದೇವಾಲಯವು ಪ್ರಾಕಾರದಿಂದ ಸುತ್ತುವರೆದಿದೆ. ಈ ಪ್ರಾಕಾರದ ಬಾಗಿಲು ಉತ್ತರಕ್ಕೆ ಇದ್ದು, ಈ ದ್ವಾರದ ಮೇಲೆ ಶಾಲಾ ಶಿಖರ ರಚನೆಯನ್ನು ಕಾಣಬಹುದು ಇಲ್ಲಿನ ದ್ವಾರವು ಸಹ ಯಾವುದೇ ಅಲಂಕರಣೆಯನ್ನು ಹೊಂದಿರದೆ ಒಂದು ಚಿಕ್ಕ ಮಂಟಪದಂತೆ ಕಂಡುಬರುತ್ತದೆ. ಒಳ ಭಾಗದ ದ್ವಾರದಲ್ಲಿ ಎರಡು ಪುರುಷ ಶಿಲ್ಪಗಳ ರಚನೆಯನ್ನು ಕಾಣಬಹುದು. ಇಲ್ಲಿಂದ ಒಳಬಂದರೆ ನಮಗೆ ಎದುರಾಗುವುದೇ ಎರಡು ಸಿಂಹಪಾದ ಸ್ತಂಭಗಳು ಇವು ಪಲ್ಲವ ಶೈಲಿಯವುಗಳಾಗಿದ್ದು, ಗಂಗರು ಇವುಗಳನ್ನು ತಮ್ಮ ದೇವಾಲಯದಲ್ಲಿ ಬಳಸಿಕೊಂಡಿದ್ದಾರೆ ಈ ರೀತಿಯ ಸ್ತಂಭಗಳು ಜಿಲ್ಲೆಯ ಇತರೆ ಕಡೆಗಳಲ್ಲಿ ಕಂಡುಬರುವುದಿಲ್ಲ. ಆದರೆ ಮಣ್ಣೆಯಲ್ಲಿ ಸೋಮೇಶ್ವರ ದೇವಾಲಯದ ಮುಂದೆ ಎರಡು ಸಿಂಹ ಶಿಲ್ಪಗಳನ್ನು ಕಾಣಬಹುದು. ಇವುಗಳನ್ನು ಕಂಬದ ಪಾದಗಳಾಗಿ ಬಳಸಿರಬಹುದು. ಪ್ರಾಕಾರದ ಮಂಟಪದಲ್ಲಿ ಒಟ್ಟು ೨೪ ಕಂಬಗಳಿದ್ದು ಅದರಲ್ಲಿ ಎರಡು ಸಿಂಹಪಾದ ಕಂಬಗಳನ್ನು ಹೊರತು ಪಡಿಸಿದರೆ ಉಳಿದವುಗಳೆಲ್ಲವೂ ನಾಲ್ಕು, ಎಂಟು, ನಾಲ್ಕು ಮೂಲೆಗಳನ್ನು ಹೊಂದಿರುವ ಕಂಬಗಳಾಗಿವೆ. ಇವು ಸರಳವಾದ ಬೋದಿಗೆಯನ್ನು ಹೊಂದಿವೆ.

ಈ ದೇವಾಲಯದ ನವೀಕರಣಕ್ಕೆ ಮೊದಲು ಕೆಲವು ಶಿಲ್ಪಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು ಮತ್ತೆ ಕೆಲವು ಭಗ್ನಗೊಂಡಿದ್ದವು. ಪ್ರಸ್ತುತ ಪ್ರಾಕಾರದ ಮಂಟಪದಲ್ಲಿ ಪೂರ್ವ ಮತ್ತು ದಕ್ಷಿಣ ದಿಕ್ಕಿನಲ್ಲಿ ಎರಡು ಕಂಬಗಳನ್ನು ಸೇರಿಸಿಕೊಂಡು ಅರ್ಧಗೋಡೆ ಇರುವಂತೆ ಗುಡಿಯನ್ನು ನಿರ್ಮಿಸಲಾಗಿದೆ. ಉತ್ತರ ಭಾಗದ ಬಲಭಾಗದಲ್ಲಿ ನವಗ್ರಹವನ್ನು ಹೊಸದಾಗಿ ಪ್ರತಿಷ್ಠಾಪನೆ ಮಾಡಲಾಗಿದೆ. ಎಡಭಾಗದ ಮೂಲೆಯಲ್ಲಿ ಕಾಲಭೈರವನ ಮೂರ್ತಿಯನ್ನು ಕಾಣಬಹುದು. ಪ್ರಾಕಾರದಲ್ಲಿ ನವರಂಗದ ಮುಂಭಾಗಕ್ಕೆ ಅಂದರೆ ಪೂರ್ವ ದಿಕ್ಕಿನಲ್ಲಿ ಬಾಗಿಲ ಮುಂದೆ ಮೊದಲು ನವರಂಗದಲ್ಲಿದ್ದ ನಂದಿಯನ್ನು ಇರಿಸಲಾಗಿದೆ. ಈ ನಂದಿಯ ಶಿಲ್ಪವು ಸುಂದರವಾಗಿದ್ದು ಗಂಟೆಯ ಮಾಲೆಗಳಿಂದ ಅಲಂಕೃತಗೊಂಡಿದೆ. ನಂದಿಯ ಹಿಂಭಾಗದಲ್ಲಿ ಹೊಸದಾಗಿ ನಿರ್ಮಿಸಿರುವ ಕಂಬವನ್ನು ಕಾಣಬಹುದು. ಇದು ಅಷ್ಟಕೋನದೊಂದಿಗೆ ಮೇಲೇರಿ ಕುಂಭ, ಕಮಲವನ್ನು ಹೊಂದಿದೆ.  ಪ್ರಾಕಾರದಲ್ಲಿನ ಗುಡಿಗಳಲ್ಲಿ ಗಣಪತಿ, ಸೂರ್ಯ, ಚಂದ್ರ, ದುರ್ಗಿ, ಸುಬ್ರಹ್ಮಣ್ಯ ಶಿಲ್ಪಗಳನ್ನು ಕ್ರಮವಾಗಿ ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಪ್ರನಾಳದ ಬಳಿ ಚಂಡಿಕೇಶ್ವರ ಗುಡಿಯನ್ನು ಹೊಸದಾಗಿ ನಿರ್ಮಿಸಲಾಗಿದೆ.

ಒಟ್ಟಾರೆಯಾಗಿ ಈ ದೇವಾಲಯವು ನವೀಕರಣಗೊಂಡಿದ್ದರೂ ತನ್ನ ಮೂಲ ಸ್ವರೂಪವನ್ನು ಕಳೆದುಕೊಳ್ಳದಂತೆ ನಿರ್ಮಿಸಿರುವುದು ಸ್ವಾಗತಾರ್ಹವಾಗಿದೆ.

ಗಂಗವಾರದಲ್ಲಿಯೇ ನೀಲಕಂಠೇಶ್ವರ ದೇವಾಲಯವಿದ್ದು ಇದರ ಒಳಗೆ ಪ್ರಾಚೀನವಾದ ಶಿವಲಿಂಗವನ್ನು ಕಾಣಬಹುದು. ಆದರೆ ಅದು ಪ್ರಸ್ತುತ ಪೂಜೆಗೊಳಪಡುತ್ತಿಲ್ಲ. ಇದೇ ದೇವಾಲಯದ ಹಿಂಭಾಗದಲ್ಲಿ ಒಂದು ಲಿಂಗವಿದ್ದು ಅಷ್ಟ ಮತ್ತು ಚತುಷ್ ಕೋನವನ್ನು ಹೊಂದಿ ಪಾಣಿಪೀಠದ ಮೇಲೆ ನಿಂತಿದೆ ಬಹುಶಃ ಇದು ತಲೆಕೆಳಗಾಗಿರಬಹುದು. ರುದ್ರಭಾಗ ಪೀಠದ ಒಳಭಾಗದಲ್ಲಿರಬಹುದು. ಈ ದೇವಾಲಯದ ದ್ವಾರಬಂಧದಲ್ಲಿ ತ್ರಿಶೂಲ, ಡಮರುಗ, ಗದೆಯೊಂದಿಗೆ ನಿಂತಿರುವ ಕಾಲ, ಮಹಾಕಾಲರನ್ನು ಕಾಣಬಹುದು. ಇದಲ್ಲದೇ ಗುಳ್ಳಪ್ಪನವರ ತೋಟದಲ್ಲಿ ನಾಲ್ಕು ಮೂಲೆ ಲಿಂಗದ ಮಾದರಿಯ ಕಂಬ, ಜಯರಾಮಣ್ಣನವರ ತೋಟದಲ್ಲಿ ಲಿಂಗ, ಗಂಗಮ್ಮನ ದೇವಸ್ಥಾನದ ಬಳಿ ವೀರಗಲ್ಲು ಹಾಗೂ ಲಕ್ಷ್ಮೀ ವಿಗ್ರಹಗಳನ್ನು ಕಾಣಬಹುದಾಗಿದೆ. ದೇವನಹಳ್ಳಿಯ ವೇಣುಗೋಪಾಲ ದೇವಾಲಯದ ದ್ವಾರಪಾಲಕರಂತಿರುವ ೨ ವಿಷ್ಣು ವಿಗ್ರಹಗಳು ಗಂಗವಾರ ದೇವಾಲಯದು ಎಂದು ಹಾಗೇಯೆ ದೇವನಹಳ್ಳಿ ತಾಲ್ಲೂಕು ಕಛೇರಿ ಆವರಣದಲ್ಲಿರುವ ವಿಷ್ಣುಶಿಲ್ಪಗಳು ಸಹ ಗಂಗವಾರದಿಂದ ತಂದುದಾಗಿ ತಿಳಿದು ಬರುತ್ತದೆ.

ಈ ದೇವಾಲಯದ ಗರ್ಭಗುಡಿ, ಅಧಿಷ್ಠಾನ, ಭಿತ್ತಿ ಭಾಗಗಳೆಲ್ಲವನ್ನು ಸಂಪೂರ್ಣವಾಗಿ ತಮಿಳು ಶಾಸನಗಳು ಆವರಿಸಿವೆ. ಕ್ರಿ.ಶ.೧೦೪೬ ರಲ್ಲಿ ರಾಜಾಧಿರಾಜ ದೇವರ ೨೯ ನೇ ಅಧಿಕಾರವಧಿಯಲ್ಲಿ ದೇವಸ್ಥಾನಕ್ಕೆ ದೇವರ ಹಬ್ಬಕ್ಕೆ ಚಾಮುಂಡೇಶ್ವರಿಗೆ ದಾನ ನೀಡಿರುವುದನ್ನು ದೇವಾಲಯದ ಎಡ ಭಾಗದ ಗೋಡೆಯ ಮೇಲೆ[೫೩] ಇದ್ದರೇ, ದೇವಸ್ಥಾನದ ಮುಂದಿರುವ ಕಂಭದ ಮೇಲೆ ರಾಜಾಧಿರಾಜ ದೇವರ ೩೩ನೇ ಆಳ್ವಿಕೆಯಲ್ಲಿ ಸೇನಾಧಿಪತಿ ರಾಜೇಂದ್ರ ಚೋಳ ಬ್ರಹ್ಮಮಾರಯರಿಗೆ[೫೪] ದಾನ ನೀಡಿರುವುದನ್ನು ಹಾಗೇಯೇ ದೇವಸ್ಥಾನದ ಬಾಗಿಲು ಚೌಕಟ್ಟು ಮಾಡಿದವರ ಮಾಹಿತಿಯನ್ನು ಬಾಗಿಲ ಗೋಡೆಯ ಮೇಲೆ[೫೫] ಕಾಣಬಹುದು. ದೇವಸ್ಥಾನದ ಪೂಜಾರಿಯ ಜೀವನಕ್ಕಾಗಿ ದಾನ ನೀಡಿರುವುದನ್ನು ಕ್ರಿ.ಶ.೧೨೬೭ ರ[೫೬] ಗ್ರಾಮದ ಊರಮುಂದಿನ ಕಲ್ಲಿನ ಮೇಲೆ ಕಾಣಬಹುದು.

## ಚೌಡಪ್ಪನಹಳ್ಳಿಯ ತಬ್ಬುಲಿಂಗೇಶ್ವರ ದೇವಾಲಯ

ದೇವನಹಳ್ಳಿಯಿಂದ ೧೭ ಕಿ.ಮೀ ದೂರದಲ್ಲಿನ ಗಂಗವಾರ ಮತ್ತು ಚೌಡಪ್ಪನಹಳ್ಳಿ ನಡುವೆ ತಬ್ಲಿಂಗೇಶ್ವರ ದೇವಾಲಯ **(ಚಿತ್ರ ಸಂಖ್ಯೆ-೬೭)** ಕಂಡು ಬರುತ್ತದೆ. ಈ ದೇವಾಲಯವನ್ನು ಇತ್ತೀಚೆಗೆ ಹೊಸದಾಗಿ ನಿರ್ಮಾಣ ಮಾಡಲಾಗಿದೆ. ಇಲ್ಲಿ ಒಂಬತ್ತು ಲಿಂಗಗಳು ಕಂಡು ಬರುತ್ತವೆ. ಈ ಲಿಂಗಗಳು ಎಲ್ಲವೂ ಪ್ರಾಚೀನವಾದವುಗಳಾಗಿವೆ. ಇಲ್ಲಿನ ಪ್ರಧಾನ ದೇವರು ತಬ್ಲಿಂಗೇಶ್ವರ ಅಥವಾ ತಬ್ಬುಲಿಂಗೇಶ್ವರ ಮೊದಲು ಭಕ್ತರೆಲ್ಲರೂ ತಮ್ಮ ಎರಡು ಕೈಗಳಿಂದ ಇದನ್ನು ತಮ್ಮ ಕಷ್ಟ ಪರಿಹಾರಕ್ಕೆ ತಬ್ಬಿಕೊಳ್ಳುತ್ತಿದ್ದರಂತೆ. ಆದ್ದರಿಂದ ಈ ಲಿಂಗಕ್ಕೆ ತಬ್ಬುಲಿಂಗ ಎಂಬ ಹೆಸರು ಬಂದಿದೆ. ಇದರ ಸುಖನಾಸಿಯ ದ್ವಾರಬಂಧದಲ್ಲಿ ವಿಜಯನಗರೋತ್ತರ ಕಾಲದ ದ್ವಾರಪಾಲಕ ಶಿಲ್ಪಗಳನ್ನು ಕಾಣಬಹುದು. ನವರಂಗದಲ್ಲಿ ನಂದಿಯ ಸುಂದರ ವಿಗ್ರಹವನ್ನು ಕಾಣಬಹುದು. ಉಳಿದ ಎಂಟು ಲಿಂಗಗಳೆಂದರೆ ಪ್ರದಕ್ಷಿಣಾ ಕ್ರಮವಾಗಿ ಸುಂದರೇಶ್ವರ, ಪಶುಪತೇಶ್ವರ, ಮಲ್ಲಿಕಾರ್ಜುನ, ಪಾತಾಳೇಶ್ವರ, ವೈದ್ಯನಾಥೇಶ್ವರ, ಗಂಗಾಧರೇಶ್ವರ, ಕಾಶಿವಿಶ್ವನಾಥೇಶ್ವರ, ಮಂಜುನಾಥೇಶ್ವರ ಎನ್ನುವ ಲಿಂಗಗಳು ಆಕಾರ ಮತ್ತು ಶೈಲಿಯಲ್ಲಿ ವಿಭಿನ್ನವಾಗಿರುವುದನ್ನು ಗುರುತಿಸಬಹುದು. ಮಲ್ಲಿಕಾರ್ಜುನ ಲಿಂಗವು ದುಂಡಾಗಿರದೆ ಹಲವು ಕೋನಗಳನ್ನು ಹೊಂದಿರುವುದರಿಂದ ಇದು ಧಾರಾಲಿಂಗ ಲಕ್ಷಣವನ್ನು ಹೊಂದಿದೆ. ಧಾರಾಲಿಂಗದ ಲಕ್ಷಣವೆಂದರೆ ಮೂಲೆಗಳನ್ನು ಹೊಂದಿರುವ ಪಟ್ಟಿಕೆಗಳನ್ನು ಹೊಂದಿರುವುದು[೫೭]. ಇದು ಸುಮಾರು ಹದಿನಾರು ಪಟ್ಟಿಕೆಗಳನ್ನು ಹೊಂದಿದೆ. ಉಳಿದ

[೫೩] ಎ.ಕ-೯, ದೇ.ತಾ.೭೫, ಕ್ರಿ.ಶ.೧೦೪೬, ತಮಿಳು, ಗಂಗವಾರ.
[೫೪] ಎ.ಕ-೯, ದೇ.ತಾ.೭೬, ಕ್ರಿ.ಸ.೧೦೫೦, ತಮಿಳು, ಗಂಗವಾರ.
[೫೫] ಎ.ಕ-೯, ದೇ.ತಾ.೭೭.ಎ, ಕ್ರಿ.ಶ.೧೧೦೦, ತಮಿಳು, ಗಂಗವಾರ.
[೫೬] ಎ.ಕ-೯, ದೇ.ತಾ.೭೯, ಕ್ರಿ.ಶ.೧೨೬೭, ತಮಿಳು, ಗಂಗವಾರ.
[೫೭] ಜಿ.ಜ್ಞಾನಾನಂದ :- ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ, ಪು.ಸಂ-೧೭೩.

ಶಿವಲಿಂಗಗಳು ಶಿರೋವರ್ತಿನ ಕ್ರಮವನ್ನು ಹೊಂದಿವೆ. ಲಿಂಗಗಳನ್ನು ಹೊರತುಪಡಿಸಿದರೆ ಪ್ರಾಚೀನವಾದ ಇತರೆ ಪಳೆಯುಳಿಕೆಗಳು ಹಾಗೂ ಶಿಲ್ಪಗಳು ಇಲ್ಲಿ ಕಂಡು ಬರುವುದಿಲ್ಲ.

## ಚಿಕ್ಕನಹಳ್ಳಿ(ಬೇಚಿರಾಖ್ ಮಾರೇನಹಳ್ಳಿ)ಯ ಭೀಮಲಿಂಗೇಶ್ವರ ದೇವಾಲಯ

ಹೊಸಕೋಟೆಯಿಂದ ೧೬ ಕಿ.ಮೀ ದೂರದಲ್ಲಿ ನಂದಿಗುಡಿ ಹೋಬಳಿಯಲ್ಲಿ ಬೇಚಿರಾಕ್ ಮಾರೇನಹಳ್ಳಿ ಎಂದು ಕರೆಯಲ್ಪಡುತ್ತಿದ್ದ ಸ್ಥಳದಲ್ಲಿದ್ದ ಭೀಮಲಿಂಗೇಶ್ವರ ದೇವಾಲಯವು **(ಚಿತ್ರ ಸಂಖ್ಯೆ-೬೮)** ಈಗ ಚಿಕ್ಕನಹಳ್ಳಿ ಗ್ರಾಮಕ್ಕೆ ಸೇರುತ್ತದೆ. ಮಾರೇನಹಳ್ಳಿ ಗ್ರಾಮವು ಈಗ ಇಲ್ಲ. ಪ್ರಸ್ತುತ ಚಿಕ್ಕನಹಳ್ಳಿಯ ಗ್ರಾಮದಲ್ಲಿ ಶ್ರೀಪುರುಷನ ಆಳ್ವಿಕೆಯ ಸಂಧರ್ಭದಲ್ಲಿ ಹೊರಡಿಸಿರುವ ಐದು ಶಾಸನಗಳು ಕಂಡು ಬರುತ್ತವೆ. ಇದರಲ್ಲಿ ಕ್ರಿ.ಶ.೭೫೦ ರ ಒಂದು ಶಾಸನದಲ್ಲಿ ಈ ಭೀಮಲಿಂಗೇಶ್ವರ ದೇವರನ್ನು ಉಗ್ರ ರಾಮೇಶ್ವರ ಎಂದು ಕರೆದು ಸುಮಾರು ೧೨ ಗ್ರಾಮಗಳನ್ನು ದಾನ ನೀಡಿರುವುದನ್ನು ಉಲ್ಲೇಖಿಸಲಾಗಿದೆ[೫೮]. ಕ್ರಿ.ಶ.೧೦೭೫ ರ ತಮಿಳು ಶಾಸನದಲ್ಲಿ ಕುಲೋತ್ತುಂಗ ಚೋಳ ದೇವರ ೬ನೇ ವರ್ಷದ ಆಳ್ವಿಕೆ ಅವಧಿಯಲ್ಲಿ ನಿಗರಿಲಿ ಚೋಳಮಂಡಲದ ಕೈವಾರನಾಡಿನ ನಿಲತ್ತೂರ್ ಪೆರುಬಳಪುರ ಸೋಮರೈಸನ್, ನಾಗಮರೈಸನ್, ಗಂಗೈಕೊಂಡ ಅರಸನ್ ಮತ್ತು ಇತರರು ಸೇರಿ ಶ್ರೀ ರಾಮೇಶ್ವರ ಒಡೆಯ ಮಹಾದೇವರಿಗೆ ಹಾಗೂ ಶಿವ ಬ್ರಾಹ್ಮಣನಿಗೆ ದೊಡ್ಡ ಕೆರೆಯ ಕೆಳಗಿನ ಭೂಮಿಯನ್ನು ದಾನ ನೀಡಿದ್ದಾರೆ[೫೯]. ಶಾಸನೋಕ್ತವಾಗಿರುವ ರಾಮೇಶ್ವರ ಒಡೆಯ ಪ್ರಸ್ತುತ ಭೀಮೇಶ್ವರನಾಗಿ ಬದಲಾದರೂ ದೇವಾಲಯ ಮೂಲ ರಚನೆಯಲ್ಲಿದೆ.

ಪ್ರಸ್ತುತ ಭೀಮೇಶ್ವರ ದೇವಾಲಯವು ಎಳಚಹಳ್ಳಿ ಕೆರೆಯ ಉತ್ತರಕ್ಕೆ ಕೋಡಿ ಬಳಿ ಕಂಡು ಬರುತ್ತದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಚಿಕ್ಕ ಗುಡಿಯಂತೆ ಗರ್ಭಗೃಹ, ನವರಂಗ ಮತ್ತು ನಂದಿ ಮಂಟಪವನ್ನು ಹೊಂದಿದೆ. ತ್ರಿಪಟ್ಟ ಕುಮುದವುಳ್ಳ ಪಾಣಿಪೀಠದ ಮೇಲೆ ಸುಮಾರು ೨ ೧/೨ ಅಡಿಯಷ್ಟು ಎತ್ತರ ಇರುವ ಲಿಂಗವನ್ನು ವರ್ಷಗಳ ಹಿಂದೆ ನಿಧಿಗಳ್ಳರು ಲಿಂಗವನ್ನು ಕಿತ್ತು ಹೊರಗೆ ಬಿಸಾಡಿ ಹೋಗಿದ್ದರಂತೆ. ಮತ್ತೆ ಗ್ರಾಮಸ್ಥರು ಅದೇ ಲಿಂಗವನ್ನು ಪ್ರತಿಷ್ಠಾಪನೆ ಮಾಡಿ ಒಳಭಾಗವನ್ನು ಗ್ರಾನೈಟ್ ಶಿಲೆಯಿಂದ ಸಂಪೂರ್ಣವಾಗಿ ನವೀಕರಣ ಮಾಡಿದ್ದಾರೆ.

ಗರ್ಭಗುಡಿಯ ಬಾಗಿಲ ಬಲಭಾಗದಲ್ಲಿ ಚತುರ್ಭುಜಗಳನ್ನು ಹೊಂದಿ ಆಸೀನನಾಗಿರುವ ಗಣಪತಿ ಮೂರ್ತಿಯನ್ನು ಕಾಣ ಬಹುದು. ಈ ಶಿಲ್ಪವು ಪ್ರತ್ಯೇಕ ಮೂರ್ತಿ ಶಿಲ್ಪವಾಗಿರದೆ ಒಂದು ಕಲ್ಲು ಚಪ್ಪಡಿಯಲ್ಲಿ ಕೆತ್ತಿರುವ ಉಬ್ಬುಶಿಲ್ಪವಾಗಿದೆ. ನವರಂಗ ಅಥವಾ ಗರ್ಭಗುಡಿಯ ಮುಂಭಾಗದ ಅಂಕಣದಲ್ಲಿ ಯಾವುದೇ ಕಂಬಗಳಾಗಲಿ, ವಿತಾನಗಳಾಗಲಿ ಕಂಡು ಬರುವುದಿಲ್ಲ.

---

[೫೮] ಎ.ಕ-೯, ಹೊ.ತಾ.೮೨, ಕ್ರಿ.ಶ.೭೫೦, ಚಿಕ್ಕನಹಳ್ಳಿ.
[೫೯] ಎ.ಕ-೯, ಹೊ.ತಾ.೧೦೧, ಕ್ರಿ.ಶ.೧೦೭೫, ತಮಿಳು, ಬೇಚಿರಾಖ್ ಮಾರೇನಹಳ್ಳಿ.

ದೇವಾಲಯದ ಪ್ರವೇಶ ದ್ವಾರದಲ್ಲಿ ದೊಡ್ಡದಾದ ಸೋಪಾನದಲ್ಲಿ ಹಸ್ತಿಹಸ್ತವನ್ನು ಕಾಣಬಹುದಾಗಿದೆ. ಆದರೆ ಸೋಪಾನಗಳು ಇಲ್ಲ. ಈ ದೇವಾಲಯದ ಹೊರಭಾಗದ ಲಕ್ಷಣಗಳನ್ನು ಹೇಳುವುದಾದರೆ ಈ ದೇವಾಲಯ ಒಂದು ತೇರಿನ ಮಂಟಪದ ರೀತಿ ಕಂಡು ಬರುತ್ತದೆ. ಇದು ಯಾವುದೇ ಅಧಿಷ್ಠಾನವಾಗಲಿ, ಭಿತ್ತಿ ಭಾಗವನ್ನಾಗಲಿ ಹೊಂದಿಲ್ಲ. ಕೇವಲ ಚಪ್ಪಡಿ ಕಲ್ಲುಗಳನ್ನು ಸೇರಿಸಿ ನಿರ್ಮಿಸಲಾಗಿದೆ. ಈ ರೀತಿಯ ಗುಡಿಗಳನ್ನು ಬಿಲ್ಲನಕೋಟೆ, ಡಿ ಪಾಳ್ಯ ಮತ್ತು ಕಿತ್ತನಲ್ಲಿಯಲ್ಲಿ ಕಾಣಬಹುದು. ಇದು ಶಿಖರವನ್ನು ಸಹ ಹೊಂದಿಲ್ಲ.

ದೇವಾಲಯದ ಮುಂಭಾಗದಲ್ಲಿ ನಾಲ್ಕು ಕಂಬಗಳನ್ನು ನಿಲ್ಲಿಸಿ ತೆರೆದ ಮಂಟಪದಂತಹ ರಚನೆಯನ್ನು ಕಾಣಬಹುದು ಇದರಲ್ಲಿ ಒಂದು ಕಂಬ ಮಾತ್ರ ಚೌಕ, ಅಷ್ಟ, ಚೌಕ ಕೋನವುಳ್ಳದಾಗಿದೆ. ಉಳಿದವು ಕಂಬದ ಯಾವುದೇ ಲಕ್ಷಣವನ್ನು ಹೊಂದಿರದೆ ಕಲ್ಲು ದಿಮ್ಮಿಯಂತಿವೆ. ಇಲ್ಲಿ ಗಂಟೆಯ ಅಲಂಕರಣೆಯೊಂದಿಗೆ ಪಶ್ಚಿಮಾಭಿಮುಖವಾಗಿ ಕುಳಿತಿರುವ ನಂದಿಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ

ದೇವಾಲಯದ ಬಲಭಾಗಕ್ಕೆ ತೆರೆದ ಅಂಗಳದಲ್ಲಿ ಎರಡು ಸಮ ಭಂಗಿಯಲ್ಲಿ ನಿಂತಿರುವ ಚತುರ್ಭುಜಗಳನ್ನು ಹೊಂದಿರುವ ಮೂರ್ತಿ ಶಿಲ್ಪಗಳಲ್ಲಿ ಒಂದು ವಿಷ್ಣು ಶಿಲ್ಪವಾಗಿದ್ದು, ಮತ್ತೊಂದನ್ನು ಗುರುತಿಸಲಾಗುವುದಿಲ್ಲ. ದೇವಾಲಯದ ಸುತ್ತಮುತ್ತಲು ಹಲವು ಶಾಸನಗಳು ಹಾಗೂ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಊರಿನ ಹೊರಗೆ ದೇವಾಲಯ ಇರುವುದರಿಂದ ರಕ್ಷಣೆಯ ಕೊರತೆ ಇದೆ.

## ಕಮ್ಮಸಂದ್ರದ ಸೋಮೇಶ್ವರ ದೇವಾಲಯ

ಹೊಸಕೋಟೆಯಿಂದ ಸುಮಾರು ೧೦ ಕಿ.ಮೀ ದೂರದಲ್ಲಿರುವ ಸೂಲಿಬೆಲೆ ಹೋಬಳಿಯ ಕಮ್ಮಸಂದ್ರ ಗ್ರಾಮದ ಊರ ಹೊರಗೆ ೧೦ ನೇ ಶತಮಾನಕ್ಕೆ ಸೇರಿದ ಪೂರ್ವಾಭಿಮುಖವಾದ ಸೋಮೇಶ್ವರ ದೇವಾಲಯವನ್ನು **(ಚಿತ್ರ ಸಂಖ್ಯೆ-೬೯)** ಕಾಣಬಹುದು ಈ ದೇವಾಲಯವು ಗರ್ಭಗುಡಿ, ತೆರೆದ ಅಂತರಾಳ, ನವರಂಗ, ಮುಖಮಂಟಪ ನಂತರ ಹನ್ನೆರಡು ಕಂಬಗಳಿಂದ ಮಾಡಿದ ತೆರೆದ ಅಂಗಳವನ್ನು ಹೊಂದಿರುವುದನ್ನು ನೋಡಬಹುದಾಗಿದೆ.

ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಶಿವಲಿಂಗವು ಶಿರೋವರ್ತನ ಕ್ರಮದಲ್ಲಿದೆ. ಅಂದರೆ ಪೂಜಾಭಾಗ ಗುಂಡಾಗಿ, ಶಿರೋಭಾಗವು ಸಮತಟ್ಟಾಗಿ ಅದರ ಸುತ್ತಲಿನ ಅಂಚನ್ನು ನಿರ್ದಿಷ್ಟವಾದ ಅಳತೆಯ ಪ್ರಕಾರ ಗುಂಡಾಗಿ ಮಾಡಲಾಗಿರುತ್ತದೆ[೬೦]. ಈ

[೬೦] ಜಿ.ಜ್ಞಾನಾನಂದ :- ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ, ಪು.ಸಂ-೧೮೩.

ಗರ್ಭಗುಡಿಯು ಯಾವುದೇ ದ್ವಾರಬಂಧದ ಅಲಂಕರಣೆಯನ್ನು ಹೊಂದಿಲ್ಲ. ಗರ್ಭಗುಡಿಯ ಮುಂಭಾಗದಲ್ಲಿರುವ ಅಂತರಾಳವು ತೆರೆದಿದ್ದು, ನಂದಿಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ.

ನವರಂಗದಲ್ಲಿನ ನಾಲ್ಕು ಕಂಬಗಳು ಚೌಕ, ಅಷ್ಟ, ಚೌಕ ಕೋನವುಳ್ಳ ಸರಳವಾದ ಕಂಬಗಳಾಗಿವೆ ಬೋದಿಗೆಯು ಸಹ ಸರಳವಾಗಿದೆ. ಇಲ್ಲಿ ಯಾವುದೇ ಅಲಂಕೃತ ಭುವನೇಶ್ವರಿ ಕಂಡು ಬರುವುದಿಲ್ಲ. ಬದಲಿಗೆ ವೃತ್ತಾಕಾರದ ಕಮಲ ಪುಷ್ಪದ ರಚನೆಯನ್ನು ಕಾಣಬಹುದು ಗಣಪತಿ, ಆಸೀನ ಪುರುಷ ಶಿಲ್ಪ ಹಾಗೂ ಚತುರ್ಭುಜಗಳನ್ನು ಹೊಂದಿ ಸಮಭಂಗಿಯಲ್ಲಿ ನಿಂತಿರುವ ಶಿಲ್ಪಗಳನ್ನು ಕಾಣಬಹುದು. ಚಾಮರ ಧಾರಿಣಿಯರ ಸೇವೆಯನ್ನು ಅನುಭವಿಸುತ್ತಾ ಸ್ಥಾನಕ ಸಮಭಂಗಿಯಲ್ಲಿ ನಿಂತಿರುವ ಸೂರ್ಯನ ವಿಗ್ರಹವು ಸುಂದರವಾಗಿದ್ದು, ಎರಡೂ ಕೈಗಳಲ್ಲಿ ಕಮಲಪುಷ್ಪವನ್ನು ಹಿಡಿದಿರುವ ಸೂರ್ಯನು ಕಿರೀಟದೊಂದಿಗೆ ಹಲವು ಆಭರಣಗಳು ಹಾಗೂ ವಸ್ತ್ರದೊಂದಿಗೆ ಅಲಂಕೃತಗೊಂಡಿದ್ದಾನೆ.

ಹಸ್ತಿಹಸ್ತ ಮಾದರಿಯ ಸೋಪಾನವಿದ್ದು, ಅದರ ಬಹುಭಾಗ ಭೂಮಿಯಲ್ಲಿ ಮುಚ್ಚಿ ಹೋಗಿದೆ. ಸೋಪಾನಗಳು ಸಹ ಕಂಡು ಬರುವುದಿಲ್ಲ. ಪ್ರಸ್ತುತ ದೇವಾಲಯವು ಜೀರ್ಣೋದ್ಧಾರಗೊಂಡಿದ್ದು, ಜೀರ್ಣೋದ್ಧಾರ ಮಾಡುವ ಸಂದರ್ಭದಲ್ಲಿ ಅಧಿಕ ಮಣ್ಣನ್ನು ದೇವಾಲಯದ ಬುಡಕ್ಕೆ ಹಾಕಿರುವುದರಿಂದ ಅಧಿಷ್ಠಾನದ ಭಾಗವು ಸಂಪೂರ್ಣವಾಗಿ ಮುಚ್ಚಿ ಹೋಗಿದೆ. ಈ ಮೊದಲು ದೇವಾಲಯವು ಪಾದಬಂಧ ಮಾದರಿಯ ಅಧಿಷ್ಠಾನವನ್ನು ಹೊಂದಿತ್ತು ಎಂದು ಹೇಳಲಾಗಿದೆ[೬೧]. ಭಿತ್ತಿಯು ಸಹ ಸರಳವಾಗಿದ್ದು ಅರೆಗಂಬಗಳನ್ನು ಹೊಂದಿದೆ. ದೇವಕೋಷ್ಠಕಗಳು ಹಾಗೂ ಜಾಲಾಂಧ್ರಗಳು ಕಂಡು ಬರುವುದಿಲ್ಲ. ಆದರೆ ಒಂದು ಚೌಕಾಕಾರದ ಗೂಡಿನ ರೀತಿಯ ರಚನೆಯನ್ನು ಕಾಣಬಹುದು. ಕಪೋತವು ಸರಳವಾಗಿದ್ದು ವೃತ್ತಾಕಾರವಾಗಿ ಕಂಡು ಬರುವಂತಹ ನಾಸಿಗಳನ್ನು ಹೊಂದಿದೆ ಪ್ರನಾಳವು ತುಂಬಾ ಸರಳವಾಗಿದೆ.

ಗರ್ಭಗೃಹ ಏಕತಲಾ ಶಿಖರವನ್ನು ಹೊಂದಿದೆ ಪೂರ್ವಕ್ಕೆ ಮುಖ ಮಾಡಿರುವ ಎರಡು ನಂದಿಯನ್ನು ಕಾಣಬಹುದು. ನವೀಕರಣಕ್ಕೆ ಪೂರ್ವದಲ್ಲಿ ಗಂಗವಾರದ ಸೋಮೇಶ್ವರ ದೇವಾಲಯದ ಶಿಖರವನ್ನು ಇದು ಹೋಲುತ್ತಿತ್ತು. ಈ ಶಿಖರದ ಸ್ತೂಪಿಯು ಚೌಕಾಕಾರವಾಗಿದ್ದು, ಸ್ತೂಪಿಯು ಕರ್ಣಗಳ ಜೊತೆಗೆ ಮೇಲ್ಭಾಗದಲ್ಲಿ ಸಿಂಹದ ಮುಖವನ್ನು ಸಹ ಹೊಂದಿದೆ. ಅದರಲ್ಲಿ ಒಂದು ಅಪೂರ್ಣವಾಗಿದೆ. ಸ್ತೂಪಿಯ ಮೇಲ್ಭಾಗದಲ್ಲಿ ಪದ್ಮದ ರಚನೆಯನ್ನು, ಅದರ ಮೇಲೆ ಕಳಸವಿದೆ. ಪ್ರಸ್ತುತ ಈ ದೇವಾಲಯವನ್ನು ಬಹಳ ವ್ಯವಸ್ಥಿತವಾಗಿ ನಿರ್ವಹಣೆ ಮಾಡಿಕೊಂಡು ಬರಲಾಗುತ್ತಿದೆ.

[೬೧] ಡಾ. ದೇವರ ಕೊಂಡಾ ರೆಡ್ಡಿ :- ತಲಕಾಡಿನ ಗಂಗರ ದೇವಾಲಯಗಳು- ಒಂದು ಅಧ್ಯಯನ, ಪು.ಸಂ-೧೩೮.

## ಕೊಂಡ್ರಹಳ್ಳಿಯ ಧಮೇಶ್ವರ ದೇವಾಲಯ

ಹೊಸಕೋಟೆಯಿಂದ ೨೩ ಕಿ.ಮೀ ದೂರದಲ್ಲಿ, ನಂದಗುಡಿ ಹೋಬಳಿಯಲ್ಲಿರುವ ಕೊಂಡ್ರಹಳ್ಳಿ ಗ್ರಾಮದಲ್ಲಿರುವ ಧರ್ಮೇಶ್ವರ ಎಂಬ **(ಚಿತ್ರ ಸಂಖ್ಯೆ-೭೦)** ಪ್ರಾಚೀನವಾದ ದೇವಾಲಯದ ಹಿಂಭಾಗದಲ್ಲಿ ಒಂದು ಗುಡಿ ಇದ್ದು ಒಂದು ಗರ್ಭಗೃಹ ಮತ್ತು ತೆರೆದ ಅಂಕಣವನ್ನು ಹೊಂದಿದೆ. ಗರ್ಭಗುಡಿಯ ಮುಂಭಾಗದಲ್ಲಿ ಗಂಗರ ಕಾಲದ ಎರಡು ರುದ್ರಕಾಂತ ಕಂಬಗಳನ್ನು ಕಾಣಬಹುದಾಗಿದೆ. ಗರ್ಭಗುಡಿಯಲ್ಲಿರುವ ಲಿಂಗ ಪ್ರಾಚೀನವಾದರೂ ಅದರ ಪಾಣಿಪೀಠ ತೀರಾ ಹೊಸದಾಗಿ ನಿರ್ಮಾಣವಾದುದಾಗಿದೆ. ಈ ಮೊದಲು ಈ ಲಿಂಗವು ಬೇರೆ ಕಡೆ ಭೂಮಿಯಲ್ಲಿ ದೊರೆತದ್ದನ್ನು ತಂದು ಇಲ್ಲಿ ಪ್ರತಿಷ್ಠಾಪನೆ ಮಾಡಲಾಗಿದಂತೆ. ತೆರೆದ ಅಂಕಣದಲ್ಲಿರುವ ನಂದಿಯನ್ನು ಸಹ ಹೊಸದಾಗಿ ಪ್ರತಿಷ್ಠಾಪನೆ ಮಾಡಲಾಗಿದೆ. ಈ ಗುಡಿಯ ಗರ್ಭಗುಡಿಯು ನಕ್ಷತ್ರಾಕಾರದ ವಿತಾನವನ್ನು ಹೊಂದಿದೆ. ಮಧ್ಯದಲ್ಲಿ ಕಮಲದ ರಚನೆಯನ್ನು ಕಾಣಬಹುದು. ಇದು ಚಿಕ್ಕ ಗುಡಿಯಾಗಿರುವುದರಿಂದ ಯಾವುದೇ ಅಧಿಷ್ಠಾನವಾಗಲಿ, ಭಿತ್ತಿಯಲ್ಲಿ ಅರೆಗಂಬ, ಕೋಷ್ಠಕಗಳಾಗಲಿ ಕಂಡು ಬರುವುದಿಲ್ಲ.

ಗಂಗರು ನಿರ್ಮಿಸಿದ ದೇವಾಲಯಕ್ಕೆ ಚೋಳರು ಜೀರ್ಣೋದ್ಧಾರ ಮಾಡಿರಬೇಕು. ದೇವಾಲಯದಲ್ಲಿನ ತಮಿಳು ಶಾಸನದಲ್ಲಿ ರಾಜ ಮಹೇಂದ್ರ ದೇವರ ೨ನೇ ವರ್ಷದ ಆಳ್ವಿಕೆಯ ಅವಧಿಯಲ್ಲಿ ಇರುಗಿಸ್ವರರೆಂಬುವ ಸೋಮೇಶ್ವರ ಒಡೆಯ ದೇವಸ್ಥಾನಕ್ಕೆ ತಿರುವಿಯಲೂರ್ ಪರಂಜ್ಯೋತಿ ಎಂಬುವ ಆಗೋರ ಸಿವನ್‌ಗೆ ದೇವಸ್ಥಾನದ ನಿರ್ವಹಣೆ, ಕೆಲಸದ ವೆಚ್ಚಗಳು, ಅರ್ಚನೆ, ಭೋಗ, ಸ್ಥಾನ ಇತ್ಯಾದಿಗಾಗಿ ದಾನ ನೀಡಿದನು[೬೨]. ಈ ಶಾಸನದ ಪಕ್ಕದಲ್ಲಿ ಮಹೇಂದ್ರ ಮತ್ತು ಅವನ ಪತ್ನಿಯು ಕೈಮುಗಿಯುತ್ತಿರುವ ಉಬ್ಬು ಶಿಲ್ಪದ ಫಲಕವಿದೆ. ದೇವಾಲಯದ ಬಾಗಿಲು ಹಾಸು ಬಂಡೆಯ ಮೇಲಿನ ಶಾಸನದಲ್ಲಿ ದಾನ ಕೊಟ್ಟವರ, ಪಡೆದವರ ವಿವರವಿದೆ. ಯಾವ ಕಾರಣಕ್ಕೆ ಕೊಟ್ಟರು ಎಂಬುದು ಕಾಣಿಸುತ್ತಿಲ್ಲ. ವೈಶಾಕ ಶು ೩ ಲು ಧರ್ಮೇಶ್ವರರವರ ಸ್ಥಾನಿಕ ಹರಿಯಪ್ಪ ಬೈಣಜೀಯ ವಂಶೀಯರಾದ ಹಿರಿಯಣನು ಕಪಯ್ಯ ಪುರುಷನತನಿಗೆ ಧಾರಾ ಪೂರ್ವಕವಾಗಿ ಕೊಟ್ಟನು[೬೩]. ೧೧ನೇ ಆತಮಾನದಲ್ಲಿ ಇರುಗಿಸ್ವರರೆಂಬುವ ಸೋಮೇಶ್ವರ ಒಡೆಯನನ್ನು ೧೬ನೇ ಶತಮಾನದ ಕಾಲಕ್ಕೆ ಧಮೇಶ್ವರನಾಗಿ ಬದಲಾಯಿಸಿರುವುದನ್ನು ಮೇಲಿನ ಎರಡು ಶಾಸನಾಧರಗಳಿಂದ ತಿಳಿಯಬಹುದು.

---

[೬೨] ಎ.ಕ-೯, ಹೊ.ತಾ.೩೬, ಕ್ರಿ.ಶ.೧೦೬೫, ತಮಿಳು, ಹೊಸಹಳ್ಳಿ.

[೬೩] ಎ.ಕ-೯, ಹೊ.ತಾ.೩೫, ಕ್ರಿ.ಶ.೧೫೬೨, ಕೊಂಡ್ರಹಳ್ಳಿ.

## ಮುಗಬಾಳದ ವೀರಭದ್ರ ದೇವಾಲಯ

ಹೊಸಕೋಟೆಯಿಂದ ಸುಮಾರು ೧೨ ಕಿ.ಮೀ ದೂರದಲ್ಲಿನ ಕೋಲಾರ ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಮುಗಬಾಳ ಗ್ರಾಮದಲ್ಲಿ ಶಾಸನೋಕ್ತವಾದ ವೀರಭದ್ರ ದೇವಾಲಯವು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದ್ದರೇ, ಕೆರೆ ಕೋಡಿ ಬಳಿಯಿರುವ ಸುಂದರವಾದ ಸೋಮೇಶ್ವರ **(ಚಿತ್ರ ಸಂಖ್ಯೆ-೭೧)** ದೇವಾಲಯವನ್ನು ಚೋಳರು ನಿರ್ಮಿಸಿಯಾದರು ಗಂಗರ ದೇವಾಲಯಗಳಲ್ಲಿನ ಬಹುತೇಕ ಲಕ್ಷಣವನ್ನು ಕಾಣಬಹುದು. ಗರ್ಭಗುಡಿ, ತೆರೆದ ಅಂತರಾಳ, ನವರಂಗವನ್ನು ಹೊಂದಿರುವ ದೇವಾಲಯವು ಪೂರ್ವದ ಕಡೆಗೆ ಬಾಗಿಲನ್ನು ಹೊಂದಿರದೆ ದಕ್ಷಿಣದ ಕಡೆಗೆ ಬಾಗಿಲನ್ನು ಹೊಂದಿರುವುದನ್ನು ಕಾಣಬಹುದು. ಆದರೆ ಗರ್ಭಗುಡಿ, ಅಂತರಾಳ ಪೂರ್ವ ದಿಕ್ಕಿನಲ್ಲಿದೆ. ನವರಂಗದಲ್ಲಿನ ಕಂಬಗಳು ಚತುರಸ್ರಾಕಾರವಾಗಿದ್ದು, ಉಬ್ಬು ಶಿಲ್ಪಗಳಿಂದ ಕೂಡಿದೆ. ಪೀಠದಲ್ಲಿ ಸಿಂಹಗಳ ಉಬ್ಬು ಶಿಲ್ಪಗಳಿವೆ. ಅಂತರಾಳದ ದ್ವಾರವು ಅಲಂಕೃತವಾಗಿದ್ದು, ಬ್ರಹ್ಮಕಾಂತ ಕಂಬಗಳ ಮೇಲೆ ಕಪೋತ, ಶಾಲಾ, ಶಿಖರವಿರುವುದನ್ನು ಕಾಣಬಹುದು.

ಪಾದಬಂಧ ಅಧಿಷ್ಠಾನವನ್ನು ಹೊಂದಿರುವ ಈ ದೇವಾಲಯವು ಪಾದಬಂಧದಲ್ಲಿ ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ ಮತ್ತು ಮಹಾಪಟ್ಟಿ ಹೊಂದಿದೆ. ಭಿತ್ತಿಯು ಅರೆಗಂಬಗಳು, ಶಾಲಾ ಶಿಖರವಿರುವ ದೇವಕೋಷ್ಠಕಗಳು, ಭಿತ್ತಿ ಶಿಲ್ಪಗಳನ್ನು ಹೊಂದಿದೆ. ವಲಭಿಯು ಸರಳವಾಗಿದೆ. ಕಪೋತದಲ್ಲಿ ನಾಸಿಯ ಅಲಂಕರಣೆಯಿದೆ. ವೇದಿಯಲ್ಲಿ ವ್ಯಾಳಗಳ ಸಾಲುಗಳನ್ನು ಕಾಣಬಹುದು. ಮಣ್ಣೆಯ ಅಕ್ಕತಂಗಿ ಗುಡಿಯ ಅಧಿಷ್ಠಾನದಲ್ಲಿ ಬರುವ ವ್ಯಾಳಗಳ ಅಲಂಕರಣೆಯಂತೆ ಇರುವುದು ವಿಶೇಷವಾಗಿದೆ. ದೇವಾಲಯದ ಮುಂಭಾಗದಲ್ಲಿರುವ ಕಂಬದ ಪಾದದಲ್ಲಿ ನೃತ್ಯ ಭಂಗಿಯಲ್ಲಿರುವ ಕುಬ್ಜರ ಶಿಲ್ಪಗಳನ್ನು ಕಾಣಬಹುದು.

ಕ್ರಿ.ಶ.೧೩೩೪ ರಲ್ಲಿ ದೇವಸ್ಥಾನದ ಭಾಗಗಳಿಗೆ ತೆರಿಗೆ ವಿನಾಯಿತಿ ನೀಡಿ, ದೇವರ ಪೂಜೆಗೆ ಅಗತ್ಯವಿರುವ ಅಕ್ಕಿಯನ್ನು ಅರ್ಧ ಬೆಲೆಗೆ, ದಿನಕೆರಡು ಬಾರಿ ಹೂವಿನಹಾರ, ಅಭಿಷೇಕ, ವಾದ್ಯಗಳ ಇನ್ನಿತರ ಅಗತ್ಯ ವಸ್ತುಗಳನ್ನು ಪೂಜೆಯ ಸಮಯಕ್ಕೆ ನೀಡಬೇಕೆಂದು ಹಾಗೂ ೪ ಹಳ್ಳಿಗಳಲ್ಲಿ ಕುದುರೆಗಳನ್ನು ಕೊಳ್ಳುವ ಮತ್ತು ಮಾರುವ ಹಳ್ಳಿಗಳರು ಒಂದು ಪಣಂ ಕಟ್ಟಬೇಕಿತ್ತು. ದೇವಸ್ಥಾನದ ಭಾಗದ ಮೇಲೆ ಹಿಡಿತವನ್ನು (ನಿರ್ವಹಣೆಗಾಗಿ) ಕಶ್ಯಪ ಗೋತ್ರದ ಬೋದಯನ ಸೂತ್ರದ ಮಾರಪ್ಪನು ಮತ್ತು ಸೊವುದೈಯಪ್ಪನು ಹೊಂದಿರುವಂತೆ ವೀರಬಲ್ಲಾಳನ ಆಳ್ವಿಕೆಯಲ್ಲಿ ವಲ್ಲಪ್ಪ ದಣ್ಣಾಯಕ ನಿಗರಿಲಿ ಚೋಳಮಂಡಲದ ಕುರುಕುಂಜಿನಾಡಿನ ಗಂಗಪುರ ಮಾಂಡಲೀಕ, ನಾಡಿನ ನಾಯಕನಾದ ಅಮ್ಮೆನಾಯಕನು ನಲ್ಲೂರ ಚತುಸ್ಸೀಮೆಯೊಳಗಣ ಭೂಮಿಯನ್ನು ಹಾಗೂ ತಿರುವೆಂಗಬನ್ ಒಡೆಯ ಎಂಬ ದೇವಾಲಯಕ್ಕೆ ಹಿಂದೆಯೇ ದೇವಸ್ಥಾನಕ್ಕೆ ನೀಡಿದ ಸ್ಥಳದಲ್ಲಿ ಮುಳ್ಳಿನ ಪೊದೆಗಳಿಂದ ಪಾಳು ಬಿದ್ದಿದನೆಲ್ಲ ಸ್ವಚ್ಚಗೊಳಿಸಿ ಬದಲಿ ಪೀಠ ವ್ಯವಸ್ಥೆ ಮಾಡಿ ದಾನ ನೀಡಿರುವ ವಿವರವನ್ನು ಸೋಮೇಶ್ವರ

ತಳಪಾದಿ ಕಲ್ಲಿನ ಮೇಲೆ ಬರೆದಿರುವುದು[೬೪]. ಕ್ರಿ.ಶ.೧೫೬೪ರ ಕಾರ್ತಿಕ ಶುದ್ಧ ೧೫ ಉ ಸದಾಶಿವರಾಯರು ಮಹಾರಾಯರ ಅಧೀನದಲ್ಲಿ ಚಿಕ್ಕರಾಯ ತಮ್ಮ ಗೌಡರೈಯ್ಯನವರು ಇಷ್ಟ ದೇವರಾದ ಸೋಮೇಶ್ವರ ದೇವರು, ಶ್ರೀ ವೀರಭದ್ರ ದೇವರಿಗೆ ಅಮೃತಪಡಿ, ದೀಪಾರಾಧನೆ, ರಥೋತ್ಸವ ಮೊದಲಾದ ಸೇವೆಗಳನ್ನು ಮಾಡಿಕೊಂಡು ಇರಲು ಹೊಸಕೋಟೆ ಸೀಮೆಯ ಹುಲ್ಲೂರುಪಟ್ಟಿಯ ಮುಗುಬಾಳ ರಾಮಗಉಡನಹಳ್ಳಿಯನ್ನು[೬೫] ದಾನ ನೀಡಿದ್ದರೆ, ಶುಕ್ಲ ಸಂವತ್ಸರದ ಪುಷ್ಯ ಬ ೩ ಗುರುವಾರದಲ್ಲು ವಡಿಗೇನಹಳ್ಳಿ ವೀರ ಕಟ್ಟಪ್ಪನವರ ಅಂಣೈಯಪ್ಪನು ವೀರಭದ್ರ ದೇವಸ್ಥಾನದ ಪಂಚಸಾಲೆ ೫ ಅಂಕಣವನ್ನು ರುದ್ರಪನವರ ಮುಗುವಾಳಪ್ಪನವರ ಸೇವೆಯಾಗಿ ನಿರ್ಮಿಸಿದನ್ನು ವಸಾಲೆಯ ಥಾವುಣಿಯಲ್ಲಿ ಕಾಣಬಹುದು[೬೬]. ಕ್ರಿ.ಶ.೧೨೬೭ ರಲ್ಲಿ ಸಂಬುಕುಲ, ಗೊಡವಿರದೇವ, ರಾಜಭಯಂಕರ ತ್ರೈಲೋಕ್ಯರಾಯನು ಆದ ತಮ್ಮಸಯನು ಸಿರಿಯಾನಲ್ಲಲರನು ಗ್ರಾಮದಲ್ಲಿನ ಚತುಸ್ಸೀಮೆಯೊಳಗಣ ಭತ್ತವನ್ನು ದೇವರಿಗೆ ಕೊಟ್ಟನು[೬೭]. ದೇವರಿಗೆ ದಾನ ಎಂದಿದೆ ಆದರೆ ಯಾವ ದೇವರಿಗೆ ಎಂದು ಉಲ್ಲೇಖವಿಲ್ಲ. ಬಹುಶಃ ದಾನ ನೀಡಿದ ನಲ್ಲಲನ ಹೆಸರಿನಲ್ಲೆ ಈ ಊರು ರಚನೆಯಾಗಿದ್ದು, ಅದೇ ಹೆಸರನ್ನು ಇಡಲಾಗಿದೆ. ಅಂದರೆ ನಲ್ಲಲನು ಪ್ರಮುಖ ವ್ಯಕ್ತಿಯಾಗಿ ಸ್ಥಳೀಯವಾಗಿ ಪ್ರಭಾವ ಬೀರಿರಬೇಕು. ನಲ್ಲಲನ ಮತ್ತೊಂದು ಶಾಸನದಲ್ಲಿ ಮುಗಬಾಳದ ದೇವರಿಗೆ ದಾನ ನೀಡಿದ ಉಲ್ಲೇಖವಿರುವುದರಿಂದ ಬಹುಶಃ ಈ ದಾನವನ್ನು ಮುಗಬಾಳದ ದೇವರಿಗೆ ನೀಡಿರಬೇಕು.

## ಹಸಿಗಾಳದ ಸೋಮೇಶ್ವರ ದೇವಾಲಯ

ಹೊಸಕೋಟೆ ತಾಲ್ಲೂಕಿನಿಂದ ಉತ್ತರಕ್ಕೆ ೮ ಕಿ.ಮೀ. ದೂರದಲ್ಲಿರುವ ಆಲಪ್ಪನಹಳ್ಳಿ ಪಂಚಾಯಿತಿ ವ್ಯಾಪ್ತಿಯಲ್ಲಿನ ಹಸಿಗಾಳ ಗ್ರಾಮವನ್ನು ಶಾಸನಗಳಲ್ಲಿ ಪೆಸಿಗೆಪಲ್ಲಿ, ಹಸಿಗಲ, ಹನಸಿಗಾಳ, ಹಶಿಗಾಳ, ಪೆಸಿಗೈಪಳ್ಳಿ ಎಂದೆಲ್ಲಾ ಕರೆಯಲಾಗಿದೆ. ಗ್ರಾಮದಲ್ಲಿನ ಸೋಮೇಶ್ವರ ದೇವಾಲಯವು **(ಚಿತ್ರ ಸಂಖ್ಯೆ-೭೩)** ಗಂಗ ಅರಸರಿಂದ ನಿರ್ಮಿತವಾಗಿದ್ದು, ನಂತರ ಚೋಳರು, ಹೊಯ್ಸಳರು, ವಿಜಯನಗರ ಅರಸುಗಳ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ.

ಪೂರ್ವದ್ವಾರವನ್ನು ಬದಲಾಯಿಸಿ, ವೀರಭದ್ರವನ್ನು ಪ್ರತಿಷ್ಠಾಪಿಸಲಾಗಿದೆ. ಹೊಯ್ಸಳರ ಶೈಲಿಯ ಜಾಲಂಧ್ರಗಳನ್ನು ಗರ್ಭಗುಡಿಯ ಎರಡು ಕಡೆ ನಿಲ್ಲಿಸಲಾಗಿದೆ. ನವರಂಗ ಮಂಟಪದಲ್ಲಿ ವಿಜಯನಗರ ಶೈಲಿಯ ಕಲ್ಲಿನ ಕಂಭಗಳನ್ನು ಕಾಣ ಬಹುದು. ಗರ್ಭಗುಡಿಯ ಹೊರಭಾಗದಲ್ಲಿ ಸುತ್ತಲೂ ಒಂದೇ

---

[೬೪] ಎ.ಕ-೯, ಹೊ.ತಾ.೯೬, ಕ್ರಿ.ಶ.೧೩೩೪, ತಮಿಳು, ಮುಗಬಾಳ.
[೬೫] ಎ.ಕ-೯, ಹೊ.ತಾ.೯೪, ಕ್ರಿ.ಶ.೧೫೬೪, ಮುಗಬಾಳ.
[೬೬] ಎ.ಕ-೯, ಹೊ.ತಾ.೯೫, ಕ್ರಿ.ಶ. ೧೮೬೯, ಮುಗಬಾಳ.
[೬೭] ಎ.ಕ-೯, ಹೊ.ತಾ.೧೦೨, ಕ್ರಿ.ಶ.೧೨೬೭, ತಮಿಳು. ಚಿಕ್ಕನಲ್ಲಾಲ.

ಸಾಲಿನಲ್ಲಿ ಸುಂದರವಾದ, ವಿಭಿನ್ನ ಕೆತ್ತನೆಗಳನ್ನು ಹೊಂದಿರುವ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ದಕ್ಷಿಣದ ಗೋಡೆಯಲ್ಲಿ ವಾದ್ಯದವರ ಜೊತೆಯಲ್ಲಿ ನೃತ್ಯ ಮಾಡುತ್ತಿರುವ ಶಿವನ ಶಿಲ್ಪಗಳಿವೆ. ಪಶ್ಚಿಮಗೋಡೆಯಲ್ಲಿ ವಿಷ್ಣುವಿನ ನರಸಿಂಹಾವತಾರವನ್ನು ವಿವರಿಸುವ ಶಿಲ್ಪ. ಇದೇ ಸಾಲಿನಲ್ಲಿ ಸರ್ಪದ ತಲೆಯಿರುವ ನವಿಲೊಂದು, ನವಿಲು ತಲೆಯಿರುವ ಸರ್ಪವೊಂದರ ಕೆತ್ತನೆಯಿದೆ. ಉತ್ತರ ದಿಕ್ಕಿನ ಗೋಡೆಯಲ್ಲಿ ಶಿವಲೀಲೆಯ ಕೆಲವು ಶಿಲ್ಪಗಳು ಮತ್ತು ಶಿವನು ಗಜಾಸುರನೆಂಬ ರಾಕ್ಷಸನನ್ನು ಕೊಲ್ಲುತ್ತಿರುವ ಶಿಲ್ಪವಿದೆ.

ಗ್ರಾಮಂತರ ಜಿಲ್ಲೆಯಲ್ಲಿ ಪಲ್ಲವರ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಹಸಿಗಾಳ ಗ್ರಾಮಕ್ಕೆ ಉತ್ತರ ಕೆರೆಯ ದಕ್ಷಿಣ ತೂಬಿನ ಮೇಲಿರುವ ಶಾಸನದ ಕಂಚಿನ ಪಲ್ಲವ ನರಸಿಂಹ ವರ್ಮನ ಶಾಸನದಲ್ಲಿ[೬೮] ಕಂಚಿಯ ಮಹಾರಾಜ ಬಾದಾಮಿಯನ್ನು ಜಯಸಿದ ಮೊದಲೆಯ ನರಸಿಂಹವರ್ಮನ ಅಧೀನದಲ್ಲಿ ಆಳುತ್ತಿದ್ದ ನಂದಿವರ್ಮನ ಮಗ ಸತ್ಯಮಂಗಲನ .......... ಒಬ್ಬ ವ್ಯಕ್ತಿಯ ಹೆಂಡತಿ ಕೆರೆಯನ್ನು ನಿರ್ಮಿಸಿ, ಆ ಕೆರೆಗೆ ತೂಬನ್ನು ನಿರ್ಮಿಸಿದಳೆಂಬ ವಿವರಗಳಿವೆ. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲದಿದ್ದರು ನರಸಿಂಹವರ್ಮ ಹಾಗೂ ಅವನ ಅಧಿಕಾರಿ ಸತ್ಯವಂಗಲನ ಉಲ್ಲೇಖದ ಆಧಾರದ ಮೇಲೆ ಕ್ರಿ.ಶ.೬೪೫ ಎಂದು ನಿರ್ಧರಿಸ ಬಹುದು.

ಹಸಿಗಾಳ ಗ್ರಾಮದ ಪಶ್ಚಿಮ ಪುಟ್ಟಯ್ಯ ಸೊಪ್ಪಿನ ತೋಟದಲ್ಲಿರುವ ಶಾಸನದಲ್ಲಿ ಗುರುವಪ್ಪನಿಗೆ ಹಸಿಗಾಳದ ಕೆರೆಯ ಕೋಡಿ ಹತ್ತಿರದಲ್ಲಿ ಒಂದು ಖಂಡುಗ ಧಾನ್ಯವನ್ನು ಬೆಳೆಯ ಹೊಲವನ್ನು, ಅಂಜನೇಯ ದೇವಸ್ಥಾನದ ಪಶ್ಚಿಮದಲ್ಲಿ ತಮಿಳು ಗ್ರಂಥ ಭಾಷೆಯ ಕ್ರಿ.ಶ.೧೩೭೯ ರ ವಿಜಯನಗರ ಇಮ್ಮಡಿ ಬುಕರಾಯ ಶಾಸನದಲ್ಲಿ ಪುಲ್ಲಿಯೂರುನಾಡಿನ ಪಸಿಗೈಪಳ್ಳಿಗ್ರಾಮದ ಸಿದ್ದಾಯದ ಒಂದು ಕಾಲು ಪಣದ ಆದಾಯವನ್ನು ಸ್ತ್ರೀ ಧನವಾಗಿ ಬಳುವಳಿಯಾಗಿ ಕೊಟ್ಟ ವಿವರಗಳಿವೆ.

## ಚಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯ

ನೆಲಮಂಗಲದಿಂದ ಬೆಂಗಳೂರು ಮಾರ್ಗದಲ್ಲಿ ೩ ಕಿ.ಮೀ ದೂರದಲ್ಲಿನ ಚಿನ್ನಮಂಗಲದ ಗದ್ದೆಯ ಬಯಲಿನಲ್ಲಿರುವ ಮುಕ್ತಿನಾಥೇಶ್ವರ ದೇವಾಲಯವನ್ನು **(ಚಿತ್ರ ಸಂಖ್ಯೆ-೭೪)** ಕ್ರಿ.ಶ.೧೦೩೮ರಲ್ಲಿ ರಾಜೇಂದ್ರ ಚೋಳನ ಕಾಲದಲ್ಲಿ ಪ್ರಾರಂಭವಾದ ನಿರ್ಮಾಣದ ಕಾರ್ಯವನ್ನು ಕುಲೊತುಂಗ ಚೋಳನು ಪೂರ್ತಿಗೊಳಿಸಿದನು[೬೯]. ಈ ದೇವಾಲಯವನ್ನು ತಲಕಾಡಿನ ವೈದ್ಯನಾಥೇಶ್ವರ ದೇವಾಲಯಕ್ಕೆ

[೬೮] ಎ.ಕ-೯, ಹೊ.ತಾ.೧೦೬, ಕ್ರಿ.ಶ.೬೪೫, ಹನಸಿಗಾಳ.

[೬೯] ಡಾ.ಸೂರ್ಯನಾಥ ಕಾಮತ್:- ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು.ಸಂ-೧೦೭.

ಹೋಲಿಸಬಹುದು. ಗಂಗರ ಕೊನೆಯ ಕಾಲದ ೧೦ ನೇ ಶತಮಾನದ ಶೈಲಿಯ ಕಂಬಗಳ ಹಾಗೆ ಕಾಣುತ್ತದೆ.

ಗರ್ಭಗುಡಿಯಲ್ಲಿ ಚೌಕಾಕಾರದ ಪಾಣಿಪೀಠದ ಮೇಲೆ ಬೃಹತ್ ಲಿಂಗವಿದ್ದು, ೪ ಮೂಲೆಗಳಲ್ಲೂ ಕಂಬಗಳಿವೆ. ಗರ್ಭಗುಡಿಯ ಮುಂದೆ ಅಂತರಾಳ, ನವರಂಗಗಳಿವೆ. ನವರಂಗದ ಕಂಬಗಳಲ್ಲಿನ ಶಿಲ್ಪಗಳು ವಿಜಯನಗರ ಕಾಲದ್ದಾಗಿದೆ. ಬಹುಶಃ ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರವಾಗಿರ ಬೇಕು. ಭೈರವ, ಗಣಪತಿ, ಮಹಿಷಾಸುರ ಮರ್ದಿನಿ ಶಿಲ್ಪಗಳು ಹಾಗೂ ಪ್ರವೇಶ ದ್ವಾರದಲ್ಲಿ ೨ ಕಡೆಗಳಲ್ಲಿ ಸೂರ್ಯ, ಚಂದ್ರ ಕೆತ್ತನೆಗಳಿವೆ. ಸಂಗೀತ ವಾದ್ಯಗಳನ್ನು ನುಡಿಸುತ್ತಿರುವ ಸಂಗೀತ ಗಾರರ ಶಿಲ್ಪಗಳು, ಮುಂಭಾಗದ ಕಂಬ ಮಂಟಪವು ವಿಜಯನಗರ ಶೈಲಿ ಹೋಲುತ್ತದೆ.

ದೇವಾಲಯದ ಹೊರಗೋಡೆಯ ಭಿತ್ತಿಗಳಲ್ಲಿ ನಟರಾಜ, ಗಣಪತಿ, ಮಹಿಷನ ತಲೆ ಮೇಲೆ ನಿಂತಿರುವ ದುರ್ಗೆ, ನಾಲ್ಕು ಕೈಗಳಿರುವ ಕಾಳಿಂಗಮರ್ದನ ಕೃಷ್ಣ, ಕೊಳಲು ನುಡಿಸುತ್ತಿರುವ ಗೋಪಾಲಕೃಷ್ಣ ಹಾಗೂ ಇನ್ನಿತರ ಶಿಲ್ಪಗಳನ್ನು ಕಾಣಬಹುದಾಗಿದೆ. ಪ್ರವೇಶ ದ್ವಾರದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ದೇವಾಲಯದ ಒಂದು ಭಾಗದಲ್ಲಿ ಹರಿ ಪರವಾದ, ಮತ್ತೊಂದು ಕಡೆ ಹರ ಪರವಾದ ಶಿಲ್ಪಗಳಿವೆ. ಗರ್ಭಗೃಹದ ಸುತ್ತಲೂ ಕಪೋತದ ಕೆಳಭಾಗದಲ್ಲಿ ಒಂದು ಸಾಲು ವಿವಿಧ ಭಂಗಿಯಲ್ಲಿರುವ ಕುಬ್ಜರ ಶಿಲ್ಪಗಳಿವೆ. ನವರಂಗದ ಮೇಲ್ಛಾವಣಿಯ ಮೇಲೆ ಶಿವ, ದಿಕ್ಪಾಲಕರ ಶಿಲ್ಪಗಳಿವೆ. ದೇಗುಲದ ಹಿಂಭದಿಯ ಗುಡಿನಲ್ಲಿರುವ ತ್ರಿನೇತ್ರ ವೆಂಕಟೇಶ್ವರ ವಿಗ್ರಹವು ಬಲು ಸುಂದರವಾಗಿದೆ. ದೇವಸ್ಥಾನದ ಎದುರಿನಲ್ಲರುವ ಸುಮಾರು ೮ ಮೀ. ಎತ್ತರ ದೀಪಸ್ತಂಭವಿದೆ. ಇದರ ಪಕ್ಕದಲ್ಲಿ ಕಲ್ಲಿನ ಮೇಲೆ ದೊಡ್ಡಪೇಟವನ್ನು ಧರಿಸಿರುವ ವ್ಯಕ್ತಿಯ ಕೆತ್ತನೆಯಿದೆ.

ದೇವಾಲಯದ ಮುಂಭಾಗದಲ್ಲಿನ ತಮಿಳು ಶಾಸನದಲ್ಲಿ ಕ್ರಿ.ಶ.೧೧೧೦ ರಲ್ಲಿ ಶ್ರೀ ಕುಲೋತ್ತುಂಗ ಚೋಳ ದೇವರ ೪೧ ನೇ ಆಳ್ವಿಕೆಯಲ್ಲಿ ರಾಜರಾಜ ಪಾಂಡಿನಾಡು, ಅರಿಕೇಸರಿಯ ನಾಡು, ಸಮವರ ನಲ್ಲೂರ ಒಡೆಯನಾದ ರಾಜರಾಜ ಕುಲೋತ್ತುಂಗ ಚೋಳ ಅದಿಮರ್ಕ ಚೆಂಗಿರೈನು ವಿಕಿರಮ ಚೋಳ ಮಂಡಲದ ಕುಕ್ಕನೂರು ನಾಡಿನ ಭಿನ್ನಮಂಗಲದ ಮುಕ್ತಿಶ್ವರ ಒಡೆಯನಿಗೆ ತೆರಿಗೆಗಳಿಂದ ಬರುವ ಆಧಾಯವನ್ನು ಚಂದ್ರಾರ್ಕವಾಗಿ ದೇವರಿಗೆ ಪೂಜೆ, ಪುನಸ್ಕಾರ, ದೀಪಾರಾಧನೆ, ನೈವೇದ್ಯ ನಡೆಯಲೆಂದು ದೇವಧನವನ್ನು ಕೊಟ್ಟರು[೨೦]. ಕ್ರಿ.ಶ.೧೩೨೧ ರ ವೀರ ಬಲ್ಲಾಳನ ಕಾಲಾವಧಿಯಲ್ಲಿ ಮುದುಗೆರೆಯನ್ನು ಸರ್ಬ್ಬ ಕೊಡುಗೆಯಾಗಿ ಕೊಟ್ಟ ದಾನ ಶಾಸನದಲ್ಲಿ ಶ್ರೀಮುಕ್ತನಾಥನ ಒಪ್ಪ ಎಂದು

[೨೦] ಎ.ಕ-೯, ನೆ.ತಾ.೩, ತಮಿಳು, ಕ್ರಿ.ಶ.೧೧೧೦, ಭಿನ್ನಮಂಗಲ.

ಬಳಸಿರುವುದು[೭೧]. ಕ್ರಿ.ಶ.೧೩೩೬ರ ಬ್ಯಾಡರಹಳ್ಳಿಯ ಶಾಸನದಲ್ಲಿ ನಾಡವೊಪ್ಪ ಶ್ರೀಮುಕ್ತನಾಥ ಎಂದು ಇರುವುದು ಗಮನಿಸಿದರೆ ಭಿನ್ನಮಂಗಲ ಮುಕ್ತನಾಥೇಶ್ವರನೇ ಇರಬೇಕು ಎಂದೆನಿಸುತ್ತದೆ. ಕ್ರಿ.ಶ.೧೩೩೭ರಲ್ಲಿ ಶ್ರೀ ವೀರ ಬಲ್ಲಾಳ ದೇವರಸರ ಸಾಮಂತಾಧಿಪತಿ ಮಹಿಲೆಯ ನಾಯಕರು, ಕುಕ್ಕಲ ನಾಡಪ್ರಭು ಹೊನ್ನೆಗೌಡರ ಮಕ್ಕಳು ಹೊನ್ನಪ್ಪ ಮಲೆಯಪ್ಪನು ಮುಕ್ತೀಶ್ವರ ದೇವ ಒಡೆಯನಿಗೆ ದಾನ[೭೨] ನೀಡಿದರು.

ಕ್ರಿ.ಶ.೧೫೩೫ ರಲ್ಲಿ ಮನ್ಮಥ ಸಂವತ್ಸರದ ಆಶ್ವೀಜ ಶುದ್ಧ ೧೫ ಬುಧವಾರದ ಪುಣ್ಯ ಕಾಲದಲ್ಲಿ ಮಹಾರಾಜಾಧಿರಾಜ ಶ್ರೀ ವೆಂಕಟಪತಿರಾಯರು ಶ್ರೀ ವಿರೂಪಾಕ್ಷ ಲಿಂಗನ ಸನ್ನಿಧಿಯಲ್ಲಿ ತಿರುಮಲ ದೇವಿ ಅಮ್ಮನವರ ಪಟ್ಟವಾದ ವಿಜಯನಗರದ ಮಧ್ಯದಲ್ಲಿನ ಮಲ್ಲಿಕಾರ್ಜುನ ದೇವರಿಗೆ ಪೆನುಗೊಂಡೆ ರಾಜ್ಯದ ಬಿಂಣಮಂಗಲ ಗ್ರಾಮವನ್ನು ಸರ್ವಮಾನ್ಯವಾಗಿ ದಾನ ನೀಡಿದರು[೭೩]. ಏಪ್ರಿಲ್ ತಿಂಗಳಲ್ಲಿ ಮುಕ್ತಿನಾಥೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡುವಾಗ ೨ ಶಿಲಾಯುಗದ ಅಸ್ತಿಪಂಜರಗಳು ದೊರೆತಿದ್ದು, ಬಹುಶಃ ಬಿನ್ನಮಂಗಲವು ಕ್ರಿ.ಪೂ.ಕಾಲದಿಂದಲೂ ಜನವಸತಿಯ ಪ್ರದೇಶವಾಗಿರಬೇಕು.

## ಹೆಗ್ಗುಂದ ಮಲ್ಲಿಕಾರ್ಜುನ ದೇವಾಲಯ

ನೆಲಮಂಗಲದಿಂದ ೨೯ ಕಿ.ಮೀ. ದೂರದಲ್ಲಿ ಡಾಬಸ್‌ಪೇಟೆಯಿಂದ ದೇವರಾಯದುರ್ಗ ಮಾರ್ಗದಲ್ಲಿ ನರಸಪುರ ತೋಪುಯಿಂದ ೧ ಕಿ.ಮೀ. ದೂರದಲ್ಲಿನ ಹೆಗ್ಗುಂದ ಗ್ರಾಮದಲ್ಲಿ ಹಳೇಯೂರು, ಹೊಸಊರು ಎಂದು ರೂಪುಗೊಂಡಿದೆ. ಹಳೇಯೂರಿನಲ್ಲಿ ಅಂಜನೇಯ ದೇವಸ್ಥಾನ ವಿದ್ದು, ಸುತ್ತಲೂ ಹೊಲಗಳಿವೆ. ಹೊಸಊರಿನಲ್ಲಿ ಜನಸಂದಣಿ ಇದ್ದು, ರಾಮದೇವರ ಬೆಟ್ಟ ಹತ್ತಲು ಊರಿನ ಮಧ್ಯೆ ಮಾರಮ್ಮಗುಡಿ ಮುಂದೆ ಸೋಪಾನಗಳಿವೆ.

ರಾಮದೇವರ ಬೆಟ್ಟದ ಪಕ್ಕದಲ್ಲಿನ ದೊಡ್ಡ ಬಂಡೆ ಮೇಲೆ ಇರುವ ೨ ಪಾದದ ಗುರುತುಗಳ ಬಗ್ಗೆ ರಾಯನ ಯಜ್ಞ ಕುದುರೆಯನ್ನು ಲವಕುಶರು ಕಟ್ಟಿ ಹಾಕಿದ್ದಿರೆಂದು ಎಂಬ ಐತಿಹ್ಯವಿದೆ. ಜೊತೆಗೆ ಬೆಟ್ಟದ ಪಶ್ಚಿಮದಲ್ಲಿರುವ ಚಿಕ್ಕ ಬೆಟ್ಟದಿಂದ ಕುದುರೆ ಹಾರಿ ಈ ಬೆಟ್ಟಕ್ಕೆ ಬರುತ್ತಿತಂತೆ ಅವಾಗ ಕುದುರೆಯನ್ನು ಈ ಬಂಡೆಗೆ ಕಟ್ಟಿಹಾಕುತ್ತಿದ್ದರಂತೆ ಅದಕ್ಕೆ ಕುದುರೆ ಕಟ್ಟುವ ಬಂಡೆ ಎಂಬ ಹೆಸರು ಬರಲು ಕಾರಣವಾಯಿತು ಎಂದು ಸ್ಥಳೀಯರು ಹೇಳತ್ತಾರೆ.

---

[೭೧] ಹೆಚ್.ಎಸ್.ಗೋಪಾಲರಾವ್ :- ಬೈಲ ಕೋನೇನಹಳ್ಳಿ ಶಿಲಾಶಾಸನ, ಇ.ದ.ಸಂ-೨, ಪುಟ ೫೮-೫೯.
[೭೨] ಎ.ಕ-೯, ಅನುಬಂಧ, ನೆ.ತಾ.೧೦೩, ಭಿನ್ನಮಂಗಲ.
[೭೩] ಎ.ಕ-೯, ನೆ.ತಾ.೨, ಕನ್ನಡ, ಕ್ರಿ.ಶ.೧೫೩೫, ಭಿನ್ನಮಂಗಲ.

ರಾಮದೇವರ ಬೆಟ್ಟದ ಪಶ್ಚಿಮ ಭಾಗದಲ್ಲಿ ಹಳೆಯೂರು ಅಂಜನೇಯ ದೇವಾಲಯದ ಎದುರಿನ ಮೆಟ್ಟಲುಗಳನ್ನು ಹತ್ತಿದ್ದರೆ ನೈಸರ್ಗಿಕ ಗುಹೆಯಲ್ಲಿ ನಿರ್ಮಿಸಿದ ಮಲ್ಲಿಕಾರ್ಜುನ **(ಚಿತ್ರ ಸಂಖ್ಯೆ-೬೩)** ದೇವಾಲಯ ಕಾಣಿಸುತ್ತದೆ. ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರವಿದ್ದು, ಗಂಗರ ಕಾಲದ ಗುಡಿಯ ಹಾಗೇ ಚಿಕ್ಕದಾದ ಸುಮಾರು ೪ ಅಡಿ ಎತ್ತರದ ದ್ವಾರದಲ್ಲಿ ಒಳಗೆ ಪ್ರವೇಶಿಸಿದ್ದರೆ ವಿಶಾಲವಾದ ಪ್ರಾಗಂಣದಲ್ಲಿ ಉತ್ತರ ದಿಕ್ಕಿನಲ್ಲಿ ದ್ವಾರವನ್ನು ಹೊಂದಿರುವ ಚಿಕ್ಕದಾದ ಗುಡಿಯಲ್ಲಿ ಒರಟಾದ ಮರಳು ಲಿಂಗು, ನುಣುಪಾದ ಕಾಶೀ ಲಿಂಗುಗಳಿದ್ದು, ಹಿಂದೆ ಕಳ್ಳರು ನಿಧಿಗಾಗಿ ಲಿಂಗ ಕೀತ್ತಾದ ಲಿಂಗವು ಎತ್ತರವಾಗಿ ಬರುತ್ತನೇ ಇತ್ತಂತೆ ಆಗ ಕಳ್ಳರು ಪಲಾಯನ ಮಾಡಿದ್ದರಂತೆ, ಮತ್ತೊಮ್ಮೆ ಹಳೆಯೂರಿನ ಅಂಜನೇಯ ದೇವಸ್ಥಾನಕ್ಕೆ ಬಂದಂತಹ ಕಳ್ಳರಿಗೆ ಕಣ್ಣನ್ನು ಮಲ್ಲಿಕಾರ್ಜುನ ಕೀಳಿದನಂತೆ ಎಂದು ಪೂಜಾರಿ ಉಮೇಶ್ ಆರಾಧ್ಯರವರು ಹೇಳಿದ್ದರು. ಬಿದ್ದಿರುವ ಕಲ್ಲು ಎಂದು ಉಲ್ಲೇಖಿಸಲಾಗಿರುವ ಶಾಸನವನ್ನು ಈ ಗರ್ಭಗುಡಿಯ ಎಡಭಾಗದಲ್ಲಿ ನಿಲ್ಲಿಸಲಾಗಿದೆ. ಇದೊಂದು ಆತ್ಮಾರ್ಪಣೆ ಮಾಡಿಕೊಂಡು ದಾನ ನೀಡಿರುವ ಆತ್ಮಬಲಿದಾನ ಕಲ್ಲು. ಈ ಕಲ್ಲಿನ ಮೇಲೆ ಕ್ರಿ.ಶ.೧೧೫೨ರಲ್ಲಿ ನರಸಿಂಗದೇವರ ಆಳ್ವಿಕೆಯಲ್ಲಿ ಕೋಮುಗಾವುಂಡನು ೧೦ ಖಂಡುಗ ಗದ್ದೆಯನ್ನು ಮಲ್ಲಿಕಾರ್ಜುನ ಒಡೆಯ ಮಹಾದೇವರಿಗೆ ದಾನ ನೀಡಿದ[೭೪] ವಿವರವಿದೆ. ದೇವಾಲಯದ ಬಲಭಾಗದಲ್ಲಿ ನೈಸರ್ಗಿಕವಾದ ನೀರಿನ ದೋಣೆಯಿದ್ದು ವರ್ಷಪೂರ್ತಿ ನೀರಿದ್ದು, ದೇವರಿಗೆ ಅಭಿಷೇಕ ಮೊದಲಾದ ಪೂಜಾಕಾರ್ಯಗಳನ್ನು ಮಾಡಲು ಈ ದೋಣೆ ನೀರಿನ್ನು ಬಳಸುತ್ತಾರೆ.

ದೇವಾಲಯವನ್ನು ಪ್ರವಾಶಿಸುವ ದ್ವಾರದ ಮೇಲೆ ಮೂರು ಸಾಲುಗಳಲ್ಲಿ ೧೪ ಅಡಿ ಅಗಲದಲ್ಲಿ ಹೊಯ್ಸಳ ವಿಷ್ಣುವರ್ಧನನ (ವೀರಗಂಗ) ತಮಿಳು ಶಾಸನವಿದ್ದು, ಈ ಶಾಸನದಲ್ಲಿ ಮಲ್ಲಿಕಾರ್ಜುನ ಒಡೆಯ ಮಹಾದೇವರಿಗೆ ಮತ್ತು ಪೂಜಾರಿಯಾದ ಕೌಸಿಕ ಗೋತ್ರದ ಶಿವ ಬ್ರಾಹ್ಮಣನಾದ ಪಾಲಭಟ್ಟನಿಗೆ[೭೫] ದಾನ ಕೊಟ್ಟ ವಿವರವಿದೆ. ಶಾಸನದಲಿನ್ಲ ಪೂಜಾರಿ ಶಿವ ಬ್ರಾಹ್ಮಣನಾಗಿದ್ದರೆ ಪ್ರಸ್ತುತ ದೇವಾಲಯದ ಪೂಜಾರಿ ಲಿಂಗಾಯತ ಜನಾಂಗಕ್ಕೆ ಸೇರಿದವನಾಗಿದ್ದಾನೆ. ಮಲ್ಲಿಕಾರ್ಜುನ ದೇವರ ಮುಂದೆ ಬಸವಣ್ಣನ ಎಡಗಡೆ ಬಂಡೆಯ ಮೇಲೆ ಮಸುಗಳೇ ದೇವರ ಗೋತ್ರ[೭೬] ಎಂದು ಇದೆ.

ಮಲ್ಲಿಕಾರ್ಜುನ ದೇವಾಲಯದಿಂದ ಮೇಲಕ್ಕೆ ಬೆಟ್ಟ ಹತ್ತಿದ್ದರೆ ವೀರಭದ್ರನ ದೇವಾಲಯವಿದೆ. ಪೂರ್ವಕ್ಕೆ ಚಿಕ್ಕದಾದ ಪ್ರವೇಶ ದ್ವಾರವನ್ನು ಪ್ರವೇಶಿಸಿದ್ದರೆ ದೊಡ್ಡದಾದ ನೈಸರ್ಗಿಕ ಗುಹೆಯಲ್ಲಿ ದಕ್ಷಿಣಕ್ಕೆ

---

[೭೪] ಎ.ಕ-೯, ನೆ.ತಾ. ೬೮, ತಮಿಳು, ಹೆಗ್ಗುಂದ

[೭೫] ಎ.ಕ-೯, ನೆ.ತಾ.೬೭, ಕ್ರಿ.ಶ.೧೧೧೫, ತಮಿಳು, ಹೆಗ್ಗುಂದ

[೭೬] ಎ.ಕ-೯, ನೆ.ತಾ.೧೬೩, ಬೆಟ್ಟದ ಮೇಲೆ ಮಲ್ಲಿಕಾರ್ಜುನ ದೇವರ ಮುಂದೆ ಬಸವಣ್ಣನ ಎಡಗಡೆ ಬಂಡೆಯ ಮೇಲೆ.

ದ್ವಾರವಿರುವ ಚಿಕ್ಕದಾದ ಗರ್ಭಗುಡಿಯಲ್ಲಿ ಮೂರು ಅಡಿ ಎತ್ತರದ ವೀರಭದ್ರನ ಮೂರ್ತಿಯಿದೆ. ಈ ಆಲಯದ ಪ್ರವೇಶದ್ವಾರ ಎದುರಿಗೆ ಸುಮಾರು ಎರಡು ಅಡಿ ಎತ್ತರವಾದ ವೀರಗಲ್ಲು ಇದ್ದು, ಈ ವೀರಗಲ್ಲಿನಲ್ಲಿ ಎದುರಾಳಿಯಾಗಿ ನಿಂತಿರುವ ಇಬ್ಬರು ವೀರರು ಆಯುಧವನ್ನು ಇಡಿದ ಬಲಗೈಯನ್ನು ಮೇಲಕ್ಕೆ ಎತ್ತಿದ್ದರೆ ಎಡಗೈಯನ್ನು ಇಬ್ಬರು ಒಂದೇ ಪೀಠದ ಮೇಲೆ ಇರಿರುವುದಕ್ಕೆ ಬಹಳ ವರ್ಷಗಳ ಹಿಂದೆ ಹಿಂದು-ಮುಸ್ಲಿಂ ಜಗಳವಾದಾಗ ಈ ದೇವಾಯಲದಲ್ಲಿ ರಾಜೀಯಾದ ನೆನಪಿಗೆ ಈ ಕಲ್ಲನ್ನು ಹಾಕಿಸಿದ್ದಾರೆ ಎಂಬುವುದು ಸ್ಥಳಿಯರು ಹೇಳುವ ಕತೆಯಾಗಿದೆ.

ರಾಮದೇವರ ದೇವಸ್ಥಾನದ ಘಂಟೆಯ ಮೇಲೆ ಶ್ರೀಹಯಗುಂದದ ರಾಮಸ್ವಾಮಿಗೆ ಸೇವೆಯಾಗಿ ದೊಡ ಸಂಪಗೈಯನ ಭಕ್ತಿಯಾಗಿ ೮ ಸೇರು ಗಂಟೆಯನ್ನು ಶುಕ್ಲ ಸಂವತ್ಸರ ಜೇಷ್ಠ ಶುಕ್ರವಾರ ೧ ರಂದು[೭೭], ಹಾಗೂ ಮತ್ತೊಂದು ಗಂಟೆ ಮೇಲೆ ಹಯಗುಂದದ ಶ್ರೀ ರಾಮಸ್ವಾಮಿಗೆ ಬೆದಪನ ಭಕ್ತಿಯಾಗಿ ಶ್ರೀಮುಖ ಸಂವತ್ಸರ ಶು ೭ ರಂದು ಗಂಟೆಯನ್ನು ದಾನ ನೀಡಿದನು[೭೮]. ನೈಸರ್ಗಿಕವಾದ ಗುಹೆಯಲ್ಲಿನ ಮಲ್ಲಿಕಾರ್ಜುನ, ವೀರಭದ್ರನ ಗುಡಿಗಳು ಗಂಗರ ಕಾಲದ ದೇವಾಲಯವನ್ನು ನೆನಪಿಸುತ್ತದೆ.

## ಸುರಧೇನುಪುರದ ದೇವಾಲಯ

ಯಲಹಂಕದಿಂದ ದೊಡ್ಡಬಳ್ಳಾಪುರದ ರಸ್ತೆಯಲ್ಲಿ ರಾಜನುಕುಂಟೆ ನಂತರ ಬಲಕ್ಕೆ ಸುಮಾರು ಒಂದೂವರೆ ಕಿ.ಮೀ.ದೂರದಲ್ಲಿರುವ ಗ್ರಾಮವೇ ಸುರಧೇನುಪುರ. ವಿಜಯನಗರ ಅರಸರ ಕಾಲದಲ್ಲಿ ಅಗ್ರಹಾರವಾಗಿ ಪ್ರಸಿದ್ಧಿಗೊಂಡಿರುವ ಸುರಧೇನುಪುರದಲ್ಲಿ **(ಚಿತ್ರ ಸಂಖ್ಯೆ-೭೫)** ಕೆರೆಯ ಒಂದು ದಂಡೆಯಲ್ಲಿ ನಿರ್ಮಾಣ ಮಾಡಲಾಗಿರುವ ಆಲಯದ ಮುಂದೆ (ಪೂರ್ವ ಭಾಗದಲ್ಲಿ) ಪುಷ್ಕರಿಣಿ ಇತ್ತಂತೆ, ದೇವಾಲಯದ ಸುತ್ತಲೂ ಮಂಟಪಗಳು ಇದ್ದಿರಬೇಕು. ಆದರೆ ಈಗ ಪುಷ್ಕರಣಿ, ಮಂಟಪಗಳು ಯಾವುದು ಇಲ್ಲ. ರಚನೆಯ ಮೂಲ ವಾಸ್ತುಶೈಲಿನ್ನು ಉಳಿಸಿಕೊಂಡಿರುವ ಆಲಯದಲ್ಲಿ ದ್ವಾರ ಪಾಲಕರನ್ನು ದಕ್ಷಿಣಕ್ಕೆ ಇರಿಸಲಾಗಿದೆ.

ಆಲಯದೊಳಗೆ ದಕ್ಷಿಣ ದ್ವಾರದಿಂದ ಪ್ರವೇಶಿಸುವ ಮುನ್ನ ಮುಂಭಾಗದಲ್ಲಿ ತಮಿಳು ಶಾಸನವಿದೆ. ಹೊಯ್ಸಳರ ರಾಮನಾಥನು ಕ್ರಿ.ಶ.೧೨೯೧ ರಲ್ಲಿ ದೇವಧನವಾಗಿ ಇಲ್ಯೈಪಕ್ಕನಾಡು, ಜನವರನಾಥ ನಲ್ಲೂರು ೨ ಕಲ್ಲು ದಾನ ಕೊಟ್ಟರು[೭೯]. ಸುರಧೇನುಪುರದಲ್ಲಿ ಹಂದಿಬೇಟೆ ವೀರಗಲ್ಲು, ಕುಂಟೆ ಕಟ್ಟಿರುವ ಶಾಸನಗಳು ಲಭ್ಯವಿದೆ. ಆಲಯದ ಒಳಗೆ ಇರುವ ೪ ಕಂಬಗಳ ಮೇಲೆ ಯಾವುದೇ ಉಬ್ಬು ಶಿಲ್ಪಗಳಿಲ್ಲ. ಅಂತರಾಳ,

---

[೭೭] ಎ.ಕ-೯, ನೆ.ತಾ.೧೬೪, ರಾಮದೇವಸ್ಥಾನದ ಘಂಟೆಯ ಮೇಲೆ.
[೭೮] ಎ.ಕ-೯, ನೆ.ತಾ.೧೬೫, ರಾಮದೇವಸ್ಥಾನದ ಮತ್ತೊಂದು ಘಂಟೆಯ ಮೇಲೆ.
[೭೯] ಎ.ಕ-೯, ದೇ.ತಾ.೪೫, ಕ್ರಿ.ಶ.೧೨೯೧, ತಮಿಳು, ಸುರದೇನುಪುರ.

ಗರ್ಭಗೃಹಗಳಿಗಿಂತಲೂ ಹೆಚ್ಚು ವಿಸ್ತಾರ ಹೊಂದಿರುವ ನವರಂಗದಲ್ಲಿನ ದೈವ ಮೂರ್ತಿಶಿಲ್ಪಗಳನ್ನು ಗಮನಿಸಿದರೆ ಶೈವ–ಶಾಕ್ತ–ಸೌರ ದರ್ಶನವಾಗುತ್ತದೆ. ಗಣೇಶ, ಭೈರವ, ಚಾಮುಂಡಿ, ಸೂರ್ಯ ಇನ್ನಿತರ ಶಿಲ್ಪಗಳಿವೆ. ಕೃಷ್ಣಶಿಲೆಯಲ್ಲಿನ ಸೂರ್ಯ ಶಿಲ್ಪದಲ್ಲಿ ಕೈಗಳಲ್ಲಿ ಕಮಲದ ಮೊಗ್ಗುಗಳನ್ನು, ಇಕ್ಕೆಲಗಳಲ್ಲಿ ಛಾಯ–ಸಂಜ್ಞಾದೇವಿಯರನ್ನು ಹೊಂದಿರುವ ದಿವ್ಯ ಸ್ವರೂಪನಾದ ಸೂರ್ಯ ವಿಗ್ರಹವು ಗಂಗ ಚೋಳರ ಕಾಲದ ಶಿಲ್ಪವಾಗಿದ್ದಿರಬಹುದು.

## ದೊಡ್ಡಹುಲ್ಲೂರಿನ ಸೋಮೇಶ್ವರ ದೇವಾಲಯ

ದೊಡ್ಡಹುಲ್ಲೂರು ಕೆರೆಯ ಕೋಡಿ ಬಳಿಯ ದೇವಾಲಯವನ್ನು ಚೋಳರ ಶೈಲಿಯಲ್ಲಿ ಹೊಯ್ಸಳರು ನಿರ್ಮಿಸಿದರು. ನೆಲ ಮಟ್ಟದಿಂದ ಸುಮಾರು ೪ ಅಡಿ ಎತ್ತರದಲ್ಲಿ ಪೂರ್ವಾಭಿಮುಖವಾಗಿ ಗರ್ಭಗೃಹ ಮತ್ತು ಅಂತರಾಳವನ್ನು ಹೊಂದಿರುವ ದೇವಾಲಯದ **(ಚಿತ್ರ ಸಂಖ್ಯೆ-೭೬)** ಗರ್ಭಗೃಹದಲ್ಲಿ ಭಗ್ನವಾದ ಲಿಂಗವಿದೆ. ಸ್ಥಳಿಯರು ಈಶ್ವರ ದೇವಾಲಯ ಎಂದು ಕರೆಯುತ್ತಿದ್ದು, ದೇವಾಲಯದ ಅಧಿಸ್ಥಾನದ ಮೇಲಿನ ತಮಿಳು ಶಾಸನದಿಂದ ಸೋಮೇಶ್ವರ ಎಂದು ತಿಳಿದುಬಂದಿದ್ದು, ಆಲಯದ ಒಳಗೆ ಪ್ರವೇಶಿಸಲು ಸೋಪಾನವಿದೆ. ದ್ವಾರ ಬಳೀ ಯಾವುದೇ ಶಿಲ್ಪಗಳಾಲಿ ದ್ವಾರಪಾಲಕರಾಗಲಿ ಕಂಡು ಬರುವುದಿಲ್ಲ. ಬಾಗಿಲುವಾಡ ಮೇಲೆ ಸರಳ ಹೂವಿನ ಅಲಂಕಾರ ಮಾತ್ರಯಿದೆ. ದೇಗುಲದ ಮೇಲೆ ಶಿಖರವನ್ನು ನಿರ್ಮಿಸಲು ಸಿದ್ದತೆಯನ್ನು ಮಾಡಿ ಕೊಂಡಿರ ಬೇಕು ಅದಕ್ಕೆ ಬೇಕಾಗಿರುವ ಕಲ್ಲುಗಳನ್ನು ಕಾಣಬಹುದು. ದೇವಾಲಯದ ಸುತ್ತಾಲು ಇರುವ ೫ ದೇವಕೋಷ್ಟಕಗಳದ್ದು ಶಿಥಿಲ ವ್ಯವಸ್ಥೆಯಲ್ಲಿದೆ. ದಕ್ಷಿಣ ಮತ್ತು ಪಶ್ಚಿಮ ದಿಕ್ಕಿನ ಅಧಿಸ್ಟಾನದ ಮೇಲಿನ ಶಾಸನದಲ್ಲಿ ವೀರ ಬಲ್ಲಾಳ ಆಳ್ವಿಕೆಯಲ್ಲಿ ಸೋಮನಾಥನು ದೇವಾಲಯವನ್ನು ನಿರ್ಮಿಸಿದ ಉಲ್ಲೇಖವನ್ನು ಕಾಣಬಹುದು. ಈ ಸೋಮನಾಥನು ವೀರಬಲ್ಲಾಳನ ಕಾಲದಲ್ಲಿ ಹೊಸಕೋಡೆ ಭಾಗದ ಪ್ರಸಿದ್ಧನಾದ ಅಧಿಕಾರಿಯಾಗಿದ್ದು ಇವನ ಹೆಸರಲ್ಲಿ ದೇವಾಲಯವನ್ನು ನಿರ್ಮಿಸಿದ್ದಾರೆ. ಇವನ ಹಲವಾರು ಶಾಸನಗಳನ್ನು ಹಾಗೂ ಭಿತ್ತಿಯಲ್ಲಿ ಹಲವಾರು ಉಬ್ಬುಶಿಲ್ಪಗಳನ್ನು ಕಾಣಬಹುದು. ಗಣೇಶ, ಬೇಡರ ಕಣ್ಣಪ್ಪ, ಶಿವ ಪಾರ್ವತಿಯರು ಕುದುರೆ ಮೇಲೆ ಕುಳಿತಿದ್ದು, ಕುದುರೆ ಹಿಂದೆಯಿಂದ ವ್ಯಕ್ತಿಯೊಬ್ಬ ಶಿವ ಪಾರ್ವತಿಯರಿಗೆ ರಾಜಛತ್ರಿಯನ್ನು ಹಿಡಿದಿರುವುದು. ಕುದುರೆ ಮುಂದೆ ಬಿಲ್ಲು ಬಾಣಗಳನ್ನು ಹಿಡಿದು ಕಿರೀಟಧಾರಣಿಯಾದ ವ್ಯಕ್ತಿಯು ಕೈ ಮುಗಿಯುತ್ತಿರೊದು ಗಮನಿಸಿದರೆ ಬಹುಶಃ ಸೋಮನಾಥನೇ ಇರಬಹುದು. ಕಿರಾತಾರ್ಜುನೀಯ ಪ್ರಸಂಗ, ವೀರನು ಶತೃಗಳೊಂದಿಗೆ ಹೊರಾಡುತ್ತಿರುವ ದೃಶ್ಯ, ಕೊಳಲು ಊದುತ್ತಿರುವ ಗೋಪಾಲನನ್ನು ಕಾಣಬಹುದು. ಇಷ್ಟು ಸುಂದರವಾದ ದೇವಾಲಯವು ಶಿಥಿಲವ್ಯವಸ್ಥೆಗೆ ತಲುಪಿದ್ದು, ಜೀರ್ಣ್ಣೋದ್ಧಾರ ಮಾಡಿದರೆ ಈ

ದೇವಾಲಯವನ್ನು ಮುಂದಿನ ಪೀಳಿಗೆಯವರು ಕಾಣಲು ಸಾಧ್ಯ. ಈಗಾಲೆ ಪಶ್ಚಿಮಭಾಗ ಪೂರ್ಣ ಶಿಥಿಲವಾಗಿದೆ.

## ವಾಗಟದ ವರದರಾಜ ದೇವಾಲಯ

ಹೊಸಕೋಟೆಯಿಂದ ಆಗ್ನೇಯ ದಿಕ್ಕಿನಲ್ಲಿ ೧೦ ಕಿ.ಮೀ ದೂರದಲ್ಲಿನ ತಮಿಳು ಶಾಸನಗಳಲ್ಲಿ ಇವಟ್ಟಂ, ಇವಟ್ಟಂ, ಪೊವಟ್ಟಂ, ವರದರಾಜ ಚತುರ್ವೇದಿ ಮಂಗಲ ಎಂದು, ಕನ್ನಡ ಶಾಸನಗಳಲ್ಲಿ ಉಗಟ್ಟ, ವಾಗಟದ ಭಗೀರಥಪುರ, ಪೊಗಟ್ಟ ಎಂದೆಲ್ಲಾ ಕರೆಯುವ ವಾಗಟ ಗ್ರಾಮವಿದೆ.

ಮಂಗಲ ಎಂದರೆ ಕೋಟೆ ಎಂದರ್ಥ ಇದ್ದು, ಕೆಲವು ಗ್ರಾಮ ನಾಮಗಳ ಕೊನೆಯಲ್ಲಿ ಮಂಗಲ ಸೇರಿಕೊಂಡಿರುವುದು ಅಲ್ಲಿನ ಕೋಟೆಯ ಹಿನ್ನೆಲೆಯಲ್ಲಿ ನೆಲಮಂಗಲ, ಭಿನ್ನಮಂಗಲ, ವರದರಾಜ ದೇವಸ್ಥಾನಕ್ಕೆ ಹೊಂದಿಕೊಂಡಂತೆ ಇದ್ದ ಅಗ್ರಹಾರದಲ್ಲಿ ಋಕ್, ಯಜುರ್, ಸಾಮ, ಅಥರ್ವಣ ಎಂಬ ನಾಲ್ಕು ವೇದಗಳಲ್ಲಿ ಪರಿಗಣತಿ ಹೊಂದಿದ ಮಹಾಜನರು ಇದ್ದಿರಬೇಕು ಅಥವಾ ಬ್ರಾಹ್ಮಣರು ವಾಸಿಸುವ ಪ್ರದೇಶವಾಗಿದ್ದರಿಂದಾಗಿ ಹೊಯ್ಸಳ ಕಾಲದಲ್ಲಿ ವರದರಾಜ ಚತುರ್ವೇದಿ ಮಂಗಲ ಎಂದು ಹೆಸರಿಟ್ಟು ದಾನ ಕೊಟ್ಟಿರುವ ಶಾಸನವನ್ನು ಅಗ್ರಹಾರದ ಆಂಜನೇಯ ಗುಡಿಯ ಪಕ್ಕದಲ್ಲಿ ಕಾಣಬಹುದು.

ರಾಮನಾಥನ ಮಗ ವಿಶ್ವನಾಥನು ವರದರಾಜ ಸ್ವಾಮಿ ದೇವಾಲಯವನ್ನು ನಿರ್ಮಿಸಿದ್ದಾನೆ. ಪಶ್ಚಿಮ ಪ್ರವೇಶದ್ವಾರವಿರುವ ದೇವಾಲಯವು ಗರ್ಭಗುಡಿ, ಅಂತರಾಳ, ಮಂಟಪಗಳನ್ನು ಒಳಗೊಂಡಿದೆ. ೧೬ ಕಲ್ಲು ಕಂಬಗಳ ವಿಶಾಲ ಮಂಟಪವಿದೆ. ನೆಲಮಟ್ಟದಿಂದ ಎತ್ತರದ ಕಟ್ಟೆ ಮೇಲೆ ೩ ಮೆಟ್ಟಿಲುಗಳ ಸಭಾ ಮಂಟಪವಿದೆ. ಗರ್ಭಗೃಹದ ಎಡಭಾಗದ ೧ನೇ ಕಂಬದ ಮೇಲೆ ಹಿಂಗಾಲುಗಳ ಮೇಲೆ ಕುಳಿತು ಮುಂದಿನ ಕಾಲುಗಳನ್ನು ಜೋಡಿಸಿದ ಸಿಂಹ, ಮೊಸಳೆ, ಆನೆಕಾಲು ಹಿಡಿದಿರುವ ಶಿಲ್ಪ (ಗಜೇಂದ್ರ ಮೋಕ್ಷ) ಗಳಿವೆ. ೨ನೇ ಕಂಬದ ಮೇಲೆ ನಾಲ್ಕು ದಳಗಳ ಚಕ್ರ, ಕಂಬದ ನರಸಿಂಹ, ನರಸಿಂಹಸ್ವಾಮಿ, ಹಿರಣ್ಯಕಷ್ಯಪು, ಡೋಲು ಬಾರಿಸುವ ನೃತ್ಯಗಾರ್ತಿಯರು, ಬಲಭಾಗದ ೧ನೇ ಕಂಬದ ಮೇಲೆ ಶ್ರೀರಾಮನ ಪಾದ ಮುಟ್ಟುತ್ತಿರುವ ಹನುಮಂತ, ನಿಂತಿರುವ ಲಕ್ಷ್ಮಣದ ಬೆನ್ನ ಮೇಲೆ ಬತ್ತಳಿಕೆಯಲ್ಲಿ ಬಿಲ್ಲುಗಳು, ಶ್ರೀ ರಾಮನ ಕೈಯಲ್ಲಿ ಬಿಲ್ಲು ಬಾಣ, ಉಗ್ರನರಸಿಂಹ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಶಂಖ, ಬಾಲಕೃಷ್ಣ, ಕೊಳಲು ಊದುತ್ತಿರುವ ಕೃಷ್ಣನ ಶಿಲ್ಪಗಳು, ೨ನೇ ಕಂಬದಲ್ಲಿ ವಾಲಿ ಸುಗ್ರೀವರು, ನಾಲ್ಕು ದಳಗಳ ಚಕ್ರಗಳ ಅರಸನೊಬ್ಬನು ಪತ್ನಿ ಸಮೇತ ಕೈಮುಗಿದು ನಿಂತಿರುವ ಶಿಲ್ಪಗಳು, ಆಮೆ, ಬಲಗೈಯಲ್ಲಿ ದಂಡ, ಎಡಗೈಯಲ್ಲಿ ಕಮಂಡಲ ಹಿಡಿದಿರುವ ಮಹರ್ಷಿ, ಕೈಮುಗಿಯುತ್ತಿರುವ ಗರುಡ ಶಿಲ್ಪಗಳು,

ಸಭಾ ಮಂಟಪದ ಪ್ರವೇಶ ದ್ವಾರದ ಬಲ ಭಿತ್ತಿಯ ಮೇಲೆ ದ್ವಿಭಂಗಿಯಲ್ಲಿ ನಿಂತು, ಕೈಮುಗಿಯುತ್ತಿರುವ ಸ್ತ್ರೀಯ ಕಿವಿಯು ದೊಡ್ಡದಾಗಿದೆ. ಸೊಂಟಕ್ಕೆ ಡಾಬು, ಕೊರಳಲ್ಲಿ ಕಂಠೀಹಾರ, ಬಲಭಿತ್ತಿಯ ಮುಂದೆ ದಿಗಂಬರನಾಗಿ ಪುರುಷನು ದ್ವಿಭಂಗಿಯಲ್ಲಿ ನಿಂತಿದ್ದು, ಬಲಗೈಯಲ್ಲಿ ವಸ್ತುವೊಂದನ್ನು ಹಿಡಿದಿದ್ದಾನೆ. ನಕ್ಷತ್ರಾಕಾರದ ಜಾಲಂಧ್ರ ದೇವಾಲಯದ ಉತ್ತರ ದಿಕ್ಕಿನಲ್ಲಿದೆ.

ವರದರಾಜ ದೇವಾಲಯಕ್ಕೆ ಹಲವಾರು ದಾನಗಳನ್ನು ನೀಡಿರುವ ಹಲವಾರು ಶಾಸನಗಳನ್ನು ಕಾಣಬಹುದು, ಕ್ರಿ.ಶ.೧೨೯೭ ರಲ್ಲಿ ವೀರ ವಿಶ್ವನಾಥ ದೇವರ ೩ನೇ ವರ್ಷದ ಆಳ್ವಿಕಾವಧಿಯಲ್ಲಿ ಚೋಳಮಂಡಲದ ಪುಲಿಯೂರು ನಾಡಿನ ಇವಟ್ಟಂನಲ್ಲಿರುವ ವರದರಾಜ ಚತುರ್ವೇದಿ ಮಂಗಲದಲ್ಲಿನ ಮಹಾಜನರಿಗೆ ವಾಗಟ ಹೋಬಳಿಯ ಪರಮನಹಳ್ಳಿ ಕೆರೆ ಏರಿಯ ಉತ್ತರ ದಿಕ್ಕಿನಲ್ಲಿ ನಾಲ್ಕು ಕಳ ಭೂಮಿಯನ್ನು ಪೂಜೆ ಪುನಸ್ಕಾರ ಎಲ್ಲದಕ್ಕಾಗಿ ನಾರಾಯಣ ಚತುರ್ವೇದಿ ಮಂಗಲದ ಒಡೆಯನಾದ ಚೋಳೀಶ್ವರ ಒಡೆಯನಿಗೆ[೮೦], ದೇವಾಲಯದ ಉತ್ತರ ತಳಪಾದಿ ಕಲ್ಲಿನ ಮೇಲೆ ಗಉರೆಯ ದಂಣಾಯಕರು ವರದರಾಜ ದೇವರಿಗೆ ಕ್ರಿ.ಶ.೧೪೯೧ ರ ಕಾರ್ತಿಕ ಶುದ್ಧ ೧೨ ದ್ವಾದಶಿ ಪುಣ್ಯ ಕಾಲದಲ್ಲಿ ದೇವರ ಅಮೃತಪಡಿಗೆ[೮೧], ಹೊರಭಿತ್ತಿಯಲ್ಲಿ ಕ್ರಿ.ಶ.೧೩೭೮ ರಲ್ಲಿ ಭಾಗೀರತಿಪುರದ ವರದರಾಜ ದೇವರಿಗೆ ಗ್ರಾಮ ದಾನ ಕೊಟ್ಟ ವಿವರದ ಕನ್ನಡ ಶಾಸನವನ್ನು ಕಾಣಬಹುದು[೮೨]. ಇದೇ ಶಾಸನದ ಮೇಲೆ (ಹೊರಭಿತ್ತಿಯಲ್ಲಿ) ಪ್ರತಾಪ ದೇವರಾಯರ ಆಳ್ವಿಕೆಯಲ್ಲಿ ಮುಳುವಾಗಿಲು ರಾಜ್ಯದ ಅಧಿಕಾರಿಯಾದ ಲಕ್ಕಣ ಒಡೆಯರು ಹುಲ್ಲೂರನಾಡ ವೊಗಟ್ಟದ ವರದರಾಜ ದೇವರಿಗೆ ದಾನ ನೀಡಿದನು[೮೩].

ಧ್ವಜಸ್ತಂಭದ ಜಗಲಿಯ ಕಲ್ಲು ಮೇಲೆ ೭ ಸಾಲುಗಳ ಶಾಸನದಲ್ಲಿ ದುಂದುಭಿ ಸಂವತ್ಸರ ಮಾರ್ಗಶಿರ ಸು ೧ ಶುಕ್ರವಾರದಂದು ಕ್ರಿ.ಶ.೧೫೦೨ ರಲ್ಲಿ ಮುಳವಾಗಿಲ ಮಾಯದೇವರಾಚೆಯರು ಚಂದಳ ದೇವರಾವುತ್ತರು ದೀಪಮಾಲೆ ಕಂಬವನ್ನು ತಮ್ಮ ಧರ್ಮವಾಗಿ ಮಾಡಿಸಿದರು[೮೪].

ಹಾಗೇಯೇ ಪಾರ್ವತಿ ದೇವಿಗಾಗಿ ಬಾದ್ರಪದ ಶು ೭ ಗುರುವಾರದಲ್ಲಿ ದಾನ ನೀಡಿರುವ ಉಲ್ಲೇಖವನ್ನು ಪಾರ್ವತಿ ದೇವಸ್ಥಾನದ ತಳಪಾದಿ ಕಲ್ಲುಮೇಲೆ[೮೫], ಉತ್ತರ ತಳಪಾದಿ ಕಲ್ಲಿನ ಮೇಲೆ ಸೆಂಗಲುನಿರ್ ಪಿಲ್ಲೈ ಅಸರಿ ಭೂಮಿಯನ್ನು[೮೬] ಹಾಗೂ ಕ್ರಿ.ಶ.೧೩೪೦ ರಲ್ಲಿ ಮತ್ತೊಮ್ಮೆ ಭೂಮಿಯನ್ನು[೮೭],

[೮೦] ಎ.ಕ-೯, ಹೊ.ತಾ.೧೩೬+೧೩೮, ಕ್ರಿ.ಶ.೧೨೯೭, ತಮಿಳು, ಪರಮನಹಳ್ಳಿ ಗ್ರಾಮಕ್ಕೆ ಕೆರೇ ಮೇಲೆ ದಕ್ಷಿಣ ಕೊಡೀ ಬಳಿ ಬಿದ್ದಿರುವ ಕಲ್ಲು.
[೮೧] ಎ.ಕ-೯, ಹೊ.ತಾ.೧೨೮, ಕ್ರಿ.ಶ.೧೪೯೧, ಕನ್ನಡ, ವಾಗಟದ ವರದರಾಜಸ್ವಾಮಿಯ ದೇವಾಲಯದ ಉತ್ತರ ತಳಪಾದಿಕಲ್ಲಿನ ಮೇಲೆ.
[೮೨] ಎ.ಕ-೯, ಹೊ.ತಾ.೧೨೯, ಕ್ರಿ.ಶ.೧೩೭೮, ವಾಗಟದ ವರದರಾಜಸ್ವಾಮಿಯ ದೇವಾಲಯದ ಹೊರ ಬಿತ್ತಿಯಲ್ಲಿ.
[೮೩] ಎ.ಕ-೯, ಹೊ.ತಾ.೧೩೦, ಕ್ರಿ.ಶ. ೧೫೦೨, ಕನ್ನಡ, ವಾಗಟದ ವರದರಾಜಸ್ವಾಮಿಯ ದೇವಾಲಯದ ಹೊರ ಬಿತ್ತಿಯ ಮೇಲ್ಭಾಗದಲ್ಲಿ.
[೮೪] ಎ.ಕ-೯, ಹೊ.ತಾ.೧೩೧, ಕ್ರಿ.ಶ.೧೫೦೨, ವಾಗಟದ ವರದರಾಜಸ್ವಾಮಿಯ ದೇವಾಲಯದ ಮುಂದೆ ಧ್ವಜಸ್ತಂಭದ ಜಗಲಿಯ ಕಲ್ಲು.
[೮೫] ಎ.ಕ-೯, ಹೊ.ತಾ.೧೩೩, ವಾಗಟದ ವರದರಾಜಸ್ವಾಮಿಯ ದೇವಾಲಯದಲ್ಲಿರುವ ಪಾವ್ತಿ ದೇವಸ್ಥಾನದ ತಳಪಾದೀ ಕಲ್ಲು.
[೮೬] ಎ.ಕ-೯, ಹೊ.ತಾ.೧೨೭, ಕ್ರಿ.ಶ.೧೩೩೪, ತಮಿಳು, ವಾಗಟದ ವರದರಾಜಸ್ವಾಮಿಯ ದೇವಾಲಯದ ಉತ್ತರ ತಳಪಾದಿಕಲ್ಲಿನ ಮೇಲೆ.

ದಕ್ಷಿಣ ತಳಪಾದಿ ಕಲ್ಲಿನ ಮೇಲೆ ಸಿಕ್ಕ ದಣ್ಣಾಯಕರು[೮೮] ದಾನ ನೀಡಿದ ವಿವರಗಳಿವೆ. ಕ್ಷೇತ್ರ ಪಾಲ ಯಜ್ಞ ಮಾಡಿಸುವುದಕ್ಕಾಗಿ, ಪ್ರತಿ ವರ್ಷವು ಎಲ್ಲಾ ದೇವಾಲಯಗಳಲ್ಲಿ ಜಾತ್ರೆಗಳು ನಡೆಯುತ್ತಿರುತ್ತದೆ. ವರದರಾಜ ದೇವರಿಗೆ ಜಾತ್ರೆ ನಡೆಯುತ್ತಿತ್ತು ಎಂಬುದನ್ನು ದೇಸ್ಥಾನದ ದಕ್ಷಿಣ ಭಾಗದ ತಳಪಾದಿ ಕಲ್ಲಿನ ಮೇಲಿನ ಕ್ರಿ.ಶ.೧೩೪೦ ರ ಕಾಲದ ತಮಿಳು ಶಾಸನದಲ್ಲಿ ಕಾಣಬಹುದು[೮೯].

ವೀರ ವಲ್ಲಾಳ ದೇವರ ೨೫ನೇ ವರ್ಷದ ಅವಧಿಯಲ್ಲಿ ಮಹಾ ಪ್ರಧಾನನಾದ ದತ್ತಿ ಸಿಂಗೆ ದಣ್ಣಾಯಕರ ತಮ್ಮ ವಲ್ಲಪ್ಪ ದಣ್ಣಾಯಕರು ಪುಲಿಯೂರುನಾಡಿನ ವರದರಾಜ ಚತುರ್ವೇದಿ ಮಂಗಲದ ಬ್ರಹ್ಮದೇಯಹಳ್ಳಿಯ ಮಹಾಜನಗಳಿಗೆ ಸರ್ವಮಾನ್ಯವಾಗಿ ದಾನ ಕೊಟ್ಟ ವಿವರದ ದಾಖಲೆಯಾದ ಹಿಂದೆ ಆಂಜನೇಯ ದೇವಸ್ಥಾನದ ಪೂರ್ವ ಹಳ್ಳದಲ್ಲಿದ್ದ ಶಾಸನವನ್ನು ಈಗ ದೇವಸ್ಥಾನದ ಮುಂದೆ ಎಡಕ್ಕೆ ನಿಲ್ಲಿಸಲಾಗಿದೆ[೯೦].

ಕ್ರಿ.ಶ.೧೩೪೨ ರಲ್ಲಿ ವೀರ ಬಲ್ಲಾಳ ದೇವರ ಆಳ್ವಿಕೆಯಲ್ಲಿ ಮಾರಿಸೆಟ್ಟಿ, ಇರಾಮಿಸೆಟ್ಟಿ, ಸಮಂಡೈ ಸೆಟ್ಟಿ ಎಲ್ಲಾರೂ ಸೇರಿ ಇವತ್ತಮ್ ಎಂಬುವ ವರದರಾಜ ಚತುರ್ವೇದಿ ಮಂಗಲದಲ್ಲಿ ದಾನ ಕೊಟ್ಟರು[೯೧]. ೧೮ ಸಾಲುಗಳ ಈ ಶಾಸನದಲ್ಲಿ ದಾನದ ಪ್ರಮಾಣವನ್ನ ಉಲ್ಲೇಖವಿಲ್ಲ. ವಲ್ಲಪ್ಪದ ದಣ್ಣಾಯಕರು ಪುಲಿಯೂರುನಾಡಿನ ಇವತ್ತನ್ ಎಂಬುವ ವರದರಾಜ ಚತುರ್ವೇದಿ ಮಂಗಲದ ಚತುಸ್ಸೀಮೆಯೊಳಗಣವನ್ನು ಸರ್ವಮಾನ್ಯವಾಗಿ ಸೂರ್ಯ ಚಂದ್ರ ಸಾಕ್ಷಿಯಾಗಿ ಕೊಟ್ಟಿರುವುದನ್ನು ನವೀಕೃತಗೊಳಿಸಿದ ಬಗ್ಗೆ ೪೦ ಸಾಲುಗಳನ್ನು ಶಿಲೆ ಮೇಲೆ ಹಾಗೂ ತಾಮ್ರದ ಮೇಲೆ[೯೨] ಕಾಣಬಹುದು.

ದೇವಾಲಯದ ದಕ್ಷಿಣ ದಿಕ್ಕಿನ ಹೊರ ಭಿತ್ತಿಯಲ್ಲಿ ದಕ್ಷಿಣದ್ವಾರಕ್ಕೆ ಬಲಗಡೆ ಕಲ್ಲು ಗೋಡೆಯ ಮೇಲೆ ನಳ ಸಂವತ್ಸರದ ಪಷ್ಠಿ ಸು ೧೦ ಶುಕ್ರವಾರದಲು ಮಹಾ ಮಂಡಲೇಶ್ವರ ಕಠಾರಿ ಸಾಳ್ವ ಸಾಳುವ ಯಿಂಮಡಿ ನರಸಿಂಗರಾಯ ಮಹಾರಾಯರುಗಳ ಅಳಿಯ ಕೃಷ್ಣರಾಯ ವೊಡೆಯರು ಸಹಿರಂಣ್ಯೋದಕವಾಗಿ ಕ್ರಿ.ಶ.೧೪೯೬ ರಲ್ಲಿ[೯೩], ಪಶ್ಚಿಮ ಹೊರಭಿತ್ತಿಯಲ್ಲಿ ಬಲಗಡೆ ಕಲ್ಲು ಗೋಡೆಯ ಮೇಲೆ ಮನ್ಮಥ ಸಂವತ್ಸರದ ಆಶ್ವೀಜ ಶುದ್ಧ ೧೨ ಸೋಮವಾರದಲ್ಲೂ ಮಂಡಳೇಶ್ವರ ಚಿಕ್ಕ ಹರಿಹರರಾಯ

---

[೮೭] ಎ.ಕ-೯, ಹೊ.ತಾ.೧೩೨.ಎ, ಕ್ರಿ.ಶ.೧೩೪೬, ತಮಿಳು, ವಾಗಟದ ವರದರಾಜಸ್ವಾಮಿಯ ದೇವಸ್ಥಾನದ ದಕ್ಷಿಣ ಭಾಗದ ತಳಪಾದೀ ಕಲ್ಲು.
[೮೮] ಎ.ಕ-೯, ಹೊ.ತಾ.೧೩೨, ಕ್ರಿ.ಶ.೧೩೩೬, ತಮಿಳು, ವಾಗಟದ ವರದರಾಜಸ್ವಾಮಿಯ ದೇವಸ್ಥಾನದ ದಕ್ಷಿಣ ಭಾಗದ ತಳಪಾದೀ ಕಲ್ಲು.
[೮೯] ಎ.ಕ-೯, ಹೊ.ತಾ.೧೩೨.ಬಿ. ಕ್ರಿ.ಶ.೧೩೪೦, ತಮಿಳು, ವಾಗಟದ ವರದರಾಜಸ್ವಾಮಿಯ ದೇವಸ್ಥಾನದ ದಕ್ಷಿಣ ಭಾಗದ ತಳಪಾದೀ ಕಲ್ಲು.
[೯೦] ಎ.ಕ-೯, ಹೊ.ತಾ.೧೩೪, ಕ್ರಿ.ಶ.೧೩೩೬, ತಮಿಳು, ವಾಗಟ ಗ್ರಾಮಕ್ಕೆ ನೈರುತ್ಯ ಅಂಜನೇಯ ದೇವಸ್ಥಾನಕ್ಕೆ ಪೂರ್ವ ಹಳ್ಳದಲ್ಲಿ ನೆಟ್ಟ ಕಲ್ಲು.
[೯೧] ಎ.ಕ-೯, ಹೊ.ತಾ.೧೩೫, ಕ್ರಿ.ಶ.೧೩೪೨, ತಮಿಳು, ಹೊಸಹಳ್ಳಿ.
[೯೨] ಎ.ಕ-೯, ಹೊ.ತಾ.೧೩೭, ಕ್ರಿ.ಶ.೧೩೩೬, ತಮಿಳು, ಪರಮನಹಳ್ಳಿ.
[೯೩] ಎ.ಕ-೯, ಅನುಬಂಧ, ಹೊ.ತಾ.೧೭೪, ಕ್ರಿ.ಶ.೧೪೯೬, ವಾಗಟ ದೇವಸ್ಥಾನದ ದಕ್ಷಿಣ ದಿಕ್ಕಿನ ಹೊರಭಿತ್ತಿಯಲ್ಲಿ ದಕ್ಷಿಣ ದ್ವಾರಕ್ಕೆ ಬಲಗಡೆ ಕಲ್ಲುಗೋಡೆಯ ಮೇಲೆ.

ಒಡೆಯರ ಮನೆಯ ಬೆವಹಾರಿಗಳು ದೇವರಿಗೆ[೯೪], ಹೊರಭಿತ್ತಿಯಲ್ಲಿ ವರದರಾಜ ದೇವರ ನಂದಾ ದೀವಿಗೆಗೆ ಧಾರಾ ಪೂರ್ವಕವಾಗಿ ಅಷಾಡ ಶುದ್ದ ೫ ಲು ಹಿರಿಕೆರೆಯ ಕೆಳಗೆ[೯೫], ಆಂಜನೇಯ ದೇವಸ್ಥಾನಕ್ಕೆ ಉತ್ತರಕ್ಕೆ ನಿಲ್ಲಿಸಿರುವ ಕಂಬದಲ್ಲಿ ಲಕ್ಕಣ ನಾಯ್ಕನು ಶ್ರಾವಣ ಶುದ್ದ ೫ ಸೋಮವಾರ ದಿನ ಕ್ರಿ.ಶ.೧೫೧೧ ರಲ್ಲಿ[೯೬] ದಾನ ಕೊಟ್ಟಿದ್ದಾರೆ.

ಮಾರಯ್ಯನಾಯ್ಕರ ಮಗ ಪಂಮಂಣನು ತನಗೆ ನಾಯ್ಕ ತನಕ್ಕೆ ಸಲುವ ವೊಗಟ್ಟದ ಸೋಮೆಯ ದೇವರ ತಿರುನಾಳ ದೀಪಾರಾಧನೆಗೆ ಭಾದ್ರಪದ ಸು ೧೩ ರಲ್ಲಿ ಕೊಟ್ಟಿರುವುದನ್ನು ಈಶ್ವರ ದೇವಸ್ಥಾನದ ದಕ್ಷಿಣ ತಳಪಾದಿ ಕಲ್ಲಿನ ಮೇಲೆ[೯೭] ಕಾಣಬಹುದು. ಸೋಮೇಯ ದೇವರೇ ಈಗ ಈಶ್ವರ ದೇವಸ್ಥಾನವಾಗಿ ಬದಲಾಗಿದೆ.

ಚೌಡೇಶ್ವರಿ ದೇವಸ್ಥಾನದ ತೋರಣ ಕಂಬದ ಮೇಲೆ ರಾಜೇಂದ್ರ ಚೋಳ ಅವಧಿಯಲ್ಲಿ ಸೇವಾಚಾರಿ ಮಕರ ತೋರಣವನ್ನು ನಿಲ್ಲಿಸಿದನು[೯೮].

ಪ್ರತಿವರ್ಷ ೭ ದಿನಗಳ ಬ್ರಹ್ಮ ರಥೋತ್ಸವದಲ್ಲಿ ಮೊದಲ ದಿನ ರಾತ್ರಿ ಅಂಕುರಾರ್ಪಣ ಕೈಂಕರ್ಯವನ್ನು ಗ್ರಾಮದ ಸೇವಕರು ನಡೆಸಿಕೊಂಡು ಬಂದಿದ್ದಾರೆ. ನೈವೇದ್ಯಕ್ಕಾಗಿ ಬನಹಳ್ಳಿ ದಕ್ಷಿಣದ ೪ ಸೀಮೆಗಳನ್ನು ದಾನಬಿಟ್ಟು, ಅಪ್ಪಾಜಿದೇವ, ವೊಗಟ್ಟದ ಅಧಿಕಾರಿ ತಿಪ್ಪಯರ ಸಮ್ಮುಖದಲ್ಲಿ ಮುಂದಿಟ್ಟು ಹೊಡಿಸಲಾಗಿದೆ[೯೯].

ಕ್ರಿ.ಶ.೧೩೨೮ ರ ೨ ಸಾಲುಗಳ ಶಾಸನದಲ್ಲಿ ಸಮಸ್ತವಂದಿ, ಕಶ್ಯಪ ಗೋತ್ರದ ಬಳಕೆಯನ್ನು ಗಮನಿಸಿದರೆ ವಾಗಟದ ಚತುರ್ವೇದಿ ಮಂಗಲದಲ್ಲಿ ವಿವಿಧ ಗೋತ್ರದ, ಕುಲಗಳ ಮಹಾಜನರು (ಬ್ರಾಹ್ಮಣರು) ವಾಸಿಸುತ್ತಿದ್ದು, ಯಜ್ಞ ಯಾಗಾದಿ, ದೇವತೆಗಳ ಕಾರ್ಯಗಳಲ್ಲಿ ಮಗ್ನರಾಗಿದ್ದಾರೆನಿಸುತ್ತದೆ. ವಾಗಟದ ದೇವರಿಗೆ ೨೯ ವೃತ್ತಿ, ವರಾಹ ದೇವರಿಗೆ ೩ ವೃತ್ತಿಯನ್ನು ವ್ಯಯ ಸಂವತ್ಸರದ ಅಷಾಢ ಶುದ್ದ ೧೨ ಭಾನುವಾರ ಕೃಷ್ಣದೇವರಾಯರ ಅಧಿಕಾರವಧಿಯಲ್ಲಿ ಕ್ರಿ.ಶ.೧೫೨೬ ರಲ್ಲಿ ಹುಲ್ಲುರಸೀಮೆಯ ದೇವಿಶೆಟ್ಟಿಹಳ್ಳಿ ದೇವರಾಯಪುರದ ದಳವಾಯಿ ನಾಯ್ಕರು ದಾನ ನೀಡಿದರು[೧೦೦].

---

[೯೪] ಎ.ಕ-೯, ಅನುಬಂಧ,ಹೊ.ತಾ.೧೭೫, ವಾಗಟ ದೇವಸ್ಥಾನದ ಪಶ್ಚಿಮ ಹೊರಬಿತ್ತಿಯಲ್ಲಿ ದ್ವಾರಕ್ಕೆ ಬಲಗಡೆ ಕಲ್ಲು ಗೋಡೆಯ ಮೇಲೆ ಬರೆದಿರುವುದು.
[೯೫] ಎ.ಕ-೯, ಅನುಬಂಧ,ಹೊ.ತಾ.೧೭೬, ಕ್ರಿ.ಶ.೧೪೪೮, ವಾಗಟ ದೇವಸ್ಥಾನದ ಉತ್ತರ ಹೊರಬಿತ್ತಿಯಲ್ಲಿ ಮೇಲುಗಡೆ ಪಟ್ಟಿಯಲ್ಲಿ.
[೯೬] ಎ.ಕ-೯, ಅನುಬಂಧ,ಹೊ.ತಾ.೧೭೭, ಕ್ರಿ.ಶ.೧೫೧೧, ವಾಗಟ ಗ್ರಾಮದಲ್ಲಿ ಅಂಜನೇಯ ದೇವಸ್ಥಾನಕ್ಕೆ ಉತ್ತಕ್ಕೆ ನಿಲ್ಲಿಸಿರುವ ಕಲ್ಲು ಕಂಬ.
[೯೭] ಎ.ಕ-೯, ಅನುಬಂಧ, ಹೊ.ತಾ.೧೭೮, ವಾಗಟ ಗ್ರಾಮದಲ್ಲಿ ಈಶ್ವರ ದೇವಸ್ಥಾನದ ದಕ್ಷಿಣ ತಳಪಾದಿ ಕಲ್ಲಿನ ಮೇಲೆ.
[೯೮] ಎ.ಕ-೯, ಅನುಬಂಧ, ಹೊ.ತಾ.೧೭೯, ಕ್ರಿ.ಶ.೧೦೨೮, ಕೆರೆಯ ಪೂರ್ವಕ್ಕೆ ಚೌಡೇಶ್ವರಿ ದೇವಸ್ಥಾನದ ಮುಂದುಗಡೆ ನಿಲ್ಲಿಸಿರುವ ತೋರಣಗಂಬದ ಮೇಲೆ.
[೯೯] ಎ.ಕ-೯, ಹೊ.ತಾ.೧೨೮, ಕ್ರಿ.ಶ.೧೪೯೧, ವಾಗಟದ ವರದರಾಜಸ್ವಾಮಿಯ ದೇವಾಲಯದ ಉತ್ತರ ತಳಪಾದಿಕಲ್ಲಿನ ಮೇಲೆ.
[೧೦೦] ಎ.ಕ-೯, ಅನುಬಂಧ, ಹೊ.ತಾ.೧೯೩, ಕ್ರಿ.ಶ.೧೫೨೬, ದೇವಶೆಟ್ಟಹಳ್ಳಿಯಲ್ಲಿ ಮಾರಮ್ಮನ ಗುಡಿಯ ಬಳಿ ಬಿದ್ದಿರುವ ಕಲ್ಲು.

## ಶಿವಗಂಗೆಯಲ್ಲಿನ ದೇವಾಲಯಗಳು

ನೆಲಮಂಗಲ ತಾಲ್ಲೂಕಿನ ವಾಯುವ್ಯಕ್ಕೆ ೩೧ ಕಿ.ಮೀ. ದೂರದಲ್ಲಿ ಬೆಟ್ಟ ಸ್ವರೂಪಕ್ಕೆ ಅನುಗುಣವಾಗಿ ಪ್ರಾಕೃತಿಕವಾಗಿ ಇಲ್ಲಿ ಮೆಟ್ಟಿಲುಗಳ ಸಂಖ್ಯೆ ಹಾಗೂ ಕಾಶಿಗಿರುವ ದೂರಕ್ಕೆ ಸಂಬಂಧ ಕಲ್ಪಿಸಿ ದಕ್ಷಿಣಕಾಶಿ ಎಂದು, ಸ್ಥಳ ಪುರಾಣದಲ್ಲಿ ಮತ್ತು ದೇವರಾಯದುರ್ಗದ ತಾಮ್ರ ಶಾಸನದಲ್ಲಿ ಸಹ ಕಕುದ್ಗಿರಿ ಕ್ಷೇತ್ರ ಎನ್ನುವ ಶಿವಗಂಗೆಯು **(ಚಿತ್ರ ಸಂಖ್ಯೆ-೭೮)** ಧಾರ್ಮಿಕ ಕ್ಷೇತ್ರವಾಗಿ ದೇವಾಲಯ ಮತ್ತು ಮಠಗಳಿಂದ ವಿಖ್ಯಾತಗೊಂಡಿದೆ. ಕಳಲೆಯ ನಂಜರಾಜರು ೧೮ನೇ ಶತಮಾನದಲ್ಲಿ ಕಕೋದ್ಗಿರಿ ಮಹಾತ್ಮ ಎಂಬ ಗ್ರಂಥವನ್ನು ರಚಿಸಿದ್ದಾನೆ. ಅರ್ಕಾವತಿ ನದಿಯ ಕಣಿವೆಯ ಪಶ್ಚಿಮದ ಅಂಚಿನಲ್ಲಿರುವ ಶಿವಗಂಗೆ ಬೆಟ್ಟದ ಪೂರ್ವಕ್ಕೆ ಮಹಿಮ ರಂಗನ ಗುಡ್ಡ, ಪಶ್ಚಿಮಕ್ಕೆ ರಾಗಿ ಬೆಟ್ಟ (ರಾಮೇಶ್ವರ ಬೆಟ್ಟ), ಉತ್ತರಕ್ಕೆ ನರಸಿಂಹನ ಬೆಟ್ಟ (ನಿಜಗಲ್ಲು ಬೆಟ್ಟ), ದಕ್ಷಿಣಕ್ಕೆ ಕಾಡು ಕಲ್ಲಪ್ಪನ ಬೆಟ್ಟಗಳಿವೆ.

ಶಿವಗಂಗೆ ಬೆಟ್ಟವನ್ನು ಪೂರ್ವದ ದಿಕ್ಕಿನಲ್ಲಿ ನಂದಿಯಾಗಿ, ಪಶ್ಚಿಮ ದಿಕ್ಕಿನಲ್ಲಿ ನವಿಲುದಂತೆ (ಗಣಪತಿ), ಉತ್ತರ ದಿಕ್ಕಿನಲ್ಲಿ ಸರ್ಪದಂತೆ, ದಕ್ಷಿಣ ದಿಕ್ಕಿನಲ್ಲಿ ಲಿಂಗನಾಗಿ ೪ ದಿಕ್ಕಿನಲ್ಲಿ ೪ ರೀತಿ ಕಾಣಿಸುತ್ತದೆ. ಶಿವಗಂಗೆಯು ೧೩.೧೦° ರಿಂದ ೧೩.೧೫° ಉತ್ತರ ಅಕ್ಷಾಂಶ ಹಾಗೂ ೭೭.೧೦° ರಿಂದ ೭೭.೧೫° ಪೂರ್ವ ರೇಖಾಂಶದಲ್ಲಿದೆ. ಸಮುದ್ರ ಮಟ್ಟದಿಂದ ೪೫೫೯.೯೯ ಅಡಿಗಳು (೧೩೮೯ ಮೀ) ಎತ್ತರವಾದ ಈ ಬೆಟ್ಟವು ಗ್ರಾಮಾಂತರ ಜಿಲ್ಲೆಯಲ್ಲೆ ಅತಿ ಎತ್ತರದ ಬೆಟ್ಟವಾಗಿದೆ. ಭೌಗೋಳಿಕವಾಗಿ ನೀರು ಉತ್ಪತ್ತಿಯಾಗಲು ಅವಶ್ಯಕವಿರುವ ವಾತಾವರಣವನ್ನು ಸಹ ಹೊಂದಿದೆ. ಬೆಟ್ಟದಲ್ಲಿಯೇ ನೈಸರ್ಗಿಕವಾದ ನೀರಿನ ತಾಣಗಳು ಕಂಡು ಬರುವುದರಿಂದ ಆದಿ ಮಾನವರ ನೆಲೆಯಾಗಿರ ಬಹುದು. ಕಣ ಶಿಲೆಗಳಿಂದ ರೂಪು ಗೊಂಡಿರುವ ಬಂಡೆಗಳ ಸಂದುಗಳಲ್ಲಿ ನೀರು ಸಂಗ್ರಹವಾಗುತ್ತಿರುತ್ತದೆ. ಎಲ್ಲಾ ನದಿಗಳ ಉಗಮ ಸ್ಥಾನವೇ ಗಿರಿ ಪ್ರದೇಶವೇ ಆಗಿದೆ. ಗಿರಿಯಲ್ಲಿ ಅರ್ಕಾವತಿ ನದಿಯ ಉಪನದಿಯಾದ ಕುಮುದ್ವತಿ ನದಿಯು ಜನ್ಮತಾಳಿ ಸುಮಾರು ೪೬೦ ಕಿ.ಮೀ. ದೂರ ಹರಿಯುತ್ತದೆ. ನಂದಿಗಿರಿ ದುರ್ಗದಲ್ಲಿ ೫ ನದಿಗಳು ಉಗಮವಾಗುತ್ತದೆ. ಅಲ್ಲದೇ ಬೆಟ್ಟವು ಲೋಹದ ಅಂಶಗಳನ್ನು ಒಳಗೊಂಡಿರುವುದರಿಂದ ಉಷ್ಣತೆ ಹೆಚ್ಚಿದಂತೆ ಸಂದುಗಳಲ್ಲಿನ ನೀರು ಜಿನುಗುವುದರಿಂದ ಹಲವಾರು ತೀರ್ಥಗಳು ಉದ್ಭವವಾಗಲು ಕಾರಣವಾಗಿದೆ. ಬೆಟ್ಟದ ಸುತ್ತ ಇರುವ ೬೮ ಸಾವಿರ ತೀರ್ಥಗಳಿಂದ ಅಷ್ಟಾ ಷಷ್ಠಿ ಸಹಸ್ರ ಪುಷ್ಕರಣಿ ಕ್ಷೇತ್ರ ಎಂದು ಸಹ ಶಿವಗಂಗೆಯನ್ನು ಕರೆಯಲಾಗುತ್ತದೆ. ಅಗಸ್ತ್ಯ ಮುನಿಯು ಉಗ್ರ ತಪಸ್ಸಿಗೆ ಕುಳಿತ ನೆಲೆಯಲ್ಲಿ ಅಗಸ್ತ್ಯ ತೀರ್ಥ, ಹೊನ್ನಾದೇವಿ, ಬಸರಿಮರಕ್ಕೆ ಸಂಬಂಧಿಸಿದ ಕಮಲತೀರ್ಥ, ಬೆಟ್ಟದ ಉತ್ತರಕ್ಕಿರುವ ನೆಲ್ಲಿ ಮರದಡಿ ತಪಗೈದ ಪರಾಶರನ ಪರಾಶರ ತೀರ್ಥ, ಮಿತ್ರನೆಂಬ ಋಷಿಪುತ್ರ ಸಂತಾನ ಪ್ರಾಪ್ತಿಗಾಗಿ ತಪಸ್ಸು ಮಾಡಿದ ನೆಲೆಯಾದ ಮೈತ್ರೇಯ ತೀರ್ಥ, ಕಾಡೇಶ್ವರ ಸ್ವಾಮಿ ಗುಡಿ ಬಳಿಯ ಕಣ್ವ

ತೀರ್ಥ, ಕಪಿಲನ ಮಂತ್ರದ ಬಲಕ್ಕೆ ನಿರ್ಮಿತವಾದ ಕಪಿಲತೀರ್ಥ, ಮೌದ್ಗಲಮುನಿ ತಪಸ್ಸಿದ್ಧಿ ಪಡೆದ ನೆಲೆಯೇ ಮೌದ್ಗಲ್ಯ ತೀರ್ಥ, ಭೀಷ್ಮನ ಸಂಬಂಧದ ಗಂಗಾತೀರ್ಥ, ಕದಂಬ ಮುನಿ ನಿರ್ಮಿಸಿದ ಕದಂಬ ತೀರ್ಥ, ಮೈಥಿಲೀ ತೀರ್ಥವು ಬೆಟ್ಟದ ಪೂರ್ವದಲ್ಲಿದ್ದು ಶ್ರೀರಾಮಚಂದ್ರನು ಸೀತಾದೇವಿಯೊಡನೆ ವನವಾಸ ಮಾಡುತ್ತಿದ್ದಾಗ ಇಲ್ಲಿಗೆ ಬಂದಾಗ ಸೀತಾದೇವಿಯ ಸ್ನಾನಕ್ಕೋಸ್ಕರ ನಿರ್ಮಿಸಿದ ತೀರ್ಥ. (ಕಣ್ವ, ಅಗಸ್ತ್ಯ, ಮೌದ್ಗಲ್ಯ ತೀರ್ಥಗಳಿಗೂ ಆಯಾ ಋಷಿಗಳ ಜೊತೆ ಹಲವಾರು ಕಥೆಗಳಿವೆ.) ಆದಿ ಶಂಕರರು ಸಂಧ್ಯಾ ವಂದನೆಗೆ ಕುಳಿತಿದ್ದ ಶಂಕರ ತೀರ್ಥ (ಕಮಂಡಲ ತೀರ್ಥ), ಕೆಂಪೇಗೌಡನ ಹಜಾರದ ಸಮೀಪದಲ್ಲಿ ವೃತ್ತಾಕಾರದ ಚಕ್ರತೀರ್ಥ, ಹೊನ್ನಾದೇವಿಯ ದಾಹ ತಣಿಸಿದ ಪಾತಾಳಗಂಗೆ ಎನ್ನುವ ಅಂತರಗಂಗೆ (ಶಿವಗಂಗೆಯಲ್ಲಿ ರಕ್ತಬೀಜಾಸುರನ ಸಂಹಾರದ ಕಥೆಯಿದೆ. ಮಹಿಷಾಸುರನ ಮಂತ್ರಿ ರಕ್ತಬೀಜಾಸುರನನ್ನು ಕೊಂದ ಪಾರ್ವತಿ ಅಥವಾ ಚಾಮುಂಡಿ ಸ್ವಲ್ಪ ಕಾಲ ವಿಶ್ರಾಂತಿ ಪಡೆದ ಸ್ಥಳವಾದ ಇಲ್ಲಿ ಬಾಯಾರಿಕೆ ನಿವಾರಿಕೆಗಾಗಿ ನೀರನ್ನರಸಿ ಖಡ್ಗದಿಂದ ಬಂಡೆಯನ್ನು ಸೀಳಿದಾಗ ಪಾತಾಳಗಂಗೆ ಉದ್ಭವವಾಯಿತು ಎಂಬುದು ಜನರ ನಂಬಿಕೆ), ಮೇಲಣ ಗವಿ ಮಠದ ಬಳಿ ಒಳ್ಕಲ್ ತೀರ್ಥ, ಮಠದ ಹಿಂಬದಿಯ ಕುಮುದ್ವತಿ ತೀರ್ಥ, ಗಾರ್ಗೇಯ ತೀರ್ಥ, ಭೋಗವತಿ ತೀರ್ಥ, ಗಂಧವತಿ ತೀರ್ಥ, ನಾಗಿನಿ ತೀರ್ಥ, ಅಬ್ಬವತಿ ತೀರ್ಥ, ಸುವರ್ಣಮುಖಿ ಎಂಬ ತೀರ್ಥಗಳಿದ್ದು, ಅಗಸ್ತ್ಯ ತೀರ್ಥದ ಬಳಿ ಹಳೆ ಮಠದ ಆವರಣದಲ್ಲಿ ಓಂಕಾರೇಶ್ವರ, ಗಣಪತಿ, ಚಂದ್ರಮೌಳೀಶ್ವರ ಗುಡಿ, ಗುರು ಗದ್ದುಗೆ ಜೊತೆಗೆ ಈ ತೀರ್ಥದ ಸುತ್ತ ೧೦೮ ಅಕಾರದಿಂದ ಹ ಕಾರದವರೆಗಿನ ಶಿವನ ಹೆಸರುಗಳುಳ್ಳ ಲಿಂಗಗಳಿವೆ. ಲಿಂಗದ ತೀರ್ಥದ ಸುತ್ತಲಿರುವ ಕೈಸಾಲೆಯನ್ನು ಲಿಂಗಪ್ಪಶೆಟ್ಟಿ ಶ್ರೀ ರಾಯನರಸಪ್ಪ ಶೆಟ್ಟಿ ಸೇವೆಯಾಗಿ[೧೦೧] ನಿರ್ಮಿಸಿದನು. ಕಮಲಾನದಿಯ ಉಗಮ, ಗಿರಿಯ ಸುತ್ತ ೮ ದಿಕ್ಕಿಗೂ ಇಳೇಯಾದ್ರಿ ಶಾರ್ದುಲಾದ್ರಿ ಇತ್ಯಾದಿಯಾದ ಪರ್ವತಗಳಿವೆ.

ಶಾಸನಗಳಲ್ಲಿ ಶಿವಗಂಗೆಯನ್ನು ಶಿವಗಂಗೇಶಾದ್ರಿ, ಕಕ್ಕುದ್ಗಿರಿ, ಶಿವಗಂಗಿನಾಥ ದೇವರ ಗಿರಿ, ದಕ್ಷಿಣ ಕೈಲಾಸ, ದಕ್ಷಿಣ ಕಾಶಿ, ದಕ್ಷಿಣ ವಾರಣಾಸಿ, ಶಿವಗಂಗೆ ಮೇಲಣ ಬೆಟ್ಟ, ಶಿವಗವಿ, ಶಿವಗಂಗೆ ದೇವರಬೆಟ್ಟ ಎಂದೆಲ್ಲಾ ಉಕ್ತವಾಗಿದೆ. ಗಂಗಾಧರೇಶ್ವರ ಸ್ವಾಮಿಯನ್ನು ಶಿವಗಂಗೆನಾಥ, ಶ್ರೀಗಂಗನಾಥದೇವ, ಶ್ರೀಗಂಗಾಧರ ದೇವರು, ಗಂಗಾಧರ ಸ್ವಾಮಿ, ಗಂಗಿನಾಥ ಎಂದೆಲ್ಲಾ ಕರೆಯಲಾಗಿದೆ. ಶಿವಗಂಗೆಯು ಬಹುಶಃ ನಾಥ ಪಂಥ ಪರಂಪರೆಯ ಕೇಂದ್ರವಾಗಿದ್ದಿರಬೇಕು. ಶಿವಗಂಗೆ ಸಮೀಪದಲ್ಲಿ ಸಿದ್ದರ ಬೆಟ್ಟವಿದೆ. ದಕ್ಷಿಣಕ್ಕೆ ಮಾಗಡಿಯ ಕಲ್ಯವು ಪ್ರಾಚೀನ ಕಾಲದಲ್ಲಿ ಬೌದ್ಧ ಧರ್ಮದ ಪ್ರಭಾವಕ್ಕೊಳಪಟ್ಟಿದ್ದ ವಿಚಾರವನ್ನು ಚಿದಾನಂದ ಮೂರ್ತಿಯವರು ಲೇಖನವೊಂದರಲ್ಲಿ ಹೇಳಿದ್ದಾರೆ.

[೧೦೧] ಎಂ.ಆರ್.ಎ, ೧೯೩೫, ಮೈಸೂರು, ಶಿವಗಂಗೆ, ಪು.ಸಂ-೭೫.

ಮಂಗಳೂರು ಸಮೀಪದ ಕದರಿ ಕ್ಷೇತ್ರವು ಪ್ರಾಚೀನ ಬೌದ್ಧ ಕ್ಷೇತ್ರವಾಗಿದ್ದು, ನಂತರ ನಾಥ ಪಂಥದ ಕೇಂದ್ರವಾದ ರೀತಿಯಲ್ಲಿ ಶಿವಗಂಗೆಯು ಅದೇ ರೀತಿಯಲ್ಲಿ ಆಗಿರಬಹುದು.

**ಗಣೇಶನ ದೇವಸ್ಥಾನ**

ಕುದೂರು ಗ್ರಾಮಕ್ಕೆ ಹೋಗುವ ದಾರಿಯಲ್ಲಿರುವ ಒಂದು ದೊಡ್ಡ ಬಂಡೆಯಲ್ಲಿ ಕೊರೆದ ಗಣೇಶ ಶಿಲ್ಪದಲ್ಲಿ ಚತುರ್ಭುಜ ಕೈಗಳಲ್ಲಿ ಪಾಶ, ದಂತ, ಮೋದಕ ಕಮಲಗಳಿವೆ, ಉದ್ದನೆಯ ಸೊಂಡಿಲು ಶಿಲ್ಪವು ಸುಮಾರು ೨.೫ ಮೀ. ಅಗಲವಿದೆ. ಹುಟ್ಟು ಬಂಡೆಯಲ್ಲಿ ರಚಿಸಿದ ಗಣೇಶ ಶಿಲ್ಪಕ್ಕೆ ಗರ್ಭಗುಡಿ ಮತ್ತು ಮುಖ ಮಂಟಪವನ್ನು ನಿರ್ಮಿಸಿಲಾಗಿದೆ.

**ಕಮಲತೀರ್ಥ**

ಊರಿಗೆ ಹೊಂದಿಕೊಂಡಂತೆ ಬೆಟ್ಟಕ್ಕೆ ಹೋಗುವ ಮಹಾದ್ವಾರದಲ್ಲಿ ಕಮಲ ತೀರ್ಥವಿದೆ, ಸೋಪಾನದ ಸುತ್ತಲು ರಾಮಾಯಣ, ಮಹಾಭಾರತ, ಭಾಗವತದ ಚಿತ್ರಗಳು ಕೆತ್ತಲ್ಪಟ್ಟಿವೆ. ಈ ತೀರ್ಥವು ಸು. ೨೦೦ x ೨೦೦ ಮೀ. ವಿಸ್ತೀರ್ಣದ ಚೌಕಾಕಾರದ ಮೆಟ್ಟಿಲುಗಳಿಂದ ನಿರ್ಮಿತವಾದ ಕಲ್ಯಾಣಿಯಿದೆ. ಈ ಕಲ್ಯಾಣಿಯ ಆಳಕ್ಕೆ ಹೋದಂತೆ ವಿಸ್ತಾರ ಕಡಿಮೆಯಾಗುತ್ತದೆ. ಕಲ್ಯಾಣಿಯನ್ನು ಪ್ರವೇಶಿಸಲು ೪ ಕಂಬಗಳಿಂದ ನಿರ್ಮಿಸಿದ ದ್ವಾರವಿದೆ. ಹೊರಭಾಗದಲ್ಲಿ ಸರಳವಾಗಿದ್ದು, ಒಳಭಾಗವು ವಿವಿಧ ಪಟ್ಟಿಕೆಗಳಿಂದ ಅಲಂಕಾರವಾಗಿ, ೧.೫ ಮೀ. ಎತ್ತರವಾಗಿದ್ದು, ಕಮಲ ಕಪೋತಗಳಿಂದ ಕೂಡಿದೆ. ಕುಮುದ ಪಟ್ಟಿಯಲ್ಲಿ ಸಾಲಾಗಿ ರಾಮಾಯಣದ ಕಥನ ಕತೆಯ ವೃತ್ತಾಂತ ಶಿಲ್ಪಗಳನ್ನು ಕೆತ್ತಲಾಗಿದೆ.

ಸರಳವಾಗಿ ಸಾಲಾಗಿ ೩೮ ಸೆಂ.ಮೀ ಎತ್ತರ ಹಾಗೂ ೨೫ ಸೆಂ.ಮೀ ಅಗಲವಾದ ರಾಮಾಯಣದ ಶಿಲ್ಪಗಳು ಪಶ್ಚಿಮದ ಮೂಲೆಯ ಗೋಡೆಯಿಂದ ಪ್ರಾರಂಭವಾಗುತ್ತದೆ. ಶ್ರವಣಕುಮಾರ ತನ್ನ ತಂದೆ–ತಾಯಿಯನ್ನು ಕಾಡಿನಲ್ಲಿ ಕರೆದೊಯ್ಯುತ್ತಿರುವುದು, ಕೈಯಲ್ಲಿ ಲೋಟ ಹಿಡಿದಿರುವುದು ದಶರಥ ಬಿಲ್ಲು–ಬಾಣಗಳೊಂದಿಗೆ ಗಿಡದ ಮರೆಯಲ್ಲಿ ನಿಂತಿರುವುದು, ನಂತರ ಶ್ರವಣಕುಮಾರ ಲೋಟದಲ್ಲಿ ನೀರನ್ನು ತೆಗೆದುಕೊಳ್ಳುತ್ತಿರುವಾಗ ಬಾಣ ತಗುಲಿ ನೆಲಕ್ಕುರುಳುತ್ತಾನೆ. ದಶರಥ ಶ್ರವಣಕುಮಾರನಿಂದ ನೀರಿನ ಲೋಟ ತೆಗೆದುಕೊಳ್ಳುತ್ತಿರುವನು. ದಶರಥ ಲೋಟವನ್ನು ವೃದ್ಧ ತಂದೆ– ತಾಯಿಯರ ಹತ್ತಿರ ತೆಗೆದುಕೊಂಡು ಹೋಗುತ್ತಿರುವನು. ಇಲ್ಲಿಂದ ೨೪ ಶಿಲ್ಪಗಳು ಕೃಷ್ಣನ ಬಾಲ ಲೀಲೆಗಳು, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ, ಕಾಳಿಂಗಮರ್ಧನ, ಅಲ್ಲದೆ ಕೆಲವು ಅಲಂಕಾರ ಶಿಲ್ಪಗಳಾದ ಮಾಳಿ, ಹಂಸ, ಕುಂಭ, ಅರಳಿದ ಕಮಲದ ಮೇಲೆ ಕುಳಿತಿರುವ ಸಿಂಹ, ಆಮೆ ಇತ್ಯಾದಿ ಕೆತ್ತನೆಗಳಿವೆ.

ಪಶ್ಚಿಮ ಗೋಡೆಯ ಮಧ್ಯದಲ್ಲಿ ದ್ವಾರದ ನಂತರ ಗೋಡೆಯ ಪಟ್ಟಿಗೆಯಲ್ಲಿ ರಾಮಾಯಣದ ಶಿಲ್ಪಗಳನ್ನು ಎಡದಿಂದ ಬಲಕ್ಕೆ ರಚಿಸಲಾಗಿದೆ. ರಥದಲ್ಲಿ ಕುಳಿತು ದಶರಥ ಮೆರವಣಿಗೆಯೊಂದಿಗೆ ಅಯೋಧ್ಯಾ ನಗರಕ್ಕೆ ಪ್ರವೇಶಿಸುತ್ತಿರುವುದು. ನಂತರ ಆಸ್ಥಾನದಲ್ಲಿ ಶ್ರವಣಕುಮಾರನ ಹತ್ಯೆಯಿಂದಾದ ಶಾಪವಿಮೋಚನೆಗೆ ಸಮಾಲೋಚಿಸುತ್ತಿರುವ ದೃಶ್ಯ. ಹಸ್ತ ಪ್ರತಿಗಳು-ದಪ್ಪಗಾತ್ರದ ಪಂಚಾಂಗವನ್ನು ಹಿಡಿದು ಕುಳಿತಿರುವ ಆಸ್ಥಾನದ ವಿದ್ವಾಂಸನ ಶಿಲ್ಪ, ಅರಣ್ಯದಿಂದ ಅಯೋಧ್ಯೆಗೆ ದಶರಥನ ಪುತ್ರಕಾಮೇಷ್ಟಿ ಯಾಗಕ್ಕೆ ಋಷ್ಯಶೃಂಗನ ಆಮಂತ್ರಣ, ಸ್ತ್ರೀ ದೇಹಗಳಿಂದ ಮಾಡಿದ ಪಲ್ಲಕ್ಕಿಯಲ್ಲಿ ಋಷ್ಯಶೃಂಗನನ್ನು ಕರೆದೊಯ್ಯುತ್ತಿರುವುದು. ಅಗ್ನಿದೇವತೆ ಪಾಯಸ ಪಾತ್ರೆ ಹಿಡಿದಿರುವುದು. ಋಷ್ಯಶೃಂಗ ದಶರಥನಿಗೆ ಪಾಯಸಪಾತ್ರೆ ನೀಡುತ್ತಿರುವುದು. ಪಾಯಸದಿಂದ ದಶರಥನ ಪತ್ನಿಯರಿಗೆ ಸಂತಾನಪ್ರಾಪ್ತಿಯಾಗಿ ಚಿಕ್ಕಮಕ್ಕಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಾಲಾಗಿ ದಶರಥನ ಪತ್ನಿಯರು ಕುಳಿತಿರುವುದು ಒಂದು ಭಾಗವಾದರೆ ಮುಂದೆ ಬಾಲಕಾಂಡದ ಪ್ರಾರಂಭವಾಗುತ್ತದೆ. ಯಾಗಕ್ಕೆ ರಾಕ್ಷಸರ ತೊಂದರೆ ನಿವಾರಣೆಗೆ ದಶರಥನ ಆಸ್ಥಾನಕ್ಕೆ ವಿಶ್ವಾಮಿತ್ರ ಋಷಿಗಳ ಭೇಟಿ, ರಾಮ-ಲಕ್ಷ್ಮಣರು ಯಾಗಕ್ಕೆ ಅಡ್ಡಿಪಡಿಸುವ ರಾಕ್ಷಸರನ್ನು ಸಂಹರಿಸುವ ದೃಶ್ಯ, ತಾಟಕಿಯ ವಧೆ. ಮುಂದೆ ಸೀತಾ ಸ್ವಯಂವರದಲ್ಲಿ ರಾಮ ಶಿವಧನುಸ್ಸನ್ನು ಮುರಿದು ಹಾಕುತ್ತಿರುವುದು. ರಾಮ-ಸೀತೆ, ಲಕ್ಷ್ಮಣ-ಊರ್ಮಿಳೆ ಹಾಗೂ ಇತರ ಸಹೋದರರ ಮದುವೆ ದೃಶ್ಯಗಳು, ಜನಕರಾಜ ಕನ್ಯಾಧಾನ ಮಾಡುತ್ತಿರುವುದು, ರಾಮ-ಸೀತೆ ಹಸ್ತಗಳನ್ನು ಹಿಡಿದು ನಿಂತಿರುವುದು. ಜನಕನ ಕೈಯಲ್ಲಿ ಕಳಸ, ಸಾಲಾಗಿ ಲಕ್ಷ್ಮಣ, ಭರತ, ಶತ್ರುಘ್ನರ ಕಲ್ಯಾಣದ ಸಾಲುಗಳು, ಕಲ್ಯಾಣದ ನಂತರ ರಾಮ, ಲಕ್ಷ್ಮಣ ಸಹೋದರರು ಅಯೋಧ್ಯದಲ್ಲಿ ಮಾತಾ ಪಿತೃಗಳ ಭೇಟಿ ಮತ್ತು ಆಶೀರ್ವಾದ ಪಡೆಯುವುದು.

ಅರಣ್ಯ ಪರ್ವದಲ್ಲಿ ದಶರಥ ರಾಮನನ್ನು ಕಾಡಿಗೆ ಹೋಗುವಂತೆ ಆದೇಶಿಸುತ್ತಿರುವುದು. ರಾಮ, ಲಕ್ಷ್ಮಣ, ಸೀತೆ ಅರಣ್ಯದ ಕುಟೀರದಲ್ಲಿ ಕುಳಿತ್ತಿದ್ದು, ಸೀತೆ ಜಿಂಕೆಯೊಂದನ್ನು ತೋರಿಸುತ್ತಿರುವಳು, ಜಿಂಕೆ ರೂಪದ ಮಾರೀಚನ ವಧೆ, ರಾಮನು ಪಕ್ಕದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವವನು. ಸೀತೆಯ ಅಪಹರಣ ಸನ್ನಿವೇಶ, ಭಿಕ್ಷೆ ನೀಡುವಂತೆ ರಾವಣ ಕೇಳುವುದು, ಪಾತ್ರೆಯೊಂದಿಗೆ ಸೀತೆ, ಹನುಮಂತನೊಂದಿಗೆ ಸುಗ್ರೀವ ರಾಮ ಲಕ್ಷ್ಮಣರನ್ನು ಭೇಟಿಯಾಗುತ್ತಿರುವುದು, ಸುಗ್ರೀವ, ವಾಲಿ ಕಾಳಗ, ವಾಲಿಯ ವಧೆ, ರಾಮ ಸಪ್ತ ತಾಳೆ ವೃಕ್ಷಗಳ ಮೇಲೆ ಬಾಣ ಪ್ರಯೋಗ, ರಾಮ ಹನುಮಂತನ ಭೇಟಿ, ರಾಮನ ಆಜ್ಞೆಯಂತೆ ಲಂಕೆಯಲ್ಲಿ ಸೀತೆಯನ್ನು ಹನುಮಂತ ಭೇಟಿಯಾಗುತ್ತಿರುವುದು. ಲಂಕೆಗೆ ಸೇತುವೆಯನ್ನು ನಿರ್ಮಿಸುತ್ತಿರುವುದು, ಲಂಕಾನಗರ ಕಲ್ಪನೆಗೆ ಗೋಪುರವನ್ನು ಸಮುದ್ರ ಬದಲು ಮೀನು ಹೀಗೆ ಸಮುದ್ರದ  ದಂಡೆಯ ಮೇಲೆ ಗೋಪುರಗಳು ಲಂಕೆಯ ನಗರವನ್ನು ಸೂಚಿಸುತ್ತದೆ.

ರಾಮ-ರಾವಣರ ಕಾಳಗದ ದೃಶ್ಯವನ್ನು ಎರಡು ಶಿಲ್ಪಗಳಲ್ಲಿ, ಪರಸ್ಪರ ಬಾಣ ಪ್ರಯೋಗಿಸುತ್ತಿರುವುದು, ರಾವಣನನ್ನು ಹತ್ತು ತಲೆಗಳಲ್ಲಿ ತೋರಿಸಿ, ಸೀತೆಯ ಅಗ್ನಿ ಪರೀಕ್ಷೆ, ಸೀತೆಯು ಅಗ್ನಿ ಕುಂಡದಿಂದ ಹೊರಬರುವುದು. ರಾಮ ಪಟ್ಟಾಭಿಷೇಕ ಪೀಠದ ಮೇಲೆ ರಾಮ-ಸೀತೆ ಕುಳಿತಿರುವುದು ಪಾದದ ಬಳಿ ಹನುಮಂತ, ಪೀಠದ ಬಳಿ ಲಕ್ಷ್ಮಣ, ಭರತ, ಶತೃಘ್ನ ಮತ್ತು ಋಷಿಗಳಿದ್ದಾರೆ. ದಕ್ಷಿಣ ಗೋಡೆಯ ಪಕ್ಕದಲ್ಲಿ ಕುಳಿತಿರುವ ಸಿಂಹ, ಬೆಣ್ಣೆಕೃಷ್ಣ, ಕಾಳಿಂಗಮರ್ಧನ, ಹಂಸ, ಆಮೆ, ಯಾಳಿ, ಆನೆ ಮೃದಂಗ ನುಡಿಸುತ್ತಿರುವ ಸಂಗೀತಕಾರ, ವೀಣೆ ಹಿಡಿದಿರುವ ಸಂಗೀತಕಾರ ಇತ್ಯಾದಿಗಳ ಶಿಲ್ಪಗಳಿವೆ. ಬಹುಶಃ ನಾಡಪ್ರಭುಗಳ ಕಾಲದಲ್ಲಿ ಈ ರಾಮಾಯಣದ ಕಥೆಯ ಉಬ್ಬು ಶಿಲ್ಪಗಳು ರಚನೆಯಾಗಿರಬೇಕು. ಏಕೆಂದರೆ ಆವತಿನಾಡಪ್ರಭುಗಳ ಅವಧಿಯಲ್ಲಿ ತಿಮ್ಮರಾಯಸ್ವಾಮಿ ಮತ್ತು ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಾಲಯದ ಭಿತ್ತಿಯಲ್ಲಿ ಸಹ ಇದೇ ರೀತಿಯಲ್ಲಿ ರಾಮಾಯಣದ & ಶ್ರೀಕೃಷ್ಣನ ಬಾಲ್ಯಲೀಲೆಗಳ ಉಬ್ಬು ಶಿಲ್ಪಗಳನ್ನ ಕಾಣಬಹುದು.

ಬೆಟ್ಟದ ಕೆಳ ಭಾಗದಲ್ಲಿ ಆಯತಾಕಾರದಲ್ಲಿರುವ ಶಿವಗಂಗೆ ಗ್ರಾಮಕ್ಕೆ ಪ್ರವೇಶಿಸಲು ಪೂರ್ವ, ಉತ್ತರಕ್ಕೆ ದ್ವಾರಗಳಿವೆ. ಪೂರ್ವದ ಹಂಚಿನ ದ್ವಾರವು ೯-೧೦ನೇ ಶತಮಾನದ ಗಂಗರ ಕಾಲದ ವಾಸ್ತುಶೈಲಿಯಲ್ಲಿದ್ದರೆ, ಉತ್ತರದ ಪ್ರವೇಶದ್ವಾರವು ಸರಳವಾಗಿ ಮೈಸೂರು ಒಡೆಯರ ಕಾಲದ ವಾಸ್ತುಶೈಲಿಯಲ್ಲಿದೆ. ಇದಲ್ಲದೆ ಈ ಬೆಟ್ಟದ ಸುತ್ತ ಐದು ಕಾಲು ನಡಿಗೆ ದಾರಿಗಳಿವೆ. ಶಿವಗಂಗೆಯಲ್ಲಿ ಗಂಗರ, ಹೊಯ್ಸಳ, ವಿಜಯನಗರ ಅರಸರು, ಮೈಸೂರು ಒಡೆಯರು ಹಾಗೂ ನಾಡಪ್ರಭುಗಳ ಕೊಡುಗೆಯಾಗಿ ದೇವಾಲಯಗಳು, ಮಂಟಪಗಳು ಮತ್ತು ದೇವಾಲಯಗಳಿಗೆ ನೀಡಿರುವ ಹಲವಾರು ದಾನ-ದತ್ತಿಗಳ ಶಾಸನಗಳಿವೆ.

ನಿಸರ್ಗದತ್ತವಾಗಿರುವ ಗುಹೆಗಳಲ್ಲಿ ಗಂಗಾಧರೇಶ್ವರ, ಹೊನ್ನಾದೇವಿ ದೇವಾಲಯಗಳು ಗಂಗರ ಕಾಲದ ದೇವಾಲಯಗಳಾಗಿದ್ದವು ಎಂದು ಹೇಳಲಾಗುತ್ತದೆ[೧೦೨].

ಮಹಾದ್ವಾರದ ಎಡಭಾಗದಲ್ಲಿ ವಿಘ್ನೇಶ್ವರನ ವಿಗ್ರಹವಿದೆ, ಇದರ ಪಶ್ಚಿಮಕ್ಕೆ ವೀರಭದ್ರ ದೇವಾಲಯ. ಸ್ವಲ್ಪ ಮುಂದೆ ಬಲಭಾಗದಲ್ಲಿ ಷಣ್ಮುಖಸ್ವಾಮಿ ದೇವಾಲಯವಿದೆ, ಎರಡನೇಯ ಮಹಾದ್ವಾರದ ಪ್ರವೇಶದ ಹತ್ತಿರವೇ ಪಾತಾಳಗಂಗೆಗೆ ಮೆಟ್ಟಿಲುಗಳಿವೆ, ಇದರ ಪಕ್ಕದಲ್ಲೇ ವೀರಭದ್ರನ ಮೂರ್ತಿ ಇದೆ (ಹೊನ್ನಾದೇವಿಯ ಗುಡಿ ಹಿಂಬದಿಯಲ್ಲಿ ೯ ಅಡಿ ಎತ್ತರದ ಪಾತಾಳ ರುದ್ರದೇವ ಶಿಲ್ಪವಿದೆ.), ಇದೇ ಪ್ರಕಾರದ ಆಗ್ನೇಯ ದಿಕ್ಕಿನಿಂದ ಮುಂದುವರಿದರೆ ಪುರಾತನ ಹೊನ್ನಮ್ಮಗವಿ

[೧೦೨] ಡಾ.ದೇವರ ಕೊಂಡಾರೆಡ್ಡಿ :- ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಪು.ಸಂ-೨೦೩.

ಮಠವಿದೆ, ಇದರ ನೈಋತ್ಯಕ್ಕೆ ಶಂಕರಾಚಾರ್ಯರ ತೀರ್ಥವಿದೆ, ಇದನ್ನು ಶಂಭು ತೀರ್ಥವೆಂದು ಕರೆಯುತ್ತಾರೆ, ಇದರ ಹತ್ತಿರ ಇರುವ ಗುಹೆಯನ್ನು ಶಂಕರ ಗುಹೆಯೆನ್ನುತ್ತಾರೆ.

**ಹೊನ್ನಾದೇವಿ ದೇಗುಲ**

ಮೂರನೇಯ ಮಹಾದ್ವಾರದ ಬಳಿ ಹೊನ್ನಾದೇವಿ (ಸ್ವರ್ಣಾಂಬೆ) ಗುಹಾಂತರ ದೇವಾಲಯವಿದೆ (ಗಂಗಾಧರ ದೇವಾಲಯದ ಎಡಬದಿಯಲ್ಲಿ ಹೊನ್ನಾದೇವಿಯ ದೇಗುಲವಿದೆ.), ಗಿರಿಜಾಕಲ್ಯಾಣದ ನಂತರ ಹೊನ್ನಾಂಬಿಕೆ (ಸ್ವರ್ಣಾಂಬರ) ಎಂಬ ಹೆಸರಿನಿಂದ ಉದ್ಭವವಾದ ತ್ರಿಗುಣಾತ್ಮಕಳಾದ ಸರಸ್ವತಿ, ಲಕ್ಷ್ಮಿ, ಪಾರ್ವತಿಯರ ಪ್ರತೀಕ ಎಂಬ ಕಥೆಯಿದೆ. ಈ ದೇವಾಲಯವು ೪೦ ಅಡಿ ಚೌಕಾರವಾಗಿದ್ದು ಇಲ್ಲಿನ ಹೊನ್ನಾದೇವಿಯ ಮೂರ್ತಿಯು ಸುಮಾರು ೫. ೧/೨ ಅಡಿ ಎತ್ತರದ ರಕ್ತ ವೀಜಾಸುರನನ್ನು ಮರ್ದಿಸುವ ಭಂಗಿಯಲ್ಲಿದ್ದು, ಅಷ್ಟಬಾಹುಗಳನ್ನು ಹೊಂದಿದೆ. ಸಂಹಾರಧರ್ಮದ ಆಯುಷಾಧಾರಿಣಿ ಖಡ್ಗ, ನಾಗಪಾಶ ಸುತ್ತದ ಗಂಡುಕೊಡಲಿ, ಚಕ್ರ, ಗುರಾಣಿ, ಗಂಟೆ, ಶಂಖ, ತ್ರಿಶೂಲಗಳನ್ನು ಹಸ್ತಗಳಲ್ಲಿ ಹೊಂದಿರುವ ಉಗ್ರರೂಪದ ವಿಗ್ರಹದ ಹಿಂದೆ ಶ್ರೀಚಕ್ರ ಕೆತ್ತನೆಯಿದೆ. ಈಕೆಗೆ ಗಂಡಭೇರುಂಡದಿಂದಿರುವ ಕಿರೀಟ, ಕೆಲಭಾಗದಲ್ಲಿ ಪಂಚರಾಕ್ಷಸ ರುಂಡಮಾಲೆ, ಫಾಲನೇತ್ರ, ಸೊಂಟದಲ್ಲಿ ನವರಾಕ್ಷಸರ ರುಂಡಮಾಲೆ ಧಾರಿಣಿ, ಕೋರೆಹಲ್ಲುಗಳ ನಡುವೆ ಹೊರಚಾಚಿರುವ ನಾಲಗೆ, ಈ ರೀತಿಯ ಉಗ್ರರೂಪ ನೋಡಿ ಜನ ಬರಲು ಹೆದರಿಸಿದರಂತೆ. ಆಗ ಶ್ರೀ ಉಜ್ಜೈಯಾನಿ ಪೀಠದ ಶ್ರೀ ಜಗದ್ಗುರು ಮರುಳ ಸಿದ್ಧರು ಬಂದು ದೇವಿಗೆ ಉಗ್ರ ರೂಪ ಬಿಟ್ಟು ಶಾಂತಳಾಗು ಎಂದಾಗ ಶಾಂತ ರೂಪಿ ಆದಳಂತೆ ಆದ್ದರಿಂದ ದೇಗುಲಕ್ಕೆ ಅಂದಿನಿಂದ ಕಟ್ಟಿದ ಗುರು ಮಠವೇ ಉಜ್ಜೈನಿ ಶಾಖೆ ಹೊನ್ನಮ್ಮ ಗವಿ ಮಠ ಎನಿಸಿತು. ಮಠದ ಒಳಗೆ ಮುಖ ಮಂಟಪದ ನೆತ್ತಿಯ ಪ್ರತ್ಯೇಕ ಶಿಲ್ಪವಿದೆ. ರುಂಡಮಾಲೆ ಧಾರಿಣಿ, ಸ್ತನ ನಾಗ ಬಂಧ, ಶಿವಲಿಂಗವಿಡಿದ ಬಲಹಸ್ತೆಯಾಗಿ ಗಜಲಕ್ಷ್ಮಿಯಂತೆ ಆಸೀನಳಾದ ಶಿಲ್ಪ. ಈ ಗುಹೆಯ ಪೂರ್ವಭಿಮುಖವಾಗಿ ಮತ್ತೊಂದು ಶಿಲಾ ಭೈರವಿ ವಿಗ್ರಹವಿದೆ, ಇದು ಹೊಯ್ಸಳರ ಕಾಲದ್ದಾಗಿದೆ.

**ಗಂಗಾಧರೇಶ್ವರ ದೇವಾಲಯ**

ಹೊನ್ನಾದೇವಿಯ ದೇವಾಲಯವನ್ನು ಬಿಟ್ಟು ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಮುಂದೆ ಹೋದರೆ ಸಿಕ್ಕುವುದು ಪ್ರಸನ್ನ ಗಂಗಾಧರೇಶ್ವರ ಗುಹಾಂತರ ದೇವಾಲಯ, ಶಿವಗಂಗೆಯ ಪ್ರಮುಖ ಆಕರ್ಷಣೆ, ಪವಿತ್ರ ಕ್ಷೇತ್ರವೆನಿಸಿದ ಗಂಗಾಧರೇಶ್ವರ ದೇವಾಲಯವನ್ನು ಬೆಟ್ಟದ ಮಧ್ಯಭಾಗದಲ್ಲಿ ನೈಸರ್ಗಿಕ ಗುಹೆಯಲ್ಲಿ ಲಿಂಗ ಸ್ಥಾಪಿಸಲಾಗಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹ, ಅದಕ್ಕೆ ಸಭಾ ಮಂಟಪ, ಮುಖ ಮಂಟಪ, ಗೋಪುರವನ್ನು ನಿರ್ಮಿಸಲಾಗಿದೆ.

ಪೂರ್ವಾಭಿಮುಖವಾಗಿರುವ ಗರ್ಭಗುಡಿಯಲ್ಲಿ ವೃತ್ತಾಕಾರದ ಪಾಣಿಪೀಠದ ಮೇಲೆ ಮೂರು ಅಡಿ ಎತ್ತರದ ಲಿಂಗವಿದ್ದು. ಇದು ಬಹುಶಃ ಹೊಯ್ಸಳರ ಕಾಲದ್ದಾಗಿದೆ. ಶಿವಲಿಂಗದ ಮೇಲೆ ತುಪ್ಪದ ಅಭಿಷೇಕ ಮಾಡಿದರೆ ಬೆಣ್ಣೆಯಾಗುತ್ತದೆ ಎಂಬ ಕತೆಯು ಪ್ರಚಲಿತದಲ್ಲಿದೆ. ಬಹುಶಃ ಶಿತದಿಂದ ಘನೀಕರಿಸುತ್ತದೆ ಎಂದೆನಿಸುತ್ತದೆ. ಗರ್ಭಗುಡಿಯಲ್ಲಿ ಸಣ್ಣ ಸುಕನಾಸಿಯರನ್ನು ಹೊಂದಿದ್ದು, ಬಾಗಿಲಲ್ಲಿ ಭದ್ರಬಾಹು, ಹರಿಹರ, ವೀರಭದ್ರ, ಸೂರ್ಯಶಿಲ್ಪಗಳಿವೆ. ಗರ್ಭಗುಡಿಯ ಮುಂದಿರುವ ಸಭಾಮಂಟಪವು ವಿಶಾಲವಾಗಿದ್ದು, ನೈಸರ್ಗಿಕ ಬಂಡೆಯ ಕೆಳಗೆ ನಿರ್ಮಿಸಿರುವ ಈ ಮಂಟಪವು ಚೌಕಾಕಾರವಾಗಿದ್ದು, ಗುಹೆಯಲ್ಲಿರುವ ಕೆಲವು ವಿಗ್ರಹಗಳು ಒಂದನೇಯ ಕೆಂಪೇಗೌಡ ಮತ್ತು ಆತನ ಕುಟುಂಬದವರು ಎನ್ನಲಾಗುತ್ತಿದೆ. ಇಲ್ಲಿನ ಕೊಠಡಿಯೊಂದನ್ನು ಕೆಂಪೇಗೌಡ ಖಜಾನೆಯೆಂದು ಹೇಳುವರು. ಗರ್ಭಗೃಹದ ಎಡ ಬದಿಯಲ್ಲಿ ಆಯತಾಕಾರದ ಗರ್ಭಗುಡಿಯಲ್ಲಿ ಹೊನ್ನಾದೇವಿಯ ಗುಡಿ ಇದೆ. ದೇವಿ ಶಿಲ್ಪದ ಬಳಿ ಅಂಗೈಯಲ್ಲಿ ದೀಪ ಹಿಡಿದು ನಿಂತಿರುವ ಶಿಲ್ಪಗಳು ಪುರುಷರ ಉಬ್ಬು ಶಿಲ್ಪಗಳಾಗಿದ್ದು, ಉದ್ದನೇಯ ಧೋತಿ, ಅಂಗವಸ್ತ್ರ, ಕಿವಿಯೋಲೆ, ಕೊರಳಲ್ಲಿ ಆಭರಣಗಳನ್ನು ಧರಿಸಿದ್ದಾರೆ. ಬಹುಶಃ ಹೊಯ್ಸಳರ ಕಾಲದಲ್ಲಿ ಈ ಗುಹೆ ದೇವಾಲಯವು ವಿಸ್ತೃತವಾಗಿರ ಬೇಕು. ನಂದಿಮಂಟಪದಲ್ಲಿನ ನಾಲ್ಕು ಸುಂದರವಾದ ಘಂಟೆಯಾಕಾರದ ಹೊಯ್ಸಳ ಸ್ಥಂಭಗಳನ್ನು ಕಾಣಬಹುದು. ಇಲ್ಲಿನ ಬೃಹದಾಕಾರದ ಕಂಚಿನ ಗಂಟೆಯನ್ನು ಓಂಕಾರ ಘಂಟೆಯೆಂದು ಕರೆಯುತ್ತಾರೆ, ಶಾಸನದ ಪ್ರಕಾರ ಇದು ಒಂದನೇಯ ಕೆಂಪೇಗೌಡನ ಕಾಣಿಕೆಯೆಂದು ತಿಳಿದು ಬರುತ್ತದೆ. ದಕ್ಷಿಣಾಭಿಮುಖವಾಗಿರುವ ನವರಂಗದಲ್ಲಿ ದ್ವಾರ ಪಾಲಕರನ್ನು ಒಳಗೊಂಡಿದೆ.

ಗರ್ಭಗುಡಿಯ ಎದುರಿನ ಕಟ್ಟೆಯ ಮೇಲೆ ಕೆಂಪೇಗೌಡ, ಕೆಂಪೇ ಸೋಮಣ್ಣ, ಉಳ್ಳಿ ಚಿಕ್ಕಣ್ಣರವರ ಕಂಚಿನ ಪ್ರತಿಮೆಗಳಿವೆ. ಪ್ರತಿಮೆ ಎತ್ತರವಾಗಿದ್ದು, ಕಿರೀಟ, ಅಂಗವಸ್ತ್ರ, ವಿವಿಧ ಆಭರಣ, ಉದ್ದನೆಯ ಖಡ್ಗ ಮೊದಲಾದುವುಗಳನ್ನು ಕಾಣಬಹುದು. ಗೋಡೆಗಳಲ್ಲಿನ ಆಳವಾದ ಕೋಷ್ಠಗಳಲ್ಲಿ ಗಣೇಶ, ಸುಬ್ರಮಣ್ಯ, ಸಪ್ತಮಾತೃಕೆಗಳ ಶಿಲ್ಪಗಳಿದ್ದು, ಸಪ್ತಮಾತೃಕೆಯಲ್ಲಿ ಚಂಡಿಕೇಶ್ವರನಿಗೆ ಚತುರ್ಮುಖ, ಚತುರ್ಭುಜ ಹಸ್ತಗಳಲ್ಲಿ ಜಪಮಾಲೆ, ತ್ರಿಶೂಲ, ಖಡ್ಗ, ಕಮಂಡಲ ಇದೆ. ಚಂಡಿಕೇಶ್ವರ ಕಂಚಿನ ಪ್ರತಿಮೆಗಳಿಗೆ ಹೊಂದಿಕೊಂಡಿರುವ ಗೋಡೆಯಲ್ಲಿ ಅರೆಕಂಬಗಳ ಮೇಲೆ ಅರಸರ, ರಾಣಿಯರ ಉಬ್ಬು ಶಿಲ್ಪವಿದೆ.

ಗುಹೆಯ ಉತ್ತರಾಭಿಮುಖವಾಗಿರುವ ದ್ವಾರಬಂಧದಲ್ಲಿಯೇ ಕಾಲ ಮತ್ತು ಮಹಾಕಾಲ ಶಿಲ್ಪಗಳನ್ನು ಕಾಣಬಹುದು. ಇವುಗಳು ಎಂಟು ಅಡಿಗಳಷ್ಟು ಎತ್ತರವಾಗಿವೆ. ಪಕ್ಕದಲ್ಲಿಯೇ ಗಣಪತಿ ಮತ್ತು ನಂದಿಯ ಶಿಲ್ಪಗಳಿವೆ. ಈ ದ್ವಾರಬಂಧವು ವಿಜಯನಗರೋತ್ತರ ಕಾಲದ್ದಾಗಿದೆ. ನಂದಿ ಮಂಟಪದ

ಪಕ್ಕದಲ್ಲಿಯೇ ಹೊಯ್ಸಳರ ಶ್ರೀಕಾರ ಮಾದರಿಯ ನಾಲ್ಕು ಕಂಬಗಳನ್ನು ಕಾಣಬಹುದು ಉಳಿದಂತೆ ವಿಜಯನಗರೋತ್ತರ ಕಾಲದ ಹಲವು ಕಂಬಗಳು ನಂದಿ ಮಂಟಪದ ಎರಡೂ ಬದಿಯನ್ನು ವಿಸ್ತರಿಸಿವೆ.

ಸಭಾಮಂಟಪದ ಬಾಗಿಲುವಾಡದ ಎದುರಿಗೆ ಕಕ್ಷಾಸನದ ಮಂಟಪವು ಗಂಟೆಯಾಕಾರದ ಕಂಬಗಳಂದ ಕೂಡಿದ್ದು, ಚೌಕಾಕಾರವಾದ ೧ ಮೀ. ಎತ್ತರದ ೬೦ ಸೆಂ.ಮೀ. ಅಗಲದ ಕಕ್ಷಾಸನದಿಂದ ಕೂಡಿದ ಈ ಮಂಟಪದಲ್ಲಿ ೪ ಕಂಬಗಳ ಮೇಲೆ ಹೊಯ್ಸಳರ ಕಾಲದ ಕನ್ನಡ ಶಾಸನವಿದೆ. ಈ ಕಕ್ಷಾಸನವನ್ನು ದೇವಾಲಯವನ್ನು ವಿಸ್ತರಿಸುವ ಸಮಯದಲ್ಲಿ ಮುಖ ಮಂಟಪದಂತಿದ್ದ ಮಂಟಪವನ್ನು ಅನೇಕ ಕಂಬಗಳನ್ನು ಸೇರಿಸಿ ವಿಸ್ತರಿಸಿರಬೇಕು. ಮಂಟಪದ ಎಡ, ಬಲ ಕಂಬಗಳ ಜೋಡಣೆಗಳಲ್ಲಿ ವ್ಯತ್ಯಾಸ ಕಾಣಿಸುತ್ತದೆ. ಕಕ್ಷಾಸನವಿರುವ ಚಿಕ್ಕಮಂಟಪವನ್ನು ಸೇರಿಸಿಕೊಂಡು ಹೊಯ್ಸಳರ ಕಾಲದಲ್ಲಿ ಮಹಾ ಮಂಟಪದ ರಚನೆಯಾಗಿರಬೇಕೆಂದು ಕಂಬಗಳಾಧಾರದಿಂದ ನಿರ್ಧರಿಸಬಹುದು. ಹಾಗೂ ಹೊಯ್ಸಳರ ಕಾಲದಲ್ಲಿ ಶಿವಗೃಹ, ಜಿನಾಲಯ, ವಿಷ್ಣು ದೇವಾಲಯವನ್ನು ನಿರ್ಮಿಸಿದ್ದರ ಬಗ್ಗೆ ಮಂಟಪದಲ್ಲಿನ ಶಾಸನ ತಿಳಿಸುತ್ತದೆ. ಕೆಂಪೇಗೌಡನು ಅರ್ಪಿಸಿದ ಬೃಹತ್ ಕಂಚಿನ ಗಂಟೆಯೂ ಸಹ ಇಲ್ಲೆಯಿದೆ.

ಈ ದೇವಾಲಯದ ಪೂರ್ವಕ್ಕೆ ಎರಡು ಚಿಕ್ಕ ಗುಡಿಗಳಿದ್ದು ಇವುಗಳನ್ನು ಗಂಗರ ಕಾಲದ ರಚನೆಗಳು ಎಂದು ಗುರುತಿಸಲಾಗಿದೆ. ಪೂರ್ವದ ಬಲಭಾಗದ ಗುಡಿಯು ಸುಮಾರು ೬ ೧/೨ ಅಡಿ ಎತ್ತರವನ್ನು ೧೫ ಅಡಿ ಉದ್ದವನ್ನು ಹೊಂದಿದೆ. ಈ ಗುಡಿಯ ಬಾಗಿಲು ೧.೯ x ೨.೧೧ ಅಡಿ ಎತ್ತರ ಇದೆ. ಇಲ್ಲಿ ಪುಷ್ಪಬಳ್ಳಿಯ ಅಲಂಕರಣೆಯಿದ್ದು, ಅವುಗಳು ಸುಣ್ಣದಿಂದ ಮುಚ್ಚಿಹೋಗಿದೆ. ಅಧಿಷ್ಠಾನವು ೮ ಅಡಿ ಉದ್ದ, ೧.೧೧ ಅಡಿ ಎತ್ತರವಿದೆ. ಈ ಅಧಿಷ್ಠಾನವು ಪಾದಬಂಧ ಅಧಿಷ್ಠಾನ ಮಾದರಿಯದಾಗಿದ್ದು ಜಗತಿ, ತ್ರಿಪಟ್ಟ ಕುಮುದ, ಗಳ, ಪಟ್ಟಿಯನ್ನು ಕಾಣಬಹುದು. ಭಿತ್ತಿಯು ಅರೆಗಂಬಗಳನ್ನು ಹೊಂದಿದೆ. ಮೇಲೆ ಯಾವುದೇ ಶಿಖರವು ಸಹ ಕಂಡು ಬರುವುದಿಲ್ಲ. ಇಲ್ಲಿ ಇಟ್ಟಿಗೆಯ ರಚನೆಯನ್ನು ಕಾಣಬಹುದು. ಇದು ಗರ್ಭಗುಡಿ ಮತ್ತು ನವರಂಗ ಅಥವಾ ಮುಖಮಂಟಪವನ್ನು ಹೊಂದಿದ್ದು ಒಳಗೆ ಯಾವುದೇ ಕಂಬಗಳು ಕಂಡುಬರುವುದಿಲ್ಲ. ಈ ನವರಂಗದಲ್ಲಿ ನಕ್ಷತ್ರಾಕಾರದ ವಿತಾನವಿದ್ದು ಮಧ್ಯದಲ್ಲಿ ದೊಡ್ಡದಾದ ಕಮಲ ಪುಷ್ಪವನ್ನು ಕಾಣಬಹುದು ಈ ಗುಡಿಯನ್ನು ಪ್ರವೇಶಿಸಲು ಸರಳವಾದ ಸೋಪಾನಗಳು ಇರುವುದನ್ನು ಕಾಣಬಹುದು.

ಈ ದೇವಾಲಯದ ಅಧಿಷ್ಠಾನವು ಒಂದು ರೀತಿ ಪಾದಬಂಧ ಅಧಿಷ್ಠಾನದಂತೆ ಕಂಡರು ಇಲ್ಲಿ ತ್ರಿಪಟ್ಟ ಕುಮುದವನ್ನು ಕಾಣಲು ಸಾಧ್ಯವಿಲ್ಲ. ಇದು ಉಪಪೀಠದಂತೆ ಕಂಡುಬರುತ್ತದೆ. ಭಿತ್ತಿಯಲ್ಲಿ

ಸುತ್ತಲೂ ಹನ್ನೆರಡು ಅರೆಗಂಬಗಳು ಕಂಡು ಬರುತ್ತವೆ ಕಪೋತದಲ್ಲಿ ಕೋಷ್ಠಗಳನ್ನು ಕಾಣಬಹುದು. ಯಾವುದೇ ಜಾಲಾಂಧ್ರಗಳು ಇಲ್ಲಿ ಕಂಡು ಬರುವುದಿಲ್ಲ. ಮಂಟಪದ ಮೇಲ್ಭಾಗದಲ್ಲಿ ವಿಜಯನಗರೋತ್ತರ ಕಾಲದ ಗಾರೆಯ ಶಿಖರವನ್ನು ಕಾಣಬಹುದು. ಇಲ್ಲಿ ಗರ್ಭಗುಡಿ ಹಾಗೂ ಮಂಟಪದ ಮುಂಭಾಗವು ತೆರೆದಿದೆ. ಇಲ್ಲಿ ಮುಂಭಾಗದಲ್ಲಿ ಎರಡು ದುಂಡಾದ ರುದ್ರಕಾಂತ ಕಂಬಗಳನ್ನು ಕಾಣಬಹುದು.

ಮಹಾಮಂಟಪದ ಪೂರ್ವದಂಚಿನಲ್ಲಿ ಮುಖ ಮಂಟಪವಿದೆ. ಬಾಗಿಲುವಾಡವನ್ನು ಬಳ್ಳಿಯಾಕಾರದ ವಿನ್ಯಾಸ ಪಟ್ಟಿಕೆಗಳಿಂದ ೫ ಹಂತಗಳ ಕೆಳಬದಿಯಲ್ಲಿ ಶೈವ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಈ ದ್ವಾರಪಾಲಕರ ಸುತ್ತಲೂ ಕಮಾನಿನಾಕಾರದ ಕೀರ್ತಿ ಮುಖಗಳ ವಿನ್ಯಾಸದ ಕೆತ್ತನೆ, ದ್ವಾರದ ಲಲಾಟದಲ್ಲಿ ಗಜಲಕ್ಷ್ಮಿ, ತೋರಣದಲ್ಲಿ ಗಣೇಶ ಶಿಲ್ಪವಿವೆ. ಮಂಟಪದಲ್ಲಿನ ಕಂಬಗಳು ಸುಂದರ ಕೆತ್ತನೆಗಳಿಂದ ಕೂಡಿದ್ದು, ಕಂಬಗಳ ಮೇಲೆ ಉಬ್ಬು ಶಿಲ್ಪಗಳಿವೆ. ಒಳಗೋಡೆಯಲ್ಲಿ ಪಟ್ಟಿಕೆಯಾಕಾರದಲ್ಲಿ (ಪೂರ್ವ ಅಂಚಿನಲ್ಲಿ) ಗಿರಿಜಾ ಕಲ್ಯಾಣದ ಶಿಲ್ಪಗಳಿವೆ. ಶಿವ ಗಿರಿಜೆಯರ ವಿವಾಹದ ಶಿಲ್ಪ ದ್ವಾರದ ಎಡ ಬದಿಯಲ್ಲಿ ಪ್ರಾರಂಭವಾಗುತ್ತದೆ. ಗಿರಿಜೆ ಶಿವನ ಹಸ್ತವನ್ನು ಹಿಡಿದು, ಗಿರಿಜೆಯ ಪಿತ ಕನ್ಯಾಧಾನ ಮಾಡುತ್ತಿರುವುದು, ವಿಷ್ಣು, ಬ್ರಹ್ಮ, ಸಪ್ತ ಋಷಿಗಳ ಶಿಲ್ಪಗಳನ್ನು ಸಾಲಾಗಿ, ಗಿರಿಜಾ ಕಲ್ಯಾಣದ ಬಲಬದಿಯಲ್ಲಿ ಸಪ್ತ ಮಾತೃಕೆಗಳು, ವಿವಿಧ ದೇವತೆಗಳ ಶಿಲ್ಪಗಳನ್ನು ಕಮಂಡಲ ಹಿಡಿದ ಯತಿ ಹಾಗೂ ಸಂಗೀತಕಾರರ ಶಿಲ್ಪಗಳು, ಚಿಕ್ಕಗಾತ್ರದಲ್ಲಿ ಉಬ್ಬು ಶಿಲ್ಪದಲ್ಲಿ ವೀರಭದ್ರ, ಉಮಾಮಹೇಶ್ವರ, ಗಣೇಶ, ಬೇಡರ ಕಣ್ಣಪ್ಪ, ಸೂರ್ಯ, ಶಿವಲಿಂಗ, ಅಸೀನಯತಿ, ಗಜಾಸೂರ ಸಂಹಾರ ಮೂರ್ತಿ ಇತ್ಯಾದಿ ಶಿಲ್ಪಗಳು. ಕಂಬಗಳ ಮೇಲೆ ಒಂದು ಮೀಟರ್ ಎತ್ತರದ ನಮಸ್ಕಾರ ಮುದ್ರೆಯಲ್ಲಿನ ಅರಸ ಮತ್ತು ಆತನ ರಾಣಿ ಇರಬೇಕು. ಈ ಮುಖ ಮಂಟಪದ ನಿರ್ಮಾತೃ ಅಥವಾ ಪೋಷಕರಾಗಿರಬೇಕು. ಬಹುಶಃ ಭಕ್ತರ ಅನುಕೂಲಕ್ಕಾಗಿ ಪಶ್ಚಿಮ ಮೂಲೆಯಲ್ಲಿ ಚಿಕ್ಕದ್ವಾರವನ್ನು ನಿರ್ಮಿಸಿರಬೇಕು.

ದೇವತೆಯನ್ನು ಬ್ರಹ್ಮನ ಅವತಾರದಲ್ಲಿ ಚತುರ್ಮುಖ, ಚತುರ್ಭುಜಗಳಿಂದ ಕೂಡಿದೆ. ಸುತ್ತಲೂ ಅರೆ ಕಂಬಗಳು, ಪಟ್ಟಿಕೆಗಳಿಂದ ಅಲಂಕೃತವಾದ ಸಭಾ ಮಂಟಪದ (ಉತ್ತರ ದಿಕ್ಕಿಗೆ) ಬಾಗಿಲವಾಡವು ಒಂಭತ್ತು ಶಾಖೆಗಳಿಂದ, ಕೀರ್ತಿ ಮುಖ, ತೋರಣಗಳ ಅಲಂಕಾರಗಳಿಂದ ಕೂಡಿದ್ದು, ದ್ವಾರಪಾಲಕರು ವಿವಿಧ ಆಭರಣಗಳು, ಉದ್ದನೇಯ ಕಿವಿಯೋಲೆ, ಕಿರೀಟ, ತ್ರಿಭಂಗಿಯಲ್ಲಿದ್ದು, ಈ ಶಿಲ್ಪಗಳ ಪಕ್ಕದಲ್ಲಿ ಗಂಗೆ, ಯಮುನೆ, ಯರಶಿಲ್ಪಗಳು ಇವುಗಳ ಪಕ್ಕದಲ್ಲಿ ದ್ವಾರಬಂಧದ ಕೊನೆಯಲ್ಲಿ ನಮಸ್ಕರಿಸುತ್ತ ನಿಂತಿರುವ ಉದ್ದನೇಯ ಧೋತಿ, ಅಂಗವಸ್ತ್ರ, ಕಿರೀಟ, ಸೊಂಡದಲ್ಲಿ ಖಡ್ಗ ಧರಿಸಿ, ವಿವಿಧ ಆಭರಣಗಳ ಶಿಲ್ಪವು ಅರಸನಾಗಿದ್ದು (ಸುತ್ತಲೂ ಕಮಾನಿನಾಕಾರದ ವಿನ್ಯಾಸದ ಕೀರ್ತಿಮುಖದ ಅಲಂಕಾರವಿದೆ),

ದ್ವಾರ ಬಂಧದ ಎಡಗಡೆಯಲ್ಲಿ ಆತನ ರಾಣಿ ಮತ್ತು ಯುವರಾಜನ ಶಿಲ್ಪವಿರಬೇಕು. ಅವರು ಸಹ ಅರಸರಂತೆ ನಮಸ್ಕಾರ ಮುದ್ರೆಯಲ್ಲಿ ನಿಂತಿರುವವರು ಬಹುಶಃ ದೇವಾಲಯ, ಮಂಟಪವನ್ನು ನಿರ್ಮಿಸಿದ್ದವರಿರಬೇಕು ಇಲ್ಲವೇ ಜೀರ್ಣೋದ್ಧಾರ ಮಾಡಿದವರಾಗಿರಬೇಕು.

೧೬, ೧೭ನೇ ಶತಮಾನದ ದೇವಾಲಯಗಳ ಪೋಷಕರ ಮತ್ತು ರಚಿಸುವ ಸಂಪ್ರದಾಯದಂತೆ ಅರಸ ರಾಣಿ ಶಿಲ್ಪಗಳ ರಚನೆಯನ್ನು ರಚಿಸುತ್ತಿದ್ದರು. ರಾಣಿಯ ಶಿಲ್ಪದಲ್ಲಿ ವಿವಿಧ ಆಭರಣಗಳಾದ ಕಿವಿಯೋಲೆ, ತೋಳಬಂಧಿ, ಕಾಲ್ಗಡಗ, ಸರಮಾಲೆ, ಬೈತಲೆಸರ, ವಿಶಿಷ್ಟ ಕೇಶಾಲಂಕಾರ ನೆರಿಗೆಯ ಸೀರೆ ಧರಿಸಿದ ಹಾಗೂ ರಾಜ-ಪಂಚೆಯಂತೆ ಧೋತಿ, ಅಂಗವಸ್ತ್ರ, ಕೈಯಲ್ಲಿ ಖಡಗ, ಕೊರಳಲ್ಲಿ ಮಾಲೆಗಳು, ವಿಶಿಷ್ಟವಾದ ಕಿರೀಟ ಧರಿಸಿ ನಮ್ರತೆಯಿಂದ ದೇವರಿಗೆ ವಂದಿಸುತ್ತಿರುವ ಶಿಲ್ಪಗಳಿವೆ.

ನಂದಿ ವಾಹನ ಶಿವ, ತಪಸ್ಸಿನಲ್ಲಿ ನಿಂತಿರುವ ಮುನಿ, ಕಿರಾತ, ಚೆಂಚುಲಕ್ಷ್ಮಿ, ಭೈರವ, ಸ್ಥಾನಿಕ ಶಿವ, ಶಿವಲಿಂಗ ಪೂಜೆಗೈಯ್ಯುತ್ತಿರುವ ಭಕ್ತರು, ಕಂಬಳಿ ಹೊದ್ದುಕೊಂಡು ಕೋಲನ್ನು ಹಿಡಿದಿರುವ, ಮಿಥುನ ಉಬ್ಬುಶಿಲ್ಪ, ಭೂತದ ಶಿಲ್ಪ ಇತ್ಯಾದಿ ಶಿಲ್ಪಗಳಿವೆ. ಮುಖ ಮಂಟಪದ ಬಲ ಬದಿಯಲ್ಲಿ ಆಯತಾಕಾರದ ಇನ್ನೊಂದು ಉಪ ಮುಖ ಮಂಟಪವಿದೆ. ಇದನ್ನು ಅನಂತರ ಕಾಲದಲ್ಲಿ ಸೇರಿಸಲಾಗಿದೆ. ಕೃಷ್ಣದೇವರಾಯನ ಕಾಲದ ನಂದಿ ಮಂಟಪವಿದೆ, ಪಕ್ಕದಲ್ಲಿ ಕಲ್ಯಾಣ ಮಂಟಪ, ಸಪ್ತಮಾತೃಕೆಯರು, ಅಷ್ಟ ದಿಕ್ಪಾಲಕರು, ನವಗ್ರಹ ಶಿಲ್ಪಗಳು, ಇಲ್ಲಿರುವ ಸೂರ್ಯನ ಶಿಲ್ಪದಿಂದಲೆ ಶಿವಗಂಗೆಯನ್ನು ಭಾಸ್ಕರ ಕ್ಷೇತ್ರ ಎಂದು ಕರೆಯುತ್ತಿದ್ದಾರೆ.

**ಕೆಂಪೇಗೌಡರ ಹಜಾರ**

ಗಂಗಾಧರೇಶ್ವರ ದೇವಾಲಯದ ಪೂರ್ವ ಮುಖಮಂಟಪಕ್ಕೆ ಸನಿಹದಲ್ಲಿ ೯ ಮೀ. ಉದ್ದ, ೮ ಮೀ. ಅಗಲವಾದ, ೩ ಬದಿಯಲ್ಲಿ ಗೋಡೆಗಳಿಂದ ಮುಚ್ಚಲಾದ ಕೆಂಪೇಗೌಡ ಹಜಾರ ಎಂಬ ತೆರೆದ ಮಂಟಪವಿದೆ. ಕೆಂಪೇಗೌಡನು ಹಜಾರದಲ್ಲಿ ಕುಳಿತು ದಾನ ಧರ್ಮ ನೀಡುತ್ತಿದ್ದರು ಅಥವಾ ಉತ್ಸವ, ಸಂಕ್ರಾತಿ, ವಿಜಯದಶಮಿಯಂತಹ ಹಬ್ಬದ ಆಚರಣೆಗಳನ್ನು ನಡೆಸಲು ಈ ತೆರೆದ ಮಂಟಪವನ್ನು ಬಳಸುತ್ತಿದ್ದರೆನ್ನಿಸುತ್ತಿದೆ.

ಒನಕೆ ಗುಂಡಿಯ ನಂತರ ಕಡಿದಾದ ಮೆಟ್ಟಲುಗಳನ್ನು ಏರಿ ಮುಂದಕ್ಕೆ ಹೋದರೆ ಕೋಡುಗಲ್ಲು ಬಸವನ ವಿಗ್ರಹವಿದೆ, ಇಲ್ಲಿ ಇರುವ ಶಾಸನದ ಪ್ರಕಾರ ಕ್ರಿ.ಶ.೧೩೮೮ ರಲ್ಲಿ ವೀರಭದ್ರನ ಗುಡಿ ಎಂದು ಇದೆ. ಇದಕ್ಕೆ ಉತ್ತರಾಭಿಮುಖವಾಗಿ ಗಿರಿಯ ತುದಿಯಲ್ಲಿರುವ ತೀರ್ಥಕಂಬದಲ್ಲಿ ಮಕರ ಸಂಕ್ರಾಂತಿಯ ಕಾಲದಲ್ಲಿ ಗಂಗಾಧರೇಶ್ವರನ ಕಲ್ಯಾಣಕ್ಕೆ ಗಂಗೋದಕ ಬರುವುದೆಂದು ಸ್ಥಳ ಪ್ರತೀತ ಉರಿಗಂಬವಿದ್ದು,

ಮಾರ್ಗಶಿರ ಮಾಸದ ಪೂರ್ಣಿಮೆಯ ದಿನ ಕೈಲಾಸ ದೀವಟಿಗೆಯನು ಹಚ್ಚುತ್ತಾರೆ, ತೀರ್ಥಕಂಬದ ಅಷ್ಟಾಕೃತಿಯಲ್ಲದೆ, ಕಂಭದ ತಳಭಾಗದ ಶಾಸನಗಳ ಪ್ರಕಾರ ಹೊಯ್ಸಳ ಬಂದನೇಯ ನರಸಿಂಹನ ಆಳ್ವಕೆಯಲ್ಲಿ ಇದನ್ನು ಕೂಸು ಬಸವಣ್ಣ ಎಂಬುವನು ನಿಲ್ಲಿಸಿದನೆಂದು ತಿಳಿದು ಬರುತ್ತದೆ.

ಶಿವಗಂಗೆಯ ಸುತ್ತ ೬೪ ವೀರಶೈವ ಮಠಗಳಿದ್ದು, ಜಂಗಮ ಕೇಂದ್ರವಾಗಿರಬೇಕು. ಇಲ್ಲಿನ ಮಠದ ಸ್ವಾಮಿಗಳು ದಾಸೋಹ ನಡೆಯುವಾಗ ಒಂದು ಸುತ್ತು ಗಿರಿ ಪ್ರದಕ್ಷಿಣೆ ಮುಗಿಸಿ ಬರುತ್ತಿದ್ದರೆಂಬ ಕಥೆಯಿದೆ. ಅಷ್ಟೊಂದು ದೀರ್ಘಾವಧಿಯಾಗಿ ದಾಸೋಹ ನಡೆಯುತ್ತಿದ್ದಿರಬೇಕೆಂದರೆ ಜಂಗಮರು ಎಷ್ಟು ಜನ ಇದ್ದಿರಬಹುದು. ಶೈವ ಮತ್ತು ವೀರಶೈವ ಪರಂಪರೆಯಲ್ಲಿ ಮುನಿಯೊಬ್ಬ ಕಾಲಾತೀತನಾದಾಗ ಗದ್ದುಗಳನ್ನು ನಿರ್ಮಿಸುವ ಪದ್ಧತಿಯನ್ನು ಶಿವಗಂಗೆಯಲ್ಲಿ ಕಾಣಬಹುದು. ಕ್ರಿ.ಶ.೧೭೪೬ ರಲ್ಲಿ ಮೇಲಣ ಗವಿಯ ಮಠದ ಶಾಸನದಲ್ಲಿ ತೋಟಲಕೆರೆ ಚೆಂನಪ ಅಯ್ಯ ಮಗ ನಿರುವಣ ಎಂಬುವನು ಗದ್ದುಗೆಗೆ ಮಂಟಪವನ್ನು ನಿರ್ಮಿಸಿದರು[೧೦೩]. ಕ್ರಿ.ಶ.೧೭೬೦ ರಲ್ಲಿ ಶ್ರೀ ಸಿದ್ಧರಾಮ ದೇವನು ಗಂಗಾಧರನೊಳಗಾದನೂ ಎಂದರೆ ಐಕ್ಯನಾದನು[೧೦೪]. ಕ್ರಿ.ಶ.೧೧೨೦ ರಲ್ಲಿ ಗಂಗಾಧರಸ್ವಾಮಿ ದೇವಾಲಯದ ಪ್ರಸ್ತಾಪದೊಂದಿಗೆ ೧೨೦೦೦ ಒಡೆಯರ ಹಾಗೂ ಬಿಟಜಡೆಯ ನಂಜದೇವ, ಜವರದ ಗಂಗ ಮುಂತಾದವರು ಪ್ರಾಯಶಃ ತೋಂಟದ ಸಿದ್ಧಲಿಂಗಾರ್ಯರ ಕಾಲದ ಶಿವಶರಣರಾಗಿರಬೇಕು[೧೦೫].

**ರುದ್ರೇಶ್ವರ (ವೀರಭದ್ರ)**

ಗುಡಿಯಲ್ಲಿ ೬ ಅಡಿ ಎತ್ತರದ ವೀರಭದ್ರ ವಿಗ್ರಹವಿದೆ. ಈ ಗುಡಿಯ ಉತ್ತರ ಭಾಗಕ್ಕೆ ಕೆರೆ, ಪಶ್ಚಿಮಕ್ಕೆ ಪಾಳು ಬಿದ್ದ ಮಹಂತ ಮಠ, ಈ ಮಠದ ಸ್ತಂಭ ಶಿಲ್ಪಗಳಲ್ಲಿ ಕೆಂಪೇಗೌಡನ ಶಿಲ್ಪವಿದೆ. ಕ್ರಿ.ಶ.೧೩೭೦ ರ ಶಾಸನವೊಂದರಲ್ಲಿ ಶಿವಗಂಗೆಯಲ್ಲಿ ಮಹಂತ ಮುಖ್ಯರಾಗಿದ್ದವರನ್ನು ಯತೀಶ್ವರ ಸಿರಿಗಿರಿ ದೇವ ಒಡೆಯರು ಎಂದಿದೆ. ಬಹುಶಃ ಇವರು ಮಹಂತ ಮಠದ ಅದಿಪತಿಗಳಾಗಿದ್ದಿರಬೇಕು.

ರುದ್ರಮುನಿಸ್ವಾಮಿ ಗವಿಯಲ್ಲಿ ವೀರಭದ್ರ ಮೂರ್ತಿಯು ವೃತ್ತಾಕಾರದ ಪಾಣಿವಟ್ಟದ ಮೇಲೆ ಸುಮಾರು ೨ ಅಡಿ ಎತ್ತರದ ಚತುರ್ಭುಜದ ವಿಗ್ರಹದ ಹಸ್ತಗಳಲ್ಲಿ ಖಡ್ಗ, ಬಿಲ್ಲು, ಬಾಣವಿದೆ. ಗರ್ಭದ್ವಾರದಲ್ಲಿ ನಾಗಗದೆ, ರುಂಡಮಾಲೆ, ಸೋಂಟ ಕಠಾರಿ, ಕಾಲುಗಗ್ಗರ ಇರುವ ತ್ರಿಭಂಗಿಯ ದ್ವಾರಭದ್ರರ ಶಿಲ್ಪವಿದೆ. ಅಮಾವಾಸ್ಯೆಯ ಸಮಯದಲ್ಲಿ ವೀರಭದ್ರನಿಗೆ ನಿರಂತರ ರುದ್ರಾಭಿಷೇಕ ನಡೆಯುತ್ತದೆ. ವೀರಭದ್ರ ಗುಡಿಯ ಬಲಬದಿಗೆ ಕಿಣುಕರ ಗಣೇಶನ ಮೂರ್ತಿಗಳಿವೆ.

---

[೧೦೩] ಎ.ಕ-೯, ಅನುಬಂಧ, ನೆ.ತಾ.೧೩೮, ಗದ್ದಿಗೆ ಮಂಟಪದ ನೈರುತ್ಯ ಕಂಬದ ಮೇಲೆ.
[೧೦೪] ಎ.ಕ-೯, ನೆ.ತಾ.೮೦, ಗಂಗಾಧರ ದೇವಾಲಯದ ಮುಂದೆ ಇರುವ ಗುಂಡಿಯಲ್ಲಿ.
[೧೦೫] ಎ.ಕ-೯, ಅನುಬಂಧ, ನೆ.ತಾ.೮೮, ಮೌದ್ಗಲತೀರ್ಥದ ಬಳಿ ಗಣಪತಿ ದೇ.ಬಳಿ ಬಂಡೆಯ ಮೇಲೆ.

ಮಹಾದ್ವಾರದ ಬಳಿ ಪಡೆಕಲ್ ವೀರಭದ್ರ, ಗಂಗಾಧರೇಶ್ವರ ಗುಡಿ ಪಾಕಶಾಲೆ ಬಳಿಯ ಗಂಜೀ ವೀರಭದ್ರ, ಹೊನ್ನಾದೇವಿ ಗುಡಿ ಹಿಂಬದಿಯ ೮ ಅಡಿ ಎತ್ತರದ ಪಾತಾಳ ವೀರಭದ್ರ (ಸಂಕೋಲೆ), ರಾಚೋಟಿ ಮಠದ ಬಳಿ ರಾಚೋಟಿ ವೀರಭದ್ರ, ಮೇಲಣ ಗವಿಮಠದ ಗವಿ ವೀರಭದ್ರ, ಬೆಟ್ಟದ ಕುಂಬೀಯಲ್ಲಿನ ರುದ್ರೇಶ್ವರ ಗುಡಿಯ ವೀರಭದ್ರ ಹಾಗೂ ಒಂದೇ ಬಂಡೆ ಕೆತ್ತನೆಯ ಬಂಡೆ ಗಣಪ, ಖಜಾನೆ ಗಣಪತಿ, ತೋಪಿನ ಗಣಪತಿ, ಬೆಟ್ಟದ ಗಣಪತಿ ಇತ್ಯಾದಿಯಾಗಿ ಅಷ್ಟ ಗಣಪತಿ ಶಿಲ್ಪಗಳಿವೆ. ಒಂಭತ್ತು ಅಡಿ ಎತ್ತರದ ಎಮ್ಮೆ ಬಸವ, ಗಾರೆ ಬಸವ, ಬಾರಿ ಬಸವ, ಕಡಲೆ ಬಸವ, ಬಂಡೀ ಬಸವ, ಕೋಡುಗಲ್ ಬಸವ ಮುಂತಾದ ವೃಷಭ ಶಿಲ್ಪಗಳು, ಸುಬ್ರಮಣ್ಯ, ವಿಷ್ಣು, ಸೂರ್ಯದೇವರ ಶಿಲ್ಪಗಳು ಹಳೇ ಮಠದ ಆವರಣದಲ್ಲಿ ಓಂಕಾರೇಶ್ವರ ಲಿಂಗ, ಗಣಪತಿ, ಗುರುಗಟ್ಟಿ. ಗಂಟೆ ಕಂಬದ ಬಳಿ ಶಾಂತಲೆಯ ಸ್ಮರಣೆಗಾಗಿ ಇರುವ ಶಾಂತಲೇಶ್ವರ, ಆಗಸ್ತ ತೀರ್ಥದ ಬಳಿಯ ಸೋಮೆಶ್ವರ ಲಿಂಗ ಇತ್ಯಾದಿ ಅಷ್ಟ ಮಹಾಲಿಂಗಗಳಿವೆ.

ಗಿರಿಯ ಕುಂಭಿಯ ಮೇಲೆ ೧೫ ಅಡಿ ಎತ್ತರದ ಅಷ್ಟಮುಖ ಸ್ತಂಭಗಳಾಗಿ ತೀರ್ಥಕಂಬ, ಊರಿಕಂಬ (ದೀಪಕಂಬ)ಗಳಿದ್ದು, ಊರಿ ಕಂಬದ ಮೇಲೆ ಕಾರ್ತಿಕ ಪೌರ್ಣಮಿಯಂದು ಕಾರ್ತಿಕ ದೀವಿಗೆಯನ್ನು ಬೆಳಗುವರು. ಮಕರ ಸಂಕ್ರಾಂತಿಯಂದು ತೀರ್ಥ ಕಂಬದಲ್ಲಿ ತೀರ್ಥೋತ್ಸವಾಗುವ ಗಂಗೆಯನ್ನು ಗಂಗಾಧರೇಶ್ವರ ಪಾರ್ವತಿ ದೇವಿಯ ಗಿರಿಜಾ ಕಲ್ಯಾಣಾಭಿಷೇಕಕ್ಕೆ ಬಳಸುತ್ತಾರೆ ಮೊದಲು ತೀರ್ಥ ಪ್ರಸಾದವನ್ನು ಮೈಸೂರು ಮಹಾರಾಜರಿಗೆ ತಲುಪಿಸುತ್ತಿದ್ದರು. ಇದಕ್ಕೆ ಪೂರಕವೆಂಬಂತೆ ಆಗಿನ ಮೈಸೂರು ದೊರೆಗಳಾಗಿದ್ದ ಕೃಷ್ಣರಾಜ ಒಡೆಯರ್‌ರವರಿಗೆ ಅಭಿನವ ಸಚ್ಚಿದಾನಂದ ಭಾರತೀಯವರು ಆಗಿನ ಕಾಲಕ್ಕೆ ಸಾವಿರ ರೂಪಾಯಿ ಬೆಲೆಬಾಳುವ ಶಾಲು ಜೋಡಿಯ ಜೊತೆಗೆ ಸ್ವಾಮಿಗಳ ಶ್ರೀಮುಖ, ಗಂಗಾತೀರ್ಥ, ಪ್ರಸಾದ ವಿಭೂತಿ, ಫಲ, ಮಂತ್ರಾಕ್ಷತೆಗಳನ್ನು ಶ್ರೀ ಮಠದಿಂದ ಅರ್ಚಕ ಹೊನ್ನಿಭಟ್ಟ, ಮಠದ ಗೋಪಾಲಶಾಸ್ತ್ರಿ ಎಂಬ ಬ್ರಾಹ್ಮಣರು ಮೈಸೂರು ಅರಮನೆಗೆ ಕೊಂಡೊಯ್ದದ್ದಾಗಿ ೨೧-೩-೧೮೧೬ ರ ಪತ್ರವೊಂದರ ಟಿಪ್ಪಣಿಯಿಂದ ತಿಳಿಯುತ್ತದೆ[೧೦೬]. ಈ ತೀರ್ಥೋದ್ಭವವನ್ನು ಜನರು ಪವಾಡವೆಂದು ನಂಬಿದ್ದಾರೆ. ಪುಣ್ಯ ಮಾಡಿದವರಿಗೆ ನೀರು ಸಿಗುತ್ತದೆ. ಪಾಪ ಕರ್ಮ ಮಾಡಿದವರಿಗೆ ಕೈ ಎಷ್ಟೇ ಆಳ ಬಿಟ್ಟರು ನೀರು ಸಿಗುವುದಿಲ್ಲ ಎಂಬ ನಂಬಿಕೆಯಂತೆ ಈಗಲೂ ಜಾರಿಯಲ್ಲಿದೆ.

ಶಿವಗಂಗೆ ಕ್ಷೇತ್ರದಲ್ಲಿ ನಿರ್ಮಾಣ, ಜೀರ್ಣೋದ್ಧಾರವಾದ ದೇವಾಲಯ, ವಿವಿಧ ಮಂಟಪ, ಸೋಪಾನಗಳು, ಕಂಬಗಳು, ಒರಳು ಕಲ್ಲುಗಳು ಮುಂತಾದ ಅನೇಕ ರಚನೆಗಳನ್ನು ವಿವಿಧ ಕಾಲಗಳಲ್ಲಿ

---

[೧೦೬] ವೇದಾವತಿ ಎಸ್.ಬಾಲು :- ಶಿವಗಂಗೆಯ ತೀರ್ಥೋದ್ಭವ ಒಂದು ವೈಜ್ಞಾನಿಕ ವಿಶ್ಲೇಷಣೆ, ಇ.ದ.ಸಂ-೨೩, ಪು.ಸಂ-೨೪೪.

ವಿವಿಧ ಭಕ್ತರು ನಿರ್ಮಿಸಿರುವುದನ್ನು ಹಾಗೂ ಪೂಜಾ ಕಾರ್ಯಗಳಿಗೆ ಅಮೃತಪಡಿ, ನೈವೇದ್ಯ, ದೀಪರಾಧನೆ ಮುಂತಾದವುಗಳಿಗಾಗಿ ಸರ್ವ ಮಾನ್ಯವಾಗಿ ದಾನ ನೀಡಿರುವ ಹಲವಾರು ಶಾಸನಗಳಲ್ಲಿ ಕಾಣಬಹುದು.

ಗಂಗರ ಆಳ್ವಿಕೆಯಲ್ಲಿ ಶಿವಗಂಗೆಗೆ ಗಂಗಪಟ್ಟಣ ಎಂಬ ಹೆಸರಿತ್ತು. ಗಂಗಾಧರೇಶ್ವರ, ಹೊನ್ನಾದೇವಿಯ ಗುಡಿಯನ್ನು ಗಂಗರ ಕಾಲದಲ್ಲಿ ನಿರ್ಮಾಣವಾಗಿರಬೇಕು. ಗಂಗರೇ ನೈಸರ್ಗಿಕ ಗುಹೆಗಳಲ್ಲಿ ತಮ್ಮ ಇಷ್ಟ ಲಿಂಗವನ್ನು ಇಟ್ಟು ಪೂಜಿಸುತ್ತಿದ್ದ ಪದ್ಧತಿಯನ್ನು ಜಾರಿಗೆ ತಂದಿದ್ದರು. ೯ ಮತ್ತು ೧೦ ಶತಮಾನದಲ್ಲಿ ಶಿವಗಂಗೆ ಚೋಳರ ವಶದಲ್ಲಿತ್ತಾದರು ಇಲ್ಲಿ ಚೋಳರ ಯಾವುದೇ ದೇವಸ್ಥಾನ ಶಾಸನಗಳಿಲ್ಲ,

೧೧ ಮತ್ತು ೧೨ನೇ ಶತಮಾನದಲ್ಲಿ ಹೊಯ್ಸಳರ ಆಳ್ವಿಕೆಯಲ್ಲಿ ಒಳಪಟ್ಟ ಮೇಲೆ ಶಿವಗಂಗೆಯಲ್ಲಿ ಹಲವಾರು ರೀತಿಯಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದಾರೆ. ಗಂಗಾಧರೇಶ್ವರ ದೇವಾಲಯದ ಮುಂದಿನ ಮಂಟಪದ ಕಂಬದಲ್ಲಿರುವ ಕ್ರಿ.ಶ.೧೧೪೦ ರಲ್ಲಿ ಹೊಯ್ಸಳ ಸಾಮಂತನಾದ ಆದಳ ವಂಶದ ಬಿಟ್ಟಿದೇವ ಎಂಬುವವನು ಶಿವಗಂಗೆಯ ಪ್ರಧಾನ ಗುಹಾಂತರ ದೇವಾಲಯದ ಶಿವಗೃಹವಾದ ಗುಹೆಯ ಒಳಗಣ, ಮುಂದಣ, ಮೇಲಣಗಳನ್ನು ನಿರ್ಮಾಣ ಮಾಡಿ, ಪೂಜೆಗಾಗಿ ಹೂವಿನ ತೋಟ, ನೈವೇದ್ಯ, ದೀವಿಗೆ, ಜಳಗಂಧ, ಧೂಪ, ಅಕ್ಷತೆ, ಪಾತ್ರೆ, ಪಾವುಗಳು ಮುಂತಾದುವುಗಳನ್ನು ದಾನ ನೀಡಿರುವುದನ್ನು[೧೦೭] ಗಮನಿಸಿದರೆ ಗವಿ ಗಂಗಾಧರೇಶ್ವರ ದೇವಾಲಯದ ಅಮೃತಲಿಂಗವನ್ನು ಗಂಗಾಧರ ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿರ ಬೇಕು. ಕ್ರಿ.ಶ.೧೨೦೭ ರಲ್ಲಿ ಬೆಟ್ಟದ ಕೋಟೆ ಪ್ರಭುಗಳ ಮೊಮ್ಮಕ್ಕಳು ಪ್ರತಿನಿತ್ಯ ಶಿವಗಂಗೆಯ ಗಂಗಾಧರೇಶ್ವರನಿಗೆ ಬಿಲ್ವ ಪತ್ರೆ ಮತ್ತು ತುಂಬೆ ಹೂವಿನ ಪೂಜೆ ಸಲ್ಲಿಸಬೇಕೆಂದು ಶಿವಗಂಗೆ ಗ್ರಾಮದ ಶೆಟ್ಟರಿಗೆ ಹಣವನ್ನು[೧೦೮] ದಾನ ನೀಡಿದರು. ಇದೇ ಬೆಟ್ಟದ ಮೇಲೆ ಕ್ರಿ.ಶ.೧೧೩೪ರಲ್ಲಿ ಹೊಯ್ಸಳ ವಿಷ್ಣುವರ್ಧನನ ಹೆಂಡತಿ ಶಾಂತಲೆ ಆತ್ಮಾರ್ಪಣೆ ಮಾಡಿಕೊಂಡಳಂತೆ[೧೦೯].

ಗಂಗಾಧರೇಶ್ವರ ದೇವಸ್ಥಾನದ ಮುಂದಿನ ಮಂಟಪವನ್ನು ವೀರಗಂಗ ಹೊಯ್ಸಳ ಶ್ರೀನಾರಸಿಂಗ ದೇವರ ಪ್ರಧಾನ ಸರ್ವಾಧಿಕಾರಿ ಸೇನಾಧಿಪತಿ ಹಿರಿಯ ಹಡವಳ ಚೋಕಿಮಯ್ಯನು ಮಾಡಿಸಿದನು[೧೧೦]. ಈ ಶಾಸನದ ಪಕ್ಕದಲ್ಲೇ ಹೊಯ್ಸಳ ನಾರಸಿಂಹ ಮತ್ತೊಂದು ಶಾಸನದಲ್ಲಿ ಕೂಸ ಬಸವಣನು ಸಿವಗಂಗೆ

---

[೧೦೭] ಎ.ಕ-೯, ನೆ.ತಾ.೮೪, ಕ್ರಿ.ಶ.೧೧೪೦, ಗಂಗಾಧರೇಶ್ವರ ದೇವಾಲಯದ ಮಂಟಪದ ಕಂಭದಲ್ಲಿ.

[೧೦೮] ನಂಜುಂಡಸ್ವಾಮಿ.ಬಿ :- ಬೆಟ್ಟದ ಕೋಟೆ ಪ್ರಭುಗಳ ವಂಶಸ್ಥರು ಶಿವಗಂಗೆ ಗಂಗಾಧರೇಶ್ವರನಿಗೆ ಕೊಟ್ಟ ಪೂಜಾ ದತ್ತಿ ತಾಮ್ರ ಶಾಸನ ಇ.ದ.ಸಂ-೧೩, ಪು.ಸಂ-೩೪

[೧೦೯] ಎಂ.ಜಿ. ನಾಗರಾಜ್ :- ರಾಮಗಿರಿ, ಶಿವಗಂಗೆ ಮತ್ತು ಕಲ್ಯಾ ಐತಿಹಾಸಿಕ ಸ್ಥಳಗಳು, ಪು.ಸಂ-೨೫೯.

[೧೧೦] ಎ.ಕ-೯, ಅನುಬಂಧ, ನೆ.ತಾ.೧೦೫, ಗಂಗಾಧರೇಶ್ವರ ನೈವೇದ್ಯ ಮನೆಯ ಪೂರ್ವ ದಿಕ್ಕಿನ ಗೋಡೆ ಮೇಲೆ.

ದೇವರ ಬೆಟ್ಟದ ಮೇಲೆ ದೀಪಮಾಲೆ ನಿಲ್ಲಿಸಿ, ಅದಕ್ಕೆ ಆ ಚಂದ್ರರ್ಕಾಲಂಬರ ಅಮಾವಾಸೆ, ತಿಥಿ, ದಿವಸಗಳ ದೀವಿಗೆ ದೇವರಿಗೆ ಸಲ್ಲಿಸುವಂತಾಗಿಯೂ ಬಯಿರವ ದೇವರ ದೇವಾಲಯವನ್ನು ನಿರ್ಮಿಸಿ ಧರ್ಮಗಳು ನಡೆಸುವಂತಾಗಿ[೧೧೧], ನಾರಸಿಂಗ ದೇವನ ಆಜ್ಞೆಯ ಮೇರೆಗೆ ಶಿವಗಂಗೆ ಬೆಟ್ಟದ ಕುಂಬಿಯಲ್ಲಿ ತೀರ್ಥದ ಕಂಬವನ್ನು ಸ್ಥಾಪಿಸಿದರ ಬಗ್ಗೆ ಆ ಕಂಬದ ಬುಡದ ಉತ್ತರ ಮುಖದಲ್ಲಿರುವ ಶಾಸನ ತಿಳಿಸುತ್ತದೆ. ಈ ತೀರ್ಥಕಂಬವು ಅಷ್ಟ ಕೋನಾಕೃತಿಯಲ್ಲಿದ್ದು, ಮಾರ್ಗಶಿರ ಮಾಸದ ಪೂರ್ಣಿಮೆಯ ದಿನ ಕೈಲಾಸ ದೀವಿಟಿಗೆಯನ್ನು ಈಗಲೂ ಹಚ್ಚುತ್ತಾರೆ.

ಕ್ರಿ.ಶ.೧೧೫೨ ರಲ್ಲಿ ಪೇಶಾಳ ಹನುಮ ಶಿವಣ್ಣನು ಗಂಗಾಧರ ದೇವರ ನೈವೇದ್ಯಕ್ಕೆ ಬಿಟಸಮುದ್ರ ಗ್ರಾಮವನ್ನು ದಾನ ನೀಡಿದರು. ಈ ಬಿಟಸಮುದ್ರ ಈಗ ಬಿಟ್ಟಸಂದ್ರವಾಗಿ ಬಾಣಸವಾಡಿ ಪಂಚಾಯಿತಿಯಲ್ಲಿನ ಗ್ರಾಮವು ಸೋಲೂರು ಹೋಬಳಿ ಮಾಗಡಿ ತಾಲ್ಲೂಕಿನಲ್ಲಿದೆ[೧೧೨]. ಇದೇ ಕಾಲದ ಮತ್ತೊಂದು ಶಾಸನ ಹೊನ್ನದೇವಮ್ಮನ ಗುಡಿಯ ಮುಂದಿನ ಗುಂಡಿನ ಮೇಲಿದ್ದು ವಿಷಯ ಕಾಣಿಸುವುದಿಲ್ಲ[೧೧೩]. ಕ್ರಿ.ಶ.೧೨೯೬ ರಲ್ಲಿ ವೀರ ಬಲ್ಲಾಳನ ತೊತ್ತಿನ ಮಕ್ಕಳಾದ ತಿಪ್ಪರಸ, ಭೈರವದೇವ, ಬೊಮ್ಮರಸರು ತಮ್ಮ ಆಳ್ವಕೆಯ ನಾಡೋಳಗಣದಲ್ಲಿ ಕೆಂಕೆರೆ ಎಂಬ ಗ್ರಾಮವನ್ನು ಅಮೃತಪಡಿಗಾಗಿ ಸರ್ವಮಾನ್ಯವಾಗಿ ದತ್ತಿ ಬಿಟ್ಟ ವಿವರವನ್ನು ಗಂಗಾಧರೇಶ್ವರ ದೇವಾಲಯದ ಕಲ್ಯಾಣ ಮಂಟಪದಲ್ಲಿನ ಶಾಸನದಲ್ಲಿ ಕಾಣಬಹುದು. ಈ ಕೆಂಕೆರೆಯು ಕುಣಿಗಲ್ ತಾಲ್ಲೂಕಿನ ಗ್ರಾಮವೇ ಆಗಿದ್ದು ಶಿವಗಂಗೆಗೆ ಸಮೀಪದಲ್ಲಿದೆ[೧೧೪].

ಹೊಯ್ಸಳ ನಂತರ ಶಿವಗಂಗ ಕ್ಷೇತ್ರದ ಅಭಿವೃದ್ಧಿಗಾಗಿ ವಿಜಯನಗರ ಅರಸರು, ಎಲಹಂಕ ನಾಡಪ್ರಭುಗಳು, ಮೈಸೂರು ಸಂಸ್ಥಾನದ ವಂಶೀಯರು, ಅಧಿಕಾರಿಗಳು ಸ್ಥಳೀಯರು, ಭಕ್ತಾಧಿಗಳು ತಮ್ಮ ಭಕ್ತಿಯ ಸೇವೆಯಾಗಿ ಅಮೂಲ್ಯವಾದ ಕೊಡುಗೆಗಳನ್ನು ನೀಡಿದ್ದಾರೆ. ವಿಜಯನಗರದ ಆಳ್ವಿಕೆಯಲ್ಲಿ ಈ ಶಿವಗಂಗೆಯ ಉಸ್ತುವಾರಿಯನ್ನು ಸಾಮಂತರಾಜ ಶಿವಪ್ಪ ನಾಯಕನಿಗೆ ವಹಿಸಿದ್ದರು ಆಗ ಇದು ಶಿವಪ್ಪನಾಯಕ ಕೋಟೆ ಎಂದಾಗಿತ್ತು.

ಬೆಟ್ಟದ ತುದಿಯಲ್ಲಿರುವ ಕೋಡುಗಲ್ಲೊಂದರಲ್ಲಿ ಬಸವನ ಮೂರ್ತಿಯನ್ನು (ವೃಷಭ) ಕೆತ್ತಿದ್ದ ವಿಷಯವನ್ನು ಅದೇ ಬಂಡೆಯ ಪಶ್ಚಿಮಾಭಿಮುಖವಾಗಿರುವ ಕ್ರಿ.ಶ.೧೩೮೯ ರ ಶಾಸನದಲ್ಲಿ ಕಾಣಬಹುದು.

---

[೧೧೧] ಎ.ಕರ್-೯, ಅನುಬಂಧ, ನೆ.ತಾ.೧೦೬, ಗಂಗಾಧರೇಶ್ವರ ದೇವಾಲಯದ ನೈವೇದ್ಯ ಮನೆಯ ಪೂರ್ವದ ಗೋಡೆಯ ಮೇಲೆ.
[೧೧೨] ಎ.ಕರ್-೯, ನೆ.ತಾ.೮೫, ಕ್ರಿ.ಶ.೧೧೫೨, ಗಂಗಾಧರೇಶ್ವರ ದೇವಾಲಯದ ಪಾಕಶಾಲೆಯ ಬಳಿ ಗುಂಡಿನ ಮೇಲೆ
[೧೧೩] ಎ.ಕರ್-೯, ನೆ.ತಾ.೮೬, ಕ್ರಿ.ಶ.೧೧೫೨, ಹೊನ್ನಾದೇವಮ್ಮನ ಗುಡಿಯ ಮುಂದೆ ಗುಂಡಿ ಮೇಲೆ.
[೧೧೪] ಎ.ಕರ್-೯, ನೆ.ತಾ.೮೨,ಕ್ರಿ.ಶ. ೧೧೯೬, ಗಂಗಾಧರೇಶ್ವರ ದೇವಾಲಯದ ಕಲ್ಯಾಣ ಮಂಟಪದಲ್ಲಿ.

ಶಿವಗಂಗೀನಾಥ ದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕರಪ್ಪರಾದ ಶಿವಗಂಗೆಯ ನಾಗಪನು ಗಿರಿಯ ಮೇಲೆ ಬಸವರಾಜ ದೇವರ ಮೂರ್ತಿಯನ್ನು ನೆಲೆಗೊಳಿಸಿದನು[೧೧೫]. ಇದನ್ನು ಸುತ್ತಿ ಪ್ರದಕ್ಷಿಣೆ ಹಾಕಿದವರ ಇಷ್ಟಾರ್ಥ ಸಿದ್ಧಿಯಾಗುತ್ತದೆಂಬ ಸ್ಥಳೀಯರ ನಂಬಿಕೆ.

ಕೃಷ್ಣದೇವರಾಯ ಮಹಾರಾಯರ ಮನೆ ಕುದುರೆ ಬಹರಿ ಚನ್ನಮಲ್ಲಿ ಸೆಟ್ಟಿಯರ ಮಗ ಚನ್ನಣ್ಣ ಸೆಟ್ಟಿಯರು ಗಂಗಾಧರ ದೇವರಿಗೆ ಕ್ರಿ.ಶ.೧೫೨೮ ರಲ್ಲಿ ಮಜನ ಮಾಡಿಸಿದ ವಿವರವನ್ನ ಮಠದ ಬಾಗಿಲಿನ ಪೂರ್ವದ ಕಂಬದ ಮೇಲೆ[೧೧೬] ಕಾಣಿದ್ದರೇ, ಅದೇ ವರ್ಷವಾದ ಕ್ರಿ.ಶ.೧೫೨೮ರಲ್ಲಿ ವಿಜಯಪುರದ ಚಂದರಸರ ಪಂಡಿತರ ಪಾರುಪತ್ಯದಲ್ಲಿ ಗಂಗಾಧರನಿಗೆ ಪಲ್ಲಕ್ಕಿಯ ಪ್ರದಕ್ಷಿಣವನ್ನು ಮಾಡಿಸಿದ್ದನ್ನು ದೇವಾಲಯದ ಮಾಳಿಗೆ ಗುಂಡಿಯಲ್ಲಿನ ದೊಡ್ಡಾಕ್ಷರದಲ್ಲಿ ನೋಡಬಹುದಾಗಿದೆ[೧೧೭]. ಬೆಳ್ಳಿಯ ಬಿಂದಿಯನ್ನು ಮಕರ ಸಂಕ್ರಮಣ ಬುಧವಾರ ೮ ರಂದು ಶ್ರೀ ಗಂಗಾಧರೇಶ್ವರ ಸ್ವಾಮಿಯವರಿಗೆ[೧೧೮], ಕ್ರಿ.ಶ.೧೭೬೦ ರಲ್ಲಿ ಶ್ರೀ ರಂಗರಾಜಯ್ಯನವರ ಕಾರ್ಯಕ್ಕೆ ಕರ್ತರಾದ ಶಿವಗಂಗೆಯ ಸ್ತಾನಿಕರೂ ಆದ ಬಸವರಸಯನವರು ಕೆರೆಸಮುದ್ರದ ಹೊಲವನ್ನು ಹಲಗೆ ಅಂಗಕ್ಕೆ ಸಮರ್ಪಿಸಿದ್ದರು ಎಂಬುದನ್ನು ಬಂಡೇ ಮೇಲೆ[೧೧೯], ಕ್ರಿ.ಶ.೧೫೩೨ ರ ಅಚ್ಯುತರಾಯರ ಕಾಲದಲ್ಲಿ ಅವರ ಕಟ್ಟಿಗೆಯ ಕಾಮಣನಾಯ್ಕರೂ ಶ್ರೀ ಅಚ್ಯುತ ರಾಯರಿಗೆ ಧರ್ಮವಾಗ ಬೇಕೆಂದು ಶ್ರೀಪತಿಹಳ್ಳಿ ಎಂಬ ಗ್ರಾಮವನ್ನು ಪುರವಾಗಿ ಶ್ರೀ ದಕ್ಷಿಣ ಕಾಶೀ ನಿವಾಸ ಶ್ರೀಗಂಗಾಧರ ದೇವರ ಅಭಿಷೇಕ, ಪೂಜೆ, ನೈವೇದ್ಯ, ದೀಪಾರಾಧನೆ ಮೊದಲಾದ ಅಮೃತಪಡಿ ಸರ್ವಕಾಲದಲ್ಲೂ ಸಲ್ಲಬೇಕೆಂದು ಗಂಗಾಧರ ದೇವರಿಗೆ[೧೨೦] ಸಮರ್ಪಣೆ ಮಾಡಿದರು. ಈ ಶ್ರೀಪತಿಹಳ್ಳಿಯು ಮಾಗಡಿ ತಾಲ್ಲೂಕಿನ ಕಲ್ಯಾ ಸಮೀಪದಲ್ಲಿದೆ. ಗಂಗಾಧರೇಶ್ವರ ದೇವಾಲಯದ ಮಹಾದ್ವಾರದ ಪೂರ್ವದ ಕಲ್ಲಿನಲ್ಲಿ ಕ್ರಿ.ಶ.೧೫೪೫ ರಲ್ಲಿ ಶ್ರೀ ಸದಾಶಿವ ದೇವ ಮಹಾರಾಯರು ಅಮರ ನಾಯಕ ತನಕ್ಕೆ ಪಾಲಿಸಿದ ಭಂಡಿಯ ಬಸವಣ ನಾಯಕರಸ ಮಗ ಸದಾಶಿವದೇವನು ಮಲೆನಾಡ ಗೂಳೂರು ಮಣ್ಣೆಯ ಸೀಮೆಯಲ್ಲಿನ ಶಿವಗಂಗೆಯ ಗಂಗಾಧರ ದೇವರಿಗೆ ಸಲುವ ಪುರಗಳು, ಹೊನ್ನಮ್ಮನ ಸಿಂಹಾಸನ ಮಹತ್ತಿಗೆ ಸಲುವ ಪುರಗಳು, ಮೇಲಣ ಗವಿಯ ಸಿಂಹಾಸನಕ್ಕೆ ಸಲುವ ಪುರಗಳು, ಚಿನ್ನದ ಕಥೆಯ ಮಠಕ್ಕೆ ಸಲುವ ಪುರಗಳು, ಧರ್ಮದ ಗವಿಯ ಪುರ, ಬಯಲ ಬಸವನ ಗವಿಯ ಪುರ, ಕಂಬಾಳ ಮರುಳ ಸಿದ್ದಯ್ಯ ದೇವರ ಪುರ ಎಂಬ ಪುರ ಧರ್ಮಗಳನ್ನು ಪ್ರಸ್ತಾಪಿಸಿರುವ

---

[೧೧೫] ಎ.ಕರ್-೯, ಅನುಬಂಧ ನೆ.ತಾ.೧೩೨, ೧೩೮೯, ಕೋಡಗಲ್ಲು ಬಸವಣ್ಣನ ಪಶ್ಚಿಮಾಭಿಮುಖವಾಗಿ.
[೧೧೬] ಎ.ಕರ್-೯, ನೆ.ತಾ.೭೪, ಕ್ರಿ.ಶ.೧೫೨೮, ಮಠದ ಬಾಗಿಲಲ್ಲಿ ಪೂರ್ವ ಕಡೆ ಕಂಭದ ಮೇಲೆ.
[೧೧೭] ಎ.ಕರ್-೯, ಅನುಬಂಧ, ನೆ.ತಾ.೧೧೬, ಕ್ರಿ.ಶ.೧೫೨೮, ಗಂಗಾಧರೇಶ್ವರ ದೇವಾಲಯದ ಮಾಳಿಗೆಗುಂಡಿನಲ್ಲಿ ದಕ್ಷಿಣಾಭಿಮುಖವಾಗಿರುವ ದೊಡ್ಡಾಕ್ಷರದಲ್ಲಿ.
[೧೧೮] ಎ.ಕರ್-೯, ಅನುಬಂಧ, ನೆ.ತಾ.೯೪, ನೆಲಮಂಗಲ ಖಜಾನೆ.
[೧೧೯] ಎ.ಕರ್-೯, ನೆ.ತಾ.೭೫, ಕ್ರಿ.ಶ.೧೭೬೦, ಶಿವಗಂಗೆ ಗ್ರಾಮ.
[೧೨೦] ಎ.ಕರ್-೯, ನೆ.ತಾ.೮೩, ಕ್ರಿ.ಶ.೧೫೩೨, ಗಂಗಾಧರೇಶ್ವರ ದೇವಾಲಯದ ನಂದಿ ಮಂಟಪದ ಕಂಬದಲ್ಲಿ.

ಈ ಶಾಸನದಲ್ಲಿ ಸದಾಶಿವ ರಾಯರಿಗೆ ಪುಣ್ಯವಾಗಿರ ಬೇಕೆಂದು ಸರ್ವಮಾನ್ಯವಾಗಿ ಶಿವರಾತ್ರಿ ಪುಣ್ಯ ಕಾಲದಲ್ಲಿ ಕೊರಮರ ಮುರುಗನಾಥ ಸೆಟ್ಟಿಯರು ರಾಮರಾಯ ಗೌಡರು, ಹಲಗಸೆಟ್ಟಿಯರ ಅನುಮತದಿಂದ ಭಂಡಿಯ ಬಸವಣ್ಣ ನಾಯ್ಕರು ಕೊಟ್ಟರು[೧೨೧]. ಹಲವಾರು ಪುರ ಧರ್ಮವಾಗಿ ದತ್ತಿ ನೀಡಿರುವುದನ್ನು ಗಮನಿಸಿದರೆ ಶಿವಗಂಗೆಯು ಪ್ರಮುಖ ಧಾರ್ಮಿಕ ಕ್ಷೇತ್ರವಾಗಿದ್ದಿರಬೇಕು. ಜೊತೆಗೆ ಸೆಟ್ಟಿಯರು, ವರ್ತಕರು, ಗೌಡರ ಸಹಯೋಗಗಳಿಂದ ಕ್ಷೇತ್ರವು ಸ್ಥಳೀಯ ವಾಣಿಜ್ಯ ವಹಿವಾಟಿನ ಸ್ಥಳವಾಗಿರಬೇಕು.

ಕ್ರಿ.ಶ.೧೫೬೦ ರಲ್ಲಿ ಉದ್ರಿ ಸಂವತ್ಸರದ ಪುಷ್ಯ ಶುದ್ಧ ೧೧ ಶನಿವಾರ ಮಕರ ಸಂಕ್ರಾಂತಿ ಪುಣ್ಯ ಕಾಲದಲ್ಲಿ ಸೋಮರಾಜಯ್ಯನವರಿಗೆ ಪುಣ್ಯವಾಗಬೇಕೆಂದು ಸುಗಟೂರು ತಮ್ಮಪ್ಪಗೌಡರು ನೆಲವಾಗಿಲಸ್ಥಳಕ್ಕೆ ಸಲುವ ಅನುವುಹಳ್ಳಿ ಗ್ರಾಮವನ್ನು ಶಿವಗಂಗೆಯ ಪ್ರಸನ್ನ ಗಂಗಾಧರ ಲಿಂಗಕ್ಕೆ ಅಮೃತಪಡಿ, ನೈವೇದ್ಯಕ್ಕೆ ಸಮರ್ಪಿಸಿದೆರು[೧೨೨].

ಗಂಗಾಧರದೇವರ ಅಮೃತಪಡಿಗೆ ಜಂಜನರಾಯರು ನೆಲವಂಗಲಸೀಮೆಯ ಕನಸವಾಡಿಯನ್ನು ಧರ್ಮವಾಗಿ ಕ್ರಿ.ಶ.೧೪೬೪ರಲ್ಲಿ ನೀಡಿದರು[೧೨೩]. ವೈಶಾಖ ಪುಣ್ಯ ಕಾಲದಲ್ಲಿ ಗಂಗರಗೊಳ್ಳಿ ದಳವಾಯಿ ಭೈರಪ್ಪನಾಯಕರು ಶಿವಗಂಗೆಯ ಮೇಲಣಗವಿ ಸಿಂಹಾಸನದ ಮಲೆಯ ಕಾಂತ ದೇವರಿಗೆ ಶಿಷ್ಯ ಪಾರಂಪರೆಯಾಗಿ ಹುಲುಕಡಿನಾಡಿನ ಹಣಬೆಯ ಸೀಮೆಯ ಶಿಂಪಾಡಿಪುರದ ಸೀಮೆಯೊಳಗಣವನ್ನು ವೀರ ನರಸಿಂಗ ದೇವರು ನಾಯಕತಕ್ಕೆ ಪಾಲಿಸಿದ ಪ್ರಾಂತ್ಯದಲ್ಲಿ[೧೨೪], ಮತ್ತೊಂದು ಶಾಸನದಲ್ಲಿ ನರಸಿಂಗದೇವ ಮಹಾರಾಯರಿಗೆ ಧರ್ಮವಾಗಲೆಂದು ಗಂಡರಗೊಳ್ಳಿಪುರವನ್ನು ಶಿವಗಂಗೆಯ ಮೇಲಣಗವಿಯ ಸಿಂಹಾಸನದ ಮಲೆಯಕಾಂತ ದೇವರಿಗೆ[೧೨೫] ದಾನ ನೀಡಿದರೂವುದನ್ನು ಗಮನಿಸಿದರೆ ಭೈರಪ್ಪನಾಯಕರು ಮಲೆಯಕಾಂತ ದೇವರ ಪರಮ ಅನುಯಾಗಿಗಳಾಗಿರಬೇಕು.

ಕ್ರಿ.ಶ.೧೫೪೦ ರಲ್ಲಿ ಕೆಂಪೇಗೌಡರು ಶಿವಗಂಗೆಯನ್ನು ವಶಪಡಿಸಿಕೊಂಡು ಹಲವಾರು ಅಭಿವೃದ್ಧಿ ಯೋಜನೆಗಳನ್ನು ಕೈಗೊಂಡರು. ಕ್ರಿ.ಶ.೧೫೫೦ ರಲ್ಲಿ ಶಿವಗಂಗೆಯಲ್ಲಿ ಶಿಥಿಲಗೊಂಡಿದ್ದ ಗಿರಿಯ ಮುಖ ದೇವಾಲಯವನ್ನು ಜೀರ್ಣೋದ್ದಾರಗೊಳಿಸಿ, ದೇಗುಲದಲ್ಲಿ ವಿಶಾಲವಾದ ಸಭಾಂಗಣವನ್ನು

---

[೧೨೧] ಎ.ಕ.-೯, ನೆ.ತಾ.೮೧, ಕ್ರಿ.ಶ.೧೫೪೫, ಗಂಗಾಧರೇಶ್ವರ ದೇವಾಲಯದ ಮಹಾದ್ವಾರದ ಪೂರ್ವಕ್ಕೆ.
[೧೨೨] ಎ.ಕ-೯, ಹೊ.ತಾ.೭೨, ಕ್ರಿ.ಶ. ೧೫೬೦, ಅನುವುಹಳ್ಳಿ.
[೧೨೩] ಎ.ಕ-೯, ದೊ.ತಾ.೫೧, ಕ್ರಿ.ಶ.೧೪೬೪, ಕನಸವಾಡಿ.
[೧೨೪] ಎ.ಕ-೯ ದೊ.ತಾ.೪೦, ಕ್ರಿ.ಶ.೧೫೪೧, ಗಂಡ್ರಗೊಳ್ಳಿಪುರ.
[೧೨೫] ಎ.ಕ-೯ ದೊ.ತಾ.೪೧, ಕ್ರಿ.ಶ.೧೫೨೯, ಗಂಡ್ರಗೊಳ್ಳಿಪುರ.

ಕಟ್ಟಿಸಿದ್ದರಿಂದ[೧೨೬] ಈಗಲೂ ಈ ಸಭಾಂಗಣವನ್ನು ಕೆಂಪೇಗೌಡರ ಹಜಾರವೆಂದೇ ಕರೆಯುತ್ತಾರೆ. ಹಿರಿಯ ಕೆಂಪೇಗೌಡನು ಕ್ರಿ.ಶ೧೫೭೮ ರವರೆಗೆ, ಗಿಡ್ಡೇಗೌಡ ೧೫೮೫ ರವರೆಗೆ ಆಳಿದ ಮೇಲೆ ಇಮ್ಮಡಿ ಕೆಂಪೇಗೌಡ ತನ್ನ ಆಳ್ವಿಕೆಯ ಅವಧಿಯಲ್ಲಿ ತಂದೆಯ ಪ್ರತಿಮೆಯನ್ನು ಕ್ರಿ.ಶ.೧೬೦೯ ರಲ್ಲಿ ಕಾರ್ತಿಕ ಮಾಸದಲ್ಲಿ ಬೆಂಗಳೂರ ಕೆಂಪನಾಚಯಗೌಡರ ಕೋಮಾರ ಕೆಂಪಯ್ಯ ಗೌಡನು ಗಂಗಾಧರ ಸ್ವಾಮಿಯ ಪಾದಕ್ಕೆ ಸದಾ ನಮಸ್ಕಾರ ಎನ್ನುವುದನ್ನು ಗಂಗಾಧರೇಶ್ವರ ಗರ್ಭಗುಡಿ ಎದುರಿನ ಕೆಂಪೇಗೌಡನ ಪ್ರತಿಮೆಯ ಪೀಠದಲ್ಲಿ[೧೨೭] ಕಾಣಬಹುದು. ಇದರ ಜೊತೆಗೆ ಗಂಗಾಧರೇಶ್ವರ ದೇವಾಲಯಕ್ಕೆ ನೀಡಿರುವ ಕ್ರಿ.ಶ.೧೫೬೫ ರ ತಾಳಿಕೋಟೆ ಯುದ್ಧಕ್ಕೆ ಬಸವಯ್ಯ, ಕೆಂಪ ಸೋಮಣ್ಣ, ಕೆಂಪೇಗೌಡ ಪೀಠದ ಎಡಭಾಗದಲ್ಲಿ ನಿಂತಿರುವ ವುಳಿಗದ ಚಿಕ್ಕಂಣನ ಚಿಕ್ಕ ಕಂಚಿನ ವಿಗ್ರಹದ ಪೀಠದಲ್ಲಿ ತಿಮೆಗವುನಿ.....ಕವುಳಿಗಮು ಬಸವಯನು[೧೨೮] ವೀರ ಸ್ವರ್ಗ ಪಡೆದರು ಎಂದು ಈ ಗುಡಿಯಲ್ಲಿ ಅವರ ವಿಗ್ರಹಗಳನ್ನು ಸಹ ಮಾಡಿಸಿರಬೆಕು.

೧ನೇ ಕೆಂಪೇಗೌಡರ ಸೋದರನಾದ ತಿಮರಾಜವರದ ಅಯಮನೂ ಮುದ್ರೆಯ ಕಾಮಯನು ಕುಂಬ ತೀರ್ಥದ ಕಂಬವನ್ನು[೧೨೯] ಹಾಗೂ ಕೆಂಪ ರಾಮರಸ ಒಡೆಯ ನಂಜಯ್ಯರವರು ಈ ತೀರ್ಥಕಂಬವನ್ನು[೧೩೦] ಜೀರ್ಣೋದ್ಧಾರ ಮಾಡಿಸಿರಬೇಕು.

ಕಡಿದಾದ ಎತ್ತರವಾದ ಬೆಟ್ಟಕ್ಕೆ ಸುಲಭವಾಗಿ ಹತ್ತಲು ಮೆಟ್ಟಿಲುಗಳನ್ನು ನಿರ್ಮಿಸಿರುವುದಕ್ಕೆ ಗಾರೆ ಬಸವಣ್ಣನ ಹತ್ತಿರ ಮೆಟ್ಟಿಲುಗಳ ಮೇಲೆ ಭಕ್ತನ ವಿಗ್ರಹದ ಕೆಳಭಾಗದಲ್ಲಿರುವ ಶಾಸನದಲ್ಲಿ ಶ್ರೀ ಮತು ಯಲಹಂಕನಾಡ ಪ್ರಭು ಕೆಂಪೇಗೌಡರ ಮಗ ಯಿಂಮಡಿ ಕೆಂಪೇಗೌಡರ ಧರ್ಮ[೧೩೧] ಎಂದಿರುವುದನ್ನು ಗಮನಿಸಿದರೆ ಮೆಟ್ಟಿಲುಗಳ ನಿರ್ಮಾಣವನ್ನು ಇಮ್ಮಡಿ ಕೆಂಪೇಗೌಡ ಮಾಡಿಸಿದಕ್ಕೆ ಶಾಸನ ಹಾಕಿರ ಬೇಕು.

ಮಾಗಡಿ ಕೆಂಪೇಗೌಡರು ಈ ಶಿವಗಂಗೆ ಕ್ಷೇತ್ರದ ಮೇಲೆ ವಿಶೇಷವಾದ ಒಲವು ಹೊಂದಿದ್ದರೆಂದು ಅಲ್ಲಿನ ಶಾಸನಗಳು ಮತ್ತು ಶಿಲ್ಪ ಕಲೆಗಳು ವಿವರಿಸುತ್ತವೆ. ೧೬ ನೇ ಶತಮಾನದ ಗಂಗಾಧರೇಶ್ವರ ದೇವಾಲಯದ ನವರಂಗ ಸಿಂಹದ್ವಾರ ನಿರ್ಮಿಸಲಾಯಿತು. ಇದೇ ಕಾರಣಕ್ಕೆ ಈ ಬಾಗಿಲುವಾಡದ ಕೆಳಗಡೆ ಕೆಂಪೇಗೌಡ, ಆತನ ಪತ್ನಿ, ಪುತ್ರ ಪುತ್ರಿಯರ ಉಬ್ಬು ಶಿಲೆಗಳಿವೆ. ಕೆಂಪೇಗೌಡನು ಚಿನ್ನದ ಗಂಟೆಯನ್ನು ಬೆಟ್ಟದ ಕಡಿದಾದ ಬೃಹತ್ ಬಂಡೆಯ ಕಲ್ಲಿಗೆ ಅಳವಡಿಸಲಾಗಿತ್ತು. ಆದರೆ ಸುಮಾರು ೩೦

[೧೨೬] ಎ.ಕ-೯, ಅನುಬಂಧ, ನೆ.ತಾ.೧೦೯, ಕ್ರಿ.ಶ.೧೫೭೮, ಶಿವಗಂಗೆ.
[೧೨೭] ಎ.ಕ-೯, ಅನುಬಂಧ, ನೆ.ತಾ.೧೦೭, ಕ್ರಿ.ಶ.೧೬೦೯, ಕೆಂಪೇಗೌಡನ ಪ್ರತಿಮೆಯ ಪೀಠದ ಮೇಲೆ.
[೧೨೮] ಎ.ಕ-೯, ಅನುಬಂಧ, ನೆ.ತಾ.೧೦೮, ವೂಳಿಗದ ಚಿಕ್ಕಂಣನ ಚಿಕ್ಕ ಕಂಚಿನ ವಿಗ್ರಹದ ಪೀಠದಲ್ಲಿ.
[೧೨೯] ಎ.ಕ-೯, ಅನುಬಂಧ, ನೆ.ತಾ.೧೩೪, ಬೆಟ್ಟದ ಕುಂಬಿಯಲ್ಲಿ ತೀರ್ಥದ ಕಂಭಕ್ಕೆ ಉತ್ತರ ಬಂಡೆಯ ಮೇಲೆ.
[೧೩೦] ಎ.ಕ-೯, ಅನುಬಂಧ, ನೆ.ತಾ೧೩೫, ಬೆಟ್ಟದ ಕುಂಬಿಯಲ್ಲಿ ತೀರ್ಥದ ಕಂಭಕ್ಕೆ ಉತ್ತರ ಬಂಡೆಯ ಬಲಗಡೆ.
[೧೩೧] ಡಾ.ಎಂ.ಜಿ.ಮಂಜುನಾಥ:- ಯಲಹಂಕನಾಡಪ್ರಭುಗಳ ಶಾಸನ ಸಂಪುಟ, ಶಾ.ಸಂ.೪೬

ವರ್ಷದ ಹಿಂದೆ ಕಳ್ಳರು ಕದ್ದಿದ್ದಾರೆ. ಶಿವಗಂಗೆ ಬೆಟ್ಟದ ಬುಡದಲ್ಲಿ ರಾಯಗೋಪುರ (ಕೆಂಪೇಗೌಡ ಗೋಪುರ) ಮತ್ತು ಬೆಟ್ಟದ ಮೇಲೆ ಕೆಂಪೇಗೌಡರ ಹಜಾರ ನಿರ್ಮಾಣವಾಗಿದೆ. ಹಾಗೇಯೇ ಈ ಪ್ರದೇಶದಲ್ಲಿ ಬೀಳುವ ಮಳೆ ನೀರನ್ನು ಸಂಗ್ರಹಿಸಿ ಮರಬಳಕೆ ಮಾಡುವ ತಂತ್ರಜ್ಞಾನದ ವ್ಯವಸ್ಥೆಯನ್ನು ಮಾಡಲಾಯುತ್ತು. ಈ ಕ್ಷೇತ್ರದಲ್ಲಿ ಹಲವು ಕಟ್ಟಡಗಳನ್ನು ನಿರ್ಮಾಣ ಮಾಡಿಸಿ, ಪವಿತ್ರ ಶೈವ ಕ್ಷೇತ್ರವಾಗುವಂತೆ ಶ್ರಮಿಸಿದ್ದು ಮಾಗಡಿಯ ಕೆಂಪೇಗೌಡ ಎಂದು ತಿಳಿದು ಬರುತ್ತದೆ.

ಗಂಗಾಧರನ ಗರ್ಭಗುಡಿಯ ಮುಂದಿನ ನಂದಿ ಮಂಟಪದಲ್ಲಿ ಕ್ರಿ.ಶ.೧೫೬೭ ರ ಅವಧಿಯಲ್ಲಿ ಯಲಹಂಕ ನಾಡಪ್ರಭು ಸೋಂಣ ತಮ್ಮೇಗೌಡರ ಮಕ್ಕಳು ದುಟ್ಟನಹಳ್ಳಿಯ ಗಿರಿಯಪ್ಪ ಗೌಡರ ತಮ್ಮಂದಿರಾದ ಚಿಕ್ಕ ಗಿರಿಯಪ್ಪ ಗೌಡರು ತಮ್ಮ ಗುರುವಾದ ಚಲುವನಹಳ್ಳಿ ಜ್ಞಾನಮೂರ್ತಿ ದೇವರಿಗೆ ಧರ್ಮವಾಗ ಬೇಕೆಂದು ನಮಃ ಶಿವಾಯ ಒಡೆಯ ಎರೆಸಿದ ಪಂಚಲೋಹದ ಒಂದನೇ ಗಂಟೆಯನ್ನು[೧೩೨], ಎರಡನೇಯ ಘಂಟೆಯನ್ನು (ಗಂಟೆ ಎರದಾತ ಗಂಗಯ್ಯ) ದುಟ್ಟನಹಳ್ಳಿ ಗಿರಿಯಪ್ಪ ಗೌಡರ ಮಗ ಚಿಕ್ಕಹೊನ್ನಗೌಡನ ಪುಣ್ಯಾರ್ತಿಯಾದ ಅಗಜಮ್ಮ ಎಂಬುವಳ ಭಕ್ತಿಯಾಗಿ[೧೩೩], ಮೂರನೇಯ ಗಂಟೆಯನ್ನು ದಕ್ಷಿಣ ಕೈಲಾಸ ಗಂಗಾಧರನಿಗೆ ಗ್ನಾನಮೂರ್ತಿ ದೇವರ ಶಿಷ್ಯರಾದ ಎಲಹಂಕ ನಾಡಪ್ರಭು ದುಟ್ಟನಹಳ್ಳಿಯ ಚಿಕ್ಕ ಗಿರಿಯಪ್ಪಗೌಡರ ಸೇವಕನಾದ ಹಚಿಕಲ ಪೊನ್ನೆಗೌಡರು ಕಾರ್ತಿಕ ಶುದ್ಧ ಮಂಗಳವಾರ ದಿನದಂದು ಭಕ್ತಿಯಾಗಿ[೧೩೪] ಸಮರ್ಪಿಸಿದ್ದರು. ಚಿಕ್ಕ ಗಿರಿಯಪ್ಪ ಗೌಡರಿಗೆ ಗುರುವಾದ ಜ್ಞಾನಮೂರ್ತಿ ದೇವರು ವೀರಶೈವ ಧರ್ಮಕ್ಕೆ ಸೇರಿದ ಮಠಾಧಿಪತಿಗಳಾಗಿದ್ದರು. ಎಲಹಂಕ ನಾಡಪ್ರಭುಗಳ ದುಟ್ಟನಹಳ್ಳಿ ಶಾಖೆಯೊಂದು ಅಸ್ತಿತ್ವದಲ್ಲಿತ್ತು ಎಂಬುದು ಹಾಗೂ ಎಲಹಂಕ ನಾಡಪ್ರಭುಗಳಾಗಿ ದುಟ್ಟನಹಳ್ಳಿಯಲ್ಲಿ ಸೋಂಣ ತಮ್ಮೇಗೌಡ ನಂತರ ಮೊದಲನೇ ಮಗ ಗಿರಿಯಪ್ಪ ಗೌಡ, ಗಿರಿಯಪ್ಪ ಗೌಡನ ಮಗ ಚಿಕ್ಕ ಹೊನ್ನೆಗೌಡ ಹೀಗೆ ಅವರ ಆರಾಧ್ಯ ದೇವ ಗಂಗಾಧರನಾಗಿದ್ದು, ದೇವಾಲಯಕ್ಕೆ ಹಲವಾರು ಧಾರ್ಮಿಕ ದತ್ತಿಗಳನ್ನು ನೀಡಿದ್ದಾನೆ. ಈ ದುಟ್ಟನಹಳ್ಳಿಯು ಮಾಗಡಿ ತಾಲ್ಲೂಕಿನ ಹಳ್ಳಿಯಾಗಿದ್ದು, ಕೆಂಪೇಗೌಡರ ವಂಶೀಯರ ಆಳ್ವಿಕೆಯ ವ್ಯಾಪ್ತಿಯ ಮಾಗಡಿಯ ಹಳ್ಳಿಯಾದ ದುಟ್ಟನಹಳ್ಳಿಯ ಮನೆತನದವರನ್ನ ಸಾಮಂತಾಧಿಕಾರಿ ಮಾಡಿಕೊಂಡಿರಬೇಕು. ಹಾಗೇಯೇ ದೊಡ್ಡ ಗಂಟೆಯನ್ನು (ಶಿವಗಂಗೆಯ ನಮಃ ಶಿವಾಯ ಒಡೆಯನೇ ಎರೆದ) ಕ್ರಿ.ಶ.೧೫೭೮ ರ ಸಂಕ್ರಾಂತಿ ಪುಣ್ಯ ಕಾಲದಲ್ಲಿ ಶ್ರೀ ಕಕುದ್ಗಿರಿ ವಾಸ ಶ್ರೀ ಗಂಗಾಧರ ಸ್ವಾಮಿ ಪಾದಕ್ಕೆ ಎಲಹಂಕ ನಾಡಪ್ರಭು ಕೆಂಪನಾಚೆ ಗೌಡರ ಮಕ್ಕಳೂ ಕೆಂಪೇಗೌಡರು ತಮಗೆ ಪುತ್ರ ಪೌತ್ರ ಪರಂಪರೆ ಅಭಿವೃದ್ಧಿ ಹಾಗು ತಮ್ಮ ಮಾತೃ

[೧೩೨] ಎ.ಕ-೯, ಅನುಬಂಧ, ನೆ.ತಾ.೧೧೦, ೧ನೇ ಗಂಟೆಯ ಮೇಲೆ.
[೧೩೩] ಎ.ಕ-೯, ಅನುಬಂಧ, ನೆ.ತಾ.೧೧೧. ೨ನೇ ಗಂಟೆಯ ಮೇಲೆ.
[೧೩೪] ಎ.ಕ-೯, ಅನುಬಂಧ, ನೆ.ತಾ.೧೧೨. ೩ನೇ ಗಂಟೆಯ ಮೇಲೆ.

ಪಿತೃಗಳಿಗೆ ಮೋಕ್ಷವಾಗಲಿ ಎಂದು[೧೩೫], ಮೇಲ್ಗವಿ ಮಠದ ಗವಿಯಲ್ಲಿ ವೀರಭದ್ರ ದೇವಸ್ಥಾನದ ೧ನೇ ಘಂಟೆಯನ್ನು ಕಾರ್ತಿಕ ಗುರುವಾರದಲ್ಲಿ ಮೇಲಣ ಗವಿ ಸಿಹ್ಮಾಸನದ ಮಲಿ ವೀರೇಶ್ವರ ಸ್ವಾಮಿಯವರ ದೇವಸ್ಥಾನಕ್ಕೆ ಕ್ರಿ.ಶ.೧೭೫೨ ರಲ್ಲಿ ಮಹಾರಾಜ ಶ್ರೀದಳವಾಯಿ ನಂಜುಂಡೈಯ ಅರಸಿನವರ ಸೇವೆಯಾಗಿ[೧೩೬], ಶಾಸನೋಕ್ತವಾದ ಮಲಿ ವೀರೇಶ್ವರನೇ ಈಗಿನ ವೀರ ಭದ್ರಸ್ವಾಮಿಯಾಗಿರ ಬೇಕು. ೨ನೇ ಘಂಟೆಯನ್ನು ಮಾಘ ಮಾಸದಲ್ಲಿ ಹಂಚಿಪುರದ ವೀರಪ್ಪ ಮನೆಯಪ್ಪನ ಭಕ್ತಿಯಾಗಿ[೧೩೭], ಚಿಕ್ಕ ಹಿತ್ತಾಳೆ ಗಂಟೆಯನ್ನು ಹಳೇಕೋಟೆ ಶ್ರೀ ವೀರಭದ್ರ ದೇವರ ಪಾದಕ್ಕೆ ಭಕ್ತಿಯಾಗಿ ತರುರ ಮಠಾಧಿಪತಿ ಅಯಪ್ಪನು[೧೩೮] ಹೀಗೆ ವಿಭಿನ್ನ ವೃತ್ತಿ, ವರ್ಗಗಳಿಗೆ ಸೇರಿದ ಭಕ್ತರು ತಮ್ಮ ಸೇವೆಯಾಗಿ ವಿವಿಧ ಅಳತೆಯ ಘಂಟೆಗಳನ್ನು ನೀಡಿದ್ದಾರೆ. ಶಿವಗಂಗೆಯಲ್ಲಿ ಘಂಟೆಯನ್ನು ಎರೆಯಲು ಹಲವಾರು ವೃತ್ತಿಪರ ಆಚಾರಿಗಳಿದ್ದವರನ್ನು ಸಹ ಈ ಮೇಲಿನ ಘಂಟಾಶಾಸನಗಳು ದೃಡಿಪಡಿಸುತ್ತದೆ.

ಶ್ರೀ ಸ್ವರ್ಣಾಂಬ(ಹೊನ್ನದೇವಿ) ಅಮ್ಮನವರ ಸೇವೆಯಾಗಿ ಶ್ರೀ ಕೃಷ್ಣರಾಜ ಒಡೆಯರು ಬೆಳ್ಳಿ ಬಿದಿಗೆ[೧೩೯], ಬೆಳ್ಳಿ ದುಂಡು ತಟ್ಟೆ[೧೪೦], ಬೆಳ್ಳಿಯ ಚಾಮರವನ್ನು[೧೪೧], ಬಂಗಾರದ ಕಂಠಾಭರಣ ಪದಕವನ್ನು ಮಹಿಶೂರು ಸಂಸ್ಥಾನದ ಚಾಮರಾಜ ಒಡೆಯರ ಧರ್ಮಪತ್ನಿಯವರಾದ ದ್ಯಾವಜಿ ಅಮ್ಮಣಿಯವರ ಸೇವಾರ್ಥವಾಗಿ[೧೪೨], ಬೆಳ್ಳಿದಾರೆ ಪಾತ್ರೆಯನ್ನು ಸುಬೇದಾರು ವೀರಯ್ಯನವರ ಧರ್ಮಪತ್ನಿ ಚನ್ನಮ್ಮಳು[೧೪೩], ಬೆಳ್ಳಿ ಡಾಬನ್ನು ಗಂಜಾ ಮಠದ ನಿರ್ವಾಣ ಶೆಟ್ಟಿಯು[೧೪೪], ಬೆಳ್ಳಿ ಬಟ್ಟಲನ್ನು ಚಂದ್ರವದನಯು[೧೪೫] ಬೆಳ್ಳಿ ಛತ್ರಿ ಕಳಸವನ್ನು ನಡೆದಪ್ಪನ ಭಕ್ತಿಯಾಗಿ[೧೪೬], ಬೆಳ್ಳಿ ನಾಗಾಭರಣದ ಡಾಬನ್ನು ಶ್ರೀ ಶಿವಗಂಗೆ ಕೋಟೆ ಲಿಂಗಣ ಮಾಡಿದ ದೇವರ ಮನಿಗೆ ಉತ್ತರಿ ಗಂಗೈಯನ ಭಕ್ತಿಯಾಗಿ[೧೪೭] ನೀಡಿದ್ದರು. ಶಾಸನೋಕ್ತ ಸ್ವಾರ್ಣಾಂಬ, ಸ್ವಾರ್ಣಾಂಬಿಕೆಯನ್ನು ಹೊನ್ನದೇವಿ ಎಂದು ಕರೆಯಲಾಗುತ್ತಿದೆ. ಮೇಲಣ ಗವಿಮಠದಲ್ಲಿ ಕಂಚಿನ

[೧೩೫] ಎ.ಕ-೯, ಅನುಬಂಧ, ನೆ.ತಾ.೧೮೯, ನಂದಿ ಮಂಟಪದ ಪಶ್ಚಿಮದಲ್ಲಿನ ದೊಡ್ಡಗಂಟೆಯ ಮೇಲೆ.
[೧೩೬] ಎ.ಕ-೯, ನೆ.ತಾ.೭೬, ಕ್ರಿ.ಶ.೧೭೫೨, ಮೇಲ್ಗವಿ ಮಠದ ಗವಿಯಲ್ಲಿ ವೀರಭದ್ರ ದೇವಸ್ಥಾದ ೧ನೇ ಘಂಟೇಯ ಮೇಲೆ.
[೧೩೭] ಎ.ಕ-೯, ನೆ.ತಾ.೭೭. ಕ್ರಿ.ಶ.೧೭೬೦, ಮೇಲ್ಗವಿ ಮಠದ ಗವಿಯಲ್ಲಿ ವೀರಭದ್ರ ದೇವಸ್ಥಾದ ೨ನೇ ಘಂಟೇಯ ಮೇಲೆ.
[೧೩೮] ಎ.ಕ-೯, ಅನುಬಂಧ, ನೆ.ತಾ.೧೪೧, ಮೇಲಣ ಗವೀ ಮಠದಲ್ಲಿ ಚಿಕ್ಕ ಹಿತ್ತಾಳೆ ಘಂಟೇಯ ಮೇಲೆ.
[೧೩೯] ಎ.ಕ-೯, ಅನುಬಂಧ, ನೆ.ತಾ.೯೨, ಬೆಳ್ಳಿಯ ಕೊಡದ ಮೇಲೆ ನೆ.ತಾ ಖಜಾನೆಯಲ್ಲಿರುವ ನಗರಗಳ ಮೇಲೆ ಬರೆದಿರುವುದು
[೧೪೦] ಎ.ಕ-೯, ಅನುಬಂಧ ನೆ.ತಾ.೯೩, ನೆಲಮಂಗಲ ಖಜಾನೆ.
[೧೪೧] ಎ.ಕ-೯, ಅನುಬಂಧ, ನೆ.ತಾ-೯೫, ನೆಲಮಂಗಲ ಖಜಾನೆ.
[೧೪೨] ಎ.ಕ-೯, ಅನುಬಂಧ, ನೆ.ತಾ.೧೨೨, ಹೊನ್ನಾಂಬಿಕೆ ದೇವಸ್ಥಾನದಲ್ಲಿ ಹೊನ್ನಾಂಬಿಕೆಯ ಬಂಗಾರದ ಕಂಠಾಭರಣದ ಪದಕದ ಮೇಲೆ.
[೧೪೩] ಎ.ಕ-೯, ಅನುಬಂಧ, ನೆ.ತಾ.೯೭, ನೆಲಮಂಗಲ ಖಜಾನೆ.
[೧೪೪] ಎ.ಕ-೯, ಅನುಬಂಧ, ನೆ.ತಾ.೯೮, ನೆಲಮಂಗಲ ಖಜಾನೆ.
[೧೪೫] ಎ.ಕ-೯, ಅನುಬಂಧ, ನೆ.ತಾ.೯೯, ನೆಲಮಂಗಲ ಖಜಾನೆ.
[೧೪೬] ಎ.ಕ-೯, ಅನುಬಂಧ, ನೆ.ತಾ.೧೦೦, ನೆಲಮಂಗಲ ಖಜಾನೆ.
[೧೪೭] ಎ.ಕ-೯, ಅನುಬಂಧ, ನೆ.ತಾ.೯೬, ನೆಲಮಂಗಲ ಖಜಾನೆ.

ತೀರ್ಥದ ಬಟ್ಟಿನ್ನು ಶ್ರೀ ಕೃಷ್ಣರವರು[೧೪೮], ಹಿತ್ತಾಳೆ ದೊಡ್ಡ ತಪಲೆಯನ್ನು ಮೈಸೂರು ಆಳಿದ ಮಹಾಸ್ವಾಮಿಯವರ ಭಕ್ತಿ ಸೇವೆಯಾಗಿ[೧೪೯] ನೀಡಿದ್ದರು.

ದೇವರಿಗೆ ಸೇವೆಯನ್ನು ಮಾಡಿಸಿದ ವಿವರಗಳು ಸಹ ದೊರೆಯುತ್ತದೆ. ಕ್ರಿ.ಶ.೧೭೦೦ ರಲ್ಲಿ ಚಿಕ್ಕೈಯ್ಯ ನಾಯಕರು ಮಾಡಿಸಿದ ಗಿರಿ ಪಾವಡೆ ಸೇವೆ[೧೫೦] ಹಳೇ ಪಾಕಶಾಲೆಯ ಬಂಡೆಯ ನೈರುತ್ಯ ಭಕ್ತ ವಿಗ್ರಹದ ಪಕ್ಕದಲ್ಲಿ ಸೇನಾಬೋವ ಸಿಂಗರನ ಮಗ ಮಲ್ಲಯ್ಯನು ಗಂಗಾಧರ ಪ್ರಸಾದವು[೧೫೧] ಎಲ್ಲರಿಗೂ ಸಿಗಲಿ ಎಂದು ದಾನ ನೀಡಿದ್ದಾನೆ. ಗಂಗಾಧರೇಶ್ವರ ದೇವಸ್ಥಾನದ ಎಡದ್ವಾರ ಪಾಲಕನ ಬಳಿ ಹಾಸುಗಲ್ಲಿನ ಮೇಲೆ ಬಸವಿ ನಾಯಕನ ಕಾಮನಾಯಕನ[೧೫೨] ಶಾಸನವಿದೆ.

ಕ್ರಿ.ಶ.೧೬೫೨ ರಲ್ಲಿ ಕಾರ್ತಿಕ ಆದಿವಾರದಂದು ಕಣ್ವ ತೀರ್ಥವನ್ನು ಸಾಹೂಜಿ ಮಹಾರಾಜರ ಆಳ್ವಿಕೆಯಲ್ಲಿ ಗಂಗಾಧರ ಸ್ವಾಮಿ ಅಯ್ಯನವರ ಅಪ್ಪಣೆಯಲು ಪಾರುಪತ್ಯಗಾರ ತುಕರಾಮ ರಾವುತರು ಕಟ್ಟಿಸಿರುವುದನ್ನು ತೀರ್ಥದ ಬಂಡೆಯ ಮೇಲೆ ಕಾಣಬಹುದು[೧೫೩]. ಬೆಟ್ಟದ ಮೇಲಿನ ಗಂಗಾ ತೀರ್ಥದ ಬಳಿ ಇರುವ ಸೊಗದ ಕಬ್ಬಿಣದ ಕಂದೆಯ ಕರಿಯ ಮಲ್ಲಿಕಾರ್ಜುನ ದೇವರ ಶಿಷ್ಯರಾದ ಚಿಕ್ಕವೀರಣ್ಣ ಒಡೆಯರು ಪ್ರಸನ್ನವಾದ ತೀರ್ಥನದಿ, ಅದೇ ಸ್ಥಳದಲ್ಲಿನ ಶ್ರೀಮತಿ ಅನುಮಿಷ ಬಸವ ಲಿಂಗಪ್ಪಯರ ಪ್ರಸಂನ ತೀರ್ಥಕೊಳ ಎಂದು. ಈ ಶಾಸನ ಕೆಳಗೆ ಶ್ರೀಮತು ಅನುಮಿಷ ಬಸವ ಲಿಂಗಪ್ಪಯವರ ಪ್ರಸನ್ನ ತೀರ್ಥಕೊಳನು[೧೫೪]. ಮೌದ್ಗಲ್ಯ ತೀರ್ಥಕ್ಕೆ ಹೋಗುವ ದಾರಿಯಲ್ಲಿ ಈ ರಾಜಮ್ಮನ ಗವಿ ಬಾಗಲ ಬಂಡೇ ಮೇಲೆ ಬೈಚನಾಯ್ಕ ಉಗಡು[೧೫೫] ನಿರ್ಮಿಸಿದ ವಿವರಗಳಿವೆ.

ಶಿವಗಂಗೆಯು ಗಿರಿ ಪ್ರದೇಶವಾಗಿ ಮೇಲೂ ವೀರಭದ್ರ, ಬಸವಣ್ಣ, ಒಳಕಲ್ ತೀರ್ಥಗಳು ಬೆಟ್ಟದ ಮೇಲಿದ್ದು, ಬೆಟ್ಟ ಹತ್ತಲು ಸೋಪಾನಗಳನ್ನು ಭಕ್ತರು ನಿರ್ಮಿಸಿರುವುದನ್ನು ಸಹ ಶಾಸನಗಳಲ್ಲಿ ಕಾಣಬಹುದು. ಶ್ರೀ ಕುಂದಾನಿಯ ವೀರಣ್ಣ ಒಡೆಯನು ಮಾಡಿಸಿದ ಸೋಪಾನ ಎಂದು ಬೆಟ್ಟದ ಮೇಲಣ ಗವಿಯ ಮಠಕ್ಕೆ ಉತ್ತರಕ್ಕಿರುವ ಬಾಜಿದೋಣಿಯ ಕೆಳಭಾಗದ ಮೆಟ್ಟಲುಗಳ ಬಲಕ್ಕಿರುವ ಬಂಡೆಯ

---

[೧೪೮] ಎ.ಕ-೯, ಅನುಬಂಧ, ನೆ.ತಾ.೧೩೯, ಮೇಲಣ ಗವಿಮಠದಲ್ಲಿ ಕಂಚಿನ ತೀರ್ಥದ ಬಟ್ಲಿನ ಮೇಲೆ.
[೧೪೯] ಎ.ಕ-೯, ಅನುಬಂಧ, ನೆ.ತಾ.೧೪೦, ಮೇಲಣ ಗವಿಮಠದಲ್ಲಿ ಹಿತ್ತಾಳೆಯ ದೊಡ್ಡ ಪಾತ್ರೆಯ ಮೇಲೆ.
[೧೫೦] ಎ.ಕ-೯, ನೆ.ತಾ.೭೮, ಕ್ರಿ.ಶ.೧೭೦೦, ಬೆಟ್ಟದಲ್ಲಿ ಮಾವಿನ ಮರದ ಮಂಟಪದ ಬಳಿ ಬಂಡೆಯ ಮೇಲೆ.
[೧೫೧] ಎ.ಕ-೯, ಅನುಬಂಧ, ನೆ.ತಾ.೧೨೦, ಗಂಗಾಧರೇಶ್ವರ ದೇವಸ್ಥಾನದ ಹಳೇ ಪಾಕಶಾಲೆಯ ಬಂಡೆಯ ನೈರುತ್ಯ ಭಕ್ತ ವಿಗ್ರಹಗಳ ಪಕ್ಕದಲ್ಲಿ.
[೧೫೨] ಎ.ಕ-೯, ಅನುಬಂಧ, ನೆ.ತಾ.೧೨೧, ಗಂಗಾಧರೇಶ್ವರ ದೇವಸ್ಥಾನದ ಎಡದ್ವಾರ ಪಾಲಕನ ಬಳಿ ಹಾಸುಗಲ್ಲಿನ ಮೇಲೆ.
[೧೫೩] ಎ.ಕ-೯, ಅನುಬಂಧ, ನೆ.ತಾ.೧೨೭, ಬೆಟ್ಟದಲ್ಲಿನ ಕಣ್ವತೀರ್ಥದ ಮೇಲಿನ ಬಂಡೆಯ ಮೇಲೆ.
[೧೫೪] ಎ.ಕ-೯, ಅನುಬಂಧ, ನೆ.ತಾ.೧೪೩, ಬೆಟ್ಟದ ಮೇಲೆ ಗಂಗಾವತೀ ತೀರ್ಥದ ಬಂಡೆಯ ಕೆಳಗೆ ದೊಡ್ಡಕ್ಷರ.
[೧೫೫] ಎ.ಕ-೯, ಅನುಬಂಧ, ನೆ.ತಾ.೧೪೮, ಮೌದ್ಗಲ್ಯ ತೀರ್ಥಕ್ಕೆ ಹೋಗುವ ದಾರಿಯಲ್ಲಿ ಈರಾಜಮ್ಮನ ಗವಿ ಬಾಗಲ ಮೇಲಣ ಬಂಡೆಯ ಮೇಲೆ.

ಮೇಲೆ[೧೫೬], ಗಾರೆ ಬಸವಣ್ಣನ ಬಾಗಿಲಿಗೆ ದಕ್ಷಿಣ ಮೆಟ್ಲುಗಳ ಎಡಕ್ಕೆ ಹೊನ್ನಳ ಮೆಲುಕ ಕಲುನ ಮಗನ ಸೇವೆ[೧೫೭], ಇದೇ ಸ್ಥಳದ ಇನ್ನೊಂದು ಶಾಸನದಲ್ಲಿ ಸಿರುಪತಿಹಳ್ಳಿಯ ಬಯಿರನಾಯ್ಕೆರು ಮಕ್ಕಳು ಗಉಡ ಬಯಿರನಾಯ್ಕರು ಮಾಡಿಸಿದ ಸೋಪಾನ[೧೫೮]. ಈ ಸಿರುಪತಿಹಳ್ಳಿಯ ಎಂಬುದು ಕ್ರಿ.ಶ.೧೫೩೨ ರ ಕಾಲದ ಶಾಸನದಲ್ಲಿ ಪ್ರಸ್ತಾಪವಾಗಿರುವ ಶ್ರೀಪತಿಹಳ್ಳಿಯೇ ಆಗಿದೆ. ಬಹುಶಃ ಶ್ರೀಪತಿಹಳ್ಳಿಯನ್ನು ಶಿವಗಂಗೆಯ ಅಭಿವೃದ್ಧಿಗೇ ಮಿಸಲಿಟ್ಟ ಗ್ರಾಮವಾಗಿರಬೇಕು.

ಪ್ರತಿ ವರ್ಷ ಸಂಕ್ರಾಂತಿ ದಿನ ಜಾತ್ರೆ ಗಂಗಾಧರೇಶ್ವರನಿಗೆ ಜಾತ್ರೆ ನಡೆಯುತ್ತದೆ. ಈ ರೀತಿ ಜಾತ್ರೆಯು ಹಿಂದಿನಿಂದಲೂ ನಡೆಯುತ್ತ ಬರುತ್ತಿತ್ತು ಎಂಬುದಕ್ಕೆ ಪೂರಕವೆಂಬಂತೆ ೧೬ನೇ ಶತಮಾನದಲ್ಲಿ ಶ್ರೀ ಸಿವಗಂಗೆಯ ಮುಖ್ಯಸ್ಥರಾದ ಕಳಪ್ಪ ವೊಡೆಯರಿಗೆ ಶಿವಗಂಗಾಧರ ದೇವರಾ ಜಾತ್ರೆಯ ಸಾಮ್ಯದ ದೇವರಾ ಮಹಂತಿನ ಸಿಂಹಾಸನದ ಕಾಣಿಕೆಗೆ ೧ ಗದ್ಯಾಣ, ೨ ಹಣ, ಸಿದ್ಧೆಯ ವೊಡೆಯರಿಗೆ ೨ ಹಣ, ಮಹತ್ತಿನ ದರುಶನ ಕಾಣಿಕೆ ೧ ಹಣ, ಗದ್ದಿಗೆ ೧ ಹಣ, ವಿಭುತಿಯ ಕಾಣಿಕೆ ೧ ಹಣ ಇತ್ಯಾದಿಯಾಗಿ ಶಿವಗಂಗೆಯ ನಾಡಪ್ರಭು ಹೆಗಡೆ ದಾನ ನೀಡಿದ್ದರು[೧೫೯].

ಸಂಕ್ರಾಂತಿ, ಶಿವರಾತ್ರಿ, ಉತ್ಸವ, ಜಾತ್ರೆ ಇತ್ಯಾದಿ ವಿಶೇಷ ಪೂಜಾ ಕಾರ್ಯಗಳ ಸಂದರ್ಭದಲ್ಲಿ ಭಕ್ತರು ಉಳಿದು ಕೊಳ್ಳುವಾಗ, ದೀವಿಗೆ ಹಲವಾರು ಕಲ್ಲಿನ, ಕಬ್ಬಿಣದ ಕಂಬವನ್ನು (ದೀಪ ಕಂಬಗಳನ್ನು) ನಿರ್ಮಿಸಿದ್ದಾರೆ. ಕ್ರಿ.ಶ.೧೩೬೬ ರಲ್ಲಿ ಶ್ರಾವಣ ಶುದ್ಧ ೧೫ ಬುಧವಾರದಂದು ಹೆಗ್ಗುಂದದ ಮಾರದಾಸನು ಶಿವಗಂಗೆಯ ದೇವರಿಗೆ ದೀಪ ಮಾಲೆಯ ಕಂಬವನ್ನು[೧೬೦], ಕ್ರಿ.ಶ.೧೭೭೦ ರಲ್ಲಿ ಚೈತ್ರ ಬಾವಳ ಪಂಚಮ ಬುಧವಾರ ಬೆಟ್ಟಯ್ಯ ಮಾಡಿದ ಕಲ್ಲ ಕಂಭ[೧೬೧], ಶ್ರೀ ಕೊಟ್ಟಾರದ ಹೆಗಡೆ ಮಾಚಿಮಯ್ಯನು ನಿಲಿಸಿದ ದೀಪಮಾಲೆ[೧೬೨]. ಈ ಶಾಸನದಲ್ಲಿನ ದೀಪಮಾಲೆ ಕಂಬವೇ ಪ್ರಾಕೃತಿಕ ಬದಲಾವಣೆಯಿಂದಾಗಿ ಅದರ ಬುಡದಲ್ಲಿ ತೀರ್ಥೋದ್ಭವವಾಗಿ ತೀರ್ಥಕಂಬವಾಗಿದೆ. ಅಧಿಕ ಜನರಿಗೆ ತಂಗಲು ಮಂಟಪಗಳನ್ನು ಸಹ ನಿರ್ಮಿಸುತ್ತಿದ್ದರು. ಒನಿಕೆ ಗುಂಡಿಗೆ ದಕ್ಷಿಣ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಬಂಡೆಯ ಮೇಲೆ ತಿಮ್ಮಕ್ಕ ನಾಯಕನ ಮಗ ಲಕಣನಾಯಕ ತೇರ ಕಟ್ಟಿಸಿದರೇ[೧೬೩].

---

[೧೫೬] ಎ.ಕ-೯, ಅನುಬಂಧ, ನೆ.ತಾ.೧೩೭, ಬೆಟ್ಟದ ಮೇಲೆ ಮೇಲಣ ಗವಿಮಠಕ್ಕೆ ಉತ್ತರ ಜಾಜಿ ದೊಣೆಯ ಕೆಳಭಾಗದ ಬಂಡೆಯ ಮೇಲೆ ಸ್ವಲ್ಪ ಮೇಲ್ಗಡೆ.

[೧೫೭] ಎ.ಕ-೯, ಅನುಬಂಧ, ನೆ.ತಾ.೧೨೯, ಬೆಟ್ಟದ ಮೇಲೆ ಗಾರೆ ಬಸವಣ್ಣನ ಬಾಗಲಿಗೆ ದಕ್ಷಿಣ ಮೆಟ್ಲುಗಳ ಎಡಕ್ಕೆ.

[೧೫೮] ಎ.ಕ-೯, ಅನುಬಂಧ, ನೆ.ತಾ.೧೩೬, ಮಾವಿನ ಮರದ ಬಳಿ ಕೆಂಪೇಗೌಡರ

[೧೫೯] ಎಂ. ಎ. ಆರ್, ೧೯೩೫, ಮೈಸೂರು, ಶಿವಗಂಗೆ, ಪು.ಸಂ-೭೬.

[೧೬೦] ಎ.ಕ-೯ ನೆ.ತಾ.೮೭, ಕ್ರಿ.ಶ.೧೩೬೬, ಕೆಂಪೇಗೌಡರ ಹಜಾರಕ್ಕೆ ಪಶ್ಚಿಮ ಭಾಗದಲ್ಲಿ.

[೧೬೧] ಎ.ಕ-೯, ನೆ.ತಾ.೭೯, ಕ್ರಿ.ಶ.೧೭೭೦, ಗಂಗಾಧರೇಶ್ವರ ದೇವಸ್ಥಾನದ ಮುಂದೆ ಕಬ್ಬಿಣದ ಗರುಡ ಕಂಭದ ಮೇಲೆ.

[೧೬೨] ಎ.ಕ-೯, ಅನುಬಂಧ, ನೆ.ತಾ೧೩೩, ಬೆಟ್ಟದ ಕುಂಬಿಯಲ್ಲಿ ತೀರ್ಥದ ಕಂಭದ ಬುಡದಲ್ಲಿ ಉತ್ತರಮುಖವಾಗಿ ಬರೆದಿರುವುದು.

[೧೬೩] ಎ.ಕ-೯, ಅನುಬಂಧ, ನೆ.ತಾ.೧೨೮, ಬೆಟ್ಟದ ಮೇಲೆ ಒನಿಕೆಗಂಡಿಗೆ ದಕ್ಷಿಣ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಬಂಡೆಯ ಮೇಲೆ.

ಹೆಚ್ಚಿಗೆ ಭಕ್ತರು ಸೇರುವಾಗ ಆಹಾರದ ತಯಾರಿಕೆಗೆ ಬೇಕಾಗುವಂತಹ ಒರಳುಕಲ್ಲು ಅಗತ್ಯವಾಗಿದ್ದು, ಆಹಾರ ತಯಾರಿಕೆಗೆ ಮಾತ್ರವಲ್ಲದೆ ದೇವರ ಆರಾಧನೆಗೆ ಸಂಬಂಧಿಸಿದೆ. ಹೊನ್ನಾದೇವಿಗೆ ತಂಬಿಟ್ಟಿನ ಬೆಳಕು ಬೆಳಗಿಸುವ ಹರಕೆಯನ್ನು ಸಲ್ಲಿಸಲು ಬೇಕಾದ ಅಕ್ಕಿಯನ್ನು ಕುಟ್ಟಲು ಇತ್ಯಾದಿ ಸೇವೆಗಳಿಗಾಗಿ ಚಿಕಜಿ[೧೬೪], ಕೆಂಪಯನು[೧೬೫], ತಿಮಜಿಯು[೧೬೬] ವರುಳುಗಳನ್ನು ಮಾಡಿಸಿದ್ದರು. ಗ್ರಾಮದಲ್ಲಿ ಪಶ್ಚಿಮ ಜಾಲಹಳ್ಳಿಯ ಬೋರೆ ಪಾದದ ಅರೆಯ ಮೇಲೆ ಕಲಿಗೂರ ಚೋಳ ಕೆಂಚನು[೧೬೭] ನಿರ್ಮಿಸಿದ್ದನು.

ದೇವರ ದರ್ಶನ ಮಾಡಿದವರ, ಪಾದ ಸೇವೆ ಮಾಡಿದವರ ಶಾಸನಗಳನ್ನು, ಭಕ್ತರ ಶಿಲ್ಪಗಳನ್ನು ಸಹ ಕಾಣಬಹುದು. ಅರಸೀಕೆರೆಯ ಸೂರಿ ಸೆಟ್ಟಿಯರ ಮಗ ಮರಿಸೆಟ್ಟಿಯು[೧೬೮] ಗೂಳೂರು ಜಿರಿಯ ತಮ್ಮಣ್ಣ ಪಂಡಿತರ ಮಗ ತಿಪಣನು[೧೬೯] ವಿರೂಪಯ್ಯನ ಮಗ ಲಿಂಗನು[೧೭೦] ಗಂಗಾಧರ ದರ್ಶನ ಮಾಡಿದರು. ಗವಿ ಮಠದ ಚಿಕ್ಕ ನಂಜಯ್ಯನ ಮಗ ಭದ್ರಯ್ಯ[೧೭೧] ಈ ಶಾಸನ ಬಲಗಡೆ ಭಕ್ತ ವಿಗ್ರಹಗಳ ಪಕ್ಕದಲ್ಲಿ ಕೆಂಪಕ್ಕ ತಂಗಮ ಕೊಂಪದ ಲಿಂಗಯ ಮಾಗುಡಿಯ ಲಿಂಗ ತಾಮರಮನು[೧೭೨] ಈ ಶಾಸನದ ಮೇಲುಗಡೆ ಬೆಳ್ಳಿ ಕೆಲಸದ ಭೋಜ ಲಿಂಗಯ್ಯನು[೧೭೩] ಗಂಗಾಧರನ ಪಾದ ಸೇವೆಯನ್ನು ಮಾಡಿದರು.

ಶಿವಗಂಗೆ ಕೊನೆಯ ಶಾಸನವು ಒನಕೆ ಗುಂಡಿ ಸಮೀಪದಲ್ಲಿರುವ ಇಂಗ್ಲೀಷ್ ಭಾಷೆಯಲ್ಲಿನ ಶಾಸನವು ಕ್ರಿ.ಶ.೧೯೦೦ ರ ನವೆಂಬರ್ ನಲ್ಲಿ ಮಹಾರಾಜರು ಭೇಟಿ ನೀಡಿದ್ದನ್ನು ದಾಖಲಿಸಿದೆ.

ಶಿವಗಂಗೆಯಲ್ಲಿ ಎರಡು ಜಾತ್ರೆಗಳು ನಡೆಯುತ್ತವೆ. ಒಂದು ಗಂಗಾಧರೇಶ್ವರನ ಜಾತ್ರೆ ಇದನ್ನು "ಗಂಗಪ್ಪನಧಾರೆ" ಎಂದು ಕರೆಯುತ್ತಾರೆ. ಇದು ಧನಗಳ ಜಾತ್ರೆಯಾಗಿದ್ದು, ಪ್ರತಿ ವರ್ಷ ಜನವರಿಯಲ್ಲಿ ಸಂಕ್ರಾತಿಯ ದಿನದಂದು ನಡೆಯುತ್ತದೆ. ಏಕೆಂದರೆ ಗಿರಿಯ ತುದಿಯಲ್ಲಿರುವ ತೀರ್ಥಕಂಬದಲ್ಲಿ ಸಂಕ್ರಾಂತಿಯ ಕಾಲದಲ್ಲಿ ಗಂಗಾಧರೇಶ್ವರನ ಕಲ್ಯಾಣಕ್ಕೆ ಗಂಗೋಧಕ ಬರುವುದೆಂದು ಇಲ್ಲಿನ ಜನರ ನಂಬಿಕೆ. ಸಂಕ್ರಾಂತಿಯ ದಿನ ಈ ತೀರ್ಥ ಕಂಬಕ್ಕೆ ಕೈಲಾಸ ದೀವಟಿಗೆಯನ್ನು ಹಚ್ಚಿ ಜಾತ್ರೆಗೆ ಚಾಲನೆಯನ್ನು ನೀಡುವ ಸಂಪ್ರದಾಯವನ್ನು ಇಲ್ಲಿನ ಜನ ಸಾಂಸ್ಕೃತಿಕ ಪರಂಪರೆಯನ್ನು ಜಾತ್ರೆಗಳ

[೧೬೪] ಎ.ಕ-೯, ಅನುಬಂಧ, ನೆ.ತಾ.೧೪೪, ಕುಂಭೀಶ್ವರ ದೇವಸ್ಥಾನಕ್ಕೆ ಉತ್ತರ ಬಂಡೆಯ ಮೇಲೆ.

[೧೬೫] ಎ.ಕ-೯, ಅನುಬಂಧ, ನೆ.ತಾ.೧೪೫, ಕುಂಭೀಶ್ವರ ದೇವಸ್ಥಾನಕ್ಕೆ ಉತ್ತರ ಬಂಡೆಯ ಮತ್ತೊಂದು ಕಡೆಯಲ್ಲಿ.

[೧೬೬] ಎ.ಕ-೯, ಅನುಬಂಧ, ನೆ.ತಾ.೧೪೬, ಕುಂಭೀಶ್ವರ ದೇವಸ್ಥಾನಕ್ಕೆ ಉತ್ತರ ಬಂಡೆಯ ಇನ್ನೋಂದು ಕಡೆಯಲ್ಲಿ.

[೧೬೭] ಎ.ಕ-೯, ಅನುಬಂಧ, ನೆ.ತಾ.೧೪೭, ಗ್ರಾಮದಲ್ಲಿ ಪಶ್ಚಿಮ ಚೌಲಹಳ್ಳದ ಬೋರೆಪಾದದ ಅರೆಯ ಮೇಲೆ.

[೧೬೮] ಎ.ಕ-೯, ಅನುಬಂಧ, ನೆ.ತಾ.೧೧೪, ಗಂಗಾಧರೇಶ್ವರ ದೇವಾಲಯದ ದಕ್ಷಿಣ ದ್ವಾರಕ್ಕೆ ಎದುರಾಗಿರುವ ಸರಣಿ ಬಂಡೆಯ ಮೇಲೆ.

[೧೬೯] ಎ.ಕ-೯, ಅನುಬಂಧ, ನೆ.ತಾ.೧೧೩, ಗಂಗಾಧರೇಶ್ವರ ದೇವಸ್ಥಾನದ ವಸಂತ ಮಂಟಪದ ಮಾಳಿಗೆ ಮೇಲೆ ನೈರುತ್ಯ ಬಂಡೆಯ ಮೇಲೆ.

[೧೭೦] ಎ.ಕ-೯, ಅನುಬಂಧ, ನೆ.ತಾ.೧೧೫, ಹಳೇ ಪಾಕ ಶಾಲೆಯ ಬಂಡೆಯ ಹಿಂಭಾಗ ದೇವಸ್ಥಾನದ ಮೇಲಕ್ಕೆ ಹತ್ತುವ ದಾರಿಯಲ್ಲಿ.

[೧೭೧] ಎ.ಕ-೯, ಅನುಬಂಧ, ನೆ.ತಾ.೧೧೭, ಗಂಗಾಧರೇಶ್ವರ ದೇವಸ್ಥಾನದ ಮಾಳಿಗೆ ಗುಂಡಿಯಲ್ಲಿ ದಕ್ಷಿಣಾಭಿಮುಖವಾಗಿರುವ ದೊಡ್ಡಕ್ಷರದ ಶಾಸನದ ಕೆಳಗೆ.

[೧೭೨] ಎ.ಕ-೯, ಅನುಬಂಧ, ನೆ.ತಾ.೧೧೮, ಗಂಗಾಧರೇಶ್ವರ ದೇವಸ್ಥಾನದ ಮಾಳಿಗೆ ಗುಂಡಿನಲ್ಲಿ ದಕ್ಷಿಣಾಭಿಮುಖವಾಗಿರುವ ದೊಡ್ಡಕ್ಷರದ ಶಾಸನದ ಭಕ್ತವಿಗ್ರಹಗಳ ಪಕ್ಕದಲ್ಲಿ.

[೧೭೩] ಎ.ಕ-೯, ಅನುಬಂಧ, ನೆ.ತಾ.೧೧೯; ದೊಡ್ಡಕ್ಷರದ ಶಾಸನದ ಭಕ್ತವಿಗ್ರಹಗಳ ಮೇಲುಗಡೆ.

ಮೂಲಕ ಇಂದಿಗೂ ಉಳಿಸಿಕೊಂಡು ಬರುತ್ತಿದ್ದಾರೆ. ಈ ಜಾತ್ರೆಯಲ್ಲಿ ಅತೀ ಹೆಚ್ಚು ದನ-ಕರುಗಳ ವಹಿವಾಟು ನಡೆಸುತ್ತಾರೆ, ಮತ್ತು ಅತ್ಯುತ್ತಮ ದನಗಳಿಗೆ ಬಹುಮಾನಗಳ ವಿತರಣೆಯನ್ನು ಇತ್ತೀಚಿನ ಜಾತ್ರೆಗಳ ಸಂದರ್ಭದಲ್ಲಿ ನೀಡುತ್ತಿದ್ದಾರೆ.

ಆನಂತರದಲ್ಲಿ ವಸಂತರಾಯನ ಮತ್ತು ಹೊನ್ನಾದೇವಿಯ ಜಾತ್ರೆಯನ್ನು ಪ್ರತಿ ಚೈತ್ರ ಬಹುಳ ಕಾಲದಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ. ಈ ಸಂದರ್ಭದಲ್ಲಿ ಹೊನ್ನಾದೇವಿಗೆ ಬೆನ್ನು ಪೂಜೆಯನ್ನು ನಡೆಸುತ್ತಾರೆ ಏಕೆಂದರೆ ಹೊನ್ನಾದೇವಿಗೆ ವಸಂತರಾಯನು ಕೊಟ್ಟ ಶಾಪದಿಂದ ಹೊನ್ನಾದೇವಿಗೆ ಬೆನ್ನು ಪೂಜೆ ಮಾಡುತ್ತಿದ್ದಾರೆ. ದೇವಿಯ ಮುಖಕ್ಕೆ ಪೂಜೆ ಸಲ್ಲಿಸದರೆ ಈ ಭಾಗದ ಜನಕ್ಕೆ ಕೇಡು ಉಂಟಾಗುತ್ತದೆ ಎಂದು ಈಗಲೂ ಹೊನ್ನಾದೇವಿಗೆ ಬೆನ್ನು ಪೂಜೆ ಮಾಡುತ್ತೇವೆ ಎಂದು ಅರ್ಚಕರು ಹೇಳುತ್ತಾರೆ. ಇಲ್ಲಿನ ಜನ ವಸಂತೋತ್ಸವನ್ನೇ ವಸಂತರಾಯನ ತೇರು ಎಂದು ಭಾವಿಸುತ್ತಾರೆ. ಗವಿಯಲ್ಲಿನ ಹೊನ್ನಾದೇವಿಯ ವಿಗ್ರಹದ ಶಿರೋ ಭಾಗದಲ್ಲಿನ ಶ್ರೀ ಚಕ್ರಕ್ಕೆ ಮಾಡುವ ಪೂಜೆಯನ್ನು ಬೆನ್ನು ಪೂಜೆ ಎಂದು ಜನ ಸಾಮಾನ್ಯರು ತಪ್ಪು ಕಲ್ಪಿಸಿಕೊಂಡು ಇದಕ್ಕೆ ಕಥೆಯೊಂದನ್ನು ಕಟ್ಟಿದ್ದಾರೆ.

ಹೀಗೆ ನಿಸರ್ಗದತ್ತವಾದ ಗುಹೆಗಳು ಪ್ರಾಚೀನ ಕಾಲದ ಮಾನವರ ನೆಲೆಯಾಗಿದ್ದು ಕಾಲಕ್ರಮೇಣ ದೇವಾಲಯಗಳಾಗಿ ಮಾರ್ಪಾಟಾಗಿರುವುದರಲ್ಲಿ ಅನುಮಾನವಿಲ್ಲ. ಗಂಗರು ಈ ಗುಹೆಗಳನ್ನು ನೈಸರ್ಗಿಕವಾಗಿಯೇ ಬಳಸಿಕೊಂಡಿರಬೇಕು. ಆದ್ದರಿಂದ ಬೇರೆ ರಚನೆಗಳನ್ನು ಅವರು ಇಲ್ಲಿ ಮಾಡಿಲ್ಲ. ಕಾಲಾನಂತರದಲ್ಲಿ ಹೊಯ್ಸಳರು, ವಿಜಯನಗರದ ಅರಸರು, ನಾಡಪ್ರಭುಗಳು, ಅಧಿಕಾರಿಗಳ ಪೋಷಣೆಯಿಂದ ಹಂತ ಹಂತವಾಗಿ ವಿಸ್ತೃತವಾಗಿ ಒಂದು ಪ್ರಮುಖ ಧಾರ್ಮಿಕ ಕ್ಷೇತ್ರವಾಗಿದೆ.

## ಚನ್ನಾಪುರದ ವೆಂಕಟರಮಣ ಸ್ವಾಮಿ ದೇವಾಲಯ

ತೂಬಗೆರೆ ಹೋಬಳಿಯ ಮೇಳೆಕೋಟೆ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಚನ್ನಾಪುರ ಗ್ರಾಮದಲ್ಲಿ ಆವತಿ ನಾಡಪ್ರಭು ಇಮ್ಮಡಿ ಹಾವಳಿ ಭೈರೇಗೌಡನ ಕಾಲದಲ್ಲಿ ನಿರ್ಮಾಣವಾಯಿತೆಂದು ಹೇಳುವ ವಿಜಯನಗರ ಶೈಲಿಯ ವೆಂಕಟರಮಣ ಸ್ವಾಮಿ ದೇವಾಲಯವನ್ನು ಮೊಗಲ್ ಸೇನಾಧಿಪತಿ ಖಾಸಿಂಖಾನನು ನಂದಿ ದುರ್ಗವನ್ನು ಆಕ್ರಮಿಸುವ ಸಂದರ್ಭದಲ್ಲಿ ಗಿರಿ ಬುಡದಲ್ಲೇ ಇದ್ದ ಈ ದೇವಾಲಯವನ್ನು ನಾಶ ಮಾಡಿರಬೇಕು. ದೇವಾಲಯದ ಅವಶೇಷಗಳು ಊರಿನಲ್ಲೆಲ್ಲಾ ಹರಡಿದೆ. ದ್ವಾರದ ಕಲ್ಲುಗಳು, ಲಲಾಟ ಪಟ್ಟಿಕೆ, ಸ್ತಂಭಗಳು, ಅಧಿಷ್ಟಾನದ ಪಟ್ಟಿಗಳು, ಪ್ರವೇಶ ದ್ವಾರದ ಕಲ್ಲುಗಳು, ಬೋದಿಗೆಗಳು, ಪದ್ಮ ಪೀಠಗಳು, ಭಗ್ನಗೊಂಡ ಮೂರ್ತಿಗಳು, ಗೋಡೆ ಶಿಲ್ಪಗಳು, ದನದ ಕೊಟ್ಟಿಗೆ, ಬಚ್ಚಲು ಮನೆಗೆ, ಕೆರೆಗೆ ಬೇರೆ ಎಸೆದಿದ್ದಾರೆ. ದ್ವಾರ ಪಾಲಕರ ವಿಗ್ರಹಗಳಿಂದ ವೈಷ್ಣವ ದೇವಾಲಯ

ವಾಯಿತೆಂದು ಊಹಿಸಬಹುದು. ಇದೇ ಆಧಾರದ ಮೇಲೆ ವೆಂಕಟರಮಣ ಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ.

ದೇವರಿಗೆ ಸಂಗೀತ, ನೃತ್ಯ ಸೇವೆಗಾಗಿ ನಿರ್ಮಿಸಿರುವ ನವರಂಗವು ವಿಶಾಲವಾಗಿ ಚೌಕಾಕಾರವಾಗಿದೆ. ಮಧ್ಯದಲ್ಲಿ ನಾಲ್ಕು ಮುಖ್ಯ ಕಂಬಗಳು ಮಾತ್ರ ಗೋಚರಿಸುತ್ತದೆ. ಇದರ ಮೇಲೆ ಭಾಗವತ ಪುರಾಣ, ರಾಮಾಯಣ, ನರಸಿಂಹಾವತಾರ, ವೈಷ್ಣವ ಧರ್ಮ, ಸಾಮಾಜಿಕ ದೃಶ್ಯಗಳು ಕಂಡು ಬಂದಿದೆ.

ಭಾಗವತ ಪುರಾಣಕ್ಕೆ ಸಂಬಂಧಿಸಿದಂತೆ ಕೃಷ್ಣನ ಕಾಳಿಂಗ ಮರ್ದನ, ಬಾಲ್ಯ ಕೃಷ್ಣ ಕೈಯಲ್ಲಿ ಬೆಣ್ಣೆ ಮುದ್ದೆ ಹಿಡಿದಿರುವ ಕೃಷ್ಣ, ದೇವಕಿ ಬೆಣ್ಣೆ ಕಡೆಯುತ್ತಿರುವಾಗ ಹಿಂದಿನಿಂದ ಬಂದು ಕೀಟಲೆ ಮಾಡುವ ಕೃಷ್ಣ, ವೇಣು ಗೋಪಾಲ, ಗೋವರ್ಧನ ಗಿರಿ, ಸಂಹಾರದ ಶಿಲ್ಪಗಳು, ರಾಮಾಯಣದಲ್ಲಿ ಹನುಮಂತನು ಸಂಜೀವಿನಿ ಪರ್ವತ ಹಿಡಿದು ಹಾರಿ ಬರುತ್ತಿರುವುದು. ರಾಮನ ಪಾದ ಸೇವೆಯಲ್ಲಿ ಹನುಮ, ಹನುಮಂತನಿಗೆ ಮುದ್ರೆಯುಂಗುರ ನೀಡುತ್ತಿರುವ ರಾಮ, ರಾಮ ಲಕ್ಷ್ಮಣರು, ರಾಮ–ಹನುಮ ಇತ್ಯಾದಿಗಳು.

ನರಸಿಂಹಾವತಾರ ಶಿಲ್ಪದಲ್ಲಿ ಹಿರಣ್ಯ ಕಷ್ಯಪುವನ್ನು ಕೊಲ್ಲುತ್ತಿರುವ ನರಸಿಂಹ, ಯೋಗಾನರಸಿಂಹ, ಲಕ್ಷ್ಮೀ ನರಸಿಂಹ, ನರಸಿಂಹ ಚೆಂಚುಲಕ್ಷ್ಮಿ, ಪ್ರಹ್ಲಾದ, ಕಂಬದಲ್ಲಿರುವ ನರಸಿಂಹ, ಪಕ್ಕದಲ್ಲಿ ಹಿರಣ್ಯ ಕಷ್ಯಪು ನಿಂತಿರುವುದು. ನರಸಿಂಹನು ಕಂಬದಿಂದ ಹೊರ ಬರುತ್ತಿರುವುದು. ವಿಷ್ಣು ಶಿಲ್ಪಗಳಲ್ಲಿ ದಾಸ ವಿಷ್ಣು, ಚತುರ್ಭುಜ ವಿಷ್ಣು, ಗರುಡನ ಮೇಲೆ ಕುಳಿತಿರುವ ವಿಷ್ಣು, ತ್ರಿವಿಕ್ರಮ, ವಾಮನು ಬಲಿಚಕ್ರವರ್ತಿಯಿಂದ ದಾನ ಪಡೆಯುತ್ತಿರುವುದು ಮೊದಲಾದ ವೈಷ್ಣವ ಪಂಥಕ್ಕೆ ಸೇರಿದ ಶಿಲ್ಪಗಳು, ಸಾಮಾಜಿಕ ಶಿಲ್ಪಗಳಲ್ಲಿ ನರ್ತಕ, ನರ್ತಕಿಯರು, ಮೃದಂಗ ಬಾರಿಸುತ್ತಿರುವ ವಾದ್ಯಗಾರ, ಗುರುಶಿಷ್ಯರು, ಯತಿಗಳು, ಆಳ್ವಾರರು, ವೀಣೆ ಮೀಟುತ್ತಿರುವ ಪುರಂದರದಾಸರು, ಐರಾವತ, ಜೋಡಿ ಜಿಂಕೆಗಳು, ನಾನಾ ಭಂಗಿಯಲ್ಲಿ ಕುಳಿತ ಸಿಂಹ ಇನ್ನೂ ಮೊದಲಾದ ಮೂರು ದ್ವಾರಗಳಲ್ಲಿ ಪ್ರಧಾನವಾದ ಪೂರ್ವ ದ್ವಾರವನ್ನು ಬಿಟ್ಟು ಉಳಿದ ಉತ್ತರ, ದಕ್ಷಿಣ ದ್ವಾರಗಳಲ್ಲಿ ಕಿಟಕಿ ಇದೆ. ಪೂರ್ವ ದ್ವಾರದ ಪಟ್ಟಿಕೆಗಳಲ್ಲಿ ಪದ್ಮ, ಬಳ್ಳಿಗಳು, ಕೆಳಭಾಗದಲ್ಲಿ ತ್ರಿಭಂಗಿಯಲ್ಲಿರುವ ದ್ವಾರ ಪಾಲಕರು ಚತುರ್ಭುಜಗಳಲ್ಲಿ ಶಂಖ, ಚಕ್ರ, ಗದೆ, ಅಭಯ ಮುದ್ರೆಗಳನ್ನು ಹೊಂದಿದೆ. ಉದ್ದನೇಯ ಕಿರೀಟ, ಕಿವಿಯಲ್ಲಿ ದೊಡ್ಡದಾಗ ಓಲೆಗಳು, ಕೊರಳಲ್ಲಿ ಕಂಠೀಹಾರ, ಮೈಮೇಲೆ ಯಜ್ಞೋಪವೀತ, ಭುಜಬಂಧ, ಕೈಬಳೆ, ಉದರಬಂಧ, ಕಾಲ್ಗಡಗ ಇತ್ಯಾದಿ ಆಭರಣಾದಾರಿತ, ಪಾದದ ಬಳಿ ಮಕರ ಶಿಲ್ಪವನ್ನು, ಚಿಕ್ಕದಾಗಿ ಅವುಗಳ ಬಾಯಿಂದ ಬಳ್ಳಿಯಾಕಾರದ

ವಿನ್ಯಾಸ ಹೊರಬಂದು ಮೇಲಿನ ದ್ವಾರ ಶಾಖೆಯಲ್ಲಿ ಮಿಲನಗೊಂಡಿದೆ. ಉತ್ತರ ದ್ವಾರಪಾಲಕರ ಶಿಲ್ಪದ ಕೆಳಗೆ ಚಿಕ್ಕದಾಗಿ ಗಂಗಾ ಯಮುನೆಯರ ಶಿಲ್ಪವನ್ನು, ದ್ವಾರಪಾಲಕರ ಮೇಲೆ ಸಿಂಹದ, ನವರಂಗದ ಮುಚ್ಚಿಗೆಯ ಮಧ್ಯಭಾಗದಲ್ಲಿ ಮೂರು ಸುತ್ತಿನ ಪದ್ಮಾಲಂಕಾರವನ್ನು ತಾವರೆಯ ಸುತ್ತಲೂ ನಾಲ್ಕು ಮೂಲೆಗಳಲ್ಲಿ ತಲಾ ೨ ಗಿಳಿಯಂತೆ ೮ ಗಿಳಿಗಳಿದ್ದು, ಜೋಡಿ ಗಿಳಿಗಳು ವಿರುದ್ಧ ದಿಕ್ಕಿನತ್ತ ಮುಖ ಮಾಡಿದೆ. ಮಧ್ಯದಲ್ಲಿ ಅರಳಿದ ತಾವರೆಯ ಹೂವನ್ನು ಬಿಡಿಸಲಾಗಿದೆ.

ರಾಮಾಯಣ ಮತ್ತು ಗಿರಿಜಾ ಕಲ್ಯಾಣದ ಕಥಾನಕಗಳನ್ನು ಆವತಿ ದೊರೆಗಳು ಹೊರಭಿತ್ತಿಯಲ್ಲಿ ಬಳಸುತ್ತಿದ್ದರು. ಪ್ರದಕ್ಷಿಣ ಪಥವೆಲ್ಲಾ ನಾಶವಾಗಿದ್ದ ಕಾರಣ ನಿರೂಪಣಾ ಶಿಲ್ಪಗಳು ಕ್ರಮ ಬದ್ಧವಾಗಿರುವುದಿಲ್ಲ. ದೇವಾಲಯವನ್ನು ಮತ್ತೆ ಪುನರ್ ನಿರ್ಮಾಣ ಮಾಡುವಾಗ ಎಲ್ಲೆಂದರಲ್ಲಿ ಜೋಡಿಸಲಾಗಿದೆ. ವಿಶ್ವಾಮಿತ್ರನು ಯಾಗ ಮಾಡುವಾಗ ರಾಮ ಲಕ್ಷ್ಮಣರ ರಕ್ಷಣೆ, ಯಾಗದ ಸಮಯದಲ್ಲಿ ಉಪಟಳ ನೀಡುತ್ತಿದ್ದ ತಾಡಕಿಯ ವಧೆ, ಅಹಲ್ಯೆ ಶಾಪ ವಿಮೋಚನೆ, ಸೀತಾ ಸ್ವಯಂವರ, ರಾಮ ಸೀತೆಯರ ವಿವಾಹಕ್ಕೆ ಸಪ್ತ ಋಷಿಗಳು ಆಗಮನ, ವಾನರರು, ದೇವಾನು ದೇವತೆಗಳು, ರಾಮ-ಸುಗ್ರೀವರ ಭೇಟಿ, ವಿಶ್ವ-ಮಿತ್ರನೊಂದಿಗೆ ರಾಮ ಲಕ್ಷ್ಮಣ, ಸೀತೆಯ ಪಲ್ಲಕ್ಕಿ ಮೆರವಣಿಗೆ, ದಶರಥನ ಪತ್ನಿಯರು ಮಕ್ಕಳೊಂದಿಗೆ ಮುಂತಾದ ಶಿಲ್ಪಗಳು, ದೇವಸ್ಥಾನದ ಅಕ್ಕಪಕ್ಕದ ಮನೆಯ ಒಳಗೋಡೆಗಳಲ್ಲಿ, ದನದ ಕೊಟ್ಟಿಗೆಗಳಲ್ಲು ಶಿಲ್ಪಗಳನ್ನು ಕಾಣಬಹುದು. ಈ ರೀತಿಯ ರಾಮಾಯಣದ ಶಿಲ್ಪಗಳನ್ನು ಶಿವಗಂಗೆ, ಯಂಬ್ರಹಳ್ಳಿಯ ತಿಮ್ಮರಾಯಸ್ವಾಮಿ ದೇವಾಲಯದ ಭಿತ್ತಿಯಲ್ಲಿ ಕಾಣಬಹುದು. ಬಹುಶಃ ಇವೆಲ್ಲವೂ ಪಾಳೇಗಾರರ ರಚನೆಯಾಗಿರಬೇಕು.

ಎಡಗಡೆಯ ಪ್ರವೇಶ ದ್ವಾರ ಸಂಪೂರ್ಣ ಹಾಳಾಗಿದೆ. ಬಾಗಿಲುವಾಡ ಮಾತ್ರ ಇದ್ದು, ದ್ವಾರ ಪಾಲಕನು ದ್ವಿಭಂಗಿಯಲ್ಲಿ ನಿಂತಿದ್ದು, ಎಡಗೈಯಲ್ಲಿ ಉದ್ದನೇಯ ಭರ್ಜಿಯಂತಹ ಆಯುಧವನ್ನು ಹಿಡಿದಿರುವನು. ಬಲಗೈಯಲ್ಲಿ ಗದೆಯಂತಹ ಆಯುಧ, ಕುಂಡಲ, ತೋಳ್ಬಂದಿ, ಕಡಗ, ಕಾಲಿನ ಆಭರಣ ಬಲಗಡೆ ದ್ವಾರ ಪಾಲಕರಲ್ಲಿ ಇದೇ ತರಹ ಇದ್ದು, ಅಗಲವಾದ ಕಣ್ಣು, ಮೇಲೇರಿದ ಹುಬ್ಬು, ಅಗಲವಾದ ದಪ್ಪಮೂಗು, ಸ್ವಲ್ಪ ಉದ್ದನೇಯ ಕಿವಿಯಿದ್ದು ಇಬ್ಬರು ದ್ವಾರಪಾಲಕರಲ್ಲಿ ಕೆಲವೊಂದು ಭಾವ ಬದಲಾವಣೆಯಾಗಿದೆ. ಮಹಿಷಮರ್ದಿನಿ ಶಿಲ್ಪ

ದೇವಾಲಯದ ಮುಖ್ಯ ಪ್ರವೇಶದ್ವಾರದ ಗೋಡೆಯೊಂದರಲ್ಲಿ ಸೇರಿಸಲಾಗಿದೆ. ಉಳುಮೆ ಮಾಡುವಾಗ ಹೊಲದಲ್ಲಿ ಸಿಕ್ಕಿರುವುದನ್ನು ದೇವಾಲಯದ ಬಳಿ ತಂದು ಇಡಲಾಗಿದೆ. ಮಹಿಷಮರ್ಧಿನಿಯು ಉಗ್ರರೂಪವಾಗಿದ್ದು, ಮಹಿಷನ ಸಂಹಾರ ಕ್ರಿಯೆಯೇ ಮುಖ್ಯವಾಗಿ ಕಾಣುತ್ತೇವೆ.

ಆದರೆ ಅಷ್ಟ ಭುಜೆಯಾದ ದೇವಿಯು ತನ್ನ ಬಲ ಕಾಲನ್ನು ನೆಲದ ಮೇಲೆ ಊರಿ ನಿಂತು ಎಡಗಾಲನ್ನು ಕೋಣನ ಮೇಲಿಟ್ಟು, ಎಡಮುಂಗೈಯಲ್ಲಿ ಅದರ ಮೂತಿಯನ್ನು ಅದಮಿ ಹಿಡಿದಿದ್ದು, ಬಲಮುಂಗೈಯಲ್ಲಿನ ಶೂಲದಿಂದ ಕತ್ತನ್ನು ತಿವಿಯುತ್ತಿದ್ದಾಳೆ. ಎರಡು ಕೈಗಳು ಮಾತ್ರ ಕಾಣಿಸುತ್ತಿತ್ತು. ಉಳಿದೆರೆಡು ಕೈಗಳು ಕಾಣಿಸುತ್ತಿಲ್ಲ. ಇನ್ನೊಂದು ಕೈಯಲ್ಲಿ ಕೋಣದ ಬಾಲವನ್ನು ಹಿಡೆದೆತ್ತುತ್ತಿರುವಂತೆ ಕಾಣುತ್ತದೆ. ಕೋಣನ ರೂಪದ ಮಹಿಷನನ್ನು ದೇವಿ ಕೆಡವಿ ಕೊಂಡಿರುವಂತೆ ಎಡಕ್ಕೆ ಬಿಡಿಸಿದೆ. ಅನೇಕ ಕಡೆ ಯಜ್ಞೋಪವೀತ ಕಂಡು ಬರುವುದಿಲ್ಲ. ಆದರೆ ಇಲ್ಲಿನ ದೇವಿಯ ಮೈಮೇಲೆ ಯಜ್ಞೋಪವೀತ ಇದ್ದು, ಎಡಭುಜದ ಮೇಲಿಂದ ಎರಡೂ ಸ್ತನಗಳ ನಡುವೆ ಹಾಯ್ದು ಕಿಬ್ಬೊಟ್ಟೆಯ ಮುಖಾಂತರ ಬಲ ತೊಡಯ ಮೂಲಕ ಬೆನ್ನ ಹಿಂದೆ ಹೋಗಿದೆ. ಪತ್ರ ಕುಂಡಲ, ಕೇಯೂರ, ಕೊರಳಸರ, ತೋಳ್ಬಂದಿ, ಸ್ತನಬಂಧ, ಕೈಬಳೆ ಇತ್ಯಾದಿ ಆಭರಣಗಳಿವೆ. ಕಟಿಬಂಧ ನಡುವನ್ನು ಸುತ್ತುವರೆದಿದೆ. ದೇವಿಯ ದೃಷ್ಟಿಯು ಮಹಿಷನ ಮೇಲಿರದೆ ಎದುರುಗಡೆ ನೋಡುತ್ತಿರುವಂತಿದೆ. ಕರಿಯ ಕಲ್ಲಿನ ಮೇಲೆ ಕೆತ್ತಲಾಗಿದೆ.

## ಕಾಡನೂರು ಚನ್ನಕೇಶವ ದೇವಾಲಯ

ಮಧುರೆ ಹೋಬಳಿಯ ಕಾಡನೂರು ಗ್ರಾಮವು ದೊಡ್ಡಬಳ್ಳಾಪುರದಿಂದ ೨೨ ಕಿ.ಮೀ. ದೂರದಲ್ಲಿದೆ. ವಿಜಯನಗರ ಅರಸರ ಸಾಮಂತರಾದ ಹುಲುಕಡಿ ನಾಡಪ್ರಭುಗಳು ಚನ್ನಕೇಶವ ದೇವಾಲಯವನ್ನು **(ಚಿತ್ರ ಸಂಖ್ಯೆ-೭೯)** ನಿರ್ಮಾಣ ಮಾಡಿದರು. ಕ್ರಿ.ಶ.೧೫೩೧ ರ ಕಾಲದಲ್ಲಿ ವಿಜಯನಗರ ಅರಸರಾದ ಅಚ್ಯುತರಾಯನ ಅಧೀನದಲ್ಲಿ ಹುಲುಕಡಿ ನಾಡ ಪ್ರಭುವಾಗಿದ್ದ ಗಂಡರಗೋಳ್ಳಿ ದಳವಾಯಿ ನಾಗಪ್ಪ ನಾಯಕನು ದೇವಾಲಯವನ್ನು ನಿರ್ಮಾಣ ಮಾಡಿ, ಅಮೃತಪಡಿ, ನೈವೇದ್ಯ, ಅಂಗರಂಗ ವೈಭವ, ರಥೋತ್ಸವಕ್ಕಾಗಿ ಧಾರೆಯೆರೆದು ಕೊಟ್ಟ ಶಾಸನವಿದೆ.

ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪದಲ್ಲಿನ ಕೆಲವು ಕಂಬಗಳನ್ನು ಬಿಟ್ಟು ಉಳಿದೆಲ್ಲಾ ಭಾಗ ಜೀರ್ಣೋದ್ದಾರವಾಗಿದೆ. ಚೌಕಾಕಾರವಾಗಿರುವ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು, ಐದು ಅಡಿ ಎತ್ತರದ ಚನ್ನಕೇಶವ ದೇವರು ಚತುರ್ಭುಜ ಮೂರ್ತಿಯಾಗಿ ಮೇಲಿನ ಕೈಯಲ್ಲಿ ಶಂಖ, ಚಕ್ರವನ್ನು, ಕೆಳಗಿನ ಬಲಗೈ ಜ್ಞಾನ ಮುದ್ರೆಯನ್ನು, ಎಡಗೈ ಕಟ್ಟವಲಂಬಿತ ಹಸ್ತ. ಬಾಗಿಲುವಾಡದಲ್ಲಿ ಗಜಲಕ್ಷ್ಮಿಯಿದ್ದು, ದ್ವಾರಬಂಧದ ಇಕ್ಕೆಲಗಳಲ್ಲಿ ಚಿಕ್ಕದಾದ ದ್ವಾರಪಾಲಕರ ಇಬ್ಬರ ಕೈಗಳಲ್ಲಿ ತ್ರಿಶೂಲ, ಢಮರುಗ ಹಿಡಿದಿರುವುದನ್ನು ಗಮನಿಸಿದರೆ ಶೈವ ದ್ವಾರ ಪಾಲಕರಿರಬೇಕು. ಗಂಗರ ಕಾಲದ ಶಿವ, ಗಣಪತಿ, ಶಿಲ್ಪಗಳಿವೆ.

ನವರಂಗದ ನಾಲ್ಕು ಕಂಬಗಳ ಮೇಲೆ ವಿಷ್ಣುವಿನ ದಶಾವತಾರಗಳು, ಕೃಷ್ಣನ ಕಾಳಿಂಗ ಮರ್ಧನ, ಬಾಲಕೃಷ್ಣ, ಹನುಮಾನ್, ಗರುಡ, ರಾಮ-ಲಕ್ಷ್ಮಣ, ಆಳ್ವಾರರು, ಚತುರ್ಭುಜ ವಿಷ್ಣು, ಯೋಗಾ ನರಸಿಂಹ, ಬ್ರಹ್ಮನು ತ್ರಿವಿಕ್ರಮ ಕುಚೇಲ, ಹಿರಣ್ಯ ಕಷ್ಯಪನನ್ನು ಸಿಂಹರಿಸುತ್ತಿರುವ ನರಸಿಂಹ, ವಿವಿಧ ಯತಿಗಳು, ನರ್ತಕಿಯರು ಮತ್ತು ಚಕ್ರ, ಕಲಶ, ಕಾಮಧೇನು, ಕಲ್ಪವೃಕ್ಷ ಮೊದಲಾದ ಶಿಲ್ಪಗಳಿವೆ. ಹಿರಣ್ಯ ಕಷ್ಯಪನನ್ನು ತನ್ನ ತೊಡೆಯ ಮೇಲೆ ಕೆಡವಿಕೊಂಡು ಹೊಟ್ಟೆ ಬಗೆಯುವುದು.

ಕಂಬಗಳ ಮೇಲ್ಭಾಗದಲ್ಲಿ ನಾಲ್ಕು ಮುಖಗಳ ಪುಷ್ಪ ಬೋದಿಗೆಗಳು ಮೇಲ್ಚಾವಣಿಯ ಭಾರವನ್ನು ಹೊತ್ತಿದೆ. ನವರಂಗದಲ್ಲಿ ಬೆಳಕಿನ ಪ್ರವೇಶಕ್ಕೆ ಯಾವುದೇ ದಾರಿಗಳಿಲ್ಲದಿದ್ದರಿಂದ ಕತ್ತಲಿರುತ್ತದೆ. ಪ್ರವೇಶ ದ್ವಾರ ತೀರ ಸರಳವಾಗಿದ್ದು. ಇಕ್ಕೆಲಗಳಲ್ಲಿ ಶಂಖ, ಚಕ್ರ ಹಿಡಿದ ಚತುರ್ಭುಜ ವೈಷ್ಣವ ದ್ವಾರ ಪಾಲಕರಾದ ಜಯ, ವಿಜಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ.

ಮುಖ ಮಂಟಪಕ್ಕೆ ಪೂರ್ವದಲ್ಲಿ ಪ್ರವೇಶ ದ್ವಾರವಿದೆ. ಕಂಬಗಳ ಮೇಲೆ ರಾಮಾಯಣ, ಭಾಗವತ, ದಶಾವತಾರ ಘಟನೆಗಳ ಶಿಲ್ಪಗಳಿವೆ. ರಾಮಾಯಣ ಶಿಲ್ಪಕ್ಕೆ ಸಂಬಂಧಿಸಿದಂತೆ ಭುಜದ ಮೇಲೆ ಬಿಲ್ಲನ್ನು ಇರಿಸಿಕೊಂಡ ಶ್ರೀರಾಮ, ಬಿಲ್ಲು ಬಾಣ ಹಿಡಿದಿರುವ ಲಕ್ಷ್ಮಣ, ಲಂಕೆಯಲ್ಲಿ ಚಿಂತ್ರಾಕಿತಳಾಗಿ ಮರದ ಕೆಳಗೆ ಕುಳಿತಿರುವ ಸೀತೆ, ಸೀತೆ ಕೈಯಲ್ಲಿ ಉಂಗುರ, ಸಂಜೀವಿನಿ ಪರ್ವತ ಹಿಡಿದು ಹಾರುತ್ತಿರುವ ಆಂಜನೇಯ, ರಾಕ್ಷಸಿಯರ ಕಣ್ಗಾವಲಿನಲ್ಲಿ ಸೀತೆ,

ಭಾಗವತ ಶಿಲ್ಪದಲ್ಲಿ ನಗ್ನ ಬಾಲಕೃಷ್ಣ, ಕಾಳಿಂಗ ಮರ್ಧನ, ಬೆಣ್ಣೆ ಕಡೆಯುತ್ತಿರುವ ಯಶೋಧೆ, ಬೆಣ್ಣೆ ಕದಿಯುತ್ತಿರುವ ಕೃಷ್ಣ, ವೇಣುಗೋಪಾಲ, ಗೋಪಿಕಾ ಸ್ತ್ರೀಯರು ಮುಂತಾದ, ಮೀನಿನ ಮೇಲೆ ಕುಳಿತ ಮುನಿ, ಆಳ್ವಾರರು, ಗಣಪತಿ, ಗರುಡ, ವಿಷ್ಣು, ಶಿವಲಿಂಗ, ಮತ್ಯ್ಸಾವತಾರ, ಕುರ್ಮಾವತಾರ ಇತ್ಯಾದಿಯಾಗಿ ಚೆಂಚುಲಕ್ಷ್ಮಿಯ ಪಾದಕ್ಕೆ ನಾಟಿರುವ ಮುಳ್ಳನ್ನು ಮಾನವ ರೂಪದಾರಿ ನರಸಿಂಹ ಕೀಳುತ್ತಿರುವುದು. ಇದೇ ರೀತಿಯ ಶಿಲ್ಪಗಳನ್ನು ನಲ್ಲೂರಿನ ತೋಪಿನಲ್ಲಿ ಪಾಳು ಬಿದ್ದಿರುವ ದೇವಾಲಯದ ಭಿತ್ತಿಯಲ್ಲಿ ಕಾಣಬಹುದು.

ಸಂಗೀತಗಾರ್ತಿ, ನೃತ್ಯಗಾರ್ತಿ, ಲತಾಂಗಿಯರು, ಸ್ತ್ರೀಯರು, ಕೈಯಲ್ಲಿ ಗಿಳಿ ಹಿಡಿದ ನಾರಿಯರು, ಕೋಲಾಟವಾಡುತ್ತಿರುವ, ವೀಣೆ ಹಿಡಿದು ನರ್ತನ ಮಾಡುತ್ತಿರುವ ಸ್ತ್ರೀಯರು, ಡೋಲು ಬಡಿಯುತ್ತಿರುವ ವಾದ್ಯಗಾರ, ಪುಂಗಿ ಊದುತ್ತಿರುವ ಹಾವಾಡಿಗ, ಪಿಳ್ಳಂಗೋವಿ ಊದುತ್ತಿರುವ, ಕಂಬಳಿ ಹೊದ್ದು, ಕೈಯಲ್ಲಿ ಕೋಲು ಹಿಡಿದಿರುವ ಗೊರವರು, ತಮಟೆ ಬಾರಿಸುತ್ತಿರುವವರು, ವಿವಿಧ ಆಯುಧಗಳನ್ನು ಹಿಡಿದಿರುವ ಜಟ್ಟಿಗಳು, ನಾಗಿಣಿ, ಕರುವಿಗೆ ಹಾಲು ಕುಡಿಸುತ್ತಿರುವ ಆಕಳು, ಸಿಂಹದ ದಾಳಿಗೆ ಸಿಲುಕಿದ

ಜಿಂಕೆ, ಆನೆಯ ದಾಳಿಗೆ ಮಹಿಳೆ, ದೊಂಬರಾಟಗಳು ಹೀಗೆ ಹಲವಾರು ಶಿಲ್ಪಗಳು ಸಾಮಾಜಿಕ ವ್ಯವಸ್ಥೆಯನ್ನು ನಿರೂಪಿಸುತ್ತದೆ. ಸ್ತ್ರೀಯರು ಧರಿಸಿರುವ ಸೀರೆಯಲ್ಲಿನ ನೆರಿಗೆಗಳು, ಕಚ್ಚೆಸೀರೆಗಳು, ನೃತ್ಯಗಾರ್ತಿಯರು ಮೊಣಕಾಲುವರೆಗಿನ ಲಂಗ, ತೊಟ್ಟಿರುವ ಆಭರಣಗಳು, ಕೇಶ ವಿನ್ಯಾಸ, ಕುಳಿತ ವಿವಿಧ ಭಂಗಿಗಳು.

ವರಾಹ ಶಿಲ್ಪ (ವಿಜಯನಗರ ಲಾಂಛನ), ಕಂಬದ ಮೇಲೆ ನಮಸ್ಕಾರ ಮುದ್ರೆಯಲ್ಲಿ ಪಂಚೆಧೋತಿ, ಕಡಗ, ಕಿವಿಯೋಲೆ, ಉದ್ದನೇಯ ಕಿರೀಟ ಧರಿಸಿರುವ ಶಿಲ್ಪವನ್ನು ಕಂಡರೆ ಬಹುಶಃ ನಾಡಪ್ರಭು ನಾಗಪ್ಪನಾಯಕನ ಶಿಲ್ಪವಾಗಿರುವ ಅವಕಾಶ ಹೆಚ್ಚಿದೆ. ಕಂಬದ ತಳಭಾಗದಲ್ಲಿ ಸಿಂಹ, ಯಾಳಿಯ ಕೆತ್ತನೆಗಳಿವೆ. ಹೊರಭಾಗದಲ್ಲಿ ಅಧಿಷ್ಠಾನ, ಅದರ ಮೇಲೆ ಕೋಷ್ಟಕಂಬ, ಭಿತ್ತಿ, ಕಪೋತ, ವೇದಿ, ಕಲಶವನ್ನು ಕಾಣಬಹುದು. ಬಲಿಪೀಠ, ಧ್ವಜಸ್ತಂಭ, ದೀಪಸ್ತಂಭವಿದೆ. ಬಲಿಪೀಠದ ಮುಂದೆ ಶಿಲಾಶಾಸನವಿದೆ. ಗರ್ಭಗೃಹ ಶಿಖರ ಮತ್ತು ಪ್ರವೇಶದ್ವಾರದ ಮೇಲೆ ರಾಜಗೋಪುರವಿದೆ.

ಕಾಡನೂರು ಚನ್ನಕೇಶವ ದೇವಸ್ಥಾನಕ್ಕೆ ಕ್ರಿ.ಶ.೧೫೩೧ ರ ಮಾರ್ಗಶಿರ ಶು ೧೨ ಸೋಮವಾರದಂದು ಅಚ್ಯುತರಾಯ ಮಹಾರಾಯರ ದಳವಾಯಿ ಗಂಡ್ರಗೊಳ್ಳಿಪುರದ ನಾಗಪ್ಪ ನಾಯಕರು ಹುಲುಕಡಿನಾಡಿಗೆ ಸೇರಿದ ಹಣಬೆಯ ಸೀಮೆಯ ಕಾಡನೂರು ಚತುಸ್ಸೀಮೆಯೊಳಗಣ ಎಲ್ಲವನ್ನು ಮನೆದೆರಿಗೆ, ಮಗ್ಗದೆರಿಗೆ, ಪಟ್ಟಡಿ ಪಡರಾಯ, ಗ್ರಾಮದೆರಿಗೆ, ಸಕಲ ಸುವರ್ಣದಾಯ, ಸಕಲ ವಸ್ತುದಾಯವನ್ನು ಸರ್ವಮಾನ್ಯವಾಗಿ ದೇವರ ಅಮೃತಪಡಿ, ನೈವೇದ್ಯ, ಅಂಗರಂಗ ವೈಭವ, ರಥೋತ್ಸವವನ್ನು ನಡೆಸಿ ಎಂದು ತ್ರಿವಾಚವಾಗಿ ಧಾರೆಯೆನ್ನೆರೆದು ಕೊಟ್ಟರು[೧೭೪].

## ಯಂಬ್ರಹಳ್ಳಿಯ ತಿಮ್ಮರಾಯಸ್ವಾಮಿ

ದೇವನಹಳ್ಳಿಯಿಂದ ಚಿಕ್ಕಬಳ್ಳಾಪುರ, ಆನಂತಪುರ ರಾಷ್ಟ್ರೀಯ ಹೆದ್ದಾರಿಯಲ್ಲಿ ೬ ಕಿ.ಮಿ. ದೂರದಲ್ಲಿ ಎಡಭಾಗಕ್ಕೆ ಆವತಿ ಗ್ರಾಮದಿಂದ ಸುಮಾರು ೨ ಕಿ.ಮೀ. ದೂರದಲ್ಲಿನ ಯಂಬ್ರಹಳ್ಳಿ, ದಾಸರಹಳ್ಳಿ, ಕೋಡಗುರ್ಕಿ, ಆವತಿ ಈ ನಾಲ್ಕು ಗ್ರಾಮಗಳ ಮದ್ಯದಲ್ಲಿನ ಬೆಟ್ಟವೇ ಗೌತಮಗಿರಿ ಅಥವಾ ತಿಮ್ಮರಾಯಸ್ವಾಮಿ ಬೆಟ್ಟವನ್ನು ಪ್ರಸ್ತುತ ಈಗ ಯಂಬ್ರಹಳ್ಳಿ ಬೆಟ್ಟವೆಂದು ಕರೆಯಲಾಗುತ್ತದೆ. ಸಪ್ತಗಿರಿಗಳಾದ ಬ್ರಹ್ಮಗಿರಿ, ಚನ್ನಗಿರಿ, ನಂದಿಗಿರಿ, ದಿಬ್ಬಗಿರಿ, ಗೋವರ್ಧನಗಿರಿ, ಕುಕ್ಕಟಗಿರಿ ಶ್ರೇಣಿಯಲ್ಲಿನ ಗೌತಮಗಿರಿಯು ಒಂದಾಗಿದ್ದು, ಬೆಟ್ಟದ ಮೇಲಿನ ತಿಮ್ಮರಾಯಸ್ವಾಮಿ**(ಚಿತ್ರ ಸಂಖ್ಯೆ-೮೦)** ಅಥವಾ ಶ್ರೀ ಚನ್ನಕೇಶವಸ್ವಾಮಿಯನ್ನು ಗೌತಮ ಋಷಿಗಳು ಪ್ರತಿಷ್ಟಾಪಿಸಿದರೆಂದು ಪ್ರತೀತವಿದೆ. ದೇವಾಲಯಕ್ಕೆ ದಾನ

[೧೭೪] ಎ.ಕ-೯, ದೊ.ತಾ.೫೦, ಕ್ರಿ.ಶ.೧೫೩೧, ಕಾಡನೂರು.

ನೀಡಿರುವ ಹೊಲದ ಶಾಸನವನ್ನು ಯಂಬ್ರಹಳ್ಳಿಯಲ್ಲಿ ಕಾಣಬಹುದು. ತಿಮ್ಮರಾಯ ಸ್ವಾಮಿಯ ಹೊಲದಲ್ಲಿ ವೈಶಾಖ ಬ ೧೫ ಯಲು ಶ್ರೀ ಮಕರ ತಿಮ್ಮರಾಯನಿಗೆ ಕೊಟ್ಟ ಮಾನ್ಯ[೧೭೫]. ತಿಮ್ಮರಾಯ ದೇವಸ್ಥಾನಕ್ಕೆ ಒರಳ ಕಲ್ಲನು ಕಾವಚಿ ನಾಯಕನು ಮಾಡಿಸಿದನು[೧೭೬].

ಪ್ರಕೃತಿ ದತ್ತವಾದ ಏಕಶಿಲಾ ಹಾಸು ಬಂಡೆಯ ಮೇಲೆ ಪೂರ್ವಾಭಿಮುಖವಾಗಿ ಹಲವು ಹಂತಗಳಲ್ಲಿ ಜೀರ್ಣೋದ್ಧಾರವಾದ ದೇವಾಲಯದ ಒಳಾಂಗಣದಲ್ಲಿ ಮೂರ್ತಿಶಿಲ್ಪವು ಸುಮಾರು ೬ ಅಡಿ ಎತ್ತರವಿದ್ದು, ಶಂಖ, ಚಕ್ರ, ಗದಾದಾರಿಯಾಗಿ, ಅಭಯ ಹಸ್ತನಾಗಿ, ಗರುಡ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ದೇವನಹಳ್ಳಿ ಕೋಟೆಯಲ್ಲಿ ಶ್ರೀ ವೇಣುಗೋಪಾಲಯ ವಿಗ್ರಹಕ್ಕೆ ಸೌಮ್ಯತೆಯಿದೆ.

ಗರ್ಭಗುಡಿಯ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ವಿನ್ಯಾಸವನ್ನು ನಿರ್ಮಿಸಲಾಗಿದೆ. ಗರ್ಭಗುಡಿಯ ಮುಂಭಾಗ ಶಂಕನಾಡಿಯಲ್ಲಿ ನಾಲ್ಕು ಜನ ಆಳ್ವಾರರ ಪ್ರತಿಮೆಗಳಿವೆ. ಮುಖ ಮಂಟಪದ ದ್ವಾರದ ಎಡಬಲಗಳಲ್ಲಿ ಸಹಜವಾಗಿ ಜಯ ವಿಜಯರ ಸುಂದರವಾದ ದ್ವಾರಪಾಲಕರ ಮೂರ್ತಿಗಳಿವೆ. ದ್ವಾರದ ಮೇಲ್ಭಾಗದಲ್ಲಿ ಚತುರ್ಭಜ ಗಜಲಕ್ಷ್ಮಿಯ ಶಿಲ್ಪವಿದ್ದರೆ, ಮುಖ ಮಂಟಪದ ಮುಂಭಾಗದ ಆಲಯದಲ್ಲಿ ಸ್ವಾಮಿಯ ಬಲಭಾಗಕ್ಕೆ ಬರುವಂತೆ ಚರ್ತುಭುಜ ಗಜಲಕ್ಷ್ಮಿ ಸುಂದರ ಪುಟ್ಟ ಮೂರ್ತಿಯನ್ನು ಇತ್ತೀಚೆಗೆ ಪ್ರತಿಷ್ಠಾಪಿಸಿದ್ದಾರೆ. ನವರಂಗವು ವಿಸ್ತಾರವಾಗಿದ್ದು, ಸುಂದರವಾದ ನಾಲ್ಕು ಕಂಬಗಳ ಮೇಲೆ ಶ್ರೀ ಕೃಷ್ಣನ ಬಾಲಲೀಲೆ ಮತ್ತು ದಶಾವತಾರದ ಉಬ್ಬು ಶಿಲ್ಪವನ್ನು ಕಾಣ ಬಹುದು.

ದೊಡ್ಡ ದೊಡ್ಡ ಆಯಾತಾಕಾರದ ಕಲ್ಲುಗಳಿಂದ ನಿರ್ಮಿಸಲಾದ ದೇವಾಲಯದ ಸುತ್ತಲೂ ಗೋಡೆಯ ಮದ್ಯಭಾಗದಲ್ಲಿ ವಿಷ್ಣುವಿನ ಅವತಾರ, ರಾಮಾಯಣದ ದೃಶ್ಯವಳಿಗಳನ್ನು ಕಾಣಬಹುದು. ದೇವಾಲಯದ ಮುಖ್ಯದ್ವಾರದ ಬಲಭಾಗದ ಗೋಡೆಯಲ್ಲಿ (ದೇವಾಲಯದ ಪೂರ್ವ ದಿಕ್ಕಿನ ಬಲಭಾಗದ) ಅಂಜನಾದೇವಿ ಅಂಜನೇಯನಿಗೆ ರಾಮನ ದರ್ಶನ, ಶ್ರೀರಾಮನು ಅಂಜನೇಯನ ಯಾರಿಗೂ ಕಾಣದ ಕರ್ಣ ಕುಂಡಲಗಳನ್ನು ವೀಕ್ಷಿಸಿದಾಗ, ಅಂಜನಾದೇವಿ ಅವನೇ ಶ್ರೀರಾಮ ಎಂದು ರಾಮಭಕ್ತನಾಗಿ ಹನುಮನನ್ನು ರಾಮನಿಗೆ ಒಪ್ಪಿಸುವ ದೃಶ್ಯ, ದೇವಾಲಯದ ದಕ್ಷಿಣ ಭಿತ್ತಿಗಳಲ್ಲಿ (ನವರಂಗದ ದಕ್ಷಿಣ) ಸುಗ್ರೀವನಿಂದ ರಾಮನಿಗೆ ವಾಲಿಯ ಕಿರುಕುಳದ ಬಗ್ಗೆ ನಿವೇಧನೆ, ವಾಲಿಯನ್ನು ಸಂಹರಿಸಲು ಶ್ರೀರಾಮನು ಸುಗ್ರೀವನಿಗೆ ಅಭಯ ನೀಡುವ ದೃಶ್ಯ, ಶ್ರೀರಾಮನು ತನ್ನ ಬಲ ಪರೀಕ್ಷೆಗಾಗಿ ವಾಲಿಯ ಸಂಹಾರಕ್ಕೆ ಮುನ್ನ ಸಪ್ತ ತಾಳೆ ವೃಕ್ಷಗಳನ್ನು ಒಂದೇ ಬಾಣದಲ್ಲಿ ಭೇದಿಸಿರುವುದು, ನಂತರ ವಾಲಿ ಸಂಹಾರ ಶಿಲ್ಪ.

---

[೧೭೫] ಎ.ಕ-೯, ದೇ.ತಾ.೨೩, ಯಂಬ್ರಹಳ್ಳಿ.
[೧೭೬] ಎ.ಕ-೯, ದೇ.ತಾ.೮೬, ಅನುಬಂಧ, ಯಂಬ್ರಹಳ್ಳಿ

ಗರ್ಭಗುಡಿಯ ದಕ್ಷಿಣ ಪಾರ್ಶ್ವದಲ್ಲಿ ಶ್ರೀ ಕೃಷ್ಣನ ಬಾಲಲೀಲೆಯನ್ನು ತುಂಬಾ ಸುಂದರವಾಗಿ ಮನಮೋಹಕವಾಗಿ ಕೆತ್ತಲಾಗಿದೆ. ಗೋಪಿಕೆಯರ ಜಲ ಕ್ರೀಡೆಯ ಸಂದರ್ಭದಲ್ಲಿ ಕೃಷ್ಣನು ಅವರ ವಸ್ತ್ರಗಳನ್ನು ಅಪಹರಿಸಿ ಮರವೇರಿ ಕುಳಿತಿರುವುದು. ನಗ್ನರಾಗಿದ್ದ ಗೋಪಿಕೆಯರನ್ನು ಎದುರಿಗಿನ ಮರದ ಮೇಲೆ ಕುಳಿತಿರುವ ಕಪಿಯು ನೋಡಿ ಅಪಹಾಸ್ಯ ಮಾಡುತ್ತಿರುವುದು, ಗರ್ಭಗುಡಿಯ ಹಿಂಭಾಗದಲ್ಲಿ (ದೇವಾಲಯದ ಪಶ್ಚಿಮದ ಗೋಡೆಯ ಮೇಲೆ) ಶ್ರೀರಾಮ ಪಟ್ಟಾಭಿಷೇಕವನ್ನು ಯಥಾವತ್ತಾಗಿ ಬಿಡಿಸಲಾಗಿದೆ. ಗರ್ಭಗುಡಿಯು ಉತ್ತರ ಭಾಗ (ದೇವಾಲಯ ಉತ್ತರ ಪಾರ್ಶ್ವನ ಗೋಡೆ) ದಶಾವತಾರಗಳನ್ನು ಬಿಡಿಸಲಾಗಿದೆ. ಪ್ರಹ್ಲಾದನನ್ನು ಹುಟ್ಟಿದ ತಕ್ಷಣ ಮೇಲಕ್ಕೆ ಎಸೆದು ಖಡ್ಗಗಳನ್ನು ಇಟ್ಟಿರುವುದು, ಕಂಬದಲ್ಲಿ ನರಸಿಂಹನು ಪ್ರತ್ಯಕ್ಷನಾಗಿ ಹಿರಣ್ಯ ಕಶ್ಯಪುನನ್ನು ಸೀಳುತ್ತಿರುವುದು. ದೇವಾಲಯದ ಮುಂಭಾಗ (ಬಾಗಿಲ ಎಡಭಾಗಕ್ಕೆ) ಸ್ವಾಮಿಯವರಿಗೆ ಸಂಗೀತ ಮತ್ತು ನರ್ತನ ಸೇವೆಯ ಕೆತ್ತನೆಗಳನ್ನು ಮೋಹಕವಾಗಿ ಕೆತ್ತಿರುವುದನ್ನು ಕಾಣಬಹುದು.

ದೇವಾಲಯಯದ ಮಹಾದ್ವಾರದ ಮೇಲಾಗಲಿ, ಗರ್ಭಗುಡಿ ಮೇಲಾಗಲಿ ಎಲ್ಲಿಯೂ ಗೋಪುರಗಳಿಲ್ಲ. ದೇವಾಲಯ ಮುಂಭಾಗದಲ್ಲಿ ೧೫ ಅಡಿ ಎತ್ತರದ ಧ್ವಜಸ್ತಂಭ, ಬಲಿಪೀಠ ಹೊಸ ರೂಪದಲ್ಲಿದೆ. ಬಲಿಪೀಠದ ಮುಂದೆ ಪೂರ್ವಕ್ಕೆ ಒಂದು ಪ್ರಾಚೀನ ಬೃಂದಾವನ ಮಂಟಪವಿದ್ದು, ಅದರ ಮೇಲೆ ಐದು ಸಣ್ಣ ಸಣ್ಣ ಬೃಂದಾವನವನ್ನು ಇಟ್ಟಿಗೆ, ಗಾರೆಗಳಿಂದ ಕಟ್ಟಿದ್ದು ಈಗ ತೀರಾ ಶಿಥಿಲ ವ್ಯವಸ್ಥೆಯಲ್ಲಿದೆ.

ಶಂಕುತೀರ್ಥ :- ಶ್ರೀ ತಿಮ್ಮರಾಯಸ್ವಾಮಿ ಬೆಟ್ಟದ ಮೇಲಿನ ೩ ಪವಿತ್ರ ಪುಷ್ಕರಿಣಿ ತೀರ್ಥಗಳಲ್ಲಿ ಶಂಕುತೀರ್ಥವು ತುಂಬಾ ಪವಿತ್ರವಾದದು. ದೇವಾಲಯದ ಪಶ್ಚಿಮ ಭಾಗಕ್ಕೆ ಬೆಟ್ಟದ ಇಳಿಜಾರಿನಲ್ಲಿ ೧೫ ಮೀಟರ್ ಇಳಿದರೆ ಪ್ರಕೃತ್ತಿ ದತ್ತವಾಗಿ ನಿರ್ಮಿತಿವಾಗಿರುವ ೧೦ ಅಡಿ ವ್ಯಾಸ ಹೊಂದಿರುವ ಶಂಕುವಿನಂತೆ ಸುರುಳಿ ಸುತ್ತಿರುವಂತಹ ಶಂಕುದೋಣಿ ಸಿಗುತ್ತದೆ. ನೊಡಲು ಬಾವಿ, ಗುಹೆಯಂತೆ ಕಾಣಿಸುತ್ತಿದ್ದು, ಇದರ ತಳವು ದೇವಾಲಯದ ಕಡೆ ಇದ್ದು, ಇದರ ಆಳವನ್ನು ಕಂಡವರಿಲ್ಲ, ಸದಾ ಕಾಲ ನೀರಿದ್ದು, ಮಳೆಗಾಲದಲ್ಲಿ ತುಂಬಿ ಹೊರ ಹರಿಯುತ್ತದೆ. ಬತ್ತಿರುವುದನ್ನು ಸಹ ಯಾರು ಕಂಡಿಲ್ಲವಂತೆ, ಈ ದೋಣಿಯಲ್ಲಿ ಮುಳುಗಿದ್ದರೆ ಸರ್ವಪಾಪಗಳು ಪರಿಹಾರವಾಗುತ್ತದೆ ಎಂಬುದು ಭಕ್ತಾದಿಗಳ ನಂಬಿಕೆ. ಇದರ ಒಳಗೆ ಸಣ್ಣ ಸಣ್ಣ ಮೆಟ್ಟಿಲುಗಳಲ್ಲಿ ಎಚ್ಚರಿಕೆಯಿಂದ ಇಳಿದು ಸ್ನಾನ ಮಾಡಲು ಅನೂಕೂಲವಿದೆ.

ನೀರು ತುಂಬಾ ತಿಳಿಯಾಗಿದೆ. ಶಂಖುತೀರ್ಥದ ಪಕ್ಕದಲ್ಲಿ ಶ್ರೀ ತಿರುಮಲ ದೇವರ ತೀರ್ಥ ಎಂದು[೧೭೭] ಬರೆದ ಶಾಸನವಿದೆ.

ಲಕ್ಷ್ಮೀತೀರ್ಥ :– ಶಂಕುತೀರ್ಥದ ಪಕ್ಕದಲ್ಲಿಯೇ ದಕ್ಷಿಣ ದಿಕ್ಕಿನ ಮೀ. ದೂರದಲ್ಲಿ ಪಶ್ಚಿಮಾಭಿಮುಖವಾಗಿರುವ, ಸುಮಾರು ಎರಡು ಅಡಿ ವ್ಯಾಸದ ಲಕ್ಷ್ಮೀದೋಣೆಯಿದ್ದು, ನೀರು ಕೈಗೆಟುಕುವಂತಿದೆ, ಆಗಾಗ ನೀರು ಹೋರ ಹೊಗುತ್ತದೆ. ಇದರ ತೀರ್ಥವನ್ನು ಸೇವಿಸಿದರೆ ಒಳ್ಳೆಯದಾಗುತ್ತದೆ ಎಂಬುವುದು ನಂಬಿಕೆ.

ಚಕ್ರತೀರ್ಥ :– ಶಂಕತೀರ್ಥ ಮತ್ತು ಲಕ್ಷ್ಮೀತೀರ್ಥದಿಂದ ದಕ್ಷಿಣ ದಿಕ್ಕಿಗೆ ೨೫೦–೨೮೦ ಅಡಿ ದೂರದಲ್ಲಿ ಚಕ್ರದೋಣೆ ಸಿಗುತ್ತದೆ. ಬೆಟ್ಟದ ಮೇಲಿನಿಂದ ನೋಡಿದ್ದರೆ ಚಕ್ರದಂತೆ ಕಾಣಿಸುವ ದೋಣೆಯು ಸಾಕಷ್ಟು ವಿಸ್ತಾರವಾಗಿದ್ದು ಕಲ್ಯಾಣಿ ಎನ್ನಬಹುದು. ಎರಡು ಬಂಡೆಗಳ ಮದ್ಯಯಿದ್ದು, ಇತ್ತಿಚೆಗೆ ಜೀರ್ಣೋದ್ಧಾರವಾಗಿದೆ. ಇದರಲ್ಲಿ ಸ್ನಾನ ಮಾಡಿದ್ದರೆ ಒಳ್ಳೆದಾಗುತ್ತದೆ. ಇದರ ಪಕ್ಕದಲ್ಲೆ ಅಂದರೆ ಕಲ್ಯಾಣಿಯ ಉತ್ತರ ದಿಕ್ಕಿಗೆ ದಂಡೆ ಮೇಲೆ ಶ್ರೀ ಯಾಜ್ಞವಲ್ಯ ಮಂದಿರವಿದೆ (ಈಗ ಅಡುಗೆ ಮಾಡಲು ಬಳಸುತ್ತಾರೆ).

ಈ ೩ ತೀರ್ಥಗಳು ಮತ್ತು ದೇವಾಲಯಕ್ಕೆ ನೇರ ಸಂಪರ್ಕ ಕಲ್ಪಿಸುವಂತೆ ಭಕ್ತರೊಬ್ಬರು ಬೆಟ್ಟದ ಪಶ್ಚಿಮ ಕಡೆಯಿಂದ ದೇವಾಲಯಕ್ಕೆ ಮೆಟ್ಟಿಲುಗಳನ್ನು ನಿರ್ಮಿಸಿದ್ದಾರೆ. ಈ ಮೆಟ್ಟಿಲುಗಳ ಪ್ರಾರಂಭದ ರಸ್ತೆಯ ಬಲಬದಿಯಲ್ಲಿ ೧೦ ಮಿ. ದೂರದಲ್ಲಿ ಊರ ಬಾಗಿಲ ಕಮಾನು ಇದೆ. .

ಬೆಟ್ಟದ ಪಶ್ಚಿಮದಲ್ಲಿರುವ ೩ ತೀರ್ಥಗಳು, ಊರಬಾಗಿಲು ಕಮಾನು, ಬೆಟ್ಟಕ್ಕೆ ಇರುವ ಪರ್ಯಾಯ ಹೆಸರಾದ ಯಂಬ್ರಹಳ್ಳಿಬೆಟ್ಟ, ಯಂಬ್ರಹಳ್ಳಿಯು ಪ್ರಮುಖ ಗ್ರಾಮವಾಗಿದ್ದು, ಈ ಅಂಶಗಳಾಧರ ಮೇಲೆ ಬೆಟ್ಟಕ್ಕೆ ಪಶ್ಚಿಮ ದ್ವಾರವೇ ಪ್ರಮುಖ ದ್ವಾರವಾಗಿತ್ತೆಂದೆನಿಸುತ್ತದೆ.

ದೇವಾಲಯ ಹಿಂಭಾಗದಲ್ಲಿ ಶಂಕತೀರ್ಥಕ್ಕೆ ಇಳಿಯುವ ಇಳಿಜಾರಿನ ಎಡಕ್ಕೆ ಗೌತಮಾಶ್ರಮದ ಮೇಲಕ್ಕೆ ಮರ–ಪೊದರೆಗಳ ಮದ್ಯದಲ್ಲಿರುವ ಯಾವುದೇ ಕೆತ್ತನೆಗಳಿಲ್ಲದ, ದೇವಾಲಯದ ಮುಂದಿನ ಗರುಡ ಕಂಬವನ್ನು ಹೋಲುವ ರೀತಿಯಲ್ಲಿನ ಒಂದು ಪುರಾತನ ಶಿಲಾಸ್ತಂಭವಿದೆ. ಬಹುಶಃ ದೇವಾಲಯ ಸುತ್ತ ದುರ್ಗಮವಾದ ಕಾಡು ಇರುವುದರಿಂದ ರಾತ್ರಿ ಕತ್ತಲಿನಲ್ಲಿ ಬೆಳಕಿಗಾಗಿ ಕಂಬದ ಮೇಲೆ ಎಣ್ಣೆ ದೀವಿಗೆಗಳನ್ನು ಇಡುತ್ತಿದ್ದರೆನಿಸುತ್ತದೆ.

[೧೭೭] ಎ.ಕ-೯, ದೇ.ತಾ.೮೭, ಅನುಬಂಧ, ಯಂಬ್ರಹಳ್ಳಿ.

ಶಂಕುತೀರ್ಥ ಮತ್ತು ಚಕ್ರತೀರ್ಥಗಳ ಮದ್ಯ ಭಾಗದಲ್ಲಿ ಶಂಕುತೀರ್ಥದ ದಕ್ಷಿಣಕ್ಕೆ ಇಳಿಜಾರಿನಲ್ಲಿ ಗೌತಮಾಶ್ರಯ ದ್ವಾರವು ಪಶ್ಚಿಮಾಭಿಮುಖವಾಗಿದ್ದು, ಪೂರ್ವಕ್ಕೆ ಚಾಚಿ ಕೊಂಡಿದೆ. ಈ ಗುಹೆಯಲ್ಲಿ ಗೌತಮ ಮಹರ್ಷಿಗಳು ವಾಸಿಸುತ್ತ, ತಪಸ್ಸು ಮಾಡುತ್ತಾ ಪ್ರತಿನಿತ್ಯ ತಿಮ್ಮರಾಯ ಸ್ವಾಮಿಗೆ ನಿತ್ಯ ಪೂಜೆ ಸಲ್ಲಿಸುತ್ತಿದ್ದರೆಂದು, ಈ ಆಶ್ರಮವು ದೊಡ್ಡ ಬಂಡೆಯ ತಳದಲ್ಲಿದ್ದು ಅಂತ್ಯವಿಲ್ಲದ ಗುಹೆಯು, ಗೌತಮರು ಯಜ್ಞ, ಯಾಗ, ಹೋಮಗಳನ್ನು ಮಾಡುತ್ತಿದ್ದರಿಂದ ಬೆಟ್ಟಕ್ಕೆ ಗೌತಮಗಿರಿ ಎಂದು ಹೆಸರು ಬರಲು ಕಾರಣ ಎಂದು ಸ್ಥಳೀಯರು ಹೇಳುತ್ತಿದ್ದಾರೆ. ಈ ಗುಹೆಯ ಪಕ್ಕದಲ್ಲೇ ಎಡಕ್ಕೆ ಉತ್ತರಕ್ಕೆ ೧೫ ಅಡಿ ಅಂತರದಲ್ಲಿ ೧ ೧/೨ ಅಡಿ ಎತ್ತರ ೧ ಅಡಿ ಅಗಲದ ಶಿಲ್ಪಕ್ಕೆ ಬಣ್ಣಗಳನ್ನು ಬಳೆದು ಮನುಷ್ಯಾಕೃತಿ ಮಾಡಿ, ಅಹಲ್ಯೆ ಶಾಪ ವಿಮೋಚನ ಶಿಲೆ ಎಂದು ಹೇಳುತ್ತಾರೆ. ಚಕ್ರತೀರ್ಥದಿಂದ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಮೆಟ್ಟಿಲುಗಳನ್ನು ದಾಟಿದರೆ ಮರದ ಪೊಟರೆಯಲ್ಲಿ ಗ್ರಾನೈಟ್ ಕಲ್ಲಿನಿಂದ ಗೌತಮನ ಶಿಲ್ಪವನ್ನು ಇತ್ತಿಚೆಗೆ ಕೆತ್ತಲಾಗಿ ಈ ಸ್ಥಳಪುರಾಣ ಕತೆಗೆ ಬೆರೆಸಿದ್ದಾರೆ.

ಈ ಗುಹೆಯು ತಿಮ್ಮರಾಯ ಸ್ವಾಮಿ ದೇವಾಲಯ ಕಡೆ ಹೊರಟಿದ್ದು ದಾರಿಯಲ್ಲಿ ತುಳಸಿ, ಬಿಲ್ವ, ಸಂಪಿಗೆ, ಕೇದಿಗೆಮಲ್ಲಿಗೆ ಮುಂತಾದ ಪುಷ್ಪೋದ್ಯಾನ ಮಾತ್ರವಲ್ಲದೆ ಪವಿತ್ರವಾದ ಪುಷ್ಕರಿಣಿಯು ಇದ್ದು, ಈ ಗುಹೆಯ ಸತ್ಯ ಸಂಗತಿಗಳನ್ನು ಕಂಡವರು ಆವತಿ, ಕೋಡಗುರ್ಕಿ, ಯಂಬ್ರಹಳ್ಳಿ, ದಾಸರಹಳ್ಳಿ ಮುಂತಾದ ಗ್ರಾಮಗಳದ್ದಾರಂತೆ. ಆವತಿಗ್ರಾಮದಲ್ಲಿರುವ ಶ್ರೀ ಜೀಯಪ್ಪನವರ, ಬಚ್ಚಪ್ಪನವರ ತಾತರಾಗಿದ್ದ ದಿವಂಗತ ದ್ಯಾವರ ಬಚ್ಚಪ್ಪನವರು ತಿಮ್ಮರಾಯ ಸ್ವಾಮಿಯ ಅನನ್ಯ ಭಕ್ತರಾಗಿದ್ದು, ಸ್ವಾಮಿಯ ಅನುಗ್ರಹದಿಂದ ಭಕ್ತಾದಿಗಳಿಗೆ ಅನೇಕ ಪವಾಡಗಳನ್ನು ಮಾಡುತ್ತಿದ್ದರು. ಅವರು ಈ ಗುಹೆಯ ಮುಖಾಂತರ ಹೋಗಿ ಭಕ್ತಾದಿಗಳಿಗೆ ವಿಶಿಷ್ಟವಾದ ಪುಷ್ಪಗಳನ್ನು ತಂದು ಕೊಡುತ್ತಿದ್ದರಂತೆ ಹಾಗೂ ಅದೇ ಹೂಗಳಿಂದ ಪೂಜೆ ಸಲ್ಲಿಸುತ್ತಿದ್ದರಂತೆ, ತಿಮ್ಮರಾಯ ಸ್ವಾಮಿ ಬೆಟ್ಟದಿಂದ ಆವತಿಗೆ ಹೋಗುವ ಮಾರ್ಗದಲ್ಲಿ ಕೆರೆಯಂಚಿನಲ್ಲಿ ಆಶ್ರಮ ಮತ್ತು ಅವರ ಸಮಾಧಿ ಇದೆಯಂತೆ, ಆದರೆ ದಿವಗಂತ ದ್ಯಾವರ ಬಚ್ಚಪ್ಪ ತಾತನವರ ಪವಾಡ ಮತ್ತು ಗುಹೆಯಲ್ಲಿ ಹೂ ಬೆಳೆಯುವುದು ಇವೆಲ್ಲವು ವೈಜ್ಞಾನಿಕವಾಗಿ ಇರಲು ಸಾಧ್ಯವಿಲ್ಲ.

ಆದರೆ ನೈಸರ್ಗಿಕವಾದ ಗುಹೆಯನ್ನು ಗೌತಮಾಶ್ರಮ ಎಂದು ಈಗ ಕರೆಯುತ್ತಿರುವ ಅದರ ಗೋಡೆಗಳನ್ನು ಯಾವುದೋ ದೇವಸ್ಥಾನ ಅವಶೇಷಗಳಿಂದ ನಿರ್ಮಿಸಿರುವುದನ್ನು ಕಾಣ ಬಹುದು, ಆಶ್ರಮ ಮುಂದೆ ಗೌತಮ ಋಷಿಯು ಯಜ್ಞ ಮಾಡುತ್ತಿದ್ದ ಹೋಮ ಕುಂಡವನ್ನು ಗಮನಿಸಿದರೆ ಅದು ಪಾಣಿಪೀಠ, ಪಾಣಿಪೀಠಕ್ಕೆ ಬಣ್ಣ ಬಳೆದು ಯಜ್ಞ ಕುಂಡವಾಗಿ ಮತ್ತು ಅಹಲ್ಯೆ ಅನ್ನೋ ಶಿಲ್ಪವು ಸಹ ಅದು

ಯಾವುದೋ ಮಾಸ್ತಿಕಲ್ಲಿನ ರೂಪದಲ್ಲಿನ ಹಾಗೇ ಕಾಣಿಸುತ್ತಿದ್ದು ಅದಕ್ಕೆ ಆಧುನಿಕ ಬಣ್ಣದಿಂದ ಅಹಲ್ಯೆ ಶಾಪ ವಿಮೋಚನ ಶಿಲೆಯಾಗಿ ಮಾಡಿ, ಅದಕ್ಕೆ ಕತೆ ಕಟ್ಟಿ ಸ್ಥಳ ಪುರಾಣವಾಗಿಸಿದ್ದಾರೆ.

ಗೌತಮ ಆಶ್ರಮದ ಗೋಡೆಯಲ್ಲಿನ ಅವಶೇಷಗಳನ್ನು, ಪಾಣಿಪೀಠವನ್ನು, ಆಶ್ರಮ ಮೇಲಿನ ಶಿಲಾಸ್ತಂಭವನ್ನು ಗಮನಿಸಿದರೆ ಈ ಪರಿಸರದಲ್ಲಿ ೧೦೦ ರಿಂದ ೨೦೦ ಅಡಿ ಅಂತರದಲ್ಲಿ ಪುರಾತನವಾದ ಶಿವನ ದೇವಾಲಯವಿದ್ದು, ಕಾಲಾಂತರದಲ್ಲಿ ಬಿದ್ದೋಗಿರಬೇಕು. ಶಂಕುದೋಣಿಯ ಮೇಲ್ಭಾಗದಲ್ಲಿ ದೇವಾಲಯದ ಪಶ್ಚಿಮಕ್ಕೆ ದಕ್ಷಿಣಾಭಿಮುಖವಾಗಿ ಸುಮಾರು ಒಂದೂವರೆ ಅಡಿ ಉದ್ದದ ಸ್ವಾಮಿಯ "ಒಂದು ಪಾದ" ಎಂದು ಪ್ರಸಿದ್ಧಿ ಪಡೆದಿರುವ ಪಾದವು ತಿರುಪತಿ ವೆಂಕಟೇಶ್ವರನಾದ ತಿಮ್ಮಪ್ಪನ ಪಾದವೆಂದು, ಇಲ್ಲಿ ಒಂದು ಪಾದ, ನಂದಗಿರಿಯ ಮೇಲೊಂದು ಪಾದವೆಂದು. ಕೆಲವರು ಒಂದು ಪಾದ ಇಲ್ಲಿ, ಮತ್ತೊಂದು ಪಾದ ತಿರುಪತಿ ಬೆಟ್ಟದ ಮೇಲಿದೆ ಎಂದು ಹೇಳುತ್ತಾರೆ.

ಗೌತಮಾಶ್ರಮನ ಪಶ್ಚಿಮಕ್ಕೆ ಬೆಟ್ಟದ ಬುಡದಲ್ಲಿ ಸುಮಾರು ೭ ಅಡಿ ಎತ್ತರದ ಶಿಲೆಯ ಅಂಜನೇಯ ಮೂರ್ತಿಯನ್ನು ಕೆತ್ತಲಾಗಿದ್ದು ಇಂದು ಪಾಳು ಬಿದಿದ್ದು, ಪೂಜಾಕಾರ್ಯಗಳಿರುವುದಿಲ್ಲ. ಹಾಗೇಯೇ ದೇವಾಲಯ ಪಶ್ಚಿಮ ಶಂಕುತೀರ್ಥದ ಮೇಲೆ ಇರುವ ಒಂದು ಕಲ್ಲಿನ ಗುಳಿಗೆ ಕುದುರೆ ಹೆಜ್ಜೆ ಎನ್ನುತ್ತಾರೆ. ಹಲವಾರು ಕತೆಗಳನ್ನು ಹೇಳುತ್ತಾರೆ. ಅವು ಕಲ್ಪನೆಯಿಂದ ಕೂಡಿರುತ್ತದೆ.

## ದೇವನಹಳ್ಳಿಯ ವೇಣುಗೋಪಾಲ ದೇವಸ್ಥಾನ

ನಾಡಪ್ರಭುಗಳ ಕಾಲದ ಅವಶೇಷವೆಂದು ಗುರುತಿಸಬಹುದಾದ ಸುಂದರವಾದ ವಾಸ್ತುಶಿಲ್ಪ ಕಲೆಯಲ್ಲಿರುವ ಪೂರ್ವ ದಿಕ್ಕಿಗೆ ಮುಖ ಮಾಡಿ ನಿರ್ಮಿಸಿಲಾಗಿರುವ, ವಿಶಾಲವಾದ ಪ್ರಕಾರದಿಂದ ಕೂಡಿರುವ ಗರ್ಭಗುಡಿ, ಅಂತರಾಳ, ಅರ್ಧಮಂಟಪ, ನವರಂಗ, ಚಿಕ್ಕ ಮುಖ ಮಂಟಪಗಳಿಂದ ಕೂಡಿದ ವೇಣುಗೋಪಾಲ **(ಚಿತ್ರ ಸಂಖ್ಯೆ-೮೧)** ದೇವಸ್ಥಾನವಿದೆ.

ಗರ್ಭಗುಡಿಯು ಚೌಕಾಕಾರವಾಗಿದ್ದು, ಒಳಗಡೆ ಚಿಕ್ಕ ವೇದಿಕೆ ಮೇಲೆ ವೇಣುಗೋಪಾಲನ ವಿಗ್ರಹವಿದೆ. ಗರ್ಭಗುಡಿಗಳ ದ್ವಾರದಲ್ಲಿ ೩ ಪಟ್ಟಿಗಳ ಅಲಂಕೃತ ಬಾಗಿಲವಾಡವಿದೆ. ಇದರ ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬು ಶಿಲ್ಪವಿದ್ದರೇ ಬಾಗಿಲವಾದ ದ್ವಾರ ಪಾಲಕರ ಶಿಲ್ಪಗಳು ಚಿಕ್ಕದಾಗಿದ್ದು, ಇವು ವೃಷ್ಣವ ಸಂಕೇತಗಳಾದ ಶಂಕ, ಚಕ್ರ, ಗದೆಗಳನ್ನು ಹಿಡಿದು ಅಭಯ ಮುದ್ರೆಯಲ್ಲಿ ನಿಂತಿರುವಂತಿದೆ. ಅಂತರಾಳದಲ್ಲಿಯೂ ೩ ಪಟ್ಟಿಗಳ ಬಾಗಿಲವಾಡದಲ್ಲಿ ದ್ವಾರ ಪಾಲಕರ ಶಿಲ್ಪಗಳಿವೆ.

ನವರಂಗದಲ್ಲಿನ ೪ ಮುಖ್ಯ ಕಂಬಗಳು ಚೌಕ-ಅಷ್ಟ-ಚೌಕ ಶೈಲಿಯಲ್ಲಿದೆ. ಈ ಕಂಬಗಳನ್ನು ಚೌಕಾಕಾರವಾದ ಚಿಕ್ಕ ಪೀಠಗಳ ಮೇಲೆ ಜೋಡಿಸಲಾಗಿದೆ. ಚೌಕ ಭಾಗಗಳಲ್ಲಿ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಕಾಳಿಂಗ ಮರ್ದನ, ಲಕ್ಷ್ಮಿ ನರಸಿಂಹ, ನಾರಾಯಣ, ಹಯಗ್ರೀವ, ಗಣೇಶ, ಬೆಂಚುಲಕ್ಷ್ಮಿ, ಯೋಗಾನರಸಿಂಹ, ಬಾಲಕೃಷ್ಣ, ಖಡ್ಗ ಇಡಿದು ನಿಂತಿರುವ ವೀರ ಬೃಂದಾವನದ ಪೂಜೆ ಗೈಯ್ಯುತ್ತಿರುವ ಶಿಲ್ಪಗಳು. ಈ ಕಂಬಗಳ ಮೇಲೆ ಬಾಗಿದ ಪುಷ್ಪ ಬೋಧಿಗಳವೆ.

ನವರಂಗ, ಪೂರ್ವದ ದ್ವಾರವು ಸೂಕ್ಷ್ಮ ಕೆತ್ತನೆಗಳ ಐದು ಪಟ್ಟಿಕೆಗಳು ಬಾಗಿಲವಾಡದಿಂದ ಕೂಡಿದೆ. ಬಾಗಿಲವಾಡದ ಮೇಲಿನ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಇಲ್ಲಿನ ದ್ವಾರ ಪಾಲಕರ ಉಬ್ಬು ಶಿಲ್ಪಗಳು ನೀಳವಾಗಿದ್ದು ಇವರು ಉದ್ದನೆಯ ಕಿರೀಟ, ದೊಡ್ಡ ಕಿವಿಯೋಲೆ, ಯಜ್ಞೋಪವೀತ, ವಿವಿಧ ಆಯುಧಗಳನ್ನು ಧರಿಸಿದ ಚತುರ್ಭುಜ ಕೈಗಳಲ್ಲಿ ಶಂಕ, ಚಕ್ರ, ಗದೆಗಳನ್ನು ಹಿಡಿದು ಅಭಯ ಮುದ್ರೆಯಲ್ಲಿ, ತ್ರಿಭಂಗಿಯಲ್ಲಿ ನಿಂತಿರುವರು. ದ್ವಾರದ ಹೊಸ್ತಿಲು ಕೂಡ ಅಲಂಕಾರಿಕವಾಗಿದೆ.

ನವರಂಗಕ್ಕೆ ಹೊಂದಿಕೊಂಡು ನಿರ್ಮಿಸಿಲಾದ ಆಯತಾಕಾರವಾದ ಮುಖ ಮಂಟಪವನ್ನು ವೇದಿಕೆಯಂತೆ ಎತ್ತರವಾಗಿ ನಿರ್ಮಿಸಲಾಗಿದೆ. ಈ ಮಂಟಪದ ಮುಂಭಾಗದ ಅಂಚಿನಲ್ಲಿ ಸಾಲಾಗಿ ೪ ಕಂಬಗಳನ್ನು ಜೋಡಿಸಲಾಗಿದೆ. ಈ ಕಂಬಗಳು ೨ ಮೀ. ಎತ್ತರ ಮತ್ತು ಒಂದು ಮೀ. ದಪ್ಪವಾಗಿ, ಏಕ ಶಿಲೆಯಲ್ಲಿ ರಚಿತವಾಗಿದೆ. ೪ ಕಂಬಗಳಲ್ಲಿ ಎರಡು ಕಂಬಗಳಲ್ಲಿ ಎತ್ತರವಾದ ಸಿಂಹದ ಶಿಲ್ಪಗಳವೆ. ಇನ್ನೆರಡು ಕಂಬಗಳನ್ನು ಉಪ-ಕಂಬಗಳಿಂದ ರಚಿಸಲಾಗಿದೆ. ಈ ೪ ಕಂಬಗಳು ಹೆಚ್ಚು ಆಕರ್ಷಣೀಯವಾಗಿದೆ. ಮಂಟಪಕ್ಕೆ ಪ್ರವೇಶಿಸುವ ಸೋಪಾನಗಳ ಇಕ್ಕೆಲಗಳಲ್ಲಿ ಜೋಡಿಸಲಾದ ಕಂಬಗಳ ಮುಂಭಾಗದಲ್ಲಿ ಸಿಂಹ ತನ್ನ ಹಿಂಬದಿಯ ಕಾಲುಗಳ ಮೇಲೆ ನಿಂತಿರುವಂತೆ ಎತ್ತರವಾಗಿ ರಚಿಸಲಾಗಿದೆ. ಈ ಸಿಂಹದ ಶಿಲ್ಪಗಳು ಆಕರ್ಷಣಿಯವಾಗಿದ್ದು, ಉದ್ದನೇಯ ಕೇಶ, ದೊಡ್ಡಗಾತ್ರದ ಕಣ್ಣು, ನೀಳದೇಹ ರಚನೆಯನ್ನು ಕಾಣುತ್ತೇವೆ. ಈ ಸಿಂಹಗಳ ಮೇಲೆ ಕಿರೀಟ, ವಿವಿಧ ಆಭರಣ ಧರಿಸಿಕೊಂಡು ಕೈಯಲ್ಲಿ ಖಡ್ಗವಿಡಿದು ಕುಳಿತಿರುವ ಸವಾರರ ಶಿಲ್ಪಗಳವೆ. ಇನ್ನುಳಿದ ೨ ಕಂಬಗಳಲ್ಲಿ ಸಿಂಹದ ಶಿಲ್ಪಗಳ ಬದಲಾಗಿ ಉದ್ದನೇಯ ಉಪ-ಕಂಬಗಳನ್ನು ರಚಿಸಲಾಗಿದೆ.

ವೈಷ್ಣವ ಮತದ ದೇವ-ದೇವತೆಯರ ಹಾಗೂ ಮತ್ತಿತರ ಶಿಲ್ಪಗಳಾದ ಕುರ್ಮಾವತಾರ, ಮತ್ಸಾವತಾರ, ಲಕ್ಷ್ಮಿ ನರಸಿಂಹ, ಗಣೇಶ, ಯೋಗಾನರಸಿಂಹ, ಹಯಗ್ರೀವ, ಸೀತೆ ದೂರದ ಜಿಂಕೆಯನ್ನು ರಾಮನಿಗೆ ತೋರಿಸುತ್ತಿರುವ ಶಿಲ್ಪ, ಬಾಲಕೃಷ್ಣ, ರಾಮ, ಹನುಮಾನ ಶಿಲ್ಪಗಳು. ಇಲ್ಲಿಯ

ಹನುಮಾನನ ಕೈಯಲ್ಲಿ ಉಂಗುರವಿದೆ. ಸೀತೆಯ ಅಪರಹರಣದ ನಂತರ ದೊರೆತ ಉಂಗುರವನ್ನು ರಾಮನಿಗೆ ತೋರಿಸುತ್ತಿರುವ ಆಂಜನೇಯನ ದೃಷ್ಯವಿದೆ.

ಚೆಂಚುಲಕ್ಷ್ಮಿ ಪಾದಕ್ಕೆ ನಾಟಿದ ಮುಳ್ಳನ್ನು ಮಾನವ ರೂಪದಲ್ಲಿ ಬಂದ ನರಸಿಂಹನು ತೆಗೆಯುತ್ತಿರುವ ಶಿಲ್ಪವಿದೆ. ಚೆಂಚು ಸಮುದಾಯದಲ್ಲಿ ಹುಟ್ಟಿದ ಲಕ್ಷ್ಮಿಯನ್ನು ವರಿಸುವುದಕ್ಕಾಗಿ ಮಾನವ ರೂಪದಲ್ಲಿ ನರಸಿಂಹ ಬಂದು ಚೆಂಚುಲಕ್ಷ್ಮಿಯನ್ನು ಮೋಹಿಸಿ ಮದುವೆಯಾಗುತ್ತಾನೆ ಎಂದು ಸ್ಥಳೀಯರು ಕಥೆಯನ್ನು ಹೇಳುತ್ತಾರೆ. ಹಂಸ, ಶಾಲಭಂಜಿಕಾ, ಮಿಥುನ ಶಿಲ್ಪಗಳು ಈ ಕಂಬಗಳಲ್ಲಿವೆ.

ಮುಖ ಮಂಟಪದ ಸಜ್ಜೆಯು ಸರಳವಾಗಿದ್ದು, ಬಾಗಿದಾಕಾರದಲ್ಲಿದೆ. ಮಂಟಪಕ್ಕೆ ಪ್ರವೇಶಿಸಲು ಸೋಪಾನಗಳ ವ್ಯವಸ್ಥೆ ಮಾಡಲಾಗಿದೆ. ಮಂಟಪ ಕಂಬ ಗೋಡೆಯಲ್ಲಿ ಗಾರೆಯಲ್ಲಿ ರಚಿಸಿದ ವೇಣು ಗೋಪಾಲ, ವಿಷ್ಣು, ರಾಮಪಟ್ಟಾಭೀಷೆಕ ಇತ್ಯಾದಿ ಶಿಲ್ಪಗಳವೆ.

ದೇವಸ್ಥಾನದ ಹೊರ ಭಿತ್ತಿಯಲ್ಲಿ ಸುತ್ತಲೂ ರಾಮಾಯಣದ ಶಿಲ್ಪಗಳನ್ನು ರಚಿಸಲಾಗಿದೆ. ನವರಂಗ, ಅರ್ಧಮಂಟಪ, ಅಂತರಾಳ, ಗರ್ಭಗೃಹ, ಹೊರಭಿತ್ತಿಯಲ್ಲಿ ಸಾಲಾಗಿ ೪೦ ಸೆ.ಮೀ ಎತ್ತರದ ಸ್ಪಷ್ಟವಾದ ಉಬ್ಬು ಶಿಲ್ಪಗಳಲ್ಲಿ ವಿಜಯನಗರ ಕಾಲದ ಉದ್ದನೇಯ ಕಿರೀಟಗಳು, ಓಲೆ, ಆಭರಣಗಳನ್ನು, ಧೋತಿ, ಅಂಗವಸ್ತ್ರಗಳನ್ನು ಕಾಣಬಹುದು. ನೀಳದೇಹ, ದುಂಡನೆಯ ಮುಖ, ಉದ್ದನೇಯ ಕೇಶಾಲಂಕಾರ, ಸ್ತ್ರೀಯರ ಶಿಲ್ಪಗಳು ಅತಿ ಸುಂದರವಾಗಿದೆ. ದಶರಥ ಮಹಾರಾಜನ ಪುತ್ರಕಾಮೇಷ್ಟಿ, ಬಾಲಕಾಂಡದ ವಿಶ್ವಾಮಿತ್ರ ನಡೆಸುವ ಯಾಗಕ್ಕೆ ತೊಂದರೆ ನೀಡುತ್ತಿದ್ದ ರಾಕ್ಷಸರ ಸಂಹಾರ, ಅಹಲ್ಯೆಯ ಶಾಪ ವಿಮೋಚನೆ, ಸೀತಾ ಸ್ವಯಂವರ, ರಾಮ (ಋಷ್ಯಶೃಂಗನನ್ನು) ಅಯೋಧ್ಯ ಕರೆದೊಯ್ಯುತ್ತಿರುವ, ವಿಶ್ವಾಮಿತ್ರರೊಂದಿಗೆ ರಾಮ–ಲಕ್ಷ್ಮಣ, ವಿಶ್ವಮಿತ್ರರ ಯಾಗಕ್ಕೆ ರಾಮ–ಲಕ್ಷ್ಮಣರಿಂದ ರಕ್ಷಣೆ, ತಾಟಕಿಯ ವಧೆ, ಸೀತಾ ಸ್ವಯಂವರ, ಅಹಲ್ಯ ಶಾಪ ವಿಮೋಚನೆ, ರಾಮ ಪಟ್ಟಾಭಿಷೇಕ ಇತ್ಯಾದಿ ರಾಮಾಯಣ ಕತೆಯ ಶಿಲ್ಪಗಳ ಸಾಲು, ರಾಮಾಯಣದ ಶಿಲ್ಪಗಳು ನವರಂಗದ ಎಡಗೋಡೆಯ ಪೂರ್ವದ ಅಂಚಿನಿಂದ ಪ್ರಾರಂಭವಾಗುತ್ತದೆ.

ಋಷ್ಯಶೃಂಗ ಮುನಿ ಅರಣ್ಯದಲ್ಲಿ ನಿಂತು ಕೊಂಡಿರುವುದು, ದೂತರು ಅರಸರ ಆಜ್ಞೆಯಂತೆ ಋಷ್ಯಶೃಂಗನನ್ನು ಯಾಗ ನೆರವೇರಿಸಲು ಆಹ್ವಾನಿಸಿರುತ್ತಾರೆ. ಋಷ್ಯಶೃಂಗ ಋಷಿ ಯಾಗ ಕೈಗೊಳ್ಳಲು ಆಯೋಧ್ಯ ಪಟ್ಟಣಕ್ಕೆ ಸ್ತ್ರೀ ದೇಹದಿಂದ ನಿರ್ಮಿಸಿದ ಪಲ್ಲಕ್ಕಿಯಲ್ಲಿ ಕರೆಯುತ್ತಿರುವರು. ಒಡ್ಡೋಲಗದಲ್ಲಿ ದಶರಥ ಮತ್ತು ಋಷ್ಯಶೃಂಗರು ಕುಳಿತಿರುವರು ಪುತ್ರಕಾಮೇಷ್ಟಿಯಾಗ ನೆರವೇರಿಸಲು ದಶರಥ ಕೇಳಿಕೊಳ್ಳೂತ್ತರುವಂತೆ. ಯಾಗದ ಸನ್ನಿವೇಶದಲ್ಲಿ ಯಜ್ಞ ಕುಂಡದ ಬಳಿ ಋಷ್ಯಶೃಂಗ ಮತ್ತಿಬ್ಬರು

ಋಷಿಗಳು ಕುಳಿತಿರುವುದು. ಋಷ್ಯಶೃಂಗ ದಶರಥನಿಗೆ ಯಾಗದಿಂದ ದೊರೆತ ಪಾಯಸ ಪಾತ್ರೆಯನ್ನು ನೀಡುತ್ತಿರುವುದು. ಪಾಯಸವನ್ನು ದಶರಥನು ತನ್ನ ಪತ್ನಿಗೆ ಹಂಚುತ್ತಿರುವುದು. ವಿಶ್ವಾಮಿತ್ರ ದಶರಥನ ಆಸ್ಥಾನಕ್ಕೆ ಭೇಟಿ ನೀಡುತ್ತಿರುವುದು ದಶರಥ ಸ್ವಾಗತಿಸಿರುವುದು. ದಶರಥ ಮತ್ತು ವಿಶ್ವಾಮಿತ್ರ ಒಡ್ಡೋಲಗದಲ್ಲಿ ಕುಳಿತು ಸಂವಾದಲ್ಲಿ ತೊಡಗಿರುವವರು. ನವರಂಗದ ಗೋಡೆಯಲ್ಲಿ ಶಿಲ್ಪಗಳನು ಇಲ್ಲಿಗೆ ಕೊನೆಗೊಳಿಸಲಾಗಿದೆ. ರಾಮಯಣದ ಮುಂದಿನ ಶಿಲ್ಪಗಳು ನವರಂಗದ ಬಲಬದಿಯ ಗೋಡೆಯಲ್ಲಿ ರಚಿಸಲಾಗಿದೆ. ಅರಣ್ಯದಲ್ಲಿ ವಿಶ್ವಮಿತ್ರ ಋಷಿಯೊಡನೆ ರಾಮ–ಲಕ್ಷ್ಮಣರು ತೆರಳುತ್ತಿರುವವರು. ವಿಶ್ವಾಮಿತ್ರ ಋಷಿಯು ಯಾಗ ಕೈಗೊಳ್ಳುತ್ತಿದ್ದು, ವಿಘ್ನಗೊಳಿಸುತ್ತಿರುವ ರಾಕ್ಷಸರನ್ನು ರಾಮ–ಲಕ್ಷ್ಮಣರು ಸಂಹರಿಸುತ್ತಿರುವರು. ರಾಕ್ಷಸರನ್ನು ಬಾಣದಿಂದ ರಾಮನು ಸಂಹಾರಿಸುತ್ತಿರುವನು. ಅಹಲ್ಯೆಯ ಶಾಪ ವಿಮೋಚನೆ ಸನ್ನಿವೇಶ, ಶಾಪ ಗ್ರಸ್ತಾಳಾದ ಅಹಲ್ಯೆ ರಾಮನ ಪಾದ ಸ್ಪರ್ಶದಿಂದ ಬಂಡೆಯಿಂದ ಮಾನವ ರೂಪ ತಾಳಿ ರಾಮನಿಗೆ ನಮಸ್ಕರಿಸುತ್ತಾ ಅಹಲ್ಯೆ ಹೊರಬರುತ್ತಿರುವುದು. ರಾಮನ ಪಟ್ಟಾಭಿಷೇಕ ದೃಶ್ಯದ ಶಿಲ್ಪಗಳನ್ನು ಈ ಗರ್ಭಗುಡಿಯ ಹಿಂಬದಿಯ ಹೊರಭಿತ್ತಿಯಲ್ಲಿ ರಚಿಸಲಾಗಿದೆ. ಸೀತೆಯ ಸ್ವಯಂವರ ಸನ್ನಿವೇಶದ ಶಿಲ್ಪಗಳನ್ನು ನವರಂಗದ ಪೂರ್ವ ಹೊರಭಿತ್ತಿಯಲ್ಲಿ ರಚಿಸಲಾಗಿದೆ.

ಗರ್ಭಗುಡಿ, ಅಂತರಾಳ, ಅರ್ಧಮಂಟಪಗಳ ಹೊರಭಿತ್ತಿಯಲ್ಲಿ ರಾಮಯಣದ ಶಿಲ್ಪಗಳಾಲ್ಲದೆ ಭಾಗವತ ಪುರಾಣದ ಅಯ್ದ ಶಿಲ್ಪಗಳನ್ನು ಕಾಣಬಹುದು. ವಾಮನ ಬಲಿಚಕ್ರವರ್ತಿಯಿಂದ ದಾನ ಪಡೆಯುತ್ತಿರುವುದು, ಶ್ರೀ ವಿಷ್ಣು ತ್ರಿವಿಕ್ರಮನಾಗಿ, ಕಾಳಿಂಗ ಮರ್ದನ, ಗರುಡ ವಾಹನ ವಿಷ್ಣು, ಯೋಗ ನರಸಿಂಹ, ಗೋಪಿಕಾ ವಸ್ತ್ರಾಪಹರನ ದೃಶ್ಯ, ಬೆಣ್ಣೆ ಕೃಷ್ಣ ಇತ್ಯಾದಿ ಶಿಲ್ಪಗಳು.

ದೇವಾಲಯದ ಪ್ರಕಾರವು ಆಯತಾಕಾರದಲ್ಲಿದ್ದು, ಮುಖಮಂಟಪದ ಮುಂಭಾಗದಲ್ಲಿ) ಧ್ವಜಸ್ತಂಭ, ಬಲಿಪೀಠ, ವಾಹನ ಮಂಟಪದಲ್ಲಿ ಗರುಡ ವಿಗ್ರಹವಿದೆ. ಪ್ರಕಾರದ ಎಡಬದಿಯಲ್ಲಿ ಒಂದು ಚಿಕ್ಕ ತೆರೆದ ಕೈಸಾಲೆಯ ಗೋಡೆಯಲ್ಲಿ ಕ್ರಿ.ಶ.೧೯೬೮ ರ ಶಿಲಾಶಾಸನದಲ್ಲಿ ದೇವಾಲಯಕ್ಕೆ ನೀಡಿರುವ ದಾನ ದತ್ತಿಯ ವಿವರವಿದೆ. (ಇದೇ ಶಾಸನದ ತಾಮ್ರ ಪ್ರತಿ ಅರ್ಚಕರ ಬಳಿ ಇದೆ.) ಹಿಂಬದಿಯ ಕೈಸಾಲೆಯನ್ನು ಇತ್ತೀಚೆಗೆ ವಾಸದ ಮನೆಗಳನ್ನಾಗಿ ಮಾಡಿ ಕೊಳ್ಳಲಾಗಿದೆ.

ದೇವಾಲಯದ ಪ್ರವೇಶದಲ್ಲಿ ೩ ಅಂತಸ್ತಿನ ಗೋಪುರವಿದೆ, ಬಾಗಿಲವಾಡ ಎತ್ತರವಾಗಿದೆ. ಬಾಗಿಲವಾಡ ಬಳಿ ಲತಾಸ್ತ್ರೀ ಶಿಲ್ಪ (ಇಕ್ಕೆಲಗಳಲ್ಲಿ) ಒಂದು ಲತಾಸ್ತ್ರೀ ಮೇಲೆ ಶುಭ ಸೂಚಕ ಕೂಡ ಇದೆ. ದ್ವಾರದ ಹೊರಬದಿಗಳಲ್ಲಿ ಒಂದುವರೆ ಮೀಟರ್ ಎತ್ತರದ ವಿಷ್ಣುವಿನ ೨ ಶಿಲ್ಪಗಳು ಗಂಗರ ಕಾಲದ ಶಿಲ್ಪ ಶೈಲಿಯಲ್ಲಿದ್ದು, ಗಂಗಾವರ ಗ್ರಾಮದ ಸೋಮೇಶ್ವರ ದೇವಾಲಯದಿಂದ ತಂದು ಇಡಲಾಗಿದೆ.

ದ್ವಾರದ ಮುಂಭಾಗದಲ್ಲಿ ೬ ಮೀ ಎತ್ತರದ ೨ ಕಂಬಗಳಿಂದ ಉಯ್ಯಾಲೆ ಮಂಟಪವನ್ನು ರಚಿಸಿದ್ದು, ದ್ರಾವಿಡ ಶೈಲಿಯ ಶಿಖರವಿದೆ. ಹೆಚ್ಚಿನ ಅಲಂಕಾರವಿಲ್ಲದಿದ್ದರೂ, ಇದೇ ಶೈಲಿಯ ಒಂದು ಮಂಟಪವು ಆವತಿಯ ಚನ್ನಕೇಶವ ದೇವಸ್ಥಾನದ ಆವರಣದಲ್ಲಿಯೂ ಇದೆ.

ಕೋಟೆಯ ಹೊರಗೆ ಪಶ್ಚಿಮ ದಿಕ್ಕಿನಲ್ಲಿ ದೊಡ್ಡ ಕಲ್ಯಾಣಿ ಇದೆ. ೩೦ ಮೀ ಚೌಕಾಕಾರದ ವಿಸ್ತೀರ್ಣದಿಂದ ಕೂಡಿದ ಕಲ್ಯಾಣಿಯನ್ನು ಅನೇಕ ಮೆಟ್ಟಿಲುಗಳಿಂದ ನಿರ್ಮಿಸಲಾಗಿದೆ. ಕಲ್ಯಾಣಿಯ ಪಶ್ಚಿಮ ದಕ್ಷಿಣದಲ್ಲಿ ಕಿರು ಗಾತ್ರದ ಗುಡಿಯಿದ್ದು, ಚಿಕ್ಕ ಗರ್ಭಗುಡಿ, ಶಿವಲಿಂಗ, ತೆರೆದ ಮುಖ ಮಂಟಪಗಳಿಂದ ಕೂಡಿದೆ. ಗರ್ಭಗುಡಿಯ ದ್ವಾರಬಂದಗಳು ಸರಳವಾಗಿದ್ದು, ಗಜಲಕ್ಷ್ಮಿಯ ಶಿಲ್ಪಗಳಿವೆ. ಗುಡಿಗಳ ಶಿಖರಗಳು ಸರಳವಾಗಿದ್ದು ಶಿಥಿಲಾವಸ್ಥೆಯಲ್ಲಿದೆ.

ಕಲ್ಯಾಣಿಯ ಹಾಗೂ ಗುಡಿಗಳ ನಿರ್ಮಾಣ ರಚನಾಶೈಲಿ ನಾಡಪ್ರಭುಗಳ ವಾಸ್ತು ಶೈಲಿಯಲ್ಲಿ ನಿರ್ಮಿತವಾಗಿರುವುದು. ಕೋಟೆಯ ಹೊರಗಡೆ ಪಶ್ಚಿಮ ದಿಕ್ಕಿನಲ್ಲಿ ನೆಲೆಸಿರುವ ಅನೂಕೂಲಕ್ಕಾಗಿ ಕಲ್ಯಾಣಿಯನ್ನು ನಿರ್ಮಿಸಿರಬೇಕು. ಈ ಪ್ರದೇಶದಲ್ಲಿ ಗಣ್ಯರು ಅಥವಾ ದಂಡನಾಯಕರು ನೆಲೆಸಿದ್ದರೆಂದು ವಾಸಸ್ಥಳವನ್ನು ನಿರ್ಮಿಸಿರಬೇಕು.

ಸಿದ್ದಲಿಂಗೇಶ್ವರ :- ಹದಿನೈದನೇಯ ಶತಮಾನದಲ್ಲಿ ಶ್ರೀ ಎಡೆಯೂರ ಸಿದ್ದಲಿಂಗೇಶ್ವರರು ದೇಶ ಸಂಚಾರಮಾಡುತ್ತಾ ಇಲ್ಲಿ ಕೆಲಕಾಲ ಇದ್ದುದರ ನೆನಪಿಗಾಗಿ ಒಂದು ಸುಂದರವಾದ ಶ್ರೀ ಸಿದ್ದೇಶ್ವರ ಸ್ವಾಮಿ ದೇವಾಲಯವನ್ನು ನಿರ್ಮಿಸಿದರು. ತಮ್ಮ ಸಂಪ್ರದಾಯದ ದೇವತಾ ಕಾರ್ಯಗಳನ್ನು ನಡೆಸಲು ಒಂದು ಸಂಘ ಸಂಸ್ಥೆಯಿದೆ.

ಶ್ರೀ ನಂಜುಂಡೇಶ್ವರ ದೇವಸ್ಥಾನದ ಗರುಡ ಕಂಬದ ಬುಡದಲ್ಲಿ ಶ್ರೀ ಹೇವಿಳಂಬ ಸಂವತ್ಸರದ ಶ್ರಾವಣ ಸುಧ್ಧತ್ರಯೇ ದೆಸೆಯಲು ನಲುರ ನಾರಾಣಪ್ಪ, ಕಂಬನು ನಿಲ್ಲಿಸಿದನು[೧೭೮]. ಗೋಪಾಲಸ್ವಾಮಿಯ ದೇವಸ್ಥಾನದ ರಥದ ಮಂಟಪದಲ್ಲಿ ಶ್ರೀ ಗೋಪಾಲಸ್ವಾಮಿಗೆ ಸೇವೆಯಾಗಿ ರಥವನ್ನು ಸೀಮೆ ಮೂಲದವರು ಮಾಡಿಸಿದರು[೧೭೯]. ಗೋಪಾಲಸ್ವಾಮಿ ಅರ್ಚಕ ರಂಗಾಚಾರ್ಯ, ನಾಗಾಕ್ಷರದ ತಾಮ್ರಶಾಸನದಲ್ಲಿ ವಿಜಯನಗರ ೧ನೇ ರಂಗರಾಯನ ಅಧಿಕಾರಾವಧಿಯಾದ ಕ್ರಿ.ಶ.೧೫೮೪ರಲ್ಲಿ ಭೈರವ ಅಗ್ರಹಾರವನ್ನು ದಾನ ನೀಡಿದನು[೧೮೦].

[೧೭೮] ಎ.ಕ-೯, ದೇ.ತಾ,೧೭, ದೇವನಹಳ್ಳಿ.
[೧೭೯] ಎ.ಕ-೯, ದೇ.ತಾ,೧೮, ದೇವನಹಳ್ಳಿ.
[೧೮೦] ಎ.ಕ-೯, ದೇ.ತಾ,೧೬, ಕ್ರಿ.ಶ.೧೫೮೪, ದೇವನಹಳ್ಳಿ.

ಮುದ್ದುಬಯಿರೆಗೌಡನ ಪೌತ್ರ, ಸೊಣ್ಣಭೈರೇಗೌಡನ ಪುತ್ರನಾದ ಗೋಪಾಲಗೌಡನು ಕ್ರಿ.ಶ.೧೬೯೭ ರಲ್ಲಿ ದೇವಣಾಪುರ ರಾಜ್ಯದ ನಲ್ಲೂರು ಹೋಬಳಿಯ ಬೇಗೂರಿಗೆ ಪ್ರತಿನಾಮ ಗೋಪಾಲ ಸಾಗರವೆಂಬ ಸರ್ವಮಾನ್ಯದ ಅಗ್ರಹಾರದಲ್ಲಿನ ೨೫ ವೃತ್ತಿಯನ್ನು ಶ್ರೀಮದನ ಗೋಪಾಲಸ್ವಾಮಿಗೆ ಬಿಟ್ಟು ಕೊಟ್ಟರು[೧೮೧]. ವೇಣುಗೋಪಾಲ ಸ್ವಾಮಿಯ ದೇವಸ್ಥಾನದ ಕೈಸಾಲೆಯಲ್ಲಿನ ಶಾಸನದಲ್ಲಿ ಕ್ರಿ.ಶ.೧೬೯೮ರಲ್ಲಿ ಶ್ರೀ ಮದಲ್ಮೇಲು ಮಂಗಾ ಸಮೇತಾ ಶ್ರೀ ವೆಂಕಟೇಶ್ವರ ಪಾದಾರವಿಂದ ಪರಿ ಪಾಲಿತ ದೇವಣಪುರದಲು ಶ್ರೀ ರುಕ್ಮಿಣಿ ಸತ್ಯಭಾಮ ಸಮೇತ ಶ್ರೀಮದನಗೋಪಾಲ ಸ್ವಾಮಿ ಸೇವಾರ್ಥವಾಗಿ ಶ್ರೀ ಆವತಿ ನಾಡಪ್ರಭು ಮುದ್ದುಭೈರೇಗೌಡರ ಪೌತ್ರರಾದ ಇಮ್ಮಡಿಸೋಂಣಭೈರೇಗೌಡರ ಧರ್ಮಪತ್ನಿ ಕೆಂಪಮ್ಮನವರ ಪುತ್ರರಾದ ಗೋಪಾಲಗೌಡರು ಸ್ವಾಮಿಗೆ ದಾನ ನೀಡಿದರು[೧೮೨].

ಕ್ರಿ.ಶ.೧೬೯೮ರಲ್ಲಿ ಶ್ರೀ ರುಕ್ಮಿಣಿ, ಸತ್ಯಭಾಮ ಸಮೇತ ಶ್ರೀ ಮದನಗೋಪಾಲ ಸ್ವಾಮಿಯ ಪಡಿತರ ದೀಪಾರಾಧನೆ, ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ರಥೋತ್ಸವ, ವಿನಿಯೋಗ ಪಯಿಕ ಸಹಿತವಾದ ಸೇವಾರ್ಥಕ್ಕೆ ನಲ್ಲೂರು ಹೋಬಳಿಯ ಚಿಕ್ಕೋಹಳ್ಳಿಗ್ರಾಮ, ಸಾವಕನಹಳ್ಳಿ, ಸೋಮತಹಳ್ಳಿ, ಸಿಂಗೋಹಳ್ಳಿ ಗ್ರಾಮಗಳು, ವಡಿಗೇನಹಳ್ಳಿ (ವಿಜಯಪುರ) ಹೋಬಳಿಯ ಮಡ್ಲೂರ ಗ್ರಾಮ, ಮೆಲೂರ ಗ್ರಾಮ ಹಾಗೂ ಹೊಸಕೆರೆ, ಹೊಸತೋಟ, ಹರಾಬಿ ಬಳಿಯ ತೋಟ, ಪಲ್ಲಕ್ಕಿ, ಬೀಸಣಿಯರಿಗೆ ಪಾದಸೇವೆಗಾಗಿ ಬಯಿಚಾಪುರ ಗ್ರಾಮ, ಬಯಿರಾಪುರಗಳನ್ನು, ಅರ್ಚಕರಿಗೆ ಉಪರಹಳ್ಳಿ ಗ್ರಾಮಗಳನ್ನು ದಾನ ನೀಡಿದ್ದನು[೧೮೩]. ಇದೇ ವಿಷಯವನ್ನು ತಿಳಿಸುವ ಶಾಸನಗಳು (ಬಹುಶಃ ಈ ಶಾಸನದ ಪ್ರತಿಗಳು ಇರಬೇಕು) ದೇವನಹಳ್ಳಿ[೧೮೪], ಸಿಂಗರಹಳ್ಳಿ[೧೮೫], ಶಿಡ್ಲಘಟ್ಟ ತಾಲ್ಲೂಕಿನ ಮಳ್ಳೂರು[೧೮೬], ಮೇಲೂರು[೧೮೭]ಗಳಲ್ಲಿ ದೊರೆತಿದ್ದು, ಈ ಶಾಸನದಲ್ಲಿ ದಾನ ನೀಡಿರುವ ಪ್ರತಿ ಗ್ರಾಮದಲ್ಲಿ ಶಾಸನದ ಒಂದು ಪ್ರತಿಯನ್ನು ಹಾಕಿಸಿರಬೇಕು.

ಗೋಪಾಲಸ್ವಾಮಿ ದೇವಸ್ಥಾನದಲ್ಲಿರುವ ಬೆಳ್ಳಿಯ ಬಟ್ಟಲನ್ನು ನವಾಬ ಹೈದರಾಲಿಖಾನ್ ಬಹದೂರರ ಸೇವೆಯಾಗಿ[೧೮೮], ಜಾಗಟೆಯ ಸುತ್ತಲೂ ಶ್ರೀವೇಣು ಗೋಪಾಲಯ್ಯನವರಿಗೆ ಶ್ರೀಮನ್ಮಹಾ

---

[೧೮೧] ಎ.ಕ-೯, ದೆ.ತಾ.೫೧, ಕ್ರಿ.ಶ.೧೬೯೭, ಬೇಗೂರು.
[೧೮೨] ಎ.ಕ-೯, ದೇ.ತಾ.೧೬, ಕ್ರಿ.ಶ.೧೬೯೮, ದೇವನಹಳ್ಳಿ.
[೧೮೩] ಎ.ಕ-೯, ದೆ.ತಾ.೩೭, ಕ್ರಿ.ಶ.೧೬೯೮, ಸೋಮನಹಳ್ಳಿ.
[೧೮೪] ಎ.ಕ-೯, ದೇ.ತಾ.೧೫ & ೧೬, ಕ್ರಿ.ಶ.೧೬೯೮, ತಾಮ್ರ ಶಾಸನ, ದೇವನಹಳ್ಳಿ.
[೧೮೫] ಎ.ಕ-೯, ದೇ.ತಾ ೭೦, ಕ್ರಿ.ಶ.೧೬೯೮, ಸಿಂಗರಹಳ್ಳಿ.
[೧೮೬] ಎ.ಕ-೧೦, ಶಿ.ತಾ, ೫೩,ಕ್ರಿ.ಶ.೧೬೯೮, ಮಳ್ಳೂರು,
[೧೮೭] ಎ.ಕ-೧೦, ಶಿ.ತಾ.೫೬ & ೫೭, ಕ್ರಿ.ಶ.೧೬೯೮, ಮೇಲೂರು.
[೧೮೮] ಎ.ಕ-೯, ಅನುಬಂಧ, ದೇ.ತಾ,೮೩, ದೇವನಹಳ್ಳಿ.

ಪ್ರಧಾನ ಬಾಲಾಜಿರಾವು ಹರುಷ ನಿಧಾನ ಮುಕುಂದರಾವು ಸುಬೇದಾರ್ ಕಿಲೆದಾರ್ ದ್ಸೋಡು ರಘುನಾಥ ಸ್ಥಾನಿಕನ ಸೇವೆಯಾಗಿ[೧೮೯] ದಾನಗಳನ್ನು ನೀಡಿದ್ದಾರೆ.

## ಟಿ.ಅಗ್ರಹಾರದ ವೇಣುಗೋಪಾಲ ದೇವಾಲಯ

ದೇವನಹಳ್ಳಿ ತಾಲ್ಲೂಕಿನ ಚನ್ನರಾಯಪಟ್ಟಣ ಹೋಬಳಿಯ ತಲ್ಲೋಹಳ್ಳಿ ಅಗ್ರಹಾರ ಎಂಬ ಗ್ರಾಮವನ್ನು ೫೦ ವರ್ಷಗಳ ಹಿಂದೆ ಕತ್ತಾಳೆ ಅಗ್ರಹಾರ ಎಂದು ಕರೆಯಲು ಗ್ರಾಮದ ಸುತ್ತಲೂ ರಕ್ಷಣೆಯಂತೆ ಕತ್ತಾಳೆ ಗಿಡಗಳಿಂದ ಹೆಸರು ಬಂದಿತ್ತಂತೆ. ಮೊದಲು ಪ್ರಾಚೀನ ಕಾಲದಲ್ಲಿದ್ದ ಗ್ರಾಮಕ್ಕೆ ಉತ್ತರಕ್ಕೆ ಒಂದು ಕಿ.ಮೀ. ದೂರದಲ್ಲಿ ಅಗ್ರಹಾರ ವರ್ಗಾವಣೆಯಾಗಲು ಕಾರಣ ಹಾಗೂ ಸಂಸ್ಥಾಪಕರಾದ ತಿಮ್ಮಯ್ಯ ಭಟ್ಟರು. ಈ ಅಗ್ರಹಾರ ಟಿ.ಅಗ್ರಹಾರವಾಗಿದ್ದು, ಊರಿನ ಒಳಗೆ ಇರುವ ಗೋಕಲ್ಲನ್ನು ಸಂಕ್ರಾಂತಿ, ನವರಾತ್ರಿ ಸಮಯದಲ್ಲಿ ವಿಶೇಷ ಪೂಜೆಯನ್ನು ಮಾಡುತ್ತಾರೆ.

ಊರಿನ ಹೊರಗೆ ಅಂದರೆ ಹಳೇ ಗ್ರಾಮದ ಹೊಲದಲ್ಲಿ ವೇಣುಗೋಪಾಲ ಸ್ವಾಮಿ ಎನ್ನುವ ಬೃಂದಾವನವಿದ್ದು, ಅದರ ಎದುರು ಆಂಜನೇಯ ಶಿಲ್ಪವಿರುವ ಗರುಡ ಗಂಬವಿದೆ. ಸರಳವಾದ ಚಿಕ್ಕದಾದ ಗುಡಿಗೆ ನಾಲ್ಕು ಕಂಬಗಳ ಸುತ್ತಲೂ ಮಣ್ಣಿನ ಗೋಡೆಯನ್ನು ಕಟ್ಟಿದಂತಹ ಗುಡಿಯಲ್ಲಿ ಮುಖ ಮಂಟಪ, ಚಿಕ್ಕದಾದ ಅಂತರಾಳವಿದ್ದು, ದೀಪಾರಾಧನೆಗೆ ಕೋಷ್ಟಗಳನ್ನು ಅಂತರಾಳದ ಬಾಗಿಲಲ್ಲಿ ನಿರ್ಮಿಸಿದ್ದಾರೆ. ಚಾಕಾಕಾರದ ಬೃಂದಾವನದ ಮುಂದುಗಡೆಯಲ್ಲಿ ವೇಣುಗೋಪಾಲ, ರುಕ್ಮಿಣಿ, ಸತ್ಯಭಾಮೆಯರ ಉಬ್ಬು ಶಿಲ್ಪಗಳಿವೆ. ಗೋಪಾಲನಿಗೆ ನಾಲ್ಕು ಕೈಗಳಿದ್ದು, ಮುಂಗೈಯಲ್ಲಿ ಕೊಳಲು, ಹಿಂಗೈಯಲ್ಲಿ ಚಕ್ರ, ಶಂಖ, ಹಿಡಿದಿದ್ದಾರೆ. ಬಲ ಬದಿಗೆ ರುಕ್ಮಿಣಿ, ಎಡಬದಿಯಲ್ಲಿ ಸತ್ಯಭಾಮ ನಿಂತಿರುವುದನ್ನು ಕಾಣಬಹುದು. ಮಲ್ಲಿಶೆಟ್ಟಿಪುರ, ಕುರಿಜಾಲ, ಹಳೇನಿಜಗಲ್ಲು, ಮಾರಕಲಘಟ್ಟ, ಬೇಗೂರು ಇತ್ಯಾದಿ ಕಡೆ ಚೆನ್ನಕೇಶವ / ವೇಣುಗೋಪಾಲ ಎನ್ನವ ದೇವಾಲಯದಲ್ಲಿ ಬೃಂದಾವನಗಳಿಗೆ **(ಚಿತ್ರ ಸಂಖ್ಯೆ-೮೨)** ಪೂಜೆ ಮಾಡುತ್ತಿದ್ದಾರೆ. ಸಾಮನ್ಯವಾಗಿ ಅಗ್ರಹಾರಕ್ಕೆ ಯಾರೊಬ್ಬರಾದರು ಯತಿಗಳು ಇದ್ದಿರಬೇಕು ಅಂತಹ ಯತಿಗಳು ಮರಣಿಸಿದಾಗ ಅವರಿಗೆ ಬೃಂಆದಾವನ ನಿರ್ಮಿಸಿರಬೇಕು. ಶ್ರೀ ವೈಷ್ಣವರಲ್ಲಿ ಯತಿಗಳಿಗೆ ಬೃಂದಾವನ ನಿರ್ಮಿಸುವ ಸಂಪ್ರದಾಯವು ಈಗಲೂ ಸಹ ಜಾರಿಯಲ್ಲಿರುವುದನ್ನು ದಿನಾಂಕ ೨೯/೧೨/೨೦೧೯ ರಂದು ಪೇಜಾವಾರಮಠದ ವಿಶ್ವತೀರ್ಥರು ಮರಣಿಸಿದಾಗ ಅವರಿಗೆ ಬೃಂದಾವನ ನಿರ್ಮಿಸುವುದಕ್ಕೆ ಸಿದ್ಧತೆಯನ್ನ ಮಾಡಿಕೊಂಡಿದ್ದಾರೆ. ಹಾಗೇಯೇ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕನ್ ಸ್ವಾಮೀಜಿಗೆ ಬೃಂದಾವನವನ್ನು ನಿರ್ಮಿಸಿದ್ದಾರೆ. ಗುರುವಾರ ದಿನ ಪೂಜೆ ಮಾಡುವ ರಾಘವೇಂದ್ರರಾಯರಿಗೂ ಬೃಂದಾವನವನ್ನು

[೧೮೯] ಎ.ಕ-೯, ಅನುಬಂಧ, ದೇ.ತಾ,೮೪, ದೇವನಹಳ್ಳಿ.

ನಿರ್ಮಿಸಿರುವುದನ್ನ ಕಾಣಬಹುದು. ಆನೆಗುಂದಯಲ್ಲಿ ಹಲವಾರು ಬೃಂದಾವನಗಳಿದ್ದು ಅದರಲ್ಲಿ ಇತ್ತೀಚೆಗೆ ಒಡೆದು ಹಾಕಿದ ಬೃಂದಾವನವನ್ನು ಮರು ಸ್ಥಾಪಿಸಿದ್ದಾರೆ.

ಕಂಸನ ಪರಿವಾರದ ರಾಕ್ಷಸರಲ್ಲಿ ಒಬ್ಬನಾದ ಕೇಶಿಯು ಕುದುರೆಯಾಕಾರದವನಾಗಿ ಗೊಕುಲವನ್ನು ಪೀಡಿಸುತ್ತಿರಲು ಶ್ರೀಕೃಷ್ಣನು ಕೊಂದ ಕಾರಣದಿಂದಾಗಿ ಶ್ರೀ ಕೃಷ್ಣನಿಗೆ ಕೇಶವ ಎಂಬ ಹೆಸರು ಬಂದಿದೆ. ಕೇಶವ, ಚನ್ನಕೇಶವ, ಚನ್ನರಾಯರು ಮುಂತಾದ ಹೆಸರುಗಳಿಂದ ಸಹ ಕರೆಯುತ್ತಾರೆ. ಪತ್ನಿಯರಾದ ಶ್ರೀದೇವಿ, ಭೂದೇವಿಯರ ಸಮೇತ ಕೇಶವ ಇರುತ್ತಾನೆ. ಆವತಿ ಪ್ರಭು ಮೂಲ ಪುರುಷನಾದ ರಣ ಭೈರೇಗೌಡನು ಆವತಿಯಲ್ಲಿ ಶ್ರೀದೇವಿ-ಭೂದೇವಿ ಸಮೇತ ಚನ್ನಕೇಶವ ದೇವಾಲಯವನ್ನು ಪ್ರತಿಷ್ಠಾಪಿಸಿದನು. ನಂತರ ಇವರ ವಂಶೀಯರ ಆಡಳಿತವಿರುವ ಪ್ರದೇಶಗಳಲ್ಲಿ ಚನ್ನಕೇಶವ ದೇವಾಲಯಗಳು ನಿರ್ಮಾಣವಾದವು. ಮಾರೇಗೌಡನು ಚನ್ನಕೇಶವ ದೇವಾಲಯವನ್ನು ಅಭಿವೃದ್ಧಿ ಪಡಿಸಿದನು. ಮಾರ್ಗಾನಹಳ್ಳಿನ ಚನ್ನಕೇಶವ ಸ್ವಾಮಿ ದೇವಾಲಯದ ರಚನೆಯ ಹಿಂದೆ ರಣಭೈರೇಗೌಡನು ಪರಿವಾರ ಸಮೇತ ಯಣಮಂಜೆಯಿಂದ ಎತ್ತಿನ ಬಂಡಿಯಲ್ಲಿಟ್ಟು ತರುತ್ತಿದ್ದ ಚನ್ನಕೇಶವ ಸ್ವಾಮಿ ಮೂರ್ತಿಯನ್ನು ಮಾರ್ಗದ ಮಧ್ಯದಲ್ಲಿಯೇ ಪ್ರತಿಷ್ಠಾಪಿಸಬೇಕಾದ ಸಂಕಲ್ಪದಿಂದಾಗಿ ಇಲ್ಲಿ ನಿರ್ಮಿಸಲಾಗಿದೆ. ಎಂಬ ಪ್ರತೀತವಿದೆ.

## ಚಿಕ್ಕಜಾಲದ ಶ್ರೀ ಚನ್ನಕೇಶವ ದೇವಸ್ಥಾನ

ದೇವನಹಳ್ಳಿ - ಯಲಹಂಕ ಹೆದ್ದಾರಿಯಲ್ಲಿರುವ ಹೊಯ್ಸಳ ಕಾಲದಲ್ಲಿ ಶ್ರೀವಿಷ್ಣುವರ್ಧನ ಚತುರ್ವೇದಿ ಮಂಗಲವೆಂದು, ವಿಜಯನಗರ ಅರಸರ ಕಾಲದಲ್ಲಿ ಜಾಲ ವೆಂದು ಈಗ ಚಿಕ್ಕಜಾಲವಾಗಿದೆ. ಹೊಯ್ಸಳರ ಕಾಲದಲ್ಲಿ ಹಲವಾರು ಅಗ್ರಹಾರಗಳು ನಿಮಾಣವಾಗಿದ್ದವು. ಊರಿನ ಮಧ್ಯದಲ್ಲಿರುವ ಈ ದೇವಾಲಯದ ಪ್ರದೇಶವು ಅಗ್ರಹಾರವಾಗಿ ಹೊಯ್ಸಳರ ಕಾಲದಿಂದಲೇ ಉನ್ನತವಾದ ಧರ್ಮ-ಸಂಸ್ಕೃತಿಗಳ ಪರಂಪರೆಯನ್ನು ಹೊಂದಿರಬೇಕು. ದೇವಾಲಯದಲ್ಲಿನ ನವರಂಗದ ಕಂಬಗಳನ್ನು ಕ್ರಿ.ಶ.೧೨೭೫ ರ ಅಸುಪಾಸಿನಲ್ಲಿ ರಚನೆಯಾಗಿರ ಬೇಕು. ಅದಕ್ಕೆ ಪೂರಕವಾಗಿ ಕಂಬಗಳಲ್ಲಿ ತಮಿಳು ಶಾಸನಗಳು ಹಾಗೂ ಅಲ್ಲಾಳ, ಪೆಮ್ಮಾಂಡೈ, ಪಟ್ಟಣಸ್ವಾಮಿ, ಪೆರಿಯದೇವ ಮುಂತಾದ ಕಂಬಗಳನ್ನು ರಚನೆ ಮಾಡಿದವರ ಶಿಲ್ಪಿಗಳ ಹೆಸರುಗಳನ್ನು ಜೊತೆಗೆ ಧರ್ಮಾಡಳಿತ ವ್ಯವಸ್ಥೆ, ವರ್ತಕ ಜನಾಂಗದವರು ಕೇಶವ ದೇವನ ಬಗ್ಗೆ ಹೊಂದಿದ್ದ ಭಕ್ತಿಯನ್ನು ಸಹ ಕಾಣಬಹುದು.

ಶಾಸನೋಕ್ತವಾಗಿರುವ ಶ್ರೀ ಚನ್ನಕೇಶವ ದೇವಾಲಯವನ್ನು **(ಚಿತ್ರ ಸಂಖ್ಯೆ-೭೨)** ಮೂಲರಚನೆಯನ್ನು ಕಲ್ಪಿಸಲು ಸಾಧ್ಯವಾದಷ್ಟು ನವನವೀನವಾಗಿ ನಿರ್ಮಾಣ ಮಾಡಲಾಗಿದೆ. ಈ ದೇವಾಲಯವನ್ನು

ಹೊಯ್ಸಳ ದೊರೆ ವಿಷ್ಣುವರ್ಧನನ ಕಾಲದಲ್ಲಿ ನಿರ್ಮಾಣವಾಗಿರಬೇಕು. ಮೂರು ಮೀಟರ್ ಎತ್ತರದ ದಿಬ್ಬದ ಮೇಲೆ ಪೂವಾಭಿಮುಖವಾಗಿರುವ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳಿದ್ದು, ಗರ್ಭಗುಡಿಯಲ್ಲಿ ೨೦೦೬ ರ ಜೂನ್ ೪ ರಂದು ಭೂದೇವಿ ಶ್ರೀದೇವಿ ಸಮೇತ ಕೇಶವಸ್ವಾಮಿಯನ್ನು ಪ್ರತಿಸ್ಠಾಪಿಸಲಾಗಿದೆ. ಹೊಯ್ಸಳರ ಕಾಲದಲ್ಲಿ ಪ್ರತಿಸ್ಠಾಪಿಸಿದ ಕೇಶವ, ಶ್ರೀದೇವಿ ಶಿಲ್ಪಗಳನ್ನು ದೇವಾಲಯದ ನೈಋತ್ಯ ಮೂಲೆಯಲ್ಲಿ ಗಾಜಿನ ಪೆಟ್ಟಿಗೆಯಲ್ಲಿಸಲಾಗಿದೆ. ಈ ಕೇಶವನು ಪಾದವಲಯ, ಉದರಬಂಧ, ಯಜ್ಞೋಪವೀತ, ಕಂಠಹಾರ, ಭುಜಕೀರ್ತಿಗಳನ್ನು ಧರಿಸಿದ್ದು ಚತುರ್ಭುಜಗಳಲ್ಲಿ ಮೇಲಿನ ಬಲಗೈಯಲ್ಲಿ ಅಭಯ, ಕೆಳಗಿನ ಬಲಗೈಯಲ್ಲಿ ಚಕ್ರ, ಮೇಲಿನ ಎಡಗೈಯಲ್ಲಿ ಶಂಖ, ಕೆಳಗಿನ ಎಡಗೈಯಲ್ಲಿ ಕೆಳಮುಖ ಮಾಡಿದ ಗದೆಯನ್ನು ಇಡಿದಿದ್ದರೇ, ಶ್ರೀದೇವಿಯು ಪಾದವಲಯ, ಕಂಠಹಾರ, ಭುಜಕೀರ್ತಿ, ಕೈಬಳೆ, ಬೆರಳುಂಗುರ, ಬಲಗೈಯಲ್ಲಿ ಮೊಗ್ಗುಹಿಡಿದು ಭುಜಕ್ಕೆ ಇಟ್ಟುಕೊಂಡಿದ್ದಾಳೆ. ಎಡಗೈಯನ್ನು ಕೆಳಗೆ ಬಿಡಲಾಗಿದೆ. ಕೇಶವನ ಬಲಕ್ಕೆ ಇರಬೇಕಾದ ಭೂದೇವಿಯ ಶಿಲ್ಪವಿಲ್ಲ. ಗರ್ಭಗುಡಿಯ ಪ್ರವೇಶದ್ವಾರದ ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪಕ್ಕೆ ಹಿತ್ತಾಳೆ ಹೊದಿಕೆ ಹೊದಿಸಿದ್ದಾರೆ. ನವರಂಗದ ಪ್ರವೇಶದ್ವಾರದಲ್ಲಿ ಜಯ ವಿಜಯರ ಶಿಲ್ಪಗಳನ್ನು, ಮುಖಮಂಟಪದಲ್ಲಿ ಪ್ರಾಚೀನವಾದ ೧೨ ಶಿಲಾಕಂಬಗಳನ್ನು ತೂಗು ಉಯ್ಯಾಲೆಯಲ್ಲಿ ಶ್ರೀದೇವಿ, ಚೆನ್ನಕೇಶವಸ್ವಾಮಿ, ಭೂದೇವಿಯರ ಕಂಚಿನ ಉತ್ಸವ ಮೂರ್ತಿಗಳನ್ನು ಕಾಣಬಹುದು.

ಕ್ರಿ.ಶ.೧೩೨೮ ರ ಕಾಲದಲ್ಲಿ ಶ್ರೀ ವೀರ ಬಲ್ಲಾಳ ದೇವರಸರು ಉಣಾಮಲೆ ಪಟ್ಟಣದಲ್ಲಿ (ತಿರುವಣ್ಣಾಮಲೆ) ಇರುವಾಗ ಮಹಾಪ್ರಧಾನ ಪೊನ್ನಯ್ಯನವರ ಮಕ್ಕಳಾದ ಹೊಯ ದಣ್ಣಾನಾಯಕರು ಎಲಹಕ್ಕನಾಡಿನ ಮಯಿಲಗವುಡ, ಮಾರಗವುಡ, ಮಲಯಗವುಡ, ತಾಯಿ ಮಿಯಪ್ಪ ಗೌಡ, ಸೇನಭೋವ ಅಲ್ಲಾಳ ಎಲ್ಲರೂ ಸೇರಿ ಜಾಲದ ಚನ್ನಕೇಶವ ದೇವರಿಗೆ ಜಾಲ (ಅನೂಡಳ) ಮತ್ತು ತರಬನಹಳ್ಳಿಯನ್ನು ಶ್ರೀ ಲಕ್ಷ್ಮಿ ನರಸಿಂಹ ದೇವರ ಸನ್ನಿಧಿಯಲ್ಲಿ ಧಾರೆಯೆರೆದು ಕೊಟ್ಟರು[೧೯೦]. ಕ್ರಿ.ಶ.೧೫೩೨ ರ ಅಚ್ಯುತರಾಯರ ಕಾಲದ ಹೆಸರುಘಟ್ಟದ ಶಾಸನದಲ್ಲಿ ಲಕ್ಷ್ಮಿನರಸಿಂಹದೇವರ ಗುಡಿಯ ಪ್ರಸ್ತಾಪವಿದ್ದು, ಎಲ್ಲಿದೆ ಈ ಗುಡಿ ಎಂಬುದು ನಿಖರವಾಗಿ ತಿಳಿದುಬಂದಿಲ್ಲ.

ಕ್ರಿ.ಶ.೧೩೮೨ ರಲ್ಲಿ ಮೊರಸನಾಡ ಸುಂಕದ ಅಧಿಕಾರಿ ಕಾಮರಸರ ಮಕ್ಕಳು ದೇವರಸರು ಎರಡು ನಾಡುಗಳ ಅನೇಕ ತೆರನಾದ ಸುಂಕವಾದ ಅಗಸ, ಕುಂಬಾರ, ಗಾಣಯೆತ್ತು, ಮಗ್ಗದೆರಿಗೆ, ಬಡಗಿ ತೆರಿಗೆ, ಕ್ಷೌರಿಕ ಮುಂತಾದ ತೆರಿಗೆಗಳನ್ನು ಶ್ರೀ ಚನ್ನಕೇಶವ ನಾಥ ದೇವರ ಕೈಂಕರ್ಯಗಳಿಗೆ ಸಲ್ಲಬೇಕಾದ

[೧೯೦] ಎ.ಕ-೯, ದೇ.ತಾ.೬೮, ಕ್ರಿ.ಶ.೧೩೨೮, ಹೊರ ಪ್ರಕಾರದಲ್ಲಿ, ಚಿಕ್ಕಜಾಲ.

ಪಾಲನ್ನು ಅರ್ಪಿಸಿದನು[೧೯೧]. ಕ್ರಿ.ಶ.೧೩೮೨ರಲ್ಲಿ ಎಲಹಂಕನಾಡ ಸುಂಕದ ಅಧಿಕಾರಿ ರಾಮರಸರ ಮಕ್ಕಳು ದೇವರಸ್ಸರು ಗ್ರಾಮದೆರಿಗೆಯ ಸುಂಕದ ಮಾಯಿ ಹೊನ್ನನು ನಂದಾದೀವಿಗೆ ಧಾರಾಪೂರ್ವಕವಾಗಿ[೧೯೨] ದಾನ ನೀಡಿದ್ದರು.

ಪ್ರವೇಶ ದ್ವಾರದಲ್ಲಿರುವ ಗರುಡ ಕಂಬದ ಮೇಲೆ ಕ್ರಿ.ಶ.೧೪೦೯ ರಲ್ಲಿ ಮಹಾಸಾಮಂತಾಧಿಪತಿ ಸೊಂಣೆಯ ನಾಯಕರ ಕುಮಾರ ಭೈರೆಯ ನಾಯಕರು ಮಾಡಿಸಿದ ಕಂಬ. ದೇವಾಲಯವನ್ನು ಪುನಃ ನಿರ್ಮಾಣ ಮಾಡುವಾಗ ಲಭ್ಯವಿದ್ದ ೨ ಶಾಸನಗಳನ್ನು ಪ್ರಾಂಗಣದೊಳಗೆ ನಿಲ್ಲಿಸಿರುತ್ತಾರೆ.

ದೇವಾಲಯದ ಆವರಣದಲ್ಲಿ ಗೋಡೆಗೆ ಒರಗಿಸಿರುವ ೨ ಕಡೆಯಲ್ಲಿ ಕ್ರಿ.ಶ.೧೪೧೨ ರ ಕಾಲದಲ್ಲಿ ಗರುಡ ಗಂಬ ಶಾಸನದ ನಂತರ ೩ ವರ್ಷಗಳ ನಂತರದಲ್ಲಿ ಮಹಾಸಾಮಂತಾಧಿಪತಿ ಚಲವಲಕದ ಚವುಂಡಿನಾಯಕರ ಕುವರ ಚವುಂಡೆಯ ನಾಯಕರು ನಲ್ಲೂರನಾಡಿನ ಮುತ್ತುಕದಹಳ್ಳಿಯಲ್ಲಿ ಕ್ಷೇತ್ರಪಾಲನೆ ಮಾಡುವಾಗ ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲವೆಂಬ ಹೆಸರನ್ನು ಹೊಂದಿರುವ ಚಿಕ್ಕಜಾಲದ ಶ್ರೀ ಚನ್ನಕೇಶವ ದೇವರ ವಿಷ ಕಾಲದ ಪೂಜಾದಿಗಳಿಗೆ ಮುತ್ತುಕದಹಳ್ಳಿಯ ಕೆರೆಯ ಕೆಳಗಿನ ಜಮೀನಿನ ಧಾರೆಯೆರೆದಿದ್ದಾರೆ[೧೯೩].

## ನಿಜಗಲ್ಲು

ಹೊಯ್ಸಳ ವಿಜಯನಗರ, ಮರಾಠ, ಮೈಸೂರು ಒಡೆಯರ ಆಳ್ವಕೆ ಒಳಪಟ್ಟ ನಿಜಗಲ್ಲಿನಲ್ಲಿ **(ಚಿತ್ರ ಸಂಖ್ಯೆ-೮೩)** ಲಕ್ಷ್ಮಿನರಸಿಂಹ, ವೀರಭದ್ರ, ಮಲ್ಲಿಕಾರ್ಜುನ, ಗಣಪತಿ ದೇವಾಲಯಗಳಿವೆ. ಸದಾಶಿವರಾಯ ದಳವಾಯಿಗಳಾದ ಕೆಂಪರಾಜಯ್ಯ, ಚಿಕ್ಕದೇವರಾಜ ಒಡೆಯರ ಸೇವಕನಾಗಿ ದಾಸರಾಜಯ್ಯರು ಆಡಳಿತ ನಡೆಸಿ ದೇವಾಲಯಗಳಿಗೆ ದಾನ ನೀಡಿದ್ದಾರೆ. ಕ್ರಿ.ಶ.೧೬೯೮ ರಲ್ಲಿ ಚಿಕ್ಕದೇವರಾಜ ಒಡೆಯರ ಸೇವಕನಾದ ಬಿಳುಗಿಲಿ ದಾಸರಾಜಯ್ಯನು ನಿಜಗಲ್ಲಿನಲ್ಲಿ ರಕ್ಷಣೆಗಾಗಿ ಕೋಟೆಯನ್ನು ಕಟ್ಟಿಸಿ, ದಕ್ಷಿಣ ದಿಕ್ಕಿನ ಬಾಗಿಲ ಬಳಿಯ ವಿಘ್ನೇಶ್ವರ ಗುಡಿಯನ್ನು ನಿರ್ಮಿಸುತ್ತಾನೆ[೧೯೪]. ಈ ಹಳೆಯ ಗಣೇಶನ ಗುಡಿ ಪೂರ್ಣ ಬಿದ್ದು ಹೋಗಿದ್ದು, ಹೊಸದಾಗಿ ಚಿಕ್ಕ ಗುಡಿಯನ್ನು ಕಟ್ಟಿ ಹಳೇಯ ಗಣೇಶನ ವಿಗ್ರಹವನ್ನು ಮರು ಪ್ರತಿಸ್ಥಾಪನೆಯನ್ನು ೨೦೧೯ ರಲ್ಲಿ ಮಾಡಲಾಗಿದೆ.

[೧೯೧] ಎ.ಕ-೯, ದೇ.ತಾ.೫೭, ಕ್ರಿ.ಶ.೧೩೮೨, ದೇವಸ್ಥಾನದ ಬಾಗಿಲ ಬಳಿ, ಚಿಕ್ಕಜಾಲ.
[೧೯೨] ಎ.ಕ-೯, ದೇ.ತಾ.೫೮, ಕ್ರಿ.ಶ.೧೩೮೨, ದೇವಸ್ಥಾನದ ಉತ್ತರ ಕಡೆ ಗೋಡೆಯಲ್ಲಿ, ಚಿಕ್ಕಜಾಲ.
[೧೯೩] ಎ.ಕ-೯, ದೇ.ತಾ.೫೯, ಕ್ರಿ.ಶ.೧೪೧೨, ಹೊರ ಪ್ರಕಾರದ ಆಗ್ನೇಯ ದಿಕ್ಕಿನಲ್ಲಿ, ಚಿಕ್ಕಜಾಲ.
[೧೯೪] ಎ.ಕ-೯, ನೆ.ತಾ.೬೬, ಕ್ರಿ.ಶ.೧೬೯೮, ಬೆಟ್ಟದ ಮೇಲೆ ಶ್ರೀ ಪರಮೇಶ್ವರ ದೇವರ ಗವಿಯ ಬಲಭಾಗದ ಗೋಡೆ ಬಂಡೇ ಮೇಲೆ, ನೀಜಗಲ್ಲು.

ಕ್ರಿ.ಶ.೧೬೯೮ ರಲ್ಲಿ ಕೋಟೆಯು ಪೂರ್ಣವಾದ ವಿವರದ ಶಾಸನದಲ್ಲಿ ಲಕ್ಷ್ಮಿನರಸಿಂಹ ಮತ್ತು ಲಕ್ಷ್ಮಿ ದೇವಾಲಯವನ್ನು ನಿರ್ಮಿಸಿದ್ದ ಉಲ್ಲೇಖವಿದೆ. ಪೂರ್ವಾಭಿಮುಖವಾಗಿ ಗರ್ಭಗೃಹ, ಸುಖನಾಸಿ, ನವರಂಗಗಳನ್ನು ಹೊಂದಿರುವ ದೇವಾಲಯದ ಗರ್ಭಗುಡಿಯಲ್ಲಿ ೩ ಅಡಿ ಎತ್ತರದ ಲಕ್ಷ್ಮಿಸಮೇತನಾದ ನರಸಿಂಹನ ವಿಗ್ರಹವಿದ್ದು, ಪ್ರವೇಶದ್ವಾರ ಮತ್ತು ಸುಖನಾಸಿ ದ್ವಾರಬಂಧವು ಒಂದೇ ಆಕಾರದಲ್ಲಿದ್ದು, ಎರಡು ದ್ವಾರದಲ್ಲೂ ಜಯ ವಿಜಯರ ಶಿಲ್ಪಗಳನ್ನು ಕಾಣಬಹುದು. ತೆರೆದ ನವರಂಗದಲ್ಲಿ ಒಟ್ಟು ೧೬ ಕಂಬಗಳಿದ್ದು, ಮದ್ಯಭಾಗದಲ್ಲಿ ಭುವನೇಶ್ವರಿಯನ್ನು ಕಂಡು ಬರುತ್ತದೆ. ಈ ದೇವಾಲಯದ ಎಡಭಾಗದಲ್ಲಿ ಗರ್ಭಗೃಹ ಮ,ತ್ತು ತೆರೆದ ನವರಂಗಗಳನ್ನು ಹೊಂದಿರುವ ಲಕ್ಷ್ಮಿದೇವಿಯ ದೇವಾಲಯವಿದ್ದು, ಗರ್ಭಗುಡಿಯಲ್ಲಿ ಯಾವೇದೇ ರೀತಿಯ ವಿಗ್ರಹವಾಗಲಿ, ಶಿಲ್ಪವಾಗಲಿ ಕಂಡು ಬರುವುದಿಲ್ಲ.

ಈ ಲಕ್ಷ್ಮಿನರಸಿಂಹ ಸ್ವಾಮಿಯವರ ಪಡಿತರ ದೀಪಾರಾಧನೆ ಮುಂತಾದ ಸಕಲ ಸೇವೆಗೆ ಕ್ರಿ.ಶ.೧೭೨೦ ರಲ್ಲಿ ಕಾರ್ತಿಕ ಶುದ್ಧ ೧೫ ಗುರುವಾರ ಪುಣ್ಯಕಾಲದಲ್ಲಿ ಮಹಿಶೂರ ಕೃಷ್ಣರಾಜ ಒಡೆಯರೈಯ್ಯವವರು ಗೊಟಗೆರೆಗೆ ಪ್ರತಿನಾಮವಾದ ನರಸಿಂಗಪುರ ಗ್ರಾಮ ಉಪಗ್ರಾಮವನ್ನು[೧೯೫], ಕ್ರಿ.ಶ.೧೭೧೯ ರಲ್ಲಿ ಲಕ್ಷ್ಮಿ ನರಸಿಂಹಸ್ವಾಮಿಯವರ ಸಕಲ ಸೇವೆ ನಿಮಿತ್ತ ಶ್ರೀ ಭಂಡಾರಕ್ಕೆ ಪುಡಿವಟ್ಟಾಗಿ ಸಮರ್ಪಣೆ ಮಾಡಿದ ದ್ರವ್ಯದಲ್ಲಿ ದೇವಸ್ಥಾನಕ್ಕೆ ಕ್ರಯ ಬದ್ದವಾಗಿ ಸಂಪಾದಿಸಿದ ವೃತ್ತಿಗಳ ವಿವರಣೆ[೧೯೬] ಇದ್ದರೇ, ಮುಂದಿನ ವರ್ಷದಲ್ಲಿ (ಕ್ರಿ.ಶ.೧೭೨೦) ಅದೇ ದೇವರ ಸೇವೆಗಾಗಿ ದಾಸರಾಜಯ್ಯನೇ ಸೋಮಸಾಗರ ಅಗ್ರಹಾರವನ್ನು ಕ್ರಮಬದ್ದವಾಗಿ ಸಂಪಾದಿಸಿದ ವೃತ್ತಿಗಳ ವಿವರಗಳನ್ನು ದಾನ ಕೊಟ್ಟಿದ್ದರ ಬಗ್ಗೆ ದೇವರಾಯನ ದುರ್ಗದ ಮತ್ತೊಂದು ತಾಮ್ರಶಾಸನದಲ್ಲಿ ಕಾಣಬಹುದು[೧೯೭].

ಹೀಗೆ ಒಡೆಯರ ಕಾಲದಲ್ಲಿ ವಿಜೃಂಮಣೆಯಿಂದ ಪೂಜೆ ಪುನಸ್ಕಾರಗನ್ನು ಪಡೆಯುತ್ತಿದ್ದ ಈ ಲಕ್ಷ್ಮಿನರಸಿಂಹ ದೇವಾಲಯವು ಈಗ ಹಾಳಾಗಿದ್ದು, ಮೂಲ ದೇವರನ್ನು ಊರಿನ ಹತ್ತಿರ ದೇವಾಲಯವನ್ನು ನಿರ್ಮಿಸಿರಬೇಕು. ಕ್ರಿ.ಶ.೧೭೭೭ ರಲ್ಲಿ ಮರಾಠರ ಅಧೀನದಲ್ಲಿದ್ದ ನಿಜಗಲ್ಲಿನಲ್ಲಿ ಮರಾಠರು ಮತ್ತು ಹೈದರಾಲಿ ನಡುವಿನ ಯುದ್ದದಿಂದಾಗಿ ಕೋಟೆಯೊಳಗಿನ ದೇವಾಲಯಗಳು ಹಾಳಾಗಿರಬೇಕು. ಕೋಟೆಯಿಂದ ಹೊರಗಿದ್ದುದರಿಂದಾಗಿ ಬಹುಶಃ ವೀರಭದ್ರ, ಮಲ್ಲಿಕಾರ್ಜುನ ದೇವಾಲಯ ಸುಸಜ್ಜಿತವಾಗಿದೆ. ಬೆಟ್ಟದ ಮೇಲ್ಭಾಗದಲ್ಲಿನ ಲಕ್ಷ್ಮಿನರಸಿಂಹ ದೇವಾಲಯ ಜನಸಂಪರ್ಕ

[೧೯೫] ಎ.ಕ-೯, ನೆ.ತಾ.೭೦, ಕ್ರಿ.ಶ.೧೭೨೦, ನರಸಿಂಹಪುರ.
[೧೯೬] ಎ.ಕ.೧೨, ತುಮಕೂರು ೪೬, ಕ್ರಿ.ಶ.೧೭೧೯, ದೇವರಾಯನದುರ್ಗ.
[೧೯೭] ಎ.ಕ.೧೨, ತುಮಕೂರು ೪೭, ಕ್ರಿ.ಶ.೧೭೨೦, ದೇವರಾಯನದುರ್ಗ.

ಕಡಿಮೆಯಾಗಿ ರಕ್ಷಣೆಯಿಲ್ಲದೆ ಹಾಳಾಗಿದ್ದು, ನಂತರದ ದಿನಗಳಲ್ಲಿ ಜನಸಂಪರ್ಕಕ್ಕೆ ಅನುಕೂಲವಾಗುವಂತೆ ಊರಿಗೆ ಸ್ಥಳಾಂತರಗೊಂಡಿರಬೇಕು. ಇಲ್ಲದೇ ನಿಧಿಯ ಆಸೆಯಿಂದ ನಿಧಿಗಳ್ಳರು ಹಾಳು ಮಾಡಿರಬೇಕು.

ನೈಸರ್ಗಿಕ ಗುಹಾಂತರ ಮಲ್ಲಿಕಾರ್ಜುನ ದೇವಾಲಯವು ಪ್ರಾಚೀನ ದೇವಾಲಯವಾಗಿತ್ತು. ಪೂರ್ವಾಭಿಮುಖವಾಗಿರುವ ದೇವಾಲಯದ ಪ್ರವೇಶದ್ವಾರವು ಕಿರೀದಾಗಿದ್ದು ಸುಮಾರು ೪ ಅಡಿ ಎತ್ತರವನ್ನು ಹೊಂದಿದೆ. ಒಳಗೆ ಪ್ರವೇಶಿಸಿದರೆ ಸುಮಾರು ೮೦ ಅಡಿ ವಿಸ್ತಾರವಾದ ಪ್ರಾಗಂಣವಿದೆ. ಗರ್ಭಗೃಹದಲ್ಲಿ ೧೨ ಅಡಿ ಎತ್ತರದ ಬಾಣಲಿಂಗವಿದ್ದು, ಕ್ರಿ.ಶ.೧೨೮೮ ರಲ್ಲಿ ಹೊಯ್ಸಳ ಮಂತ್ರಿ ರಾಜ ನಿಚಯನ ಆದೇಶದಂತೆ ಮಹಾಪ್ರಧಾನಿ ಕಂಬಯ್ಯ ದಣ್ಣಾಯಕನು ಕೆರೆಯನ್ನು ಕಟ್ಟಿಸಿ ದಾನ ನೀಡಿದ್ದರು[೧೯೮]. ಈ ಕೆರೆಯನ್ನು ಸಂಬವನ ಕೆರೆ ಎಂದು ಈಗಲೂ ಕರೆಯುತ್ತಾರೆ. ಸುಮಾರು ೨೦ ವರ್ಷಗಳ ನಿಧಿಕಳ್ಳರ ಆವಳಯಿಂದ ಬಾಣಲಿಂಗವು ಮಣ್ಣಲ್ಲಿ ಮುಚ್ಚು ಹೊಗಿದೆ. ಗರ್ಭಗುಡಿಯ ಮುಂದೆ ದೇವಾಲಯದ ಬಲಕ್ಕೆ ಭಿತ್ತಿಯಾದ ಬಂಡೆಯ ಮೇಲೆ ಹಲವು ಉಬ್ಬು ಶಿಲ್ಪಗಳಿವೆ. ನವಿಲಿನ ಮೇಲೆ ಆಸೀನಾಗಿರುವು ಷಣ್ಮುಗ ಅಥವಾ ಕುಮಾರಸ್ವಾಮಿ, ವೀರಭದ್ರ, ನಾಗರಾಜ ಹಾಗೂ ಕಂಕಾಳಾ ಶಿವನ ಶಿಲ್ಪಗಳನ್ನು ಕಾಣಬಹುದು. ಈ ಪರಮೇಶ್ವರ ಗವಿ ಬಾಗಲಿನ ಎಡಗಡೆ ಗಣಪತಿ ವಿಗ್ರಹದ ಕೆಳಗೆ ಬಂಡೆಯ ಮೇಲೆ ದಂಧಪಡಿ ನಾಯಕರ ಮಕ್ಕಳು ಇಮ್ಮಡಿ ನಾಯ್ಕರು[೧೯೯] ಈ ಗಣಪತಿ ವಿಗ್ರಹವನ್ನು ಪ್ರತಿಷ್ಟಾಪಿಸಿರಬೇಕು. ಈ ಶಾಸನದ ಮೇಲೆ ಮಣಿಸ್ತಾನ ಎಂದು ಇರುವುದು[೨೦೦]. ಈ ಭಾಗದಲ್ಲಿ ಕೊಳವಿದ್ದಿರಬೇಕು. ಹೊತ್ತ ಹರಕೆಯನ್ನು ತೀರಿಸಲು ಈ ಕೊಳದಲ್ಲಿ ಮಡಿಸ್ತಾನ ನಡೆಯುತ್ತಿರಬೇಕು. ಆ ಸಂದರ್ಭದಲ್ಲಿ ಈ ಶಾಸನ ಹಾಕಿಸಿರಬೇಕು. ಈ ಗಣಪತಿ ವಿಗ್ರಹದ ಎಡಕ್ಕೆ ಪಾರ್ವತಿ ದೇವಿಯ ಚಿಕ್ಕ ಗುಡಿ ಮಾತ್ರ ಇದ್ದು ಒಳಗೆ ಯಾವುದೇ ರೀತಿಯ ಮೂರ್ತಿಶಿಲ್ಪವಿಲ್ಲ.

ಈ ಪರಮೇಶ್ವರ ದೇವಾಲಯದ ಪಕ್ಕದಲ್ಲಿ ನೈಸರ್ಗಿಕ ಶಿಲಾನೆಲೆಯಲ್ಲಿನ ವೀರಭದ್ರ ದೇವಾಲಯವು ವಾಸ್ತುಶಿಲ್ಪ ಶೈಲಿಯಿಂದ ೧೩ನೇ ಶತಮಾನ ಕಾಲದಲ್ಲಿ ರಚನೆಯಾಗಿರಬೇಕು. ೧೨ ಅಡಿ ಎತ್ತರ ವೀರಭದ್ರ ಶಿಲ್ಪದ ಬಲಕ್ಕೆ ಭದ್ರಕಾಳಿ, ಎಡಕ್ಕೆ ದಕ್ಷನ ಶಿಲ್ಪಗಳಿವೆ. ಇದರಲ್ಲಿ ಹಾವುಗಳು ವಿಶಿಷ್ಟವಾಗಿ ಎದ್ದು ಕಾಣಿಸುತ್ತದೆ. ಕ್ರಿ.ಶ.೧೫೭೨ ರಲ್ಲಿ ನವೀಕರಿಸಲಾಗಿದೆ. ಮುಸ್ಲಿಂ ರಾಜರು ದಂಡೆತ್ತಿ ಬಂದು ಅನೇಕ ವಿಗ್ರಹಗಳನ್ನು ಒಡೆದು ನಾಶ ಮಾಡಿದರು. ಆಗ ಉದ್ಧಾನ ವೀರಭದ್ರೇಶ್ವರ ಮೂರ್ತಿಯು ಸಹ ಸ್ವಲ್ಪ ಭಿನ್ನವಾದ ನಂತರ ಹಳೇನಿಜಗಲ್‌ನ ಭಾಗದ ಬೆಟ್ಟದಲ್ಲಿ ತಂದು ಪ್ರತಿಷ್ಠಾಪಿಸುತ್ತಾರೆ. ಈ ವೀರಭದ್ರ

---

[೧೯೮] ಎ.ಕ-೯, ನೆ.ತಾ.೬೩, ಕ್ರಿ.ಶ.೧೨೩೮, ನಿಜಗಲ್ಲು ಗ್ರಾಮದ ಕಣಿವೆಯಲ್ಲಿ ಸಂಬವನಕೆರೆ ಹಿಂದೆ ರಸ್ತೆ ಬಳಿ ಇರುವ ಕಲ್ಲು.

[೧೯೯] ಎ.ಕ-೯, ನೆ.ತಾ.೧೬೧, ನಿಜಗಲ್ಲು ಬೆಟ್ಟದ ಮೇಲೆ ಪರಮೇಶ್ವರ ಗವಿಬಾಗಲಿಗೆ ಎಡಗಡೆ ಗಣಪತಿ ವಿಗ್ರಹದ ಕೆಳಗೆ ಬಂಡೆಯ ಮೇಲೆ.

[೨೦೦] ಎ.ಕ-೯, ನೆ.ತಾ.೧೬೨, ನಿಜಗಲ್ಲು ಬೆಟ್ಟದ ಮೇಲೆ ಪರಮೇಶ್ವರ ಗವಿಬಾಗಲಿಗೆ ಎಡಗಡೆ ಗಣಪತಿ ವಿಗ್ರಹದ ಕೆಳಗಿನ ಅದೇ ಬಂಡೆಯ ಮೇಲೆ.

(ಉದ್ದಂಡಯ್ಯ) ದೇವಸ್ಥಾನದ ಬಲಕ್ಕೆ ಮಠದ ಬುಡದಲ್ಲಿರುವ ಬಂಡೆಯ ಮೇಲೆ ಸೋಮನಾಥ ಒಡೆಯರು ನಮ್ಮ ಆರಾಧ್ಯರಾದ ಬೊಮ್ಮಿದೇವರ ಒಡೆಯರಿಗೆ ನಿಜಗಲ್ಲಿಯ ಹಿರಿಯ ಕೆರೆಯ ಕೆಳಗಣ ೧೦ ಖಂಡುಗ ಗಡ್ಡೆಯನ್ನು ದಾನ ನೀಡಿದರು[೨೦೧]. ಬಹುಶ: ಬೊಮ್ಮದೇವ ಒಡೆಯರು ಎಂಬುವರು ಮಠಾಧಿಪತಿಗಳಾಗಿರ ಬೇಕು. ಮಠವಿದ್ದ ಪ್ರದೇಶವವೀಗ ಪ್ರಸಾದ ಹಂಚುವ ಕೇಂದ್ರವಾಗಿದೆ.

ಕೋಟೆಯ ಮೇಲ್ಭಾಗಕ್ಕೆ ಹೋದಂತೆ ಸಿದ್ದರ ಗುಡಿಯಿದೆ. ಅಲ್ಲಿ ಇನ್ನು ಮೇಲ್ತುದಿಯಲ್ಲಿ ಕುದುರೆಲಾಯ, ಗರುಡಿ ಮನೆ, ರಾಜನ ವಾಸಗೃಹದ ಜೊತೆಗೆ ಯಾಣವನ್ನು ನೆನಪಿಸುವಂತಹ ಬೃಹತ್ತಾದ ಏಕ ಶಿಲ ಬಂಡೆಗಳಿವೆ. ಕೋಟೆಯು ಶಿಥಿಲವ್ಯವಸ್ಥೆ ತಲುಪಿದೆ. ಕ್ರಿ.ಶ.೧೮೩೧ ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಅಧಿಕಾರ ವಹಿಸಿಕೊಂಡ ಬ್ರಿಟೀಷ್ ಕಾಲದಲ್ಲಿ ನಿಜಗಲ್ಲು ತಾಲ್ಲೂಕು ಕೇಂದ್ರವಾಗಿ, ನಂತರ ಕೆಲವು ವರ್ಷಗಳ ಕಾಲ ನಿಜಗಲ್ಲು ಹೋಬಳಿ ಕೇಂದ್ರವಾಗಿ ಸೋಂಪುರ ಹೋಬಳಿಯಾದ ಮೇಲೆ ನಿಜಗಲ್ಲು ಅದಕ್ಕೆ ಸೇರಿತು. ೧೯೫೯ ರ ವರೆಗೆ ನಿಜಗಲ್ಲು ಗ್ರಾಮ ಪಂಚಾಯಿತಿಯ ಕೇಂದ್ರವಾಗಿತ್ತು. ಬ್ರಿಟೀಷರು ನಿಜಗಲ್ಲಿನ ಕೋಟೆಯನ್ನು ನಾಶ ಮಾಡಿದ ನಂತರ ನಿಜಗಲ್ಲು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡು ಹಳೇನಿಜಗಲ್ ಎಂಬ ಗ್ರಾಮವಾಗಿ ಉಳಿದುಕೊಂಡಿದೆ.

ಹಳೇನಿಜಗಲ್ಲುವಿನ ಬಸವಣ್ಣನ ಗುಡಿಯಲ್ಲಿ ಬಸವಣ್ಣ ಕೂತಿರುವ ಕಲ್ಲು ಕಂಭದ ಮೇಲೆ ಹೊಯ್ಸಳ ವೀರನಾರಸಿಂಹ ದೇವರಸರು ದಾನ ನೀಡಿದ ಶಾಸನವಿದೆ[೨೦೨]. ಆಲದಮರದ ಕೆಳಗೆ ನಂದಿಗಡವನು ಲಕೂರ ಯೆಲಜನವೆಯನ್ನು ನಿಜಗಲ್, ಹಳೇನಿಜಗಲ್ ಕಟನಗಜ[೨೦೩] ಎಂದು ಈ ಶಾಸನದ ಕಾಲಕ್ಕಾಗಲೇ ನಿಜಗಲ್, ಹಳೇನಿಜಗಲ್ಲು ಎಂದು ೨ ಗ್ರಾಮಗಳು ಪ್ರತ್ಯೇಕವಾಗಿ ಇರುವುದನ್ನು ಕಾಣಬಹುದು. ಆಶಾಡದ ಬ ೧೩ರಲ್ಲಿ ಕೆಂಚ ಸೋಮನು ದಾನ ನೀಡಿದನು[೨೦೪]. ಕ್ರಿ.ಶ.೧೨೨೮ ರ ಶಾಸನದ ನಿಜಗಲಿಯ ಪುರವೇ ಈಗಿನ ಹಳೇಯ ನಿಜಗಲ್ಲು ಗ್ರಾಮವಾಗಿದ್ದು, ಗ್ರಾಮದ ಶಿವಾಲಯವು ಈಗ ಪಾಳು ಬಿದ್ದಿದ್ದೆ.

ಕ್ರಿ.ಶ.೧೭೧೯ ರ ವಿಕಾರಿ ಸಂವತ್ಸರದ ಮಾಘ ಶು ೧೦ ಭಾನುವಾರ ಶುಭ ತಿಥಿಯಲ್ಲಿ ತೆಪ್ಪದ ಬೇಗೂರಿನಲ್ಲಿ ತಾಯುರ ಪ್ರಭುಗಳಾದ ಕೆಂಪರಾಜೆಯ ಕುಮಾರ ದಾಸರಾಜಯ್ಯನ ಅರಸಿನವರು ಮುದ್ದು

[೨೦೧] ಎ.ಕ-೯, ನೆ.ತಾ.೧೫೮, ಹಳೇ ನಿಜಗಲ್ಲು ಬೆಟ್ಟದಲ್ಲಿ ವೀರಭದ್ರ(ಉದ್ದಂಡಯ್ಯ) ದೇವಸ್ಥಾನದ ಬಲಕ್ಕೆ ನಿಜಗಲ್ಲು ಮಠದ ಬುಡದಲ್ಲಿರುವ ಬಂಡೆಯ ಮೇಲೆ.

[೨೦೨] ಎ.ಕ-೯, ಅನುಬಂಧ, ನೆ.ತಾ,೧೫೭, ಕ್ರಿ.ಶ.೧೨೮೦, ನಿಜಗಲ್ಲು.

[೨೦೩] ಎ.ಕ-೯, ಅನುಬಂಧ, ನೆ.ತಾ.೧೬೦, ಹಳೇ ನಿಜಗಲ್ಲು.

[೨೦೪] ಎ.ಕ-೯, ನೆ.ತಾ.೧೫೯, ಹಳೇನಿಜಗಲ್ಲು.

ಬಸವೈಯ ಮುಖಾಂತ್ರವಾಗಿ ದೇವಾಲಯ ನಿರ್ಮಿಸಿ, ಗಂಗಾಧರ ಸ್ವಾಮಿಯವರು ಪ್ರತಿಷ್ಠೆ ಮಾಡಿಸಿದರು[೨೦೫]. ತೆಪ್ಪದ ಬೇಗೂರು ನಿಜಗಲ್ಲಿನ ವ್ಯಾಪ್ತಿಗೆ ಒಳಪಟ್ಟಿತ್ತು ಎನ್ನಬಹುದು. ಕ್ರಿ.ಶ.೧೭೬೩ ರಲ್ಲಿ ಆಷಾಡ ಶುದ್ಧ ೩ ರಲ್ಲಿ ಮಹಿಶೂರ ಶ್ರೀ ಕೃಷ್ಣರಾಜ ಒಡೆಯರೈಯ್ಯನವರು ಆಳ್ವಕೆಯಲ್ಲಿ ಚಾವಾಡಿ ವಳಿತವಾದ ಶೂರಗಿರಿ ಸ್ಥಳದ ಕಂಬಾಳು ಹೋಬಳಿಯ ಮಾಚನಹಳ್ಳಿ, ಗೊಟ್ಟಿಗೆರೆಪಾಳ್ಯ, ಕೆರೆಯಹುರ, ಹೆಗ್ಗುಂದ ವಳಿತದ ಅಪ್ಪುಕೊಂಡನಹಳ್ಳಿಯ ಹುಟ್ಟಾವಳಿಯನ್ನು ಶಾನುಭೋಗ ನರಸೈಯನ ಲೆಕ್ಕದಲ್ಲಿ ಸಂಗ್ರಹಿಸುತ್ತಿದ್ದನು[೨೦೬].

ಹೀಗೆ ಕ್ರಿ.ಶ.೧೨೮೮ ರಿಂದ ಸ್ವಾತಂತ್ರ್ಯ ಪೂರ್ವದವರೆಗೆ ಹಲವಾರು ಏಳು–ಬೀಳುಗಳನ್ನು ಕಂಡಿರುವ ಸ್ಥಳವಾದ ನಿಜಗಲ್ಲು ಸುಮಾರು ೧೭–೧೮ ನೇ ಶತಮಾನದಲ್ಲಿ ಧಾರ್ಮಿಕವಾಗಿ, ರಾಜಕೀಯವಾಗಿ ಬೆಳೆದ ಪ್ರದೇಶವು ಇಂದಿಗೆ ಒಂದು ಕುಗ್ರಾಮವಾಗಿ ಮಾತ್ರ ಅಸ್ತಿತ್ವದಲ್ಲಿದೆ.

## ವೆಂಕಟರಮಣ ಸ್ವಾಮಿ ದೇವಾಲಯ

ಹೈದರಾಲಿ ಆಳ್ವಿಕೆಯಲ್ಲಿ ದೊಡ್ಡಬಳ್ಳಾಪುರದಲ್ಲಿ ಅರುಣಾಚಲ ಪಂತರು ವೆಂಕಟರಮಣ ಸ್ವಾಮಿ ದೇವಾಲಯ **(ಚಿತ್ರ ಸಂಖ್ಯೆ-೮೪)** ನಿರ್ಮಿಸಿದರು. ದೂರದಿಂದ ನೋಡಿದರೆ ಮಸೀದಿಯಂತೆ ಕಾಣುವ ಇಸ್ಲಾಮಿಕ್ ಶೈಲಿಯ ದೇವಾಲಯದ ಒಳ, ಹೊರ ಪ್ರಕಾರದಲ್ಲಿ ಪಡಸಾಲೆಯನ್ನು ನಿರ್ಮಿಸಲಾಗಿದೆ.

ದೇವಾಲಯಕ್ಕೆ ಬೇಕಾದ ವಿಗ್ರಹವನ್ನು ಮೈಸೂರಿನಲ್ಲಿ ಲಕ್ಷ್ಮಿ ಪದ್ಮಾವತಿ ಸಮೇತ ವೆಂಕಟರಮಣ ಸ್ವಾಮಿ ಶಿಲಾ ಮೂರ್ತಿಯನ್ನು ಮತ್ತು ಮೂರಡಿ ಎತ್ತರದ ತಾಮ್ರದ ಉತ್ಸವ ಮೂರ್ತಿಗಳನ್ನು ತಯಾರಿಸಲಾಗಿತ್ತು. ಆದರೆ ಹೈದರಾಲಿ ಕಣ್ಣು ತಪ್ಪಿಸಿ ಮೈಸೂರಿನಿಂದ ದೊಡ್ಡಬಳ್ಳಾಪುರಕ್ಕೆ ತರುವುದು ಅಸಾಧ್ಯವಾದ ಕಾರ್ಯವಾಗಿತ್ತು. ಕ್ರಿ.ಶ.೧೭೮೨ ರಲ್ಲಿ ಹೈದರಾಲಿ ಎರಡನೇ ಮೈಸೂರು ಯದ್ಧದಲ್ಲಿ ಆತನಾದಾಗ ಆನೇಕಲ್ಲಿನಲ್ಲಿ ಭಿನ್ನವಾಗದೆ ಇದ್ದ ವೆಂಕಟರಮಣ ಸ್ವಾಮಿಯ ಮೂರ್ತಿಯನ್ನು (ಹಳೇ ದೇಗುಲದ) ತಂದು ಪ್ರತಿಷ್ಠಾಪಿಸಲಾಯಿತು. ಈ ದೇಗುಲಕ್ಕೆ ತಯಾರಿಸಿದ ಮೂರ್ತಿಗಳನ್ನು ಮೈಸೂರಿನ ಶ್ರೀಕೃಷ್ಣಸ್ವಾಮಿ ದೇವಾಲಯದಲ್ಲಿ ಇಡಲಾಗಿದೆ.

ನವರಂಗದಲ್ಲಿ ವಿನಾಯಕ, ಪದ್ಮಾವತಿಯ ಗುಡಿಗಳಿವೆ. ನವರಂಗ ಮುಂಭಾಗದ ಮುಖ ಮಂಟಪದ ಕಂಬಗಳಲ್ಲಿ ದಶಾವತಾರ, ಭಾಗವತಪುರಾಣ ಮೊದಲಾದ ಶಿಲ್ಪಗಳಿವೆ. ದೇವಾಲಯ ನಿರ್ಮಾತೃವಾದ ಅರುಣಾಚಲ ಪಂಥ ದಂಪತಿಗಳ ವಿಗ್ರಹ ಇದೆ. ಭೈರವ, ವೀರಭದ್ರ, ಕಣ್ಣಪ್ಪ ಶಿಲ್ಪಗಳಿವೆ.

---

[೨೦೫] ಎ.ಕ-೯, ನೆ.ತಾ.೪೧, ಕ್ರಿ.ಶ.೧೭೨೦, ಬೇಗೂರು.

[೨೦೬] ಎ.ಕ-೯, ನೆ.ತಾ.೫೧, ಕ್ರಿ.ಶ.೧೭೬೩, ತ್ಯಾಮಗೊಂಡ್ಲು.

ವೆಂಕಟರಮಣ ಸ್ವಾಮಿಯನ್ನು ಸೇವೆಯಾಗಿ ಎರಡು ಬೆಳ್ಳಿ ಚಾಮರಗಳನ್ನು ನೀಡಿದನು[೨೦೭]. ದೊಡ್ಡಬಳ್ಳಾಪುರದ ನಾಗರಕೆರೆಯ ಕೋಡಿಕಟ್ಟೆ, ಮೆಟ್ಟಿಲುಗಳಿಗೆ ಆದಿನಾರಾಯಣ ಸ್ವಾಮಿ ದೇವಾಲಯದ ಕಲ್ಲುಗಳನ್ನು ಬಳಸಿರಬೇಕು. ಅಲಂಕರಣ ಕಂಬದ ತುಂಡುಗಳು, ಮೂಲೆಗಲ್ಲುಗಳು, ಪದ್ಮಪೀಠ, ಬೋದಿಗೆ ಕಲ್ಲುಗಳು, ದಶಾವತಾರದ ಭಗ್ನಗೊಂಡ ಶಿಲ್ಪ ಇತ್ಯಾದಿಗಳು ಕಾಣಿಸುತ್ತದೆ. ಕೆರೆ ಏರಿ ಮೇಲಿರುವ ಸ್ತಂಭವು ಆದಿನಾರಾಯಣ ದೇವಾಲಯದ ಸ್ತಂಭವೇ ಕೃಷ್ಣ ದೇವರಾಯನ ಕಾಲದಲ್ಲಿ ನಿರ್ಮಾಣವಾಗಿರಬೇಕು.

ಕೆರೆಯ ಮೆಟ್ಟಿಲುಗಳಲ್ಲಿ ಸೀತೆಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮೆರೆವಣಿಗೆ ಹೋಗುತ್ತಿರುವ ರಾಮಾಯಣಕ್ಕೆ ಸಂಬಂಧಿಸಿದಂತೆ, ಕುಳಿತ ಭಂಗಿಯ ಸಿಂಹ, ಗಣೇಶನಿಗೆ ಕೈ ಮುಗಿಯುತ್ತಿರುವ ಪುರೋಹಿತ, ಗಣೇಶ, ಶಿವಲಿಂಗವಿಗೆ, ಶಿವಲಿಂಗದ ಮೇಲೆ ಆದಿಶೇಷನು ಹೆಡೆ ಬಿಚ್ಚಿರುವನು. ಎರಡು ಕಲಶಗಳ ನಡುವೆ ಶಿವಲಿಂಗದ ಜೊತೆಗೆ ಕಂಬಗಳಲ್ಲಿ, ಬೋದಿಗೆಗಳು, ದ್ವಾರಪಾಲಕರಿರುವ ಕಂಬಗಳು, ಲಲಾಟ ಬಿಂಬಗಳು ಒಡೆದ ಶಿಲ್ಪಗಳು ಅನಾಥವಾಗಿ ಬಿದ್ದಿದೆ.

ನಾಗನಕೆರೆ ಏರಿಯ ಮೇಲೆ ನೂತನವಾಗಿ ನಿರ್ಮಾಣವಾಗಿರುವ ಆಂಜನೇಯ ದೇವಾಲಯದಲ್ಲಿನ ಕಂಬಗಳು ಬಹುಶಃ ಆದಿನಾರಾಯಣ ದೇವಾಲಯದ ನವರಂಗದಲ್ಲಿನ ಕಂಬಗಳೇ ಆಗಿರಬೇಕು. ಇಲ್ಲಿರುವ ೧೦ ಕಂಬಗಳು ಚೌಕಾಕಾರದ ಪೀಠ, ಪುಷ್ಪ ಬೋದಿಗಳಿಗೆ ಕ್ರಮ ಬದ್ಧವಾಗಿ ಚೌಕ, ಅಷ್ಟ, ಚೌಕ, ಅಷ್ಟ, ಚೌಕ ಶೈಲಿಯಲ್ಲಿದೆ. ಚೌಕಾಕಾರವಾದ ಪೀಠದ ನಾಲ್ಕು ಮುಖಗಳಲ್ಲಿ ಶಿಲ್ಪಗಳಿವೆ. ಪಾದದ ಮೇಲಿನ ಅಷ್ಟ ಭುಜಾಕೃತಿಯ ಮಧ್ಯ ಪಟ್ಟದಲ್ಲಿ ಶಿಲ್ಪಗಳಿದ್ದು, ಬೋದಿಗೆಯ ಮೇಲ್ಭಾಗವು ಕಮಲದಳಗಳಂತೆ, ತುದಿಯಲ್ಲಿ ಕಮಲದ ಮೊಗ್ಗಿನ ಅಲಂಕರಣೆಗಳಿರುವ ಈ ಕಂಬವನ್ನು ಪುಷ್ಪ ಪೋತಿಕಾ ಎಂದು ಕರೆಯುವರು. ಕಂಬದ ಚತುರ್ಮುಖಗಳಲ್ಲಿ ಧಾರ್ಮಿಕ, ಸಾಮಾಜಿಕ, ವಸ್ತುಗಳನ್ನೊಳಗೊಂಡ ಕಿರು ಗಾತ್ರದ ಉಬ್ಬು ಶಿಲ್ಪಗಳಿವೆ. ಕಂಬಗಳಲ್ಲಿನ ಬಹಳಷ್ಟು ಶಿಲ್ಪಗಳು ವೈಷ್ಣವ, ಶೈವ ಪರಂಪರೆಗೆ ಸಂಬಂಧಿಸಿದಾಗಿದೆ. ನಾಗಬಂಧ, ಪೂರ್ಣಬಂಧ, ನಾನಾ ಬಗೆಯ ಅರಳಿದ ಹೂವುಗಳು, ಹನುಮಂತ ಬಾಯಲ್ಲಿ ಲತೆಯನ್ನು ಹಿಡಿದಿರುವ ಹಂಸ, ನಂದಿ ಸಿಂಹ, ಶಿವಲಿಂಗ, ನರ್ತಕ-ನರ್ತಕಿಯರು, ವಾದ್ಯಗಾರರು, ಅರ್ಧಚಂದ್ರ ವೇಣುಗೋಪಾಲ, ಗಣೇಶ, ರಾಮ, ಭೈರವ, ಆಳ್ವಾರರು. ಶ್ರೀ ವೈಷ್ಣವ ಸಂಕೇತಗಳಾದ ಶಂಖ, ಚಕ್ರ, ಪೌರಾಣಿಕ ಪ್ರಾಣಿಗಳಾದ ಅರೆಸಿಂಹ, ಯಾಳಿ, ಅರೆಮಾನವ, ಕಿನ್ನರ, ಕಿನ್ನರಿಯರು, ಒಬ್ಬ ವ್ಯಕ್ತಿಯು ತಮಟೆ ಬಾರಿಸುತ್ತಿರುವ ಶೈಲಿ, ಬಿಟ್ಟಿರುವ

[೨೦೭] ಎ.ಕ-೯, ಅನುಬಂಧ, ದೊ.ತಾ.೭೩, ದೊಡ್ಡ ಬಳ್ಳಾಪುರ ಗ್ರಾಮದಲ್ಲಿ ಶ್ರೀವೆಂಕಟರಮಣ ಸ್ವಾಮಿ ದೇವಸ್ಥಾನದಲ್ಲಿ ಎರಡು ಬೆಳ್ಳಿ ಚಾಮರಗಳ ಹಿಡಿಗಳ ಮೇಲೆ.

ಉದ್ದನೆಯ ಗಡ್ಡ, ಟೋಪಿ ವಿನ್ಯಾಸಗಳು, ನರ್ತಕನೊಬ್ಬನು ವಿಶ್ರಾಂತಿಯಲ್ಲಿ ಕುಳಿತಿರುವ ಶಿಲ್ಪ, ಕೇಶ ವಿನ್ಯಾಸ, ಯೋಗಾಸನ ಹಲವು ಭಂಗಿಗಳನ್ನು ಕಾಣಬಹುದು.

## ದೊಡ್ಡಬಳ್ಳಾಪುರದ ಆಂಜನೇಯ

ಕಛೇರಿ ಆವರಣದಲ್ಲಿರುವ ಆಂಜನೇಯ ಗುಡಿಯಲ್ಲಿ ಅಷ್ಟಭುಜೆಯ ಮಹಿಷಮರ್ಧಿನಿ, ಚತುರ್ಭುಜೆಯಾದ ದುರ್ಗಶಿಲ್ಪ ಚಾಮುಂಡಿ, ಭೈರವ, ಗಣಪತಿ, ಬಸವ, ಆನೆಯ ಸೊಂಡಿಲುಳ್ಳ ಹಂಸ, ಕುಳಿತ ಸಿಂಹ, ಕಮಲದ ಹೂ, ಮದಗಜ, ಗಿಳಿಗಳು, ಯತಿ ಮುಂತಾದ ಉಬ್ಬು ಶಿಲ್ಪಗಳನ್ನು ಕಾಣಬಹುದು. ನಾಲ್ಕು ಕಂಬಗಳು, ಗಣಪತಿ ಮೂರ್ತಿಯು ಗಂಗರ ಕಾಲಕ್ಕೆ ಸೇರಿದ್ದಾಗಿದೆ. ಶಿಲ್ಪಗಳಿಗೆ ಬಣ್ಣ ಬಳಿದಿರುವುದರಿಂದ ಗುರುತಿಸಲು ಕಷ್ಟ ಸಾಧ್ಯ ಬಹುಶಃ ಇವುಗಳೆಲ್ಲಾ ಬೇರೆ ಯಾವುದೇ ದೇವಾಲಯದಲ್ಲಿನ ಶಿಲ್ಪಗಳಾಗಿದ್ದು ಇಲ್ಲಿಗೆ ತಂದು ಇಡಲಾಗಿದೆ.

## ನಂದಗುಡಿಯ ಅಮೃತಮಲ್ಲಿಕಾರ್ಜುನ ದೇವಾಲಯ

ಪೂರ್ವಾಭಿಮುಖವಾಗಿರುವ ಅಮೃತಮಲ್ಲಿಕಾರ್ಜುನ ದೇವಾಲಯವನ್ನು ಹೊಸದಾಗಿ ಜೀರ್ಣೋದ್ಧಾರ ಮಾಡಿದ ಮೇಲೆ ಪ್ರಾಚೀನ ಲಕ್ಷಣಗಳೇನು ಕಂಡು ಬರುವುದಿಲ್ಲ. ವೀರ ಸದಾಶಿವ ಮಹಾರಾಯರು ಪೃಥ್ವೀ ರಾಜ್ಯಗೆಯ್ಯುತ್ತಿರಲು ಮಹಾಮಂಡಳೇಶ್ವರ ರಾಮರಾಯ ತಿರುಮಲ ರಾಜ ಮಹಾ ಆರಸುಗಳ ಕಾರ್ಯಕ್ಕೆ ಕರ್ತರಾದ ಸುಗುಟೂರು ತಮ್ಮಪ್ಪ ಗೌಡ ಅಯ್ಯನು ತಮ್ಮ ತಂದೆ, ತಾಯಿ ಗುರು ದೈವಕ್ಕೆ ಪುಣ್ಯವಾಗಬೇಕೆಂದು ಸುವರ್ಣಾದಾಯ, ಭತ್ತಾದಾಯವನ್ನು ನಂಜಗುಳಿಯ ಅಮೃತ ಮಲ್ಲಿಕಾರ್ಜುನ ಲಿಂಗದ ಅಮೃತಪಡಿ, ನೈವೇದ್ಯಕ್ಕೆ ಸ್ಥಾನಿಕ ಅಪ್ಪಾಜಿಗೆ ಪೂಜೆಯನ್ನು ಸಮರ್ಪಿಸಿಕೊಂಡು ಇರಲು ಕೊಟ್ಟ ದಾನವನ್ನು ದೇವಾಲಯದ ಮುಂದಿನ ಕಲ್ಲಿನ ಮೇಲೆ ಕಾಣಬಹುದು[೨೦೮]. ಕ್ರಿ.ಶ.೧೫೫೯ ನೇಯ ಸಿಧಾರ್ತಿ ಸಂವತ್ಸರದ ಶ್ರಾವಣ ಶು ೫ ಲೂ ಸದಾಶಿವರಾಯ ಮಹಾರಾಯರ ಆಳ್ವಿಕೆಯಲ್ಲಿ ತಮ್ಮ ತಂದೆ, ತಾಯಿಗೆ ಪುಣ್ಯವಾಗ ಬೇಕೆಂದು ಅಮೃತ ಮಲ್ಲಿಕಾರ್ಜುನ ದೇವಾಲಯಕ್ಕೆ ನಂಜಗುಳಿಯ ವಿಟ್ಟಸಂದ್ರ ಗ್ರಾಮವನ್ನು[೨೦೯] ನೀಡಿದ್ದರು.

## ಬೊಮ್ಮವಾರದ ಸುಂದರೇಶ್ವರ ದೇವಾಲಯ

ಪಾಳೇಯಗಾರರ ವಂಶಸ್ಥರಲೊಬ್ಬರಾದ ದಯಾಳು ಬಚ್ಚೇಗೌಡ ಎಂಬುವರು ಒಂದು ದೊಡ್ಡ ಶಿವಾಲಯವನ್ನು ನಿರ್ಮಿಸಿದನು. ಕಾರಣಾಂತರಗಳಿಂದ ಶಿವಲಿಂಗ ಪ್ರತಿಷ್ಠೆಯಾಗದೇ ಹಾಗೆಯೇ ಉಳಿದಿದ್ದು, ಭೂ ಸಂಶೋಧನೆ ಮಾಡುವಾಗ ೧೦ ಅಡಿ ಎತ್ತರ ಶಿವಲಿಂಗವು ದೇವನಹಳ್ಳಿ ಸಿಹಿ ನೀರಿನ

[೨೦೮] ಎ.ಕ-೯, ಹೊ.ತಾ,೧, ಕ್ರಿ.ಶ.೧೫೫೯, ನಂದಗುಡಿಗೆ ಪಶ್ಚಿಮ ಮಲ್ಲೇಶ್ವರ ದೇವಾಲಯದ ಮುಂದೆ ನೆಟ್ಟ ಕಲ್ಲು.

[೨೦೯] ಎ.ಕ-೯, ಹೊ.ತಾ.೨, ಕ್ರಿ.ಶ.೧೫೫೯, ನಂದಗುಡಿಗೆ ಪಶ್ಚಿಮ ಮಲ್ಲೇಶ್ವರ ದೇವಾಲಯದ ಆಗ್ನೇಯದಲ್ಲಿ ನೆಟ್ಟ ಕಲ್ಲು.

ಕೆರೆಯ ಒಂದು ಭಾಗದಲ್ಲಿ ಸಿಕ್ಕಿದ್ದನು ಭಕ್ತರು ತಂದು ಈ ಶಿವ ದೇವಾಲಯದಲ್ಲಿ ಪ್ರತಿಷ್ಠಾಪಿಸಿದರು. ಈ ಶಿವಲಿಂಗವು ತುಂಬ ಹೊಳಪಾಗಿ ಸುಂದರವಾಗಿದ್ದರಿಂದ ಸುಂದರೇಶ್ವರನೆಂದು ಕರೆಯುತ್ತಾರೆ.

## ನಲ್ಲೂರಿನ ಶ್ರೀ ಚನ್ನಕೇಶವ ದೇವಾಲಯ

ದೇವನಹಳ್ಳಿಯಿಂದ ಸೂಲಿಬೆಲೆ ಮಾರ್ಗದಲ್ಲಿ ಸುಮಾರು ೧೦ ಕಿ.ಮಿ. ಅಂತರದಲ್ಲಿ ಸಿಗುವ ನಲ್ಲೂರು ಗ್ರಾಮದ ೫೪ ಎಕರೆಗಳ ವಿಸ್ತೀರ್ಣದಲ್ಲಿ ಹುಣಸೇತೋಪು ವ್ಯಾಪಿಸಿದ್ದು, ಈ ಪಾರಂಪರಿಕ ವೃಕ್ಷ ಸಮೂಹ ದೇವಬನ ಎಂದೇ ಜನಮಾನಸದಲ್ಲಿ ಈಗಲೂ ಉಳಿದುಕೊಂಡಿದೆ. ಈ ನಂಬಿಕೆಗೆ ಪೂರಕವಾಗಿಯೇ ಶ್ರೀ ಗಂಗಾದೇವಿ ಮತ್ತು ಶ್ರೀ ಚನ್ನಕೇಶವ ದೇವಾಲಯಗಳನ್ನು ಇಲ್ಲಿ ನಿರ್ಮಿಸಲಾಗಿದ್ದು, ಈ ಪಾರಂಪರಿಕ ಕ್ಷೇತ್ರವು ಕಾಲಾನಂತರ ನಿರ್ವಹಣೆಯ ಲೋಪದಿಂದಾಗಿ ಶಿಥಿಲಾವಸ್ಥೆಗೆ ಒಳಗಾಗಿದ್ದ ಈ ದೇವಾಲಯಗಳ ಪೈಕಿ ಶ್ರೀ ಗಂಗಾದೇವಿ ದೇವಾಲಯವನ್ನು ಇತ್ತೀಚೆಗಷ್ಟೆ ದಿನಾಂಕ ೩೦.೫.೨೦೦೪ ರಂದು ಜೀರ್ಣೋದ್ಧಾರಗೊಳಿಸಲಾತಿತ್ತು. ಆದರೆ ಶಿಲ್ಪಿಗಳ ಕಲಾನೈಪುಣ್ಯತೆಯಿಂದಾಗಿ ಅದ್ಭೂತವಾಗಿ ಸಿಂಗರಿಸಿಕೊಂಡು ಒಂದು ಕಾಲದಲ್ಲಿ ಭಕ್ತರ ಕಣ್ಣನನ್ನು ತಣಿಸುತ್ತಿದ್ದ ಶ್ರೀ ಚನ್ನಕೇಶವ ದೇವಾಲಯ ಮಾತ್ರ ಪಾಳು ಬಿದ್ದಿದ್ದು ನಮ್ಮ ವ್ಯವಸ್ಥೆಯ ದಿವ್ಯ ನಿರ್ಲಕ್ಷದ ಮೂಕ ಸಾಕ್ಷಿಯಾಗಿ ಉಳಿದುಕೊಂಡಿದೆ. ದುರಂತವೆಂದರೆ, ನಿಧಿಗಳ್ಳರ ಆಸೆ ಬುರುಕತನದಿಂದಾಗಿ ಚನ್ನಕೇಶವ ಮೂರ್ತಿಯೇ ಮಂಗಮಾಯವಾಗಿದ್ದು, ಜೊತೆಗೆ ದೇವಾಲಯದ ಛಾವಣಿ ಮತ್ತು ಮುಂಭಾಗದ ಗೋಡೆ ಕೂಡ ಕುಸಿದು ಬಿದ್ದಿದೆ. ಆಯತಾಕಾರದಲ್ಲಿ ನಿರ್ಮಿಸಲಾಗಿರುವ ನೋಡಲು ಕಿರಿದಾಗಿದ್ದರೂ ಶ್ರೀ ಚನ್ನಕೇಶವ ದೇವಾಲಯದ ನಿರ್ಮಾಣ ಕೈಂಕರ್ಯದಲ್ಲಿ ಶಿಲ್ಪಿಗಳು ಹೆಚ್ಚು ಶ್ರದ್ಧೆ ಮತ್ತು ನೈಪುಣ್ಯತೆಯನ್ನು ಮೆರೆದಿರುವುದು ಮೊದಲ ನೋಟದಲ್ಲೇ ಗಮನ ಸೆಳೆಯುತ್ತದೆ. ನಾಜೂಕಾಗಿ ಕಡೆದು ಹಾಸಿರುವ ೨ ಅಡಿ ಎತ್ತರದ ಕಲ್ಲಿನ ಮೇಲೆ ದೇವಾಲಯವನ್ನು ನಿರ್ಮಿಸಲಾಗಿದ್ದು, ಹೊರಭಿತ್ತಿಯಲ್ಲಿ ರೂಪಿಸಲಾಗಿರುವ ಅರೆಗಂಬಗಳು ಮತ್ತು ಅವುಗಳ ಜೋಡಿ ಬೋದಿಗೆಗಳ ಜೋಡಣೆ ದೇವಾಲಯದ ಸೊಬಗನ್ನು ಇಮ್ಮಡಿ ಗೊಳಿಸಲು ಕಾರಣವಾಗಿದೆ. ಅಲ್ಲದೆ ಈ ದೇಲಾಯದ ಹೊರಭಿತ್ತಿಯ ಇಕ್ಕೆಲಗಳಲ್ಲಿ ತಲಾ ಎರಡು ಮತ್ತು ಹಿಂಭಾಗದಲ್ಲಿ ಒಂದು ಸೇರಿದಂತೆ, ಐದು ದೇವಕೋಷ್ಟಕಗಳನ್ನು ನಿರ್ಮಿಸಲಾಗಿದೆ.

ಈ ದೇವಾಲಯದ ಮತ್ತೊಂದು ವಿಶೇಷ ಆಕರ್ಷಣೆಯೆಂದರೆ ಹೊರಭಿತ್ತಿಯ ಮೇಲಿನ ಉಬ್ಬುಶಿಲ್ಪಗಳು, ದೇವನಹಳ್ಳಿಯ ಕೋಟೆ ವೇಣುಗೋಪಾಲಸ್ವಾಮಿ, ಶಿವಗಂಗೆಯ ಕಲ್ಯಾಣಿಯ ಭಿತ್ತಿ ಮೇಲೆ ಮತ್ತು ಆವತಿಯ ತಿಮ್ಮರಾಯಸ್ವಾಮಿ ದೇವಾಲಯಗಳ ಹೊರಭಿತ್ತಿಗಳ ಮೇಲೆ ಮೂಡಿಸಿರುವ ರಾಮಾಯಣ ಮತ್ತು ಬಾಲಕೃಷ್ಣನ ವಿವಿಧ ಲೀಲೆಗಳಂತೆ ಇಲ್ಲಿಯೂ ನಂದಗೋಪನ ವಿವಿಧ ಲೀಲೆಗಳು

ನಮ್ಮ ಕಣ್ಮನಗಳನ್ನು ಸೆಳೆಯುತ್ತದೆ. ಗೋಪಿಕೆಯರ ಓಕುಳಿಯೂಟ, ಮುರಳೀಕೃಷ್ಣನ ನಾಟ್ಯಭಂಗಿ, ಗೋಪಿಕೆಯರ ವಸ್ತ್ರಾಪಹರಣ, ಕಾಳಿಂಗ ಮರ್ಧನ, ಧೇನುಕಾಸುರ ಸಂಹಾರ, ಯಶೋಧೆ ಕೃಷ್ಣನನ್ನು ಒರಳು ಕಲ್ಲಿಗೆ ಕಟ್ಟಿ ಹಾಕಿರುವುದು, ನವನೀತ ಸವಿಯುತ್ತಿರುವುದು, ಸಂತಸದಿಂದ ನಾಟ್ಯ ಪರವಶನಾಗಿರುವುದು ಮುಂತಾದ ಉಬ್ಬು ಶಿಲ್ಪಗಳು ಭಾಗವತ ಕಥನವನ್ನು ನೆನಪಿಸುವ ಮೂಲಕ ಗಮನ ಸೆಳೆಯುತ್ತವೆ. ಈ ಉಬ್ಬು ಶಿಲ್ಪಗಳ ಪರಿಪೂರ್ಣತೆ ಮತ್ತು ಅಲಂಕಾರ ನೋಡುಗರನ್ನು ಮಂತ್ರ ಮುಗ್ಧಗೊಳಿಸುತ್ತವೆ. ನಲ್ಲೂರು ನಾಡಲ್ಲಿ ಹಿಂದೆ ಹಲವಾರು ಪಾಳೇಗಾರರು ಆಡಳಿತ ನಡೆಸಿದ್ದಾರೆ. ಈ ಪರಂಪರೆಯ ಕೊನೆಯ ಪಾಳೆಯಗಾರನಾದ ಚೌಡರಾಯನ ಕಾಲದಲ್ಲಿ ದೇವನಹಳ್ಳಿ ಪ್ರಾಂತದ ಪಾಳೇಗಾರನ ಜೊತೆ ಮನಸ್ಥಾಪವಾಗಿ ದೇವನಹಳ್ಳಿ ಕೆರೆಯಿಂದ ಸರಬರಾಜು ಆಗುತ್ತಿದ್ದ ಕುಡಿಯುವ ನೀರನ್ನು ಸ್ಥಗಿತಗೊಳಿಸಿದ್ದರಿಂದ ನಲ್ಲೂರು ಪಾಳೆಗಾರಿಕೆಯ ಅವನತಿಗೆ ಕಾರಣವಾಯಿತು ಎಂಬ ಪ್ರತೀತವಿದೆ. ನಲ್ಲೂರು ಪಟ್ಟಣದ ಮಧ್ಯಭಾಗದಲ್ಲಿ ಅಂದರೆ ಈಗ ಹುಣಸೇ ತೋಪು ಇರುವ ಕಡೆಯಲ್ಲಿ ಶ್ರೀ ಚನ್ನರಾಯಸ್ವಾಮಿ, ಶ್ರೀ ಗೋಪಾಲಕೃಷ್ಣ ಮತ್ತು ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳನ್ನು ಕ್ರಿ.ಶ.೧೩೮೭ರಲ್ಲಿ ಸಣ್ಣನಾಯಕರ ಮಗ ಚಿಕ್ಕಂಕಯ್ಯ ನಾಯಕ ಕಟ್ಟಿಸಲಾಗಿದ್ದು, ತದ ನಂತರ ಕ್ರಿ.ಶ.೧೮೦೧ ರಲ್ಲಿ ಮಾರಪ್ಪನಾಯಕ ದೇವಾಲಯದ ಸುತ್ತಲು ಸುಂದರವಾದ ಭಿತ್ತಿ ನಿರ್ಮಾಣಕ್ಕೆ ಕಾರಣನಾದ ಎಂಬ ಪ್ರತೀತಿಯೂ ಚಾಲ್ತಿಯಲ್ಲಿದೆ.

ಮತ್ತೊಂದು ಐತಿಹ್ಯದ ಪ್ರಕಾರ ಈ ಗುಡಿಯನ್ನು ಚೋಳರ ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಲಾಗುತ್ತಿದೆ. ಆದರೆ ಶೈವಭಕ್ತರಾದ ಚೋಳರ ಆಳ್ವಿಕೆಯು ಕ್ರಿ.ಶ೯೮೫ ರಿಂದ ಕ್ರಿ.ಶ೧೧೭೩ ರವರೆಗೆ ಮಾತ್ರ ನಡೆದಿದ್ದಿತು ಹೀಗಾಗಿ ಅವರ ಆಳ್ವಿಕೆ ಕಾಲದಲ್ಲಿ ಈ ವೈಷ್ಣವ ದೇವಾಲಯ ನಿರ್ಮಾಣವಾಗಿರುವ ಸಾಧ್ಯತೆ ತೀರ ಕಡಿಮೆ. ಇದರ ರಚನಾ ಶೈಲಿ ಮತ್ತು ಗಾತ್ರವನ್ನು ಗಮನಿಸಿದಾಗ ಈ ಭಾಗದಲ್ಲಿ ಆಡಳಿತ ನಡೆಸಿದ ಪಾಳೆಯಗಾರರೇ ಇದರ ನಿರ್ಮಾಪಕರ್ತರು ಎಂದು ನಿರ್ಧರಿಸ ಬಹುದಾಗಿರುತ್ತದೆ. ಈ ಬಗ್ಗೆ ಲಭ್ಯ ಶಾಸನಗಳ ಪಾಠವನ್ನು ಪರಿಶೀಲಿಸಿ ಖಚಿತ ನಿಲುವನ್ನು ತಾಳುವುದು ಮುಖ್ಯ. ಆದರೆ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನಗಳು ಇನ್ನು ಲಭ್ಯವಾಗಿಲ್ಲ ಎಂಬುದೇ ಬೇಸರದ ಸಂಗತಿ. ಇಂಥ ಸುಂದರ ದೇವಾಲಯವೊಂದು ಹುಣಸೇ ತೋಪಿನ ಒಡಲಲ್ಲಿ ಪಾಳು ಬಿದ್ದಿರುವುದು ನಮ್ಮ ಪರಂಪರೆಯತ್ತ ನಾವು ತಳೆದಿರುವ ಧಿವ್ಯ ನಿರ್ಲಕ್ಷತೆಗೆ ಮೂಕ ಸಾಕ್ಷಿಯಾಗಿದೆ.

ನಲ್ಲೂರ ರಾಮಸ್ವಾಮಿ ದೇವಸ್ಥಾನದ ಗರುಡ ಕಂಬದ ಬಳಿ ೧ನೇ ಕಲ್ಲಿನಲ್ಲಿ ಕಲಿಯುಗ ಸಂವತ್ಸರದೊಳಗಣ ಶ್ರಾವಣ ಶು ೧ ಗುರುವಾರದಲ್ಲಿ ತಿರುಮಲೆನಾಥನ ಶ್ರೀ ಪಾದಕ್ಕೆ ಪೆರುಮಾಳ ಸೆಟ್ಟಿಯರ ಮಗ ಮಾರಪನು ಮಾಡಿಸಿದ ತೊತ್ತು ಕೆಲಸ, ಪ್ರತಿಷ್ಠೆಯನ್ನು ಮಾಡಿದ ಆಚಾರಿ ಓಜನು[೨೧೦]. ೨ನೇ ಕಲ್ಲಿನಲ್ಲಿ ದುತಿಯ ಆಷಾಢ ಶು ೧ ಗುರುವಾರ ಸಾಮಂತಾಧಿಪತಿ ಸೊಂಣಯನಾಯಕರ ಕುಮಾರ ಚಿಕ್ಕ ಅಂಕಿಯ ನಾಯಕರು ತಿರುಮಲೆ ನಾಡ ದೇವರಿಗೆ ಪ್ರತ್ಯರ್ಥವಾಗಿ ದೀಪಮಾಲೆಯ ಕಂಬವನ್ನು ಪೊನ್ನಳೆಯ ಮಗ ಒಡೆಯಪ್ಪನ ಕೈಯಲ್ಲಿ ಮಾಡಿಸಿದನು[೨೧೧].

## ಸೂಲಿಬೆಲೆಯ ಕಾಶಿವಿಶ್ವೇಶ್ವರ ದೇವಾಲಯ

ಸೂಲಿಬೆಲೆಯ ಕಾಶಿ ವಿಶ್ವೇಶ್ವರ ಮತ್ತು ಪ್ರಸನ್ನ ಪರಮೇಶ್ವರ ದೇವಾಲಯಗಳು ಸುಗಟೂರು ವಂಶಸ್ಥರ ಕಾಲದಲ್ಲಿ ನಿರ್ಮಾಣಗೊಂಡು ಈ ಗ್ರಾಮವು ಶಿವಕ್ಷೇತ್ರವಾಗಿತ್ತು, ಸೂಲಿಬೆಲೆ ಎಂಬುದಕ್ಕೆ ಶಿವನ–ಬೇಲಿ ಎಂಬುದಾಗಿ ವಿವರಣೆ ನೀಡುತ್ತಾರೆ, ಶೂಲಿ–ಶಿವ, ಬೇಲಿ–ಬೆಲೆ ಎಂಬುದು ನಿಂತರದಲ್ಲಿ ಸೂಲಿಬೆಲೆಯಾಗಿ ಪರಿವರ್ತನೆಗೊಂಡಿದೆ ಎನ್ನುವರು. ಇಲ್ಲಿನ ಕಾಶಿ ವಿಶ್ವೇಶ್ವರ ದೇವಾಲಯದಲ್ಲಿನ ಶಿವ ಲಿಂಗವನ್ನು ಕಾಶಿ ಸುಬ್ಬಣ್ಣನವರು ವಾರಣಾಸಿಯಿಂದ ತಂದು ಪ್ರತಿಷ್ಠಾಪಿಸಿದ್ದರಿಂದ ಕಾಶಿ ವಿಶ್ವೇಶ್ವರ ಎಂಬುದಾಗಿ ಕರೆಯುತ್ತಾರೆ. ಕಾಲ್ಪನಿಕವಾಗಿಯು ಇಂತಹ ಕಥೆಗಳನ್ನು ಪೂರ್ವಿಕರು ಶಿವಶರಣರಾದ ಮರಿಸ್ವಾಮಿ ಎಂಬುವರ ಗದ್ದುಗೆಯು ಇದ್ದುದಾಗಿ ತಿಳಿದು ಬರುತ್ತದೆ. ಆದರೆ ಈಗ ಆ ಸ್ಥಳದಲ್ಲಿ ಅದರ ಅವಶೇಷಗಳೂ ಕಂಡು ಬರುವುಲ್ಲ. ಈ ಎಲ್ಲ ಅಂಶಗಳನ್ನು ಗಮನಿಸಿದರೆ ಬಹುಶಃ ಸೂಲಿಬೆಲೆಯು ಶೈವಭಕ್ತರ, ಶರಣರ ತಾಣವಾಗಿದ್ದಿರಬಹುದು ಎಂದು ಊಹಿಸಿಲಿಕ್ಕೆ ಸಾಧ್ಯವಿದೆ.

## ಹೊಸಕೋಟೆಯ ಅವಿಮುಕ್ತೇಶ್ವರ ಸ್ವಾಮಿ

ಪೂರ್ವಾಭಿಮುಖವಾಗಿರುವ ದೇವಾಲಯದಲ್ಲಿ ೩ ಗರ್ಭಗೃಹಗಳಿದ್ದು, ಶಿವ, ಸುಬ್ರಮಣ್ಯ, ಪಾರ್ವತಿಯರ ವಿಗ್ರಹಗಳನ್ನು ೩ ಪ್ರತ್ಯೇಕ ಗರ್ಭಗುಡಿಯಲ್ಲಿ ಕಾಣಬಹುದು. ಶಿವನನ್ನೇ ಅವಿಮುಕ್ತೇಶ್ವರ ಎಂದು ಕರೆಯಲಾಗುವುದು. ಗರ್ಭಗುಡಿಯ ಎದುರಿನ ಆಲಯವು ೧೬ ಕಂಬಗಳಿಂದ ಕೂಡಿದ್ದು ಪ್ರತಿಯೊಂದು ಕಂಬದ ಮೇಲೆ ಶಿವನಿಗೆ ಸಂಬಂಧಿಸಿದ ಉಬ್ಬುಶಿಲ್ಪಗಳನ್ನು ಕಾಣಬಹುದು. ಮುಖಮಂಟಪದಲ್ಲಿ ೧೨ ಕಂಬಗಳಿವೆ.

---

[೨೧೦] ಎ.ಕ-೯, ದೇ.ತಾ.೩೯, ಕ್ರಿ.ಶ.೧೪೦೧, ನಲ್ಲೂರು.
[೨೧೧] ಎ.ಕ-೯, ದೇ.ತಾ.೪೦, ಕ್ರಿ.ಶ.೧೩೮೬, ನಲ್ಲೂರು.

ಈ ಅವಿಮುಕ್ತೇಶ್ವರ ಸ್ವಾಮಿ ಉತ್ಸವ ವಿಗ್ರಹದ ಮೇಲೆ[೨೧೨], ಅಮ್ಮನವರ ಪೀಠದಲ್ಲಿ[೨೧೩], ಕ್ರಿ.ಶ.೧೭೭೧ ರಲ್ಲಿ ಫಾಲ್ಗುಣ ಬಹುಳ ೧೦ ರಲ್ಲಿ ಬಾರಾಮಾರ್ಗದ ವೀರತ್ಯೈಯ ಶೆಟ್ಟರು, ಹನಿಕೆ ಚೆನ್ನದೇವರು, ಬಿಗದೇವನಹಳ್ಳಿ ನಿರಂಜನಯ್ಯ ಮೊದಲಾದ ೫೬ ದೇಶದ ಬಾರಾಮಾರ್ಗದವರು ದೇವತಾ ಶ್ಯಾವೆ, ಪಡಿತರ ದೀಪಾರಾಧನೆ ಮುಂತಾದ ವಿನಿಯೋಗದ ನಿಮಿತ್ಯವಾಗಿ ಹೊಸಕೋಟೆ ಪೇಟೆಗೆ ಬರುವ ಪದಾರ್ಥಗಳ ಮೇಲಿನ ತೆರಿಗೆಯನ್ನು ನೀಡುವ ವಿವರವನ್ನು ವಿಠಲ ದೇವಸ್ಥಾನದ ಅರ್ಚಕರ ಬಳಿ ಇದ್ದು[೨೧೪]. ಬಹುಶಃ ವಿಠಲ ದೇವಸ್ಥಾನಕ್ಕೆ ಕೊಟ್ಟಿರುವ ದಾನ ಇರಬೇಕು. ನಂತರದ ವರ್ಷದಲ್ಲಿ ಪಾಂಡುರಂಗ ವಿಠಲೇಶ್ವರ ಸ್ವಾಮಿ, ಶ್ರೀ ವೇಣುಗೋಪಾಲ ಸ್ವಾಮಿಗೆ ನಂದನ ನಾಮ ಸಂವತ್ಸರದ ಚೈತ್ರ ಶುದ್ಧ ಸ್ಥಿರವಾರ ದಿವಸ ಹೊಸಕೋಟೆಯ ವ್ಯಾಪಾರಿಗಳು, ವರ್ತಕರು, ಶೆಟ್ಟಿಯರು, ಕುಲಕರ್ಣಿ ಮುಂತಾದವರು ಶ್ರೀಮಂತ ಸುಬೇಧಾರ ರಘುನಾಥಬಾವಾಜಿಯವರು ಹೊಸಕೋಟೆ ಕಿಲ್ಲೆಯೊಳಗೆ ನೂತನವಾಗಿ ದೇವಸ್ಥಾನ ಕಟ್ಟಿಸಿ ಪಡಿತರ, ದೀಪಾರಾಧನೆಗಳಿಗೆ ಗಾಣ, ದನ, ಕುರಿ, ಕುದುರೆ ತೆರಿಗೆಗಳನ್ನು ನೀಡುವುದಕ್ಕೆ ಎಲ್ಲಾರು ಒಪ್ಪಿ ಬರೆಸಿ ಕೊಟ್ಟ ದಾನ ಪತ್ರದ ಶಾಸನ[೨೧೫]. ವೈಶಾಖ ಶುದ್ಧ ಪೌರ್ಣಮಿಯ ದಿನದಂದು ಅಮೃತೇಶ್ವರ ದ್ರೌಪದಿ ಅಮ್ಮನ ಕರಗದ ಉತ್ಸವಗಳು, ಪ್ರತಿ ವರ್ಷ ಚೈತ್ರ ಮಾಸದಲ್ಲಿ ವಾಗಟ ಗ್ರಾಮದ ವರದರಾಜ ಸ್ವಾಮಿಯ ರಥೋತ್ಸವ, ಕಲ್ಕುಂಟೆ ಅಗ್ರಹಾರದ ರಂಗನಾಥ ಸ್ವಾಮಿಯ ರಥೋತ್ಸವ, ಉಪ್ಪಾರಹಳ್ಳಿಯ ಮದ್ದೂರಮ್ಮನ ಜಾತ್ರೆ, ತಾವರೆಕೆರೆ, ಶಿವನಾಪುರಗಳಲ್ಲಿ ಕರಗದ ಉತ್ಸವಗಳು ನಡೆಯುತ್ತಿರುತ್ತವೆ.

ಎತ್ತಿನ ವಡೇಪುರದಲ್ಲಿ ಪಾಳು ದೇವಸ್ಥಾನದ ಬಳಿ ಮರದ ಕೆಳಗೆ ಸುಗುಟೂರ ತಮ್ಮಯ ಗೌಡರು ದೇವಾಪುರದ ಹಿರಿಯರಾಯ ಒಡೆಯರು ದೇವರಿಗೂ, ಎತ್ತಿನ ಒಡೆಯ ದೇವರಿಗೂ, ದೇವಪುರಕ್ಕೆ ಓರೆಗಾಣೀಕೆ ಮೊದಲಾದ ಎಲ್ಲವನ್ನು ಜಪ ಶಿವಪೂಜೆ ಮಾಡಲೆಂದು ಕೊಟ್ಟ ಧರ್ಮಶಾಸನ[೨೧೬]. ಎತ್ತಿನಒಡೆಯ ದೇವರಿಗೆ ದಾನ ನೀಡುವ ಈ ಶಾಸನದ ಕಾಲ ಕ್ರಿ.ಶ.೧೫೮೪ ರ ವೇಳೆಗೆ ಎತ್ತಿನ ಒಡೆಯ ಶಿವಲಿಂಗ ದೇವಾಲಯವಾಗಿದ್ದು, ದೇವಾಲಯದಿಂದ ಊರಿಗೆ ಅದೇ ಹೆಸರು ಬರಲು ಕಾರಣವಾದಷ್ಟು ಪ್ರಸಿದ್ಧಿಯಾಗಿರಬೇಕು. ಆದರೆ ದೂರಾವಷ್ ಎಂಬಂತೆ ೧೨೦ ವರ್ಷಗಳ ಹಿಂದೆ ಊರು ಯಾವುದೋ ಕಾಯಿಲೆಯಿಂದಲೋ, ಜಲಪ್ರಳಯದಿಂದಾಗಿ ಬೇಚಿರಾಜ್ ಇಲ್ಲಿನ ಗ್ರಾಮಸ್ಥರು ದೂರದ

[೨೧೨] ಎ.ಕ-೯, ಅನುಬಂಧ, ಹೊ.ತಾ.೧೬೩, ಹೊಸಕೋಟೆ.
[೨೧೩] ಎ.ಕ-೯, ಅನುಬಂಧ, ಹೊ.ತಾ.೧೬೪, ಹೊಸಕೋಟೆ.
[೨೧೪] ಎ.ಕ-೯, ಅನುಬಂಧ, ಹೊ.ತಾ.೧೬೬, ಕ್ರಿ.ಶ.೧೭೭೧, ಹೊಸಕೋಟೆ.
[೨೧೫] ಎ.ಕ-೯, ಅನುಬಂಧ, ಹೊ.ತಾ.೧೬೭, ಕ್ರಿ.ಶ.೧೭೭೨, ಹೊಸಕೋಟೆ.
[೨೧೬] ಎ.ಕ-೯, ಹೊ.ತಾ.೪, ಕ್ರಿ.ಶ.೧೫೮೧, ಬೇಜಿರಾಖ್ ಎತ್ತಿನ ವಡೇಪುರ.

ಸುರಕ್ಷತೆಯಾಗಿರುವ ಪ್ರದೇಶಗಳಿಗೆ ವಲಸೆಹೋಗಿ ಎತ್ತು ವಡೇಪುರ ಎಂಬ ಹೊಸ ಊರನ್ನು ಕಟ್ಟಿದ್ದಾರೆ ಪೂಜೆ ಪುನಸ್ಕಾರಗಳಿಲ್ಲದೆ ಎತ್ತಿನ ಒಡೆಯ ಪ್ರಾಚೀನ ದೇವಸ್ಥಾನ ಪಾಳು ಬಿದ್ದಿದೆ.

ಜ್ಯೋತಿಪುರದಲ್ಲಿನ ಸೋಮೇಶ್ವರ ದೇವಾಲಯವನ್ನು ಹೊಸದಾಗಿ ಜೀರ್ಣೋದ್ಧಾರ ಮಾಡಿರುವುದರಿಂದ ಮೂಲ ದೇವಾಲಯದ ರಚನೆ ತಿಳಿಯದಂತಾಗಿದೆ. ಕ್ರಿ.ಶ.೧೫೦೬ ರಲ್ಲಿ ಸಾಳುವ ಇಮ್ಮಡಿ ನರಸಿಂಹರಾಯರ ಕಾಲದಲ್ಲಿ ಕೋಳಾಲಾ ಚಾವಡಿಯ ಸೋಮೇಶ್ವರ ದೇವರಿಗೆ ಮುಂದೂರ ಸ್ಥಳದ ಹನ್ನೆರಡು ಹಳ್ಳಿವೊಳಗಾದ ನಮ್ಮ ತಂದೆ ತಾಯಿ, ನಮ್ಮ ಮುಂದೇಳಿಪ್ಪತ್ತೊಂದು ಮಾತಾ ಪಿತೃಗಳಿಗೆ ಪುಣ್ಯಲೋಕ ಪ್ರಾಪ್ತಿ ಆಗಬೇಕೆಂದು ತ್ರಿವಾಚವಾಗಿ ಧಾರೆಯೆರೆದು ಕೊಟ್ಟ[೨೧೭] ಶಾಸನವನ್ನು ದೇವಸ್ಥಾನವನ್ನು ಹೊಸದಾಗಿ ನಿರ್ಮಿಸುವಾಗ ಒಡೆದು ಗೋಡೆಗೆ ಸೇರಿಸಲಾಗಿದೆ.

ಸಣ್ಣೈನಾಡಿನ ದಕ್ಷಿಣದಲ್ಲಿನ ದೊಮ್ಮಲೂರಿನ ಸೊಕ್ಕ ಪೆರುಮಾಳು ಮತ್ತು ಕಿತ್ತಗನೂರಿನ ....ತೇವ ಪೆರುಮಾಳು ದೇವಾಲಯಗಳು ಪ್ರಸಿದ್ಧವಾದ ವೈಷ್ಣವ ಕೇಂದ್ರಗಳಾಗಿರಬೇಕು. ದೇವಾಲಯಕ್ಕೆ ಚೋಳರಿಂದ ವಿಜಯನಗರ ಅರಸರವರೆಗೂ ದಾನಗಳನ್ನು ನೀಡಿರುವ ಹಲವಾರು ಶಾಸನಗಳನ್ನು ಕಾಣಬಹುದು. ದೊಮ್ಮಲೂರು ಸೊಕ್ಕ ಪೆರುಮಾಳು ದೇವರಿಗೆ ರಾಜೇಂದ್ರ ಚೋಳರ ಕ್ರಿ.ಶ.೧೦೪೦ ರಲ್ಲಿ ಶ್ರೀ ಕಾಮದೇವ ಇತರರು ಸೇರಿ ಗ್ರಾಮದ ಚತುಸ್ಸೀಮೆಯೊಲಗಿನ ಒಣ ಭೂಮಿ, ಗದ್ದೆ ಭೂಮಿ, ಮರಗಳು, ಬಾವಿಗಳು ಎಲ್ಲಾ ರೀತಿಯ ತೆರಿಗೆಗಳನ್ನು ಸರ್ವಮಾನ್ಯವಾಗಿ[೨೧೮], ಕ್ರಿ.ಶ.೧೪೦೮ ರಲ್ಲಿ ನಾಗಣ್ಣ ದಣ್ಣಾಯಕರು ಕರಡಿಹಳ್ಳಿಯ ಚತುಸ್ಸೀಮೆಯೊಳಗಿನ ಮಗ್ಗದೆರೆ, ಬಡಗಿ, ಕಂಬಾರ, ಅಸಗ, ನಾವಿಂದ, ಕುಂಬಾರ, ಮಾದೆಗ, ಗಾಣ, ಎತ್ತು, ಕುದುರೆ ಮುಂತಾದವುಗಳ ಮೇಲಿನ ತೆರಿಗೆಗಳನ್ನು[೨೧೯], ....ತೇವ ಪೆರುಮಾಳುಗೆ ಕ್ರಿ.ಶ.೧೩೩೦ ರಲ್ಲಿ ಸೋಮನಾಥನು ವೀರ ವಲ್ಲಾಳ ದೇವರ ತೋಳಿನ ಖಡ್ಗದ ಜಯಕ್ಕೆ ನಾರಸಿಂಗ ನಾರಾಯಣಸ್ವಾಮಿಗೆ ಸಂಪ್ರದಾಯಿಕ ಸೇವೆಯಾಗಿ ....ತೇವ ಪೆರುಮಾಳ್, ಸೊಕ್ಕ ಪೆರುಮಾಳ್ ದೇವರಿಗೆ ಕೆರೆ ಕೆಳಗಿನ ಖಂಡುಗ ಕಳನಿಯನ್ನು[೨೨೦], ಕಿತ್ತೈಯನೂರ್ .....ತೇವ ಪೆರುಮಾಳ್ ದೇವಸ್ಥಾನಕ್ಕೆ ರಸ್ತೆಯನ್ನು ಶ್ರೀ ವೀರ ಹರಿಹರರಾಯರ ಆಳ್ವಿಕೆಯ ಅವಧಿಯಾದ ಕ್ರಿ.ಶ.೧೪೦೧ ರಲ್ಲಿ[೨೨೧] ನಿರ್ಮಿಸಿದನು. ಶಾಸನೋಕ್ತವಾಗಿರುವ ....ತೇವ ಪೆರುಮಾಳು ದೇವಾಲಯವು ಚನ್ನಕೇಶವ ದೇವಾಲಯವಾಗಿ ಈಗ ಗೋಪಾಲಸ್ವಾಮಿ ದೇವಾಲಯವಾಗಿದೆ.

---

[೨೧೭] ಎ.ಕ-೯, ಹೊ.ತಾ.೧೨೧, ಕ್ರಿ.ಶ.೧೫೦೬, ಜ್ಯೋತಿಪುರ.
[೨೧೮] ಎ.ಕ-೯, ನೆ.ತಾ.೬೨ಎ, ಕ್ರಿ.ಶ.೧೦೪೦ ತಮಿಳು, ಕೋಡಿಪಾಳ್ಯ.
[೨೧೯] ಎ.ಕ-೯, ಬೆಂ.೧೬೨, ಕ್ರಿ.ಶ.೧೪೦೮, ದೊಮ್ಮಲೂರು.
[೨೨೦] ಎ.ಕ-೯, ಹೊ.ತಾ.೧೦೦, ಕ್ರಿ.ಶ.೧೩೩೦, ತಮಿಳು, ಜೋಡಿ ದಾಸರಹಳ್ಳಿ.
[೨೨೧] ಎ.ಕ-೯, ಹೊ.ತಾ.೧೧೮, ಕ್ರಿ.ಶ.೧೪೦೧, ತಮಿಳು, ಕಿತಗನೂರು.

ಕ್ಷಯ ಸಂವತ್ಸರದ ಪುಷ್ಯ ಸು ೮ ಲು ಕಂಬದ ಆಂಜನೇಯ ಪ್ರತಿಮೆಯನ್ನು ನಿರ್ಮಿಸಿರುವುದನ್ನು ಪ್ರತಿಮೆಯ ಕೆಳಗಿನ[೨೨೨] ಹಾಗೆಯೇ ರಾಮೋಜನ ಮಗ ನಿಗಪನು ಗರುಡ ಪ್ರತಿಮೆಯನ್ನು ಮಾಡಿಸಿದ್ದನ್ನು ಪ್ರತಿಮೆಯ ಕೆಳಗಿನ ಶಾಸನದಲ್ಲಿ[೨೨೩] ಕಾಣಬಹುದು.

ರಂಗಸ್ವಾಮಿಗೆ ಪುರವನ್ನು[೨೨೪], ಮಲ್ಲಸಂದ್ರದ ವೀರಭದ್ರ (ಸೊಂಡೆಕೊಪ್ಪದ)ನಿಗೆ[೨೨೫], ವೀರಭದ್ರ ದೇವರು ಮುಖ್ಯವಾದ ಸಜನ ಸುಧ ಶಿವಾಚಾರ ಸಂಪನ್ನರು ಆದ ಸಿದ್ಧರಾಮೇಶ್ವರ ದೇವರಿಗೆ ಕೆಂಚ ಸೋಮಣ ನಾಯಕರು ಪ್ರಭವ ಸಂವತ್ಸರದ ಕಾರ್ತಿಕ ಶುದ್ಧ ೧೧ ಲೂ ದೇವಗೊಂಡನಹಳ್ಳಿಯನ್ನು ಪುರವಾಗಿ[೨೨೬], ಸಿದ್ದನಹಳ್ಳಿಯ ಆಂಜನೇಯ ದೇವಸ್ಥಾನಕ್ಕೆ ವಾರಣಾಸಿಗಳಾದ ಓಬುಳಯನ ಸೇವೆಯನ್ನು ಹುಟ್ಟು ಬಂಡೆಯ ಮೇಲೆ[೨೨೭], ಸುಭಕೃತು ಸಂವತ್ಸರದ ಕಾರ್ತಿಕ ಬ ೫ ಲು ಶಿವಪುರದಲ್ಲಿ ಮಾಡಿಸಿದ ಸೇವೆಯ ವಿವರವನ್ನು ಲಕ್ಷ್ಮಿರಮಣ ಸ್ವಾಮಿಯ ದೇವಸ್ಥಾನದಲ್ಲಿ[೨೨೮], ಪ್ರಸನ್ನ ವೆಂಕಟೇಶ್ವರ ಸ್ವಾಮಿಗೆ ಪ್ರಭವ ನಾಮ ಸಂವತ್ಸರದ ವೈಶಾಖ ಶು ೭ ಲು ನಂದುಗುಳ ಹೋಬಳಿಯ ಸಿದ್ದನಹಳ್ಳಿ ಕೆರೆ ಕೆಳಗೆ[೨೨೯], ರಾಮದೇವನ ಗುಡಿಯಲ್ಲಿ ಊರಬಾಗಿಲಿನ ಬಳಿ ಶ್ರೀ ಚಾಮುಂಡಿ ಮಹೇಶ್ವರಿ ಅಮ್ಮನವರು ಎಂದು[೨೩೦] ಇರುವುದು ಹಾಗೂ ಆಂಜನೇಯ ದೇವಸ್ಥಾನದೊಳಗೆ ಬಸವನ ವಿಗ್ರಹದ ಕೊಠಡಿಯಲ್ಲಿ ಶ್ರೀ ಚಾಮುಂಡೇಶ್ವರಿ ಅಮ್ಮನವರಿಗೆ ಜಾಲಿಗೆ & ರಾಮೇನಹಳ್ಳಿ ಗ್ರಾಮದ ಹುಟ್ಟುವಳಿಯ ಸಕಲ ಆದಾಯವು ದೇವಸ್ಥಾನಕ್ಕೆ ಸಲುವುದು[೨೩೧]. ಎಂದು ಉಕ್ತವಾಗಿದ್ದು, ಪ್ರಸ್ತುತ ಈಗ ಆಂಜನೇಯ ದೇವಾಲಯವು ಚಾಮುಂಡೇಶ್ವರಿ ದೇವಾಲಯವಾಗಿದೆ. ಮೇಡೂರು ಗ್ರಾಮದ ಮೃಗೇಶ್ವರ ದೇವಾಲಯಕ್ಕೆ ವಿಖಾರಿ ಸಂವತ್ಸರದ ಕಾರ್ತಿಕ ಶು ೧೨ ಲು ಅಂಗೇಗೌಡರ ಮಕ್ಕಳು ವೀರಯ್ಯ ಗೌಡನು ಪುಣ್ಯವಾಗಬೇಕೆಂದು ದಾನ ನೀಡಿರುವುದನ್ನು ದೇವಾಲಯಕ್ಕೆ ದಕ್ಷಿಣ ಬಂಡೆ ಮೇಲೆ[೨೩೨], ಬಯಿರ ದೇವರಿಗೆ ಉಪಾರಕ್ಕೆ ೧೭

[೨೨೨] ಎ.ಕ-೯, ನೆ.ತಾ.೧೫೪, ಗೌರಾಪುರ.
[೨೨೩] ಎ.ಕ-೯, ನೆ.ತಾ.೧೫೫, ಗೌರಾಪುರ.
[೨೨೪] ಎ.ಕ-೯, ನೆ.ತಾ.೫, ಬಸವನಹಳ್ಳಿ.
[೨೨೫] ಎ.ಕ-೯, ನೆ.ತಾ.೧೮, ಮಲ್ಲಸಂದ್ರ.
[೨೨೬] ಎ.ಕ-೯, ನೆ.ತಾ.೧೫೬, ಕೆಂಗಲ್ ದಾಖಲೆ ದೇವಗಾನಹಳ್ಳಿ.
[೨೨೭] ಎ.ಕ-೯, ಹೊ.ತಾ.೨೦೨, ಸಿದ್ದನಹಳ್ಳಿ.
[೨೨೮] ಎ.ಕ-೯, ದೊ.ತಾ.೩೩, ಶಿವಪುರ.
[೨೨೯] ಎ.ಕ-೯, ಹೊ.ತಾ.೧೬, ಸಿದ್ದನಹಳ್ಳಿ.
[೨೩೦] ಎ.ಕ-೯, ದೇ.ತಾ.೪, ಜಾಲಿ.
[೨೩೧] ಎ.ಕ-೯, ದೇ.ತಾ.೯೦, ಅನುಬಂಧ, ಜೋಡಿಕಾಮೇನಹಳ್ಳಿ.
[೨೩೨] ಎ.ಕ-೯, ಹೊ.ತಾ.೩೨, ಮೇಡೂರು.

ಕೊಳಗ ಗದ್ದೆಯನ್ನು ಓಂ ನಮ ಸಿವಾಯ ಚೊಕಸೆಟ್ಟಿಯ ಮಗ ದಂಡಿಸೆಟ್ಟಿಯು[೨೩೩], ಬೇಗೂರು ಗ್ರಾಮದ ತಿರುಮಲ ದೇವರ ದೇವರ ಗುಡಿಗೆ[೨೩೪],

ಮುಲುದಂ ಒಡೆಯ ದೇವನಿಗೆ ಕ್ರಿ.ಶ.೧೨೧೯ ರಲ್ಲಿ ನಿಲತ್ತೂರ ಮಾಂಡಳೀಕನಾದ ವೈಯಪ್ಪನ ಮಗನು ಹೊನ್ನನ್ನು[೨೩೫] ಕೊಟ್ಟನು. ಮುಲುದಂ ದೇವರು ಈಗ ಬಸವನ ಗುಡಿಯಾಗಿದೆ. ಮಂಡಳೇಶ್ವರನಾದ ನಂದಿಗಿರಿನಾಥ ವೆಂಬಿದೇವ ಎಂಬುವ ನಂದಿ ದೇವರು ನಿಗಿರಿಲಿ ಚೋಳಮಂಡಲದ ಸಣ್ಣೆನಾಡಿಗೆ ಸೇರಿದ ಕುಡುವತ್ತಿಯಲ್ಲಿಯನ ನಂದೀಶ್ವರ ದೇವರಿಗೆ ಸಂಕ್ರಾಂತಿಯ ಉತ್ಸವ ದಿವಸ, ಅಧ್ಯಾಯನ ಮಾಡಿ ಸೇವೆ ಮಾಡಲೆಂದು ಸೇವೆಗಾಗಿ ಹಾಗೂ ದೇವಸ್ಥಾನಕ್ಕೆ ಒಳ್ಳೆದಾಗಲಿ ಎಂದು ಪೂಜೆ, ಪುನಸ್ಕಾರ, ನೈವೇದ್ಯ ಮಾಡಿಕೊಂಡು ಬರುವಂತೆ ೩೨ ಬ್ರಾಹ್ಮಣರಿಗೆ ಕ್ರಾಯ ವಿಕ್ರಾಯವಾಗಿ[೨೩೬], ಕ್ರಿ.ಶ.೧೩೦೦ ರಲ್ಲಿ ಮುದನೈನಾಡಿನ ತಟನುರಿನ ಮುದಲಿಯರು ಪೂರ್ವದ ರಾಯರು ಕುನ್ದನಿಯ ತಿರು ಅತ್ತಿಯಾರು ಪೆರುಮಾಳು ದೇವರಿಗೆ ಎಲ್ಲಾ ರೀತಿಯ ತೆರಿಗೆಗಳನ್ನು ಕುದುರೈ, ಅದಿಮೈ, ಪಟ್ಟಣ ಇತ್ಯಾದಿ ತೆರಿಗೆಗಳನ್ನು[೨೩೭], ಶ್ರಾವಣ ಮಾಸ ಶು ೧೫ ರಲು ಕ್ರಿ.ಶ.೧೩೨೮ ರಲ್ಲಿ ವೀರಗಂಗ ಪ್ರತಾಪ ಚಕ್ರವರ್ತಿ ಅಧೀನದಲ್ಲಿ ಯಲಳಪತ್ಸರು ಪುಣ್ಣಾಡ-೭೦ ನಾಡು ಆಳೂತ್ತಿರುವ ವರಹರೇಶ್ವರ ದೇವರಿಗೆ[೨೩೮], ಕ್ರಿ.ಶ.೧೩೪೩ ರಲ್ಲಿ ವೀರಬಲ್ಲಾಳ ದೇವರು ಪ್ರಧಾನಿರಾದ ವಲ್ಲಪ್ಪ ದಣ್ಣಾಯಕರು, ಸೇನಾ ಪ್ರಧಾನನಾದ ಮಹಾ ಸಾಮಂತಾಧಿಪತಿ ಗಂಡರಗುಳಿ ಮಂಜಯ ನಾಯಕರ ಕುಮಾರ ಅಂಕಯ ನಾಯಕರು, ಮಹಾ ಸಾಮಂತಾಧಿಪತಿ ....ನಾಯಕರು ಪುಲಿಯೂರುನಾಡಿನಲ್ಲಿ ಪೂಜೆ ಮಾಡಲು[೨೩೯] ದಾನ ನೀಡಿದ್ದರು. ಆದರೆ ಯಾವ ದೇವಾಲಯಕ್ಕೆ ಅನ್ನೊದೆ ಅಸ್ಪಷ್ಟವಾಗಿದೆ.

ಕ್ರಿ.ಶ.೧೩೫೨ ರ ನಂದನ ಸಂವತ್ಸರದ ಭಾದ್ರಪದ ಬ ೫ ಶುಕ್ರವಾರದಲ್ಲು ತಂಮೆಯನಾಯ್ಕರ ಅಂಜುಡನಾಡ ವಡಿಗೇಯಹಳ್ಳಿಯ ಗವಿರೇಶ್ವರ ದೇವರ ದಿವ್ಯ ಪಾದಗಳಿಗೆ ಐವತ್ತೂರು ದೇಶದ ವ್ಯವಹಾರಿಗಳು[೨೪೦], ಕ್ರಿ.ಶ.೧೩೬೯ ರ ವೀರಕಂಪಣ್ಣ ಒಡೆಯರ ಅಧೀನದಲ್ಲಿ ಸಿರುನಲ್ಲಲರನು ಇತರೆ ಜಾತಿಯವರು ಒಂದು ಹಣವನ್ನು ಪ್ರತಿಯೊಂದು ಊರಿನಲ್ಲಿ ಕೊಡುವಂತೆ ಯಾರು ಕೊಡುವುದಿಲ್ಲವೂ

---

[೨೩೩] ಎ.ಕ-೯, ಹೊ.ತಾ.೧೯೭, ಚಿಕ್ಕೊಡಹಳ್ಳಿ.

[೨೩೪] ಎ.ಕ-೯, ಹೊ.ತಾ.೬೫, ತಮಿಳು, ಬೇಗೂರು.

[೨೩೫] ಎ.ಕ-೯, ಹೊ.ತಾ.೪೫, ಕ್ರಿ.ಶ.೧೨೧೯, ತಮಿಳು, ಕೊರಟ.

[೨೩೬] ಎ.ಕ-೯, ದೇ.ತಾ.೨೮, ಕ್ರಿ.ಶ.೧೨೮೩, ತಮಿಳು, ಕಾರಹಳ್ಳಿ.

[೨೩೭] ಎ.ಕ-೯, ಹೊ.ತಾ. ೧೬೨, ಕ್ರಿ.ಶ. ೧೩೦೦ ತಮಿಳು, ತಟ್ಟನೂರು.

[೨೩೮] ಎ.ಕ-೯, ದೊ.ತಾ.೩೮, ಕ್ರಿ.ಶ.೧೩೨೮, ಶಿವಪುರ.

[೨೩೯] ಎ.ಕ-೯, ಹೊ.ತಾ.೭೫, ಕ್ರಿ.ಶ.೧೩೪೩, ನಿಡುಘಟ್ಟ

[೨೪೦] ಎ.ಕ-೯, ದೇ.ತಾ.೨೯, ಕ್ರಿ.ಶ.೧೩೫೨, ವಡಿಗೇನಹಳ್ಳಿ.

ಅವರು ಈ ನಾಡಿನ ಜಾತಿಯ ಹೊರಗೆ ಎಂದು ಪಂಚಾಯಿತಿ ನಿರ್ಧರಿಸಿತು. ಪುಲಿಯೂರುನಾಡಿನಲ್ಲಿ ತಮರೈಕೆರೈಯ ತೊಟ್ಟಿವೈಯನ್, ಕಂದಿಕೈಯನ್ ಸ್ವಲ್ಪ ದಾನವನ್ನು, ಭೈರವ ದೇವರಿಗೆ[೨೪೧],

ಕ್ರಿ.ಶ.೧೫೦೩ ರಲ್ಲಿ ಬುಳೆನಾಯ್ಕರು ತಮ್ಮ ನಾಯ್ಕತನಕೆ ಸಲುವ ಕುಕ್ಕಲನಾಡಿಗೆ ಸೇರುವ ನಾಗಸಮುದ್ರದ ಗ್ರಾಮವನ್ನು ಸ್ವರಭೇಶ್ವರ ದೇವರಿಗೆ[೨೪೨], (ಈ ಸ್ವರಭೇಶ್ವರ ದೇವಾಲಯ ಎಲ್ಲಿದೆ ಎಂಬುದು ತಿಳಿದು ಬಂದಿಲ್ಲ.) ಕೃಷ್ಣ ದೇವರಾಯರ ಆಳ್ವಿಕೆಯಲ್ಲಿ ಖರ ಸಂವತ್ಸರದ ಭಾದ್ರ ಶುದ್ಧ ೧೧ ಲೂ ಕೊಮನಾಯಕರು ತಮ್ಮ ನಾಯಕತನಕ್ಕೆ ಪಾಲಿಸಿದ ಕುಕ್ಕಲನಾಡೊಳಗಣ ತಿರುವೆಂಥನಾಥ ದೇವರಿಗೆ ದಾಸನಪುರದಲ್ಲಿ[೨೪೩], ಮಾರ್ಗಶಿರ ಶು ೫ ಲು ಕೃಷ್ಣರಾಯ ಮಹಾರಾಯರ ಕ್ರಿ.ಶ.೧೫೨೪ ರಲ್ಲಿ ಅಣ್ಣಜಿ ಅಯಿನವರ ಕಾರ್ಯಕ್ಕೆ ಕರ್ತರಾದ ಮಂಲರಸಯನು ಸೋಲೂರ ದೇವರಸ ಮಗ ಸೋಮೇದೇವರು, ತಿಮ್ಮಲ ದೇವರ, ಲಿಂಗೇಶ್ವರ ದೇವರ, ವೀರಭದ್ರ ದೇವರುಗಳ ಅಂಗರಂಗ ಭೋಗಗಳಿಗೆ ಕೊಂಯ ಸೀಮೆಗೆ ಸಲುವ ಚಿಕ್ಕ ಮಾರಹಳ್ಳಿಯನ್ನು[೨೪೪], ಅಚ್ಯುತರಾಯ ಮಹಾರಾಯರ ಆಳ್ವಿಕೆಯ ಕ್ರಿ.ಶ.೧೫೩೮ ರಲ್ಲಿ ಏಕಾದಶಿಯ ದಿನ ಚನ್ನಕೇಶವ ದೇವರ ಅಮೃತಪಡಿಗೆ[೨೪೫], ಕ್ರಿ.ಶ.೧೫೩೦ ರಲ್ಲಿ ಮುಳುವಾಗಲು ಕೆಂಚಂಣ ನಾಯಕರ ಕುಮಾರ ವೀರಪ್ಪ ನಾಯಕರು, ದಾಸಪ್ಪ ನಾಯಕರು ಚತುರ್ವೇದಿ ಮಂಗಲದ ಸೋಮನಾಥ ದೀಕ್ಷಿತರಿಗೆ ನಲ್ಲೂರು ರಾಜ್ಯಕ್ಕೆ ಸಲುವ ನಂದಗುಳಿಯ ಸ್ಥಳದ ವೊಡ್ಡರಹಳ್ಳಿಯನ್ನು[೨೪೬], ಕ್ರಿ.ಶ.೧೫೩೩ ರಲ್ಲಿ ನಂದನ ಸಂವತ್ಸರದ ಮಾಘ ಬ ೧೪ ಲು ಶಿವರಾತ್ರಿ ಪುಣ್ಯಕಾಲದಲು ಮಲ್ಲಪ್ಪ ಅಣ್ಣನವರು ಮಲ್ಲಿಕಾರ್ಜುನ ದೇವರಿಗೆ ಸೊಂಟೇಕೊಪ್ಪದ ಹಾರೋಕೇತನಹಳ್ಳಿ ಗ್ರಾಮವನ್ನು[೨೪೭],

ಮಂಡಲೇಶ್ವರನಾದ ವಿಠಲೇಶ್ವರದೇವ ಮಹಾ ಅರಸುಗಳ ಆಯುರಾರೋಗ್ಯಕ್ಕಾಗಿ ಕಾಮಗೌಡ, ವೀರಣ ನಾಯಕರು ಮಾರಕ ದೇವರ ಅಮೃತಪಡಿಗೆ, ಸಿವನಸಮುದ್ರದ ಸೀಮೆಯ ಬೇಡನಾಥ ಸ್ಥಳದ ದಾಸಗೊಂಡನಹಳ್ಳಿ ಗ್ರಾಮವನ್ನು[೨೪೮], ಕ್ರಿ.ಶ.೧೫೫೦ ರಲ್ಲಿ ನಮಃ ಶಿವಾಯ ದೇವರಿಗೆ ಅತ್ತಿಬೆಲೆಯ ಸ್ಥಳಕ್ಕೆ ಸಲುವ ಕದುಮನಪುರ ಮತ್ತು ಸೂಲಿಬೆಲೆಯ ಅಷ್ಟ ಭೋಗ ಸ್ವಾಮ್ಯವನ್ನು ನಮ್ಮ ತಾಯಿಯಮ್ಮನವರಿಗೆ ಪುಣ್ಯವಾಗಬೇಕೆಂದು ಸುತ್ತೂರ ಚೆನ್ನಯ್ಯ ಶಿಷ್ಯರಾದ ಸಿವನಯಗೌಡ ಮಕ್ಕಳು ದೇವಯಗೌಡರು[೨೪೯],

---

[೨೪೧] ಎ.ಕ-೯, ಹೊ.ತಾ.೧೦೩, ಕ್ರಿ.ಶ.೧೩೬೯ ಚಿಕ್ಕನಲ್ಲಾಲ.
[೨೪೨] ಎ.ಕ-೯, ನೆ.ತಾ.೨೦, ಕ್ರಿ.ಶ.೧೫೦೩, ನಾಗಸಂದ್ರ
[೨೪೩] ಎ.ಕ-೯, ನೆ.ತಾ.೧೮೬, ಕ್ರಿ.ಶ.೧೫೨೩, ದಾಸನಪುರ, ಕಸಬಾ.
[೨೪೪] ಎ.ಕ-೯, ಅನುಬಂಧ, ನೆ.ತಾ.೧೦೨, ಕ್ರಿ.ಶ.೧೫೨೪, ಚಿಕ್ಕಮಾರನಹಳ್ಳಿ.
[೨೪೫] ಎ.ಕ-೯, ಹೊ.ತಾ.೮೦, ಕ್ರಿ.ಶ.೧೫೩೮, ಚಿಕ್ಕನಲ್ಲೂರು.
[೨೪೬] ಎ.ಕ-೯, ಹೊ.ತಾ.೨೮, ಕ್ರಿ.ಶ.೧೫೩೦, ವಡ್ಡರಹಳ್ಳಿ.
[೨೪೭] ಎ.ಕ-೯, ನೆ.ತಾ.೧೦, ಕ್ರಿ.ಶ.೧೫೩೩, ಹಾರೋಕೇತನಹಳ್ಳಿ.
[೨೪೮] ದೊ.ತಾ.೭೩, ಕ್ರಿ.ಶ.೧೫೪೪, ದೊಡ್ಡಬಳ್ಳಾಪುರ.
[೨೪೯] ಹೊ.ತಾ.೬೯, ಕ್ರಿ.ಶ.೧೫೫೦, ಕದಮನಪುರ.

ಕ್ರಿ.ಶ.೧೬೩೦ ರಲ್ಲಿ ಸೊರಕುಂಟೆಯ ಶಾಂತದೇವರ ದೇವಾಲಯಕ್ಕೆ ಮೂಲೆಗಾಸನ್ನು[೨೫೦], ಕಾರ್ತಿಕ ಶು ೫ ಲು ಉಭನಾನಾದೇಶ ಆಯಾಮಳೆ ಸಮಸ್ತರು ಸೊರ್ರೆಕುಂಟೆಯ ಸಾತ್ತದೇವರಿಗೆ ಮೂಲೆಗಾಸಿನ ಧರ್ಮವಾಗಿ ತೆರಿಗೆಗಳನ್ನು[೨೫೧], ಕ್ರಿ.ಶ.೧೬೯೯ ರಲ್ಲಿ ಬಹುಧಾನ್ಯ ಸಂವತ್ಸರ ಪಾಲ್ಗುಣ ೧೫ ಲು ಬೆಂಗಳೂರು ವೆಂಕಟರಾಯರ ಮಗ ಬಾಳಾ ಸೆಟ್ಟಿಯರು ನಗರೇನಹಳ್ಳಿ ಗ್ರಾಮವನ್ನು ತಿರುಮಲ ದೇವರ ಗುಡಿಗೆ[೨೫೨] ಕೊಟ್ಟಿರುವುದನ್ನು ಕಾಣಬಹುದು. ಕ್ರಿ.ಶ.೧೬೧೦ ರಲ್ಲಿ ಇಮ್ಮಡಿ ಹಾವಳ ಬಯಿರೆ ಗೌಡರು ಆಯಾ ದೇವರಿಗೆ[೨೫೩] ದಾನ ನೀಡಿದರು ಎಂದಿದೆ. ಆದರೆ ಈ ಆಯಾ ದೇವರು ಯಾರು ಎಂದು ನಿಖರವಾದ ಮಾಹಿತಿ ಇಲ್ಲ. ಕ್ರಿ.ಶ.೧೫೬೫ರಲ್ಲಿ ಪುಣ್ಯವಾಗ ಬೇಕೆಂದು ದೇವಪ್ಪನು ರಾಜಗುಟ್ಟ ಸೀಮೆಗೆ ಸಲುವ ಹಳೇವೂರ ಗ್ರಾಮವನ್ನು ದೇವರ ಅಮೃತಪಡಿ, ನೈವೇದ್ಯ ಧೀಪಾರಾಧನೆಗಾಗಿ ದಾನ ನೀಡಿದರೆ, ಶಾಸನ ತುಡಿತವಾಗಿದ್ದರಿಂದ ಯಾವ ದೇವಸ್ಥಾನ ಎಂದು ತಿಳದು ಬಂದಿಲ್ಲ[೨೫೪].

ಶಾಸನೋಕ್ತವಾಗಿ ದಾನ ನೀಡಿರುವ ಹಲವಾರು ದೇವಾಲಯಗಳಲ್ಲಿ ಕೆಲವು ದೇವಾಲಯಗಳು ಉಳದು ಕೊಂಡಿದ್ದರೆ, ಶಿಥಿಲವಾಗಿರುವ ದೇವಾಲಯಗಳೇ ಹೆಚ್ಚಾಗಿ ಕಂಡು ಬರುತ್ತದೆ. ಪ್ರಸ್ತುತ ಆ ಗ್ರಾಮಗಳಲ್ಲಿ ಇಲ್ಲದಂತಾಗಿರುತ್ತದೆ, ಇಲ್ಲವೇ, ಹಾಳು ಮಂಟಪವಾಗಿ, ಇಲ್ಲವೇ ತಿಪ್ಪೆಗುಂಡಿಯಾಗಿ, ಇಲ್ಲವೇ ಜುಜೂಕೋರರ ಜಾಗವಾಗಿ, ಇಲ್ಲವೇ ದನ–ಕರುಗಳ ಸ್ಥಳವಾಗಿರುವುದನ್ನು ಕಾಣ ಬಹುದು.

ಪ್ರಾಚೀನ ಕಾಲದಲ್ಲಿ ದೇವಾಲಯಗಳಿಗೆ ಭೂಮಿ ಮತ್ತು ಅದರಿಂದ ಬರುವ ಉತ್ಪನ್ನಗಳ ಆಧಾಯದಿಂದ ನಡೆಸಲಾಗುತ್ತಿತ್ತು. ಈಗ ದೇವಾಲಯಗಳನ್ನು ಮುಜುರಾಯಿ ಇಲಾಖೆಗಳಿಂದ ನಡೆಸುತ್ತಾರೆ. ಕಾಲದಿಂದ ಕಾಲಕ್ಕೆ ಭಿನ್ನವಾಗಿ ಬದಲಾಗುತ್ತಾ ಇರುವ ಪದ್ಧತಿಗಳನ್ನು ಕಾಣಬಹುದು. ಹೀಗೆ ದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿ ಸ್ಥಳೀಯವಾಗಿ ಜನರ ಸಾಮಾಜಿಕ ಬದುಕನ್ನು ನಿಯಂತ್ರಿಸುವ ನೆಲೆಗಳಾಗಿದ್ದು ಜನರಿಗೆ ಉದ್ಯೋಗವನ್ನು, ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿರದೇ ಸ್ಥಳೀಯವಾಗಿ ಜನರ ಸಾಮಾಜಿಕ ಬದುಕನ್ನು ನಿಯಂತ್ರಿಸುವ ನೆಲೆಗಳಾಗಿದ್ದವು. ದೇವಾಲಯಗಳಲ್ಲಿ ನಡೆಯುತ್ತಿದ್ದ ನೃತ್ಯ, ಸೇವೆ, ಜಾತ್ರೆಗಳು ಜನರಿಗೆ ಮನೋರಂಜನೆಯನ್ನು ನೀಡುತ್ತಿದ್ದವು. ಹೀಗೆ ಲೌಕಿಕ ಮತ್ತು ಅಲೌಕಿಕ ಬದುಕೆರಡು ಶ್ರೀಮಂತರಾಗಲು ದೇಗುಲಗಳು ಕಾರಣವಾಗಿದ್ದವು.

[೨೫೦] ನೆ.ತಾ.೯೧, ಅನುಬಂಧ, ಖಜಾನೆ

[೨೫೧] ಎ.ಕ-೯, ನೆ.ತಾ.೯೧, ಅನುಬಂಧ, ಕ್ರಿ.ಶ.೧೬೩೦, ನೆ.ಖಜಾನೆ

[೨೫೨] ಎ.ಕ-೯, ಹೊ.ತಾ.೬೪, ಕ್ರಿ.ಶ. ೧೬೯೯, ನಗರೇನಹಳ್ಳಿ.

[೨೫೩] ಎ.ಕ.-೯, ಅನುಬಂಧ, ದೊ.ತಾ.೭೦, ಕ್ರಿ.ಶ ೧೬೧೦, ದೊಡ್ಡಬಳ್ಳಾಪುರ.

[೨೫೪] ಎ.ಕ-೯, ಹೊ.ತಾ.೮೮, ಕ್ರಿ.ಶ.೧೫೬೫, ಅಟ್ಟೂರು.

## ಅಧ್ಯಾಯ – ೬ ಸ್ಮಾರಕಶಿಲೆಗಳು

**ಅ) ವೀರಗಲ್ಲುಗಳು**

**ಆ) ಮಾಸ್ತಿಗಲ್ಲುಗಳು**

**ಇ) ಇತರೆ ಸ್ಮಾರಕಶಿಲೆಗಳು**

ನಮ್ಮ ಪೂರ್ವಜರು ನಮಗೆ ನೀಡಿರುವ ಸಾಂಸ್ಕೃತಿಕ ಕೊಡುಗೆಗಳಾದ ಸ್ಮಾರಕಗಳು ಆಗಿನ ಕಾಲದ ಜನರ ಆಚರಣೆಗಳು ಮತ್ತು ನಂಬಿಕೆಗಳ ಪ್ರತಿರೂಪಗಳಾಗಿವೆ. ಈ ಸ್ಮಾರಕಗಳು ಕೇವಲ ದೇವಾಲಯಗಳು ಹಾಗೂ ಇತರೆ ಪಾರಂಪರಿಕ ಕಟ್ಟಡಗಳಿಗೆ ಮಾತ್ರವೇ ಸೀಮಿತವಾಗಿರದೆ ವೀರಗಲ್ಲುಗಳು, ಮಾಸ್ತಿಗಲ್ಲುಗಳು ಹಾಗೂ ಇತರೆ ಸ್ಮಾರಕ ಶಿಲೆಗಳಾದ ಆತ್ಮಬಲಿದಾನ, ನಿಶಿದಿಕಲ್ಲುಗಳು ನಮ್ಮ ಪೂರ್ವಜರೊಂದಿಗೆ ಸಂಪರ್ಕಿಸುವ ಮೆಟ್ಟಿಲುಗಳು ಎನ್ನಬಹುದು.

ಶಾಸನಗಳು ಯಾವುದೋ ಒಂದು ಕಾಲದ ರಾಜಕೀಯ ವಿಷಯವನ್ನೋ ಒಂದು ಘಟನೆಯನ್ನೋ ಅಥವಾ ಯಾರದೋ ಬಲಿದಾನವನ್ನು ಕುರಿತೋ ಹೇಳುತ್ತಿದ್ದಿರಬಹುದು. ಆದರೆ ಅವು ಇಂದಿಗೂ ನಮ್ಮ ಗ್ರಾಮ್ಯ ಸಮಾಜದಲ್ಲಿ ಜನರಲ್ಲಿ ಏನಿದೆಯೆಂಬ ತಿಳುವಳಿಕೆಯಿಲ್ಲದಿದ್ದರೂ, ಅವುಗಳ ಬಗೆಗೆ ತಮ್ಮದೇ ಆದ ಕಥೆಗಳು, ಐತಿಹ್ಯಗಳು ಮತ್ತು ಅನೇಕ ಕಲ್ಪನೆಯನ್ನು ಹೊಂದಿರುತ್ತಾರೆ. ಎಷ್ಟೋ ಶಾಸನಗಳು, ವೀರಗಲ್ಲು, ಮಾಸ್ತಿಕಲ್ಲುಗಳು **(ಚಿತ್ರ ಸಂಖ್ಯೆ–೪೮)** ಗ್ರಾಮದೇವತೆಗಳಾಗಿ ಕುಲದೈವಗಳಾಗಿ ಮಾರ್ಪಾಟಾಗಿವೆ. ಅವುಗಳ ಬಗ್ಗೆ ಜನರಿಗೆ ಭಯಭಕ್ತಿಯೊಂದಿಗೆ ಆಯಾ ಜನರುಗಳ ತಿಳಿವಳಿಕೆಗಳಿಗನುಗುಣವಾಗಿ ಅವುಗಳೊಡನೆ ವ್ಯವಹರಿಸುತ್ತಾರೆ. ವೀರ ಮಾಸ್ತಿಕಲ್ಲುಗಳು ಜನರನ್ನು ಕಾಪಾಡುವ ದೈವಗಳಾಗಿ ಆಧುನಿಕ ಸಮಾಜಕ್ಕೆ ಒಗ್ಗಿಕೊಂಡು ಪುರೋಹಿತಶಾಹಿ ದೈವಗಳಾಗಿ ಮಾರ್ಪಾಟಾಗುತ್ತಿರುವುದನ್ನು ಸಹ ನಾವು ಇಂದು ಕಾಣಬಹುದು. ಪ್ರತಿನಿತ್ಯ ಪೂಜೆ ಪುನಸ್ಕಾರಗಳ ಜೊತೆಗೆ ವರ್ಷಕ್ಕೊಮ್ಮೆ ಜಾತ್ರೆಗಳ ಮೂಲಕ ಬಲಿಗಳನ್ನೂ ಕೊಡುತ್ತಿರುತ್ತಾರೆ.

"ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱ ವೆಸದೊಳ್ ನಂಟನೆಡಱೊಳೂರಱ ವಿನೊಳಂ
ತಱಿಸಂದು ಗಂಡು ತನಮನೆ
ನೆಱ ಪದವಂ ಗಂಡನಲ್ಲನೆಂತುಂ ಷಂಡಂ" ಎಂದು ರನ್ನನು[1] ತನ್ನ ಕಾವ್ಯವಾದ ಗದಾಯುದ್ಧ ಕೃತಿಯಲ್ಲಿನ ಒಂದು ಪ್ರಸಂಗದಲ್ಲಿ ಅಭಿಪ್ರಾಯ ಪಡುತ್ತಾನೆ. ಈ ಅಭಿಪ್ರಾಯವು ಸತ್ಯವೂ ಹೌದು.

---

[1] ಸಂ.ಹಂಪನಾ :- ಸಾಹಸ ಭೀಮ ವಿಜಯಂ, ರನ್ನ ಸಂಪುಟ, ಕನ್ನಡ ವಿ.ವಿ.೨೦೦೬, ಪು.ಸಂ.೨-೨೪.

ತುರುಗಾಳಗದಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರರಿಗೆ ಸಮಾಜ ಯಾವ ರೀತಿಯಲ್ಲಿ ತನ್ನ ಪ್ರತಿಕ್ರಿಯೆಯನ್ನು ತೋರಿಸುತ್ತಿತ್ತು ಎಂಬ ಅಂಶಕ್ಕೆ ತೆಲುಗಿನ ಜಾನಪದ ಗೀತೆಯೊಂದರಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ತನ್ನ ರಾಜ್ಯದ ತುರುಗಳನ್ನು ಶತ್ರುಗಳು ಹೊಡೆದುಕೊಂಡು ಹೋದಾಗ ಆ ರಾಜ್ಯದ ಮಂತ್ರಿ ಅದಕ್ಕೆ ಯಾವ ರೀತಿಯ ಪ್ರತಿಭಟನೆಯನ್ನು ತೋರಿಸುವುದಿಲ್ಲ. ನಂತರ ಅವನು ಮನೆಗೆ ಬಂದಾಗ ಕೈಕಾಲುಗಳಿಗೆ ನೀರು ಕೊಡುವುದರ ಬದಲು ಅವನ ಹೆಂಡತಿ ಅರಿಶಿನ, ಕುಂಕುಮ, ಬಳೆಗಳನ್ನು ನೀಡುತ್ತಾಳೆ. ಊಟಕ್ಕೆ ಕುಳಿತಾಗ ಅವನ ತಾಯಿ ಒಡೆದ ಹಾಲನ್ನು ಬಡಿಸುತ್ತಾಳೆ. ಈ ರೀತಿಯ ವಿಚಿತ್ರ ವರ್ತನೆಗಳು ತನ್ನ ಷಂಡತನಕ್ಕೆ ಹಾಕಿದ ಪುರಸ್ಕಾರವೆಂದು ತಿಳಿದ ಅವನು ತನ್ನ ಗಂಡಸುತನವನ್ನು ಮೆರೆಯಲು ನೇರವಾಗಿ ಹೋಗಿ ಶತ್ರುಗಳೊಡನೆ ಹೋರಾಡಿ ಹಸುಗಳನ್ನು ಹಿಂತಿರುಗಿಸುವ ಪ್ರಯತ್ನ ಮಾಡುತ್ತಾನೆ[೨]. ತುರುಗೋಳ್, ಪೆಣ್ಬುಯ್ಯಲ್, ಊರಳಿವು ಪ್ರಸಂಗಗಳಲ್ಲಿ ಹೋರಾಡದವನನ್ನು ಷಂಡನೆಂಬ ಮಾತು ಆ ಕಾಲದಲ್ಲಿ ಸಮಾಜದ ಮೇಲೆ ಭೀಕರವಾಗಿ ಬೀರಿದ ಪರಿಣಾಮವಾಗಿತ್ತೆಂದು ತೋರಿಸುತ್ತದೆ. ವೀರತನವು ಹುಟ್ಟುಗುಣವಾಗಿ ತನ್ನ ಪ್ರಾಣ ರಕ್ಷಣೆಗಾಗಿ ಅಥವಾ ಸ್ತ್ರೀ, ತುರುಗೋಳ್, ಕಳ್ಳರು, ಶತ್ರುಗಳೊಡನೆ ಹೋರಾಟ ಮಾಡಿ ಮಡಿದ ವೀರರ ನೆನಪಿಗಾಗಿಯೇ ಅಥವಾ ತಾನು ನಂಬಿದ ತನಗೆ ಆಶ್ರಯ ನೀಡಿದ ರಾಜರ ಪರವಾಗಿ ಯುದ್ಧದಲ್ಲಿ ಮಡಿದ ಅಥವಾ ಗೆದ್ದಂತಹ ವೀರರಿಗೆ ಸ್ಮಾರಕಗಳನ್ನು ನಿರ್ಮಿಸುತ್ತಿದ್ದರು.

ಎಲ್ಲಾ ಸ್ಮಾರಕಗಳು ಸತ್ತ ವ್ಯಕ್ತಿಯ ನೆನಪಿಗಾಗಿ ನೆಡುತ್ತಿದ್ದ ಸಂಕೇತಗಳು, ನೆಡುವುದು ಮುಖ್ಯವಾಗಿ ಆಚರಣೆಯಲ್ಲಿದ್ದ ಅಂತ್ಯ ಸಂಸ್ಕಾರದ ವಿಧಿಯ ನಿಯಮವಾಗಿ ಜನಾಂಗದಲ್ಲಿ ಬೆಳೆದು ಬಂದಿದೆ. ಮರಣ ಹೊಂದಿದ ಮಾನವನ ದೇಹವನ್ನು ಸಮಾಧಿ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿ, ಕೆಲವಾರು ಸಂಕೇತಗಳನ್ನೋ ಅಥವಾ ವಸ್ತುಗಳನ್ನೋ ಒಂದು ನಿಗಧಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಈ ರೀತಿಯ ಸಮಾಧಿಯ ನಿರ್ಮಾಣ ಕಲ್ಪನೆಯು ಬೃಹತ್ ಶಿಲಾಯುಗದಿಂದ ಬಂದಿದೆ ಎನ್ನಬಹುದು, ಹೇಗೆ ಇಂದಿಗೂ ಜಾರಿಯಲ್ಲಿರುವ ಸತ್ತ ವ್ಯಕ್ತಿಯನ್ನು ಸಮಾಧಿ ಮಾಡಿದ ನಿರ್ಧಿಷ್ಠ ಸ್ಥಳದಲ್ಲಿ ಗುರುತಿಗಾಗಿ ಅಥವಾ ನೆನಪಿಗಾಗಿ ಆ ಸ್ಥಳದಲ್ಲಿ ಒಂದು ಕಲ್ಲನ್ನು ನಿಲ್ಲಿಸಿ ಅದಕ್ಕೆ ಅರಿಶಿನ-ಕುಂಕುಮ ಬಳಿದು ಪೂಜ್ಯಾದಿಗಳನ್ನು ಮಾಡಿ, ಅನಂತರ ವರ್ಷಕ್ಕೆ ಸಮಾಧಿಯ ಕಟ್ಟಿ, ಮರಣ ಹೊಂದಿದ ವ್ಯಕ್ತಿಯ ಹೆಸರು, ಜನ್ಮ, ಮರಣ ದಿನಾಂಕವನ್ನು ಕಲ್ಲಿನ ಮೇಲೆ ಕೊರೆಸಿ ನೆಡುತ್ತಾರೆ. ಹಾಗೇಯೇ ವೀರರ ನೆನಪನ್ನು ಘನೀಕರಿಸಿ ಅವನ ಸಾಧನೆಗಳನ್ನು ಅಭಿವ್ಯಕ್ತಿಗೊಳಿಸುವ

[೨] ಆರ್ ಶೇಷಶಾಸ್ತ್ರಿ. :- ಕರ್ನಾಟಕ ವೀರಕಲ್ಲುಗಳು , ಪು.ಸಂ-೧೮೬.

ಸಾಧನಗಳನ್ನು ವೀರಗಲ್ಲು ರೂಪದಲ್ಲಿ ಸಮಾಧಿ ಮಾಡಿದ ಸ್ಥಳದಲ್ಲಿ ವಿಶೇಷವಾಗಿ ಸೂರ್ಯಗ್ರಹಣದ ಅಥವಾ ಚಂದ್ರಗ್ರಹಣದ, ಹಬ್ಬ ಹರಿದಿನಗಳಲ್ಲಿ ನೆಡುತ್ತಿದ್ದರು.

ವೀರಗಲ್ಲುಗಳ ಶಿರೋಭಾಗದಲ್ಲಿ ಸ್ವರ್ಗದ ಪರಿಕಲ್ಪನೆ ಇರುತ್ತದೆ. ಇದನ್ನು ಲಿಪಿಕಾರ ಮೊದಲು ಬಳಪದ ಕಲ್ಲಿನಿಂದ ರೇಖಾಚಿತ್ರದ ಮೂಲಕ ಬಿಡಿಸುತ್ತಾನೆ. ಆ ಮೇಲೆ ರೂವಾರಿ ಇದನ್ನು ಉಬ್ಬು ಶಿಲ್ಪವನ್ನಾಗಿ ಕಂಡರಿಸುತ್ತಾನೆ. ಇದೇ ರೀತಿ ವೀರಗಲ್ಲು, ಮಾಸ್ತಿಕಲ್ಲು, ನಿಷಧಿಕಲ್ಲು, ಬಲಿದಾನ ಮರಣ ಸ್ಮಾರಕಗಳಲ್ಲಿಯು ಉಬ್ಬು ಶಿಲ್ಪಗಳಿಗೂ ಮೂಲವಾದುದು ರೇಖಾ ಚಿತ್ರವೆನ್ನುವುದನ್ನು ಮರೆಯಬಾರದು, ವೀರಗಲ್ಲುಗಳಲ್ಲಿಯ ಯುದ್ಧದ ಸನ್ನಿವೇಶ, ವೀರಮರಣ ಹೊಂದಿದ ವೀರನನ್ನು ವೀರ ಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯ, ವೀರನಾದವ ವೀರಸ್ವರ್ಗ ಪಡೆದ ಸನ್ನಿವೇಶಗಳನ್ನು ಲಿಪಿಕಾರ ಕಲಾತ್ಮಕವಾಗಿ ಚಿತ್ರಿಸಿದ ಮೇಲೆಯೇ ರೂವರಿ ಇವುಗಳನ್ನು ಶಿಲ್ಪಗಳಾಗಿ ಕಂಡರಿಸುತ್ತಾನೆ. ಇದರಂತೆ ಪತಿಯ ಮರಣಾನಂತರ ಸಹಗಮನ/ಅನುಗಮಾನ ಹೊಂದಿದ ಸ್ತ್ರೀಯ ಸ್ಮಾರಕವಾದ ಮಾಸ್ತಿಕಲ್ಲು, ಸಲ್ಲೇಖನ ವ್ರತದ ಮೂಲಕ ದೇದತ್ಯಾಗ ಮಾಡಿದ ಜೈನ ಧಾರ್ಮಿಕ ವ್ಯಕ್ತಿಗಳ ಹೆಸರಿನಲ್ಲಿರುವ ನಿಷಿಧಿಕಲ್ಲು, ದೇವರ ಹೆಸರಿನಲ್ಲಿ, ವ್ಯಕ್ತಿಯ ಹೆಸರಿನಲ್ಲಿ ಪ್ರಾಣೋತ್ಕ್ರಮಣ ಮಾಡಿದವರ ಸ್ಮರಣೆಗಾಗಿ ನಿಲ್ಲಿಸಿದ ಬಲಿದಾನ ಮರಣವೇ ಸ್ಮಾರಕಗಳಾಗಿದೆ.

ಪ್ರಾಗೈತಿಹಾಸಿಕ ಕಾಲದಿಂದ ಜನಾಂಗದವರ ನಂಬಿಕೆ, ಆಚರಣೆಗಳಾಗಿ, ಸತ್ತ ವ್ಯಕ್ತಿ ತನ್ನ ಮಕ್ಕಳಿಗೆ ಕಷ್ಟಕಾಲದಲ್ಲಿ ಸಹಾಯ ಮತ್ತು ಯಾವುದೇ ರೀತಿಯ ತೊಂದರೆಯಾಗದಂತೆ ಕಾಪಾಡಲು ಗುಂಡಿ ಪೂಜೆ ಮಾಡುತ್ತಾರೆ. ಮಹಾನವಮಿಯ ಸಮಯದಲ್ಲಿ ಅಮಾವಾಸ್ಯೆಯ ಒಳಗೆ (ಪಿತೃ ಪಕ್ಷದಲ್ಲಿ) ಆ ಪಿತೃಗೆ ಇಷ್ಟವಾಗುವ ಎಲ್ಲಾ ವಸ್ತುಗಳ ಜೊತೆಗೆ ಎಲ್ಲಾ ರೀತಿಯ ಸಸ್ಯಹಾರ ಅಥವಾ ಮಾಂಸಹಾರಗಳನ್ನು ಎಡೆ ಇಡುವ ಪದ್ಧತಿಯನ್ನು ಮತ್ತು ಯುಗಾದಿಯ ದಿನ ಹೋಳಿಗೆಯನ್ನು ಇಟ್ಟು ಪೂಜೆ ಮಾಡುವ ಪದ್ಧತಿಯೂ ಈಗಲೂ ಜಾರಿಯಲ್ಲಿದೆ.

ಹಾಗೇಯೇ ಇಂದು ಹಲವಾರು ವೀರಗಲ್ಲುಗಳು ಗುಡಿಗಳಾಗಿ ಮಾರ್ಪಟ್ಟು ಆಧುನಿಕ ಪೂಜಾ ವ್ಯವಸ್ಥೆಗಳನ್ನು ಒಳಗೊಂಡಿದೆ. ಶಾಸನಕಲ್ಲುಗಳು ಸಾಸಿವೆಕಲ್ಲುಗಳಾಗಿ, ವೀರಗಲ್ಲುಗಳು ಈರ್ಲಗುಡಿಗಳಾಗಿ ಅಥವಾ ಈರ್ಲಕಲ್ಲುಗಳಾಗಿ, ವೀರಪ್ಪ, ವೀರಣ್ಣನಾಗಿ, ಮಾಸ್ತಿಕಲ್ಲುಗಳು ಮಾಸ್ತಿಯಮ್ಮ, ವೀರಮಾಸ್ತಿ, ಗಂಗಮ್ಮನಾಗಿ (ಕೆಲವು ಕಡೆ) ಪೂಜನೀಯ ಸ್ಥಾನವನ್ನು ಪಡೆದುಕೊಂಡಿವೆ. ಇವುಗಳ ಜೊತೆಯಲ್ಲಿ ಯಂತ್ರದಕಲ್ಲುಗಳು ಸಹ ಸೇರಿದ್ದು ಜನರಿಗೆ, ಧನಗಳಿಗೆ, ಗ್ರಾಮಕ್ಕೆ ಏನಾದರೂ ರೋಗ ರುಜಿನೆಗಳು ಆವರಿಸಿದಾಗ ಈ ಸಾಸಿವೆಕಲ್ಲುಗಳು, ಈರ್ಲಗುಡಿಗಳು, ಯಂತ್ರದಕಲ್ಲುಗಳಿಗೆ ಹರಕೆ ಕಟ್ಟಿಕೊಂಡು

ಪೂಜೆಯನ್ನ ನೆರವೇರಿಸುತ್ತಾರೆ. ಇದರಿಂದ ತಮಗೆ ಒದಗಿರುವ ರೋಗ ರುಜಿನೆಗಳು ದೂರವಾಗಿ ಕಷ್ಟಗಳು ಇಲ್ಲವಾಗುತ್ತವೆ ಎಂಬುದು ಸ್ಥಳೀಯರ ನಂಬಿಕೆಗಳಾಗಿದೆ. ಇಂತಹ ಸಂಪ್ರದಾಯಗಳನ್ನು ಹೊಂದಿರುವ ಹಲವಾರು ಗ್ರಾಮಗಳನ್ನು ನಾವು ಇಂದಿಗೂ ಕಾಣಬಹುದಾಗಿದೆ. ಗ್ರಾಮಗಳಲ್ಲಿ, ಮನೆಗಳಲ್ಲಿ ನಡೆಯುವ ಹಬ್ಬ, ಹರಿದಿನಗಳಲ್ಲಿ ಮಾಡಿದ ಅಡುಗೆಯನ್ನು ಬಾಳೆ ಎಲೆಯಲ್ಲಿ ಎಡೆ ಇಡುತ್ತಾರೆ. ಮನೆ ಮಕ್ಕಳೆಲ್ಲಾ ಆ ಸ್ಥಳಕ್ಕೆ ಹೋಗಿ ಪೂಜೆ ಸಲ್ಲಿಸುತ್ತಾರೆ. ನಮ್ಮ ಊರನ್ನು, ಕುಟುಂಬವನ್ನು ರಕ್ಷಿಸುವ ದೇವರುಗಳಾವು ಎಂದು ಭಕ್ತಿಯಿಂದ ಎಲ್ಲ ವೀರಗಲ್ಲು, ಮಾಸ್ತಿಕಲ್ಲುಗಳನ್ನು ಕೇವಲ ಸ್ಮಾರಕ ಶಿಲೆಗಳಾಗಿರದೆ, ಜನರ ನಂಬಿಕೆ, ಆಚರಣೆಗಳ ಹಿನ್ನೆಲೆಯಲ್ಲಿ ಪ್ರತ್ಯೇಕವಾದ ಪ್ರಾಮುಖ್ಯತೆ ಇರುವುದನ್ನು ಕಾಣಬಹುದು. ಹಿಂದುಳಿದ ವರ್ಗದ ಜನರಲ್ಲಿಯೂ ವೀರಗಲ್ಲುಗಳು, ತುರುಗೋಳ್‌ಗಳು, ಮಹಾಸತಿ ಕಲ್ಲುಗಳ ಬಗೆಗೆ ಅತೀಯಾದ ಭಕ್ತಿಯಿರುತ್ತದೆ.

ಕುರುಬರು, ಬೇಡ ಜನಾಂಗದವರು ತಮ್ಮ ವಂಶದ ಪೂರ್ವಜರನ್ನು ಎಂದು ಆರಾಧಿಸು ಸಂಪ್ರದಾಯವು ಇಂದಿಗೂ ಉಳಿದುಕೊಂಡು ಬಂದಿದೆ. ವರ್ಷಕ್ಕೊಮ್ಮೆ ಅಥವಾ ೧೨ ವರ್ಷಗಳಿಗೊಮ್ಮೆ ಜಾತ್ರೆಯನ್ನು ನಡೆಸುತ್ತಾರೆ. ಇಂಥ ಗುಡಿಗಳು ಸಾಮಾನ್ಯವಾಗಿ ಕುರುಬರು, ಬೇಡ ಹೆಚ್ಚಾಗಿ ವಾಸವಿರುವ ಪ್ರದೇಶಗಳಲ್ಲಿ ಕಂಡುಬರುತ್ತದೆ. ಕೆಲವು ಕಡೆ ಪಾಂಡವರ ಗುಡಿಗಳೆಂದು ಸಹ ಕರೆಯುತ್ತಾರೆ. ಕುರುಬರ ಕುಲದೇವತೆಯಾದ ಬೀರಪ್ಪನ ಗುಡಿಗಳನ್ನು ದೊಡ್ಡಹುಲ್ಲೂರು, ವಡ್ಡಹಳ್ಳಿ, ವಾಗಟ, ಗೋವಿಂದಪುರ, ಕುರುಬರಹಳ್ಳಿ, ಕೋಡಿಹಳ್ಳಿ, ನಂದಗುಡಿ, ಸೂಲಿಬೆಲೆಯ ಬೆಟ್ಟಹಳ್ಳಿಗಳಲ್ಲಿ ಕಾಣಬಹುದು. ಬೆಟ್ಟಹಳ್ಳಿಯ ನಿಧಿಯ ಆಸೆಯಿಂದ ಕೆಲವು ನಿಧಿಗಳ್ಳರು ಚೋಳರ ಕಾಲದ ಸುಂದರವಾದ ವೀರಗಲ್ಲುಗಳ ಸಮೂಹವನ್ನು ಕೆಡವಿ ಕೆಲವು ವೀರಗಲ್ಲುಗಳನ್ನು ಒಡೆದು ಹಾಕಿದ್ದಾರೆ. ಆಧುನಿಕ ಯುಗದಲ್ಲೂ ಜನರು ಎಷ್ಟು ಅಜ್ಞಾನಿಗಳಾಗಿ ಮೂಢವಂತರಾಗಿದ್ದಾರೆ. ದೈವತ್ವವನ್ನು ಪಡೆದಿರುವ ವೀರಗಲ್ಲುಗಳ ಪ್ರಮಾಣದಷ್ಟೇ ಸರಿ ಸಮನಾಗಿ ಸಮಾಜದ ಅಲಸ್ಯಕ್ಕೂ ಒಳಗಾಗಿದೆ. ಕೆಲವೊಂದು ಶಾಸನಗಳನ್ನು, ವೀರಗಲ್ಲುಗಳನ್ನು ಅವು ಇರುವ ಸ್ಥಳಗಳ, ಜಮೀನುಗಳ ಮಾಲೀಕರು ಭದ್ರ ಪಡಿಸಿದ್ದರೆ ಇನ್ನೂ ಕೆಲವು ಶಾಸನಗಳನ್ನು ವೀರಕಲ್ಲುಗಳನ್ನು ಹೋಡೆದು ತೋಟದ ಬದುಗಳಿಗೆ, ಮನೆಯ ಪಾಯಗಳಿಗೆ, ಶಿವಗಂಗೆಯ ಸೋಪಾನಕ್ಕೆ ದೊಡ್ಡ ವೀರಗಲ್ಲನೇ ಒಡೆದು ಹಾಕಿಕೊಂಡಿದ್ದಾರೆ, ಬಟ್ಟೆ ಒಣಗಿಸಲು ಹೀಗೆ ಹಲವಾರು ರೀತಿಯಲ್ಲಿ ನಾಶವಾಗಿರುವುದನ್ನು ಗಮನಿಸಬಹುದು. ಸಂಸ್ಕೃತಿಯ ಪ್ರತಿಬಿಂಬಗಳಂತಿರುವ ಶಾಸನಕಲ್ಲುಗಳಿಗೆ ಇಂದು ಇಂತಹ ದುಃಸ್ಥಿತಿ ಒದಗಿರುವುದು ಸಮಾಜಕ್ಕಂಟಿರುವ ಶಾಪವೇ ಸರಿ.

ಕ್ಷೇತ್ರಕಾರ್ಯ ಮಾಡುವಾಗ ಸಾಧ್ಯವಾದಷ್ಟು ಜಿಲ್ಲಾದ್ಯಂತ ಸಂಚಾರಿಸಿ ಮುನ್ನೂರಕ್ಕು ಹೆಚ್ಚು ಶಿಲ್ಪ ಸ್ಮಾರಕ ಶಿಲೆಗಳನ್ನು ಶೋಧಿಸಿದ್ದು, ಅವುಗಳಲ್ಲಿ ಕೆಲವು ಶಿಲ್ಪಗಲ್ಲುಗಳು ಶಾಸನ ಕಲ್ಲುಗಳಿಗಿಂತ ವಿಭಿನ್ನವಾಗಿರುತ್ತದೆ. ಎಲ್ಲಾ ಸ್ಮಾರಕ ಶಿಲೆಗಳ ವಿವರಣೆಯನ್ನು ನೀಡುವ ಬದಲು ಅವುಗಳಲ್ಲಿ ಭಿನ್ನವಾದ, ವಿಶೇಷವಾದ, ಅದ್ಭುತವಾದ ಸ್ಮಾರಕ ಶಿಲೆಗಳ ವಿವರಣೆಯನ್ನು ಹಾಗೂ ಶಾಸನೋಕ್ತವಾಗಿರುವ ಎಲ್ಲಾ ಸ್ಮಾರಕ ಶಿಲೆಗಳ ಪಠ್ಯವನ್ನು ಮತ್ತು ದೊರಕಿರುವ ಕೆಲವು ಸ್ಮಾರಕ ಶಿಲೆಗಳ ವಿವರಣೆಯನ್ನು ಜೊತೆಗೆ ಛಾಯಾಚಿತ್ರಗಳನ್ನು ಸಹ ಈ ಅಧ್ಯಾಯನದಲ್ಲಿ ನೀಡಲಾಗಿದೆ.

ಸ್ಮಾರಕ ಶಿಲೆಗಳ ಬಗ್ಗೆ ಜನ ಸಾಮಾನ್ಯರು ಹೊಂದಿರುವ ನಂಬಿಕೆಗಳು, ಆಚರಣೆಗಳು ಅವುಗಳಿಗೆ ಸಂಬಂಧಿಸಿದ ಪ್ರಮುಖ ಐತಿಹ್ಯಗಳನ್ನು ಅಧ್ಯಾಯ ೭ ರ ಎರಡನೇ ಭಾಗದಲ್ಲಿ ವಿವರಿಸಲಾಗಿದೆ. ಆದ್ದರಿಂದ ಈ ಅಧ್ಯಾಯದಲ್ಲಿ ಐತಿಹ್ಯ ಬಗ್ಗೆ ಮಾಹಿತಿಗಳು ಇರುವುದಿಲ್ಲ.

ಜಿಲ್ಲೆಯಲ್ಲಿಯೂ ಗಂಗ, ನೊಳಂಬ, ಹೊಯ್ಸಳ, ವಿಜಯನಗರ, ವಿಜಯನಗರೋತ್ತರವಾದ ಹಲವು ಸ್ಮಾರಕ ಶಿಲೆಗಳಿದ್ದು, ಅವುಗಳನ್ನು ವೀರಗಲ್ಲುಗಳು, ಮಾಸ್ತಿಕಲ್ಲುಗಳು ಹಾಗೂ ಇತರೆ ಸ್ಮಾರಕ ಶಿಲೆಗಳಲ್ಲಿ ಆತ್ಮಬಲಿದಾನದ ಕಲ್ಲುಗಳು, ನಿಷಿದಿಕಲ್ಲುಗಳು ಎಂದು ವಿಂಗಡಿಸಬಹುದು. ಶಾಸನರಹಿತವಾದ ಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಜಿಲ್ಲಾದ್ಯಂತ ಕಂಡು ಬರುತ್ತದೆ.

**ಅ) ವೀರಗಲ್ಲುಗಳು**

ಯುದ್ಧದಲ್ಲಿ ಮಾತ್ರವಲ್ಲದೆ, ತುರುಕಾಳಗದಲ್ಲಿ, ಪೆಣ್ಬುಯ್ಯಲ್, ಊರಳಿವು. ಸೀಮಾ ಸಂಬಂಧಿ ಕದನ, ಬೇಟೆ ಮುಂತಾದ ಸಂದರ್ಭಗಳಲ್ಲಿ ವೀರನು ಮಡಿದಾಗ ಆತನ ನೆನಪಿಗಾಗಿ ನಿರ್ಮಿಸಿರುವ ಸ್ಮಾರಕ ಶಿಲೆಗಳನ್ನು ವೀರಗಲ್ಲು ಎಂದು, ವೀರಗಲ್ಲು ಮಾಸ್ತಿಯ ಸ್ಮಾರಕವಾಗಿದ್ದರೆ ಆ ವೀರನ ಹಿಂಭಾಗದಲ್ಲಿ ಸ್ತ್ರೀಯರ ಶಿಲ್ಪವಿರುತ್ತದೆ. ತುರುಗೋಳ್ ಸ್ಮಾರಕವಾಗಿದ್ದರೆ ವೀರನ ಹಿಂಭಾಗದಲ್ಲಿ ತುರುಗಳ ಶಿಲ್ಪವಿರುತ್ತದೆ.

ಜಿಲ್ಲೆಯಲ್ಲಿ ದೊರೆತಿರುವ ವೀರಗಲ್ಲುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಹಲವು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ

೧. ವೀರಗಲ್ಲುಗಳು ಮತ್ತು ಯುದ್ಧ ವೀರಗಲ್ಲುಗಳು.

೨. ತುರುಗೋಳ್ ವೀರಗಲ್ಲುಗಳು.

೩. ಬೇಟೆಯ (ಪ್ರಾಣಿ) ವೀರಗಲ್ಲುಗಳು.

೪. ಪೆಣ್ಬುಯಲ್ ವೀರಗಲ್ಲುಗಳು.

೫. ಊರಳಿವಿನ ವೀರಗಲ್ಲುಗಳು

## ೧. ವೀರಗಲ್ಲುಗಳು ಮತ್ತು ಯುದ್ಧ ವೀರಗಲ್ಲುಗಳು.

ಕರ್ನಾಟಕದಲ್ಲಿ ದಾನಶಾಸನಗಳ ನಂತರ ವೀರಗಲ್ಲುಗಳು ೨ನೇ ಸ್ಥಾನದಲ್ಲಿದೆ. ರಾಜಕೀಯ ವ್ಯವಹಾರಗಳಲ್ಲಿ ಯುದ್ದವೂ ಒಂದಾಗಿದ್ದು, ರಾಜನ ರಾಜ್ಯದ ಆಸೆಗಳನ್ನು ಪೂರೈಸುವ ಸಲುವಾಗಿ ಜನರು ಯುದ್ದಗಳಲ್ಲಿ ಭಾಗವಹಿಸಬೇಕಾಗುತ್ತಿತ್ತು. ವೀರಗಲ್ಲುಗಳು ಅಂದಿನ ವೀರ ಜೀವನದ ಅಥವಾ ಹೋರಾಟದ ಸಮಗ್ರ ಚಿತ್ರಣವನ್ನು ಕಾಣಬಹುದು. ತಾವು ನಂಬಿದ ಮೌಲ್ಯಗಳಿಗೆ ಧಕ್ಕೆ ಬರುವಂತಹ ಸಮಯದಲ್ಲಿ ತಮ್ಮ ಪ್ರಾಣವನ್ನಾದರೂ ಒತ್ತೆಯಿಟ್ಟು ಕಾಪಾಡಲು ಪ್ರಯತ್ನಿಸುತ್ತಿದ್ದರು.

ವೀರಗಲ್ಲುಗಳು ಕೇವಲ ಮಡಿದವರ ಜ್ಞಾಪಕಾರ್ಥ ಹಾಕಿಸಿರುವ ಕಲ್ಲುಗಳಲ್ಲ, ಅವುಗಳು ಅವರ ಶೌರ್ಯ, ಸಾಹಸ, ಸ್ವಾಮಿನಿಷ್ಠೆಯನ್ನು ತಿಳಿಸುವ ಶಿಕ್ಷಣ ಮಾಧ್ಯಮವಾಗಿವೆ. ಅಷ್ಟೆ ಅಲ್ಲದೆ ಇವುಗಳು ಕರ್ನಾಟಕದ ವೀರ ಪರಂಪರೆಯ ಪ್ರತೀಕಗಳಾಗಿವೆ. ಕರ್ನಾಟಕದಲ್ಲಿ ದೊರೆಯುವಷ್ಟು ವೈವಿಧ್ಯಮಯ, ವೈಶಿಷ್ಟ್ಯಪೂರ್ಣ ವೀರಗಲ್ಲುಗಳು ಬೇರೆಲ್ಲೂ ದೊರೆಯುವುದಿಲ್ಲ. ಈ ವೀರಗಲ್ಲುಗಳೇ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ.

ಪ್ರಾರಂಭದಲ್ಲಿ ವೀರರನ್ನು ಸ್ಮರಿಸುವ ಹಾಗೂ ಅವರ ಶೌರ್ಯ, ಸಾಹಸವನ್ನು ವರ್ಣಿಸುವ ಕೆಲಸಗಳು ಕೇವಲ ಮೌಖಿಕ ಮತ್ತು ಸಾಹಿತ್ಯ ಗ್ರಂಥಗಳಿಗೆ ಮಾತ್ರವೇ ಸೀಮಿತವಾಗಿತ್ತು. ನಂತರ ಇವುಗಳ ಪ್ರೇರಣೆಯೆ ಶಿಲೆಗಳ ಮೇಲೆ ಮೂಡಲು ಪ್ರಾರಂಭಿಸಿತು. ಶಾಸನಗಳು ಇಲ್ಲದೆ ಇರುವ ಎಷ್ಟೋ ಸ್ಮಾರಕ ಶಿಲೆಗಳು ಕೇವಲ ಶಿಲ್ಪಗಳಿಂದಲೆ ಸಾಹಿತ್ಯವು ಸಹ ತೋರದ ವರ್ಣನೆಯನ್ನು ತೋರುತ್ತವೆ. ಸ್ಮಾರಕ ಶಿಲೆಗಳಲ್ಲಿ ಬಹಳಷ್ಟು ವೈವಿಧ್ಯತೆ ಇದ್ದರೂ ಅವುಗಳನ್ನು ಸ್ಥಾಪಿಸುವ ಉದ್ದೇಶ ಒಂದೇ ಆಗಿರುತ್ತದೆ.

ದ್ವಾವಿಮೌ ಪುರುಷೌ ಲೋಕೇ ಸೂರ್ಯ ಮಂಡಲ ಭೇದಿಸೌ ಪರಿದ್ರಾಡ್ಯೋಗ ಯುಕ್ತಾಶ್ವರಣೇ ಚೌಭಿಮುಖೇಹತಃ ಎಂದರೆ ಸೂರ್ಯ ಮಂಡಲವನ್ನು ಇಬ್ಬರು ಮಾತ್ರ ಭೇದಿಸಬಲ್ಲರು. ಒಬ್ಬ ಯೋಗ ಸಾಧನೆ ಮಾಡಿದ ಪರಿವ್ರಾಜಕ, ಮತ್ತೊಬ್ಬ ರಣರಂಗದ ಮೂಲಕ ಸಾಧನೆ ಮಾಡಿದ ಯೋಧ, ವೀರ ಮರಣವನ್ನು ಪಡೆಯುವುದು ವೀರನಿಗೆ ಮಾತ್ರವಲ್ಲ, ಆತನ ತಾಯಿಗೂ ಹೆಮ್ಮೆಯ ಸಂಗತಿಯಾಗಿತ್ತು.

ವೀರನು ಹೋರಾಟದಲ್ಲಿ ಸತ್ತು ಇಪ್ಪತ್ತು ತಲೆಮಾರುಗಳವರೆಗೂ, ಆತನ ಪರಾಕ್ರಮದ ಕೀರ್ತಿ ಶಾಶ್ವತವಾಗಿ ನಿಲ್ಲುವುದೆಂಬ ಒಂದು ನಂಬಿಕೆಯಿತ್ತು[೩].

ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಡಿ ಸುರಾಂಗನಾ ಕ್ಷಣ ವಿಧ್ವಂಸನೀ ಕಾಯೇಕಾ ಚಿಂತಾಮರಣೇರಣೇ ಎಂಬ ಆಮಿಷವನ್ನು ಮುಂದೊಡ್ಡಲಾಯಿತು. ಹೋರಾಟದಲ್ಲಿ ಜಯಿಸಿ ಬಂದರೆ ಜಯಲಕ್ಷ್ಮಿ ಲಭಿಸುತ್ತಾಳೆ. ಸತ್ತರೆ ಸುರಾಂಗನೆಯರು ಸಿಗುತ್ತಾರೆ. ಕ್ರಿ.ಶ.೭೨೦ ರಲ್ಲಿ ತುರುಗಳನ್ನು ಕಾಪಾಡಿ ಸುರಲೋಕದ ಭೋಗಿ ಅದಾನು[೪] ಎಂದು ಇರುವುದನ್ನು ಕಂಡರೆ ವೀರನನ್ನು ವರ್ಣಿಸುವುದರೊಂದಿಗೆ ಬೇರೆಯವರನ್ನ ಉರಿದುಂಬಿಸುವುದಕ್ಕೆ ಈ ರೀತಿಯ ಸಾಲುಗಳನ್ನು ಹಾಕಿಸುತ್ತಿದ್ದರೆನಿಸುತ್ತದೆ. ಯುದ್ಧರಂಗದಲ್ಲಿ ಫಲಾಯನ ಮಾಡುವುದು, ಸೋಲುವುದು ಎಲ್ಲಕ್ಕಿಂತ ಹೆಚ್ಚಿನ ಅವಮಾನ ಎಂದು ನಂಬಿಸಲಾಗುತ್ತಿತ್ತು. ಯುದ್ಧವೆಂದ ಮೇಲೆ ಸಾವೂ ಅನಿವಾರ್ಯವಾದುದರಿಂದ ಸ್ವರ್ಗದ ಆಮಿಷವನ್ನು, ಯುದ್ಧದಿಂದಾಗುವ ಗಾಯಗಳು ಪುರುಷರಿಗೆ ಭೂಷಯಪ್ರಾಯ ಎಂದು ನಂಬಿಸಲಾಯಿತು.

ಅರಸನ ದಿಗ್ವಿಜಯ, ಸಾಮ್ರಾಜ್ಯದಾಹ, ಆಕ್ರಮಣಗಳು ಹೀಗೆ ನಾನಾ ಕಾರಣಗಳಿಂದಾಗಿ ಮೇಲಿಂದ ಮೇಲೆ ಜರುಗುವ ಪ್ರಸಂಗಗಳಿಂದಾಗಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ವೀರತ್ವವನ್ನು ಪ್ರದರ್ಶಿಸಬೇಕಿತ್ತು. ಶೂರರಾದವರಿಗೆ ಯುದ್ಧವೆಂದರೆ ಹಬ್ಬ, ಮರಣವೇ ಮಹಾ ನವಮಿ, ಗೆದ್ದರೆ ಜಯಲಕ್ಷ್ಮಿ, ಮಡಿದರೇ ಮುಕ್ತಿಲಕ್ಷ್ಮಿ ಒಲಿಯುವಳೆಂಬ ನಂಬಿಕೆಯು ಜನರಲ್ಲಿ ಬೇರೂರಿತ್ತು.

ಇವೇ ಮೊದಲಾದ ಘೋಷಣೆಗಳು ಹುಟ್ಟಿಕೊಂಡು 'ಧರ್ಮವೀರ'ನಿಗೆ ಸಮಾನವಾದ ಸ್ಥಾನ 'ಯುದ್ಧವೀರ'ನಿಗೂ ಲಭಿಸಿತು. ಅವನಿಗಾಗಿ ವೀರಸ್ವರ್ಗದ ಕಲ್ಪನೆ ಆಕಾರ ಪಡೆಯಿತು. ವೀರಸ್ವರ್ಗಗಳ ಮೌಲ್ಯ ಪ್ರಸಾರಕ್ಕಾಗಿ ಪ್ರಾಚೀನರು ಕಾವ್ಯಗಳನ್ನು, ಶಾಸನಗಳನ್ನು ಮಾಧ್ಯಮವನ್ನಾಗಿ ಬಳಸಿಕೊಂಡರು. ಇದರ ಫಲವೇ ವೀರಕಾವ್ಯಗಳು, ವೀರಶಾಸನಗಳು. ಯುದ್ಧವೆಂಬುದು ಸಾವಿನೊಂದಿಗೆ ಮಾಡುವ ಹೋರಾಟದಲ್ಲಿ ವೀರನ ಸಾವು, ಬದುಕು ಯಾವುದೂ ನಿಶ್ಚಿತವಲ್ಲ. ಇಂತಹ ಸಂದರ್ಭಗಳಲ್ಲಿ ಯೋಧರು ತಮ್ಮ ಸಂಸಾರದ ಬಗ್ಗೆ ಯೋಚಿಸುವಂತಾಗಬಾರದೆಂದು ಅವರ ಸಂಸಾರದ ನಿರ್ವಹಣೆಯ ಭಾರವನ್ನು ಹೊತ್ತುಕೊಳ್ಳುವುದರ ಜೊತೆಗೆ ವಿಶೇಷವಾದ ಉಡುಗೊರೆಗಳನ್ನು ಘೋಷಿಸುತ್ತಿದ್ದರು.

ಒಂದು ರಾಜ್ಯದ/ಪ್ರಾಂತ್ಯದ ಸೋಲು ಗೆಲುವುಗಳು ಸೈನ್ಯದಲ್ಲಿನ ಸೈನಿಕ ಬಲವನ್ನೆ ಮುಖ್ಯವಾಗಿ ಅವಲಂಭಿಸಿರುತ್ತದೆ. ಉಂಡ ಅನ್ನದ ಋಣವನ್ನು ತೀರಿಸಲು ತಮ್ಮ ಒಡಯನಿಗಾಗಿ ಪ್ರಾಣವನ್ನು ಲೆಕ್ಕಿಸದೆ

---

[೩] ಆರ್. ಶೇಷಶಾಸ್ತ್ರಿ :- ಕರ್ನಾಟಕ ವೀರಕಲ್ಲುಗಳು, ಪು.ಸಂ-೪೩ & ೪೪.
[೪] ಎ.ಕ-೯, ಹೊ.ತಾ.೮೪, ಕ್ರಿ.ಶ.೭೨೦, ಚಿಕ್ಕನಹಳ್ಳಿ.

ಹೋರಾಡುವ ಸ್ವಾಮಿನಿಷ್ಠೆ. ಕೆಲವು ಸಂದರ್ಭದಲ್ಲಿ ಅರಸರು ತಾವು ಯುದ್ಧ ಮಾಡದೇ ತಮ್ಮ ಕಡೆಯ ಸೈನಿಕರಿಂದ ಶತ್ರು ಪಕ್ಷವನ್ನು ಗೆಲ್ಲುತ್ತಿದ್ದರು. ಯುದ್ದ ವ್ಯವಸ್ಥೆಯಲ್ಲಿ ವೀರತನದಿಂದ ಹೋರಾಡುವುದು, ಪ್ರಾಣವನ್ನು ಲೆಕ್ಕಿಸದೆ ತಮ್ಮವರನ್ನು ರಕ್ಷಿಸುವುದು ಸಾಮಾಜಿಕ ವ್ಯವಸ್ಥೆಯಲ್ಲಿ ಅನಿವಾರ್ಯ ಮೌಲ್ಯವಾಗಿದ್ದ ಪರಿಣಾಮವಾಗಿ ಹೋರಾಟಗಳಲ್ಲಿ ಗೆದ್ದ ಸಂಭ್ರಮಕ್ಕಿಂತ ಸೋತು ಸತ್ತವರ ಕುಟುಂಬದ ರೋಧನೆಯೇ ಹೆಚ್ಚಾಗಿರುತ್ತಿತ್ತು. ಆದರೆ ಆಳುವವರ ಪರವಿದ್ದ ರಾಜಕೀಯ ವ್ಯವಸ್ಥೆಯಲ್ಲಿ ರೋಧನವನ್ನು ಕೇಳ ಸಾಂತ್ವನಗೊಳಸುವರಿಲ್ಲ. ಒಂದು ಯುದ್ದ ನಡೆದರೆ ಕೆಲವರಾದರೂ ವಿಧವೆಯರಾಗುತ್ತಿದ್ದರು. ರಾಜ್ಯ ದಾಹ, ಭೂ ಕಲಹಗಳ ಪರಿಣಾಮವಾಗಿ ಲಕ್ಷಾಂತರ ಅಮಾಯಕ ಜನರ ಪ್ರಾಣತೆತ್ತ, ಬಲಿಯಾದ ಪ್ರಸಂಗಗಳಗೆ ಸಾಕ್ಷಿಯೆಂಬಂತೆ ಸಾವಿರಾರು ಶಾಸನಗಳು, ವೀರಗಲ್ಲುಗಳು ನಮ್ಮ ಕಣ್ಣ ಮುಂದೆ ಕಾಣಿಸುತ್ತದೆ.

ಯುದ್ಧದಲ್ಲಿ ಒಬ್ಬ ವೀರ ಮಡಿದರೆ ಸಾಕು ಅವನ ಬಗ್ಗೆ ಕಥೆಗಳು, ಗೀತೆಗಳು, ರಾಜ್ಯಾಮಟ್ಟದ ಯೋಧನಾಗಿದ್ದರೆ ಕಾವ್ಯಗಳು, ಶಿಷ್ಟಪದ ಮತ್ತು ಜನಪದಗಳಲ್ಲಿ ಹುಟ್ಟುತ್ತಲಿದ್ದವು. ಒಂದು ವೇಳೆ ಮರೆಯಲಾಗದ ರೀತಿಯಲ್ಲಿ ಸಾವನ್ನಪ್ಪಿದರೆ ಆತನು ತಕ್ಷಣ ರಾಜ್ಯಮಟ್ಟದ ನಾಯಕನ ಅಂತಸ್ತಿಗೆ ಏರಿ ಪ್ರಜೆಗಳ ಭಕ್ತಿ ಅನುಕಂಪೆಗಳಗೆ ಪಾತ್ರವಾಗಿ ಅನೇಕ ಕಡೆಗಳಲ್ಲಿ ಪೂಜೆಗೊಳ್ಳುತ್ತಿದ್ದನು. ಈ ರೀತಿಯಲ್ಲಿ ಒಂದು ಊರಿನ ಜನರ ಆರಾಧನೆಗೆ ಪಾತ್ರನಾಗಿರುವ ವೀರರೆಂದರೆ ಕಾಟಮರಾಯ, ಕೋಡಿರ್ಲಪ್ಪ.

ವೀರಗಲ್ಲನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇತ್ತೆಂದು ತೋರುತ್ತದೆ. ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು, ಇವು ಲೌಕಿಕ ಉದ್ದೇಶಗಳು, ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ತಮ್ಮ ಕರ್ತವ್ಯ ಎಂದು ಭಾವಿಸಿ, ಹಾಗೇ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆಯೆಂದು ನಂಬಿ ವೀರಗಲ್ಲುಗಳನ್ನು ನೆಡುವುದು ಪಾರಮಾರ್ಥಿಕ ಉದ್ದೇಶಗಳಾಯಿತ್ತು. ವೀರನು ಬದುಕಿದ ವೀರೋಚಿತ ಜೀವನವನ್ನು ಯಥಾವತ್ತಾಗಿ ವರ್ಣಿಸುವುದರಿಂದ ಅದು ಸಹಜವಾಗಿ ವೀರ ಶಾಸನವಾಗುತ್ತದೆ. ವೀರನ ಪರಾಕ್ರಮ ಲೋಕಕ್ಕೆ ತಿಳಯುವಂತೆ, ಅದರಿಂದ ಮುಂದಿನ ತಲೆಮಾರಿನ ವೀರರು ಉತ್ತೇಜನಗೊಳ್ಳುವಂತೆ, ಆ ವೀರನನ್ನು ತಮ್ಮ ಆದರ್ಶ ಪುರುಷನನ್ನಾಗಿ ಮಾಡಿಕೊಳ್ಳುವಂತೆ ಮಾಡುವುದೇ ಆಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಕೆಲವೊಂದು ವೀರಗಲ್ಲು ಶಾಸನಗಳಲ್ಲಿ ಯಾವ ಉದ್ದೇಶಕ್ಕಾಗಿ ನಿಲ್ಲಿಸಲಾಗಿದೆ ಎಂಬುದನ್ನು ತಿಳಸಿದರೆ ಶಿಲ್ಪದ ವೀರಗಲ್ಲನ್ನು ಯಾವ ಉದ್ದೇಶ ಎಂಬುದಕ್ಕೆ ಶಾಸನವಿರುವುದಿಲ್ಲ. ಶಿಲ್ಪದ

ರಚನೆಯಾಧಾರದ ಮೇಲೆ ಅವನ ಪರಾಕ್ರಮ, ಹೋರಾಟದ ಚಿತ್ರಣ, ಅವನ ಸ್ಥಾನಮಾನ, ಸ್ವರ್ಗ, ಕೈಲಾಸ, ವೈಕುಂಠಕ್ಕೂ ಪ್ರಾಪ್ತಿಯಾಗುತ್ತದೆ ಎಂಬ ಲೌಕಿಕ ನಂಬಿಕೆ.

ಶಿಲ್ಪದ ವೀರಗಲ್ಲುಗಳಲ್ಲಿ ಸಾಧಾರಣವಾಗಿ ಒಂದು ಹಂತದಿಂದ, ಎರಡು, ಮೂರು ಹಂತಗಳವರೆಗೂ ಕೆಲವೊಮ್ಮೆ ನಾಲ್ಕು, ಐದು ಹಂತಗಳವರೆಗೂ ವೀರಗಲ್ಲುಗಳಿರುತ್ತವೆ. ವೀರನ ಮೆರವಣಿಗೆ, ಯುದ್ಧಕ್ಕೆ ಹೋಗುವ ಚಿತ್ರಣ, ಹೋರಾಟದ ಹಂತಗಳು, ಹೋರಾಟದಲ್ಲಿ ಕುದುರೆಗಳನ್ನು, ಕಾಲಾಳುಗಳನ್ನು, ಎರಡನೇಯ ಹಂತದಲ್ಲಿ ಅಪ್ಸರೆಯರು ಸ್ವರ್ಗಕ್ಕೆ ವೀರನನ್ನು ಕೊಂಡೊಯ್ಯುತ್ತಿರುವುದು. ಮೂರನೇಯ ಹಂತದಲ್ಲಿ ವೀರನು ಸ್ವರ್ಗದಲ್ಲಿ ತನ್ನ ಇಷ್ಟ ದೈವದ ಸಾನಿಧ್ಯದಲ್ಲಿ ಪದ್ಮಾಸನದಲ್ಲಿ ಕುಳಿತ್ತಿರುವಂತೆ, ತನ್ನ ಇಷ್ಟ ದೈವದ ಸನ್ನಿಧಿಯಲ್ಲಿ ಶೈವನಾದರೆ ಕೈಲಾಸದಲ್ಲಿ ಶಿವಲಿಂಗದ ಮುಂದೆ, ವೈಷ್ಣವನಾದರೆ ವೈಕುಂಠದಲ್ಲಿ ವಿಷ್ಣು ಸನ್ನಿಧಿಯಲ್ಲಿ, ಜೈನನಾದರೆ ಜಿನನ ಸನ್ನಿಧಿಯಲ್ಲಿ ಅಂಜಲೀ ಬದ್ದನಾಗಿ ಕುಳಿತಿರುವ ಉಬ್ಬು ಶಿಲ್ಪವಿರುತ್ತದೆ.

ಕೆಲವೊಮ್ಮೆ ಒಂದೇ ಹಂತದ್ದಾಗಿರುವ ವೀರಗಲ್ಲುಗಳಲ್ಲಿ ವೀರನ ಶಿಲ್ಪವನ್ನು ದೊಡ್ಡದಾಗಿ ಕೆತ್ತಿರುತ್ತಾರೆ. ವೀರಗಲ್ಲುಗಳ ಪಾಠ ಮತ್ತು ಶಿಲ್ಪವನ್ನು ಗುರುತಿಸಿ ಅದರ ಬಗ್ಗೆ ಮಹತ್ವದ ಅಂಶಗಳನ್ನು ತಿಳಿಯಪಡಿಸಲು ಆ ನಾಡಿನ ಪರಂಪರಾನುಗತ ಸಾಂಪ್ರದಾಯಿಕ ಕತೆಯನ್ನು, ಜನರ ಮನೋಧರ್ಮಗಳನ್ನು, ವೀರನ ಸಾವಿಗೆ ಕಾರಣವಾದ ಹೋರಾಟವನ್ನು, ಮಡಿದವನ ಜೀವನದ ಮೌಲ್ಯ, ಸಾಹಸ, ಶೌರ್ಯ ಅವನು ಬಳಸುತ್ತಿದ್ದ ಆಯುಧಗಳು, ಧರಿಸುತ್ತಿದ್ದ ಆಭರಣ, ವಸ್ತ್ರ, ಅಲಂಕಾರಗಳನ್ನು ವೀರಗಲ್ಲಿನಿಂದ ತಿಳಿಯಬಹುದು.

ಕೆಲವೊಂದು ವೀರಗಲ್ಲುಗಳಲ್ಲಿ ವೀರ ಒಬ್ಬನೇ ಅಥವಾ ಸತಿಯೊಡನೆ ವೀರನು ಇರುವ ಚಿತ್ರಗಳನ್ನು ಸಹ ಕಾಣಬಹುದು. ವೀರನು ವೀರಗಲ್ಲಿನ ಬಲಭಾಗದಿಂದ ಹೋರಾಡುತ್ತಿರುವಂತೆ ಬಿಡಿಸಲಾಗಿರುತ್ತದೆ. ವೀರಗಲ್ಲಿನ ರಚನೆಗಳ ಆರಂಭ ಕಾಲದಿಂದಲೂ ಕಂಡುಬರುವ ಪರಂಪರೆ, ಸಂಪ್ರದಾಯವಾಗಿದೆ.

ಮಡಿದ ವೀರನ ಪರಾಕ್ರಮವನ್ನು ಲೋಕಕ್ಕೆ ತಿಳಿಯಪಡಿಸುವಲ್ಲಿ ವೀರಗಲ್ಲಿನ ಪಾಠವನ್ನು ತಯಾರಿಸಿದ ಶಾಸನಕಾರನ ಪ್ರತಿಭೆಯಷ್ಟೇ ಮುಖ್ಯ ಪಾತ್ರ ವೀರಗಲ್ಲಿನ ಶಿಲ್ಪಿಯ ಪ್ರತಿಭೆಯು. ಕೆಲವು ಕಡೆ ವೀರಗಲ್ಲಿನ ಶಾಸನಕಾರನಿಗಿಂತಲೂ ಮಹತ್ತರವಾದ ಪಾತ್ರವನ್ನು ಶಿಲ್ಪಿ ವಹಿಸಿದ್ದಾನೆ. ವೀರಗಲ್ಲುಗಳ ಶಿಲ್ಪಿಗಳ ಬಗ್ಗೆ ಹೇಳುವುದಾದರೆ ವೀರಗಲ್ಲುಗಳನ್ನು ಮಾಡಿದ ಶಿಲ್ಪಿಯ ಹೆಸರು ಮಾತ್ರ ದೊರೆಯುತ್ತದೆ. ಉಳಿದ ವಿವರಗಳು ಅಂದರೆ ಶಿಲ್ಪಿಯ ಬಿರುದು ಮುಂತಾದ ಕೆಲವು ಅಂಶಗಳು ತಿಳಿಯುತ್ತವೆಯೇ ವಿನಾ

ಅವನ ವೈಯಕ್ತಿಕ ವಿವರಗಳು ದೊರೆಯುವುದಿಲ್ಲ. ಸತ್ತ ವೀರನಿಗೆ ಅಂತ್ಯ ಸಂಸ್ಕಾರಗಳನ್ನು ಮಾಡುತ್ತಿದ್ದವರೇ ಅವರ ಮಕ್ಕಳು ಹಾಕ್ಸಿರುವುದಕ್ಕೆ ಹಲವಾರು ಶಾಸನಗಳು ಸಿಗುತ್ತದೆ. ಹೊಸಕೋಟೆ ತಾಲ್ಲೂಕಿನ ಅಟ್ಟೂರು ಎಂಬ ಗ್ರಾಮದಲ್ಲಿನ ಪೊನ್ನಾಚಾರಿ ಮಾಡಿದ ವೀರಗಲ್ಲು **(ಚಿತ್ರ ಸಂಖ್ಯೆ – ೧೨)** ಪ್ರಾಚೀನವಾದ ವೀರಗಲ್ಲಾಗಿದೆ[೫].

ಜಿಲ್ಲಾದ್ಯಂತ ಗಂಗರ ಕಾಲಕ್ಕೆ ಸೇರಿದ ಹಲವಾರು ವೀರಗಲ್ಲುಗಳಂದ ಮೊದಲುಗೊಂಡು ವಿಜಯನಗರೋತ್ತರದವರೆಗೆ ಸುಮಾರು ೧೩ ಶತಮಾನಗಳ ಕಾಲ ವಿಭಿನ್ನ ಶೈಲಿಯ ವೀರಗಲ್ಲುಗಳನ್ನು ಕಾಣಬಹುದು. ಅದು ಅಲ್ಲದೆ ಈ ಪ್ರದೇಶವು ಗಂಗರ ಉಪ ರಾಜಧಾನಿಗಳನ್ನು ಒಳಗೊಂಡಿದ್ದರೂ ಹೆಚ್ಚಿನ ಸಾಂಸ್ಕೃತಿಕ ಹಾಗೂ ಆರ್ಥಿಕ ಅಭಿವೃದ್ಧಿಗಳು ಕಂಡುಬಂದಿಲ್ಲ. ಸದಾ ಯುದ್ದದ ನೆರಳಿನಲ್ಲೇ ಸಾಗುತ್ತಿತ್ತಾ ಸಾಮ್ರಾಜ್ಯದ ಉಳಿವಿಗಾಗಿ, ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತಿದ್ದ ಗಂಗರು, ನೊಳಂಬರು ಬಹುಕಾಲದವರೆವಿಗೂ ಚಾಲುಕ್ಯರು, ಪಲ್ಲವರು, ರಾಷ್ಟ್ರಕೂಟರು, ಚೋಳರ ನಡುವೆ ನಡೆದ ಅನೇಕ ಯುದ್ಧಗಳ ಯುದ್ಧ ಭೂಮಿಯೆ ಆಗಿತ್ತು. ಆದುದ್ದರಿಂದಲೇ ಇವರ ಕಾಲದ ಹೆಚ್ಚು ವೀರಗಲ್ಲುಗಳು ದೊರೆಯುತ್ತದೆ. ಇಲ್ಲಿನ ವೀರಗಲ್ಲುಗಳು ವೀರನ ಶೌರ್ಯವನ್ನು ತೋರಿಸುವುದರ ಜೊತೆಗೆ ಯುದ್ಧದ ಭೀಕರತೆಯನ್ನು ಸಹ ತೋರಿಸಲಾಗಿದೆ. ಗಂಗರ ಮತ್ತು ನೊಳಂಬರ ಕಾಲದ ವೀರಗಲ್ಲುಗಳ ಲಕ್ಷಣಗಳನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದು.

ವಿಶಾಲವಾದ ಕಲ್ಲು ಚಪ್ಪಡಿಗಳ ಬಳಕೆ. ಯಾವುದೇ ಅಳತೆ ಅಥವಾ ಇನ್ನಿತರ ಮಾನದಂಡ ಬಳಸಿಲ್ಲ, ವೀರನಿಗೆ ಹೆಚ್ಚಿನ ಪ್ರಾಶಸ್ತ್ಯ, ವೀರನನ್ನು ಪ್ರಧಾನವಾಗಿ ತೋರಿಸಿದ್ದರೂ ಕೆಲವೊಂದು ಕಡೆ ಚಿಕ್ಕದಾಗಿ ಶತ್ರು ಹಾಗೂ ಪ್ರಾಣಿಗಳನ್ನು ತೋರಿಸಲಾಗಿರುತ್ತದೆ, ಶತ್ರು ಹಾಗೂ ಶತ್ರು ಸೈನ್ಯವನ್ನು ವಿರಳವಾಗಿ ಬಿಡಿಸಲಾಗಿರುತ್ತದೆ, ಬಹುತೇಕವಾಗಿ ವೀರನನ್ನು ಆಲೀಢಾಸನದಲ್ಲಿರುವಂತೆ ಚಿತ್ರಿಸಲಾಗಿರುತ್ತದೆ. ಇವನು ಖಡ್ಗ ಹಾಗೂ ಬಿಲ್ಲನ್ನು ಹಿಡಿದಿರುತ್ತಾನೆ. ಎಲ್ಲಾ ಶಿಲ್ಪಗಳಲ್ಲಿಯೂ ವೀರನ ಎಡಗಾಲು ಮುಂದೆ ಇರುತ್ತದೆ, ಪಟ್ಟಿಕೆಗಳು ಅಥವಾ ಹಂತಗಳು ಇವರ ಪಟ್ಟಿಕೆಗಳಲ್ಲಿ ತೀರಾ ವಿರಳ, ಶಾಸನೋಕ್ತ ವೀರಗಲ್ಲುಗಳು ಸಹ ವಿರಳವಾಗಿವೆ, ಧರ್ಮಗಳ ಚಿಹ್ನೆ ಇರುವುದಿಲ್ಲ, ಗಂಗ, ನೊಳಂಬರ ಕಾಲದಲ್ಲಿ ಶಿಲ್ಪಿಗಳು ವೀರಗಲ್ಲುಗಳನ್ನು ಮಾಡುವುದಕ್ಕೆ ಬಿಳಿಯ ಹಸಿಕಲ್ಲನ್ನು ಮತ್ತು ಕೆಲವೊಮ್ಮೆ ಸುಟ್ಟ ಕಲ್ಲು ಚಪ್ಪಡಿಯನ್ನೂ ಆಯ್ಕೆ ಮಾಡಿದ್ದಾರೆ. ಇವರು ವೀರಗಲ್ಲುಗಳಿಗೆ ಒಂದು ಆಕಾರವನ್ನು ಕೊಡುವುದರ ಬದಲು ಕಲ್ಲಿನ ಮೂಲ ಆಕಾರಕ್ಕೆ ಹೊಂದುವ ಹಾಗೆ ಶಿಲ್ಪವನ್ನು ಬಿಡಿಸುವ ಪ್ರಯತ್ನ ಮಾಡಿದ್ದಾರೆ. ಈ

[೫] ಎ.ಕ–೯, ಹೊ.ತಾ.೮೭, ಕ್ರಿ.ಶ.೭೫೦, ಅಟ್ಟೂರು.

ಕಾಲದಲ್ಲಿ ರಚಿತವಾದ ವೀರಗಲ್ಲುಗಳು ಬಹುತೇಕ ಏಕ ವ್ಯಕ್ತಿ ಪ್ರಧಾನವಾದವು. ಸಾಮಾನ್ಯವಾಗಿ ಒಂದೆಡೆಯಲ್ಲೇ ಒಂದು ಅಥವಾ ಅದಕ್ಕಿಂತ ಹೆಚ್ಚು ಐದು-ಆರು ಸಂಖ್ಯೆಯಲ್ಲಿರುತ್ತವೆ. ಊರಿನ ಹೊರಭಾಗದಲ್ಲಿ, ಕೆರೆಯ ಬಳಿಯಲ್ಲಿ, ಹೊಲಗದ್ದೆಯ ಬಳಿಯಲ್ಲಿ, ದೇವಾಲಯದ ಬಳಿಯಲ್ಲಿ ಸಾಮಾನ್ಯವಾಗಿ ಇವು ಪೂರ್ವಾಭಿಮುಖವಾಗಿರುತ್ತವೆ. ವೀರಗಲ್ಲಿನ ವಿನ್ಯಾಸದಲ್ಲಿ ವೀರಗಲ್ಲು ಪ್ರತಿನಿಧಿಸುವ ವೀರನ ಹೋರಾಟದ ಚಿತ್ರಣಕ್ಕೆ ಮಹತ್ವದ ಸ್ಥಾನವನ್ನು ನೀಡಲಾಗಿದೆ. ವೀರಗಲ್ಲುಗಳ ಶಿಲ್ಪದಲ್ಲಿ ವೀರನ ಚಿತ್ರಕ್ಕೆ ಪ್ರಮುಖ ಸ್ಥಾನವನ್ನು ನೀಡಲಾಗಿದೆ. ವೀರಗಲ್ಲಿನ ಮಧ್ಯಭಾಗವೆಲ್ಲ ವೀರನ ಶಿಲ್ಪದಿಂದಲೆ ಆವರಿಸುತ್ತದೆ, ಸಾಮಾನ್ಯವಾಗಿ ವೀರನು ಆಲೀಢಾಸನದಲ್ಲಿ ನಿಂತಿರುತ್ತಾನೆ. ವೀರನು ವೀರಗಲ್ಲಿನ ಬಲಭಾಗದಿಂದಲೂ ಶತ್ರು ಪಕ್ಷದವರು ಎಡ ಭಾಗದಿಂದಲೂ ಬಂದು ಹೋರಾಡುತ್ತಿರುವಂತೆ ಬಿಡಿಸಲಾಗಿರುತ್ತದೆ. ವೀರನನ್ನು ಪುಷ್ಪಕ ವಿಮಾನದಲ್ಲಿ ಕೂರಿಸಿಕೊಂಡು, ಸ್ವರ್ಗಕ್ಕೆ ಹೋಗುವ ಪರಿಕಲ್ಪನೆ ಪುಷ್ಪಕ ವಿಮಾನದ ಮೇಲೆ ಪದ್ಮಾಸನದಲ್ಲಿ ಅಥವಾ ಸುಖಾಸನದಲ್ಲಿ ಕುಳಿತಿರುತ್ತಾನೆ. ಇದು ಎಲ್ಲಾ ವೀರಗಲ್ಲುಗಳಲ್ಲಿ ಆರಂಭ ಕಾಲದಿಂದಲೂ ಗಮನಿಸಬಹುದಾದ ಒಂದು ಸಂಪ್ರದಾಯ. ಯುದ್ಧದ ಚಿತ್ರಣವನ್ನು ನೀಡುವಲ್ಲಿ ಹಲವು ಶಿಲ್ಪಿಗಳು ತಮ್ಮ ಅಸಾಧಾರಣವಾದ ಪ್ರತಿಭೆಯನ್ನು ತೋರಿದ್ದಾರೆ. ಶಿಲ್ಪದಲ್ಲಿ ಚಲನೆ(ಮೂವ್‌ಮೆಂಟ್) ಮತ್ತು ಕ್ರಿಯೆ(ಆಕ್ಷನ್)ಯನ್ನು ಬಹಳ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ವೀರಗಲ್ಲಿನಲ್ಲಿ ಪಾಠವನ್ನು ಇಂತಲ್ಲಿಯೇ ಬರೆಯಬೇಕೆಂಬ ನಿಯಮವನ್ನು ಅನುಸರಿಸುತ್ತಿರಲಿಲ್ಲ. ಸ್ಥಳವಿದ್ದ ಕಡೆಯಲ್ಲಾ ಅಕ್ಷರಗಳನ್ನು ಕೆತ್ತುತ್ತಿದ್ದರು. ಬಹುಪಾಲು ವೀರಗಲ್ಲುಗಳ ಮೇಲೆ ಶಾಸನವಿರುವುದಿಲ್ಲ. ಒಂದು ವೇಳೆ ಇದ್ದರೂ ತುಂಬಾ ಚಿಕ್ಕದಾಗಿರುವುದರಿಂದ ಯುದ್ಧದ ವಿವರಗಳು ನಿಖರವಾಗಿ ತಿಳಿಯುವುದಿಲ್ಲ.

ವಿಜಯನಗರ ಕಾಲದ ವೀರಗಲ್ಲುಗಳು ತಮ್ಮದೆ ಆದ ಕೆಲವು ಗುಣಲಕ್ಷಣಗಳಿಂದ ಕೂಡಿರುತ್ತದೆ. ವೀರಗಲ್ಲುಗಳಲ್ಲಿ ವಾಸ್ತು ಮತ್ತು ಮೂರ್ತಿಶಿಲ್ಪಗಳಲ್ಲಿ ಕಾಣುವ ಹಠಾತ್ತನೆಯ ಬದಲಾವಣೆಯನ್ನು ವೀರಗಲ್ಲುಗಳಲ್ಲಿಯೂ ಕಾಣಬಹುದಾಗಿದೆ. ಶಿಲ್ಪವನ್ನು ಸೂಕ್ಷ್ಮವಾಗಿ ಚಿತ್ರಿಸುವ ಬದಲು ಕಲೆಗಾರಿಕೆ ಗೌಣವಾಗಿ ಶಿಲ್ಪಕ್ಕಿಂತ ವಿಷಯವನ್ನು ತಿಳಿಸುವುದೇ ಮುಖ್ಯವಾಗಿ ಕಂಡುಬರುತ್ತಿತ್ತು. ವೀರಗಲ್ಲುಗಳೂ ತಮ್ಮ ಸಮಕಾಲೀನ ವಸ್ತು ಮತ್ತು ಮೂರ್ತಿ ಶಿಲ್ಪದ ರೀತಿಯನ್ನೇ ಅನುಸರಿಸಿದವೆಂದು ಹೇಳಬೇಕು. ಏಕೆಂದರೆ ಇಂಥ ಬದಲಾವಣೆಯನ್ನು ಶಿಲೆಯ ಆಯ್ಕೆಯಲ್ಲಿ ಮಾತ್ರವಲ್ಲದೆ, ಶಿಲ್ಪದ ವಿವರಗಳಲ್ಲಿಯೂ ಗಮನಿಸಬಹುದು. ಹಿಂದಿನ ಸಂಪ್ರದಾಯದಂತೆ ಘಟನೆಗಳನ್ನು ಹಂತ ಹಂತಗಳಲ್ಲಿ ನಿರೂಪಿಸುವ ತಂತ್ರವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿಲ್ಲ ಎನ್ನಬಹುದು.

ಗಂಗರ ಕಾಲದ ಕೆಲವು ವೀರಗಲ್ಲುಗಳ ಹಾಗೆ ಯುದ್ಧ ಸನ್ನದ್ಧನಾಗಿರುವಂತೆ ವೀರನೊಬ್ಬನ ಚಿತ್ರವನ್ನು ಮಾತ್ರ ಬಿಡಿಸಲಾಗಿರುತ್ತದೆ ಮತ್ತು ಅಲ್ಲಿನ ಹಾಗೆಯೇ ವೀರನ ಚಿತ್ರಕ್ಕೆ ಪ್ರಾಮುಖ್ಯವನ್ನು ನೀಡಲಾಗಿರುತ್ತದೆ. ಗಂಗರ ಕಾಲದ ಹಾಗೆ ದೊಡ್ಡದಾಗಿರದೆ, ಸಾಧಾರಣ ಗಾತ್ರ ಅಥವಾ ಚಿಕ್ಕದಾಗಿರುತ್ತದೆ. ಕೆಲವೊಮ್ಮೆ ದೊಡ್ಡದಾಗಿರುತ್ತದೆ. ಈ ಕಾಲದ ಒಂದೇ ವೀರಗಲ್ಲು ಇಬ್ಬರು ಅಥವಾ ಮೂವರ ಸ್ಮಾರಕವಾಗಿರುವುದುಂಟೂ. ಮತ್ತೆ ಕೆಲವು ಕಡೆ ವೀರಗಲ್ಲು ಯಾವ ವ್ಯಕ್ತಿಯ ಸ್ಮಾರಕವಾಗಿರುತ್ತದೆಯೋ ಆ ವ್ಯಕ್ತಿಯ ಹೆಸರು ಮಾತ್ರ ಇರುತ್ತದೆ. ಒಂದೇ ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳ ಪಾಠ ಕೆಲವೊಮ್ಮೆ ಒಂದೇ ರೀತಿಯಲ್ಲಿರುತ್ತದೆ. ವ್ಯಕ್ತಿಯ ಹೆಸರನ್ನು ಬಿಟ್ಟರೆ ಉಳಿದಂತೆ ದೊರೆಯುವ ಎಲ್ಲಾ ವಿವರಗಳು ಒಂದೇ ಆಗಿರುತ್ತದೆ. ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಶಂಖ, ಚಕ್ರ, ಪದ್ಮ, ಶಿವಲಿಂಗ, ಬಸವನನ್ನು ಸಾಮಾನ್ಯವಾಗಿ ಬಿಡಿಸಿರುತ್ತಾರೆ.

ಗಂಗ ಮತ್ತು ನೊಳಂಬರ ಕಾಲದ ಕೆಲವು ವೀರಗಲ್ಲುಗಳ ಪಾಠದ ವಿಷಯ ನಿರೂಪಣಾ ಕ್ರಮವನ್ನು ಹೀಗೆ ಗುರುತಿಸಬಹುದೆಂದು ತೋರುತ್ತದೆ. ಆರಂಭದಲ್ಲಿ ಶುಭಸೂಚಕ ಪದ ಇರುತ್ತದೆ. ಅನಂತರ ಶಕ ಸಂವತ್ಸರದ ವಿವರ, ಅರಸನ ವಿವರ, ಯಾರು ಯಾರಿಗೆ ನಡೆದ ಹೋರಾಟ, ಆ ಹೋರಾಟದಲ್ಲಿ ಸತ್ತ ವ್ಯಕ್ತಿಯ ಹೆಸರು, ಅವನ ಮನೆಯವರಿಗೆ ದತ್ತಿಯನ್ನು ಕೊಟ್ಟವರ ಮತ್ತು ದತ್ತಿಯ ವಿವರ, ಆ ನಂತರ ಶಾಪಾಶಯದ ಭಾಗ. ವೀರನು ಹೋರಾಟದಲ್ಲಿ ಮಡಿದ ಎಂಬುದನ್ನು ತಿಳಿಸಲು 'ಸ್ವರ್ಗಿ'ಯಾದ, 'ಸುರಲೋಕಂ ಪೊಕ್ಕಂ' ಎಂಬ ವಾಕ್ಯಗಳನ್ನಷ್ಟೆ ಪದೇ ಪದೇ ಪ್ರಯೋಗ ಮಾಡಿರುವುದು ಕಂಡು ಬರುತ್ತದೆ.

ನಂತರ ಶತಮಾನಗಳ ವೀರಗಲ್ಲುಗಳಲ್ಲಿ ದೊರೆಯುವಂತೆ ವೀರನು ಸ್ವರ್ಗವಾಸಿಯಾದ ಬಗ್ಗೆ ಸುದೀರ್ಘವಾದ ವಿವರಣೆ ದೊರೆಯುವುದಿಲ್ಲ. ಹದಿನಾಲ್ಕನೇಯ ಶತಮಾನದಿಂದ ವೀರಗಲ್ಲುಗಳ ಭಾಷೆ ಮತ್ತೆ ಗದ್ಯದ ಕಡೆಗೆ ಒಲಿಯಿತು. ಚಂಪೂ ಶೈಲಿ ಹಿಂದುಳಿಯಿತು. ಹದಿನೈದು, ಹದಿನಾರನೇ ಶತಮಾನಗಳ ವೀರಗಲ್ಲುಗಳ ಪಾಠವಂತೂ ಸಂಪೂರ್ಣ ಗದ್ಯದಲ್ಲಿಯೇ ಇದೆ. ಈ ಗದ್ಯವೂ ಕೆಲವೊಮ್ಮೆ ಗ್ರಾಮ್ಯ ಮಾತುಗಳಿಂದಲೇ ತುಂಬಿದೆ. ಶಾಸನ ಪಾಠದಲ್ಲಿ ಅಕ್ಷರಗಳು ಬಹಳವಾಗಿ ಕಾಣಿಸಿಕೊಂಡಿವೆ.

ಶಾಸನೋಕ್ತ ವೀರಗಲ್ಲುಗಳ ಅಧ್ಯಯನದಿಂದ ಶಾಸನ ಯಾವ ಕಾಲಘಟ್ಟದ್ದು ಮತ್ತು ಯಾವ ರಾಜ ವಂಶದ್ದು ಎಂದು ಸುಲಭವಾಗಿ ಗುರ್ತಿಸಬಹುದು. ಆದರೆ ಶಾಸನ ರಹಿತ ವೀರಗಲ್ಲು (ಶಿಲ್ಪ

ವೀರಗಲ್ಲುಗಳು) ಗಳನ್ನು ಗುರ್ತಿಸುವುದು ಸ್ವಲ್ಪ ಕಷ್ಟಸಾಧ್ಯವಾಗುತ್ತದೆ. ಆದರೂ ಕೆಲವೊಂದು ಶಿಲ್ಪ ಲಕ್ಷಣಗಳು, ಕಲ್ಲಿನ ಬಳಕೆಯ ಆಧಾರದ ಮೇಲೆ ಯಾವ ಕಾಲಘಟ್ಟದೆಂದು ಊಹಿಸಬಹುದಾಗಿದೆ.

ಅಪರೂಪಕ್ಕೆ ಕೆಲವು ವೀರಗಲ್ಲುಗಳಲ್ಲಿ ರಣರಂಗದ ಇಡೀ ದೃಶ್ಯದ ಶಿಲ್ಪವು ದೊರೆಯುತ್ತದೆ. ಇಂತಹ ಅಪರೂಪದ ವೀರಗಲ್ಲುಗಳಿಗೆ ಅತ್ಯುತ್ತಮ ಉದಾಹರಣೆಯೆಂದರೆ ಇತ್ತೀಚೆಗೆ ಶೋಧಿತವಾಗಿರುವ ದೇವನಹಳ್ಳಿ ತಾಲ್ಲೂಕಿನ ವೆಂಕಟಗಿರಿ ಕೋಟೆಯ ವೀರಗಲ್ಲುಗಳ ಜೊತೆಗೆ ಬೇಗೂರಿನ ವೀರಗಲ್ಲು, ಕೋಲಾರದ ಕೋಲಾರಮ್ಮನ ದೇವಾಲಯದ ಬಳಿಯಿರುವ ವೀರಗಲ್ಲುಗಳನ್ನು ಹೋಲಿಕೆ ಮಾಡಬಹುದು. ಇವುಗಳನ್ನು ವೀರಗಲ್ಲುಗಳು ಎನ್ನುವುದಕ್ಕಿಂತ ರಣಸಂಗ್ರಾಮದಶಿಲೆ ಎನ್ನಬಹುದು.

ಒಬ್ಬ ರಾಜನು ತನ್ನ ನೆರೆಯ ರಾಜ್ಯವನ್ನು ಗೆದ್ದರೆ, ಸೋತ ರಾಜನ ಕುಟುಂಬಕ್ಕೆ ಸೇರಿದ ವ್ಯಕ್ತಿಯೊಬ್ಬನನ್ನು ರಾಜನನ್ನಾಗಿ ನೇಮಿಸಿ ಗೆದ್ದವನ ಹೆಸರಿನಲ್ಲಿ ಆಡಳಿತವನ್ನು ನಡೆಸುತ್ತಾನೆ. ಎಂಬುದಕ್ಕೆ ರಾಷ್ಟ್ರಕೂಟರ ೧ನೇಯ ಕೃಷ್ಣನು ಗಂಗರ ಮೇಲೆ ಆಕ್ರಮಣವೆಸಗಿದಾಗ ಶ್ರೀ ಪುರುಷನು ಬಲವಾಗಿ ಪ್ರತಿಭಟಿಸಿದನು. ಕೃಷ್ಣನು ತನ್ನ ಮಗ ೨ನೇ ಗೋವಿಂದನ ನೆರವಿನಿಂದ ಮಣ್ಣೆಯವರೆಗೂ ಮುನ್ನಡೆದನು. ಗಂಗರಾಜ್ಯದ ಸ್ವಲ್ಪಭಾಗವನ್ನು ಗೆದ್ದುಕೊಂಡು, ಉಳಿದ ಪ್ರಾಂತ್ಯಗಳನ್ನು ಶ್ರೀ ಪುರುಷನಿಗೆ ಬಿಟ್ಟುಕೊಟ್ಟರು[೬]. ರಾಷ್ಟ್ರಕೂಟರ ಧೃವನು ಶಿವಮಾರನನ್ನು ಸೋಲಿಸಿ, ತನ್ನಮಗನಾದ ಕಂಬಾರಸನನ್ನು ಆಡಳಿತಾಧಿಕಾರಿಯಾಗಿ, ಶಿವಮಾರನ ಮಗ ಮಾರಸಿಂಹನನ್ನು ಯುವರಾಜನಾಗಿ ನೇಮಿಸುತ್ತಾನೆ.

ವೀರಗಲ್ಲುಗಳನ್ನು ಎರಡು ರೀತಿ ವಿಂಗಡಿಸಿಕೊಳ್ಳಬಹುದು ೧. ಶಾಸನೋಕ್ತ ವೀರಗಲ್ಲು ೨. ಶಾಸನ ರಹಿತ (ಶಿಲ್ಪ) ವೀರಗಲ್ಲು. ಹೀಗೆ ವಿಭಾಗ ಮಾಡಿಕೊಳ್ಳುವುದರಲ್ಲಿಯೂ ಕೆಲವು ಸಮಸ್ಯೆ ಎದುರಿಸಬೇಕಾಗುತ್ತದೆ. ಕೆಲವು ಶಾಸನಗಳು ವೀರಗಲ್ಲುಗಳಾಗಿದ್ದರೂ ಶಿಲ್ಪ ಇರುವುದಿಲ್ಲ ಇಂತಹ ಶಾಸನಗಳು ಯಾವ ವಿಭಾಗದಲ್ಲಿ ಸೇರಿಸಬೇಕು ಎಂಬ ಸಮಸ್ಯೆ ಕಾಡುತ್ತದೆ. ಜಿಲ್ಲೆಯಲ್ಲಿ ಬಹುತೇಕ ಕಡೆ ಕೇವಲ ಒಬ್ಬನೆ ವೀರ ಅಥವಾ ರಾಜನಿರುವಂತಹ ವೀರಗಲ್ಲುಗಳು ದೊರೆತರೆ, ಕೆಲವೆಡೆ ಒಂದೇ ಗ್ರಾಮದ ಇಬ್ಬರು ಯುದ್ಧದಲ್ಲಿ ಅಥವಾ ಇನ್ನಿತರೆ ಕಾರಣಗಳಿಂದ ವೀರಮರಣವನ್ನಪ್ಪಿರುವುದಕ್ಕೂ ಸಹ ನಿದರ್ಶನಗಳಿವೆ.

---

[೬] ತಮಿಳ್ ಸೆಲ್ವಿ :- ಗಂಗರ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು.ಸಂ-೧೬೦.

ಗಂಗರು ತಮ್ಮ ವೀರಗಲ್ಲುಗಳಲ್ಲಿ ವೀರ ಅಥವಾ ರಾಜನಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದನ್ನು ಗಮನಿಸಬಹುದು. ಇಲ್ಲಿ ಶಿಲ್ಪಿಯ ಪಾತ್ರವು ಬಹಳ ಮುಖ್ಯವಾಗಿರುತ್ತದೆ. ವೀರನ ಸ್ವಾಮಿನಿಷ್ಠೆ, ಶೌರ್ಯ, ಪರಾಕ್ರಮಗಳು ಮಾತ್ರವೇ ಶಿಲ್ಪಿಯ ಕಣ್ಣಿನಲ್ಲಿ ಇರುತ್ತದೆ. ಆದ್ದರಿಂದ ಅವನು ಉಳಿದ ವಿಷಯಗಳ ಬಗ್ಗೆ ಹೆಚ್ಚಿನ ಗಮನವನ್ನು ನೀಡದೆ ಕೇವಲ ವೀರನ ಅಥವಾ ರಾಜನ ಶಿಲ್ಪವನ್ನು ರಚಿಸಲು ಮಾತ್ರ ಹೆಚ್ಚಿನ ಗಮನವನ್ನು ನೀಡುತ್ತಾನೆ. ಈ ರೀತಿಯ ವೀರಗಲ್ಲುಗಳು ಬಹಳಷ್ಟು ಜಿಲ್ಲೆಯಲ್ಲಿದ್ದು ಬಹುಪಾಲು ಶಾಸನ ರಹಿತವಾಗಿವೆ. ವೀರಗಲ್ಲುಗಳನ್ನು ರಚಿಸಲು ಬಳಸಿರುವ ಮಾಧ್ಯಮ, ವೀರನ ಬಟ್ಟೆ, ಆಯುಧಗಳ ಆಧಾರದ ಮೇಲೆ ಇವುಗಳನ್ನು ಗಂಗರ ಕಾಲದವು ಎಂದು ಹೇಳಬಹುದಷ್ಟೆ. ಈ ವೀರ ಅಥವಾ ರಾಜ ಯಾರು? ಯಾವ ಉದ್ದೇಶಕ್ಕಾಗಿ ಯುದ್ಧಮಾಡಿ ವೀರಮರಣವನ್ನಪ್ಪಿದ ಎಂಬ ವಿಷಯಗಳನ್ನು ತಿಳಿಯಲು ಶಾಸನಗಳು ಇಲ್ಲದೆ ಇರುವುದರಿಂದ ವೀರನ ಮರಣದೊಂದಿಗೆ ಅವನ ಶೌರ್ಯ, ಪರಾಕ್ರಮಗಳು ಸಹ ಅವನೊಡನೆಯೆ ಸ್ವರ್ಗಸ್ತವಾಗಿವೆ ಎಂದು ಹೇಳಬೇಕಾಗುತ್ತದೆ. ಕೇವಲ ಅವನ ಹೆಸರನ್ನು ಕೂಡ ಉಲ್ಲೇಖಿಸದೆ ಇರುವುದು ಬೇಸರದ ಸಂಗತಿ. ಬಹುಶಃ ಜಾತಿ ಧರ್ಮಗಳಿಂದಾಚೆಗೆ ವೀರನು ನಿಲ್ಲುತ್ತಿದ್ದುದರಿಂದ ಅವನನ್ನು ಕೇವಲ ಶಿಲ್ಪದ ರೂಪದಲ್ಲಿಯೇ ಅವನನ್ನು ಸ್ಮರಿಸಲು ಬಯಸುತ್ತಿದ್ದರೇನೋ?

ಆವತಿ ಗ್ರಾಮದಲ್ಲಿನ ನಾಲ್ಕು ಅಡಿ ಉದ್ದಗಲದ ಚೌಕಾಕಾರದ ವೀರಗಲ್ಲಿನಲ್ಲಿ **(ಚಿತ್ರ ಸಂಖ್ಯೆ–೬)** ವೀರನು ಎಡಗಾಲನ್ನು ಮುಂಚಾಚಿ ಹೋರಾಟದ ಭಂಗಿಯಲ್ಲಿ ನಿಂತಿದ್ದು, ಎಡಗೈಲಿ ಬಿಲ್ಲನ್ನು, ಬಲಗೈಯಲ್ಲಿ ಚಿಕ್ಕ ಕಿರುಗತ್ತಿಯಿದೆ. ಕೈ, ಕಾಲು, ಕಿವಿ, ಕುತ್ತಿಗೆಯಲ್ಲಿ ಆಭರಣಗಳನ್ನು ಕಾಣಬಹುದು. ಕಚ್ಚೆಯನ್ನು ಕಟ್ಟಿದ್ದು, ಸೊಂಟಕ್ಕೆ ಕಿರುವಸ್ತ್ರವೊಂದನ್ನು ಸುತ್ತಿಕೊಂಡಿರುವುದು, ಅಗಲವಾದ ಕಣ್ಣುಗಳನ್ನು, ವೀರನಿಗೆ ಚಾಮರ ಸೇವೆ ಸಲ್ಲಿಸುತ್ತಿರುವ ಕೈಯೊಂದನ್ನು ರಚಿಸಲಾಗಿದೆ.

ಹೊಸಕೋಟೆ ತಾಲ್ಲೂಕಿನ ಅಟ್ಟೂರುನಲ್ಲಿ ಸುಮಾರು ನಾಲ್ಕೈದು ಅಡಿ ಎತ್ತರ ೨ ವೀರಗಲ್ಲಿನಲ್ಲಿ **(ಚಿತ್ರ ಸಂಖ್ಯೆ–೭)** ಒಂದು ನಿಂತಿದ್ದರೆ, ಇನ್ನೊಂದು ವೀರಗಲ್ಲಿನ ಮುಂದೆ ಬೇವಿನ ಮರ ಬೆಳೆದಿದೆ. ವೀರನು ಆಲೀಡಾಸನ ಭಂಗಿಯಲ್ಲಿ ನಿಂತಿದ್ದು, ಎಡಗೈಯಲ್ಲಿ ಬಿಲ್ಲನ್ನು, ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ತೊಡೆಯ ಮೇಲೆ ಬಾಣವನ್ನು ನಾಟಿರುವುದನ್ನು ಕಾಣಬಹುದು. ಸೊಂಟಕ್ಕೆ ಸುತ್ತಿದ ಬಟ್ಟೆಯಲ್ಲಿ ಚಾಕುವನ್ನು ಸಿಕ್ಕಿಸಲಾಗಿದೆ. ಕೈಯಲ್ಲಿ, ಕಾಲಿನಲ್ಲಿ ಕಡುಗ, ತೊಳಿನಲ್ಲಿ ತೋಳಬಂಧ, ಕೊರಳಿನಲ್ಲಿ ಹಾರವಿದ್ದು, ತಲೆ ಗೂದಲನ್ನು ನಂಬೂದ್ರಿ ಬ್ರಾಹ್ಮಣರು ಜುಟ್ಟು ಕಟ್ಟುವ ಹಾಗೆ ಮುಡಿ ಕಟ್ಟಲಾಗಿದೆ. ವೀರನ ತಲೆಯ ಮೇಲೆ ಚಿಕ್ಕದಾಗಿ ಇಬ್ಬರು ಅಪ್ಸರೆಯರು ಪುಷ್ಪಕ ವಿಮಾನದಲ್ಲಿ ಸುಖಾಸನದಲ್ಲಿ ಕುಳಿತಿರುವ

ವೀರನನ್ನು ಸ್ವರ್ಗಕ್ಕೆ ಕರೆದೊಯ್ಯಲು ಸಿದ್ದರಾಗಿ ನಿಂತಿರುವಂತೆ ಕೈಯಲ್ಲಿ ಚಾಮರ ಹಿಡಿದಿದ್ದಾರೆ. ಮರದ ಬಳಿಯ ಶಿಲ್ಪದಲ್ಲಿ ವೀರನು ನಿಂತ ದಾಟಿಯಲ್ಲಿ ಎಡಗೈಯಲ್ಲಿ ಕಠಾರಿ, ಬಲಗೈಯಲ್ಲಿ ಖಡ್ಗವನ್ನು ಹಿಡಿದು ಮುನ್ನುಗ್ಗುತ್ತಿರುವಂತೆ, ಅವನ ಸೊಂಟದಲ್ಲಿ ಎದುರಾಳಿಯ ಬಾಣ ನಾಟಿದೆ. ಕಚ್ಚೆಯನ್ನು ತೊಟ್ಟಿದ್ದು ಮೈಮೇಲೆ ಆಭರಣಗಳಿದ್ದರೆ, ಕಾಲಿನಲ್ಲಿ ಕಾಲ್ಗಡಗ, ಕಾಲ್ಸರ ಎರಡೂ ಇವೆ. ತಲೆಗೂದಲು ಮುಡಿಗಟ್ಟಿದ್ದು ಅದಕ್ಕೆ ಬಿಗಿದಿರುವ ಬಟ್ಟೆ ಕುಚ್ಚಿನಂತೆ ಕಾಣುತ್ತದೆ.

ದೊಡ್ಡಬೆಳವಂಗಲದ ಚನ್ನರಾಯಸ್ವಾಮಿ ದೇವಾಲಯದ ಆವರಣದಲ್ಲಿನ ಪೂರ್ವಾಭಿಮುಖವಾಗಿ ಕ್ರಿ.ಶ.೮೮೦ ರ ಕಾಲದ ನೊಳಂಬರಾಜ ಮಹೇಂದ್ರನು ಆಳ್ವಿಕೆ ಮಾಡುತ್ತಿದ್ದಾಗ ಗಂಗರಸನ ಸೇವಕನಾದ ಅರದರ ಒಡೆಯ ಚಿಕ್ಕಕಾಕ ಮೋಸೆ ಎಂಬುವನು ಮಹೇಂದ್ರನ ವಿರುದ್ಧ ಹೋರಾಡುತ್ತಾ ಪ್ರಾಣ ತೆತ್ತು, ವೀರ ಸ್ವರ್ಗವನ್ನೇರಿದನು **(ಚಿತ್ರ ಸಂಖ್ಯೆ–೯)**. ಈ ವೀರಗಲ್ಲು ಪಕ್ಕದಲ್ಲಿ ನಾಲ್ಕು **(ಚಿತ್ರ ಸಂಖ್ಯೆ–೧೦)** ಶಿಲ್ಪವೀರಗಲ್ಲುಗಳಿವೆ. ಈ ಎಲ್ಲಾ ವೀರಗಲ್ಲುಗಳು ಗಂಗ ನೊಳಂಬರ ನಡುವಿನ ಯುದ್ಧದಲ್ಲಿ ಮಡಿದ ವೀರರ ಶಿಲ್ಪಗಳಾಗಿವೆ. ಇವುಗಳು ಸುಮಾರು ಮೂರು ಅಡಿಯಷ್ಟು ಎತ್ತರವಾಗಿವೆ. ಖಡ್ಗ, ಕತ್ತಿ, ಕಠಾರಿ, ಗುರಾಣಿ ಆಯುಧಗಳು ಕೈಯಲ್ಲಿವೆ. ಇಲ್ಲಿ ವೀರರು ಆಲೀಢಭಂಗಿಯಲ್ಲಿದ್ದಾರೆ.

ಮುಪ್ಪಡಿಘಟ್ಟದ ವೀರಗಲ್ಲುವಿನಲ್ಲಿ **(ಚಿತ್ರ ಸಂಖ್ಯೆ–೮)** ವೀರನೊಬ್ಬನು ತನ್ನ ಎಡಗೈಯಲ್ಲಿ ಗುರಾಣಿಯನ್ನು, ಬಲಗೈಯಲ್ಲಿ ಖಡ್ಗವನ್ನು ಹಿಡಿದು ಆಲೀಢಾಸನದಲ್ಲಿ ವೀರಾವೇಶದಿಂದ ಎದುರಾಳಿಯನ್ನು ಎದುರಿಸಲು ಸಿದ್ಧವಾಗಿರುವಂತೆ ನಿಂತಿರುವುದು. ಅವನ ಎದುರಿಗೆ ಆನೆಯಿದ್ದು, ಬಹುಶಃ ವೀರನು ಆನೆಯನ್ನು ಕೊಂದಿರಬೇಕು. ವೀರನ ಕಾಲ ಕೆಳಗೆ ಇಬ್ಬರು ಶತ್ರುಗಳ ಶವಗಳಿವೆ. ವೀರನ ಜೊತೆಗೆ ಸಹಾಯಕರಾಗಿ ಮತ್ತಿಬ್ಬ ವೀರರು ಹೋರಾಡುತ್ತಿದ್ದಾರೆ. ವೀರನ ಕುದುರೆ ಮತ್ತು ಸಹಾಯಕರನ್ನ ಕಂಡರೆ ವೀರನು ರಾಜಮನೆತನದವನಾಗಿರಬೇಕು. ವೀರನಿಗೆ ೬ ಬಾಣಗಳು ನಾಟಿದೆ. ಮೇಲ್ಭಾಗದಲ್ಲಿ ವೀರನನ್ನು ದೇವಕನ್ಯರಾದ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವುದು. ಇಲ್ಲಿ ಯಾವುದೋ ದೊಡ್ಡ ಯುದ್ಧನೇ ನಡೆದಿರಬೇಕು. ಈ ಕಲ್ಲನ್ನು ೧೦ನೇ ಶತಮಾನಕ್ಕೆ ಸೇರಿರಬಹುದು.

ಅಶ್ವರೋಹಿಯಾದ ವೀರನು ಬಲಗೈಯಲ್ಲಿ ಕತ್ತಿ ಹಿಡಿದು ಮೇಲೆತ್ತಿದ್ದರೆ ಕುದುರೆಯ ಹಿಂದೆ ನಾಲ್ಕು ಜನ ಸತಿಯರಿದ್ದಾರೆ. ವೀರನನ್ನು ಸ್ವರ್ಗಕ್ಕೆ ಕರೆದೊಯ್ಯಲಯ ಪಲ್ಲಕಿಯನ್ನು ಚಿತ್ರವನ್ನು ಕಾಣಬಹುದು. ಕುದುರೆ ಮತ್ತು ವೀರನ ಅಲಂಕಾರಗಳನ್ನು **(ಚಿತ್ರ ಸಂಖ್ಯೆ–೧೧)** ಗಮನಿಸಿದರೆ ವೀರನು ಅರಸು ಮನೆತನದವನಾಗಿರಬೇಕು. ಎಲ್ಲರೂ ತಲೆ ಪಕ್ಕಕ್ಕೆ ಮುಡಿ ಕಟ್ಟಿಕೊಂಡಿದ್ದಾರೆ.

ಹೊಸಕೋಟೆ ತಾಲೂಕಿನ ಬೇಚಿರಾಖ್ ಮಾರೇನಹಳ್ಳಿಯ ಭೀಮಲಿಂಗೇಶ್ವರ ದೇವಾಲಯದ ಹಿಂಭಾಗದ ತೋಟಗಳಲ್ಲಿರುವ ಹಲವು ವೀರಗಲ್ಲುಗಳು ಗಂಗರ ಕಾಲಕ್ಕೆ ಸಂಬಂಧಿಸಿದ್ದು, ಅವುಗಳು ನಿರ್ಲಕ್ಷ್ಯಕ್ಕೆ ಒಳಗಾಗಿ ಕಸದ ರಾಶಿಯಂತೆ ಒಂದರ ಮೇಲೊಂದು ಹಾಕಲಾಗಿದೆ **(ಚಿತ್ರ ಸಂಖ್ಯೆ–೧೨)**. ಸ್ಥಳೀಯ ಜನರಿಗೆ ಇದರ ಮಹತ್ವ ಹಾಗೂ ಇವುಗಳ ಬಗ್ಗೆ ಅರಿವು ಇಲ್ಲದೆ ಇರುವುದು ಪ್ರಮುಖ ಕಾರಣವಾಗಿರುವುದರ ಜೊತೆಗೆ ಇವುಗಳು ವ್ಯವಸಾಯ ಭೂಮಿಯ ಮಧ್ಯಭಾಗದಲ್ಲಿ ಇದ್ದುದ್ದರಿಂದ ಅವುಗಳನ್ನು ಜೆಸಿಬಿ ಯಂತ್ರದ ಮೂಲಕ ತೆಗೆಸಿ ಒಂದು ಮೂಲೆಯಲ್ಲಿ ತಂದು ಹಾಕಲಾಗಿದೆ. ಇಲ್ಲಿ ಹತ್ತಕ್ಕೂ ಹೆಚ್ಚು ವೀರಗಲ್ಲುಗಳಿವೆ. ಇಲ್ಲಿಯೇ ಇರುವ ಬಸಪ್ಪನ ಹೊಲದಲ್ಲಿ ಎರಡು ವೀರಗಲ್ಲುಗಳಿದ್ದು ಅವುಗಳು ಸಹ ಹೊಲದ ಬದುವಿನ ಮೇಲೆ ನಿರ್ವಹಣೆಯಿಲ್ಲದೆ ಬಿದ್ದಿವೆ. ಇಲ್ಲಿನ ಒಂದು ವೀರಗಲ್ಲು ೫ ಅಡಿಯಷ್ಟು ವಿಸ್ತಾರವಾಗಿದೆ. ಈ ವೀರಗಲ್ಲು ಶಿಲ್ಪದಲ್ಲಿ **(ಚಿತ್ರ ಸಂಖ್ಯೆ–೧೩)** ರಾಜನು ಯುದ್ಧ ಮಾಡುತ್ತಾ ವೀರಮರಣವನ್ನಪ್ಪಿರುವುದನ್ನು ಚಿತ್ರಿಸಲಾಗಿದೆ. ವೀರನ ಬಲಭಾಗದಲ್ಲಿ ಪಟ್ಟದ ಕುದುರೆ ಇದ್ದು, ಛತ್ರಿಯನ್ನು ಹಿಡಿದು ನಿಂತಿರುವ ವ್ಯಕ್ತಿ ಚಿತ್ರ ಕಂಡುಬರುತ್ತದೆ. ವೀರಗಚ್ಚೆಯೊಂದಿಗೆ ಆಲೀಢಾಸನದಲ್ಲಿರುವ ರಾಜನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಲಗೈಯಲ್ಲಿ ದೊಡ್ಡದಾದ ಕುಡಗೋಲು ರೀತಿಯ ಖಡ್ಗವನ್ನು ಮೇಲಕ್ಕೆ ಎತ್ತಿದ್ದಾನೆ. ಕೂದಲನ್ನು ತುರುಬಿನ (ಜಟಾಜೂಟ) ರೀತಿ ಕಟ್ಟಲಾಗಿದೆ. ಕತ್ತಿನಲ್ಲಿ ಕಂಠಿಕೆಯನ್ನು ಧರಿಸಲಾಗಿದೆ. ವೀರನನ್ನು ಇಬ್ಬರು ಅಪ್ಸರೆಯರು ಚಾಮರ ಸೇವೆಯೊಂದಿಗೆ ಕೈ ಹಿಡಿದುಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವುದನ್ನು ಮೇಲ್ಭಾಗದಲ್ಲಿ ಚಿಕ್ಕದಾಗಿ ತೋರಿಸಲಾಗಿದೆ. ಈ ಕಲ್ಲು ಬಹಳಷ್ಟು ವಿಸ್ತೀರ್ಣವಾಗಿದ್ದರೂ ಯಾವುದೇ ಶಾಸನಗಳನ್ನು ಒಳಗೊಂಡಿಲ್ಲ

ಇಲ್ಲಿಯೆ ಮತ್ತೊಂದು ಭಗ್ನಗೊಂಡು ಬಿದ್ದಿರುವ ವೀರಗಲ್ಲು ಇದ್ದು **(ಚಿತ್ರ ಸಂಖ್ಯೆ–೧೪)**, ಛತ್ರಿ ಇರುವುದರಿಂದ ಇದು ಸಹ ರಾಜನ ಮರಣೋತ್ತರ ಸ್ಥಾಪಿಸಿರುವ ವೀರಗಲ್ಲು ಎಂದು ಹೇಳಬಹುದು. ದಪ್ಪದಾದ ಜಟಾಜೂಟವನ್ನು ಹಾಕಿ ಆಲೀಢಾಸನದಲ್ಲಿ ನಿಂತಿರುವ ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಉದ್ದವಾಗಿರುವ ಗುರಾಣಿಯನ್ನು ಹಿಡಿದಿದ್ದಾನೆ. ವೀರನು ಸ್ವರ್ಗಸ್ತನಾಗಿರುವುದನ್ನು ತೋರಿಸಲು ಅಪ್ಸರೆಯರು ಕರೆದುಕೊಂಡು ಹೋಗುತ್ತಿರುವ ಚಿಕ್ಕದಾದ ಶಿಲ್ಪವನ್ನು ಮೇಲ್ಭಾಗದಲ್ಲಿ ಚಿತ್ರಿಸಲಾಗಿದೆ. ಕರ್ಣಕುಂಡಲ, ಕಂಠಿಕೆ, ಹಸ್ತಕಟಕ ಮುಂತಾದ ಆಭರಣಗಳ ಅಲಂಕರಣೆಯನ್ನು ಶಿಲ್ಪವು ಒಳಗೊಂಡಿದೆ.

ಇದೇ ತಾಲ್ಲೂಕಿನ ಸೂಲಿಬೆಲೆ ಹೋಬಳಿ, ಕಮ್ಮಸಂದ್ರದ ಸೋಮೇಶ್ವರ ದೇವಾಲಯದ ಮುಂಭಾಗ ಹಾಗೂ ಬಲಭಾಗದಲ್ಲಿ ಬಹಳಷ್ಟು ವೀರಗಲ್ಲುಗಳಿವೆ. ಇವುಗಳಲ್ಲಿ ಬಹುತೇಕ ಏಕ

ವ್ಯಕ್ತಿಯನ್ನು ಕೇಂದ್ರೀಕರಿಸಿರುವ ವೀರಗಲ್ಲುಗಳಾಗಿದ್ದು ಶಾಸನ ರಹಿತವಾಗಿವೆ. ಬಲಭಾಗದ ಮೊದಲನೇ ವೀರಗಲ್ಲು **(ಚಿತ್ರ ಸಂಖ್ಯೆ–೧೫)** ರಾಜನದ್ದಾಗಿದೆ. ಇಲ್ಲಿ ಇಬ್ಬರು ಸ್ತ್ರೀಯರು ಚಾಮರ ಹಿಡಿದು ಮೇಲಕ್ಕೆ ಕರೆದುಕೊಂಡು ಹೋಗುತ್ತಿರುವಂತಿದೆ. ವೀರಗಚ್ಚೆಯೊಂದಿಗೆ ಆಲೀಢಾಸನದಲ್ಲಿ ಇರುವ ವೀರನು ಎಡಗೈಯಲ್ಲಿ ಬಿಲ್ಲು ಬಲಗೈಯಲ್ಲಿ ಉದ್ದವಾದ ಖಡ್ಗವನ್ನು ಸೊಂಟದ ಭಾಗದಲ್ಲಿ ಹಿಡಿದಿದ್ದಾನೆ. ಸೊಂಟದಲ್ಲಿ ಒರೆ ಇದೆ. ಕಠಾರಿ ಅಥವಾ ಚಿಕ್ಕ ಚಾಕುವಿನಂತಹ ಆಯುಧ ಹಿಂಭಾಗದಲ್ಲಿದೆ. ಕರ್ಣಕುಂಡಲಗಳು, ಕಂಠಿಕೆ, ಹಸ್ತಕಟಕ, ಪಾದಕಟಕಗಳನ್ನು ಧರಿಸಿದ್ದಾನೆ. ತೊಡೆ ಹಾಗೂ ಮೊಣಕಾಲಿನ ಭಾಗದಲ್ಲಿ ಹಲವು ಬಾಣಗಳು ನಾಟಿವೆ. ಬಲಭಾಗದಲ್ಲಿ ಜೀನಿನೊಂದಿಗೆ ಛತ್ರಿ ಸಮೇತ ಇರುವ ಪಟ್ಟದ ಕುದುರೆಯಿದೆ. ಇಲ್ಲಿಯ ಮತ್ತೊಂದು ವೀರಗಲ್ಲಿದ್ದು **(ಚಿತ್ರ ಸಂಖ್ಯೆ–೧೬)**, ವೀರನು ಖಡ್ಗ ಮತ್ತು ಗುರಾಣಿಯನ್ನು ಹಿಡಿದು ಹೋರಾಡುತ್ತಿರುವಂತೆ ತೋರಿಸಲಾಗಿದೆ. ಆಲೀಢ ಭಂಗಿಯಲ್ಲಿರುವ ವೀರನು ವೀರಗಚ್ಚೆ, ತುರುಬು, ಕರ್ಣಕುಂಡಲ, ಕಂಠಿಕೆ, ಹಸ್ತಕಟಕಗಳ ಅಲಂಕರಣೆಯನ್ನು ಹೊಂದಿದ್ದಾನೆ. ಸೊಂಟದಲ್ಲಿ ಚಿಕ್ಕದಾದ ಚಾಕುವಿನ ರೀತಿಯ ಆಯುಧ ಸಹ ಇದೆ. ಬೆನ್ನ ಭಾಗದಲ್ಲಿ ಭರ್ಜಿ, ಸೊಂಟದ ಭಾಗದಲ್ಲಿ ಬಾಣಗಳು ವೀರನ ದೇಹವನ್ನು ಹೊಕ್ಕಿವೆ. ಎಡಭಾಗದಲ್ಲಿ ಚಿಕ್ಕದಾಗಿ ಶತ್ರುವನ್ನು ತೋರಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ವೀರನನ್ನು ಅಪ್ಸರೆಯರು ಕರೆದುಕೊಂಡು ಹೋಗುತ್ತಿರುವುದನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ಬೆನ್ನ ಹಿಂಭಾಗದಲ್ಲಿ ಭರ್ಜಿ ಇರುವುದರಿಂದ ಶತ್ರುಗಳು ಹಿಂಭಾಗದಿಂದ ಧಾಳಿ ಮಾಡಿ ಸಂಹರಿಸಿದ್ದಾರೆ ಎಂಬುದನ್ನು ತೋರಿಸಲು ಈ ರೀತಿಯಾಗಿ ಶಿಲ್ಪಿಯು ತೋರಿಸಿರಬಹುದು.

ಇನ್ನೊಂದು ವೀರಗಲ್ಲಿನಲ್ಲಿ **(ಚಿತ್ರ ಸಂಖ್ಯೆ–೧೭)** ವೀರನನ್ನು ಬಲಿಷ್ಠವಾಗಿ ಹಾಗೂ ಸುಂದರವಾಗಿ ತೋರಿಸಲಾಗಿದೆ. ತುರುಬನ್ನು ವಸ್ತ್ರದಿಂದ ಕಟ್ಟಲಾಗಿದ್ದು, ಅದು ಗಾಳಿಗೆ ಹಾರಾಡುತ್ತಿರುವಂತಿದೆ. ಕರ್ಣಕುಂಡಲ, ಕಂಠಿಕೆ, ಕೇಯೂರ, ಹಸ್ತಕಟಕ, ಪಾದಕಟಕಗಳನ್ನು ಧರಿಸಿದ್ದಾನೆ. ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಸೊಂಟ, ತೊಡೆ ಹಾಗೂ ಭುಜಗಳ ಭಾಗದಲ್ಲಿ ಶತ್ರುಗಳು ಬಿಟ್ಟಿರುವ ಬಾಣಗಳು ನಾಟಿವೆ. ಆಲೀಢಾಸದಲ್ಲಿರುವ ಇವನು ನೆರಿಗೆಯುಕ್ತವಾದ ವೀರಗಚ್ಚೆಯನ್ನು ಧರಿಸಿದ್ದಾನೆ. ಅಪ್ಸರೆಯರನ್ನು ಮುಖದ ಎರಡೂ ಬದಿ ಚಿಕ್ಕದಾಗಿ ತೋರಿಸಲಾಗಿದೆ. ಈ ಶಿಲ್ಪದಲ್ಲಿನ ಅಲಂಕರಣೆಯನ್ನು ನೋಡಿ ಈತ ರಾಜನಿರಬಹುದೆಂದು ಊಹಿಸಬಹುದಾದರೂ ಛತ್ರಿ ಹಾಗೂ ಪಟ್ಟದ ಕುದುರೆಯ ರಚನೆ ಇಲ್ಲಿ ಮೂಡಿಸಿಲ್ಲ.

ದಳಸಗೆರೆ ಬಳಿ ಅರೆಹಳ್ಳಿಯ ರಸ್ತೆ ಬದಿಯಲ್ಲಿನ ಮಹೇಂದ್ರ ನೊಳಂಬನ್‌ನ ಗಂಗ ಆರು ಸಾವಿರದಲ್ಲಿ ನೆಲ್ಲಿಗೆರೆಯ ತುರುಗೊಂಡಲ್ಲಿ ಪೊಸಮೆಂದಿ ವಿರುದ್ಧ ಹೋರಾಡಿ ಸ್ವರ್ಗಕ್ಕೆ ಹೋದ ವಿಷಯವನ್ನು ವಿವರಿಸುವ ಶಾಸನೋಕ್ತ ವೀರಗಲ್ಲುವಿನಲ್ಲಿ **(ಚಿತ್ರ ಸಂಖ್ಯೆ–೧೮)** ಆಲೀಢ ಭಂಗಿಯಲ್ಲಿ ಮುನ್ನುಗ್ಗುತ್ತಿರುವಂತಿರುವ ವೀರನು ಬಲಗೈಯಲ್ಲಿ ಕಠಾರಿಯನ್ನು ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ತಲೆಯ ಮಧ್ಯಭಾಗದಲ್ಲಿ ಜಟಾಜೂಟವನ್ನು ಹಾಕಲಾಗಿದೆ. ಆಭರಣಗಳ ಅಲಂಕರಣೆಯು ಸಹ ಇದೆ. ಎದೆಯ ಭಾಗದಲ್ಲಿ ಎರಡು ಬಾಣಗಳು ನಾಟಿವೆ. ತಲೆಕೆಳಗಾಗಿರುವ ಕತ್ತಿ, ದೀಪಸ್ತಂಭ, ಕುಂಭಗಳನ್ನು ಶಿಲ್ಪದಲ್ಲಿ ಬಿಡಿಸಿಲಾಗಿದೆ. ಇವೆಲ್ಲವೂ ಸೋಲಿನ ಮತ್ತು ಮರಣದ ಸಂಕೇತಗಳಾಗಿ ಬಳಸಿರಬೇಕು.

ಒಬ್ಬನೇ ವೀರನಿರುವ ವೀರಗಲ್ಲುಗಳನ್ನು ಪೂಜಿಸುವಂತೆ ಇವುಗಳನ್ನು ಸಹ ಪೂಜಿತ್ತಿರುವುದನ್ನು ನೋಡಬಹುದು.ಕಮ್ಮಸಂದ್ರದ ಸೋಮೇಶ್ವರ ದೇವಾಲಯದ ಮುಂಭಾಗದಲ್ಲಿ ಇಬ್ಬರು ವೀರರು ಹೋರಾಡಿ ವೀರಮರಣವನ್ನಪ್ಪಿರುವುದನ್ನು **(ಚಿತ್ರ ಸಂಖ್ಯೆ–೧೯)** ತಿಳಿಸಲು ಸ್ಮಾರಕವನ್ನು ಸ್ಥಾಪಿಸಲಾಗಿದೆ. ಬಲಭಾಗದಲ್ಲಿರುವ ವೀರನು ಆಲೀಢ ಭಂಗಿಯಲ್ಲಿದ್ದು ವೀರಗಚ್ಚೆಯನ್ನು ಧರಿಸಿ ಮುನ್ನುಗ್ಗಿ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಕತ್ತಿಯನ್ನು ಹಿಡಿದಿರುವ ಇವನ ದೇಹಕ್ಕೆ ಶತ್ರುಗಳು ಬಿಟ್ಟಿರುವ ಬಾಣಗಳು ಭುಜ, ಎದೆ, ಸೊಂಟ, ತೊಡೆಭಾಗದಲ್ಲಿ ನಾಟಿವೆ. ತುರುಬನ್ನು ವಸ್ತ್ರದಿಂದ ಕಟ್ಟಿರುವ ಇವನು ಆಭರಣಗಳ ಅಲಂಕರಣೆಯನ್ನು ಸಹ ಹೊಂದಿದ್ದಾನೆ. ಎಡಭಾಗದಲ್ಲಿರುವ ವೀರನು ಸಹ ಬಿಲ್ಲು ಮತ್ತು ಕತ್ತಿಯನ್ನು ಹಿಡಿದು ಆಲೀಢ ಭಂಗಿಯಲ್ಲಿದ್ದಾನೆ. ತುರುಬನ್ನು ವಸ್ತ್ರದಿಂದ ಕಟ್ಟಿರುವುದರ ಜೊತೆಗೆ ಕರ್ಣಕುಂಡಲಗಳು, ಕಂಠಿಕೆ, ಕೇಯೂರ, ಹಸ್ತಕಟಕಗಳನ್ನು ಧರಿಸಿದ್ದಾನೆ. ಸೊಂಟ ಹಾಗೂ ಎದೆಯ ಭಾಗದಲ್ಲಿ ಬಾಣಗಳು ನಾಟಿವೆ. ಇಲ್ಲಿ ಕೇವಲ ಒಬ್ಬ ವ್ಯಕ್ತಿಯನ್ನು ಇಬ್ಬರು ಅಪ್ಸರೆಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಬಹುಶಃ ಇಬ್ಬರು ಸಹ ಸ್ವರ್ಗವನ್ನಪ್ಪಿದರು ಎಂಬುದನ್ನು ಸಾಂಕೇತಿಕವಾಗಿ ತೋರಿಸಲು ಒಂದೇ ಕಡೆ ಅಪ್ಸರೆಯರನ್ನು ತೋರಿಸಿರಬಹುದು. ಈ ಇಬ್ಬರು ವೀರರ ಮಧ್ಯೆ ಕುದುರೆ ಹಾಗೂ ಛತ್ರಿಯನ್ನು ಬಿಡಿಸಿರುವುದರಿಂದ ಇವರು ರಾಜಕುಮಾರರಿರಬಹುದು ಅಥವಾ ರಾಜಮನೆತನಕ್ಕೆ ಸೇರಿದಿವರಾಗಿರಬೇಕು ಎಂದು ಊಹಿಸಬಹುದಾಗಿದೆ.

ವೀರಗಲ್ಲುಗಳಲ್ಲದೆ ವೀರರ ಗುಡಿಗಳು ಒಂದೇ ಸ್ಥಳದಲ್ಲಿರುವುದನ್ನು ಸಹ ಕಾಣಬಹುದು. ಎಲ್ಲಾ ಕಡೆಗಳಲ್ಲಿರುವ ವೀರಗಾರರ ಗುಡಿಗಳ ಲಕ್ಷಣಗಳು ಒಂದೇ ರೀತಿಯಲ್ಲಿರುತ್ತದೆ. ಊರ ಹೊರಗೆ ಒಂದೇ ಕಡೆ ಒಂದೇ ಗುಡಿಯಿರಬಹುದು ಅಥವಾ ಹಲವಾರು ಗುಡಿಗಳು ಲಾಳಾಕಾರದಲ್ಲಿ ಬೃಹತ್

ಶಿಲಾಯುಗದ ಕಲ್ಮನೆಗಳನ್ನು ಹೋಲುತ್ತದೆ. ಕೆಲವು ಕಡೆ ಸಾಲುಸಾಲುಗಳಾಗಿರುವ ಕಡೆ ಒಂದು ಪ್ರಧಾನವಾದ ಗುಡಿಯಿದ್ದು ಅದಕ್ಕೆ ದೇವಾಲಯಗಳನ್ನು ಕಟ್ಟಿರುತ್ತಾರೆ. ಒಂದೇ ರೀತಿಯ ವೀರಗಾರರ ಗಾಡಿಗಳ ಲಕ್ಷಣಗಳು ಯಾವ ಊರಿನಲ್ಲಿ ಇದೆಯೋ ಆ ಊರಿನ ಹೆಸರಿನ ಜೊತೆಗೆ ಅಪ್ಪ ಎಂಬುದು ಸೇರಿ ವೀರನ ಹೆಸರಾಗಿ ದೇವರಾಗಿರುತ್ತದೆ. ದೊಡ್ಡಹುಲ್ಲೂರಿನ ವೀರನಗುಡಿಯನ್ನು ಹುಲ್ಲುರಪ್ಪನಗುಡಿ, ನಲ್ಲೂರಿನಲ್ಲಿರುವ ವೀರನಗುಡಿಯನ್ನು ನಲ್ಲೂರಪ್ಪನ ದೇವಾಲಯ ಎಂದು ಕರೆಯಲಾಗಿದೆ.

ಕುರುಬ ಜನಾಂಗದವರಲ್ಲಿ ಮದುವೆಯಾಗದೇ ಸತ್ತ ಯುವಕರನ್ನು ವೀರಗಾರ, ಈರಗಾರ ಎಂಬುದಾಗಿ ಕರೆಯುತ್ತಾರೆ[೭]. ಬೇಡರನ್ನು ನಾಯಕರು ಎಂಬುದಾಗಿಯೂ ಕರೆಯುತ್ತಾರೆ. ಇವರು ಮೊದಲಿನಿಂದಲೂ ಹೋರಾಟಕ್ಕೆ ಮೀಸಲಾಗಿದ್ದ ಕ್ಷಾತ್ರವೃತ್ತಿಯ ವೀರ ಜನಾಂಗ. ವೀರನನ್ನು ಆರಾಧಿಸುವ ಮತ್ತೊಂದು ಜನಾಂಗವೆಂದರೆ ಗೊಲ್ಲರು,

ಆನೆಕಲ್ಲು ತಾಲ್ಲೂಕಿನ ರೆಡ್ಡಿ ಜನಾಂಗದವರು ತಮ್ಮ ಗಂಡು ಮಕ್ಕಳ ಮದುವೆಯ ಸಂದರ್ಭದಲ್ಲಿ ವೀರಗಾರರಿಗೆ ಎಡಯನ್ನು ನೀಡುತ್ತಾರೆ. ಮದುವೆಯ ಹಿಂದಿನ ದಿನ ಅರ್ಧ ರಾತ್ರಿಯಲ್ಲಿ ಬಿಳಿಯ ಸೀರೆಯನ್ನುಟ್ಟು ಮಹಿಳೆಯೊಬ್ಬಳು ನಡೆಯುತ್ತಾಳೆ. ಅವಳ ಹಿಂದೆ ಇತರರು ಕತ್ತಿಗಳನ್ನು ಹಿಡಿದು ವೀರಗಾರರಿಗೆ ಎಡೆ ನೀಡಲು ಹೋಗುತ್ತಾರೆ. ಇವರ ಜೊತೆಗೆ ಮಂಗಳವಾದ್ಯದವರು ಹೋಗುತ್ತಾರೆ. ತಮ್ಮ ಹಿರಿಯರಿಗೆ ಹಿಂದೆ ಎಂದೋ ಸಹಾಯ ಮಾಡಿದ ಚಮ್ಮಾರನನ್ನು ನೆನೆದು ತಮ್ಮ ಊರಿನ ಚಮ್ಮಾರನನ್ನು ಕರೆಸಿ ಅವನಿಗೆ ಎಡೆಯಿಟ್ಟು ಅವರ ಕೆರವನ್ನು ಮದುವೆಯ ಗಂಡು ಮೆಟ್ಟುತ್ತಾನೆ. ಹಾಗೆಯೆ ತಮ್ಮ ಹಿರಿಯರು ಎಲ್ಲಿಂದಲೋ ಬರುವಾಗ ಹೊಳೆದಾಟಲು ಸಹಾಯ ಮಾಡಿದ ಹತ್ತಿ ಮರವನ್ನು ಪೂಜಿಸುತ್ತಾರೆ.

ದೊಡ್ಡಹುಲ್ಲೂರ ಬೀರರ ಗುಡಿಗಳಿರುವ ಹುಲ್ಲೇಶ್ವರ ಆವರಣದಲ್ಲಿ ೧೨ ವರ್ಷಗಳಿಗೊಮ್ಮೆ ಜಾತ್ರೆ ನಡೆಯುತ್ತದೆ. ಹಾಲು ಮತದವರು ಬೀರರ ಗುಡಿಗೆ ಪೂಜೆ ಮಾಡುತ್ತಿದ್ದಾರೆ. ಊರಿನ ಮಧ್ಯದಲ್ಲಿರುವ ಹುಲ್ಲೇಶ್ವರ ಈಗ ಬೀರರ ಗುಡಿಯಾಗಿ ಹೊಸದಾಗಿ ದೇವಾಲಯವನ್ನು ನವ ಶೈಲಿಯಲ್ಲಿ ಜೀರ್ಣೋದ್ಧಾರ ಮಾಡಲಾಗಿದ್ದು, ದೇವಾಲಯದ ಬಲಭಾಗದ ತಡೆಗೋಡೆಗೆ ೪೦ ಗುಡಿಗಳನ್ನು **(ಚಿತ್ರ ಸಂಖ್ಯೆ–೨೦)** ಗ್ರಾನೈಟ್ ಕಲ್ಲಿನಿಂದ ನಿರ್ಮಿಸಿ, ಗುಡಿಗಳಲ್ಲಿ ೪,೫,೨,೧ ಸರಾಸರಿಯಂತೆ ೬೯ ವೀರ, ಮಾಸ್ತಿ ಹಾಗೂ ವೀರ ಮಾಸ್ತಿಗಳ ಶಿಲ್ಪಗಲ್ಲುಗಳನ್ನು ಕಾಣಬಹುದು. ದೇವಾಲಯದ ಮುಂದಿರುವ ಬಲಭಾಗದಲ್ಲಿ ಸುಮಾರು ೧೫ ವೀರ ಮಾಸ್ತಿ ಕಲ್ಲುಗಳನ್ನು ಅನಾಥವಾಗಿ ಬಿಸಾಡಿದ್ದಾರೆ. ೪೦ ಗುಡಿಗಳನ್ನು ಬೇರೆ ಬೇರೆ

[೭] ಆರ್ ಶೇಷಶಾಸ್ತ್ರಿ, ಕರ್ನಾಟಕ ವೀರಕಲ್ಲುಗಳು, ಪು.ಸಂ-೬೨.

ಗ್ರಾಮದ ಕುರುಬ ಸಮುದಾಯದವರು ತಮ್ಮ ಕುಲದೈವವಾಗಿ, ಪೂರ್ವಿಕರಾಗಿ ಪ್ರತಿವಾರ ಅಥವಾ ತಿಂಗಳಿಗೊಮ್ಮೆ ಬಂದು ಪೂಜೆ-ಪುನಸ್ಕಾರ ನೈವೇದ್ಯ ಇಟ್ಟು, ಪೂಜಾರತಿ ಮಾಡಿಕೊಂಡು ಬಂದಿದ್ದಾರೆ. ಪ್ರತಿಯೊಂದು ವೀರರ ಗುಡಿಯ ಮುಂಭಾಗ ಗೋಡೆ ಮೇಲೆ ಊರು, ಪೂಜೆ ಮಾಡುವ ಕುಟುಂಬದವರ ಮುಖ್ಯಸ್ಥನ (ಪೂಜಾರಿ) ಹೆಸರನ್ನು ಕಾಣಬಹುದು. ದೊಡ್ಡಹುಲ್ಲೂರು ಸೇರಿದಂತೆ ಸುತ್ತಮುತ್ತಲಿನ ಗ್ರಾಮಗಳಾದ ಕುರುಬರಹಳ್ಳಿ, ಹೂವಿನಕೆರೆ, ದಾಸರಹಳ್ಳಿ, ಹರಂಡಹಳ್ಳಿ, ಕಾಂಡಹಳ್ಳಿ, ಥೀಮಂಡಹಳ್ಳಿಗಳಲ್ಲಿ ತಲಾ ಎರಡು ಕುಟುಂಬಗಳು, ಗುಳ್ಳಹಳ್ಳ, ತಂಬಹಳ್ಳಿಗಳಲ್ಲಿ ಮೂರು ಕುಟುಂಬಗಳು, ಕುರುಬರಹಟ್ಟಿ, ಬಸನಹಳ್ಳಿ, ಕೊಣಂಕೊಪ್ಪ, ಗೊಲ್ಲರಪಾಳ್ಯ (ನಿಡಘಟ್ಟ), ಸಿದ್ದನೂರು, ನಾರಾಯಣ ಕೆರೆ, ಕಸ್ತೂರಿಬಾನಗರ ಹೀಗೆ ಕುರುಬರ ಜನಸಂಖ್ಯೆಯಿರುವ ಎಲ್ಲಾ ಗ್ರಾಮಗಳಲ್ಲಿ ಒಂದು ಕುಟುಂಬ ಅಥವಾ ಎರಡು ಕುಟುಂಬಸ್ಥರು ಪೂಜೆಯನ್ನು ಮಾಡುತ್ತಿದ್ದಾರೆ. ಇದು ಅಲ್ಲದೆ ಮೈಸೂರಿನಿಂದ ಒಂದು ಕುಟುಂಬ ಬಂದು ಈಗಲೂ ಪೂಜೆಯನ್ನು ಮಾಡುವುದನ್ನು ಕಾಣಿಸಿದರೆ ಬಹುಶಃ ಇಲ್ಲಿಂದ ಮೈಸೂರಿಗೆ ವಲಸೆ ಹೋಗಿರಬೇಕು.

ದೊಡ್ಡಹುಲ್ಲೂರು ಅಲ್ಲದೆ ಕ್ಷೇತ್ರಕಾರ್ಯದಲ್ಲಿ ಶೋಧಿಸಿದ ಕುರುಬರಹಳ್ಳಿಯಲ್ಲಿ ಸುಮಾರು ೧೬ ವೀರರಗುಡಿಯಲ್ಲಿ **(ಚಿತ್ರ ಸಂಖ್ಯೆ-೨೧)** ಸುಮಾರು ೧೨೭ ವೀರ, ಮಾಸ್ತಿ ಮತ್ತು ವೀರಮಾಸ್ತಿ ಕಲ್ಲುಗಳಿವೆ. ಎಲ್ಲಾ ಗುಡಿಗಳಲ್ಲಿರುವ ಕಲ್ಲುಗಳು ಕೇವಲ ಒಂದರಿಂದ ಒಂದುವರ್ರೆ ಅಡಿ ಅಗಲ ಮತ್ತು ಎರಡರಿಂದ ಮೂರು ಅಡಿ ಎತ್ತರವನ್ನು ಕೆಲವೊಂದು ವೀರಮಾಸ್ತಿ ಕಲ್ಲುಗಳಲ್ಲಿ ಇಬ್ಬರು ಸತಿಯರಿರುವುದನ್ನು ಕಾಣಬಹುದು. ಈ ಎಲ್ಲಾ ಗುಡಿಗಳು ಇರುವ ದೇವಾಲಯವನ್ನು ರಾಮದೇವರ ಗುಡಿ ಎಂದು ಕರೆಯುವ ಶಿವ ದೇವಾಲಯದ ಬಲಭಾಗದಲ್ಲಿದೆ. ದೊಡ್ಡಹುಲ್ಲೂರಂತೆ ವಾರ, ತಿಂಗಳಿಗೆ ಪೂಜೆ ನಡೆಯುವುದಿಲ್ಲ. ವರ್ಷಕೊಮ್ಮೆ ರಾಮದೇವರಿಗೆ ಮತ್ತು ವೀರರ ಗುಡಿಗೆ ಶಿವರಾತ್ರಿಯ ಮರು ದಿನ ಮಾತ್ರ ಪೂಜೆ ನಡೆಯುತ್ತದೆ. ಪೂಜೆಯ ನಂತರ ದೇವಾಲಯಕ್ಕೆ ಬೀಗ ಹಾಕಿದ್ದರೆ ಮರು ವರ್ಷವೇ ಬಾಗಿಲು ತೆಗೆಯುವುದು. ಈ ದೇವಾಲಯವಿರುವ ಕುರುಬರಹಳ್ಳಿಯ ಸುತ್ತ-ಮುತ್ತ ಕುರುಬ ಜನಾಂಗವಿದ್ದರು ಯಾರು ಸಹ ಇಲ್ಲಿಗೆ ಬರುವುದಿಲ್ಲ. ಗುಡಿಯ ಒಳಗೆ ಇರುವ ವೀರನು ತನ್ನ ಎಡಗೈಯಲ್ಲಿ ಗುರಾಣಿಯನ್ನು ಅಥವಾ ಬಿಲ್ಲನ್ನು, ಬಲಗೈಯಲ್ಲಿ ಕತ್ತಿಯನ್ನು ಇಲ್ಲವೇ ಕತ್ತಿಯನ್ನು ನೆಲಕ್ಕೆ ಊರಿ ಅದನ್ನು ಎರಡು ಕೈಗಳಲ್ಲಿ ಹಿಡಿದುಕೊಂಡಿರುತ್ತಾನೆ. ಅಪ್ಪಸಂದ್ರ, ಕೋಡಿಹಳ್ಳಿ, ತಾವರೆಕೆರೆ, ಬಾಣಮಾಕನಹಳ್ಳಿ, ಹಡಕನಹಳ್ಳಿ, ಸೂಲಿಬೆಲಿ, ವಾಡಹಳ್ಳಿ, ವಾಗಟಗಳಲ್ಲಿ ವೀರರ ಗುಡಿಗಳಿರುವುದನ್ನು ಕಾಣಬಹುದು.

ವೀರಗಲ್ಲನ್ನು ಆರಾಧಿಸಿದರೆ ಕ್ಷಾಮ ರೋಗ, ಬಾದೆಗಳು ಅನಿಷ್ಟಗಳು ದೂರವಾಗುತ್ತದೆ. ಉತ್ತಮ ಗುಣಗಳನ್ನು ಹೊಂದಿದ ವ್ಯಕ್ತಿ ಮಡಿದಾಗಲಿ ತನ್ನನ್ನು ಆರಾಧಿಸುವುದು ತಮ್ಮ ಶ್ರೇಯಸ್ಸಿಗೆ ಕಾರಣವೆಂದು ಭಾವಿಸುತ್ತಿದ್ದರು. ಹಾಗೆಯೆ ಸತ್ತ ವ್ಯಕ್ತಿ ಕ್ರೂರಿಯಾಗಿದ್ದು ಅಂಥವರನ್ನು ಆರಾಧಿಸದಿದ್ದರೆ ಆತನು ನಮಗೆ ತೊಂದರೆಯನ್ನು ಕೊಡದಿರುವಂತೆ ಆರಾಧಿಸುವುದರ ಮೂಲಕ ತೃಪ್ತಿ ಪಡಿಸಬೇಕು. ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ ಹೋಬಳಿಯ ತರಬಹಳ್ಳಿ ಊರಗಿನ ಹೊರ ಭಾಗದಲ್ಲಿ ಕಾಟುಮ್ಮರಾಯ ಎಂಬ ಶಿಲ್ಪವೀರಗಲ್ಲು ತುಂಬಾ ಆಕರ್ಷಕವಾಗಿದೆ **(ಚಿತ್ರ ಸಂಖ್ಯೆ–೨೨)**. ವೀರನು ತನ್ನ ಕೈಗಳಲ್ಲಿ ಈಟಿಯನ್ನು ಹಿಡಿದ ಭಂಗಿಯಲ್ಲಿ ನಿಂತಿದ್ದು ಮುಡಿಯನ್ನು ನೆತ್ತಿಯ ಮೇಲೆ ಕಟ್ಟಲಾಗಿದೆ. ಸೊಂಟದಲ್ಲಿ ಕಿರುಗತ್ತಿಯನ್ನು, ಸೂರ್ಯ, ಚಂದ್ರನನ್ನು ಕೆತ್ತಲಾಗಿದೆ. ಈ ಗ್ರಾಮದಲ್ಲಿ ಎಲ್ಲರೂ ಪರಿಶಿಷ್ಟ ಜಾತಿಯವರೇ ಇದ್ದು, ವರ್ಷಕ್ಕೆ ಒಮ್ಮೆ ಮಾತ್ರ ವೀರಗಲ್ಲಿಗೆ ಪೂಜೆ ಮಾಡಲಾಗುತ್ತದೆ. ಮಕರ ಸಂಕ್ರಾಂತಿ ಹಬ್ಬದಂದು ಬೆಳಗ್ಗೆ ಊರ ಹಿರಿಯನೊಬ್ಬ ಆ ವೀರಗಲ್ಲಿಗೆ ಪ್ರಾಣಿಯ ಬಲಿಕೊಟ್ಟು ವೀರಗಲ್ಲಿನ ಮೇಲೆ ರಕ್ತವನ್ನು ಎರಚಲಾಗುತ್ತದೆ. ನಂತರ ವೀರಗಲ್ಲಿನ ಮುಂದೆ ಬೆಂಕಿಯನ್ನು ಹಾಕಿ ಆ ಗ್ರಾಮದ ಎಲ್ಲಾ ದನ, ಕರು, ಎಮ್ಮೆ, ಕುರಿ, ಮೇಕೆಗಳನ್ನು ಬೆಂಕಿಯ ಮೇಲೆ ಹಾಯಿಸಲಾಗುತ್ತದೆ. ನಂತರ ಅದೇ ದಿನ ರಾತ್ರಿ ಊರಿನ ಪ್ರತಿ ಮನೆಯಿಂದಲೂ ಒಂದೊಂದು ಹಿಡಿ ಅನ್ನವನ್ನು ಪಡೆದು ಒಟ್ಟುಗೂಡಿಸಿ ಆ ಅನ್ನದಲ್ಲಿ ಮೊಸರನ್ನು ಬೆರೆಸಿ ಅದೇ ಗ್ರಾಮದ ತೋಟಿಯ ವಂಶಸ್ಥನೊಬ್ಬ ಊರಿನ ಸುತ್ತಲೂ ಚೆಲ್ಲುತ್ತಾ ಬರುತ್ತಾನೆ. ಅನ್ನವನ್ನು ಚೆಲ್ಲುತ್ತಿರುವಾಗ ಆತ ಒಂಟಿಯಾಗಿ ಇರಬೇಕು. ಇದಾದ ನಂತರ ವೀರಗಲ್ಲಿಗೆ ಪೂಜೆ ನಿಷಿದ್ಧ ಮತ್ತೆ ಮುಂದಿನ ವರ್ಷವೇ. ಗ್ರಾಮದ ಪೂರ್ವಜರ ಕಾಲದಿಂದಲೂ ಈ ಆಚರಣೆಯನ್ನು ಆಚರಿಸುತ್ತಾ ಬಂದಿರುವುದಾಗಿ ಹೇಳುತ್ತಾರೆ. ದೇವನಗುಂದಿಯಲ್ಲಿನ ಎಲ್ಲಾ ವೀರಗಲ್ಲುಗಳಿಗೂ ಕಾಟಮರಾಯ ಎಂದೇ ಕರೆಯಲಾಗುತ್ತಿದ್ದು, ಯುಗಾದಿಯ ಹಬ್ಬದಿನ ಕೋಳಿ–ಮೇಕೆ ಕುಯ್ದು ಅಲ್ಲೆ ಅಡುಗೆ ಮಾಡಿ ಎಲ್ಲರೂ ಊಟ ಮಾಡಿದ ಮೇಲೆ ಎತ್ತಿನಗಾಡಿ ಸ್ಪರ್ಧೆ, ಇತರೆ ಕ್ರೀಡೆಗಳನ್ನು ಮನೋರಂಜನೆಗಾಗಿ ಆಡಿಸುತ್ತಿದ್ದು ಇತ್ತೀಚೆಗೆ ಕ್ರೀಡೆಗಳನ್ನು ಆಡಿಸುತ್ತಿಲ್ಲವಂತೆ ಎಂದು ಸ್ಥಳೀಯರಾದ ರಮೇಶಪ್ಪ ಹೇಳಿದ್ದರು.

## ಯುದ್ಧದ ವೀರಗಲ್ಲು

ಯುದ್ದವೆಂಬುದು ನಿರಂತರವೆಂಬಂತೆ ಯಾವಾಗಲು ಒಂದಲ್ಲ ಒಂದು ರೀತಿಯಲ್ಲಿ ನಡೆಯುತ್ತಲೆ ಇರುತ್ತಿತ್ತು. ನಿಷ್ಠೆ, ಶಸ್ತ್ರಾಸ್ತ್ರ, ನೈಪುಣ್ಯತೆ, ಶೌರ್ಯಗಳಿಗೆ ಅರ್ಹತೆ ಹೊಂದಿರುವ ಯುದ್ಧ ಪರಿಣಿತರಾದ ವೀರರು, ಸ್ವಾಮಿ ನಿಷ್ಠರ ಸೇವೆಯೇ ಅರಸರ ನಿಜವಾದ ಬಲವಾಗಿತ್ತು. ಅರಸ–ಅರಸರ ನಡುವೆ ಯುದ್ಧ ನಡೆಯುವುದು ಅಪರೂಪ, ಅರಸರ ಪರವಾಗಿ ಸಾಮಾನ್ಯ ಜನರೇ ಹೋರಾಟದಲ್ಲಿ ಮಡಿಯುತ್ತಿದ್ದರು

ಅಂತ ಎನ್ನುವುದಕ್ಕಿಂತ ಬಲಿಯಾಗುತ್ತಿದ್ದವರೆನ್ನಬಹುದು. ಒಂದು ಅರ್ಥದಲ್ಲಿ ಯುದ್ದವೆಂದರೆ ಮಹಿಳೆಯರನ್ನು ವಿಧವೆಯರನ್ನಾಗಿ ಮಾಡುವ ಮುಹೂರ್ತವೇ ಆಗಿತ್ತು. ಯುದ್ದಕ್ಕೆ ಹೋದವರು ಮರಳಿ ಬಂದರೆ ಅದು ಅವರ ಪುಣ್ಯ. ಹಾಗೆಯೇ ಮರಳಿ ಬಂದವನು ಮತ್ಯಾರನ್ನೋ ಕೊಂದು ಅವರ ಹೆಂಡತಿಯನ್ನು ವಿಧವೆಯರನ್ನಾಗಿ ಮಾಡಿ ಬಂದವನು.

ತಮ್ಮ ಪ್ರಭುತ್ವವನ್ನು ಮತ್ತೊಬ್ಬರ ಮೇಲೆ ಹಾಗೂ ಮತ್ತೊಂದು ಪ್ರದೇಶದ ಮೇಲೆ ಸಾಧಿಸಲು ಮಾನವನು ಪ್ರಾರಂಭದಿಂದಲೂ ಯುದ್ಧಗಳನ್ನು ಮಾಡಿಕೊಂಡು ಬಂದಿದ್ದಾನೆ. ಈ ಯುದ್ಧಗಳ ವರ್ಣನೆ ಸಾಹಿತ್ಯ ಗ್ರಂಥಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ರನ್ನನ ೯೮೨ರ ಗದಾಯುದ್ಧದಲ್ಲಿನ ರಣರಂಗದ ಚಿತ್ರಣಕ್ಕೆ ಮೊದಲೇ ಅಂದರೆ ಕ್ರಿ.ಶ.೮೯೦ ರ ಕಾಲಕ್ಕೆ ಶಾಸನ ಕವಿ/ಶಿಲ್ಪಿಗಳು ರಣರಂಗದ ದೃಶ್ಯವನ್ನು ಒಂದೇ ಕಲ್ಲಿನಲ್ಲಿ ಕಣ್ಮುಂದೆ ಕಟ್ಟಿಕೊಡುವುದರಲ್ಲಿ ಅವರ ಪಾವಿಣ್ಯತೆ, ಸಾಹಿತ್ಯ ಜ್ಞಾನ ಎಂತದ್ದಿರ ಬಹುದು. ಪ್ರಸ್ತುತ ಬೆಂಗಳೂರಿನ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿಸಿ ಇಡಲಾದ ಬೇಗೂರಿನ ವೀರಗಲ್ಲು ಶಾಸನೋಕ್ತವಾಗಿದ್ದು ಎಪಿಗ್ರಾಫಿಯಾ ಕರ್ನಾಟಿಕದಲ್ಲಿ ಇದರ ಕಾಲವನ್ನು ಕ್ರಿ.ಶ.೮೯೦ ಎಂದು ಹೇಳಲಾಗಿದೆ. ಗಂಗ ದೊರೆ ಎರೆಯಪ್ಪನ ಸೇನಾನಿ ನಾಗತ್ತರನು ಅಯ್ಯಪ್ಪದೇವನ ಜೊತೆಗೂಡಿ ವೀರಮಹೇಂದ್ರನೊಂದಿಗೆ ಹೋರಾಡಿ ಸಾವನ್ನಪ್ಪಿದ್ದನ್ನು ತಿಳಿದು ಎರೆಯಪ್ಪನು ಇರುಗನಿಗೆ ನಾಗತ್ತರನ ಪಟ್ಟವನ್ನು ಕಟ್ಟಿ ಅವನ ಸಾಹಸವನ್ನು ಮೆಚ್ಚಿ ಹಲವು ಗ್ರಾಮಗಳನ್ನು ದಾನ ನೀಡಿರುವುದನ್ನು ತಿಳಿಸುತ್ತದೆ. ಇದೇತರದ ಯುದ್ಧದ ಚಿತ್ರಣವನ್ನು ಹೋಲುವ ರಣಸಂಗ್ರಾಮ ಶಿಲೆಯನ್ನು ವೆಂಕಟಗಿರಿಕೋಟೆಯಲ್ಲಿ ಶೋಧಿಸಲಾಗಿದೆ. ಈ ಎರಡು ಕಲ್ಲಿನ ಶಿಲ್ಪಿಗಳು ಒಬ್ಬನೇ ಇರಬೇಕು. ಎರಡು ಕಲ್ಲಿನಲ್ಲಿಯೂ ಒಂದೇ ತರದ ಲಿಪಿ ಮತ್ತು ಶಿಲ್ಪ ಕೆತ್ತನೆ. ಕೆಲವು ಕಡೆಯಂತೂ ಒಂದೇ ತರದ ಕೆತ್ತನೆಯನ್ನು ಕಾಣಬಹುದು.

ಡಮರುಗ, ಡೊಳ್ಳು, ಕಹಳೆ, ಭೇರಿ, ಡಿಂಡಿಮ, ಕೊಳಲು, ಕೊಂಬು, ಚಕ್ರವಾದ್ಯ, ಚಿನ್ನ ಕಹಳೆ, ಬರುಗು, ನಾಗಸ್ವರ ಎಂಬ ಯುದ್ಧವಾದ್ಯಗಳನ್ನು ಬಳಸಲಾಗುತ್ತಿತ್ತೆಂದು[೮]. ವಾದ್ಯಗಳನ್ನು ಬಾರಿಸುವವರು ನಿರಾಯುಧರಾಗಿರುವಂತೆ ರಣರಂಗದ ಅಂಚಿನಲ್ಲಿ ನಿಂತಿರುವಂತೆ ಬಹುಶ ಯುದ್ದದಲ್ಲಿ ಇವರನ್ನು ಕೊಲ್ಲುತ್ತಿರಲಿಲ್ಲ. ಸೈನ್ಯವನ್ನು, ಸೈನ್ಯಕ್ಕೆ ಬೇಕಾದ ಆಹಾರ, ಮತ್ತಿತರ ಸಾಮಗ್ರಿಗಳನ್ನು ಒದಗಿಸುವ ಜವಬ್ದಾರಿಯೂಜನರದೇ ಆಗಿತ್ತು. ಕಾವಡಿಯಲ್ಲಿ ಸಾಮಾನು ಸಾಗಿಸುವ ವ್ಯಕ್ತಿಯನ್ನು ಯುದ್ದ ಭೂಮಿಗೆ ಬೇಕಾದ ವಸ್ತುಗಳನ್ನು ಹೊರುವ ಪಡೆಯು, ಯುದ್ದಭೂಮಿಗೆ ಹೊರಡುವಾಗ ಗೌರವ ಸೂಚಕವಾದ ರಾಜ ಛತ್ರಿಯನ್ನು ಹಿಡಿದುಕೊಂಡು ಹೋಗುವ ಪರಿವಾರ, ರಾಜಛತ್ರಿ, ರಾಜಧ್ವಜ, ಪಟ್ಟದ ಕುದುರೆಗಳನ್ನು

[೮] ನಂಜುಂಡ :- ರಾಮನಾಥ ಚರಿತೆ ಭಾಗ-೩, ಪು.ಸಂ-೧೧.

ಗಮನಿಸಿದರೆ ವೀರನು ರಾಜಮಾನ್ಯ ಅರಸು ಮನೆತನ ಎಂಬುದರ ಸಂಕೇತವಾಗಿ ಕಂಡುಬರುತ್ತದೆ. ಯುದ್ಧ ವೀರಗಲ್ಲುಗಳಲ್ಲಿ ಕುದುರೆ, ಆನೆಗಳ ಬಳಕೆ ಸಾಮನ್ಯವಾಗಿ ಕಂಡು ಬರುತ್ತದೆ. ಸೈನ್ಯದಲ್ಲಿ ಆನೆ–ಕುದುರೆಗಳಿಗೆ ತುಂಬಾನೇ ಪ್ರಾಮುಖ್ಯತೆಯಿತ್ತು. ಗಂಗ ವಂಶದ ಲಾಂಛನವೇ ಮದಗಜವಾಗಿತ್ತು. ರಾಜ್ಯಾಢಳಿತದಲ್ಲಿ ಆನೆಗಳಿಗಾಗಿಯೇ ಪ್ರತ್ಯೇಕವಾದ ಒಂದು ಇಲಾಖೆ ಇದ್ದಿರಬೇಕು. ಗಂಗರ ಕಾಲದ ವಿದ್ಯಾಭ್ಯಾಸದಲ್ಲಿ ಗಜಶಾಸ್ತ್ರವು ಒಂದು ವಿಷಯವಾಗಿದ್ದು, ಶಿವಮಾರನು ಗಜಾಷ್ಟಕವೂ ಒನಕೆವಾಡಾಗಿ ಖ್ಯಾತಿಯನ್ನು ಪಡೆದಿತ್ತು. ಬೃಹತ್ ಗಾತ್ರದ ಆನೆಯು ಯುದ್ಧದಲ್ಲಿ ವೈರಿಗಳನ್ನು ಧ್ವಂಸಗೊಳಿಸಿ, ಕುದುರೆಗಳು ವೇಗವಾಗಿ ಓಡುವ ಪ್ರಾಣಿಯಾಗಿದ್ದು. ಕುದುರೆಯನ್ನು ನೋಡಿಕೊಳ್ಳಲು ಪ್ರತ್ಯೇಕವಾದ ಇಲಾಖೆ ಇದ್ದಿತ್ತು. ಕುದುರೆಗಳ ಮುಖಕ್ಕೆ ಕವಚವನ್ನು, ಸವಾರನು ಎಡಗೈಯಿಂದ ಕಡಿವಾಣವನ್ನು, ಬಲಗೈಯಲ್ಲಿ ಖಡ್ಗವನ್ನು ಹಿಡಿದು ಕುಳಿತಿದ್ದಾರೆ. ಕುದುರೆಯ ಕೊರಳ ಸುತ್ತಲೂ ಗಂಟೆಗಳ ಸರ, ಕವಚ, ಕಣ್ಣು, ಗೊರಸುಳು ಮಾತ್ರೆ, ಅನೇಕ ಕುದುರೆ ಕಾಳಗದಲ್ಲಿ ಹೋರಾಡಿ ಮಡಿದ ವೀರರ ನೆನಪಿಗಾಗಿ ಮತ್ತು ಯುದ್ಧರಂಗದಲ್ಲಿ ಕುದುರೆಗಳ ಬಳಕೆ ಸಾಕಷ್ಟು ಪ್ರಮಾಣದಲ್ಲಿ ಬಳಕೆಯನ್ನು ವೀರಗಲ್ಲುಗಳ ಶಿಲ್ಪಗಳಿಂದ ಗುರುತಿಸ ಬಹುದು. ಕುದುರೆಗಳು ನಮ್ಮ ದೇಶದ ಪ್ರಾಣಿಗಳಲ್ಲಿ ಅರೇಬಿಯಾ ದೇಶಗಳಿಂದ ಅಮದು ಮಾಡಿಕೊಳ್ಳುತ್ತಿದ್ದರು. ಕುದುರೆಗಳ ವ್ಯಾಪಾರದಲ್ಲಿ ತೆರಿಗೆಗಳನ್ನು ವಿಧಿಸುತ್ತಿದ್ದ ಶಾಸನಗಳನ್ನು ಕಾಣಬಹುದು.

ದೇವನಹಳ್ಳಿ ತಾಲೂಕು ಕುಂದಾಣ ಹೋಬಳಿ ಕೊಯಿರಾ ಗ್ರಾಮದಲ್ಲಿನ ನೊಳಂಬಾರಸ ಅಯ್ಯಪದೇವನ ಆಳ್ವಿಕೆಯಲ್ಲಿ ಸತ್ತ ಕಾಳುವಟ್ಟ ಬೀರಯ್ಯರ ವೀರವನು ಅಭ್ಯಂತರಿ ಕ್ರಿ.ಶ.೯೪೮ರಲ್ಲಿ ಶ್ರೀ ಕಲ್ನಾಟು ಕೊಟ್ಟ[೯] ವಿವರದ ಐದು ಅಡಿ ಅಗಲ ಐದೂವರೆ ಅಡಿ ಎತ್ತರವನ್ನು ಶಾಸನೋಕ್ತ ವೀರಗಲ್ಲಿನಲ್ಲಿ **(ಚಿತ್ರ ಸಂಖ್ಯೆ–೨೩)** ಯುದ್ಧ ಸನ್ನಿವೇಶದಲ್ಲಿ ಕೇವಲ ಎದುರಾಳಿಗಳನ್ನು ಮಾತ್ರ ತೋರಿಸಿದ್ದು, ಹೆಚ್ಚಿನದಾಗಿ ಆಳಸರ ಸೈನ್ಯವನ್ನು ತೋರಿಸಿಲ್ಲ. ವೀರಗಚ್ಚೆಯನ್ನು ಹಾಕಿರುವ ವೀರನು ಇಲ್ಲಿ ಹೆಚ್ಚು ಕಡಿಮೆ ತನ್ನ ಎತ್ತರದಷ್ಟೇ ಇರುವ ಗುರಾಣಿಯನ್ನು ಎಡಗೈಯಲ್ಲಿ ಹಿಡಿದಿದ್ದು, ಬಲಗೈಯಲ್ಲಿ ಖಡ್ಗವನ್ನು ಮೇಲಕ್ಕೆ ಎತ್ತಿ ಆಕ್ರಮಣ ಮಾಡುತ್ತಿರುವಂತೆ ಹಿಡಿದಿದ್ದಾನೆ. ಸೊಂಟದಲ್ಲಿ ಖಡ್ಗವನ್ನು ಇಡಲು ಒರೆಯನ್ನು ಕಟ್ಟಿಕೊಂಡಿದ್ದಾನೆ. ಮುಖಭಾಗವು ಬಹಳಷ್ಟು ತ್ರುಟಿತಗೊಂಡಿದೆ. ಬಲಭಾಗದಲ್ಲಿ ಒಂದು ಕುದರೆಯಿದ್ದು, ಮೇಲ್ಭಾಗದಲ್ಲಿ ಒಬ್ಬ ವ್ಯಕ್ತಿಯ ಚಿಕ್ಕ ಶಿಲ್ಪವಿದ್ದು ಅದು ತ್ರುಟಿತಗೊಂಡಿದೆ. ವೀರನ ಕಾಲಿನ ಬಳಿ ದೇಹವು ಎರಡು ಭಾಗಗಳಾಗಿ ಕತ್ತರಿಸಿ ಬಿದ್ದಿದೆ. ಶತ್ರುವು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತಿದ್ದಾನೆ. ಮಾವುತನನ್ನು ಸಹ ಆನೆಯ ಮೇಲೆ ಕಾಣಬಹುದಾಗಿದ್ದು, ಆನೆಯು ದಷ್ಟಪುಷ್ಟವಾಗಿದ್ದು

[೯] ಎ.ಕ-೯, ದೇ.ತಾ.೧೦, ಕ್ರಿ.ಶ.೯೪೮, ಕೊಯಿರ.

ಅಲಂಕರಣೆಯಿಂದ ಕೂಡಿದೆ. ವೀರನು ತನ್ನ ಗುರಾಣಿಯಿಂದ ಆನೆಯನ್ನು ತಡೆದು ತನ್ನ ಖಡ್ಗದಿಂದ ಆನೆಯ ಸೊಂಡಿಲನ್ನು ಕತ್ತರಿಸಿ ಹಾಕಿದ್ದಾನೆ. ಕತ್ತರಿಸಿರುವ ಸೊಂಡಿಲು ಕೆಳಭಾಗದಲ್ಲಿ ಬಿದ್ದಿದೆ. ಇಲ್ಲಿಯೆ ಒಬ್ಬ ಸೈನಿಕ ಸತ್ತು ಬಿದ್ದಿದ್ದಾನೆ. ಮೇಲ್ಭಾಗದಲ್ಲಿ ಚಾಮರಧಾರಿಣಿಯರ ಸೇವೆಯನ್ನು ಅನುಭವಿಸುತ್ತಾ ಪದ್ಮಾಸನದಲ್ಲಿ ವೀರನು ಕುಳಿತ್ತಿದ್ದಾನೆ.  ಆನೆಯು ಯುದ್ಧದಲ್ಲಿ ಅತೀ ನಷ್ಟ ಉಂಟು ಮಾಡುವ ದೈತ್ಯ ಪ್ರಾಣಿಯ ಶಕ್ತಿ ಮತ್ತು ಜೀವ ಇರುವುದು ಸೊಂಡಲಿನಲ್ಲಿ, ಅಂತಹ ಸೊಂಡಿಲನ್ನು ವೀರನು ಕತ್ತರಿಸಿ ಯುದ್ಧದಲ್ಲಿ ಆಗುತಿದ್ದ ದೊಡ್ಡ ಅನಾವುತವನ್ನು ತಪ್ಪಿಸಿದ್ದಾನೆ.

ಮಣ್ಣೆಯ ಆಂಜನೇಯ ಸ್ವಾಮಿ ದೇವಾಲಯದ ಮುಂಭಾಗದಲ್ಲಿ ಶಾಸನೋಕ್ತವಾದ ಮಾರಸಿಂಗನ ವೀರಗಲ್ಲು ಇದ್ದು **(ಚಿತ್ರ ಸಂಖ್ಯೆ–೨೪)**, ಇಲ್ಲಿ ಗಂಗರಲ್ಲಿ ಬಹಳ ವರ್ಷಗಳ ಕಾಲ ಯುವರಾಜನಾಗಿದ್ದ ಮಾರಸಿಂಗನು ಮರಣ ಹೊಂದಿದ್ದ ವೀರಗಲ್ಲಿನಲ್ಲಿನ ಪಾಠದಲ್ಲಿ ಮಾತ್ರ ಮಾರಸಿಂಗನ ವರ್ಣನೆಗಳಿದ್ದು, ಶಿಲ್ಪದಲ್ಲಿ ಯುದ್ಧರಂಗದ ಸಂಪೂರ್ಣ ಚಿತ್ರವನ್ನು ಬಿಡಿಸದೆ, ಸಾಮಾನ್ಯ ವೀರರ ವೀರಗಲ್ಲಿನ ಹಾಗೆ ವೀರಗಲ್ಲಿನಲ್ಲಿ ಇಬ್ಬರು ವೀರರು ಹೋರಾಡುತ್ತಿರುವುದನ್ನು ನೋಡಬಹುದು. ವೀರ (ಮಾರಸಿಂಹ)ನು ಇಲ್ಲಿ ಕುದುರೆಯ ಮೇಲೆ ಕುಳಿತು ಕಾದಾಡುತ್ತಿದ್ದಾನೆ. ಕುದುರೆಗೆ ಜೀನು ಹಾಕಲಾಗಿದೆ. ಇದು ತನ್ನ ಮುಂಗಾಲುಗಳನ್ನು ಮೇಲಕ್ಕೆ ಎತ್ತಿದೆ. ಕುದುರೆಯ ಮೇಲೆ ಸವಾರನಾಗಿರುವ ವೀರನು ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದು ಬಲಗೈಯಲ್ಲಿ ಖಡ್ಗವನ್ನು ಎತ್ತಿದ್ದಾನೆ. ಸೊಂಟದಲ್ಲಿ ಒರೆ ಇದೆ. ಹಿಂಭಾಗದಲ್ಲಿ ಒಬ್ಬ ವ್ಯಕ್ತಿ ಚಿಕ್ಕದಾದ ರಾಜ ಛತ್ರಿಯನ್ನು ಹಿಡಿದಿದ್ದಾನೆ. ಆದ್ದರಿಂದ ಕುದುರೆಯ ಮೇಲೆ ಸವಾರನಾಗಿರುವ ವ್ಯಕ್ತಿ ರಾಜ ಅಥವಾ ಪ್ರಮುಖ ಸೇನಾನಿ ಎಂದು ಗುರುತಿಸಬಹುದು. ಇಲ್ಲಿ ಎದುರಾಳಿಯು ಸಹ ಆಕ್ರಮಣ ಮಾಡುವಂತಿದ್ದು ಈ ಶಿಲ್ಪವು ಬಹಳಷ್ಟು ತ್ರುಟಿತಗೊಂಡಿದೆ. ಮೇಲ್ಭಾಗದಲ್ಲಿ ವೀರನು ತಲೆಗೆ ಪೇಟವನ್ನು ಕಟ್ಟಿಕೊಂಡು ವೀರಾಸನದಲ್ಲಿ ಕುಳಿತಿದ್ದಾನೆ. ಬಲಗೈ ಅಭಯ ಮುದ್ರೆಯಲ್ಲಿದೆ, ಎಡಗೈ ಕಟಿಹಸ್ತವಾಗಿದೆ. ಇವನ ಸೇವೆಗೆ ಇಬ್ಬರು ಚಾಮರ ಧಾರಿಣಿಯರಿದ್ದಾರೆ.

ದೊಡ್ಡಹುಲ್ಲೂರಿನ ವೀರಗಲ್ಲಿವಿನಲ್ಲಿ **(ಚಿತ್ರ ಸಂಖ್ಯೆ–೨೫)** ವೀರನ ಮತ್ತು ಶತ್ರುವಿನ ಕುದುರೆಗಳನ್ನು ಅದರಲ್ಲಿ ವೀರನ ಕುದುರೆಯು ವೀರನ ಪಕ್ಕದಲ್ಲಿ ನಿಂತು ಉತ್ಸಾಹವಿಲ್ಲದೆ ತಲೆ ಬಗ್ಗಿಸಿಕೊಂಡು ದುಃಖಿಸುತ್ತಿರುವ ಸಂಗತಿಯನ್ನು ಅದರ ಹಿಂದೆ ಸೈನಿಕನೊಬ್ಬನು ಚಾಮರವನ್ನು ಹಿಡಿದು ಶತ್ರುವಿನ ಕುದುರೆಯು ಅತ್ಯಂತ ಉತ್ಸಾಹದಿಂದ ಯುದ್ದದಲ್ಲಿ ಪಾಲ್ಗೊಂಡಿರಬೇಕು. ವ್ಯಕ್ತಿಯ ಕೈಯಲ್ಲಿ ಈಟಿ ಇದೆ.

ಮೇಲ್ಭಾಗದಲ್ಲಿ ಅಪ್ಸರೆಯರು ವೀರನ ಕೈಯನ್ನು ಹಿಡಿದು ಮೇಲಕ್ಕೆ, ಕೆಳಭಾಗದಲ್ಲಿ ಮಂಗಳವಾದ್ಯಗಳೊಂದಿಗೆ ಮೆರವಣಿಗೆಯ ದೃಶ್ಯ.

ದೊಡ್ಡಹುಲ್ಲೂರು ಮತ್ತೊಂದು ವೀರಗಲ್ಲಿನ **(ಚಿತ್ರ ಸಂಖ್ಯೆ–೨೫)** ಕುದುರೆಯ ಚಿತ್ರಣ ವೀರನೊಬ್ಬನು ತನ್ನ ಕತ್ತಿಯೊಂದಿಗೆ ಕುದುರೆಯ ಮೇಲೆ ಕುಳಿತಿದ್ದಾಗ ಆತನ ಹಿಂಭಾಗ ೪ ಜನ ಸ್ತ್ರೀಯರು ಕಳಸ, ತಾಂಬೂಲಗಳನ್ನು ಹಿಡಿದುಕೊಂಡು ತಮ್ಮ ಬಲಗೈಯನ್ನು ಮೇಲಕ್ಕೆ ಎತ್ತಿ ವೀರನನ್ನು ಬೀಳ್ಕೊಡುತ್ತಿದ್ದಾರೆ. ಬಹುಶಃ ನಾಲ್ವರೂ ವೀರನ ಪತ್ನಿಯರಿರಬಹುದು. ತಮ್ಮ ಹೆಗಲ ಮೇಲೆ ಹೊತ್ತುಕೊಂಡು ಸಾಗುತ್ತಿದ್ದಾರೆ. ಮತ್ತೊಬ್ಬ ವ್ಯಕ್ತಿಯು ಚಾಮರವನ್ನು ಹಿಡಿದುಕೊಂಡು ಪಲ್ಲಕ್ಕಿಯ ಪಕ್ಕದಲ್ಲಿ ನಿಂತಿದ್ದಾರೆ.

## ಕೊಡುಗೆಗಳು

ಯುದ್ಧದಲ್ಲಿ ತನ್ನ ಪರವಾಗಿ ಹೋರಾಡಿ ಸತ್ತ ವೀರನಿಗೆ ಅವನ ಆಶ್ರಯದಾತನು ವೀರನ ಮನೆಯವರ ಮುಂದಿನ ಜೀವನ ನಿರ್ವಹಣೆಗಾಗಿ ಹಣವನ್ನೋ, ಸ್ಥಿರವಾದ ಆಸ್ತಿಯನ್ನೋ ಕೊಡುತ್ತಿದ್ದನು. ಇದು ರಾಜನ ಆದ್ಯ ಕರ್ತವ್ಯವೇ ಆಗಿತ್ತು. ಏಕೆಂದರೆ ತನ್ನ ಹಿತದೃಷ್ಟಿಗಾಗಿ ತಮ್ಮ ಪ್ರಾಣವನ್ನೂ ಲೆಕ್ಕಿಸದೆ ಮಡಿದ ವೀರರ ಮನೆಯವರನ್ನು ಸಾಕುವುದು. ಅವರ ಜೀವನ ನಿರ್ವಹಣೆಗೆ ಸಹಾಯ ಮಾಡುವುದು ಒಂದು ರೀತಿಯ ಮಾನವೀಯ ಧರ್ಮ, ರಾಜನ ಪರವಾಗಿ ಹೋರಾಡಿ ಸಾಯುವುದರಿಂದ ತನ್ನ ಸಂಸಾರದವರಿಗೆ ಯಾವ ರೀತಿಯ ತೊಂದರೆಯೂ ಆಗುವುದಿಲ್ಲ ತಾನು ನಂಬಿದ ಸ್ವಾಮಿ ತನ್ನ ಮನೆಯವರನ್ನು ತಾನು ಸತ್ತ ಮೇಲೆಯೂ ಸಾಕಿ ಸಲಹುತ್ತಾನೆ ಎಂಬ ಭರವಸೆಯನ್ನು ಯೋಧರಲ್ಲಿ ತುಂಬುವ ಒಂದು ತಂತ್ರವೂ ಇರಬಹುದು. ಈ ರೀತಿ ಯುದ್ಧದಲ್ಲಿ ಹೋರಾಡಿದ ವೀರರ ಪರಾಕ್ರಮವನ್ನು ಅರಸರು ಬಹಿರಂಗವಾಗಿ ಪುರಸ್ಕರಿಸಿದರೆ ಅದರಿಂದ ಉಳಿದ ಯೋಧರು ಉತ್ಸಾಹ ಹೊಂದಿ ತಮ್ಮ ಅರಸನಿಗೆ ತಮ್ಮ ಜೀವನವನ್ನೇ ಮುಡಿಪಿಡಲು ಸಿದ್ಧರಿರುತ್ತಿದ್ದರು.

ಮರಣ / ಗೆದ್ದಂತಹ ವೀರನಿಗೆ ಬಾಳ್ಗಚ್ಚು, ಕಾಲ್ನಾಡು, ನೆತ್ತರು ಕೊಡುಗೆ, ಭಕ್ತಿ, ಗೌರವಗಳನ್ನು ಸಲ್ಲಿಸಲಾಗುತ್ತಿತ್ತು. ರಣರಂಗದಲ್ಲಿ ಸತ್ತ ವೀರರನ್ನು ಸ್ವರ್ಗದಿಂದ ಅಪ್ಸರೆಯರು ಬಂದು ವಿಮಾನದಲ್ಲಿ ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದರು ಎಂಬ ನಂಬಿಕೆಯು ಅಂದಿನವರಲ್ಲಿ ವ್ಯಾಪಕವಾಗಿತ್ತು. ವಿಜಯನಗರ ಕಾಲದಲ್ಲಿ ಅಮರನಾಯಕರು ಎಂದು ರಾಜನ ಅಂಗ ರಕ್ಷಕರಾಗಿದ್ದರು. ಶಾಸನಗಳಲ್ಲಿ ನೆತ್ತರ ಕೊಡಗೆ, ಅಮರನಾಯಕತನಕ್ಕೆ ಕೊಡಗೆ ಎಂಬುದನ್ನ ಕಾಣ ಬಹುದು.

ಈಗಿನ ಕಾಲದಲ್ಲಿ ಯುದ್ಧದಲ್ಲಿ ಪಾಲ್ಗೊಂಡವರಿಗೆ ಪರಮವೀರ ಚಕ್ರ, ಅಶೋಕ ಚಕ್ರ ಪ್ರಶಸ್ತಿ ನೀಡುವುದನ್ನು ಗಮನಿಸಬಹುದು. ಹಾಗೇಯೇ ಯುದ್ಧ ಮುಗಿದ ಮೇಲೆ ಶೌರ್ಯ-ಸಾಹಸ ತೋರಿದ ವೀರರಿಗೆ ಪ್ರಶಸ್ತಿ, ದತ್ತಿಗಳನ್ನು ನೀಡುವ ಸಮಾರಂಭವನ್ನು ಬಾಳ್ಗಚ್ಚು ಎಂದು ಕರೆಯುತ್ತಿದ್ದರಂದು ಕಾಣಿಸುತ್ತದೆ. ಬಾಳ್+ಕಚ್ಚು (ತೊಳೆ), 'ಬಾಳ್' ಎಂಬ ಪದ ಬಾಟ್ ಎಂಬುದಕ್ಕಿಂತ ಬಿನ್ನವಾದ, ಕತ್ತಿ ಎಂಬ ಅರ್ಥದಲ್ಲಿ ಪ್ರಯೋಗವಾಗಿರುವುದನ್ನು ನಾವು ಗಮನಿಸಬಹುದು. ಕತ್ತಿಯನ್ನು ತೊಳೆಯುವುದು, ವೀರನ ರಕ್ತಸಿಕ್ತವಾದ ಕತ್ತಿಯನ್ನು ತೊಳೆದು ಅವನಿಗೆ ಅವನ ಕುಟುಂಬಕ್ಕೆ ಕೃತಜ್ಞತೆಯೊಂದಿಗೆ ಸನ್ಮಾನವನ್ನು ಬಿರುದು ಬಾವಲಿಗಳನ್ನು ಕೊಡುಗೆಗಳನ್ನು ನೀಡುತ್ತಿದ್ದ ಅತ್ಯುತ್ತಮವಾದ ಸಂಸ್ಕೃತಿಯೊಂದು ಕನ್ನಡ ನಾಡಿನಲ್ಲಿತ್ತೆಂಬುದು ಹಲ್ಮಿಡಿ ಶಾಸನದಿಂದಲೇ ತಿಳಿದುಬರುತ್ತದೆ. ಶ್ರೀಪುರುಷನ ಕಾಲದಲ್ಲಿಯೆ ತಮ್ಮ ವೀರರಿಗೆ ಬದುಕಿರುವಾಗಲೇ ಪ್ರಶಸ್ತಿಗಳನ್ನು ಅಂದರೆ ಪಟ್ಟಗಳನ್ನು ನೀಡಿರುವುದನ್ನು ಹೊಸಕೋಟೆ ತಾಲ್ಲೂಕಿನ ಹುಲ್ಲೂರು ಹೊಬಳಿಯ ಬೇಚಿರಾಖ್ ಮಾರೇನಹಳ್ಳಿಗೆ ದಕ್ಷಿಣ ಭೀಮೇಶ್ವರ ದೇವಸ್ಥಾನದ ಈಶಾನ್ಯದಲ್ಲಿರುವ ಶಾಸನದಲ್ಲಿ[೧೦] ಗಮನಿಸಬಹುದು. ಕ್ರಿ.ಶ.೭೨೦ರಲ್ಲಿ ಶ್ರೀಪುರುಷನು ಗಂಗಮಹಾ ನಾಯಿಗನಿಗೆ ಒಂದು ಗೌರವ ಪಟ್ಟವನ್ನು ನೀಡಿ, ಇಬ್ಬರಿಗೂ ಮೂವತ್ತು ಗುಳ ಪಾಳು (ಪಾಲು) ಭೂಮಿಯನ್ನು ನೀಡಿದನು.

ನಂದಿಪನಯ್ಕರರು ಕಾರಿವೀರಯನು ದೊವತಮ್ಮನ ಮಗ ಕೆಂಪಗೆ[೧೧], ಸಾಂತನಂಜೇದೇವರು ತಳವಾರ ಕೆಂಪೇನಾಯಕನ ಮಗ ತಮ್ಮನಾಯಕನಿಗೆ[೧೨], ಕೆಂಪೆಗವುಡರು ವ..ಕಸೊವಯಗೆ[೧೩]. ಸುಗುಟೂರು ಮುಮ್ಮಡಿ ಚಿಕರಾಯ ನಂಜಪ ಗೌಡರು ಗೊಲ್ಲ ಬಾಲನ ಮಗ ಎರಮಾದನಿಗೆ ನೆತ್ತರು ಕೊಡಗಿಯಾಗಿ ಹೊಲವನ್ನು[೧೪] ಮಾನ್ಯವಾಗಿ ಬಿಟ್ಟದಕ್ಕೆ ತಪ್ಪಿದವರು ಗೋವನು ಕೊಂದ ಪಾಪಕ್ಕೆ ಹೋಹರು.

ಗಂಗರ ಕಾಲದ ಯುದ್ಧ ವೀರಗಲ್ಲುಗಳನ್ನು ಗಮನಿಸುವುದಾದರೆ ಕ್ರಿ.ಶ.೭೫೦ರಲ್ಲಿ ಕಲಿ...ಎತ್ತಳ್ಥೊರನು ಕುಕ್ಕನರೆನಾಡನ್ನು ಆಳುತ್ತಿರಲು ಎತ್ತಳ್ಥೊರ ಊರಿನ ತಳಾವಾರ ಜತ್ತನ್ನು ಪೊಗುಣ್ಡೆ ಯುದ್ದದಲ್ಲಿ ಹೊಡೆದಾಡಿ ಮರಣಿದಾಗ[೧೫], ಕೊಂಗಣಿ ಮುತ್ತರಸನ ಶಿವನಾಪುರದ ವೀರಗಲ್ಲುವಿನಲ್ಲಿ ಕಾದುವಟ್ಟ ಸೈನ್ಯ ಯುದ್ಧದಲ್ಲಿ ಸೀಮೆವಲ್ಲರಸ ವೀರ ಮರಣ ಹೊಂದಿದ್ದಕ್ಕೆ ವೀರಕಲ್ಲನ್ನು ಕಾಮನು

[೧೦] ಎ.ಕ-೯, ಹೊ.ತಾ.೮೬, ಕ್ರಿ.ಶ.೭೨೦, ಬೇಚಿರಾಖ್ ಮಾರೇನಹಳ್ಳಿ.
[೧೧] ಎ.ಕ-೯, ದೊ.ತಾ.೪೪, ಚಿಕ್ಕ ವಡೆಗೆರೆ.
[೧೨] ಎ.ಕ-೯, ದೊ.ತಾ.೪೭, ಕಸಾಗಟ್ಟ.
[೧೩] ಎ.ಕ-೯, ಅನುಬಂಧ, ನೆ.ತಾ.೧೭೪, ತ್ಯಾಮಗೊಂಡ್ಲು.
[೧೪] ಎ.ಕ-೯, ಹೊ.ತಾ.೫೪, ಕ್ರಿ.ಶ.೧೬೦೨, ಸೂಲಿಬೆಲೆ.
[೧೫] ಎ.ಕ-೯, ನೆ.ತಾ.೩೪, ಕ್ರಿ.ಶ.೭೫೦, ತೋಟಗೆರೆ.

ನೆಡಿಸಿದನು[೧೬]. ಸೀಮವಲ್ಲವರಸರ ಕಾವಳಾಲದುಳ್ ಅಳ್ಳದ ಉನ್ನತ ಕಾಮರ್ ..... ಮುಪ್ಪತ್ತು ಮೂರು ಪರಿಹಾರವಾಗಿ[೧೭], ಕ್ರಿ.ಶ.೭೫೦ರಲ್ಲಿ ಉಗ್ರ ಕಾಮೇಶ್ವರರ ಅಕ್ಕ ಅರಸರಂಬರು ಕಾವಲುಗಾರನ ಬಾಕಿ ಇರುವ ಅಳತೆಯ ಕಂಡುಗ ಹಾಗೂ ನಗರತ್ತೂರುನ ದೇವರಾದ ಪೆರ್ಕಿಗಗೆ ಅಳತೆಯ ಕಂಡುಗ ಮತ್ತು ನಿರಟ್ಟೂರ ಹನ್ನೆರಡು ಹಳ್ಳಿಯಲ್ಲಿನ ದೊಡ್ಡ ಅಳತೆಯ ತೆರಿಗೆಯಿಂದ ವಿನಯಿತಿ ಇರುವ ಭೂಮಿಯನ್ನು[೧೮]. ದುಗ್ಗಮಾರನ ಕ್ರಿ.ಶ.೭೮೦ರ ಬೂದಿಗೆರೆ ವೀರಗಲ್ಲುವಿನಲ್ಲಿ ಭಿವೊಮ್ಮ ಕೊರಳಗನ ಸೇವಕರಲ್ಲಿ ಒಬ್ಬನಾದ ಕೊಣಮಿರು ಗಂಗನು ಆಲೂರಿನಲ್ಲಿ ದುಗ್ಗಮಾರರ ಪಡೆಯಲ್ಲಿ ಸೇರಿಕೊಂಡು ಶತ್ರುಗಳನ್ನು ಇರಿದು[೧೯], ದುಗ್ಗಮಾರನ ಮತ್ತೊಂದು ಗಂಗವಾರದ ವೀರಗಲ್ಲುವಿನಲ್ಲಿ ಶ್ರೀ ಅಜ್ಜವಮ್ಮನು ಕಾಸರೂರಿಗೆ ಮುತ್ತಿ ಅದನ್ನು ನಾಶಮಾಡಿದಾಗ ಪೆಣ್ಣನ್ದೂರಿನ ಕೀರ್ತಣ್ಣನು ಗಂಗಪುರದೊಳಗೆ ದುಗ್ಗಮಾರ ಪಡೆಯ...... ಇರಿದು ತಾನೂ ಸತ್ತನು[೨೦], ಶಿವಮಾರ ಮಹಾರಾಜನು ರಾಜ್ಯಭಾರ ಮಾಡುತಿದ್ದಾಗ ಮಣ್ಣೆಯ ಕೋಟೆ ಕಾಳಗದಲ್ಲಿ ಗಂಗರ ಪರಮ ಹೋರಾಡಿ ಮರಣ ಹೊಂದಿದ್ದಕ್ಕೆ ಪರಮನ ಮಗ ಸಿಜ್ಜಟಿಗ ಬಿಟ್ಟ ದತ್ತಿ[೨೧].

ನೊಳಂಬರ ಕಾಲದಲ್ಲಿ ಕ್ರಿ.ಶ.೮೮೦ ರಲ್ಲಿ ಮಹೇಂದ್ರನು ರಾಜನಾಗಿ ಆಳುತ್ತಿರಲು, ಗಂಗ ದೊರೆಯು ಚಿಕ್ಕ ಕಾಕೊಮೊಸೆಯ ಅರದರೆ ಒಡೆಯನನ್ನು ಕತ್ತರಿಸಿ ಹಾಕಿದನು. ಈ ಕಾಳಗದಲ್ಲಿ ಲಕ್ಕಮಡಿಯ ತಂದೆ ಕಲಮನಿಯು ಸತ್ತು ಇಂದ್ರಲೋಕ ಪ್ರಾಪ್ತನಾದನು[೨೨]. ಕ್ರಿ.ಶ.೯೦೦ರ ಕಾಲದಲ್ಲಿ ಉರಾಳ ಕಳವರ ತಿರು ರಾಜ್ಯದಲ್ಲಿ ಮಳ್ಳಿಗಾವುಂಡನು ಮತ್ತು ಚಾವಾಗಾವುಂಡನು .........ತುವಗಾವುಂಡನು ಸತ್ತಿದ್ದಕ್ಕೆ ಎರೆಯಪ್ಪನು ಕಲ್ಲನ್ನು ಸ್ಥಾಪಿಸಿದನು[೨೩]. ನೊಳಂಬದಿರಾಜನ ಕ್ರಿ.ಶ.೯೮೦ರ ಹಡಕನಹಳ್ಳಿ ವೀರಗಲ್ಲುವಿನಲ್ಲಿ ಚೋಳ ಮತ್ತು ನೊಳಂಬರ ಸೈನ್ಯ ಯುದ್ಧದಲ್ಲಿ ಪೆರ್ದೆರೆಯೊಳ್ ನೊಂಬರ ಸತ್ತನು. ವೀರ ರಾಜನ ಪ್ರಿಯ ಪುತ್ರನಾದವನು ಸತ್ತನು[೨೪]. ಇದೇ ವಿಷಯದ ಮತ್ತೊಂದು ವೀರಗಲ್ಲುವಿನಲ್ಲಿ ರಣುಗಯ್ಯನ ತಮ್ಮ ನೊಳಂಬರಸನ ರಕ್ಷಕ ಮಲ್ಲಪ ಮನ್ನರ ಜೊತೆ ಯುದ್ಧ ಮಾಡಿ ಮನ್ನರ ಕೊಂದು[೨೫].

---

[೧೬] ಎ.ಕ-೯ ಹೊ.ತಾ.೨೧, ಕ್ರಿ.ಶ.೭೫೦, ಶಿವನಾಪುರ.
[೧೭] ಎ.ಕ-೯ ಹೊ.ತಾ.೨೨, ಕ್ರಿ.ಶ.೭೫೦, ಶಿವನಾಪುರ.
[೧೮] ಎ.ಕ-೯, ಹೊ.ತಾ.೮೨, ಕ್ರಿ.ಶ.೭೫೦, ಚಿಕ್ಕನಹಳ್ಳಿ.
[೧೯] ಎ.ಕ-೯, ದೇ.ತಾ.೬೭, ಕ್ರಿ.ಶ.೭೮೦, ಗಂಗವಾರ.
[೨೦] ಎ.ಕ-೯, ದೇ.ತಾ.೭೪, ಕ್ರಿ.ಶ.೭೮೦, ಗಂಗವಾರ.
[೨೧] ಡಾ.ಹೆಚ್.ಎಸ್. ಗೋಪಾಲ್ ರಾವ್:- ಶಿವಮಾರನ ಮರಳಕುಂಟೆ ಶಾಸನ ಮತ್ತು ಮಣ್ಣೆಯ ಯುದ್ಧನೆಲೆ, ಇ.ದ.ಸಂ.೧೯, ಪು.ಸಂ-೪೦.
[೨೨] ಎ.ಕ-೯, ದೊ.ತಾ.೩, ಕ್ರಿ.ಶ.೮೮೦, ದೊಡ್ಡ ಬೆಳವಂಗಲ.
[೨೩] ಎ.ಕ-೯, ಹೊ.ತಾ.೧೩, ಕ್ರಿ.ಶ.೯೦೦, ಸಿದ್ಧನಹಳ್ಳಿ.
[೨೪] ಎ.ಕ-೯, ಹೊ.ತಾ.೪೭, ಕ್ರಿ.ಶ.೯೮೦, ಹಡಕನಹಳ್ಳಿ.
[೨೫] ಎ.ಕ-೯, ಹೊ.ತಾ.೪೮, ಕ್ರಿ.ಶ.೯೮೦, ಹಡಕನಹಳ್ಳಿ.

ಹೊಯ್ಸಳರ ವೀರಗಂಗ ಪೊಯ್ಸಳ ದೇವನ ಆಳ್ವಿಕೆಯ ಅವಧಿಯ ಉಲ್ಲೇಖವಿರುವ ತಮಿಳು ವೀರಗಲ್ಲು ಶಾಸನದಲ್ಲಿ ಕೈವಾರನಾಡನು ಗಂಡ ಮಾಣಿಕ ಬ್ರಾಹಾಧಿರಾಜನು ಆಳುತ್ತಿರಲು ನಿಗರಿಲಿ ಚೋಳಮಂಡಲದ ಕೈವಾರನಾಡ ಮಾ...ಚೋಳಿ ಮರ ಸಿಂಗತ್ತೂರಿನಲ್ಲಿ ಸನ್ಮಗನು ಮಾನನ್‌ಕಾರನು ಯುದ್ಧ ಮಾಡಿ ಸತ್ತನು. ಅವನ ಮಗ ನಾಗನು ಈ ಕಲ್ಲನ್ನು ವೃತ್ತದ ಬಳಿ ಸ್ಥಾಪಿಸಿದವನು. ಮಾಚಗಾವುಂಡನು ಹಿರಿಕೆರೆಯ ಖಂಡಗ ಕಳನಿಯನು ಕೊಡುಗೆಯಾಗಿ ಕೊಟ್ಟನು[೨೬]. ಮಧುರೆಯಲ್ಲಿ ಗಾಂಧನ ಮಗನು ಸಮಯದಲ್ಲಿ ಧನುಕಾಡಿಕ........ ಚಕ್ರಯಳತಿ ಹೊಗಿ ಚಕ್ರದಲ್ಲಿಗೆ ಸುತ್ತ ೧೨ ಅಡಿಯ ಅಳದಲ್ಲಿ ....... ಕೃತು .... ದೊಡಗಲಾಗೆ ಸತ್ತಿಗವನೆಯಲ್ಲಿಗೆ ಸಾಗಿದಡೆಯೂ[೨೭]. ಗುತ್ತಿ ಪಉರ ಪತಿಕಾ ಮಗ ಚಿಕ್ಕಯ್ಯನ ಮಕ್ಕಳು ಭಗಿಖತ್ತರ ಅಳ್ತೆರದುಗ ಸ್ವರ್ಗಕ್ಕೆ ಹೋದನು ಶ್ರೀ[೨೮]. ನಂದಿಪ ಅಣ್ಣಡಡಧರ ಹಳ್ತಪರೆಯೆ ವದಿ ಸತು ಸಗಸ್ತನಾದ[೨೯].

ವೀರರಿಗೆ ನೀಡಲಾಗುತ್ತಿದ್ದ ದತ್ತಿಯ ಎಲ್ಲೆಗಳನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಇಂತಹ ದತ್ತಿಗಳನ್ನು ಕಲ್ನಾಡು ಎಂದು, ಗಡಿಯ ಕಲ್ಲುಗಳನ್ನು ಭೂಮಿಯ ಅಳತೆಯನ್ನು ಸೂಚಿಸುತ್ತದೆ. ಸತ್ತ ವೀರನ ಕುಟುಂಬ ನಿರ್ವಹಣೆಗಾಗಿ ರಾಜನೋ, ಸಾಮಂತರೋ, ಅಧಿಕಾರಿಯೋ, ಸ್ಥಳೀಯರೋ ಸೇರಿ ಬಿಟ್ಟ ದಾನ ಭೂಮಿಯ ಎಲ್ಲೆಯನ್ನು ಗುರುತಿಸಲು ಗಡಿ ಕಲ್ಲನ್ನು ನೆಡಲಾಗುತ್ತಿತ್ತು. ಅಯ್ಯಪ ದೇವನ ಮಗನ ಕಾಲದ ಕ್ರಿ.ಶ.೯೪೮ ಶಾಸನದಲ್ಲಿ ಮಹಾಶಬ್ದ ಪಲ್ಲವಾನ್ವಯ ಕಾಲ ತಿಲಕ ಕಾಂಚಿಪುರವರೇಶ್ವರ ಪಲ್ಲವ ನಾರಾಯಣಂ ಶ್ರೀ ಅಯ್ಯಪನ್......ಬಾಡವ ನಾಳುತ್ತಮಿರೆ ಕನ್ನಂದವನ್ ಇರಿದು ಸತ್ತ ಕಾಳುವಟ್ಟ ಬೀರಯ್ಯರ ವೀರವನು ಅಭ್ಯಂತರಿ ಶ್ರೀ ಕಲ್ನಾಟು ಕೊಟ್ಟರು[೩೦]. ದೊಡ್ಡಬಳ್ಳಾಪುರದ ತಾಲ್ಲೂಕಿನ ತಿಮ್ಮೋಜನಹಳ್ಳಿಯಲ್ಲಿನ ಎರಡು ವೀರಗಲ್ಲುಗಳಲ್ಲಿ ಒಂದು ವೀರಗಲ್ಲಿನ ಮೇಲೆ ಸ್ವಸ್ತಿ ಬೆಣ್ಣೆಗೂರ ಮ್ಯಾರಮು ಮಗಂ ಎಳೂಯಗಯ್ಯ ತನ್ನ ಪೂತ್ರ ಮಾರಸವ ಕೊಣುವಿ ಪ.ಗ..ದೊಳ್ ಕಾದಿಪ[೩೧]. ಜಯಕಾಮನ್ ವೀರ ಪೆರ್ಬ್ಬಾಣನ್ ಕಡಿತಲೆ ಮಣ್ಣೆ ಮಾರಿ ತೊಮ್ಬತ್ತೈಯ್ವರ್ ಇರಿದೋ[೩೨], ಸ್ವಸ್ತಿ ಪೊಲಯ್ಯ ಅರಸರಣ ಶ್ರೀ ಮನ್ ಅತ್ತಿ.ಶ್ವರ ಸರಗ ದಿವ ಬಿಜ್ಜಯ್ಯ ಮಾರ ಬಿರುದ ಗಂಗನನೆ ಬಪ್ಪಮರರವೊ ಆನೆದೆಚ್ಚನಾಗ.ಲ ಚಿಟ್ಟಗೊರಕ್ಕರಮ್[೩೩], ಮದುರೆ ಯಲಲ ಹೆಗಡೆ ಗೌಡನ

---

[೨೬] ಎ.ಕ-೯, ಹೊ.ತಾ.೧೮, ಕ್ರಿ.ಶ.೧೧೨೮, ತಮಿಳು, ಸಿದ್ಧನಹಳ್ಳಿ.
[೨೭] ಎ.ಕ-೯, ದೊ.ತಾ.೫೬, ಕ್ರಿ.ಶ.೧೪೧೮, ಮಧುರೆ.
[೨೮] ಎ.ಕ-೯, ನೆ.ತಾ.೧೩, ಗೇರಹಳ್ಳಿ.
[೨೯] ಎ.ಕ-೯, ದೊ.ತಾ.೪, ದೊಡ್ಡ ಬೆಳವಂಗಲ.
[೩೦] ಎ.ಕ-೯, ದೇ.ತಾ.೧೦, ಕ್ರಿ.ಶ.೯೪೮, ಕೊಯಿರ.
[೩೧] ಎ.ಕ-೯, ದೊ.ತಾ.೨೧, ತಿಮ್ಮೋಜನಹಳ್ಳಿ.
[೩೨] ಎ.ಕ-೯, ದೊ.ತಾ.೩೨, ದರ್ಗಾಪುರ.
[೩೩] ಎ.ಕ-೯, ದೊ.ತಾ.೫೩, ಮುಪಡಿಗಟ್ಟ.

ಮಗನು ಸಮಯದ ಕಾಮರನು ಕಾದಿ ಕರೆ ಬೊಮ್ಮ ತಿರುಮಲೆಯ...... ಸಾಗಿ ಬರುತ್ತಿಲಾಗಿ.......ಕಾಮ..... ಸ್ವರ್ಗಸ್ಥನಾದ[೩೪].

## ೨. ತುಱುಗೊಳ್ ವೀರಗಲ್ಲು

ಪ್ರಾಚೀನ ಕಾಲದಿಂದಲೂ ಆರ್ಥಿಕ ಸಬಲತೆಯ ಮೂಲ ನೆಲೆಗಳಲ್ಲಿ ಪಶುಗಳು ಪ್ರಮುಖ ಪಾತ್ರವಹಿಸಿದ್ದು, ಮಾನವನಿಗೆ ತನ್ನ ಜೀವನದ ನಿರ್ವಹಣೆಗಾಗಿ ವ್ಯವಸಾಯವನ್ನು ಅವಲಂಭಿಸಿದಾಗ ಅವನಿಗೆ ಹಲವು ರೀತಿಯಲ್ಲಿ ಗೋವುಗಳು ಸಹಾಯಕವಾದ ಜೀವಿಗಳಾಗಿ, ಸಂಪತ್ತಿನ ಅಂಶವಾಗಿ, ಮತ್ತು ಸರಕು ಸಾಗಾಣಿಕೆಗೆ ಮುಖ್ಯವಾದ ವಾಹನವಾಗಿತ್ತು. ಪಶುಸಂಗೋಪನೆ ಇಂದಿಗೂ ಸಹ ಲಾಭದಾಯಕ ವೃತ್ತಿಗಳಲ್ಲಿ ಒಂದು. ಅನೇಕ ಜನಾಂಗಗಳಿಗೆ, ಕುಟುಂಬಗಳಿಗೆ ಪಶುಪಾಲನೆಯೆ ಮುಖ್ಯ ಕಸುಬಾಗಿತ್ತು. ಆರ್ಥಿಕ ವ್ಯವಸ್ಥೆಯು ಉತ್ತಮವಾಗಿರಲು ಗೋವುಗಳು ಪ್ರಮುಖವಾಗಿರುತ್ತಿತ್ತು. ಇಂತಹ ಅಮೂಲ್ಯ ಸಂಪತ್ತಾದ ಗೋವುಗಳನ್ನು ಕದಿಯುವುದು ಅಂದಿನ ಜನರನ್ನು ಆರ್ಥಿಕವಾಗಿ ಹಾಗೂ ಮಾನಸಿಕವಾಗಿ ದುರ್ಬಲಗೊಳಸುವ ಕಾರ್ಯಗಳಲ್ಲಿ ಒಂದಾಗಿತ್ತು. ಅಂದಿನ ಕಾಲದಲ್ಲಿ ಕದ್ದ ಗೋವುಗಳನ್ನು ಮತ್ತೆ ಮರಳಿ ಪಡೆಯುವುದು ಪ್ರತಿಷ್ಠೆಯ ವಿಷಯವಾಗಿತ್ತು. ಯುದ್ಧಗಳು ಸಹ ಈ ಗೋ ಅಪಹರಣಗಳಂದಲೆ ಪ್ರಾರಂಭವಾಗುತ್ತಿದ್ದವು. ಇಂತಹ ಯುದ್ಧಗಳನ್ನು ಗೋಗ್ರಹಣ ಎಂದು ಕರೆಯುತ್ತಿದ್ದರು.

ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರದ ಗದ್ದುಗೆ ಹಿಡಿಯಲು ಅಧಿಕಾರ ವಿಸ್ತರಿಸಲು ಆ ಮುಲಕ ತಮ್ಮ ಶ್ರೀಮಂತಿಕೆಯನ್ನು ಉಳಿಸಿಕೊಳ್ಳಲು ಆಕ್ರಮಣ ನೀತಿ ಅನುಸರಿಸುತ್ತಿದ್ದರು. ಕಳ್ಳತನವನ್ನು ಉದ್ದೇಶವಾಗಿಟ್ಟುಕೊಂಡು ಬಂದು ತುರುಗಳನ್ನು ಅಪಹರಿಸಿದವರ ವಿರುದ್ಧ ಹೋರಾಡಿ ಮಡಿದ ವೀರರ ಅನೇಕ ನಿರ್ಧಶನಗಳು ದೊರೆಯುತ್ತವೆ. ಊರಿನ ಗೋವುಗಳನ್ನು ಅಪಹರಿಸಿದಾಗ ಆ ಗೋವುಗಳ್ಳರನ್ನು ಎದುರಿಸಿ ತುರುಗಳನ್ನು ರಕ್ಷಿಸಿ ಹಿಂತಿರುಗಿಸುವುದೇ ವೀರತನದ ಮೌಲ್ಯವೆಂದು ನಂಬಿದಂತಹ ಕಾಲ. ತುರುಗಾಳಗಲ್ಲಿ ಮಡಿದ ಅಥವಾ ಹೋರಾಡಿದ ವೀರರ ಬಗ್ಗೆ ತುಂಬಾ ಗೌರವದ ಭಾವನೆ ಇತ್ತೆಂಬ ವಿಷಯ ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಉಲ್ಲೇಖವಾಗಿದೆ[೩೫].

ಯಾವುದೇ ಮುನ್ಸೂಚನೆ ಇಲ್ಲದೆ ನೆಡೆಯುತ್ತಿದ್ದ ಈ ರೀತಿಯ ಅಪಹರಣಗಳು ಜನರಲ್ಲಿ ಭಯಭೀತಿಯನ್ನುಂಟು ಮಾಡುವುದರ ಜೊತೆಗೆ ಅವರ ಧೈರ್ಯವನ್ನು ಪರೀಕ್ಷಿಸುವ ಸಮಯವೂ

[೩೪] ಎ.ಕ-೯, ದೊ.ತಾ.೫೫, ಕ್ರಿ.ಶ.೧೪೧೮, ಮಧುರೆ.
[೩೫] ಬ್ರಹ್ಮಶಿವನ ಸಮಯ ಪರೀಕ್ಷೆ, ಪು.ಸಂ-೧೨,೧೩.

ಆಗಿರುತ್ತಿತ್ತು. ಗೋವು ಪರಮ ಪೂಜ್ಯವಷ್ಟೆ ಅಲ್ಲದೇ, ಸಂಪತ್ತಿನ ಮೂಲವಾಗಿದ್ದರೂ ಅವುಗಳ ರಕ್ಷಣೆಗೆಂದು ವಿಶೇಷವಾದ ಸೈನಿಕರಿದ್ದುದರ ಬಗ್ಗೆ ಆಧಾರಗಳಿಲ್ಲ. ಈ ದನಗಳ ಪಾಲನೆಯ ಜೊತೆಗೆ ರಕ್ಷಣೆಯ ಹೊಣೆಯು ಸಹ ಬಹುತೇಕ ಗೋಪಾಲಕರದ್ದೇ ಆಗಿತ್ತು. ಕಳೆದು ಕೊಳ್ಳುವುದು ಊರಿನ ವ್ಯಕ್ತಿಯ ಪ್ರತಿಷ್ಠೆಯು ಆಗಿರುತ್ತದೆ. ಕದ್ದೊಯ್ದ ದನಕರುಗಳನ್ನು ಮರಳಿ ತರುವುದು ಪ್ರತಿಷ್ಠೆಯ ವಿಷಯವಾಗಿ, ಹೋರಾಡುವುದು ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯವಾಗಿತ್ತು.

ತುರುಗಳನ್ನು ಅಪಹರಿಸುವಾಗ ಊರನ್ನು ನಾಶ ಮಾಡಿ, ಮಹಿಳೆಯರ ಮಾನಭಂಗವನ್ನು ಮಾಡುತ್ತಿದ್ದ ಮಾನವನ ಕ್ರೂರ ದುರಾಸೆಯನ್ನು ಸಂಬಂಧಿಸಿದಂತೆ ಗ್ರಾಮದ ದನಕರುಗಳನ್ನು ಅಪಹರಿಸಿದಾಗ ಊರಿನ ಯುವಕರು ವೀರಾವೇಶದಿಂದ ಹೋರಾಡಿ ಅವುಗಳನ್ನು ಮತ್ತೆ ಮರಳಿ ಗ್ರಾಮಕ್ಕೆ ಕರೆತರುತ್ತಿದ್ದರು. ಇಂತಹ ಸಮಯದಲ್ಲಿ ನಡೆಯುತ್ತಿದ್ದ ಹೋರಾಟದಲ್ಲಿ ಬಹಳಷ್ಟು ಜನ ಸಾವನ್ನಪ್ಪುತ್ತಿದ್ದರು. ಗ್ರಾಮದ ದನಕರುಗಳ ರಕ್ಷಣೆಗೆ ತಮ್ಮ ಪ್ರಾಣವನ್ನು ಸಹ ಲೆಕ್ಕಿಸದೆ ವೀರಾವೇಶದಿಂದ ಹೋರಾಡಿ ವೀರಮರಣವನ್ನಪ್ಪುತ್ತಿದ್ದ ವೀರರನ್ನು ಸ್ಮರಿಸುವುದು ಆ ಗ್ರಾಮದ ಜನರ ಹಾಗೂ ಮಡಿದ ವೀರರ ಸಂಬಂಧಿಕರ ಪ್ರಮುಖ ಕರ್ತವ್ಯಗಳಲ್ಲಿ ಒಂದಾಗಿತ್ತು. ಅವರ ಸಾಧನೆ ಚಿರಕಾಲ ಉಳಿಯಲಿ ಅವರ ಶೌರ್ಯ ಪರಾಕ್ರಮಗಳು ಮುಂದಿನ ಪೀಳಿಗೆಗೆ ದಾರಿದೀಪವಾಗಲಿ ಎಂಬ ಉದ್ದೇಶದಿಂದ ಅವರ ನೆನಪಿಗಾಗಿ ಸ್ಮಾರಕಗಳನ್ನು ನೆಡಲು ಪ್ರಾರಂಭಿಸಿದರು. ನಂತರ ಅವುಗಳನ್ನು ಅವರ ಪರಾಕ್ರಮವನ್ನು ಲೋಕಕ್ಕೆ ಸಾರುವುದರ ಜೊತೆಗೆ ಹಲವು ಸಮಸ್ಯೆಗಳ ನಿವಾರಣೆಗಾಗಿ ಪೂಜಿಸಲು ಸಹ ಪ್ರಾರಂಭಿಸಿದರು. ಉದಾಹರಣೆಗೆ ದನಕರುಗಳಿಗೆ ಬರುವ ರೋಗಗಳ ನಿವಾರಣೆಗಾಗಿ, ಮಕ್ಕಳು ಕಾಯಿಲೆ ಬಿದ್ದಾಗ, ಇತರೆ ಸಾಂಕ್ರಾಮಿಕ ರೋಗಗಳು ಗ್ರಾಮಕ್ಕೆ ಆವರಿಸಿದಾಗ ಸಾಮೂಹಿಕವಾಗಿ ಅವುಗಳನ್ನು ಪೂಜಿಸುತ್ತಿದ್ದರು.

ತುರುಗೊಳದಲ್ಲಿ ಹೋರಾಡಿ ತಮ್ಮ ಶೌರ್ಯವನ್ನು ಮೆರೆದ ವೀರನ ನೆನಪಿಗಾಗಿ ನಿರ್ಮಿಸಿದ ಸ್ಮಾರಕಗಳನ್ನೆ ತುರುಗೊಳ್ ವೀರಗಲ್ಲುಗಳು. ತುರು+ಕೋಳ್=ತುರುಗಳನ್ನು ತೆಗೆದುಕೊಂಡು ಹೋಗುವುದು. ಗೋಳಿಡುತ್ತಿದ್ದವು. ತುರುಗೋಳ್ ವೀರಗಲ್ಲುಗಳ ಯಾವುದಾದರೂ ಒಂದು ಹಂತದಲ್ಲಿ ತುರುಗಳ ಚಿತ್ರವಿರುತ್ತದೆ. ತುರುಗಳನ್ನು ರಕ್ಷಿಸುವವರನ್ನು ವೀರರೆಂದು, ಅಪಹರಿಸುವವರನ್ನು ಪ್ರತಿವೀರರು ಎಂದು ಹೋರಾಟದಲ್ಲಿ ಮಡಿದವರ ಹೆಂಡತಿ, ಕುಟುಂಬ ಮಕ್ಕಳಿಗೆ ಭೂಮಿ, ಹಣ, ಗ್ರಾಮವನ್ನು ದಾನ ನೀಡುತ್ತಿದ್ದರು.

ಶಾಸನಗಳಲ್ಲದ ಹಲವಾರು ಶಿಲ್ಪಗಳಲ್ಲಿ ಗೋರಕ್ಷಣೆಯ ವಿಷಯಗಳನ್ನು ಮನಮುಟ್ಟುವಂತೆ ಚಿತ್ರಿಸಲಾಗಿರುವುದನ್ನು ಕಾಣಬಹುದು. ವೀರನ ಕೈಯಲ್ಲಿ ಸಾಮಾನ್ಯವಾಗಿ ಆಯುಧಗಳು ಇರುತ್ತಿತ್ತು.

ತಲೆಯ ಕೂದಲನ್ನು ದುಂಡಾಗಿ ನೆತ್ತಿಯ ಮೇಲೆ ಗಂಟು ಹಾಕಿ ಆ ಗಂಟನ್ನು ಬಟ್ಟೆಯಿಂದ ಕಟ್ಟಿರುತ್ತಾರೆ. ಶತ್ರುಗಳೊಂದಿಗೆ ಹೋರಾಟದ ಚಿತ್ರಣ, ಹೋರಾಟದ ಹಂತದಲ್ಲಿ ಕುದುರೆಗಳನ್ನು, ತುರುಗಳನ್ನು ಕಾಲಾಳುಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಹಾಗೂ ಹಲವಾರು ಬಗೆಯ ಆಯುಧಗಳನ್ನು ರಚಿಸಿರುತ್ತಾರೆ. ಜಿಲ್ಲೆಯಲ್ಲಿಯೂ ಸಹ ಗೋವುಗಳನ್ನು ರಕ್ಷಿಸುವ ಸಲುವಾಗಿ ತಮ್ಮ ಪ್ರಾಣವನ್ನು ಬಿಟ್ಟವರ ನೆನಪಿಗಾಗಿ ಹಾಕಿಸಿರುವ ತುರುಗೋಳ್ ವೀರಗಲ್ಲುಗಳು ಹೆಚ್ಚಾಗಿ ಕಂಡು ಬರುತ್ತದೆ. ಅವುಗಳನ್ನು ಕೆಳಗಿನಂತೆ ಗಮನಿಸ ಬಹುದಾಗಿದೆ.

ಗಂಗರ ಕಾಲದಲ್ಲಿಯೂ ಗೋಗ್ರಹಣ ನೆಡೆಯುತ್ತಿದ್ದವು ಎಂಬುದಕ್ಕೆ ಅವರ ಕಾಲದಲ್ಲಿ ಸ್ಥಾಪಿಸಿದ ಸಾವಿರಾರು ವೀರಗಲ್ಲುಗಳು ಸಾಕ್ಷಿಯಾಗಿವೆ. ಕ್ರಿ.ಶ.೯ನೇ ಮತ್ತು ೧೦ನೇ ಶತಮಾನದಲ್ಲಿ ದೊರೆಯುವ ರಾಷ್ಟ್ರಕೂಟರ ತುಋುಗೊಳ್ ಶಾಸನ ಶಿಲ್ಪಕ್ಕೂ ಮತ್ತು ಗಂಗರ ತುಋುಗೊಳ್ ಶಾಸನ ಶಿಲ್ಪಕ್ಕೂ ಹೋಲಿಸಿದರೆ ರಾಷ್ಟ್ರಕೂಟರ ತುಋುಗೊಳ್ ಶಾಸನ ಶಿಲ್ಪ ಮುಂದುವರಿದ ಶೈಲಿಯಾಗಿರುವುದು ಕಂಡುಬರುತ್ತದೆ. ಗಂಗರ ಕಾಲದ ಸ್ಮಾರಕ ಶಿಲೆಗಳ ಚಿತ್ರಣದಲ್ಲಿ ಒಂದು ನಿಶ್ಚಿತ ಕ್ರಮವಿಲ್ಲ. ಅಲ್ಲದೆ ಅವರು ಬಳಸಿರುವ ಶಿಲೆಯೂ ಬಹಳ ಒರಟಾಗಿರುತ್ತದೆ. ಹಾಗೂ ಆ ಶಿಲೆಗಳು ಇಂತಹದ್ದೇ ಆಕಾರದಲ್ಲಿರಬೇಕು ಎಂಬ ನಿಯಮವೂ ಇಲ್ಲ. ವೀರನನ್ನು ದೊಡ್ಡದಾಗಿ ಚಿತ್ರಿಸಿ, ದನಗಳನ್ನು ಯಾವುದಾದರೂ ಒಂದು ಮೂಲೆಯಲ್ಲಿ ಚಿಕ್ಕದಾಗಿ ಚಿತ್ರಿಸಿರುತ್ತಾರೆ. ವೀರನ ಕೈಯಲ್ಲಿ ಬಿಲ್ಲು ಅಥವಾ ಭಾಕುವನ್ನು ಚಿತ್ರಿಸಿರುತ್ತಾರೆ. ತಲೆಯ ಕೂದಲನ್ನು ನೆತ್ತಿಯ ಮೇಲೆ ತುಂಡಾಗಿ ಗಂಟು ಹಾಕಿ ಆ ಗಂಟನ್ನು ಬಟ್ಟೆಯ ಪಟ್ಟಿಯಿಂದ ಬಿಗಿದುಕೊಂಡಿರುತ್ತಾರೆ. ಆದರೂ ಇವರ ಅವಧಿಯ ಕೆಲವು ವೀರಗಲ್ಲುಗಳು ಸುಂದರವಾದ ಶೈಲಿಯಿಂದ ಕೂಡಿವೆ.

ರಾಜಘಟ್ಟದ ನಾಲ್ಕು ತುರುಗೋಳ್ ವೀರಗಲ್ಲುಗಳು ಒಂದೆ ಸಾಲಿನಲ್ಲಿ ಕೆರೆ ಕೋಡಿ ಬಳಿ ಇವೆ. ಶ್ರೀ ಸಿರಿಸೆಟ್ಟಿಯೆಂಬ ಸವ ಸಿಟ್ಟಾಮರ ಜವದಿಯೊಳಗೆ ಬೀಡ ನಿರುಯ[೩೬], ಶ್ರೀ ನಕರಣ ಬೇಳರ ತೋಟಮ ಸೆಟ್ಟಿ ಬಾಡಣದ ಊರಚೆನೊಳ್ ಸತ್ತ ಎಂದು ಶಾಸನದಲ್ಲಿ ಉಲ್ಲೇಖವಿರುವಂತೆ[೩೭] ಊರಿನ ಹೊರಗೆ ತುರುಗೋಳ್ ಕಾಳಗ ನಡೆದು ೪ ಜನ ವೀರರು ಮರಣ ಹೊಂದಿದ್ದಾರೆ. ಎರಡು ವೀರಗಲ್ಲುಗಳಲ್ಲಿನ ಅಕ್ಷರಗಳು ಅಸ್ಪಷ್ಟವಾಗಿದೆ.

[೩೬] ಎ.ಕ-೯, ದೊ.ತಾ.೨೩, ರಾಜಗಟ್ಟ.
[೩೭] ಎ.ಕ-೯, ದೊ.ತಾ.೨೩, ರಾಜಗಟ್ಟ.

ಇಲ್ಲಿನ ಮೊದಲನೇ ವೀರಗಲ್ಲಿನ ಬಗ್ಗೆ ಹೇಳುವುದಾದರೆ **(ಚಿತ್ರ ಸಂಖ್ಯೆ–೨೭)** ಇದು ಸುಮಾರು ಎಂಟು ಅಡಿಯಷ್ಟು ಎತ್ತರವಿದ್ದು ನಾಲ್ಕು ಅಡಿಯಷ್ಟು ಅಗಲವಾಗಿದೆ. ಇಲ್ಲಿ ಸುಂದರವಾದ ಬಲಿಷ್ಠವಾದ ವೀರನು ಆಲೀಢಾಸನದಲ್ಲಿ ನಿಂತು ಎಡಗೈಯಲ್ಲಿ ಆಯತಾಕಾರದ ಗುರಾಣಿಯನ್ನು, ಮೇಲೆತ್ತಿದ ಬಲಗೈಯಲ್ಲಿ ಪಟ್ಟದ ಕತ್ತಿಯನ್ನು ಹಿಡಿದು ವೀರಾವೇಶದಿಂದ ಶತೃಗಳ ಮೇಲೆ ಆಕ್ರಮಣ ಮಾಡುತ್ತಿರುವಂತೆ, ಶತೃಗಳ ನಾಲ್ಕು ಬಾಣಗಳು ದೇಹವನ್ನು ಹೊಕ್ಕಿದ್ದರೂ ಸಹ ಅವುಗಳನ್ನು ಲೆಕ್ಕಿಸದೆ ಹೋರಾಟವನ್ನು ಮುಂದುವರೆಸುತ್ತಿರುವಂತೆ, ತಲೆಗೂದಲನ್ನು ದುಂಡಾಗಿ ಗಂಟು ಕಟ್ಟಿ ಬಟ್ಟೆಯಿಂದ ಬಿಗಿದಿರುವಂತೆ ಕಾಣುತ್ತದೆ. ಜಟಾಜೂಟದೊಂದಿಗೆ ಕರ್ಣಕುಂಡಲ, ಕೇಯೂರ, ಕಂಠಿಕೆ, ಹಸ್ತಕಟಕ, ಯುದ್ಧವಸ್ತ್ರವನ್ನು ಧರಿಸಿದ್ದಾನೆ. ಸೊಂಟಕ್ಕೆ ವಸ್ತುವೊಂದನ್ನು ಬಿಗಿದುಕೊಂಡಿದ್ದು, ಅದರ ಒಂದು ತುದಿ ಎರಡು ಕಾಲುಗಳ ನಡುವೆ ತೊಯ್ದಾಡುತ್ತಿದೆ. ಸೊಂಟದಲ್ಲಿ ಚಾಕುವನ್ನು ಸಿಕ್ಕಿಸಿಕೊಂಡಿದ್ದಾನೆ. ದುಂಡನೆಯ ಮುಖದಲ್ಲಿ ಮಂದಹಾಸವಿದೆ. ಕಿವಿ, ಕೊರಳು, ಕೈಗಳಲ್ಲಿ ಆಭರಣಗಳಿವೆ. ತುರುಗಳನ್ನು ರಕ್ಷಿಸಿದ್ದಾನೆ ಎಂಬುದಕ್ಕೆ ವೀರನ ಹಿಂದೆ ಎರಡು ತುರುಗಳು ಹಟ್ಟಿಗೆ ಹಿಂದಿರುಗಿ ಹೋಗುವಂತಿದೆ. ವೀರನ ಮೇಲ್ಭಾಗದಲ್ಲಿ ಚಿಕ್ಕದಾಗಿ ಸುಖಾಸೀನದಲ್ಲಿ ವೀರನು ಚಾಮರಧಾರಿಣಿಯರ ಸೇವೆಯನ್ನು ಅನುಭವಿಸುತ್ತಾ ಕುಳಿತಿರುವುದನ್ನು ಚಿತ್ರಿಸಲಾಗಿದೆ. ಸ್ವರ್ಗಾರೋಹಣದ ಪರಿಕಲ್ಪನೆ ಕಾಣಬಹುದು. ಇದರ ಪಕ್ಕದಲ್ಲಿ ಸ್ಥಳವಿದ್ದ ಕಡೆಯಲ್ಲಾ ಪಾಠವನ್ನು ಬರೆಯಲಾಗಿದೆ.

ಇದೇ ಸಾಲಿನಲ್ಲಿನ ಎರಡನೇ ವೀರಗಲ್ಲು **(ಚಿತ್ರ ಸಂಖ್ಯೆ–೨೮)** ಸ್ವಲ್ಪ ಮೇಲ್ಭಾಗ ಹೊಡೆದು ಹೋಗಿರುವುದರ ಜೊತೆಗೆ ಬಹಳಷ್ಟು ತ್ರುಟಿತಗೊಂಡಿವೆ. ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದು ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಅದು ಬಹಳಷ್ಟು ಸವೆದಿದೆ. ತುರುಬನ್ನು ಹೊರತು ಪಡಿಸಿದರೆ ಬೇರೆ ಯಾವುದೇ ಅಲಂಕರಣೆಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಶತ್ರುಗಳು ಬಿಟ್ಟಿರುವ ಬಾಣಗಳು ವೀರನ ದೇಹವನ್ನು ನಾಟಿವೆ. ಬಲಭಾಗದಲ್ಲಿ ೩ ಎಮ್ಮೆಗಳ ಚಿತ್ರಗಳನ್ನು ಬಿಡಿಸಲಾಗಿದೆ. ಇಲ್ಲಿನ ಮೂರನೇ ತುರುಗೋಳ್ ವೀರಗಲ್ಲು ಶಾಸನೋಕ್ತವಾಗಿದೆ. ವೀರನು ಆಲೀಢ ಭಂಗಿಯಲ್ಲಿದ್ದು ತುರುಬಿನೊಂದಿಗೆ ಆಭರಣಗಳ ಅಲಂಕರಣೆಯಿಂದ ಕೂಡಿದ್ದಾನೆ. ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಚಿಕ್ಕದಾದ ಕಠಾರಿಯನ್ನು ಹಿಡಿದಿದ್ದಾನೆ. ಶತ್ರುಗಳು ಹಾರಿಸಿರುವ ೩ ಬಾಣಗಳು ಎದೆಗೆ, ಸೊಂಟಕ್ಕೆ ನಾಟಿದೆ. ತುರುಗಳ ಚಿತ್ರಗಳು ಸಾಕಷ್ಟು ತ್ರುಟಿತಗೊಂಡಿವೆ. ಬಿಲ್ಲುಗಳನ್ನು ಹಿಡಿದಿರುವ ಎರಡು ವೀರಗಲ್ಲು ಒಬ್ಬನೇ ಶಿಲ್ಪಿಯು ರಚಿಸಿರಬೇಕು ಎರಡು ಕಲ್ಲಿನ ಶೈಲಿಯು ಒಂದೇ ರೀತಿಯಲ್ಲಿದೆ.

ಇಲ್ಲಿನ ಕೊನೆಯ ಹಾಗೂ ನಾಲ್ಕನೇ **(ಚಿತ್ರ ಸಂಖ್ಯೆ–೨೯)** ವೀರಗಲ್ಲು ಸುಮಾರು ೯ ಅಡಿಯಷ್ಟು ಎತ್ತರವಾಗಿದೆ. ವೀರನು ಕತ್ತಿ, ಗುರಾಣಿಯನ್ನು ಹಿಡಿದು ಹೋರಾಡುತ್ತಿರುವಂತೆ ಚಿತ್ರಿಸಿದ್ದು ಇವನು ಆಲೀಢ ಭಂಗಿಯಲ್ಲಿ ನಿಂತಿದ್ದಾನೆ. ಶತ್ರುಗಳ ಬಾಣಗಳು ದೇಹದ ಎಲ್ಲಾ ಭಾಗದಲ್ಲಿ ನಾಟಿವೆ. ಚಿಕ್ಕದಾದ ತುರುಬು, ಕರ್ಣಕುಂಡಲ, ಸುಂದರವಾದ ಕಂಠಿಕೆ, ಹಸ್ತಕಟಕ, ವೀರಗಚ್ಚೆಯನ್ನು ಧರಿಸಿದ್ದಾನೆ. ಸೊಂಟದಲ್ಲಿ ಒರೆ ಸಮೇತ ಇರುವ ಬಾಕು ಇದೆ. ತುರುಗಳನ್ನು ಚಿಕ್ಕದಾಗಿ ತೋರಿಸಲಾಗಿದೆ. ಮೇಲ್ಭಾಗದಲ್ಲಿ ಶಾಸನವಿದ್ದು ಪಕ್ಕದಲ್ಲಿ ಅಪ್ಸರೆಯರು ಇವನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವುದನ್ನು ಚಿತ್ರಿಸಲಾಗಿದೆ.

ಕಾರಹಳ್ಳಿಯಲ್ಲಿ ಒಂದೇ ಸ್ಥಳದಲ್ಲಿ ೫ ತುರುಗೋಳ್ ಕಲ್ಲುಗಳನ್ನು **(ಚಿತ್ರ ಸಂಖ್ಯೆ–೩೦)** ಕಾಣಬಹುದು. ಒಂದಕ್ಕಿಂತ ಒಂದು ಕಲ್ಲು ವಿಶೇಷವಾಗಿದೆ. ವೀರನ ಬತ್ತಳಿಕೆಯಲ್ಲಿ ಬಾಣಗಳನ್ನು ಕಾಣಬಹುದು. ವೀರನಿಗೆ ಮಂಡಿ, ತೋಡೆ, ಸೊಂಟಕ್ಕೆ ಬಾಣಗಳು ನಾಡಿದೆ. ವೀರನ ಜೊತೆಗೆ ಇಬ್ಬರು ಸಹ ವೀರರು ಇದ್ದಾರೆ. ಬಲಭಾಗದಲ್ಲಿ ಎಮ್ಮೆಗಳು ಹಟ್ಟಿಯ ಕಡೆ ಹಿಂತಿರುಗುವಂತೆ ಕಾಣುತ್ತದೆ. ಮೇಲ್ಭಾಗದಲ್ಲಿ **(ಚಿತ್ರ ಸಂಖ್ಯೆ – ೩೧)** ಸ್ವಾರ್ಗರೋಹಣ ಕಲ್ಪನೆಯಿದೆ.

ಹೊಸಕೋಟೆ ತಾಲ್ಲೂಕಿನ ಯಡಿಗೇನಹಳ್ಳಿಯ ಕ್ರಿ.ಶ.೯ನೇ ಶತಮಾನ ತುರುಗೋಳ್‌ನಲ್ಲಿ ವೀರನು ಬಿಲ್ಲು, ಚಾಕು ಹಿಡಿದಿದ್ದಾನೆ. ಕೆಳಭಾಗದ ಬಲ ಮೂಲೆಯಲ್ಲಿ ೨ ದನಗಳು ಹಿಂತಿರುಗುತ್ತಿದ್ದು, ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವಂತೆ, ನೊಳಂಬರ ಕಾಲದ ಕ್ರಿ.ಶ.೯೦೦ ಕಾಲದ ಕುಂಬಳದಹಳ್ಳಿ ಶಾಸನದಲ್ಲಿ ನೊಳಂಬ ಅರಸನ ಪೃಥ್ವೀ ರಾಜ್ಯಂಗೆಯುತ್ತಿರಲು ಕೊಯ್ಯಿಯ ಅಜಯಪಾಲ್ಲ ಮತ್ತು ಗೊರವಕೊಳಸೂಡಿಪ ದ್ವಾರದ ಬಳಿ ಅವರು ಮುಂದಾಗಿ ಬಂದಾಗ ತದರ ಬಂಡಿ ಅಣಿಲೆಯರ ಮಗ ನೆಲ್ಮಲ್ಲ ಅಣ್ಣಮ್ಮರ್ನ ಅಳಿಯ ತೊರುವನು ತುರುವನ್ನು ರಕ್ಷಿಸಿ ಸ್ವರ್ಗಸ್ಥಯಾದ[೩೮] ಶಿಲ್ಪದಲ್ಲಿ **(ಚಿತ್ರ ಸಂಖ್ಯೆ–೩೩)** ಆಲೀಢ ಭಂಗಿಯಲ್ಲಿ ವೀರನು ನಿಂತ್ತಿರುವ ವೀರನು ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಮೇಲೆತ್ತಿದ್ದಾನೆ. ೧೨ ಬಾಣಗಳು ದೇಹವನ್ನು ಹೊಕ್ಕಿದ್ದರೂ ಸಹ ಲೆಕ್ಕಿಸದೆ ಹೋರಾಟವನ್ನು ಮುಂದುವರೆಸಿದ್ದಾನೆ. ತಲೆಯ ಜೂಟ್ಟನ್ನು ಬಲಕ್ಕೆ ಗಂಟು ಹಾಕಿ ಬಟ್ಟೆಯನ್ನು ಕಟ್ಟಲಾಗಿದೆ. ತೋಳ್ಬಂದಿ, ಕೈಕಡಗ, ಕಾಲ್ಕಡಗ, ಕೊರಳಸರ ಹಾಗೂ ಯುದ್ಧವಸ್ತ್ರವನ್ನು ಧರಿಸಿದ್ದಾನೆ. ಸೊಂಟಕ್ಕೆ ವಸ್ತ್ರಯೊಂದನ್ನು ಬಿಗಿದಿಕೊಂಡಿದ್ದು, ಅದರ ಒಂದು ತುದಿ ಎರಡು ಕಾಲುಗಳ ನಡುವೆ ತೊಯ್ದಾಡುತ್ತಿದೆ. ತುರುಗಳನ್ನು ರಕ್ಷಿಸಿದ್ದಾನೆ ಎಂಬುದಕ್ಕೆ ವೀರನ ಎಡಭಾಗದಲ್ಲಿ ೩ ತುರುಗಳನ್ನು ಕಾಣಬಹುದು. ಹಾಗೇಯೇ ವೀರನ

---

[೩೮] ಎ.ಕ-೯, ಹೊ.ತಾ.೧೧೦, ಕ್ರಿ.ಶ.೯೦೦, ಕುಂಬಳದಹಳ್ಳಿ.

ಬಲಕ್ಕೆ ಪೂರ್ಣಕುಂಭ ಮತ್ತು ಅದರ ಪಕ್ಕದಲ್ಲಿ ದೀಪಸ್ತಂಭವಿದೆ. ಇದರ ಮೇಲ್ಭಾಗದಲ್ಲಿ ವೀರನ ಸ್ವಾರ್ಗಸ್ತವಿದೆ. ಇನ್ನು ಉಳಿದ ಸ್ಥಳದಲ್ಲಿ ಶಾಸನವನ್ನು ಖಂಡರಿಸಲಾಗಿದೆ.

ರಾಷ್ಟ್ರಕೂಟರ ಅವಧಿಯಲ್ಲಿ ತುಱುಗೊಳ್ ಶಾಸನ ಶಿಲ್ಪವು ಒಂದು ಹೆಜ್ಜೆ ಮುಂದುವರಿಯುವುದರ ಮೂಲಕ ಶಾಸನ ಶಿಲ್ಪದ ಬೆಳವಣಿಗೆಗೆ ಚಾಲನೆ ನೀಡಿತು. ಸ್ಮಾರಕ ಶಿಲೆಗಳ ಶಿಲ್ಪಗಳಂತೂ ರಾಷ್ಟ್ರಕೂಟರ ಕಾಲದಲ್ಲಿ ಆಶ್ಚರ್ಯಕರ ಬೆಳವಣಿಗೆಯನ್ನು ಪಡೆಯಿತು. ಬಹುತೇಕ ವೀರಗಲ್ಲುಗಳಲ್ಲಿ ವೀರನು ಸ್ವರ್ಗಕ್ಕೆ ಹೋಗುವಾಗ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಕೆಲವು ಕಡೆ ಮೋಡಗಳ ನಡುವೆ ಹಾರುತ್ತಿರುವಂತೆಯೂ ಚಿತ್ರಿಸಲಾಗಿದೆ. ದೇವನಹಳ್ಳಿ ತಾಲ್ಲೂಕಿನ ಅರದೇಶನಹಳ್ಳಿಯಲ್ಲಿ ಸುಮಾರು ೧೧ x ೭ ಅಡಿಯಷ್ಟು ವಿಸ್ತಾರವಾಗಿರುವ ಶಾಸನೋಕ್ತ ತುರುಗೋಳ್ ವೀರಗಲ್ಲುವಿನಲ್ಲಿ[೩೯] ಅಕಾಲವರ್ಷ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕ ಪೃಥ್ವೀರಾಜ್ಯಂಗೆಯುತ್ತಿರಲು ಅವನ ಪ್ರಿಯನಾದ ಗಂಗವಾಸನ ಮಗನಾದ ಗೋವಿಂದನು ಸಳ್ಳಿಮೂನೂರು ಕುನುಂಗಿಲ್ ಅಯ್ನೂರುನ್ನು ಪ್ರತಿಪಾಲಿಸುತ್ತಿರೆ ನಂದಿಗುಂದದ ಪಸುವೊನ್ನಮೊಳ್......ಗಾಣಿ ಗಾವುಂಡ ಎಲ್ಲಾ ನಾಡಿನೋಳಗೆ ಬರಲು ನಂದಿ ದೇವಸ್ಥಾನದ ಮುಮೆನಾಯಗನು ಮುಂದೆ ಬಂದು ಹೆದರದೆ ತುರುಗಳನ್ನು ರಕ್ಷಿಸಿ ತಾನು ಸತ್ತ ವಿವರದ ಈ ವೀರಗಲ್ಲನ್ನು ಅದೇ ಗ್ರಾಮದ ಮಧ್ಯದಲ್ಲಿ ಕರ್ನಾಟಕ ಪುರಾತತ್ವ ಇಲಾಖೆಯವರು ಮತ್ತೊಂದು ವೀರಗಲ್ಲಾದ ರಾಷ್ಟ್ರಕೂಟರ ಅಕಾಲವರ್ಷನ ಕ್ರಿ.ಶ.೯೦೦ರ ಅರದೇಶನಹಳ್ಳಿಯ ಶಾಸನದಲ್ಲಿ[೪೦] ಅಕಾಲವರುಸನ ಕಡುಕಲ್ಲು ಪುಲಿಮಂಗಲ ತೆರಿಗೆದಾರ ಪುನ್ನಾಡನು ಆಳುತ್ತಿರಲು ಉಲ್ಲೇಖವಿರುವ ಶಾಸನವನ್ನು ಹಾಗೂ ಒಂದು ಚಿಕ್ಕ ಶಾಸನದೊಂದಿಗೆ ಸಂರಕ್ಷಿಸಿದ್ದಾರೆ. ಇಲ್ಲಿ **(ಚಿತ್ರ ಸಂಖ್ಯೆ– ೩.೨)** ವೀರನು ತಲೆಯ ಮೇಲೆ ದಪ್ಪದಾದ ಜಟಾಜೂಟವನ್ನು ಹಾಕಿಕೊಂಡಿದ್ದು ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಬಿಲ್ಲು ಹಿಡಿದು ಆಲೀಢ ಭಂಗಿಯಲ್ಲಿ ನಿಂತಿದ್ದಾನೆ. ಕತ್ತಿಯನ್ನು ಇಡಲು ಇರುವ ಒರೆಯು ಸೊಂಟದಲ್ಲಿದೆ. ತಲೆ, ಕತ್ತು, ಭುಜ, ಸೊಂಟ ಹೀಗೆ ವೀರನ ದೇಹದ ಹಲವು ಭಾಗಗಳಿಗೆ ಶತ್ರುಗಳು ಬಿಟ್ಟಿರುವ ಬಾಣಗಳು ನೆಟ್ಟಿವೆ. ಪಶುಗಳನ್ನು ರಕ್ಷಿಸುವುದನ್ನು ತೋರಿಸಲು ತಮ್ಮ ಸ್ವಸ್ಥಳಗಳಿಗೆ ಓಡುತ್ತಿರುವ ಎಮ್ಮೆಯ ಚಿತ್ರಗಳನ್ನು ಬಿಡಿಸಲಾಗಿದೆ. ವೀರನು ಪಶುಗಳನ್ನು ರಕ್ಷಿಸಿ ಮರಣವನ್ನಪ್ಪಿದ್ದರಿಂದ ಸ್ವರ್ಗದಲ್ಲಿ ಉಯ್ಯಾಲೆಯಲ್ಲಿ ಕುಳಿತುಕೊಂಡು ಅಪ್ಸರೆಯರ ಚಾಮರ ಸೇವೆಯನ್ನು ಅನುಭವಿಸುತ್ತಿರುವಂತೆ ಚಿತ್ರಿಸಲಾಗಿದೆ. ಇಡೀ ಕಲ್ಲಿನ ತುಂಬ ವೀರನೊಬ್ಬನನ್ನೇ ಏಕಾಂಗಿಯಾಗಿ ಪ್ರಮುಖವಾಗಿ ಚಿತ್ರಿಸಲಾಗಿದೆ. ವೀರನು ಎಡಗೈಯಲ್ಲಿ ಬಿಲ್ಲನ್ನು ಬಲಗೈಯಲ್ಲಿ ಖಡ್ಗವನ್ನು ಹಿಡಿದು

[೩೯] ಎ.ಕ-೯, ದೇ.ತಾ.೪೨, ಕ್ರಿ.ಶ.೯೦೦, ಅರದೇಶನಹಳ್ಳಿ.
[೪೦] ಎ.ಕ-೯, ದೇ.ತಾ.೪೩, ಕ್ರಿ.ಶ.೯೦೦, ಅರದೇಶನಹಳ್ಳಿ.

ಆಲೀಢಾಸನ ಭಂಗಿಯಲ್ಲಿ ನಿಂತಿದ್ದು, ತಲೆಗೂದಲನ್ನು ಸಿಬ್ಬರ ಹಾಗೆ ಮುಡಿ ಕಟ್ಟಿದ್ದಾನೆ. ಸೊಂಟದಲ್ಲಿ ಖಡ್ಗ ಸಿಕ್ಕಿಸುವ ಕವಚ, ಎಡಭುಜ ಕತ್ತು, ತಲೆ ಸೊಂಟದ ಬಳಿ ಶತ್ರುಗಳ ಕಡೆಯಿಂದ ನುಗ್ಗಿ ಬಂದು ಬಾಣಗಳು ನಾಟಿದ್ದು, ವೀರನ ಹಿಂದೆ ಆರು ತುರುಗಳು ಹಟ್ಟಿಗೆ ಹಿಂತಿರುಗುತ್ತಿರುವಂತೆ ಹಾಗೂ ಮೇಲ್ಭಾಗದಲ್ಲಿ ವೀರನು ಅ[ಸರರೆಯೊಂದಿಗೆ ಸ್ವರ್ಗಕ್ಕೆ ಹೋಗುತ್ತಿರುವಂತೆ ಕುಳಿತಿದ್ದು, ಅಪ್ಸರೆಯರು ಒಂದು ಕೈಯಲ್ಲಿ ಹಿಡಿದ ಚಾಮರದಿಂದ ವೀರನ ಸೇವೆ ಮಾಡುತ್ತಿರುವಂತೆ ಕಲ್ಲಿನ ಉಳಿದ ಮೇಲ್ಭಾಗದಲ್ಲೆಲ್ಲಾ ಶಾಸನವನ್ನು ಕೆರೆಯಲಾಗಿದೆ.

ಕ್ರಿ.ಶ.೭೨೦ರ ಕಾಲದ ಶಾಸನದಲ್ಲಿ ಗಂಗ ಮಹಾ ನಾಇಗರ ಮಗನು ಬದೆಯನ್ನಿ ರಟ್ಟ ಹೋರಾಡಿ ತುರುಗಳನ್ನು ಕಾಪಾಡಿ ಸುರಲೋಕದ ಭೋಗಿ ಅದಾನು[41]. ಕ್ರಿ.ಶ.೭೫೦ರಲ್ಲಿ ಮಳ್ದಯ್ಯ[42], ಶಿವಮಾರನ ಕಾಲದ ಭಕ್ತರಳ್ಳಿಯ ವೀರಗಲ್ಲುವಿನಲ್ಲಿ ಕಾಡುದೆಟ್ಟಿನ ಪೆಂವರಕೆ ಕನ್ದಳ್ಳಿಯ ರಾಜಿಗ ದೊಲ್ತಿ..ಚ್ಚನ್ ಕವಿತೊರನ್ ಪಸುವಳಿ ಧನುವಳಿ[43], ಶ್ರೀ ಹೆಮ್ಮೆಯನ ಮಗ ಸಾನ್ತಂತೊರುಗೋಳೊ ಕಾದಿ[44],

ನೊಳಂಬ ರಾಜಮನೆತನದ ಮಇನ್ದ ನೊಳಂಬ ರಾಜನ ಕ್ರಿ.ಶ.೮೭೦ರ ಕಾಲದ ಶಾಸನದಲ್ಲಿ ನೆಲ್ಲಿಗೆರೆಯ ತುರುಗೊಣ್ಡಲ್ಲಿ ತುರುವನ್ ಇಕ್ಕಿ ಸಿರೆಸಗರನ್ನ.ಯ ಪೊಸಮೆಣ್ಡಿ ಸಗಮೇರಿದನ್ ಮಹಾಜನ ಕೊಳ ಕಳನಿ ಕೊಟ್ಟ ಅಳೆವೊಪತಕನ್ ಬೆಸಗೆಯ್ದೊನ್ ಪ್ರಯೋಳಮನ್[45], ಕ್ರಿ.ಶ.೯೦೦ ಕಾಲದ ಅಯ್ಯಪದೇವನ ಶಾಸನದಲ್ಲಿ ತುರುವನ್ ರಕ್ಷಿಸಿ ಸತ್ತಿದಕ್ಕೆ ದುಗ್ಗಪ ಈ ಕಲ್ಲನು ಮಾಡಿಸಿದನು[46]. ಚೋಳರ ಕಾಲದಲ್ಲಿ ಗೋಗ್ರಹಣ ಯುದ್ಧವನ್ನು ಎದುರಿಸಿ ವೀರಸ್ವರ್ಗವೇರಿದ ಉಲ್ಲೇಖವುಳ್ಳ ಏಕೈಕ ಸ್ತ್ರೀ ಲಕ್ಷ್ಮಮ್ಮಗಾವುಂಡಿಯ ಬಗ್ಗೆ ಕ್ರಿ.ಶ.೧೦೪೧ರ ಹೊಸಕೋಟೆ ತಾಲ್ಲೂಕಿನ ಸಿದ್ಧನಹಳ್ಳಿಯ ವೀರಕಲ್ಲು ಹೇಳುತ್ತದೆ[47].

ವೀರ ವಲ್ಲಾಳ ದೇವರು ರಾಜ್ಯಂಗೆಯ್ಯುತ್ತಿರಲು ತುರುವರ್ ಅಮ್ಮೈಜಿಯರನ ಮಗ ತನಪ್ಪನ ಸ್ನೇಹಿತನಾದ ಅಕ್ಕಸಾಲಿಗ ಮಿರೋಜನ ಮಗ ವರದನು ಮುರಾರಿದೇವರ ಕುಮಾರ ಇರಮರಸರು ತಾಮರೈಕಿರೈಯಲ್ಲಿ (ತಾವರೆಕೆರೆ) ಹಸುಗಳನ್ನು ಹಿಡಿದುಕೊಂಡು ಹೋಗುತ್ತಿರಲು ನಲ್ಲೂರಹಳ್ಳಿಯ ಕೆರೆ

[41] ಎ.ಕ-೯, ಹೊ.ತಾ.೮೪, ಕ್ರಿ.ಶ.೭೨೦, ಚಿಕ್ಕನಹಳ್ಳಿ.
[42] ಎ.ಕ-೯, ಹೊ.ತಾ.೮೫, ಕ್ರಿ.ಶ.೭೫೦, ಚಿಕ್ಕನಹಳ್ಳಿ.
[43] ಎ.ಕ.೯, ಅನುಬಂಧ, ಹೊ.ತಾ.೧೬೮, ಭಕ್ತರಹಳ್ಳಿ.
[44] ಎ.ಕ.೯, ಅನುಬಂಧ, ಹೊ.ತಾ.೧೮೯, ಬಿಸನಹಳ್ಳಿ.
[45] ಎ.ಕ-೯, ಹೊ.ತಾ.೯, ಕ್ರಿ.ಶ.೮೭೦, ಜೋಡಿದಳಸಿಗೆರೆ.
[46] ಎ.ಕ-೯, ಹೊ.ತಾ.೧೪, ಕ್ರಿ.ಶ.೯೦೦, ಸಿದ್ಧನಹಳ್ಳಿ.
[47] ಎ.ಕ-೯, ಹೊ.ತಾ.೧೧, ಕ್ರಿ.ಶ.೧೦೪೧, ಸಿದ್ಧನಹಳ್ಳಿ.

ಕೆಳಗೆ ಹಸುಗಳನ್ನು ರಕ್ಷಿಸಿ ಸತ್ತಾನು, ತನಪ್ಪನು ಈ ಕಲ್ಲಿನ ಕೆತ್ತನೆಯನ್ನು ಮಾಡಿದನು[೪೮]. ಇದೇ ವಿಷಯದ ಮತ್ತೊಂದು ಶಾಸನ ಇದರ ಪಕ್ಕದಲ್ಲೇ ಇದೆ[೪೯]. ನೆಲಮಂಗಲದ ನಿಜಗಲ್ ಕೆಂಪೋಹಳ್ಳಿಯ ತುರುಗೋಳ್ ವೀರಗಲ್ಲಿನಲ್ಲಿ ಒಂದೇ ಹಂತವಿದ್ದು, ವೀರ ಮತ್ತು ಅವನ ಸತಿಯು ನಿಂತಿದ್ದರೆ ಅವನ ಹಿಂದೆ ತುರುಗಳನ್ನು ಬಿಡಿಸಲಾಗಿದೆ.

## ೩. ಬೇಟೆ ವೀರಗಲ್ಲು

ಮಾನವರಿಗೆ ಮಾತ್ರ ಸ್ಮಾರಕಗಳಾಗಿ ವೀರಗಲ್ಲುಗಳನ್ನು ನಿರ್ಮಿಸುವುದಲ್ಲದೆ ಕೆಲವೊಮ್ಮೆ ಪ್ರಾಣಿಗಳ ಸ್ಮಾರಕಗಳಾಗಿ ವೀರಗಲ್ಲು ಹಾಕಿಸುತ್ತಿದ್ದ ನಿದರ್ಶನಗಳವೆ. ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ ಮೇಲಾಗಾಣಿ ಗ್ರಾಮದ ವೀರಗಲ್ಲು ಲೋಕ ಮತ್ತು ಧಳಗ ಎಂಬ ೨ ನಾಯಿಗಳ ಸ್ಮಾರಕವಾಗಿದೆ. ಲೋಕವು ಎಪ್ಪತ್ತೈದು ಹಂದಿಗಳನ್ನು, ಧಳಗವು ಇಪ್ಪಾತ್ತಾರು ಹಂದಿಗಳನ್ನು ಕೊಂದಿತ್ತೆಂದು, ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಅತಕೂರು ಶಾಸನದಲ್ಲಿ ಕಾಳಿ ಎಂಬ ನಾಯಿಯು ಕಾಡು ಹಂದಿಯೊಡನೆ ಸೆಣಸಿ ಅದನ್ನು ಕೊಂದು ತಾನು ಮಣಿದಾಗ ಕಾಳಿ ಒಡೆಯನು ಅದರ ನೆನಪಿಗಾಗಿ ವೀರಗಲ್ಲನ್ನು ಹಾಕಿಸಲಾಗಿದೆ. ಯಲಹಂಕದಲ್ಲಿ ನಾಯಿಯು ಹಂದಿಯೊಡನೆ ಹೋರಾಡಿ ಮರಣವನ್ನಪ್ಪಿದ್ದರ ಸಲುವಾಗಿ ಅದರ ಮಾಲೀಕ ಒಂದು ವೀರಗಲ್ಲನ್ನು ಹಾಕಿಸಿದ್ದಾನೆ. (ಮೇಲಾಗಾಣಿ ವೀರಗಲ್ಲನ್ನು ರಸ್ತೆ ಆಗಲ ಮಾಡುವಾಗ, ಯಲಹಂಕದಲ್ಲಿನ ವೀರಗಲ್ಲನ್ನು ಕೆರೆಯನ್ನು ಜೀರ್ಣೋದ್ಧಾರ ಮಾಡುವಾಗ ಕಣ್ಮರೆ ಮಾಡಲಾಗಿದೆ.) ಬೇಟೆಯಲ್ಲಿ ಮಾನವನಿಗೆ ಬಲಗೈಯಾಗಿ ನೆರವು ನೀಡುತ್ತಿದ್ದು ನಾಯಿ ಎಂಬ ಪ್ರಾಣಿಯು ಮನೆಯ ಕಾವಲು ಹಾಗೂ ಬೇಟೆಗೆ ನೆರವಾಗಲು ಸಹಾಯ ಪ್ರಾಣಿಯಾದ್ದರಿಂದ ನಾಯಿಗಳನ್ನು ಮಗುವಂತೆ, ಸ್ನೇಹಿತನಂತೆ, ಆಳನಂತೆ ಪ್ರೀತಿಯಿಂದ ಸಾಕುತ್ತಿದ್ದರು.

ಬೇಟೆಯು ಪ್ರಾಚೀನ ಕಾಲದಲ್ಲಿ ಒಂದು ಮನೋರಂಜನೆಯ ಕ್ರೀಡೆಯಾಗಿದ್ದರ ಜೊತೆಗೆ ಕಾಡು ಪ್ರಾಣಿಗಳ ಹಾವಳಿಯಿಂದ ಬೆಳೆ ಹಾಗೂ ಪ್ರಾಣ ಹಾನಿಯನ್ನು ತಪ್ಪಿಸುವ ಸಲುವಾಗಿ ಕೈಗೊಳ್ಳಲಾಗುತ್ತಿತ್ತು. ಪ್ರಾಣಿಗಳೊಂದಿಗೆ ಹೋರಾಡಲು ೨ ಮುಖ್ಯ ಕಾರಣಗಳವೆ. ಬೇಟೆಯಾಡುವುದು, ಹೋರಾಡುವುದು ಶೌರ್ಯ ಪ್ರದರ್ಶನಕ್ಕೆ ಹಿಡಿದ ಕನ್ನಡಿಯಾಗಿತ್ತು.

ಆನೆ, ಹಂದಿ, ಹುಲಿ, ಜಿಂಕೆ ಮುಂತಾದ ಪ್ರಾಣಿಗಳನ್ನು ಅರಸು ಮನೆತನದವರು ಮೋಜಿಗಾಗಿ ವಿಹಾರಾರ್ಥವಾಗಿ ನಿಗಧಿತ ಸ್ಥಳದಲ್ಲಿ ನಿಗದಿತ ಕಾಲದಲ್ಲಿ ಬೇಟೆಯನ್ನು ಆಡುವುದಕ್ಕೆ ಅರಸು

[೪೮] ಎ.ಕ-೯, ಹೊ.ತಾ.೯೮, ಕ್ರಿ.ಶ.೧೩೩೭, ಮುಗಬಾಳ.
[೪೯] ಎ.ಕ-೯, ಹೊ.ತಾ.೯೮, ಕ್ರಿ.ಶ.೧೩೩೭, ಮುಗಬಾಳ.

ಮನೆತನದವರು ತಮಗೆ ಬೇಟೆಯಾಡುವುದರಲ್ಲಿ ನೈಪುಣ್ಯತೆಯಿದೆ ಎಂಬುದು ಹೆಮ್ಮೆಯ ವಿಷಯವಾಗಿತ್ತು.

ಜೀವನ ನಿರ್ವಹಣೆ, ಸ್ವರಕ್ಷಣೆಯ ಸಲುವಾಗಿ, ಆಹಾರಕ್ಕಾಗಿ ಬೇಟೆಯಾಡುತಿದ್ದರು. ದುಷ್ಟ ಪ್ರಾಣಿಯು ಗ್ರಾಮದೊಳಕ್ಕೆ ನುಗ್ಗಿ ಬೆಳೆಗಳನ್ನು, ಜನರಿಗೆ ತೊಂದರೆ ಕೊಡುತಿದ್ದ ಕಾಡು ಪ್ರಾಣಿಗಳು ಯಾವುದೇ ಮುನ್ಸೂಚನೆ ಇಲ್ಲದೆ ದಾಳಿ ಮಾಡುತ್ತಿದ್ದುದ್ದರಿಂದ ಗ್ರಾಮಸ್ಥರೆ ಹೆಚ್ಚಿನದಾಗಿ ಅವುಗಳ ಕಾಟವನ್ನು ತಾಳಲಾರದೆಯೂ ಅದರೊಂದಿಗೆ ಹೋರಾಡಿ ಕೊಲ್ಲುತ್ತಿದ್ದಾಗ ಮಡಿದವರು / ಜಯಗಳಿಸಿದವನು ದುಷ್ಟ ಪ್ರಾಣಿಯಿಂದ ತಮ್ಮ ಜಾನುವಾರುಗಳನ್ನು ರಕ್ಷಿಸಿದವರೆಂದು ಜನತೆ ವೀರ ಎಂದು ಪರಿಗಣಿಸಿ ಗೌರವದ ಸ್ಮಾರಕವಾಗಿ ವೀರರನ್ನು ಸ್ಮರಿಸಲು ಅವರು ಯಾವ ಪ್ರಾಣಿಯೊಂದಿಗೆ ಹೋರಾಡಿ ಪ್ರಾಣಬಿಟ್ಟರೊ ಅಂತಹ ಸನ್ನಿವೇಶವನ್ನು ಕಲ್ಲಿನ ಮೇಲೆ ಮೂಡಿಸಿ ಅವರ ಶೌರ್ಯವನ್ನು ಪುರಸ್ಕರಿಸುತ್ತಿದ್ದರು. ವೀರರು ಕ್ರೂರ ಮೃಗಗಳನ್ನು ಬೇಟೆಯಾಡಿ ಸಾಯಿಸುವುದರಲ್ಲಿ ಅವರ ಸಾಕು ನಾಯಿಗಳು ಸಹ ಅವರಿಗೆ ನೆರವಾಗುತ್ತಿದ್ದವು. ನಾಯಿಯ ಸಹಾಯದಿಂದ ಆ ಪ್ರಾಣಿಯ ಹೆಜ್ಜೆಯ ಗುರುತನ್ನು ಅನುಸರಿಸಿ, ಬೇಟೆಯಾಡುವ ಪ್ರಾಣಿಯನ್ನು ಗುರ್ತಿಸಿ ಅವುಗಳ ಮೇಲೆ ನಾಯಿಗಳನ್ನು ಬಿಟ್ಟು ಹೋರಾಡುವಂತೆ ಮಾಡುವುದು. ಕೆಲವೊಮ್ಮೆ ಈ ಹೋರಾಟದಲ್ಲಿ ಅವುಗಳು ಸಹ ಪ್ರಾಣಬಿಡುತ್ತಿದ್ದವು. ಇವುಗಳನ್ನು ಸ್ಮರಿಸುವ ಸಲುವಾಗಿ ತಮ್ಮ ನೆಚ್ಚಿನ ಸಾಕು ಪ್ರಾಣಿಗಳಿಗೂ ಸಹ ವೀರಗಲ್ಲನ್ನು ಹಾಕಿಸಿರುವ ಹಂದಿಬೇಟೆ, ಆನೆಬೇಟೆ, ಜಿಂಕೆಬೇಟೆ, ಹುಲಿಬೇಟೆ ಮುಂತಾದ ನಿದರ್ಶನಗಳು ಕಣ್ಣು ಮುಂದೆಯಿವೆ. ಬೇಟೆಯ ವಿವರಗಳನ್ನು ತಿಳಿಯಲು ಇರುವ ಮೂಲ ಸಾಮಗ್ರಿಗಳೆಂದರೆ ವೀರಗಲ್ಲುಗಳು ಮಾತ್ರ.

ಗಂಗರ ಕಾಲದಲ್ಲಿ ವೀರಗಲ್ಲಿನಲ್ಲಿ ವೀರನು ಮಾತ್ರ ಇರೊ ಒಂದು ನಿಯಮವನ್ನು ಕೇವಲ ವೀರರ ಸ್ಮಾರಕ ಶಿಲೆಗಳಲ್ಲಿ ಮಾತ್ರವಲ್ಲ ನಾಯಿಗಳಿಗೆ ಹಾಕಿರುವ ಸ್ಮಾರಕ ಶಿಲೆಗಳಲ್ಲಿಯೂ ಅನುಸರಿಸಲಾಗಿದೆ. ಇದೇ ಅವಧಿಯಲ್ಲಿ ದೊರೆಯುವ ಇತರ ಬೇಟೆಯ ವೀರಗಲ್ಲುಗಳ ಶಿಲ್ಪದಲ್ಲಿ, ವೀರನು ಹೋರಾಡಿ ಮಡಿದ ಪ್ರಾಣಿಯ ಶಿಲ್ಪವನ್ನು ವೀರಗಲ್ಲಿನ ಎಡಭಾಗಕ್ಕೂ ವೀರನನ್ನು ಬಲಭಾಗಕ್ಕೂ ಬಿಡಿಸಲಾಗಿದೆ.

**ಹಂದಿಬೇಟೆ ವೀರಗಲ್ಲುಗಳು**

ಹಂದಿಯು ರೈತರ ಪರಮ ಶತೃವಾಗಿದ್ದು, ರಾತ್ರಿ ಸಮಯದಲ್ಲಿ ಹೊಲಗದ್ದೆಗಳಿಗೆ ನುಗ್ಗಿ ಬೆಳೆಯನ್ನು ತಿಂದು ಹಾಳು ಮಾಡುತ್ತದೆ. ರೈತರ ಹಿತ ಕಾಪಾಡಲು ಮತ್ತು ಕೆಲವರು ಆಹಾರಕ್ಕಾಗಿ ಹಂದಿಯನ್ನು ಬೇಟೆಯಾಡುತ್ತಿದ್ದರು. ಸಾಮಾನ್ಯವಾಗಿ ಹಂದಿ ಬೇಟೆಯಾಡಲು ನಾಯಿಗಳನ್ನು

ಜೊತೆಯಲ್ಲಿ ಕರೆದೊಯ್ಯುತ್ತಿದ್ದರೆನಿಸುತ್ತದೆ. ಹಂದಿ ಬೇಟೆ ಎಲ್ಲಾ ವೀರಗಲ್ಲುಗಳಲ್ಲಿ ನಾಯಿಯು ಸಕ್ರಿಯವಾಗಿ ಭಾಗವಹಿಸಿರುತ್ತದೆ. ಹಂದಿಬೇಟೆಯಲ್ಲಿ ಭರ್ಜಿ ಅಥವಾ ಈಟಿಯನ್ನು ಉಪಯೋಗಿಸಲಾಗುತ್ತಿತ್ತು.

ಹಂದಿ ಬೇಟೆಯನ್ನು ಚಿತ್ರಿಸಿರುವ ವೀರಗಲ್ಲುಗಳನ್ನು ಎರಡು ವಿಭಾಗಗಳಲ್ಲಿ ಗಮನಿಸಬಹುದು. ೧. ಹಂದಿ ಮತ್ತು ನಾಯಿಗಳ ಹೋರಾಟವನ್ನು ನಿರೂಪಿಸುವ ವೀರಗಲ್ಲುಗಳು ಮತ್ತು ೨. ವೀರನು ಹಂದಿಯೊಡನೆ ಮಾಡುತ್ತಿರುವ ಹೋರಾಟವನ್ನು ನಿರೂಪಿಸುವ ವೀರಗಲ್ಲುಗಳು.

ನೆಲಮಂಗಲ ತಾಲ್ಲೂಕಿನ ಮಣ್ಣೆಯಲ್ಲಿ ಒಂದು ಹಂದಿ ಬೇಟೆಯ ವೀರಗಲ್ಲು ಊರಿನಿಂದ ಪಶ್ಚಿಮಕ್ಕೆ ಒಂದೂವರೆ ಕಿ.ಮೀ ದೂರದಲ್ಲಿ ಪಾತಯ್ಯನವರ ಹೊಲದಲ್ಲಿ **(ಚಿತ್ರ ಸಂಖ್ಯೆ–೬೮)** ಬಿದ್ದಿದೆ. ನಾನು ಇಲ್ಲಿಗೆ ಕ್ಷೇತ್ರ ಕಾರ್ಯಕ್ಕೆಂದು ೨೦೧೬ ಜುಲೈ ತಿಂಗಳನಲ್ಲಿ ಹೋಗಿದ್ದಾಗ ಕೆಲವೆ ದಿನಗಳ ಹಿಂದೆ ಈ ವೀರಗಲ್ಲನ್ನು ನಿಧಿಗಳ್ಳರು ಕಿತ್ತು ಹಾಕಿ ಗುಂಡಿ ತೋಡಿ ಬಿಟ್ಟು ಹೋಗಿದ್ದರು. ನಿಧಿ ಆಸೆಗಾಗಿ ಇಂತಹ ಸ್ಮಾರಕ ಶಿಲೆಗಳನ್ನು ಕಿತ್ತು ಹಾಕಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಬಿಲ್ಲಿನಕೋಟೆ, ಚಿಕ್ಕಮಧುರೆ, ಅರಳಸಂದ್ರ, ಸಾತನೂರು, ಗಂಗವಾರ, ಅರದೇಶನಹಳ್ಳಿ, ಲಾಲ್‌ಬಾಗ್ ದಾಸರಹಳ್ಳಿ, ಕಾಮರಸನಹಳ್ಳಿ, ಹಿಂಡಿಗನಾಳ, ಗೊಂವಿದಪುರ ಮುಂತಾದ ಕಡೆ ಕಂಡುಬಂದಿದೆ. ಮಣ್ಣೆಯಲ್ಲಿನ ಈ ಬೇಟೆ ವೀರಗಲ್ಲು ಸುಮಾರು ಏಳು ಅಡಿಯಷ್ಟು ಎತ್ತರವಾಗಿದೆ. ಮೇಲ್ಭಾಗದಲ್ಲಿ ಸುಮಾರು ಎರಡು ಅಡಿಯಷ್ಟು ಜಾಗದಲ್ಲಿ ಶಿಲ್ಪವಿದ್ದು ಉಳಿದ ಭಾಗವು ಖಾಲಿಯಾಗಿದೆ. ಉಳಿದ ಭಾಗದಲ್ಲಿ ಶಾಸನವನ್ನು ಕಂಡರಿಸಲು ಬಿಟ್ಟಿದ್ದಿರಬೇಕು. ಪ್ರಸ್ತುತ ಈ ಜಾಗದಲ್ಲಿ ಶಾಸನ ಕಂಡುಬರುವುದಿಲ್ಲ. ಇಲ್ಲಿ ಹಂದಿ ಬೇಟೆಯಾಡುತ್ತಿರುವ ದೃಶ್ಯಗಳಿವೆ. ಕುದುರೆಯ ಮೇಲೆ ವೀರನು ಇಲ್ಲಿ ಸವಾರನಾಗಿದ್ದು ಬಹುಶಃ ಇವನು ರಾಜ ಅಥವಾ ರಾಜಕುಮಾರನಿರಬಹುದು. ಹಿಂಭಾಗದಲ್ಲಿ ಇಬ್ಬರು ಸೈನಿಕರಿದ್ದಾರೆ. ವೀರನು ಬಲಗೈಯಲ್ಲಿ ಕುದುರೆಯ ಲಗಾಮನ್ನು ಎಡಗೈಯಲ್ಲಿ ಹಗ್ಗ ಅಥವಾ ಬಲೆಯನ್ನು ಎಸೆಯುತ್ತಿರುವಂತಿದೆ. ಮುಂಭಾಗದಲ್ಲಿ ಐದು ಬೇಟೆ ನಾಯಿಗಳು ಸಹ ಇದ್ದು ಅವುಗಳು ಎರಡು ಹಂದಿಗಳ ಮೇಲೆ ದಾಳಿ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ಶಿಲ್ಪಗಳು ಬಹಳಷ್ಟು ಸವೆದಿರುವಂತಿದೆ.

ಹೊಸಕೋಟೆ ತಾಲ್ಲೂಕಿನ ನೆಲವಾಗಿಲ ವೀರನು ಹಂದಿಯನ್ನು ಈಟಿಯಿಂದ ತಿವಿಯಲು ಮುನ್ನುಗ್ಗುತ್ತಿದ್ದಾನೆ. ಆ ವೇಳೆಗೆ ಎರಡು–ಮೂರು ನಾಯಿಗಳು ಹಂದಿಯ ಮೇಲೆ ಬಿದ್ದು, ಅದರ ಚರ್ಮವನ್ನು ಬಾಯಿಂದ ಕೀಳುತ್ತದೆ. ವಿಶೇಷ ಸಂದರ್ಭಗಳಲ್ಲಿ ಆರಂಭಿಸುತ್ತಾರೆ. ಈ ವೀರಗಲ್ಲಿನ ಬಗ್ಗೆ ಊರಿನ ಜನರಲ್ಲಿ ಪ್ರಚಲಿತವಿರುವ ಕಥೆ ಏನೆಂದರೆ, ಊರಿನ ಸುತ್ತಮುತ್ತಲಿನ ಬೆಳೆಗಳನ್ನು ನಾಶ

ಮಾಡುತ್ತಿದ್ದ ಕಾಡು ಹಂದಿಯನ್ನು ಬೇಟೆಯಾಡಲು ಊರಿನ ಬೇಡರ ಕುಟುಂಬಕ್ಕೆ ಸೇರಿದ ಒಬ್ಬ ವ್ಯಕ್ತಿಯು ಯುಗಾದಿಯ ಹಬ್ಬದಂದು ಹೋದನಂತೆ ಆ ದಿನವೇ ಹಂದಿಯನ್ನು ಕೊಂದು ಅದರೊಂದಿಗೆ ಹೋರಾಡುವಾಗ ಅವನು ಸತ್ತನಂತೆ. ಅಂದಿನಿಂದ ಇಂದಿನವರೆಗೂ ಬೇಡ ಜನಾಂಗದವರು ಯುಗಾದಿಯ ಹಬ್ಬವನ್ನು ಆಚರಿಸುವುದಿಲ್ಲ. ಯುಗಾದಿ ಆದ ಮೂರು ದಿನಗಳ ನಂತರ ಆ ವೀರಗಲ್ಲನ್ನು ಪೂಜೆ ಮಾಡಿ ಅನಂತರ ಯುಗಾದಿ ಹಬ್ಬವನ್ನು ಮಾಡುತ್ತಾರೆ.

ಹಡಕನಹಳ್ಳಿಯಲ್ಲಿನ ಬೇಟೆ ವೀರಗಲ್ಲುವಿನಲ್ಲಿ **(ಚಿತ್ರ ಸಂಖ್ಯೆ–೩೫)** ವೀರನು ಬಲಗೈಯನ್ನು ಹಂದಿಯ ತಲೆಯನ್ನು, ಎಡಗೈಯಲ್ಲಿನ ಈಡಿಯಿಂದ ಹಂದಿಯ ಬಾಯಿಗೆ ತಿವಿದಿದ್ದು, ಇಲ್ಲಿ ವೀರನು ಮರಣಿಸಿರಬಹುದು ಅದಕ್ಕೆ ವೀರನ ಸ್ವರ್ಗಾರೋಹಣ ಕಾಣಬಹುದು.

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊಡ್ಡಹೆಜ್ಜಾಜಿ ಎರಡು ತುಂಡಾಗಿರುವ ಹಂದಿ ಬೇಟೆಯ ವೀರಗಲ್ಲಿನಲ್ಲಿ ಒಂದು ತುಂಡು ಮಾತ್ರ ಉಳಿದ್ದಿದ್ದು, ಅದನ್ನು ಚನ್ನಕೇಶವ ದೇವಾಲಯದ ಮಳಿಗೆಗೆ ಹಾಕಲಾಗಿದೆ. ಅದರಲ್ಲಿ ಹಂದಿಯ ಹಿಂಭಾಗ ಮತ್ತು ಅದನ್ನು ನಾಯಿಯೊಂದು ಕಚ್ಚುತ್ತಿರುವ ಶಿಲ್ಪ ಮಾತ್ರವಿದೆ. ಕಟ್ಟಿಗೇನಹಳ್ಳಿಯ ಹಂದಿ ವೀರಗಲ್ಲು ಮೇಲೆ ಒಂದು ದೇವಾಲಯದ ಸ್ಥಳದಲ್ಲಿ ಸರ್ಕಾರಿ ಶಾಲೆಯನ್ನು ಕಟ್ಟಿದ್ದಾರೆ. ವೀರಗಲ್ಲನ್ನು ಭೂಮಿಯಲ್ಲಿ ಹೂತು ಹಾಕಿ ಅದರ ಮೇಲೆ ಶಾಲೆ ನಿರ್ಮಿಸಿದ್ದಾರೆ. ಕೋಡಿಹಳ್ಳಿಯಲ್ಲೂ ಸಹ ಕಲ್ಲನ್ನು ಒಡೆದು ಹಾಕಲಾಗಿದೆ. ಆರ್.ಶೇಷಶಾಸ್ತ್ರಿರವರ ಕರ್ನಾಟಕದ ವೀರಗಲ್ಲುಗಳು ಎಂಬ ಪುಸ್ತಕದಲ್ಲಿ ಉಲ್ಲೇಖವಿದೆ.

ಕಂಚಿಗನಾಳದಲ್ಲಿ ಹಂದಿಬೇಟೆಯ ನಾಯಿಯ ಸ್ಮಾರಕ ಶಿಲೆಯನ್ನು **(ಚಿತ್ರ ಸಂಖ್ಯೆ–೩೬)** ಕಾಣಬಹುದು. ಎರಡು ನಾಯಿಗಳು ಹಂದಿಯ ಮೇಲೆ ಎರಗಿದ್ದು, ಹಂದಿಯನ್ನು ಮಧ್ಯದಲ್ಲಿ ಸಿಲುಕಿಸಿ ಒಂದು ನಾಯಿ ಹಿಂದಿನಿಂದ ಹಂದಿಯ ಅಂಡನ್ನು ತನ್ನ ಬಾಯಿಂದ ಕಚ್ಚಿದರೆ, ಮುಂದೆ ಒಂದು ನಾಯಿಯು ಹಂದಿಗೆ ಮುಖ ಮುಖವಾಗಿ ನೋಡುತ್ತಿರುವುದು. ಈ ಬೇಟೆಯಲ್ಲಿ ಹಂದಿಯೊಡನೆ ಹೋರಾಡುವಾಗ ಆದ ಗಾಯಗಳಿಂದ ನಾಯಿಯು ಸತ್ತಿರಬೇಕು. ಇಲ್ಲಿ ವೀರ ಸತ್ತಿಲ್ಲ ಎಂಬುದಕ್ಕೆ ಈ ಶಿಲ್ಪ ವೀರಗಲ್ಲಿನಲ್ಲಿ ನಾಯಿ ಮತ್ತು ಹಂದಿಯ ಚಿತ್ರಣ ಮಾತ್ರ ಇದೆ. ಇದೇ ತರದ ಮತ್ತೊಂದು ನಾಯಿ ಸ್ಮಾರಕವನ್ನ ಸಾದೇನಹಳ್ಳಿಯಲ್ಲಿ **(ಚಿತ್ರ ಸಂಖ್ಯೆ–೬೭)** ಕಾಣಬಹುದು. ಇಲ್ಲಿ ನಾಯಿಯು ಹಂದಿಯ ತಲೆಯನ್ನು ಕಚ್ಚುತ್ತಿರುವ ದೃಶ್ಯ ಶಿಲ್ಪವನ್ನು ಗಮನಿಸಬಹುದು.

**ಹುಲಿಬೇಟೆ ವೀರಗಲ್ಲು**

ಬಲಶಾಲಿಯಾದ ಹುಲಿಯನ್ನು ಬೇಟೆಯಾಡಲು ಧೈರ್ಯಶಾಲಿಯಾಗಿರಬೇಕು. ರಾಜಮನೆತನದವರ ಹತ್ತಿರ ಬಲಿಷ್ಟವಾದ ಆಯುಧಗಳಿರುತ್ತದೆ. ಸಾಮಾನ್ಯ ಜನತೆಯ ಬಳಿ ಭರ್ಜಿ, ಕೊಡಲಿ, ಚಿಕ್ಕ ಆಯುಧಗಳು, ದಿನ ನಿತ್ಯದ ಬಳಕೆಯಲ್ಲಿನ ಆಯುಧಗಳಲ್ಲೆ ಆಪತ್ತು ಒದಗಿ ಬಂದಾಗ ಹೋರಾಡಬೇಕಿತ್ತು. ಕಾಡು ಹೆಚ್ಚಾಗಿದ್ದ ಪ್ರದೇಶಗಳು ಹುಲಿಗಳು ಸ್ವಾಭಾವಿಕವಾಗಿ ಇರುವುದು ಸಾಮಾನ್ಯ. ಹುಲಿಯನ್ನು ಕೊಲ್ಲುವುದರಲ್ಲಿ ಪ್ರಮುಖ ಪಾತ್ರ ವೀರನದೇ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ವೀರನಿಗೆ ಬೇಟೆಯಲ್ಲಿ ಸಹಾಯ ಮಾಡಿದ ನಾಯಿಗಳ ಪಾತ್ರವೇನೂ ಗೌಣವಾದುದಲ್ಲ. ಈ ವೀರಗಲ್ಲಿನ ಶಿಲ್ಪದಲ್ಲಿ ವೀರನ ಚಿತ್ರವಿಲ್ಲ. ವೀರನು ಮಡಿದಿದ್ದಾನೆ ಎಂಬುದರ ಸೂಚನೆಯು ಇದರ ಶಿಲ್ಪದ ಮೂಲಕವಾಗಲೀ ಶಾಸನದ ಪಾಠದ ಮೂಲಕವಾಗಲೀ ಧ್ವನಿತವಾಗಿಲ್ಲ. ಆದ್ದರಿಂದ ಬೇಟೆಯಲ್ಲಿ ಸಹಾಯಮಾಡಿದ ನಾಯಿಗಳು ಮಡಿದಿರಬೇಕು. ಆದ ಕಾರಣ ವೀರನು ತನ್ನ ಪ್ರತಿಜ್ಞೆ ನಡೆಸಿಕೊಟ್ಟದ್ದನ್ನು ಲೋಕಕ್ಕೆ ಸಾರಲು ಮತ್ತು ತನ್ನ ಪ್ರೀತಿಯ ನಾಯಿಗಳ ಪರಾಕ್ರಮವನ್ನು ಕೀರ್ತಿಸಲು ಈ ವೀರಗಲ್ಲನ್ನು ಹಾಕಿಸಿರಬೇಕು. ಈ ಶಿಲ್ಪದಲ್ಲಿ ಬಲಿಷ್ಟವೂ, ಕ್ರೂರವೂ ಆದ ಹುಲಿಯು, ಅದಕ್ಕಿಂತ ಕಡಿಮೆ ಶಕ್ತಿಯ ಆದರೂ ಚುರುಕು ಬುದ್ಧಿಯ ನಾಯಿಗಳ ಆಕ್ರಮಣ ವಿಧಾನವನ್ನು ಸಮರ್ಥವಾಗಿ ಎದುರಿಸಲಾರದೆ ಹಿಮ್ಮೆಟ್ಟುತ್ತಿರುವುದನ್ನು ಕಂಡರಿಸಿದ್ದಾನೆ.

ಅರದೇಶನಹಳ್ಳಿಯ ಹುಲಿಬೇಟೆ ವೀರಗಲ್ಲಿನಲ್ಲಿ **(ಚಿತ್ರ ಸಂಖ್ಯೆ–೩೮)** ವೀರನ ಕೈಯಲ್ಲಿ ಆಯುಧ ಎಡಗೈಯಲ್ಲಿ ಹುಲಿಯ ಕಾಲು ಹಿಡಿದು ಹೋರಾಡುತ್ತಿರುವುದು. ಕೆಳಗೆ ನಾಯಿಯು ಸತ್ತಿರಬೆಕು, ಸ್ವರ್ಗಕ್ಕೆ ಅಪ್ಸರೆಯರು ಕರೆದೊಯ್ಯುತ್ತಿರುವುದು, ಹಿಂಗಾಲಿನ ಮೇಲೆ ನಿಂತು ಮುಂಗಾಲಿನಿಂದ ಪರಚುವಂತೆ ಇದ್ದು, ಬಾಯಿ ತೆಗೆದಿದೆ. ವೀರನು ಕೈಕಡಗ, ತೋಳ್ಬಂದಿ, ಕಂಠಾಭರಣಗಳು, ಓಲೆಗಳು, ಸೊಂಟಕ್ಕೆ ಪಟ್ಟಿ, ಅದರಲ್ಲಿ ಕತ್ತಿಯನ್ನು ಸಿಕ್ಕಿಸಲಾಗಿದೆ.

ಕಿತ್ತನಲ್ಲಿಯ ಹುಲಿಬೇಟೆ ವೀರಗಲ್ಲಿನಲ್ಲಿ ಹುಲಿ ತನ್ನ ಬಲಿಷ್ಟವಾದ **(ಚಿತ್ರ ಸಂಖ್ಯೆ–೩೯)** ಹಿಂಗಾಲುಗಳ ಮೇಲೆ ನಿಂತಿದೆ. ಅಲಂಕಾರ ಭೂಷಿತನಾದ ವೀರನು ಹುಲಿಯೊಂದಿಗೆ ಚಿಕ್ಕ ಕತ್ತಿಯೊಂದಿಗೆ ಹೋರಾಡುತ್ತಿದ್ದಾನೆ. ಕಲ್ಯದಲ್ಲಿನ ಸುಮಾರು ಐದು ಅಡಿ ಎತ್ತರ, ನಾಲ್ಕು ಅಡಿ ಅಗಲದ ಮೂರು ಹಂತದಲ್ಲಿನ ಹುಲಿಬೇಟೆ ವೀರಗಲ್ಲಿನಲ್ಲಿ **(ಚಿತ್ರ ಸಂಖ್ಯೆ–೩೯/೧)** ವೀರನು ಹುಲಿಯೊಡನೆ ನೇರವಾಗಿ ಸೆಣಸಾಡುತ್ತಿದ್ದಾನೆ. ಹುಲಿ ತನ್ನ ಬಲಿಷ್ಠವಾದ ಹಿಂಗಾಲುಗಳ ಮೇಲೆ ನಿಂತಿದ್ದು, ಎಡಗಾಲಿನಿಂದ ವೀರನಿಗೆ ಮೈ ಪರಚಲು ಬಾಯ್ತೆರದು ಘರ್ಜಿಸುತ್ತದೆ. ವೀರನು ಬಲಗೈಗಳಿಂದ ಈಟಿಯನ್ನು ಹುಲಿಯ ಎದೆಗೆ ತಿವಿಯುತ್ತಿದ್ದಾನೆ. ಎಡಗೈಯಿಂದ ಹುಲಿಯ ಕುತ್ತಿಯನ್ನು ಹಿಡಿದಿರುವ ವೀರನ ಮೈಮೇಲೆ ತೋಳ್ಬಂದಿ,

ಕೊರಳಾಸರ, ಸೊಂಟಪಟ್ಟಿ, ಕಾಲಂದಿಗೆ, ಕಿವಿಯೋಲೆ, ಕೈಬಳೆ, ಮುಂತಾದ ಆಭರಣಗಳನ್ನು, ಕಚ್ಚಪಚ್ಚೆಯನ್ನು ತೊಟ್ಟಿದ್ದು, ಸೊಂಟದಲ್ಲಿ ಕಿರುಗತ್ತಿಯನ್ನು, ತಲೆಗೂದಲನ್ನು ಮುಡಿಕಟ್ಟಿದ್ದು, ಬಲಿಷ್ಟವಾದ ತೊಡೆ, ಎದೆಯನ್ನು ಸಣ್ಣನಾದ ನಡುವು ಹೊಂದಿದ್ದಾನೆ. ಎರಡನೇಯ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೇಯ ಹಂತದಲ್ಲಿ ಶಿವಲಿಂಗದ ಮುಂದೆ ನಮಸ್ಕಾರ ಮಾಡುತ್ತಿರುವುದನ್ನು ನೋಡಿದ್ದರೆ ವೀರನು ಶೈವ ಮತಾವಲಂಭಿಯಾಗಿದ್ದಾನೆ.

## ೪. ಪೆಣ್ಬುಯಲ್

ಪೆಣ್ಬುಯಲ್ ಎಂಬ ಪದವು ಪೆಣ್+ಪುಯ್ಯಲ್ ಎಂಬ ೨ ಪದಗಳಿಂದ ಕೂಡಿದ್ದು, ಹೆಣ್ಣಿನ ಕೂಗು, ಆಕ್ರಂದನ ಎಂಬ ಅರ್ಥವನ್ನು ತಿಳಿಸುತ್ತದೆ. ಶಾಸನಗಳಲ್ಲಿ ಪೆಣ್ಬುಯ್ಯಲ್ ಬದಲಿಗೆ ಉಡೆಉರ್ಚ್ಚು ಎಂದರೆ ಉಟ್ಟ ಬಟ್ಟೆಯನ್ನು ಸೆಳೆ, ನಗ್ನ ಮಾಡು ಎಂದು ಅರ್ಥ, ಸ್ತ್ರೀಯ ಸೀರೆ ಸೆಳೆಯುವ ಮೂಲಕ ಮಾನಹಾನಿಗೆ ಪ್ರಯತ್ನಿಸುವ ಶಿಲ್ಪಗಳಲ್ಲಿ ಸ್ತ್ರೀಯ ಉಡೆ ಬಿಚ್ಚುತ್ತಿರುವ, ನಗ್ನ ಗೊಳಿಸಿದ, ಹೆಂಗಸರು ಮಕ್ಕಳನ್ನು ಎದೆಗವಿಚಿಕೊಂಡು, ಭಯಭೀತರಾಗಿ ನಿಂತ ಚಿತ್ರಗಳು. ಸ್ತ್ರೀಯರಿಗೊದಗಿದ ಅಪತ್ತನ್ನು ಹೋಗಲಾಡಿಸುವುದು ವೀರರ ಕರ್ತವ್ಯವಾಗಿತ್ತು.

ತುರುಗಳನ್ನು ಕದಿಯಲು ಅಥವಾ ಊರನ್ನು ಕೊಳ್ಳೆ ಹೊಡೆಯಲು ಬಂದಂತಹ ವೈರಿಗಳು ದಾಳಿ ಮಾಡುವಾಗ ಯಾವುದೇ ರೀತಿ ನಿಯಮವನ್ನು ಅನುಸರಿಸುತ್ತಿರಲಿಲ್ಲ. ದಾಳಿಕೋರರು ಹಳ್ಳಿಗಳ ಮೇಲೆ ಆಕ್ರಮಣವೆಸಗಿದಾಗ ಮೊದಲು ದಾಳಿಗೆ ಒಳಗಾಗುತ್ತಿದ್ದವರು ಮಹಿಳೆಯರು, ಮಕ್ಕಳು, ಮೂಕ ಪ್ರಾಣಿಗಳು. ಅಂತಹ ಸಮಯದಲ್ಲಿ ಅನೇಕರು ಪ್ರಾಣದ ಹಂಗನ್ನು ಬಿಟ್ಟು ಶತೃಗಳೊಂದಿಗೆ ಹೋರಾಡಿ ಆಪತ್ತಿಗೆ ಒಳಗಾದವರನ್ನು ರಕ್ಷಿಸುತ್ತಿದ್ದರು. ಹೀಗೆ ರಕ್ಷಣೆ ಮಾಡುವುದು ಅನೇಕರ ಬದುಕಿಗೆ ಆದರ್ಶ ಗುಣವಾಗಿತ್ತು. ರಕ್ಷಣೆ ಮಾಡಲು ಹೋಗಿ ಪ್ರಾಣವನ್ನು ತೆತ್ತವರಿಗೆ ಸಮಾಜವು ಅವರ ಕುಟುಂಬಕ್ಕೆ ದಾನ ಧರ್ಮಗಳನ್ನು ನೀಡಿ ಸಹಾಯ ನೀಡುತ್ತಿದ್ದರು. ಮಡಿದವರನ್ನು ತ್ಯಾಗಿಗಳೆಂದು, ವೀರರೆಂದು ಗೌರವಿಸಿ ನೆನಪಿನ ಸ್ಮಾರಕ ಶಿಲೆಗಳನ್ನು ಹಾಕಿಸುತ್ತಿದ್ದರು.

ಯುದ್ಧದಲ್ಲಿ ಜಯಗಳಿಸಿದವರು ಆ ಊರನ್ನು ಸೂರೆ ಮಾಡುತ್ತಿದ್ದುದಷ್ಠೇ ಅಲ್ಲದೇ ಸ್ತ್ರೀಯರ ಮಾನಭಂಗ, ಅಪಹರಣಕ್ಕೂ ಪ್ರಯತ್ನಿಸುತ್ತಿದ್ದರು. ಇಂತಹ ಸೂರೆಗಳಿಂದಲೆ ಯುದ್ಧಕ್ಕೆ ಹೋದ ವೀರರು ಮಡಿದ ಸುದ್ದಿ ಕೇಳಿದ ಅವರ ಪ್ರಾಣ ತ್ಯಾಗ ಮಾಡಲು ಆರಂಭಿಸಿದ್ದೆ ಮುಂದೆ ಸತಿಸಹಗಮ ಪದ್ಧತಿಯಾಗಿ ಹೊಸ ರೂಪವನ್ನು ಪಡೆದುಕೊಂಡಿತು.

ಕೆಲವು ಸಂದರ್ಭಗಳಲ್ಲಿ ಆ ಊರಿನ ಹೆಂಗರ ವಸ್ತ್ರಗಳಿಗೆ ಕೈ ಹಾಕುವುದು ಒಂದು ಬಗೆಯ ಸವಾಲು, ನಿರ್ಣಾಯಕವಾಗಿ ಸೋಲಿಸಿದ್ದಕ್ಕೆ ಸ್ಪಷ್ಟವಾದ ಸಂಕೇತ ಎಂದು ಶತ್ರುಗಳು ವಿಧವೆಯರನ್ನಾಗಿ ಮಾಡುವುದಲ್ಲದೆ, ಅವರ ಮೇಲೆ ಅತ್ಯಾಚಾರ ಮಾಡುವುದು, ಲೈಂಗಿಕ ಕಿರುಕುಳಗಳನ್ನು ನೀಡುತ್ತಿದ್ದರೆನಿಸುತ್ತದೆ.

ಜಿಲ್ಲಾ ವ್ಯಾಪ್ತಿಯಲ್ಲಿ ಪೆಣ್ಬುಯಲ್ ಶಾಸನಗಳು ದೊರಕದಿದ್ದರೂ ಹೊಸಕೋಟೆ ಸಮೀಪದ ಶಿವಾರ, ಮುಳಬಾಗಿಲು ತಾಲ್ಲೂಕಿನ ತಾವರೆಕೆರೆಯಲ್ಲಿ ಶಾಸನಗಳು ದೊರಕಿದೆ. ನೊಳಂಬರ ಕಾಲದ ಕ್ರಿ.ಶ.೯೫೦ ರಲ್ಲಿ ಸ್ತ್ರೀಯರ ಮಾನಭಂಗ, ತುರುಗಳ ಅಪಹರಣದ ಸಮಯದಲ್ಲಿ ಮಾಗರಯ್ಯ ಪಣ್ಣೆ ಎಂಬುವನು ಹೋರಾಡಿ ಮಡಿಯುತ್ತಾನೆ. ಈ ವೀರಗಲ್ಲಿನ ಪಕ್ಕದಲ್ಲಿ ಇದೇ ವಿಷಯವನ್ನೊಳಗೊಂಡ ಇನ್ನೊಂದು ವೀರಗಲ್ಲಿನಲ್ಲಿ ಹೋರಾಡಿ ಮಡಿದವನು ಮಾತ್ರ ಮಲ್ಲಿಯೂರ ಭಾಮಯ್ಯನಾಗಿದ್ದಾನೆ. ಈ ಇಬ್ಬರು ವೀರರು ಒಟ್ಟಿಗೆ ಹೋರಾಡಿ ಪ್ರಾಣವನ್ನು ತೆತ್ತಿರಬೇಕು. ಅದಕ್ಕೆ ಒಂದೇ ಕಾಲದ, ಒಂದೇ ವಿಷಯ ಬೇರೆ ಬೇರೆ ಎರಡು ವೀರಗಲ್ಲನ್ನು ನಿಲ್ಲಿಸಿದ್ದಾರೆ[೫೦]. ನೆಲವಾಗಿಲುನಲ್ಲಿ ದೊರೆತ ವೀರಗಲ್ಲನ್ನು ಗಮನಿಸಿದರೆ ಇದು ಪೆಣ್ಬುಯಲ್ ಇರಬಹುದು ಯಾಕೆಂದರೆ ವೀರನ ಹಿಂದೆ ಎಡಕ್ಕೆ ಬಲಕ್ಕೆ ಇಬ್ಬರು ಸ್ತ್ರೀಯರಿದ್ದು, ವೀರನು ಶತ್ರು ತಲೆಯನ್ನು ತನ್ನ ಬಲಗಾಲಿಯಿಂದ ತುಳಿತಿರುವುದನ್ನು ನೋಡಿದ್ದರೆ ಬಹುಶಃ ಊರಿನ ಮೇಲೆ ದಾಳಿ ಮಾಡಲು ಬಂದ ಕಳ್ಳನ ತಲೆಯನ್ನು ವೀರನು ತುಳಿತ್ತಿರಬಹುದು.

## **೫. ಊರಳಿವು**

ಯುದ್ಧದಲ್ಲಿ ಗೆದ್ದ ಸಂದರ್ಭದಲ್ಲಿ ಮಾತ್ರವಷ್ಟೇ ಅಲ್ಲದೆ, ದಾಳಿಕೋರರು ಆಗಾಗ ಗ್ರಾಮಗಳ ಮೇಲೆ ಆಕ್ರಮಣ ಮಾಡಿ ಊರಿನ ಸಂಪತ್ತನ್ನು ಅಪಹರಿಸಿ, ದೋಚಿಸುವುದರ ಊರಿಗೆ ಕೊಳ್ಳಿ (ಬೆಂಕಿ) ಇಟ್ಟು ಹೋಗುತ್ತಿದ್ದರು. ಅನೇಕ ಬಗೆಯಲ್ಲಿ ಸ್ತ್ರೀ ಮಾನ ರಕ್ಷಣೆಗಾಗಿ ಹೋರಾಡಿ ಮಡಿದ ವೀರರಿಗೆ, ಅವರ ತ್ಯಾಗಕ್ಕೆ, ಭೂದಾನವನ್ನು ನೀಡಿರುವುದರ ಮೂಲಕ ಅನಾಥವಾದ ಅವರ ಕುಟುಂಬಕ್ಕೆ ಆಶ್ರಯವನ್ನು, ಬದುಕಿನಲ್ಲಿ ಸ್ಥಿರತೆಯನ್ನು ಮೂಡಿಸುವ ಕೆಲಸ ಮಾಡುತ್ತಿದ್ದರು. ಗ್ರಾಮದವರಲ್ಲದೇ ಆಳರಸರಲ್ಲಿ ಅವರ ಕುಟುಂಬದ ತಂದೆ. ತಾಯಿ, ಚಿಕ್ಕಪ್ಪ, ಅಣ್ಣ, ತಮ್ಮ, ಅಳಿಯ, ಮಾವ, ಹೆಂಡತಿ, ಮಕ್ಕಳೂ ಕೂಡ ವೀರಗಲ್ಲನ್ನು ನಿಲ್ಲಿಸಿ ಗೌರವ ಸೂಚಿಸಲು ಶಾಸನಗಳನ್ನು ಹಾಕಿಸುತ್ತಿದ್ದರು.

[೫೦] ಎ.ಕ-೧೦, ಮು.ತಾ.೧೬೧, ೧೬೩, ಕ್ರಿ.ಶ.೯೫೦, ತಾವರೆಕೆರೆ.

ಯಾವುದೇ ಯುದ್ಧವಾಗಲಿ, ಹೋರಾಟವಾಗಲಿ ಅಥವಾ ವೈಯುಕ್ತಿಕ ದ್ವೇಷಕ್ಕೆ ಮಹಿಳೆಯರು, ಮೂಕ ಪ್ರಾಣಿಗಳು (ತುರುಗಳು) ಬಲಿಯಾಗುತ್ತಿತ್ತು. ಮಹಿಳೆಯರು ಯಾವ ಸ್ಥಿತಿಯಲ್ಲೇ ಇರಲಿ, ಮಲಗಿರಲಿ, ಮಗುವಿಗೆ ಮೊಲೆ ಯುಡಿಸುತ್ತಿದ್ದರು. ಮಕ್ಕಳಿಗೆ ಕೈ ತುತ್ತು ತಿನ್ನಿಸುತ್ತಿರಲಿ, ಹೊಲದಲ್ಲಿ, ಮನೆಯಲ್ಲಿ ಕೆಲಸದಲ್ಲಿ ಮಾಡುತ್ತಿರುವಾಗಲೇ ಶತ್ರುಗಳು ಮುಂಚ್ಚೂನೆಯಿಲ್ಲದೇ ದಾಳಿ ಮಾಡಿ ಊರುಗಳಿಗೆ ನುಗ್ಗಿ ಅಬಲೆಯರಾದ ಎಷ್ಟೊ ಸ್ತ್ರೀಯರು, ಮಾನ-ಶೀಲ ಕಳೆದು ಕೊಂಡಿರುವರೊ? ದೈಹಿಕವಾಗಿ ಊನ, ಎಷ್ಟು ಜನರ ಹತ್ಯೆಗಳು, ಅವಮಾನ ತಾಳಲಾರದೆ ಅದೆಷ್ಟೋ ಮಹಿಳೆಯರು ಆತ್ಮಹತ್ಯೆ ಮಾಡಿಕೊಂಡಿರುವರೋ ಗೊತ್ತಿಲ್ಲ.

ಇಂತಹವರ ವಿರುದ್ಧ ಹೋರಾಡುತ್ತಿದ್ದವರು ಸಾಮಾನ್ಯ ಜನರೇ ಹೊರತು ಆಳರಸರಾಗಲೀ, ಅಧಿಕಾರಿಗಳಾಗಲೀ ಅಲ್ಲ. ಆಯಾ ಗ್ರಾಮದ ಯುವಕರೇ ದಾಳಿಗಳನ್ನು ಎದುರಿಸಿ ಸ್ತ್ರೀ ಸಮೂಹದ ಕಣ್ಣೀರನ್ನು ಒರೆಸಬೇಕಾಗುತ್ತಿತ್ತು. ಒಂದು ಸಣ್ಣ ಗೌರವವನ್ನೇ ವೀರಗಲ್ಲುಗಳ ನಿರ್ಮಾಣ. ಹೋರಾಟದಲ್ಲಿ ಮಡಿದ ವೀರನ ಕುಟುಂಬಕ್ಕೆ ದಾನ ಧರ್ಮ ನೀಡುವ ಪದ್ಧತಿಯೇ ಹೊರತು ಅವಮಾನಕ್ಕೊಳಗಾದ ಅಥವಾ ಅತ್ಯಾಚಾರಕ್ಕೊಳಗಾದ ಯಾವ ಮಹಿಳೆಗೂ ಪರಿಹಾರ ಸಿಕ್ಕಿದ ಉದಾಹರಣೆಯಿಲ್ಲ. ವೀರನ ಶೌರ್ಯವನ್ನು ಚಿತ್ರಿಸುವ ಉಮೇದಿನಲ್ಲಿ ಹಾನಿಗೊಳಗಾದ ಮಹಿಳೆಯರ ನೋವನ್ನು ಸಾಂತ್ವನಗೊಳಿಸಲು ಅಥವಾ ಧೈರ್ಯ, ಭರವಸೆ ನೀಡೋದನ್ನು ಬಿಟ್ಟು ಬಿಟ್ಟಿದ್ದಾರೆ.

ನೊಳಂಬರಾಧಿಕಾರಾವಧಿಯಲ್ಲಿ ಕ್ರಿ.ಶ.೯೦೦ ರಲ್ಲಿ ಉರಾಳ ಕಳವರ ತಿರು ರಾಜ್ಯದಲ್ಲಿ ಮಳ್ಳೆಗಾವುಂಡನು ಮತ್ತು ಚಾವಾಗಾವುಂಡನು, ತುವಗಾವುಂಡನು ಸತ್ತನು, ಎರೆಯಪ್ಪನು ಈ ಕಲ್ಲನ್ನು ಸ್ಥಾಪಿಸಿದನು[೫೧]. ಚೋಳನ ಕಾಲದಲ್ಲಿ ದುಗ್ಗಯ್ಯ ಗಾವುಂಡರ ಮಕ್ಕಳಾದ ಒದೆಯುವ ಮಾತ್ತಣ್ಣ ವೇಳರು, ಗಂಗೆಗೊಂಡ ಚೋಳಗಾವುಂಡನು, ದೋರಯ್ಯನು ಈ ಮೂವರು ಉಳರುವಿನಲ್ಕಾದಿ ಸತ್ತು ಸ್ವರ್ಗತರಾದರೆ ಇವಗೆಯ್ದ ಕ್ರಿ.ಶ.೧೦೫೧ರಲ್ಲಿ ಮಣ್ಣೆನಾಡಾ ಚರಿಗೆ ಮುದುಗೆರೆಯ ಕೆಳಗೆ ಕಂಡುಗ ಗದ್ದೆ ಎಲ್ಲ ಕಾಲಕ್ಕು ಮಾನ್ಯಮಾಗಿ ಕೊಟ್ಟನು[೫೨].

## ಆ) ಮಾಸ್ತಿ ಕಲ್ಲುಗಳು

ಒಬ್ಬ ವ್ಯಕ್ತಿ ಅಥವಾ ರಾಜ ಯಾವುದೋ ಕಾರಣಕ್ಕೆ ಮಡಿದರೆ ಅವನ ಪತ್ನಿ ತನಗೆ ಇಷ್ಟವಿರಲಿ ಅಥವಾ ಇಲ್ಲದಿರಲಿ ಅವನೊಂದಿಗೆ ಚಿತೆಯನ್ನೇರಿ ಮರಣವನ್ನಪ್ಪುವುದೆ ಸತಿ ಸಹಗಮನವಾಗಿದೆ. ಅಂದರೆ

[೫೧] ಎ.ಕ-೯, ಹೊ.ತಾ.೧೩, ಕ್ರಿ.ಶ.೯೦೦, ಸಿದ್ಧನಹಳ್ಳಿ.
[೫೨] ಎ.ಕ-೯, ಅನುಬಂಧ, ನೆ.ತಾ.೧೮೪, ವರನಾಯಕನಹಳ್ಳಿ.

ಪತಿಯು ಯುದ್ಧದಲ್ಲಿಯಾಗಲೀ, ಯಾವುದೇ ಹೋರಾಟದಲ್ಲಾಗಲೀ (ಊರಿನ ರಕ್ಷಣೆಯಲ್ಲಿ, ಗೋವುಗಳ ರಕ್ಷಣೆಯಲ್ಲಿ), ವೃದ್ಧಾಪ್ಯದಿಂದಾಗಲೀ, ಅನಾರೋಗ್ಯದಿಂದಾಗಲೀ, ಯಾವುದೇ ಕಾರಣದಿಂದಾಗಲೀ ಮರಣಿಸಿದಾಗ ಮಡಿದ ಪತಿ ಜೊತೆಯಲ್ಲಿಯೇ ಚಿತೆಯೇರಿ ಸಜೀವವಾಗಿ ಪ್ರಾಣಾರ್ಪಣೆ ಮಾಡುವ ಅಥವಾ ಸಜೀವ ಸಮಾಧಿಯಾಗುವ ಅಥವಾ ತಮ್ಮ ಕೈಯಾರೆ ತಾವೇ ಕಠಾರಿಯಿಂದ ಇರಿದುಕೊಂಡು ಅಥವಾ ಸಲ್ಲೇಖನ ವ್ರತದಿಂದ ಮರಣ ಪಡೆಯುತ್ತಿದ್ದನ್ನ ಮಾಸ್ತಿ ಮರಣ ಅಥವಾ ಮಹಾಸತಿ ಮರಣ ಎಂದು ಕರೆಯಲಾಗುತ್ತದೆ. ಇಂತಹ ಮಹಾಸತಿಯರ ನೆನಪಿಗಾಗಿ ಹಾಕಿಸುತ್ತಿದ್ದ ಸ್ಮಾರಕಗಳಿಗೆ ಸತಿಗಲ್ಲು, ಮಹಾಸತಿಗಲ್ಲು ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

ಸಹಗಮನ ಪದ್ಧತಿಯು ಉಗಮಕ್ಕೆ ಕಾರಣಗಳನ್ನು ಹುಡುಕಿದರೆ ರಾಜ ಮನೆತನಗಳು ಹಾಗೂ ಧಾರ್ಮಿಕ ಸಂಸ್ಥೆಗಳು ಒಂದಕ್ಕೊಂದು ಪೂರಕವಾಗಿ ಬೆಳೆದ ಕಾಲದಲ್ಲಿ ಮಹಿಳೆಯ ಪಾತಿವ್ರತ್ಯ ಗುಣವನ್ನು ಸಮಾಜದಲ್ಲಿನ ಜನತೆ ತಿಳಿಸಲು ಈ ಘೋರ ಆಚರಣೆಯನ್ನು ಜಾರಿಗೆ ತಂದಿದ್ದಾರೆ.

ಸತ್ತ ವ್ಯಕ್ತಿಯೊಂದಿಗೆ ಅವನ ಪ್ರಿಯ ವಸ್ತುಗಳನ್ನು ಹೂಳಬೇಕೆಂಬ ಇಲ್ಲವೇ ಸುಡಬೇಕೆಂಬ ಭಾವನೆ ಈ ಸಂಪ್ರದಾಯಕ್ಕೆ ದಾರಿ ಮಾಡಿಕೊಟ್ಟಿರ ಬಹುದಾದರೂ ಇದರ ಉಗಮಕ್ಕೆ ೩ ವ್ಯವಹಾರಿಕ ಕಾರಣಗಳನ್ನು ಊಹಿಸಬಹುದು.

(ಅ) ಮರಣದ ತರುವಾಯ ತನ್ನ ಸತಿ ಮನಸಾ ಇಲ್ಲವೇ ಮನಸ್ಸಿನಲ್ಲದೆ ಅನ್ಯರಿಗೆ ವಶವಾಗಬಹುದೆಂಬ ಪುರುಷ ಪ್ರಧಾನ ಸಂಪ್ರದಾಯವನ್ನು ಸ್ತ್ರೀಯರಿಗೆ ರೂಪಿಸಿಕೊಟ್ಟಿರಬಹುದು.

(ಆ) ಪತಿಯ ಮರಣದ ತರುವಾಯ ತನ್ನ ಬದುಕುವಿಕೆ ಮತ್ತು ಪಾವಿತ್ರ್ಯಗಳ ಅನಿಶ್ಚಿತತೆ ಕಾರಣವಾಗಿ ಸ್ತ್ರೀವರ್ಗವೇ ಇದನ್ನು ರೂಪಿಸಿಕೊಂಡಿರಬಹುದು.

(ಇ) ಪತಿಯ ಮರಣದ ತರುವಾಯ ಸತಿಯನ್ನೂ ಮರಣ ಕೂಪಕ್ಕೆ ತಳ್ಳಿ, ಅವಳ ಆಸ್ತಿಯನ್ನು ಸೆಳೆಯಲು 'ಪ್ರಭುವರ್ಗ' ಇಲ್ಲವೆ 'ಪುರೋಹಿತವರ್ಗ' ಈ ಯೋಜನೆಯನ್ನು ರೂಪಿಸಿರಬಹುದು.

ಮಾಸಿಕಲ್ಲಿನಲ್ಲಿ ಸಹಗಮನ ಮತ್ತು ಅನುಗಮನ ಎಂದು ಎರಡು ರೀತಿಯ ಸತಿ ಆಚರಣೆಯಿದ್ದು, ವೀರನೊಬ್ಬ ಮರಣಿಸಿದಾಗ ಆತನ ಶವದೊಡನೆ ಸಹ ಮರಣವನ್ನಪ್ಪುವುದನ್ನು ಸಹಗಮನ ಎಂದು, ಆ ವೀರನ ಶವ ದೊರೆಯದ ಸಂದರ್ಭದಲ್ಲಿ ವೀರನ ನೆನಪಿನ ಯಾವುದಾದರೂ ವಸ್ತುವೊಂದನ್ನು ಕೈಯಲ್ಲಿ ಹಿಡಿದು ಮರಣವನ್ನಪ್ಪುವುದನ್ನು ಅನುಗಮನ ಎಂದು ಕರೆಯುತ್ತಾರೆ. ಅನುಗಮನ ಪದ್ಧತಿಗೆ

ಹೆಗ್ಗಡದೇವನಕೋಟೆ ತಾಲ್ಲೂಕಿನ ಬೆಳತೂರಿನ ದೇಕಬ್ಬೆಯ ಶಾಸನ ಉತ್ತಮ ಉದಾಹರಣೆ ಎನ್ನಬಹುದು. ಮಹಾಸತಿ ಕಲ್ಲುಗಳಲ್ಲಿ ಶಾಸನಗಳಗಿಂತ ಶಿಲ್ಪದ ಕಲ್ಲುಗಳೇ ಹೆಚ್ಚಾಗಿ ಕಂಡುಬಂದಿದೆ.

ವೀರ ಮಾಸ್ತಿಯರ ಶಿಲ್ಪದಲ್ಲಿ ಯುದ್ಧದಲ್ಲಿ ವೀರನು ಮರಣಿಸಿದಾಗ ಆತನ ಪತ್ನಿಯು ಸಹಗಮನ ಮಾಡಿದ ಸಂದರ್ಭದಲ್ಲಿ ವೀರನು ಆಯುಧಗಳನ್ನು ಹಿಡಿದಿದ್ದರೆ ಆತನ ಪಕ್ಕದಲ್ಲಿ ಸತಿಯು ಬಲಗೈ ಮೇಲೆತ್ತಿ ಅಭಯ ಹಸ್ತ ತೋರುತ್ತಾ ಕಳಸ, ಕನ್ನಡಿಯನ್ನು ಹಿಡಿದು ಕೇದಿಗೆ ಹೂವುಗಳಿಂದ ಅಲಂಕೃತರಾಗಿ ನಿಂತಿರುವ ಶಿಲ್ಪಗಳನ್ನು ಕಾಣಬಹುದು.

ವಿಜಯನಗರ ಕಾಲದಲ್ಲಿ ಮಹಾಸತಿ ಶಿಲ್ಪಗಳಲ್ಲಿ ಸತಿಯು ತೋಳನ್ನು ತೋರಿಸುವ ಪದ್ಧತಿಯು ಪ್ರಾರಂಭವಾಯಿತ್ತು. ಶಿಲ್ಪದಲ್ಲಿ ಕಂಬದ ಹಾಗೇ ಅಥವಾ ಆಯತಾಕಾರದ ಮಾಸ್ತಿ ಕಲ್ಲಿನಲ್ಲಿ ಬಲ ಕೈ ಹೊರಗೆ ಬಂದು ಆಶೀರ್ವಾದ ಮಾಡೊ ರೀತಿಯಲ್ಲಿ ಒಂದು ಸ್ತಂಭದಿಂದ ಹೊರಟ ಒಂದು ತೋಳು ಅಭಯ ಹಸ್ತವನ್ನು ಹಿಡಿದಿರುವಂತೆ, ಹಸ್ತದ ಇಕ್ಕೆಲಗಳಲ್ಲಿ ಸೂರ್ಯ, ಚಂದ್ರರ ಚಿತ್ರ, ವಿಜಯನಗರ ಕಾಲವನ್ನು ಸೂಚಿಸುವುದಕ್ಕಾಗಿ ಶಿಲ್ಪದ ಎರಡೂ ಪಕ್ಕಗಳಲ್ಲಿ ಸಣ್ಣರಂಧ್ರಗಳನ್ನು ಕೊರೆದಿರುವುದು, ಹಸ್ತದ ತೋರು ಬೆರಳು ಹಾಗೂ ಹೆಬ್ಬೆರಳುಗಳ ಮಧ್ಯೆ ನಿಂಬೆ ಹಣ್ಣು ಅಥವಾ ಮಾದಲ ಫಲವಿರುತ್ತದೆ. ವೀರನ ಒಬ್ಬ ಪತ್ನಿ ಸಹಗಮನ ಮಾಡಿದ್ದರೆ ಸ್ತಂಭದಿಂದ ಒಂದು ಕೈ ಹೊರಬಂದಂತೆ ಇರುವುದನ್ನು ಒಕ್ಕೈ ಮಾಸ್ತಿಕಲ್ಲು **(ಚಿತ್ರ ಸಂಖ್ಯೆ–೪೦)** ಎಂದು, ವೀರನ ಇಬ್ಬರೂ ಪತ್ನಿಯರು ಸಹಗಮನ ಮಾಡಿದ್ದರೆ ಸ್ತಂಭದಿಂದ ಎರಡು ಕೈ ಹೊರಬಂದಂತೆ ಇರುವ ಶಿಲ್ಪವನ್ನು ಇಕ್ಕೈ ಮಾಸ್ತಿ ಕಲ್ಲು **(ಚಿತ್ರ ಸಂಖ್ಯೆ–೪೧)** ಎಂದು ಕರೆಯುತ್ತಾರೆ. ತೀರಾ ಅಪರೂಪಕ್ಕೆ ಎರಡಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸತಿಯಾದವರ ಮಾಸ್ತಿಕಲ್ಲು ದೊರೆಯುತ್ತವೆ.

ವೀರನಿಗೆ ಪ್ರಮುಖ್ಯತೆ ಕೊಡುವ ಕಲ್ಲುಗಳಲ್ಲಿ ವೀರನಿಗೆ ದೊಡ್ಡದಾಗಿ ಚಿತ್ರಸಿ ಮಾಸ್ತಿಯನ್ನು ಚಿಕ್ಕದಾಗಿ, ಹಾಗೇಯೇ ಮಾಸ್ತಿಗೆ ಪ್ರಾಮುಖ್ಯತೆಯನ್ನು ಕೊಡುವ ಕಲ್ಲುಗಳಲ್ಲಿ ಮಹಾಸತಿಯನ್ನು ದೊಡ್ಡದಾಗಿ, ವೀರನನ್ನು ಚಿಕ್ಕದಾಗಿ ಚಿತ್ರಿಸಿದ ಮಾಸ್ತಿಗಲ್ಲುಗಳು ದೊರೆಯುತ್ತದೆ. ಗ್ರಾಮೀಣ ಜನರ ಮನದಲ್ಲಿ ವೀರಗಲ್ಲುಗಳಗೆ ಐತಿಹ್ಯಗಳು ಇದ್ದಹಾಗೇ ಕೆಲವು ಕಡೆಗಳಲ್ಲಿ ಮಾಸ್ತಿಕಲ್ಲುಗಳಿಗೂ ಹಲವಾರು ಐತಿಹ್ಯಗಳು, ಹಲವಾರು ರೀತಿಯ ನಂಬಿಕೆಗಳು, ಗುಡಿಗಳು, ಆಚರಣೆಗಳಿಂದಾಗಿ ಕಥೆಗಳು ಸಹಜವಾಗಿ ಹುಟ್ಟಿರುತ್ತದೆ. ಚಿಕ್ಕ ಹೆಜ್ಜಾಜಿಯ ಮಾಸ್ತಿಕಲ್ಲು ಕತೆ, ಕೆಂಪಾಜಮ್ಮನ ಮಾಸ್ತಿ ಕಲ್ಲಿನಲ್ಲಿ ಮಾಸ್ತಿಯು ಸೀರೆಯನುಟ್ಟಿದ್ದು, ಕೈ, ತೋಳು, ಕಿವಿ, ಕೊರಳಲ್ಲಿ ಆಭರಣಗಳಿವೆ. ತಲೆಕೂದಲನ್ನು ಕಟ್ಟಿರುವಳು. ಸೊಂಟದ ಮೇಲೆನ ಮಗುವನ್ನು ಎಡಗೈಯಿಂದ ಹಿಡಿದಿರುವಳು. ಬಲಗೈಯಲ್ಲಿ ಹೂವಿದೆ.

ಸಾಮಾನ್ಯವಾಗಿ ಸಹಗಮನ ಮಾಡುವವಳು ಬೆಂಕಿಯಲ್ಲಿ ಹಾರುತ್ತಾಳೆಂಬ ಭಾವನೆಯಿದೆ. ವಾಸ್ತವವಾಗಿ ವೈದಿಕ ಮೂಲಗಳಿಂದ ಹರಡಿಕೊಂಡ ಸತಿಯ ಆಚರಣೆಯಿಂದಾಗಿ ಈ ರೀತಿಯ ಅಂತ್ಯಕ್ರಿಯೆ ಸ್ವಾಭಾವಿಕವೇ ಆಗಿದ್ದರೂ ಸಮಾಧಿಯಾಗಿ ಮರಣ ಹೊಂದಿದ ಉದಾಹರಣೆಗಳೂ ಇದೆ. ಅಗ್ನಿ ಪ್ರವೇಶದ ಮೂಲಕ ಸಮಾಧಿ ಹೊಂದಿ ಸಹಗಮನ ವೈದಿಕೇತನ ಅಂತ್ಯ ಸಂಸ್ಕಾರ ವಿಧಿಯ ಪ್ರಭಾವ

ಮಹಾಸತಿಯ ಜನಪದ ಗೀತೆಗಳಲ್ಲಿ (ಕಥೆಯ ರಚನಾ ಕ್ರಮವು) ವೀರನ ಶೌರ್ಯ, ಮದುವೆಗೆ ಹೆಣ್ಣು ಕೇಳಲು ಬರುವುದು, ಮದುವೆಯ ಸಿದ್ದತೆ, ಗಂಡನಾದವನು ಹೋರಾಟಕ್ಕೆ ಹೋಗುವುದು, ಮದುವೆಯ ಪ್ರಾರಂಭದ ಘಟನೆಗಳು, ವೀರನ ಸಾವು, ಮಾಸ್ತಿ ಕೊಂಡದ ಸಿದ್ದತೆಗಳು, ಬಂಧು ಬಳಗ ನೆರೆದು ಶೋಕಿಸುತ್ತಿರುವುದು. ಮಾಸ್ತಿಕೊಂಡಕ್ಕೆ ಬೀಳುವುದು[೫೩] ಹೀಗೆ ವೀರನ ಶೌರ್ಯದಿಂದ ಸತಿಯೂ ಮಹಾಸತಿಯಾಗುವರೆಗೂ ಗೀತೆಗಳಲ್ಲಿ ಕತೆಯು ಅಡಗಿರುತ್ತದೆ. ಹಾಗೇಯೆ ಜನಪದ ಗೀತೆಯಲ್ಲಿ ವೀರನೊಂದಿಗೆ ವಿವಾಹ ಮತ್ತು ಸತಿ ಸಹಗಮನಕ್ಕೆ ವಿರೋಧ ಭಾವಗಳು ವ್ಯಕ್ತವಾಗುತ್ತದೆ. ವೀರನಿಗೆ ಮದುವೆ ಮಾಡಿಕೊಡದೆಂದು ಕೆಲವರು ಅಭಿಪ್ರಾಯ ಪಟ್ಟರೆ ಹಾಗೂ ಮದುವೆಯ ಸಂಬಂಧಕ್ಕೆ ಬಾಗಿಲಿನ ಮುಂದಿನ ಗೌಳಿ, ಬಾಗಿಲಿನ ಹಿಂದೆ ಇರುವ ಹಲ್ಲಿ, ಬಳೆಗಾರ ಸೆಟ್ಟಿ ಬಳೆ ತೊಡಿಸುವಾಗ ಒಂದು ಸೀನನ್ನು ಸೀನುವುದು ಮದುವೆ ಬೇಡವೆಂದು ಹೇಳುತ್ತಾರೆ. ಸತಿಯನ್ನು ಸಹಗಮನ ಮಾಡಬೇಡವೆಂದು ಬಂಧುಗಳು ಕೇಳಿಕೊಂಡರು, ಕೊಂಡಕ್ಕೆ ಬೀಳುವ ಮಹಾಸತಿಯೇ ತಾನು ತನ್ನ ನಿಶ್ಚಯವನ್ನು ಬದಲಿಸಲಾರನೆಂದೂ ಹೇಳುವ ಮಾತೇ ಆಗಿದೆ. ಪಾತಿವ್ರತ್ಯ ಕಾಪಾಡಿಕೊಳ್ಳುಲು ಅವಳಿಗೆ ಇರುವ ಏಕೈಕ ಮಾರ್ಗವಿದೆನಿಸುತ್ತದೆ. ಒಂದು ಸತಿಗೀತೆಯಲ್ಲಿ ಬೆಂಕಿಗೆ ಬೀಳುವುದನ್ನು ಮದುವೆಯೆಂಬಂತೆ, ಧಾರೆ ಎರೆಯುವ ಕ್ರಿಯೆ ಎಂಬಂತೆ ವಿವರಿಸಲಾಗಿದೆ[೫೪].

ಗಂಡ ಸತ್ತರೂ ಗಂಡನಿಂದ ಕೊಲೆಯಾದರೂ ಮತ್ತೆ ಜೀವಗೊಂಡು ಬದುಕುವ ಸ್ತ್ರೀದೈವಗಳಿಗೆ ಹೋಲಿಸಿದರೆ, ಮರಣದಲ್ಲಿ ಪತಿಯನ್ನು ಹಿಂಬಾಲಿಸಿದ ಸ್ತ್ರೀಯರು ದೈವನಾಗುವುದು ಪುರುಷ ಸಂಸ್ಕೃತಿಯಲ್ಲಿ ಸಹಜವಾಗಿದೆ. ಪತಿ ಸಾವಿನ ನಂತರ ಹೆಂಡತಿಯು, ಸತಿಯು ಹೋಗಿ ಮಾಸ್ತಿಯಾದರೆ, ದುರಂತ ಸಾವಿಗೀಡಾದ ಸ್ತ್ರೀಯರು ದೈವೀಕರಣಗೊಂಡ ಇನ್ನೊಂದು ರೂಪ ಮಾಸ್ತಿಯಾದದು[೫೫]. ಮಾಸ್ತಿ ದಹನಕ್ಕೆ ನಿಶ್ಚಯವಾದಾಗಲೇ ಜನರ ನಂಬಿಕೆಯಲ್ಲಿ ಅವಳು ಅತಿಮಾನುಷ ವ್ಯಕ್ತಿ. ದೇವತೆಗೆ

[೫೩] ಡಾ.ಬಸವರಾಜ ಕಲ್ಗುಡಿ :- ನಕ್ಷೆ ನಕ್ಷತ್ರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು.ಸಂ-೨೭೫ & ೭೬.

[೫೪] ಬಸವರಾಜ ಕಲ್ಗುಡಿ:- ಮಹಾಸತಿ ಆಚರಣೆ ಒಂದು ಅಧ್ಯಯನ, ಪು.ಸಂ- ೬೮ & ೨೭೭.

[೫೫] ಕರ್ನಾಟಕ ಶಾಕ್ತಪಂಥ :– ರಹಮತ್ ತರೀಕೆರೆ, ಪು-೪೩.

ಸಮಾನಳಾಗಿ ಕಾಣುತ್ತಾಳೆ. ಈಗಲೂ ಅನೇಕ ಕಡೆಗಳಲ್ಲಿ ಮಾಸ್ತಿಕಲ್ಲು, ಮಾಸ್ತಿ ಗುಡಿಗಳನ್ನು ಹಳ್ಳಿಗಳಲ್ಲಿ ಪೂಜಿಸುತ್ತಾರೆ. ಕೆಲವು ಹಳ್ಳಿಗಳನ್ನು ಮಾಸ್ತಿಯ ಹೆಸರಿನಿಂದಲೇ ಕರೆಯುವುದುಂಟು. ಜನರು ತಮ್ಮ ಪೈರು ಚೆನ್ನಾಗಿ ಬೆಳೆಯಲು ಇವಳಿಗೆ ಮೊದಲ ಪೂಜೆ ಮಾಡುತ್ತಾರೆ. ತಮ್ಮ ಮಕ್ಕಳು ಮರಿಗಳಿಗೆ ಕಾಯಿಲೆ ಕಸಾಲೆಗಳಾದರೆ ಹರಕೆ ಕಟ್ಟಿಕೊಳ್ಳುತ್ತಾರೆ.

ಕರ್ನಾಟಕದಲ್ಲಿ ಮಹಾಸತಿ ಆಚರಣೆಯು ಹೋರಾಟದ ವೃತ್ತಿಗೆ ಮೀಸಲಾದ, ನಾಯಕ, ಗೊಲ್ಲ ಗಾವುಂಡ ವರ್ಗಗಳಲ್ಲಿ ಮಾತ್ರ ಪ್ರಧಾನವಾಗಿ ಇದ್ದ ಹಾಗೆ ಕಾಣುತ್ತದೆ. ಮಹಾಸತಿಯಮ್ಮನ ಆಚರಣೆ, ಹಬ್ಬ, ಐತಿಹ್ಯಗಳು ಮುಖ್ಯವಾಗಿ ಈಗಲೂ ನಾಯಕ ಗೊಲ್ಲ, ಗೌಡ, ಕೆಲವು ಹರಿಜನ ವರ್ಗಗಳಲ್ಲಿ ಮಾತ್ರ ಉಳಿದು ಬಂದಿದೆ. ಉತ್ತರ ಭಾರತದಲ್ಲಿ ಬಹುಪಾಲು ಕ್ಷತ್ರಿಯ ವರ್ಗಕ್ಕೆ, ಕ್ರಮೇಣ ಬ್ರಾಹ್ಮಣ ವರ್ಗಕ್ಕೆ ಮೀಸಲಾಗಿದ್ದ ಸತಿ ಸಹಗಮನ ಕರ್ನಾಟಕದಲ್ಲಿ ಬಹುಪಾಲು ಕೆಳವರ್ಗ ಕೆಳಜಾತಿಗಳಲ್ಲಿ ಮಾತ್ರ ವ್ಯಾಪಕವಾಗಿ ಹರಡಿತ್ತು[೫೬]. ವೈಭವ್ಯವು ಶಾಪವಾಗಿರದ ಸಾಮಾಜಿಕವಾಗಿ ಕೆಳಸ್ತರಕ್ಕೆ ಸೇರಿದ ಸ್ತ್ರೀಯರು ಸತಿಹೋಗಿರುವುದು ಗಮನಾರ್ಹ. ಸತಿಯನ್ನು ಒಂದು ಮೌಲ್ಯವಾಗಿ ಆ ಹೊತ್ತಿಗೆ ಕೆಳಜಾತಿಯವರಲ್ಲಿ ಬಿತ್ತಲಾಗಿತ್ತೋ ಅಥವಾ ಅನಿರೀಕ್ಷಿತ ದುರಂತ ಎದುರಿಸಲಾರದ ಶೋಕ ಇದಕ್ಕೆ ಕಾರಣವೇ ಸ್ತ್ರೀಯರ ಬದುಕುವ ಹಕ್ಕನ್ನು ಪ್ರಭುತ್ವ ಮತ್ತು ಅದರ ಯುದ್ಧಗಳು ಪರೋಕ್ಷವಾಗಿ ಕಸಿದುಕೊಂಡು ಅವರನ್ನು ದೈವಗಳಾಗಿಸಿರುವ ಸಾಧ್ಯತೆಗಳಿವೆ. ದಂಡಿಗೆ ಹೋಗುವ ಅನಿವಾರ್ಯತೆ ಕೆಳವರ್ಗದವರಿಗೆ ಇರುತ್ತಿತ್ತು. ಹಾಗೆ ಹೋಗುವಾಗ ರಣರಂಗದಲ್ಲಿ ತಾವು ಸತ್ತರೆ ಸತಿಹೋಗ ಬೇಕೆಂದು ಸೈನಿಕರು ಮಡದಿಯರಿಂದ ವಚನ ಪಡೆಯುತ್ತಿದ್ದರೆನಿಸುತ್ತದೆ.

ಬೌದ್ಧ ಧರ್ಮದಲ್ಲಿ ಗಂಡು ಹೆಣ್ಣುಗಳ ಸಂಬಂಧ ಹೆಚ್ಚು ಉದಾರ ಮನೋವೃತ್ತಿಯಿಂದ ಕೂಡಿತ್ತು. ವಿಧವೆಯಾದವಳು ಮರು ಮಧುವೆಯಾಗ ಬಹುದಾಗಿತ್ತು. ಇಲ್ಲವೇ ಸಂಘವನ್ನು ಸೇರಬಹುದಾಗಿತ್ತು. ಇದರಿಂದಾಗಿ ಸತಿಪದ್ಧತಿಯು ಬೌದ್ಧರಲ್ಲಿ ಇರಲಿಲ್ಲ. ಮುಂದೆಯೂ ಅದು ಆ ಧರ್ಮದ ಜನರಲ್ಲಿ ಪ್ರವೇಶಿಸಲಿಲ್ಲ. ಸ್ತ್ರೀಯರಿಗೆ ಆಸ್ತಿಯ ಮೇಲೆ ಹಕ್ಕು ಕೂಡ ಇರುವುದನ್ನು ಬೌದ್ದ ಧರ್ಮ ಸಮರ್ಥಿಸುತ್ತದೆ.

ಜೈನರಲ್ಲೇ ಇದ್ದ ಎರಡು ಪಂಗಡಗಳಲ್ಲಿ ಸ್ತ್ರೀಯರ ಬಗ್ಗೆ ಭಿನ್ನಾಭಿಪ್ರಾಯಗಳಿದ್ದವು. ದಿಗಂಬರರು ಹೆಣ್ಣು ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲೆಂದೂ ಅವಳು ಗಂಡಾಗಿಯೇ ಹುಟ್ಟಿ ಮುಕ್ತಿ ಪಡೆಯ

[೫೬] ಬಸವರಾಜ ಕಲ್ಗುಡಿ :- ಮಹಾಸತಿ ಆಚರಣೆ ಒಂದು ಅಧ್ಯಯನ, ಪು.ಸಂ- ೨೮೦, ೨೮೧, ೨೮೨.

ಬೇಕಾಗುತ್ತದೆಯೆಂದೂ, ಶ್ವೇತಾಂಬರರು ಹೆಣ್ಣು ತೀರ್ಥಂಕರರಳಾಗ ಬಲ್ಲಾಳು ಎನ್ನುವುದಕ್ಕೆ ೧೯ನೇ ತೀರ್ಥಂಕರರಳಾದ ಮಲ್ಲಿಯನ್ನು ಉದಾಹರಿಸುತ್ತಾರೆ[೫೭].

ಜೈನಧರ್ಮದಲ್ಲಿ ವ್ಯಕ್ತಿಯೊಬ್ಬ ಯುದ್ಧದಲ್ಲಿ ಮರಣಿಸಿರಲಿ ಅಥವಾ ಸಲ್ಲೇಖನದಿಂದ ಸಮಾಧಿ ಮರಣ ಪಡೆದಿರಲಿ, ಒಟ್ಟಾರೆ ಮರಣಿಸಿದ ಸಂದರ್ಭದಲ್ಲಿ ಆತನ ಪತ್ನಿ ಅಥವಾ ಪತ್ನಿಯರು ಸಲ್ಲೇಖನದಿಂದ ಸಮಾಧಿಮರಣ ಪಡೆದಿರುವ ಸ್ಮಾರಕ ಶಿಲೆಯನ್ನು 'ಮಾಸ್ತಿ ನಿಸಿದಿಗಲ್ಲು' ಎಂದು ಕರೆಯಲಾಗುತ್ತದೆ.

ಮಾಸ್ತಿ ಕಲ್ಲುಗಳು ಗಂಡನ ಹಿಂದೆ ಸಹಗಮನ ಮಾಡಿದ ಮಹಾಸತಿಯರ ಕಲ್ಲುಗಳೇ ಸಾಮಾನ್ಯವಾಗಿ ಎಲ್ಲಾ ಮಾಸ್ತಿ ಕಲ್ಲುಗಳು ಶಿಲ್ಪ ಕಲ್ಲುಗಳು ಮಾತ್ರವೇ ಆಗಿದ್ದು ಅಪರೂಪಕ್ಕೆ ಎಂಬಂತೆ ಕೆಲವು ಶಾಸನೋಕ್ತ ಕಲ್ಲುಗಳಾಗಿರುತ್ತವೆ. ಈ ಮಾಸ್ತಿ ಕಲ್ಲುಗಳು ಸಂಸ್ಕೃತಿಯ ಪ್ರತೀಕಗಳಾಗಿದ್ದು ಹಲವಾರು ಮಾಸ್ತಿಕಲ್ಲುಗಳನ್ನು ಜಿಲ್ಲೆಯಾದ್ಯಂತ ಗುರ್ತಿಸಬಹುದಾಗಿದೆ. ಗಂಗರ ಕಾಲದಲ್ಲಿ ಈ ರೀತಿಯ ಸತಿಗಲ್ಲುಗಳ ಸಂಖ್ಯೆ ಬಹಳಷ್ಟಿದ್ದರು ಜಿಲ್ಲೆಯಲ್ಲಿ ಅವುಗಳ ಸಂಖ್ಯೆ ಬೆರಳೆಣಿಕೆಯಷ್ಟೆ ಎಂದು ಹೇಳಬಹುದು.

ದೊಡ್ಡಹೆಜ್ಜಾಜಿಯಲ್ಲಿ ಸುಮಾರು ಆರು ಅಡಿ ಎತ್ತರ ಮತ್ತು ಮೂರು ಅಡಿ ಅಗಲವಿರುವ ತೋಳನ ಶಿಲ್ಪವಿರುವ ಮಹಾಸತಿ ಕಲ್ಲಿನಲ್ಲಿ ಕೈಯಲ್ಲಿ ತೋರು ಬೆರಳನ ನಡುವೆ ಹೂವಿನ ಮೊಗ್ಗನ್ನು ಹಿಡಿದಿರುವಂತೆ, ಕಂಬದ ಮೇಲ್ಭಾಗದ ಕಳಸದ ಆಕಾರದಲ್ಲಿ ಕೆತ್ತಲಾಗಿದ್ದು, ಕಲ್ಲಿನಿಂದ ಹೊರ ಭಾಗಕ್ಕೆ ಉಬ್ಬಿಕೊಂಡಿರುವಂತೆ. ದೇವನಹಳ್ಳಿ ತಾಲೂಕಿನ ಬನಹಳ್ಳಿ ಕೆರೆಯ ಏರಿಯ ಮೇಲೆ ಒಂದು **(ಚಿತ್ರ ಸಂಖ್ಯೆ–೪೨)** ಸತಿಗಲ್ಲು ಇದ್ದು, ಅದಕ್ಕೆ ಕಲ್ಲು ಚಪ್ಪಡಿಯಿಂದ ಗುಡಿಯನ್ನು ನಿರ್ಮಿಸಿ ಪೂಜಿಸಲಾಗುತ್ತಿದೆ ಇಲ್ಲಿ ಮೂರು ಶಿಲ್ಪಗಳಿದ್ದು ಒಬ್ಬ ಪುರುಷ ಇಬ್ಬರು ಸ್ತ್ರೀಯರಿದ್ದಾರೆ. ಪುರುಷನು ಸರ್ವಾಭರಣಭೂಷಿತನಾಗಿ ಅಂಜಲಿ ಮುದ್ರೆಯೊಂದಿಗೆ ನಿಂತಿದ್ದಾನೆ. ಬಲಭಾಗದಲ್ಲಿನ ಸ್ತ್ರೀಯು ಸಹ ಅಂಜಲಿ ಮುದ್ರೆಯಲ್ಲಿದ್ದಾಳೆ. ಎಡಭಾಗದಲ್ಲಿನ ಸ್ತ್ರೀಯು ಬಲಗೈಯನ್ನು ಮೇಲಕ್ಕೆ ಎತ್ತಿ ಎಡಗೈಯಲ್ಲಿ ಒಂದು ಗಂಟನ್ನು ಹಿಡಿದಿದ್ದಾಳೆ. ಸ್ತ್ರೀಯರಿಬ್ಬರು ದಪ್ಪದಾದ ಧಮ್ಮಿಲ್ಲಗಳನ್ನು ಹಾಕಿದ್ದಾರೆ. ರಾಜೇಂದ್ರ ದೇವರ ಆಳ್ವಿಕೆಯಲ್ಲಿ ರಾಯರಾಯ ವೆಲ್ಲನ್ ಪ್ರಮಾಡಿ...... ಹೆಂಡತಿ ಸೊಮ್ಮಕ್ಕನು ಬೆಂಕಿಯನ್ನು ಪ್ರವೇಶಿಸಿದಳು. ಈ ಕಲ್ಲನ್ನು ಮಾಡಿಸಿದವರು ತಿಪ್ಪೂರು ಒಡೆಯರಾದ ಪಸುಪೊನ್ನ ಮೆಂಟಿ ರಾಜಾಧಿರಾಜ ಮವೆಂತ ವೆಲ್ಲರ್[೫೮].

## ವೀರ ಮಾಸ್ತಿಕಲ್ಲುಗಳು

[೫೭] ಬಸವರಾಜ ಕಲ್ಗುಡಿ :- ಮಹಾಸತಿ ಆಚರಣೆ ಒಂದು ಅಧ್ಯಯನ, ಪು.ಸಂ-೨೪, ೨೫, ೨೬.
[೫೮] ಎ.ಕ-೯, ದೇ.ತಾ.೧೪, ಕ್ರಿ.ಶ.೧೦೬೭, ತಮಿಳು, ಬ್ಯಾಡರಹಳ್ಳಿ.

ಒಂದು ರೀತಿಯಲ್ಲಿ ವೀರ ಅಥವಾ ಮಾಸ್ತಿ ಕಲ್ಲುಗಳು ಒಂದು ನಾಣ್ಯದ ಎರಡು ಮುಖಗಳ ಹಾಗೇ ಕೆಲವು ಮಾಸ್ತಿಕಲ್ಲುಗಳು ವೀರಗಲ್ಲಿನಿಂದ ಪ್ರತ್ಯೇಕವಾಗಿದ್ದರೆ, ಯುದ್ಧದಲ್ಲಿ ವೀರನು ಮರಣಿಸಿದಾಗ ಆತನ ಪತ್ನಿಯು ಸಹಗಮನ ಮಾಡಿದ ಸಂದರ್ಭದಲ್ಲಿ ವೀರನು ಆಯುಧಪಾಣಿಯಾಗಿರುವ ಶಿಲ್ಪ ಹಾಗೂ ಆತನ ಸತಿ ಅಥವಾ ಸತಿಯರು ತಮ್ಮ ಬಲಗೈ ಮೇಲೆತ್ತಿ ಅಭಯ ಹಸ್ತ ತೋರುತ್ತ ಕಳಸ, ಕನ್ನಡಿ, ನಿಂಬೆಹಣ್ಣು ಅಥವಾ ಮಾದಲ ಫಲ ಹಿಡಿದು ಕೇದಗೆ ಹೂಗಳಿಂದ ಅಲಂಕೃತರಾಗಿ ನಿಂತಿರುವ ಶಿಲ್ಪವನ್ನು ಕೆತ್ತಿರುತ್ತಾರೆ.

ಜಿಲ್ಲಾದ್ಯಂತ ಸಿಕ್ಕಿರುವ ಹಲವಾರು ಶಿಲ್ಪ ಕಲ್ಲುಗಳಲ್ಲಿ ವೀರ ಮತ್ತು ಸಹಗಮನ ಮಾಡಿದ ಸತಿಯು ಜೊತೆಯಾಗಿ ಇರುವ ದೃಶ್ಯಗಳು ಕಣ್ಣ ಮುಂದೆ ಗೋಚರಿಸುತ್ತದೆ. ಹೋರಾಟದಲ್ಲಿ ಮಡಿದ ವೀರನಿಗೆ ಇಬ್ಬರು ಸತಿಯರಿದ್ದರೆ, ಇಬ್ಬರೂ ಪ್ರಾಣ ತ್ಯಾಗ ಮಾಡುತ್ತಿದ್ದರು. ಮಹಾಸತಿ ಕಲ್ಲುಗಳಲ್ಲಿ ವೀರನ ಜೊತೆಗೆ ಅವನ ಇಬ್ಬರು ಸತಿಯರನ್ನು ಇರೊದನ್ನು ವಡ್ಡರಹಳ್ಳಿ, ದೊಡ್ಡಹುಲ್ಲೂರು, ತಾವರೆಕೆರೆ, ದಾಸರಹಳ್ಳಿಗಳಲ್ಲಿ ಕಾಣಬಹುದು.

ಕೆಲವು ವೀರಗಲ್ಲುಗಳಲ್ಲಿ ಮಹಾಸತಿಯರನ್ನು ವೀರನಿಗೆ ಸರಿಸಮಾನವಾಗಿ ಚಿತ್ರಿಸಿದರೆ, ಕೆಲವೆಡೆ ವೀರರ ಬಳಿ ಸತಿಯರನ್ನು ಸಾಲಾಗಿ ನಿಂತಿರುವಂತೆ ಚಿತ್ರಿಸಿದ್ದಾರೆ. ಸಾಸಲು ಗ್ರಾಮದ ಕೊಳವೊಂದರ ಬಳಿ ಆರು ವೀರ ಮಾಸ್ತಿ ಕಲ್ಲುಗಳನ್ನು ಸಾಲಾಗಿ ನಿಲ್ಲಿಸಲಾಗಿದೆ. ಎಲ್ಲವು ಎರಡು–ಮೂರು ಹಂತಗಳದ್ದು, ಮೊದಲ ಹಂತದಲ್ಲಿ ವೀರನು ತನ್ನ ಪತ್ನಿ ಸಮೇತನಾಗಿ ಕುದುರೆಯ ಮೇಲೆ ಕುಳಿತು ಸವಾರಿ ಹೊರಟಿರುವಂತೆ, ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ವಿಮಾನದಲ್ಲಿ ಕೂರಿಸಿಕೊಂಡು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ, ಮೂರನೇ ಹಂತದಲ್ಲಿ ವೀರನು ಇಷ್ಟ ದೇವರಾದ ಶಿವಲಿಂಗನ ಮುಂದೆ ಕುಳಿತ್ತಿದ್ದು, ಕೈಲಾಸಕ್ಕೆ(ಸ್ವರ್ಗ) ಹೋದಂತೆ.

ಹಿರೇ ಮುದ್ದೇನಹಳ್ಳಿಯಲ್ಲಿ ಎರಡು ಅಡಿ ಎತ್ತರ ಮತ್ತು ಆರು ಅಡಿ ಅಗಲದ ವೀರ ಮಾಸ್ತಿಕಲ್ಲಿನಲ್ಲಿ ನಾಲ್ವಾರು ಸ್ತ್ರೀಯರು ಸಾಲಾಗಿ ನಿಂತಿರುವುದು **(ಚಿತ್ರ ಸಂಖ್ಯೆ–೪೩)** ಏಕಕಾಲಕ್ಕೆ ಇವರೆಲ್ಲರು ಸತೀ ಸಹಗಮನದಲ್ಲಿ ಮರಣವನ್ನು ಹೊಂದಿರುವುದನ್ನು ತಿಳಿಸುತ್ತದೆ. ಬಲಭಾಗದಲ್ಲಿ ಇಬ್ಬರು ಸತಿಯರು ಮಧ್ಯೆ ಖಡ್ಗಧಾರಿಯಾದ ವೀರನೊಬ್ಬನು ನಿಂತಿರುವನು. ಬಲಭಾಗದಲ್ಲಿರುವ ಸತಿಯು ಕಳಶವನ್ನು ನೋಡಿಕೊಳ್ಳುತ್ತಿರುವಂತೆ, ಎಡಭಾಗದ ಸತಿಯು ಕಳಶವನ್ನು ಹಿಡಿದಿರುವುದು. ಕಲ್ಲಿನ ಎಡಕ್ಕೆ ಮತ್ತೆರಡು ಜೋಡಿಗಳನ್ನು, ಅವಳ ಬಲಕ್ಕೆ ವೀರ ಸತಿಯು ಬಲಗೈಯಲ್ಲಿ ಖಡ್ಗವನ್ನು, ಎಡಗೈ ಸೊಂಟದ ಮೇಲೆ, ಸತಿಯು ಚಾಮರವನ್ನು, ಪತಿಯ ತಲೆಯ ಮೇಲೆ ಎತ್ತಿ ಹಿಡಿದಿದ್ದಾಳೆ. ಹೊಲದಲ್ಲಿ ಮೂರು ಅಡಿ ಅಗಲ,

೫ ಅಡಿ ಎತ್ತರದ ವೀರಮಾಸ್ತಿ ಕಲ್ಲಿನಲ್ಲಿ ಮಧ್ಯಭಾಗದಲ್ಲಿ ವೀರನೊಬ್ಬನು ಹೋರಾಟ ಭಂಗಿಯಲ್ಲಿರುವಂತೆ ಎಡಗೈಯಲ್ಲಿ ಗುರಣಿ, ಬಲಗೈ ಮೇಲೆತ್ತಿ ಹಿಡಿದಿರುವಳು ಸೀರೆಯನ್ನುಟ್ಟು, ಕೈಯಲ್ಲಿ ಹೂವನ್ನು ಹಿಡಿದಿದ್ದಾಳೆ. ವೀರನ ಬಲಕ್ಕೆ ಇರುವ ಸತಿಯು ನೃತ್ಯ ಭಂಗಿಯಲ್ಲಿರುವಂತೆ ನಿಂತಿದ್ದು, ಎಡಗೈಯಲ್ಲಿ ಕನ್ನಡಿಯನ್ನು, ಬಲಗೈಯನ್ನು ಮೇಲೆತ್ತಿರುವಳು, ಜಡೆಯು, ಮೊಣ ಕಾಲವರೆಗೂ ಇಳಿಬಿದ್ದಿದ್ದು, ಇಬ್ಬರೂ ಸತಿಯರ ಸೀರೆಯ ನೆರಿಗೆಗಳು ಸೋಗಸಾಗಿ ಕಾಣಿಸುತ್ತದೆ.

**ಮಾಕಳಿಯಲ್ಲಿ** ಐದು ಅಡಿ ಎತ್ತರ, ಮೂರು ಅಡಿ ಅಗಲವಾದ ಮೂರು ಹಂತಗಳನ್ನು ಹೊಂದಿರುವ ವೀರಮಾಸ್ತಿ ಕಲ್ಲಿನಲ್ಲಿ **(ಚಿತ್ರ ಸಂಖ್ಯೆ–೪೪)** ಕೆಳ ಹಂತದಲ್ಲಿ ವೀರನು ವೈರಿನ ಮುಂದಲೆಯನ್ನು ಹಿಡಿದಿರುವನು. ಎಡಕ್ಕೆ ಬಿಲ್ಲು ಬಾಣವಿರುವುದನ್ನು, ಸತಿಯು ಕೈ ಎತ್ತಿ ಮುಗಿಯುತ್ತಿರುವುದು. ಮಧ್ಯ ಭಾಗದಲ್ಲಿ ವೀರನು ಮಂಟಪವೊಂದರ ನಡುವೆ ಪದ್ಮಾಸನದಲ್ಲಿ ಕೈ ಮುಗಿಯುತ್ತಾ ಕುಳಿತಿದ್ದಂತೆ, ಇಕ್ಕೆಲಗಳಲ್ಲಿ ಇಬ್ಬರು ಅಪ್ಸರೆಯರು ಒಂದು ಕೈಯಲ್ಲಿ ಚಾಮರವನ್ನು, ಇನ್ನೊಂದು ಕೈಯಲ್ಲಿ ಮಂಟಪವನ್ನು ಹಿಡಿದುಕೊಂಡು ಸ್ವರ್ಗಕ್ಕೆ ಕರೆದೊಯ್ಯುವಂತೆ, ಮೂರನೇ ಪಟ್ಟಿಕೆಯಲ್ಲಿ ವಿರನು ಕೈಲಾಸದಲ್ಲಿರುವಂತೆ ಪದ್ಮಾಸನ ಹಾಕಿ, ಕೈಮುಗಿದು ಕಣ್ಮುಚ್ಚಿ ಧ್ಯಾನ ಮಗ್ನನಾಗಿ ಕುಳಿತಿರುವನು. ಮಧ್ಯಭಾಗದಲ್ಲಿ ಶಿವಲಿಂಗವನ್ನು, ಎದುರು ಬಸವನನ್ನು, ಲಿಂಗದ ಪಕ್ಕದಲ್ಲಿ ಅರ್ಚಕನೊಬ್ಬ ಶಿವಲಿಂಗಕ್ಕೆ ಅರ್ಚನೆ ಮಾಡುತ್ತಿರುವನು, ಎಡಗೈಯಲ್ಲಿ ಘಂಟೆಯನ್ನು, ಬಲಗೈಯಲ್ಲಿ ಧೂಪಾರತಿಯನ್ನು ಹಿಡಿದಿರುವನು, ಮೈಮೇಲೆ ಲಂಗೋಟಿ ಮಾತ್ರ ಇದ್ದು, ಉದ್ದನೇಯ ಗಂಟು ಗಂಟಾದ ಜಡೆ ನೆಲ ಮುಟ್ಟುವಂತಿದೆ. ಇದರ ಪಕ್ಕದಲ್ಲೇ ಇದೇ ರೀತಿಯ ವೀರ ಮಾಸ್ತಿ ಕಲ್ಲಿದೆ. ಆದರೆ ಕೆಳಗಿನ ಪಟ್ಟಿಯಲ್ಲಿ ವೀರನು ಕುದುರೆಯ ಮೇಲೆ ಕುಳಿತು ವೈರಿಯೊಡನೆ ಹೋರಾಡುತ್ತಿರುವಂತೆ.

ದೊಡ್ಡಹುಲ್ಲೂರಿನಲ್ಲಿರುವ ಆರು ಅಡಿ ಉದ್ದ, ಮೂರು ಅಡಿ ಎತ್ತರವಿರುವ ವೀರ ಮಾಸ್ತಿಕಲ್ಲುವಿನಲ್ಲಿ ಕುದುರೆಯ ಮೇಲೆ ಕುಳಿತ ವೀರನು ಭರ್ಜಿಯನ್ನು ಬಲಗೈಯಲ್ಲಿ ಮೇಲೆತ್ತಿ ಹೋರಾಡುತ್ತಿರುವಂತೆ, ವೀರನ ಹಿಂದೆ ಸಾಲಾಗಿ ನಾಲ್ಕು ಜನ ಸತಿಯರಿದ್ದು, ಎಲ್ಲಾರು ಎಡಗೈನ್ನು ಮೇಲೆತ್ತಿದ್ದಾರೆ. ಎಲ್ಲಾ ಸತಿಯರು ಸರ್ವಾಲಂಕಾರ ಭೂಷಿತರನ್ನಾಗಿ, ತಲೆಗೂದಲನ್ನು ಗಂಟು ಕಟ್ಟಿ ಕೊಂಡಿರುವುದು ಎಲ್ಲವನ್ನು ಗಮನಿಸಿದರೆ ಒಬ್ಬನೇ ವೀರನ ನಾಲ್ಕು ಸತಿಯರು ಮಡಿದಿರಬೇಕು. ಹಾಗೂ ವೀರನು ಕುದುರೆಯ ಮೇಲೆ ಕುಳಿತಿರುವುದು ಆಳರಸರ ವಂಶಸ್ಥನಾಗಿರಬೇಕು.

ವೀರಮಾಸ್ತಿಯರು ಒಂದೇ ಕಲ್ಲಿನಲ್ಲಿದ್ದು **(ಚಿತ್ರ ಸಂಖ್ಯೆ–೪೫, ೪೬,)** ವೀರನು ಖಡ್ಗವನ್ನು ಮೇಲೆತ್ತಿ ಹೋರಾಟಕ್ಕೆ ಮುನ್ನುಗ್ಗುತ್ತಿರುವಂತೆ ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯಿದೆ. ತಲೆಗೂದಲನ್ನು

ಎಡಕ್ಕೆ ಗಂಟನಂತೆ ಕಟ್ಟಿದ್ದು, ಕೊರಳಸರ, ಕುಂಡು ಕಂಠಿಕೆ, ಕಾಲ್ಗಡಗ, ತೋಳ್ಬಮದಿ, ಕೈಕಡಗ, ಸೊಂಟದಲ್ಲಿ ಕಿರುಗತ್ತಿಯಿದೆ. ಎಡಗಾಲನ್ನು ಮುಂದಿಕ್ಕಿದ್ದಾನೆ. ಸ್ತ್ರೀಯು ಬಲಗೈಯನ್ನು ಮೇಲೆತ್ತಿ ನಿಂತಿದ್ದಾಳೆ. ಕಾಲಿನವರೆಗೆ ವಸ್ತ್ರ ಹಾಗೂ ಆಭರಣಗಳನ್ನು ಧರಿಸಿದ್ದಾಳೆ. ಈ ವೀರ ಮಾಸ್ತಿಯರ ಮೇಲೆ ಕಮಾನಿನಾಕಾರವನ್ನು ರಚಿಸಿರುವುದು ಪಾಳೆಯಗಾರರ ಕಾಲವನ್ನು ನೆನಪಿಸುತ್ತದೆ.

**ವಾಗಟ** ಗ್ರಾಮದಲ್ಲಿನ ಊರ ಹೊರಗಿನ ವಾಯುವ್ಯ ದಿಕ್ಕಿನ ರಾಮೇಶ್ವರ ಸ್ವಾಮಿ ದೇವಾಲಯದ ಹೊರ ಆವರಣದಲ್ಲಿನ ವೀರನೊಬ್ಬನು ತನ್ನ ಬಲಗೈಯಲ್ಲಿ ಈಟಿಯನ್ನು ನೆಲಕ್ಕೆ ಕೆಳಮುಖವಾಗಿ ಒತ್ತಿ ಹಿಡಿದಿದ್ದರೆ ಪಕ್ಕದಲ್ಲಿ ಸ್ತ್ರೀಯೊಬ್ಬಳು ತನ್ನ ಕೈಗಳನ್ನು ಮುಗಿದು ವೀರನ ಕಡೆ ಮುಖ ಮಾಡಿ ನೋಡುತ್ತಿದ್ದಾಳೆ. ವೀರನು ಮುಡಿಗಳನ್ನು ಕಟ್ಟದೆ ಹಾಗೆ ಕೆಳಗೆ ಹರಿಯ ಬಿಟ್ಟಿದ್ದಾನೆ.

ವೀರನೊಬ್ಬನು ತನ್ನ ಎರಡು ಕೈಗಳಲ್ಲಿ ಕತ್ತಿಯನ್ನು ಹಿಡಿದು ನಿಂತಿದ್ದಾರೆ. ಈತನ ಅಕ್ಕ-ಪಕ್ಕ ಎರಡು ಕಡೆ ಸ್ತ್ರೀಯರು ನಿಂತಿದ್ದಾರೆ. ಎಡಗಡೆ ನಿಂತಿರುವ ಸ್ತ್ರೀಯ ಕೈಯಲ್ಲಿ ಮಂಗಳ ಸೂಚಕವಾದ ಕಳಸವನ್ನು ಹಿಡಿದಿದ್ದಾಳೆ. ಬಲಗಡೆಯಿರುವ ಸ್ತ್ರೀಯ ಕೈಯಲ್ಲಿ ತಾಂಬೂಲವಿದೆ. ಬಹುಶಃ ಇವರಿಬ್ಬರು ತನ್ನ ಗಂಡನನ್ನು ಯುದ್ಧಕ್ಕೆ ಕಳುಹಿಸುತ್ತಿರುವ ರೀತಿಯ ಚಿತ್ರಣ ಈ ರೀತಿಯ ೫ ಸ್ಮಾರಕಗಳು ಒಂದೇ ಕಡೆಯಿದ್ದು ಗುಡಿಗಳನ್ನು ಕಟ್ಟಿ ವಾರಕ್ಕೊಮ್ಮೆ ಕುರುಬ ಜನಾಂಗದವರು ಪೂಜಿಸುತ್ತಾ ಇದೆ. ಇವುಗಳ ಜೊತೆ ಪ್ರತ್ಯೇಕವಾಗಿ ೩ ವೀರರ ಸ್ಮಾರಕಗಳಿವೆ. ೧೨ ವರ್ಷಗಳಿಗೊಮ್ಮೆ ಜಾತ್ರೆ ನಡೆಯುತ್ತದೆ. ಸುತ್ತ ಮುತ್ತಲಿನ ಹಳ್ಳಿಗಳ ಕುರುಬ ಜನಾಂಗದವರು ಸೇರಿ ಅದ್ದೂರಿಯಾಗಿ ಜಾತ್ರೆಯನ್ನು ಮಾಡುತ್ತಾರೆ.

ತಗ್ಗಲಿಹೊಸಹಳ್ಳಿಯಲ್ಲಿ ಪೂರ್ವಕ್ಕೆ ಮುಖ ಮಾಡಿ ನಿಲ್ಲಿಸಲಾದ ವೀರಮಾಸ್ತಿಕಲ್ಲಿನಲ್ಲಿ **(ಚಿತ್ರ ಸಂಖ್ಯೆ-೪೭)** ವೀರನು ಆಲೀಢ ಭಂಗಿಯಲ್ಲಿ ಹೋರಾಡುತ್ತಿರುವಂತೆ ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಖಡ್ಗಗಳನ್ನು ಹಿಡಿದು, ಕಚ್ಚೆಯನ್ನು ಹಾಕಿದ್ದು, ತಲೆ ಕೂದಲನ್ನು ಎತ್ತಿ ನೆತ್ತಿಯ ಮೇಲೆ ಗಂಡು ಹಾಕಲಾಗಿದೆ. ಕೊರಳಲ್ಲಿ, ತೋಳಲ್ಲಿ, ಕಾಲುಗಳಲ್ಲಿ ಆಭರಣಗಳಿವೆ. ತಲೆಗೂದಲನ್ನು ಹಿಂದಕ್ಕೆ ಮುಡಿ ಕಟ್ಟಲಾಗಿದೆ. ವೀರನ ಬಲಭಾಗಕ್ಕೆ ಇರುವ ಮಾಸ್ತಿಯು ಕೈಯಲ್ಲಿ ಕಳಶವನ್ನು ಹಿಡಿದಿದ್ದರೆ, ಎಡಭಾಗದ ಸತಿಯು ಮಗುವನ್ನು ಎತ್ತಿಕೊಂಡು ಬಲಗೈಯಲ್ಲಿ ಕಳಶವನ್ನು ಹಿಡಿದಿದ್ದಾರೆ.

ಮಹಾಸತಿಯರ ಜನಪದ ಗೀತೆಗಳನ್ನು ಹಾಡುವ ಸಂಪ್ರದಾಯ ಕಡಿಮೆಯಾಗುತ್ತ ಬರುವುದು ಮಹಾಸತಿಯನ್ನು ಪ್ರಬಲ ಸ್ತ್ರೀ ದೇವತೆಯೆಂದು ಭಾವಿಸಿ ಪೂಜಿಸುವ ರೀತಿಯು ಪ್ರಧಾನವಾಗಿದೆ. ಮಹಾ ಸತಿಯು ಸತ್ತ ಗಂಡನ ಹಿಂದೆ ದಹನವಾದವಳು ಎಂಬ ಐತಿಹಾಸಿಕ ವಿವಿರ ಜನರ ಪ್ರಜ್ಞೆಯಿಂದ ಅಳಿಸಿ

ಹೋಗುವುದರಿಂದ ಕಥೆಯನ್ನು ಹಿಡಿಯುವ ಜನಪದ ಗೀತೆಯ ರಚನೆಯು ಅಳಸಿ ಹೋಗುತ್ತಿದೆ ಎಂದು ಬಸವರಾಜ ಕಲ್ಗುಡಿಯವರು ಹೇಳಿದ್ದಾರೆ.

**ಇ) ಇತರೆ ಸ್ಮಾರಕ ಶಿಲೆಗಳು**

## ೧. ಆತ್ಮ ಬಲಿದಾನದ ಕಲ್ಲುಗಳು

ಮೋಕ್ಷ ಪ್ರಾಪ್ತಿಗಾಗಿ ಆತ್ಮಾರ್ಪಣೆ ಹಾಗೂ ಸ್ವಾಮಿ ನಿಷ್ಠೆಗೋಸ್ಕರ ದೇಹವನ್ನು ಬಲಿ ಕೊಡುವ ಪದ್ಧತಿಯು ಧಾರ್ಮಿಕ ಕಾರಣಗಳಿಗಾಗಿ ಮತ್ತು ಸಾಮಾಜಿಕ ಕಾರಣಗಳಿಗಾಗಿ ಆತ್ಮಬಲಿ ಮಾಡಿಕೊಳ್ಳುತ್ತಿದ್ದರು. ಮೊದಲು ದೇವರ ಹೆಸರಿನಲ್ಲಿ ಮಾಡಿ ಕೊಳ್ಳುತ್ತಿದ್ದ ಆತ್ಮ ಬಲಿದಾನ ನಂತರ ತನ್ನ ಪ್ರೀತಿಯ ವ್ಯಕ್ತಿಗಾಗಿ ಮಾಡಿಕೊಳ್ಳುವವರರೆಗೆ ಸಾಗಿತು, ಪುರುಷವರ್ಗಕ್ಕೆ ಸಂಬಂಧ ಪಟ್ಟ ಕ್ರಮ. ಸ್ತ್ರೀಯರಿಗಾಗಿ ಆತ್ಮರ್ಪಣೆ ಮಾಡಿಕೊಳ್ಳುವ ಕ್ರಿಯೆಗೆ ಮುಂದುವರೆಯಿತು.

ಧಾರ್ಮಿಕ ಕಾರಣಕ್ಕೆಂದರೆ ದೇವರಿಗಾಗಿ ಆತ್ಮ ಬಲಿದಾನ ಮಾಡಿಕೊಳ್ಳುವುದರಿಂದ ಸದ್ಗತಿ ಪ್ರಾಪ್ತಿಯಾಗುತ್ತದೆ ಎಂದು ಒಂದು ವರ್ಗವೇ ನಂಬಿತ್ತು. ಅದರಂತೆಯೆ ಧಾರ್ಮಿಕ ಸಂದರ್ಭಗಳಲ್ಲಿ ಆತ್ಮ ಬಲಿದಾನ ಮಾಡಿಕೊಳ್ಳುತ್ತಿದ್ದರು. ಜೈನ ಧರ್ಮದಲ್ಲಿ ಸಲ್ಲೇಖನ ವ್ರತದಿಂದ ಇಹಲೋಕವನ್ನು ತ್ಯಜಿಸಿ ಆತ್ಮವನ್ನು ಪರಮಾತ್ಮನಲ್ಲಿ ಲೀನವಾಗಿಸಿ ಸದ್ಗತಿಯನ್ನು ಪಡೆಯಬಹುದು ಎಂದು ನಂಬಿದ್ದರು. ಕೆಲವೊಮ್ಮೆ ಯಾವುದೊ ಕಾರಣಕ್ಕೆ ಹರಿಸಿಕೊಂಡ ಹರಕೆ ಈಡೇರಿದಾಗ ಈ ರೀತಿಯ ಬಲಿದಾನಗಳು ನೆಡೆಯುತ್ತಿದ್ದವು. **(ಚಿತ್ರ ಸಂಖ್ಯೆ–೮೮,೮೯,೯೦)** ಭಕ್ತನಾದವನು ತನ್ನ ಆರಾಧ್ಯ ದೈವದ ಬಗ್ಗೆ ತೀವ್ರವಾದ ಭಕ್ತಿ ಭಾವವನ್ನು ಪ್ರದರ್ಶಿಸಿದರೆ ಅವನನ್ನು ವೀರ ಭಕ್ತ ಎಂಬುದಾಗಿ, ಏಕಾಂತದ ರಾಮಯ್ಯನು ತನ್ನ ಶಿವಭಕ್ತಿಯನ್ನು ನಿರೂಪಿಸುವುದಕ್ಕಾಗಿ ತಲೆಯನ್ನು ಕತ್ತರಿಸಿಕೊಂಡು ಮತ್ತೆ ಪ್ರಾಣವನ್ನು ಗಳಿಸಿದ ವೀರಭಕ್ತಿ.

ಸಮಾಜದ ಹಿತ ರಕ್ಷಣೆಯ ದೃಷ್ಠಿಯಿಂದ ತಮ್ಮ ಪ್ರಾಣವನ್ನು ತೃಣಕ್ಕೆ ಸಮಾನವಾಗಿ ತಮ್ಮನ್ನು ತಾವೇ ಅರಸರು / ತಮ್ಮ ಆಶ್ರಯ ದಾತನಿಗೆ ಯಾವುದೇ ಕಾರಣದಿಂದ ಮನಸ್ಸಿಗಾಗಲೀ, ದೇಹಕ್ಕಾಗಲೀ ವೇದನೆಯುಂಟಾದಾಗ ಸೇವಕರು ಆ ವೇದನೆಯನ್ನು, ಕೆಲವು ಸಂಧರ್ಭಗಳಲ್ಲಿ ತನ್ನ ಆಶ್ರಯದಾತನ ಅನ್ನದ ಋಣವನ್ನು ತೀರಿಸಲು ಅವನಿಗೆ ಪುಣ್ಯವಾಗಲಿ ಎಂದು, ಸತ್ತಾಗ ಅಥವಾ ಯುದ್ದದಲ್ಲಿ ಸೋತು ಸತ್ತಾಗ, ಅವರೊಂದಿಗೆ ತಾವು ಸಾಯುವುದು, ರಾಜನಿಗಾಗಿ ಸೇವೆ ಸಲ್ಲಿಸುತ್ತಿದ್ದು, ಯುದ್ದದಲ್ಲಿ ಭಾಗವಹಿಸುತ್ತಿದ್ದರು, ಯುದ್ದಕ್ಕೆ ಹೊರಟರೆ ಅವನಿಗೆ ಜಯವಾಗಲೆಂದು ತಾವು ತಲೆಕೆಡಿಸಿಕೊಳ್ಳುತ್ತಿದ್ದರು.

ವೀರತನದ ಸಂಕೇತವೆಂದೇ ನಂಬಲಾಗುತ್ತಿತ್ತು. ಹೀಗೆ ಸಲ್ಲಿಸಿದ ಸೇವೆಯು ೨೦ ತಲೆಮಾರುಗಳವರೆಗೆ ಕೀರ್ತಿಯೂ ಪರಲೋಕದವರಗೂ ಹರಡುತ್ತದೆ ಎಂಬ ನಂಬಿಕೆಯು ಚಾಲ್ತಿಯಲ್ಲಿತ್ತು. ಸಾಮಾನ್ಯವಾಗಿ ವೇಳಾವಾಳಗಳು, ಲೆಂಕರೂ, ಕೀಳ್ಗುಂಟೆಯಾದವರೂ, ಗರುಡರೂ ಅರಸರ ಆಪ್ತ ರಕ್ಷಕದಳದವರೇ ಆಗಿರುತ್ತಿದ್ದರು.

ಹೊಯ್ಸಳರ ಕಾಲದಲ್ಲಿ ಆತ್ಮಬಲಿ ಮಾಡಿಕೊಳ್ಳುತ್ತಿದ್ದವರನ್ನು ಗರುಡರು ಎಂಬುದಾಗಿ, ವಿಷ್ಣುವಿಗೆ ಗರುಡನಿದ್ದಂತೆ ತಮ್ಮ ಆಶ್ರಿತರಿಗೆ ಸೇವಕರು ಹಾಗೇ ಈ ರೀತಿಯ ಅನೇಕ ಬಂದಿ ಗರುಡರಿದ್ದರೆಂದು ಕುವರ ಲಕ್ಷ್ಮಣನು ಪ್ರಸಿದ್ಧನಾದವನು. ಯಾವ ಕಾರಣಕ್ಕಾದರೂ ಸರಿ ದೇಹವನ್ನು ಬಲಿದಾನ ಮಾಡಿ ಪ್ರಾಣ ತ್ಯಾಗ ಮಾಡಿದವರ ಸ್ಮರಣಾರ್ಥ ಸ್ಥಾಪಿಸಿರುವ ಸ್ಮಾರಕಗಳನ್ನು ಆತ್ಮ ಬಲಿದಾನದ ವೀರಗಲ್ಲುಗಳು ಎಂದೇ ಪರಿಗಣಿಸಲಾಗಿದೆ.

ಜೋಳವಾಟಿ, ವೇಳೆವಾಟಿ, ಲೆಂಕವಾಟಿ – ಜೋಳವು ಒಂದು ರೀತಿಯ ಧಾನ್ಯ. ಕರ್ನಾಟಕದ ಕೆಲವು ಭಾಗಗಳಲ್ಲಂತೂ ಅದೇ ಪ್ರಮುಖವಾದ ಆಹಾರ. 'ಪಾಟಿ' ಎಂದರೆ ಕರ್ತವ್ಯ, ಕ್ರಮ ಅಥವಾ ಕ್ರಮಪಾಲನೆಯ ಧರ್ಮ (ತೆಲುಗು : ಪಾಡಿ, ಸಂಸ್ಕೃತ : ಪಾಲಿ). ಜೋಳವಾಟಿ ಎಂದರೆ ಅನ್ನದ ಕರ್ತವ್ಯ, ಅನ್ನದ ಋಣ ಎಂದರ್ಥ (ಈಗಿನ 'ಉಪ್ಪಿನಹಂಗು' ಇದ್ದಂತೆ). ದೇವರಿಗಾಗಿ ಪ್ರಾಣಾರ್ಪಣೆ ಮಾಡಿಕೊಳ್ಳುವ 'ಧಾರ್ಮಿಕ ಬಲಿದಾನಕ್ಕೆ' ಸಮಾನಾಂತರವಾಗಿ ತಲೆಯೆತ್ತಿದ ವ್ಯಕ್ತಿಗಾಗಿ ಪ್ರಾಣಾರ್ಪಣೆ ಮಾಡಿಕೊಳ್ಳುವ 'ಲೌಕಿಕ ಬಲಿದಾನ'ವು ಪತಿಗಾಗಿ ಪ್ರಿಯಸತಿಯ ಸಹಗಮನ ಮತ್ತು ವ್ಯಕ್ತಿಗಾಗಿ ಪ್ರಿಯ ವ್ಯಕ್ತಿಯ ವೇಳೆವಾಳಿ ಎಂದು ಎರಡು ಕವಲುಗಳಲ್ಲಿ ಬೆಳೆದು ಬಂದಿತು. ಈ ಎರಡರ ಹಿಂದಿರುವ ಉದ್ದೇಶ ಒಂದೇ ಇದ್ದರೂ 'ಸಹಗಮನ' ನಿರ್ದಿಷ್ಟವಾಗಿ ಸತಿ ವರ್ಗಕ್ಕೆ ಮೀಸಲಾಗಿದ್ದರೆ 'ವೇಳೆವಾಳಿ' ಪ್ರಧಾನವಾಗಿ ಪುರುಷವರ್ಗಕ್ಕೆ (ಕೆಲವು ಸಂಧರ್ಭದಲ್ಲಿ ವೇಳೆವಾಡಿಯ ಸತಿ) ಸಂಬಂಧಪಟ್ಟಿರುತ್ತದೆ. ಸಾಮಾನ್ಯವಾಗಿ ಮೇಲೆ ಹೇಳಿದ ಧಾರ್ಮಿಕ 'ಪುರೋಹಿತ ವರ್ಗ' ಯೋಜಿಸಿದ ಶೋಷಣೆಯಾದರೆ, ಇಲ್ಲಿ ಸಹಗಮನವು 'ಪುರುಷವರ್ಗ' ಯೋಜಿಸಿದ, ವೇಳೆವಾಳಿಯು 'ಪ್ರಭುವರ್ಗ' ಯೋಜಿಸಿದ ಶೋಷಣೆಗಳೇ ಸರಿ.

ರಾಜನನ್ನು ಕಾಪಾಡುವ ಸ್ವಾಮಿ ನಿಷ್ಠೆಯಿಂದಾಗಿ ರಾಜನಿಗಾಗಿ ಸ್ವತಃ ಪ್ರಾಣಾರ್ಪಣೆ ಮಾಡಿಕೊಳ್ಳವ ಪರಂಪರೆ ಪ್ರಾರಂಭವಾಗಿ ಮುಂದೆ ವೇಳೆವಾಳಿ, ಜೋಳವಾಳಿ, ಲಿಂಕವಾಳಿ, ಗರುಡ ಸಮೂಹಗಳ ಉದಯಕ್ಕೆ ಕಾರಣವಾಯಿತು. ಈ ಕೂಸರು ಕೂಡ ಇತರ ವೀರರಂತೆ ಸ್ವಾಮಿನಿಷ್ಠ ಅಣುಗರಾಗಿ ಹೊಯ್ಸಳ ಅರಸರ ಸೇವೆ ಮಾಡಿದ್ದಾರೆ. ಅನ್ನದ ಋಣಕ್ಕಾಗಿ ಪ್ರಾಣ ನೀಡುತ್ತಿದ್ದರು. ಒಡೆಯನಿಗಾಗಿ ಪ್ರಾಣವನ್ನು ಮುಡಿಪಿಟ್ಟ ಈ ವ್ಯಕ್ತಿಗಳಿಗೆ ಬಳಕೆಯಾದ ಇನ್ನೊಂದು ಪದ ಕೀಳ್ಗುಂಟೆ.

ಕೀಲ್ಗಿಂತೆಯಾದರು ಎಂದರೆ ತನ್ನ ಒಡೆಯನ ಚಿತೆಯ ಕೆಳಗೆ ಅಥವಾ ಸಮಾಧಿಯ ಕೆಳಗೆ ಹೂಳಲ್ಪಟ್ಟವನು. "ರಾಜನ ವೇಳೆ+ಪಾಟಿ" ಎಂದರೆ ರಾಜನ ಸಾವಿನ ಸಮಯದಲ್ಲಿ ತಮ್ಮ ಕರ್ತವ್ಯವನ್ನು ನಡೆಸುವವನು ಎಂದರ್ಥ. ಇವರು ಒಡೆಯನಿಗಾಗಿ ಹುದುಗಿಸಿಕೊಂಡರೆ ಕೀಲ್ಗುಂಟೆ, ಸುಡಿಸಿಕೊಂಡರೆ ವೇಳವಾಳ ಎಂದು ಮೂಲದಲ್ಲಿ ಅರ್ಥವಿದ್ದಿತೆಂದು ಹೇಳಬಹುದೇನೋ. ವೇಳವಾಳ ಮರಣವನ್ನು ಈ ರೀತಿ ವಿಭಾಗಿಸಬಹುದು. ಬಲಿದಾನ ಪ್ರಸಂಗ (ಒಡೆಯನ ಶುಭ ಪ್ರಸಂಗ, ಒಡೆಯನ ಮರಣ ಪ್ರಸಂಗ, ಒಡೆಯನ ಯುದ್ಧ ಪ್ರಸಂಗ'. 'ಸಿಡಿತಲೆ – ತನ್ನನ್ನು ಪೋಷಿಸಿರುವ ಒಡೆಯನಿಗೆ ಪುತ್ರ ಸಂತಾನವಾದರೆ ತಾನು ಬಲಿಯಾಗುವುದಾಗಿ ಹರಸಿಕೊಳ್ಳುತ್ತಿದ್ದ ಸಂಪ್ರದಾಯವೊಂದಿತ್ತು. ಅವನು ಹರಕೆಯ ಪ್ರಕಾರ ಸಿಡಿತಲೆಯನ್ನು ಕೊಡುತ್ತಾನೆ. ಕೊಡುವ ವಿಧಾನದ ರೀತಿಯೆಂದರೆ :– ತಲೆಯನ್ನು ಕೊಡಬೇಕಾದ ವ್ಯಕ್ತಿ ಧ್ಯಾನ ಭಂಗಿಯಲ್ಲಿ ಕುಳಿತುಕೊಳ್ಳುತ್ತಾನೆ. ಅವನ ಜುಟ್ಟಿಗೆ ನೆಲದಲ್ಲಿ ಹೂಳಿದ ಗಳುವೊಂದನ್ನು ಬಾಗಿಸಿಕಟ್ಟುತ್ತಾರೆ ಅವನ ತಲೆಯನ್ನು ಇನ್ನೊಬ್ಬನು ಕತ್ತಿಯಿಂದ ಹಾರಿಸಿದಾಗ ತಲೆಯು ಮೇಲಕ್ಕೆ ಚಂಗನೆ ಸಿಡಿಯುತ್ತದೆ

ದೊಡ್ಡಬೆಳವಂಗಲ ಹೋಬಳಿಯ ಅಕ್ಕತಮ್ಮನಹಳ್ಳಿಯ ಸಿದ್ದಲಿಂಗಯ್ಯನವರ ಹೊಲದಲ್ಲಿರುವ ೧೫ ಸಾಲುಗಳ ಶಾಸನದಲ್ಲಿ ವೇಳೆವಾಳಿಯೊಬ್ಬ ಆತ್ಮಾಹುತಿ ಮಾಡಿ ಕೊಣ್ಡದನ್ನು ಉಲ್ಲೇಖಿಸುತ್ತದೆ. ವೇಳೆವಾಳಿಯ ಹೆಸರಿನ ಭಾಗದ ಪಾಠ ಅಸ್ಪಷ್ಟ, ಅ ವೆಳೇವಾಡಿ ಕುಟುಂಬಕ್ಕೆ ೫ ಖಂಡುಗ ಬೆಳೆ ಬರುವ ಗದ್ದೆಯನ್ನು ದಾನ ನೀಡಿರುವುದನ್ನು, ಕಾಲ ೯೮೦ ರ ವಿಷ್ಣು ಸಂವತ್ಸರದ ನವೆಂಬರ್ ೨೭ ಭಾನುವಾರಕ್ಕೆ ಗಂಗರ ೮ನೇ ರಾಚಮಲ್ಲನು ರಾಜ್ಯವಾಳುತ್ತಿದ್ದನು[೫೯]. ಬಹುಶಃ ಶಾಸನದ ವೇಳೆವಾಳಿಯು ರಾಚಮಲ್ಲನ ವೇಳೆವಾಳಿಯಾಗಿರಬೇಕು. ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರದ ಸೋಮೇಶ್ವರ ದೇವಾಲಯದ ಮುಂಭಾಗದಲ್ಲಿ **(ಚಿತ್ರ ಸಂಖ್ಯೆ–೫೧)** ಒಂದು ಬಲಿದಾನದ ಕಲ್ಲಿನಲ್ಲಿ ಒಬ್ಬ ಸ್ತ್ರೀಯು ದೇಹ ತ್ಯಾಗಕ್ಕೆ ಸಿದ್ಧಳಾಗಿ ಕುಳಿತಿದ್ದು ಅವಳ ತಲೆ ಕೂದಲನ್ನು ಬಾಗಿಸಿರುವ ಮರಕ್ಕೆ ಕಟ್ಟಿದ್ದಾರೆ. ಇವಳು ತಲೆಗೆ ಪಟ್ಟಿ ಕಟ್ಟಿಕೊಂಡಿದ್ದಾಳೆ. ಕರ್ಣಕುಂಡಲ, ಕಂಠಿಕೆ, ಹಾರ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ. ಬಲಭಾಗದಲ್ಲಿ ವ್ಯಕ್ತಿಯು ಅವಳ ತಲೆಯನ್ನು ಕಡಿಯಲು ಮಚ್ಚನ್ನು ಹಿಡಿದು ನಿಂತಿದ್ದಾನೆ. ಇಲ್ಲಿ ತಲೆ ಕಡಿದ ನಂತರ ಬಾಗಿದ ಮರವು ತಲೆಯನ್ನು ಮೇಲಕ್ಕೆ ತೆಗೆದುಕೊಂಡು ಹೋಗುತ್ತದೆ. ಈ ರೀತಿಯ ಸ್ಮಾರಕಗಳನ್ನು 'ಸಿಡಿತಲೆ' ಎಂದು ಕರೆಯುತ್ತಾರೆ. ಮರಣವನ್ನಪ್ಪಿದ ಸ್ತ್ರೀಯನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವುದನ್ನು ಚಿತ್ರಿಸಲಾಗಿದೆ.

[೫೯] ಸಾಸಲು ಜೆ.ವಿಶ್ವನಾಥ ಮತ್ತು ಎಂ.ಜಿ. ಮಂಜುನಾಥ್, ಐದು ಅಪ್ರಕಟಿತ ಶಾಸನಗಳು, ಇ.ದ.ಸಂ-೧೩. ಪು.ಸಂ-೩೧.

ಇಲ್ಲಿಯೆ ಇರುವ ಮತ್ತೊಂದು ಸ್ಮಾರಕದಲ್ಲಿ **(ಚಿತ್ರ ಸಂಖ್ಯೆ–೫೨)**ವೀರನು ಆಲೀಢ ಭಂಗಿಯಲ್ಲಿ ನಿಂತಿದ್ದು ತುರುಬನ್ನು ಹಾಕಿಕೊಂಡಿದ್ದು, ಕರ್ಣಕುಂಡಲಗಳನ್ನು ಧರಿಸಿದ್ದಾನೆ, ವೀರಗಟ್ಟೆಯನ್ನು ಹಾಕಿರುವ ಇವನು ಸೊಂಟದಲ್ಲಿ ಮಚ್ಚನ್ನು ಇರಿಸಿದ್ದಾನೆ. ಬಲಗೈಯಲ್ಲಿ ಒಂದು ಕತ್ತಿಯನ್ನು ಎದೆ ಮಟ್ಟಕ್ಕೆ ಹಿಡಿದಿದ್ದಾನೆ. ಎಡಗೈಯಲ್ಲಿ ಒಂದು ಹಣ್ಣಿನ ರೀತಿಯ ವಸ್ತುವನ್ನು ಹಿಡಿದಿದ್ದಾನೆ. ಇವನ ಪಾದದ ಬಳಿ ಒಬ್ಬ ವ್ಯಕ್ತಿಯು ಪದ್ಮಾಸನದಲ್ಲಿ ಕುಳಿತಿದ್ದು ಅವನು ತನ್ನ ಬಲಗೈಯಲ್ಲಿ ಕತ್ತಿಯನ್ನು ತೆಗೆದುಕೊಂಡು ಕತ್ತಿಗೆ ಚುಚ್ಚಿಕೊಳ್ಳುತ್ತಿರುವಂತೆ ತೋರಿಸಲಾಗಿದೆ. ಇಲ್ಲಿ ಸ್ವಯಂ ತಾನಾಗಿಯೆ ಕತ್ತನ್ನು ಕತ್ತರಿಸಿಕೊಂಡು ಪ್ರಾಣ ತ್ಯಾಗ ಮಾಡಲು ಮುಂದಾಗಿರುವುದನ್ನು ಕಾಣಬಹುದು. ಮೇಲ್ಭಾಗದಲ್ಲಿ ಮರಣವನ್ನಪ್ಪಿದ ಇವನನ್ನು ಅಪ್ಸರೆಯರು ಕರೆದುಕೊಂಡು ಹೋಗುತ್ತಿರುವುದನ್ನು ಚಿಕ್ಕದಾಗಿ ತೋರಿಸಲಾಗಿದೆ. ಇಲ್ಲಿ ಆಲೀಢ ಭಂಗಿಯಲ್ಲಿ ನಿಂತಿರುವ ವ್ಯಕ್ತಿಯು ಬಲಿದಾನ ಮಾಡಿಕೊಳ್ಳಲು ನಿರ್ದೇಶನ ನೀಡುತ್ತಿರುವಂತಿದೆ.

ಇದೇ ತಾಲ್ಲೂಕಿನ ನಂದಗುಡಿ ಹೋಬಳಿ ಸಿದ್ಧನಹಳ್ಳಿಯ ಬೀದಿಹಾಗನೂರು ಸೊಣ್ಣಪ್ಪನವರ ಹೊಲದಲ್ಲಿನ ಶಾಸನೋಕ್ತ ವೀರಗಲ್ಲುವಿನಲ್ಲಿ ವೀರನು ತಲೆಕೂದಲನ್ನು ದಪ್ಪದಾಗಿ ಗಂಟುಹಾಕಿರುವ ತುರುಬು, ಕಿವಿಯಲ್ಲಿ ಕರ್ಣಕುಂಡಲಗಳು, ಕಂಠಿಕೆ, ಹಸ್ತಕಟಕ ಮುಂತಾದ ಆಭರಣಗಳನ್ನು ಧರಿಸಿದ್ದಾನೆ. ಮೀಸೆಯನ್ನು ಹೊಂದಿರುವ ಇವನು ತನ್ನ ಎರಡೂ ಕೈಗಳಿಂದ ಕತ್ತಿಯನ್ನು ಹಿಡಿದುಕೊಂಡು ಹೊಟ್ಟೆಯ ಭಾಗದಲ್ಲಿ ಕತ್ತರಿಸಿ ಕೊಳ್ಳುತ್ತಿರುವಂತೆ ತೋರಿಸಲಾಗಿದೆ. ಅಪ್ಸರೆಯರು ವೀರನನ್ನು ಕರೆದುಕೊಂಡು ಹೋಗುತ್ತಿರುವ ದೃಶ್ಯವನ್ನು ಇಲ್ಲಿ ಬಿಡಿಸಲಾಗಿಲ್ಲ. ಒಟ್ಟಾರೆಯಾಗಿ ಜಿಲ್ಲೆಯಲ್ಲಿ ದೊರೆತಿರುವ ಆತ್ಮ ಬಲಿದಾನದ ಕಲ್ಲುಗಳನ್ನು ಇತರೆ ವೀರಗಲ್ಲುಗಳಂತೆ ಪೂಜಿಸದೆ ಇರುವುದು ವಿಶೇಷವಾಗಿದೆ. ಆತ್ಮ ಬಲಿದಾನದ ಕಾರಣಗಳು ಸರಿಯಾಗಿ ತಿಳಿಯದಂತಾಗಿದೆ.

## ೨. ನಿಸಿದಿ ಕಲ್ಲುಗಳು

ಅನಾರೋಗ್ಯ, ಅಪಾಯಗಳೊದಗಿ ಇನ್ನೇನು ಬದುಕಲಾರೆನೆಂದು ನಿಶ್ಚಯವಾದ ಪ್ರಸಂಗದಲ್ಲಿ ಮಾತ್ರ ಸಲೇಖನ ವ್ರತವನ್ನು ಹಿಡಿಯಬೇಕು. ಕರ್ಮಕ್ಷಯಗೊಳಿಸಿ ಕೊಳ್ಳುವುದೇ ವ್ರತದ ಉದ್ದೇಶವಾದುದರಿಂದ ಶ್ರಾವಕರಂತೆ ಶ್ರಾವಿಕರೂ ಸನ್ಯಾಸಿಗಳಂತೆ ಕಂತಿಯರೂ ಇದನ್ನು ಅನುಸರಿಸುತ್ತಾರೆ. ಹೀಗೆ ವ್ರತಹಿಡಿದು ಸಾವನ್ನಪ್ಪಿದವರ ಸ್ಮಾರಕವಾಗಿ ನಿಲ್ಲಿಸಿದವುಗಳೇ ನಿಷಿಧಿ ಶಿಲೆಗಳು[೬೦]. ವಡ್ಡಾರಾಧನೆ, ಸಮಯ ಪರೀಕ್ಷೆ ಕೃತಿಗಳಲ್ಲಿ ನಿಷಿಧಿಯ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

[೬೦] ಎಂ.ಎಂ. ಕಲಬುರ್ಗಿ, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು.ಸಂ-೮.

ಸನ್ಯಸನ ವಿಧಿಯಿಂದ ಮಡಿದವರ ಸ್ಮಾರಕವಾಗಿ ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇವುಗಳನ್ನು 'ನಿಸಿದಿಗಲ್ಲು'ಗಳೆಂದು ಕರೆಯುತ್ತಾರೆ. ತೀರ್ಥಂಕರನ ವಿಗ್ರಹದ ಪಕ್ಕದಲ್ಲಿ ವ್ರತ ಭೋದಿಸುವ ಮುನಿ/ಗುರು ಕುಳಿತಿರುವ ಶಿಲ್ಪವನ್ನು ನಿಸಿದಿಗಲ್ಲುಗಳಲ್ಲಿ ಕಾಣಬಹುದು. ಇವುಗಳು ಬಸದಿಗಳ ಮುಂದಿನ ಪ್ರತ್ಯೇಕ ಶಿಲಾಫಲಕಗಳಲ್ಲಿ ಬಸದಿಯ ಕಂಬಗಳ ಮೇಲೆ, ಊರ ಹೊರಗಿನ ಹೊಲಗಳಲ್ಲಿ ನೆಟ್ಟ ಕಲ್ಲುಗಳಲ್ಲಿ, ಬಂಡೆಗಳ ಮೇಲೆ ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಸನ್ಯಸನದ ವಿಷಯವನ್ನು ಮಾತ್ರ ಹೇಳಿರಬಹುದು, ಅಥವಾ ಅದರ ಜೊತೆಗೆ ಸನ್ಯಸನವನ್ನು ಸ್ವೀಕರಿಸಿದ ವ್ಯಕ್ತಿಯ ಚಿತ್ರವೂ ಇರಬಹುದು.

ನಿಷಿಧಿ ಮರಣ ಧಾರ್ಮಿಕ ಆಚರಣೆಯಾಗಿ ಜೈನರಲ್ಲಿ ಇನ್ನು ಬಳಕೆಯಲ್ಲಿದೆ. ಸಾಮಾಜಿಕ ಮೌಲ್ಯವಾದ ವೀರಮರಣ ಮಾತ್ರ 'ಸ್ವಾಮಿಭಕ್ತಿ' ಸ್ವರೂಪ ಬದಲಿಸಿಕೊಂಡು 'ರಾಷ್ಟ್ರಭಕ್ತಿ' ಸ್ವರೂಪದಲ್ಲಿ ಇನ್ನೂ ಜರುಗುತ್ತಲಿದೆ. ಆದರೆ ಒಂದು ಕಾಲದಲ್ಲಿ ಮಹಾ ಮೌಲ್ಯವಾಗಿದ್ದ ಹಿಂದೂ ಬಲಿದಾನ ಮರಣ ವರ್ಗದ ಧಾರ್ಮಿಕ ಮರಣ, ಸಹಗಮನ ಮರಣ, ವೇಳವಾಳಿ ಮರಣಗಳನ್ನು ಕಾನೂನು ಬದ್ಧವಾಗಿ ನಿಲ್ಲಿಸಲಾಗಿದೆ.

ಮೂಲತಃ ನಿಷಿಧಿ ನಿರ್ಮಾಣವಾಗುವುದು ವ್ರತ ಹಿಡಿದ ಸ್ಥಳದಲ್ಲಿಯೋ, ವ್ರತಧಾರಿಯನ್ನು ಸಹಿಸದ ಸ್ಥಳದಲ್ಲಿಯೋ ಎಂಬ ಸಂದೇಹವಿರುವಾಗ ಈ ಎರಡನ್ನು ಬಿಟ್ಟು ಬೇರೊಂದು ಸ್ಥಳದಲ್ಲಿಯೋ ನಿಲ್ಲಿಸಬಹುದೆಂಬ ಸೂಚನೆಗಳು ದೊರೆಯುತ್ತದೆ. ಗಂಗ ಮಾರಸಿಂಹನು ಬಂಕಾಪುರದಲ್ಲಿ ಮಡಿದರೂ ಬೆಳ್ಗೊಳದಲ್ಲಿ ನಿಷಿದ್ಧಿ ಶಿಲೆಗಳು ಇರುವುದಕ್ಕೆ ಸ್ಥಳ ಪಾವಿತ್ರ್ಯವೇ ಕಾರಣವಾಗಿರಬೇಕು. ಶ್ರವಣಬೆಳ್ಗೊಳವೊಂದರಲ್ಲಿ ೧೦೮ ನಿಷಿಧ ಶಾಸನಗಳಲ್ಲಿ ಸುಮಾರು ೨೨ ಶಾಸನಗಳು, ಮುನಿಗಳ, ಗುರುಗಳ ಮರಣವನ್ನು, ಸುಮಾರು ೧೦ ಶಾಸನಗಳು ಅರಸರ, ಮಂತ್ರಿಗಳ ಮರಣವನ್ನು, ಸುಮಾರು ೯ ಶಾಸನಗಳು ಸಾಮಾನ್ಯರ ಮರಣಗಳನ್ನು, ಸ್ತ್ರೀಯರಿಗೆ ಸಂಬಂಧಿಸಿದ ಶಾಸನಗಳಲ್ಲಿ ಸುಮಾರು ೪ ಶಾಸನಗಳು ರಾಜ ಪರಿವಾರದ ಸ್ತ್ರೀಯರ ಇನ್ನುಳಿದ ೭ ಶಾಸನಗಳು ಸಾಮಾನ್ಯ ಸ್ತ್ರೀಯರ ಮರಣವನ್ನು ಗಮನಿಸಿದರೆ ಪ್ರಜಾ ಪರಿವಾರದವವರಿಗಿಂತ ರಾಜಪರಿವಾರದವರ ನಿಷಿಧಿ ಶಾಸನಗಳು ಹೆಚ್ಚು[೬೧] ವೀರಗಲ್ಲುಗಳು, ಮಾಸ್ತಿಗಲ್ಲುಗಳು ಸಂಪೂರ್ಣವಾಗಿ ಲೌಕಿಕ ಮರಣದ ಸ್ಮಾರಕಗಳಾದರೆ, ನಿಷಿಧಿ ಕಲ್ಲುಗಳು ಧಾರ್ಮಿಕ ಮರಣದ ಸ್ಮಾರಕವಾಗಿದೆ.

[೬೧] ಎಂ.ಎಂ. ಕಲಬುರ್ಗಿ, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು.ಸಂ-೮ & ೯.

ಪ್ರಾಚೀನ ಕಾಲದಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದವರು ಜೈನ ಧರ್ಮೀಯರು. ನಿಸಿದಿ ಶಾಸನಗಳಲ್ಲಿ ವ್ರತಧಾರಿಯ ಸನಿಹದಲ್ಲಿ ಆರಾಧನಾ ಗ್ರಂಥಗಳಂತಹ ಜೈನ ಶಾಸ್ತ್ರಗ್ರಂಥಗಳನ್ನು ಇಟ್ಟುಕೊಂಡಿರುವ ಶಿಲ್ಪಗಳು ಇರುವುದನ್ನು ಗಮನಿಸಬಹುದು. ಆದ್ದರಿಂದ ನಾಗಾರ್ಜುನಯ್ಯ ಮತ್ತು ದಿಂಬಿಕಬ್ಬೆಯರ ಮಗಳಾದ ಸರ್ವಶಾಸ್ತ್ರ ಪ್ರಸಿದ್ಧೆಯಾದ ಸಾವಿನಿರ್ಮ್ಮಡಿಯು ಸ್ವತಃ ತಾನೇ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾಧಿಮರಣ ಪಡೆದಿರಬಹುದೆಂದು ತೋರುತ್ತದೆ. ಅವಳು ಮುಡಿಪಿದ ಸ್ಥಳದಲ್ಲಿ ಆ ಶಾಸನೋಕ್ತ ಸ್ಮಾರಕವನ್ನು ನಿರ್ಮಿಸಿರಬಹುದೆಂದು ತೋರುತ್ತದೆ.

ಈ ಶಾಸನಗಳ ಭಾಷೆ ಯವುದೇ ರೀತಿಯ ಕಠಿಣ ಶಬ್ದಗಳಂದ ಕೂಡಿಲ್ಲ ಹಾಗೂ ನೇರವಾಗಿ ವಿಷಯವನ್ನು ನಿರೂಪಣೆ ಮಾಡುವ ಶೈಲಿಯಲ್ಲಿದ್ದು ಸಮಾಧಿಮರಣ ಹೊಂದಿದವರು ಯಾರ ಶಿಷ್ಯರು ಎಂಬುದನ್ನು ಮಾತ್ರವೇ ದಾಖಲಿಸಿ ಅವರು ಅಲ್ಲಿ ತಮ್ಮ ಕರ್ಮವನ್ನು ಕ್ಷಯಿಸಿಕೊಂಡರು (ಮುಡಿಪಿದರು) ಎಂದು ಮಾತ್ರವೇ ಹೇಳುತ್ತದೆ.

ಭದ್ರಮಸ್ತು ಜಿನಶಾಸನಸ್ಯ ಶ್ರೀ ದೇವೇನ್ದ್ರ ಪಣ್ಡಿತ ಭಟಾರರ ಷಿಷ್ಯಿತ್ತಿಯರ್ ಮಾರಬ್ಬೆ ಕನ್ತಿಯ ಸನ್ಯಾಸ ನಜ್ಗೆಯ್ದು ಕಲಿಜ್ಗಬ್ಬೆಕನ್ತಿಯಾ ನಿಸಿತಿಗೆ ಮಾಡಿಸಿದಳ್[೬೨]. ಮಾರಸಿಂಹನ ಆಳ್ವಕೆಯಲ್ಲಿ ಪಿಟಿಲಬ್ಬೆ ಎಂಬ ಹೆಂಗಸು ಅಸುನೀಗಿರಬೇಕು ಅದಕ್ಕೆ ಯಾರೋ ನಿಶಿಧಿ ಹಾಕಿಸಿರಬೇಕು[೬೩].

ಈ ಮೇಲಿನ ಸ್ಮಾರಕಶಿಲೆಗಳಲ್ಲದೆ ಹಾವಿನೊಂದಿಗೆ ಹೋರಾಡಿ ಮಡಿದ ವೀರಗಲ್ಲು ಚನ್ನಾಪುರದ ಊರ ನಡುವಿನ ಅಶ್ವಥಕಟ್ಟೆಯ ಬಳಿಯಲ್ಲಿ ಹಾವನ್ನು ಭೇಟೆಯಾಡಲು ಹೋಗಿ ಅದರಿಂದ ಮಡಿದ ವಿಷಯವನ್ನು ತಿಳಸುವ ಶಿಲ್ಪದಲ್ಲಿ ವೀರನು ತನ್ನ ಬಲಗೈಯಲ್ಲಿ ಆಯುಧವನ್ನು (ಮಚ್ಚು) ಮೇಲೆತ್ತಿದ್ದರೆ, ಎಡಗೈ ಸೊಂಟದ ಮೇಲಿದೆ. ಅವನ ಎಡಕ್ಕೆ ನಾಗರ ಕಲ್ಲಿನ ಮೇಲಿರುವ ಹೆಡೆ ಬಿಚ್ಚಿದ ಹಾವನ್ನು ಕೆತ್ತರುವುದು. ತಲೆಯ ಮೇಲೆ ಸೂರ್ಯ, ಚಂದ್ರ, ಕಾಲಿನ ನಡುವೆ ಪುಷ್ಪವೊಂದನ್ನು ಬಿಡಿಸಲಾಗಿದೆ.

ವೀರನ ಆಯುಧಗಳನ್ನು ಗಮನಿಸಿದರೆ, ವಿವಿಧ ರೀತಿಯ ಗುರಾಣಿಗಳು ವೀರಗಲ್ಲುಗಳಲ್ಲಿ ಕಂಡು ಬರುತ್ತವೆ. ಗಂಗ, ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಲ್ಲಿ ವಿಶೇಷವಾಗಿ ಆಯತಾಕಾರದ ಗುರಾಣಿಗಳು ಕಂಡು ಬರುತ್ತವೆ. ಇದರ ಮೇಲ್ಭಾಗದಲ್ಲಿ ಅಲಂಕಾರಗಳನ್ನೂ ಎಡದ ಕೈಗೆ ಅದನ್ನು ಸಿಕ್ಕಿಸಿಕೊಳ್ಳಲು ಪಟ್ಟಿಗೆಗಳನ್ನು ಮಾಡಿರುತ್ತಿದ್ದರು. 'ಆಯುಧಗಳು ಖಡ್ಗ, ಕಠಾರಿ–ಕಟಾರಿ, ಭರ್ಜಿ, ಆಕು, ಸಬಳ (ಈಟಿಯಂತ ಆಯುಧ), ಕೊನ್ತ, ಬಿಲ್ಲು–ಬಾಣ, ಸುರಿಗೆ (ಸಲಾಕೆಯಂತೆ ಇದ್ದು ಕೊನೆಯಲ್ಲಿ

[೬೨] ಎ.ಕ-೯, ನೆ.ತಾ.೧೭೫, ಮಣ್ಣೆ.
[೬೩] ಡಾ.ಹೆಚ್.ಎಸ್. ಗೋಪಾಲರಾವ್ :- ಮಣ್ಣೆಯಲ್ಲಿ ಇತ್ತೀಚಿನ ಶೋಧಗಳು, ಇ.ದ.ಸಂ.೧೫, ಪು.ಸಂ-೩೬.

ಚೂಪಾಗಿ ಇರುವ ತಳದಲ್ಲಿ ಹಿಡಿಯಿರುವ ಆಯುಧ, ಹೆಚ್ಚಾಗಿ ಬೇಟೆಯಲ್ಲಿ) **ಖಡ್ಗ** – ಆಕ್ರಮಣಕಾರಿ ಆಯುಧಗಳಲ್ಲಿ ಪ್ರಧಾನವಾದ ಪಾತ್ರವಹಿಸಿದ ಆಯುಧವೆಂದರೆ ಖಡ್ಗ. ಈ ಕಾರಣದಿಂದಲೇ ಖಡ್ಗಗಳು ವೀರನಾದವನಿಗೆ ದೈವದತ್ತವಾದದ್ದು ಎಂಬ ಹಲವಾರು ಐತಿಹ್ಯಗಳು ಸೃಷ್ಟಿಯಗಿರುವುದನ್ನು ಗಮನಿಸಬಹುದಾಗಿದೆ. ವೀರಗಲ್ಲುಗಳಲ್ಲಿ ಖಡ್ಗವನ್ನು ಕಡಿತಲೆ, ಖಡ್ಗ, ಕರವಾಳ್, ಬಾಳ್(ವಾಳ್), ಖಂಡೆಯ ಮುಂತಾದ ಹೆಸರುಗಳಂದ ಕರೆಯಲಾಗಿದೆ. ಈ ರೀತಿಯ ಪರ್ಯಾಯ ಪದಗಳು ಹುಟ್ಟಲು ಬಹುಶಃ ಅವುಗಳಲ್ಲಿನ ಆಕಾರ ವ್ಯತ್ಯಾಸವೇ ಕಾರಣವಿರಬಹುದು. ಕತ್ತಿಯ ಆಕಾರವು ವೀರಗಲ್ಲುಗಳ ಶಿಲ್ಪದಲ್ಲಿ ಹಲವು ರೀತಿಯಲ್ಲಿ ಬಂದಿರುವುದನ್ನು ಗಮನಿಸಬಹುದು. **ಕಠಾರಿ(ಕಟಾರಿ)** – ಇದು ಕತ್ತಿಗಿಂತಲೂ ಚಿಕ್ಕದಾದದ್ದು. ಇದನ್ನು ಇರಿಯುವುದಕ್ಕಾಗಿ ಉಪಯೋಗಿಸುತ್ತಿದ್ದರು. ಗಂಗರ ಕಾಲದ ವೀರಗಲ್ಲುಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ಗಮನಿಸಬಹುದು. ಗುರಾಣಿ – ಶತ್ರುಗಳ ಅಸ್ತ್ರಗಳಂದ ಆಗುವ ಪೆಟ್ಟನ್ನು ತಪ್ಪಿಸಿಕೊಳ್ಳುವ ಸಲುವಾಗಿ ಉಪಯೋಗಿಸುತ್ತಿದ್ದ ರಕ್ಷಣಾಯುಧವೇ ಗುರಾಣಿ.

ಒಟ್ಟಾರೆಯಾಗಿ ಗಂಗರು, ನೊಳಂಬರು, ಹೊಯ್ಸಳ, ವಿಜಯನಗರ ಅರಸರು ತಮ್ಮ ಸ್ಮಾರಕ ಶಿಲೆಗಳ ಶಿಲ್ಪಗಳಲ್ಲಿ ಯಾರನ್ನು ಅನುಕರಿಸದೆ ತಮ್ಮದೆ ಆದ ಶೈಲಿಯಲ್ಲಿ ಶಿಲ್ಪಗಳನ್ನು ರಚಿಸಿದ್ದಾರೆ. ಕಲ್ಲಿನ ಅಳತೆ ಹಾಗೂ ಶಿಲ್ಪದ ಕೆತ್ತನೆಯಲ್ಲಿ ಇವರು ಯಾವುದೆ ಮಾನದಂಡವನ್ನು ಬಳಸಿದಂತಿಲ್ಲ. ಇವರು ಬಳಸಿರುವ ಕಲ್ಲಿನಿಂದಲೂ ಸಹ ಇವರು ಯಾರ ಪ್ರಭಾವಕ್ಕೂ ಇಲ್ಲಿ ಒಳಗಾಗಿಲ್ಲ ಎಂಬುದು ಗೊತ್ತಾಗುತ್ತದೆ. ಪ್ರದೇಶಕ್ಕೆ ಅನುಗುಣವಾಗಿಯೂ ಕಲ್ಲುಗಳನ್ನು ಸಹ ಬದಲಿಸಲು ಹೋಗಿಲ್ಲ. ಎಲ್ಲಾ ಕಡೆ ಒಂದೆ ಮಾಧ್ಯಮವನ್ನು ಬಳಸಿದ್ದಾರೆ. ವೀರಗಲ್ಲುಗಳಲ್ಲಿನ ಶಿಲ್ಪವು ಬಹುತೇಕವಾಗಿ ಒಂದೇ ರೀತಿ ಕೂಡಿದ್ದರೂ ಶಿಲ್ಪಿಯ ಕಲಾ ನಿಪುಣತೆಯ ಮೇಲೆ ಒಂದೊಂದು ಸಹ ವಿಶಿಷ್ಟವಾಗಿ ಮೂಡಿ ಬಂದಿವೆ. ದೇಹವನ್ನು ಸುಂದರವಾಗಿ ಬಿಡಿಸಿದ್ದರೂ ಸಹ ಕೈಗಳ ರಚನೆಯಲ್ಲಿ ತಲೆ ಕೆಡಿಸಿಕೊಂಡಿರುವಂತೆ ಇಲ್ಲ. ಏಕೆಂದರೆ ಇವರ ಶಿಲ್ಪಗಳಲ್ಲಿ ಕೈಗಳನ್ನು ಬಹುತೇಕ ಅಂಚಿನ ಭಾಗಕ್ಕೆ ಸರಿಯಾಗಿ ಬಿಡಿಸಿರುತ್ತಾರೆ. ಆದ್ದರಿಂದ ಹಸ್ತಗಳು ಚಿಕ್ಕದಾಗಿರುವುದರ ಜೊತೆಗೆ ಆಯುಧಗಳು ಸಹ ಚಿಕ್ಕದಾಗಿ ಅಂಕುಡೊಂಕಾಗಿರುತ್ತವೆ. ಆದ್ದರಿಂದ ಕೆಲವೊಂದು ವೀರಗಲ್ಲುಗಳು ಈ ಕ್ಷೇತ್ರದಲ್ಲಿ ಯಾರೂ ಮೀರಿಸಲು ಸಾಧ್ಯವಾಗದಷ್ಟು ಸುಂದರವಾಗಿ ಮೂಡಿವೆ. ಗಂಗರ ಸಾಮಂತರು ವೀರಗಲ್ಲುಗಳ ಕೆತ್ತನೆಯಲ್ಲಿ ಅವರನ್ನು ಅನುಕರಿಸಿರುವುದು ವಿಶೇಷ.

ಜನರಲ್ಲಿ ಶಾಸನದಲ್ಲಿ ಏನಿದೆಯೆಂದು ತಿಳಯದೇ ಇರುವುದು, ಶಾಸನಗಳನ್ನು ಓದುವಲ್ಲಿ, ಅರ್ಥೈಸುವಲ್ಲಿ ಕೊರತೆಯಿಂದಾಗಿ ಐತಿಹ್ಯ, ದಂತ ಕಥೆಗಳು ಹುಟ್ಟುಕೊಂಡವು. ಆಸಕ್ತಿಗಿಂತಲೂ ಭಯ

ಭಕ್ತಿನೇ ಜಾಸ್ತಿ, ಶಾಸನ ಓದಿದರೆ ರಕ್ತಕಾರಿ ಸಾಯುತ್ತಾರೆ. ತಲೆ ಕೆಲಗೆ ಮಾಡಿ ಅಮಾವಾಸ್ಯೆ ರಾತ್ರಿಯನ್ನು ಓದಿದರೆ ಅಪ್ಯೆಚಾಚಿಕ ಭಾಷೆ ಅರ್ಥವಾಗುತ್ತದೆ. ನಂತರ ೭ ಕೊಪ್ಪರಿಗೆ ಹಣ ಸಿಗುತ್ತದೆ ಎಂಬ ಮೂಢ ನಂಬಿಕೆಗಳು ದುರಾಸೆಯಿಂದ ಪ್ರಾಚೀನ ದೇವಾಲಯ, ಶಾಸನಗಳು, ವೀರಗಲ್ಲುಗಳ ಕೆಳಗೆ ಸಂಪತ್ತಿರುತ್ತದೆ ಎಂದು ಊರಿನ ಹೊರಗಿರುವ ಬಹಳಷ್ಟು ಸ್ಮಾರಕಗಳನ್ನು ಅಗೆದು ಹಾಳು ಮಾಡಿರುವುದಕ್ಕೆ ಹಲವಾರು ನಿದರ್ಶನಗಳು ಕಣ್ಣ ಮುಂದೆ ಕಾಣಿಸುತ್ತದೆ. ಇನ್ನು ಕೆಲವು ಕಡೆ ಮನೆ ಕಟ್ಟಲು, ಬಟ್ಟೆ ಹೊಗೆಯಲು, ದನ-ಕರುಗಳ ಕಟ್ಟುವ ಕೊಟ್ಟಿಗೆಗೆ ದನ ಕಟ್ಟಲು, ತಿಪ್ಪೆ ಗುಂಡಿಯಲ್ಲಿ ನೆಲದಲ್ಲಿ ಹೂತು ಹೋಗಿದೆ ಹೀಗೆ ಅನೇಕ ಕಾರಣಗಳಿಂದಾಗಿ ಇವತ್ತು ಶಾಸನಗಳನ್ನು ಕಳೆದುಕೊಳ್ಳಲಾಗುತ್ತಿದೆ. ಸಾಮಾನ್ಯ ಜನರಲ್ಲದೆ ವಿದ್ಯಾವಂತರು ಸಹ ಅಜ್ಞಾನಿಗಳಾಗಿದ್ದರೆ ಶಿವಗಂಗೆ ಬೆಟ್ಟದ ಮೆಟ್ಟಲುಗಳನ್ನು ಕಟ್ಟಲು ಬೃಹತ್ ವೀರಗಲ್ಲು ಹೊಡೆದು ಹಾಕಲಾಗಿದೆ. ಇನ್ನು ಕೆಲವು ಕಡೆ ದೇವರ ಕಲ್ಲುಗಳು ಅವುಗಳನ್ನು ಮುಟ್ಟಬಾರದು, ಕದಲಿಸಬಾರದು ಎಂದು ಕೆಳಗೆ ಬಿದ್ದರೂ, ಗಿಡಗಳು ಬೆಳೆದಿದ್ದರೂ ಅದರ ಬಳಿ ಸುಳಿಯುವುದಿಲ್ಲ. ಹೀಗೆ ಹಲವಾರು ರೀತಿಯ ಅಜ್ಞಾನ, ಮೂಢನಂಬಿಕೆ, ಅವಜ್ಞೆಗಳಿಂದಾಗಿ ಈವರೆಗೆ ಉಳಿದು ಬಂದಿರುವ ಹಲವಾರು ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು ಕಣ್ಮರೆಯಾಗುತ್ತಿದೆ.

ರಾಜನಿಗಾಗಿ ಮಡಿದ ವೀರರ ತ್ಯಾಗ, ಬಲಿದಾನಗಳ ವರ್ಣನೆ, ಸ್ಮಾರಕಗಳ ಸ್ಥಾಪನೆ ಒಂದು ದೃಷ್ಟಿಯಿಂದ ರಾಜತ್ವದ ಆರಾಧನೆ ಮತ್ತು ವೈಭವೀಕರಣದ ಸಂಕೇತ ಎಂಬ ಗ್ರಹಿಕೆ ಇಂದು ಕೆಲವರಲ್ಲಿ ಉಂಟಾಗಿದೆ. ರಾಜತ್ವದ ಶ್ರೇಷ್ಟತೆಗಾಗಿ, ರಾಜ ತೋರಿದ ಪ್ರೀತಿಗಾಗಿ ವೇಳೆವಾಳಗಳು ತಮ್ಮನ್ನು ತಾವು ಕೊಂದುಕೊಳ್ಳುವುದು ನ್ಯಾಯಯುತವಾಗಿದ್ದಿತೇ? ಎಂಬ ಪ್ರಶ್ನೆಗಳು ಕಾಡುತ್ತದೆ. ಆದ್ದರಿಂದ ರಾಜತ್ವದ ಮೌಲ್ಯಗಳನ್ನೇ ಸಾಂಸ್ಕೃತಿಕ ಮೌಲ್ಯಗಳೆಂದು ಭಾವಿಸುವುದು ಎಷ್ಟರಮಟ್ಟಿಗೆ ಸರಿ? ಎನಿಸುತ್ತದೆ.

## ಅಧ್ಯಾಯ – ೭

# ಸ್ಥಳನಾಮಗಳು ಮತ್ತು ಐತಿಹ್ಯಗಳು

### ೭.೧ ಸ್ಥಳನಾಮಗಳು :–

ಒಂದು ಪ್ರದೇಶದ ಚರಿತ್ರೆಯನ್ನು ಹೇಳುವಲ್ಲಿ ಕೋಟೆ, ಬೆಟ್ಟ, ನದಿ, ದೇವಾಲಯಗಳು, ಶಾಸನಗಳು ಹೇಗೆ ಮುಖ್ಯವಾದವೊ ಹಾಗೇಯೇ ಸ್ಥಳನಾಮಗಳು ಕೂಡ ಚರಿತ್ರೆಯನ್ನು ರೂಪಿಸಲು ಪ್ರಮುಖ ಮಾಹಿತಿಯನ್ನು ಒದಗಿಸುತ್ತದೆ. ಸ್ಥಳನಾಮಗಳ ಅಧ್ಯಯನವೆಂದರೆ ಮಾನವ ಸಂಸ್ಕೃತಿಯ ಇತಿಹಾಸವನ್ನು ಪುನಾರಚಿಸಿ ಕೊಡುವುದೇ ಆಗಿರುತ್ತದೆ. ಆಹಾರಕ್ಕಾಗಿ ಅಲೆದಾಡುತ್ತಿದ್ದ ಮಾನವನು ಮರದ ಪೊಟರೆ, ಕಲ್ಲಿನ ಗುಹೆಗಳಲ್ಲಿ ವಾಸಿಸುತ್ತಿದ್ದು, ಕಾಲಾಂತರದಲ್ಲಿ ಒಂದು ಕಡೆ ನೆಲೆ ನಿಂತು ಪ್ರಕೃತಿಯಿಂದ ರಕ್ಷಣೆ ಪಡೆಯಲು ಗುಡಿಸಲನ್ನು ಸಹಜವಾದ ಭೌಗೋಳಿಕ ಪರಿಸರದಲ್ಲಿ ಗುಡ್ಡ, ಕಾಡು, ಹೊಳೆ, ನದಿ, ಹಳ್ಳ, ಹೊಳೆ ಇತ್ಯಾದಿ ಫಲವತ್ತಾದ ಭೂಮಿಯ ಸನಿಹದಲ್ಲಿ ನಿರ್ಮಿಸಿ ವಾಸಿಸತೊಡಗಿದನು. ಈ ನೆಲೆ ನಿಲ್ಲುವಿಕೆಯೇ ಹಳ್ಳಿ, ಹಟ್ಟಿ, ಹಾಳ, ಕೊಪ್ಪ, ಊರು, ಪುರ ಮುಂತಾದ ಸ್ಥಳನಾಮಗಳ ಸೃಷ್ಠಿಗೆ ಕಾರಣವಾಯಿತು. ಸಂಸ್ಕೃತಿ ಬೆಳೆದಂತೆ ಪೇಟೆ, ಪಟ್ಟಣಗಳ ಜೊತೆಗೆ ಕೋಟೆ, ದುರ್ಗಗಳು, ಕೆರೆ, ಕಟ್ಟೆಗಳನ್ನು ಕಟ್ಟಲ್ಪಟ್ಟವು. ಮಾನವನ ದಿನನಿತ್ಯದ ಜೀವನದಲ್ಲಿ ವ್ಯವಹಾರಿಕವಾಗಿ ಉಪಯುಕ್ತವಾಗಲು ನಾಮಗಳು ಬಹುಮುಖ್ಯವಾಗಿದೆ. ಹತ್ತಾರು ಊರುಗಳು ಹುಟ್ಟಿಕೊಂಡಾಗ ಒಂದೊಂದು ಊರನ್ನು ಗುರುತಿಸಲು ನಿರ್ದಿಷ್ಟವಾದ ಹೆಸರುಗಳು ಅನಿವಾರ್ಯವಾಗಿದ್ದರಿಂದ ಸರ್ವೇ ಸಾಮಾನ್ಯವಾಗಿ ಒಂದೊಂದು ಹೆಸರನ್ನು ಇಡುತ್ತಿದ್ದರು. ಕಾಡು, ಪೊದೆ, ಕಣಿವೆ, ನದಿ, ಬೆಟ್ಟ, ಬಂಡೆ ಮೊದಲಾದವುಗಳು ಗ್ರಾಮಗಳ ಎಲ್ಲೆಗಳಾಗಿದ್ದುದ್ದವು.

ಒಂದು ಪ್ರದೇಶದಲ್ಲಿ ಐತಿಹಾಸಿಕ. ಭೌಗೋಳಿಕ, ಪ್ರಾಕೃತಿಕ, ಜನಾಂಗಿಕ ಅಥವಾ ಸಾಂಸ್ಕೃತಿಕ ವ್ಯಕ್ತಿಯ ಹೆಸರಿನಿಂದ ಸ್ಥಳನಾಮಗಳ ಹುಟ್ಟು ಆಗಿರುತ್ತದೆ. ಭೌಗೋಳಿಕ ಪರಿಸರದ ಹಿನ್ನೆಲೆಯಲ್ಲಿ ನಿಸರ್ಗವಾಚಿಗಳು, ಅಲ್ಲಿ ವಾಸಿಸುವ ಜನಾಂಗದ ಇತಿಹಾಸವನ್ನು ವಸತಿವಾಚಿಗಳಲ್ಲಿ, ಆ ಗ್ರಾಮದ ನಿರ್ಮಾತೃವಿನ ಅಥವಾ ಅವನ ಸಂಬಂಧಿಯ ನೆಲೆಯಲ್ಲಿ ವ್ಯಕ್ತಿನಾಮವಾಚಿಗಳು. ಯಾವುದೇ ಸ್ಥಳನಾಮ ನಿಸರ್ಗವಾಚಿ ಅಂಶದೊಂದಿಗೆ ನಿರ್ಮಾಣವಾಗಿದ್ದರೆ ಬಹುಶಃ ಪ್ರಾಚೀನ ಸ್ಥಳನಾಮಗಳಾಗಿದ್ದು, ಪ್ರತಿಯೊಂದು ಸ್ಥಳನಾಮಗಳು ಆಯಾ ಸ್ಥಳಗಳ ಚರಿತ್ರೆಗೆ ಪೂರಕವಾಗುವಂತಹ ಮಾಹಿತಿಯನ್ನು ಒದಗಿಸುತ್ತದೆ. ಗುಡ್ಡ, ಬೆಟ್ಟ, ಹೊಳೆ, ಪರ್ವತ, ನದಿ, ಹಳ್ಳ, ಮರ, ಗಿಡ, ದೇವಾಲಯ, ಧರ್ಮ, ಜಾತಿ, ವೃತ್ತಿ, ದೇವತೆಗಳ ಹೆಸರನ್ನು ಸೂಚಿಸುವ ಸ್ಥಳನಾಮಗಳು ಆ ಪ್ರದೇಶಗಳ ಸಾಮಾಜಿಕ & ಧಾರ್ಮಿಕ

ನಂಬಿಕೆಗಳ ಹಿನ್ನಲೆಯನ್ನು ಸ್ಥಳನಾಮಗಳ ರೂಪದಲ್ಲಿ ಕಾಣಬಹುದು. ಪ್ರಾಚೀನ ಸಂಸ್ಕೃತಿಯ ಅಧ್ಯಯನದ ವಿಷಯದಲ್ಲಿ ಶಾಸನಗಳಗಿಂತಲೂ ಸ್ಥಳನಾಮಗಳೇ ಉಪಯುಕ್ತವಾಗಿರುತ್ತವೆ. ಶಾಸನಗಳು ನಿರ್ಮಿಸಲಾಗಿದ್ದ ಒಂದೇ ಸ್ಥಳದಲ್ಲಿದ್ದ, ಒಂದು ಪ್ರದೇಶಕ್ಕೆ ಸೀಮಿತವಾಗಿದ್ದರೆ, ಸ್ಥಳನಾಮಗಳು ನೂರಾರು, ಸಾವಿರಾರು ವರ್ಷಗಳವರೆಗೂ ಮುಂದುವರೆದಿರುತ್ತದೆ. ಆದರೆ ಬಹು ಮಟ್ಟಿಗೆ ಕಟ್ಟುಕತೆ, ಕಿವಿಮಾತುಗಳ ಮೆಲೆ ಆಧಾರವಾಗಿರುವುದರಿಂದ ಎಲ್ಲವೂ ಸತ್ಯವೆಂದು ಭಾವಿಸಲು ಸಾಧ್ಯವಿಲ್ಲ.

ಸ್ಥಳನಾಮವನ್ನು ಇಂಗ್ಲೀಷ್‌ನಲ್ಲಿ Toponomy ಎಂದು ಕರೆಯುತ್ತಾರೆ. ಇದು ಗ್ರೀಕ್‌ನ Tops & Noms ಎಂಬ ಸಂಯುಕ್ತ ಪದಗಳಂದ ಬಂದುದಾಗಿದೆ. ಜರ್ಮನಿಯ Goltfreet vilthem bibliz ರವರು ೧೭೬೮ ರಲ್ಲಿ ಸ್ಥಳನಾಮಗಳ ಬಗ್ಗೆ ಶೋಧಿಸಿದ ಮೊದಲನೆಯವನಾದ ಇವರನ್ನು ಸ್ಥಳನಾಮ ಶಾಸ್ತ್ರೀಯ ಪಿತಾಮಹಾನೆಂದು ಕರೆಯಲಾಗುತ್ತದೆ.

ಕನ್ನಡದ ಕಿಟೆಲ್ ನಿಘಂಟುನಲ್ಲಿ ಕೆಲವು ಊರುಗಳ ಹೆಸರುಗಳನ್ನು, ಹಯವದನರಾಯರು ಮೈಸೂರು ಗೆಜೆಟಿನಲ್ಲಿ ಕೆಲವು ಸ್ಥಳನಾಮಗಳನ್ನು ಕುರಿತು, ಮಾಸ್ತಿ, ಹಿರೇಮಠರು ಲೇಖನಗಳ ಮೂಲಕ ವ್ಯಕ್ತ ಪಡಿಸಿದ್ದರೇ, ಕನ್ನಡದಲ್ಲಿ ಸ್ಥಳನಾಮಗಳನ್ನು ಕುರಿತು ವಿಶೇಷ ಆಸಕ್ತಿ ಮತ್ತು ಅಧ್ಯಯನಕ್ಕೆ ಮೂಲ ಕಾರಣವಾದವರು ದೇ.ಜ.ಗೌರವರು ಊರುಗಳ ಬಗೆಗಿನ ದಂತ ಕತೆಗಳು ಪ್ರಾಚೀನ ಕಾಲದಿಂದಲು ದೊರೆಯುತ್ತದೆ. ಕೆಲವು ಧಾರ್ಮಿಕ ಗ್ರಂಥಗಳಲ್ಲಿ ಸ್ಥಳ ಪುರಾಣಗಳು ದೊರೆಯುತ್ತದೆ. ಆದರೆ ವೈಜ್ಞಾನಿಕ ವಿಶ್ಲೇಷಣೆಗೆ ಅವು ನಿಲುಕುತ್ತದೆ ಎನ್ನಲಾಗುವುದಿಲ್ಲ. ಸ್ಥಳನಾಮಗಳು ಅಧ್ಯಯನ ವೈಜ್ಞಾನಿಕವಾಗಿ ಪ್ರಾರಂಭಗೊಂಡಿದ್ದೆ ಹತ್ತೊಂಭತ್ತನೇ ಶತಮಾನದ ಉತ್ತರಾರ್ಧದಲ್ಲಿ ಎರಡೂವರೆ ಸಾವಿರ ವರ್ಷಗಳ ಹಿಂದೆಯೇ 'ಪಾಣಿನಿ ಎಂಬ ವ್ಯಾಕರಣಕಾರ ಸ್ಥಳ ನಾಮಗಳ ಸಾಂಸ್ಕೃತಿಕ ಲಕ್ಷಣಗಳನ್ನು ಗುರುತಿಸಿದ್ದನು'[೧] ಎಂದು ಹೇಳದ್ದಾರೆ.

**ಸ್ಥಳನಾಮಗಳನ್ನು ೩ ರೀತಿಯಲ್ಲಿ ನೋಡಬಹುದು**.

೧. ಪ್ರಾರಂಭದಿಂದಲೂ ದಾಖಲೆಯಲ್ಲಿದ್ದು ಈಗಲೂ ಪ್ರಯೋಗದಲ್ಲಿ ಉಳದುಕೊಂಡು ಬಂದಿರುವ ಸ್ಥಳನಾಮಗಳು.

೨. ದಾಖಲೆಯಲ್ಲಿ ಮಾತ್ರ ಇದ್ದು ಬಳಕೆಯಲ್ಲಿರದ ಸ್ಥಳನಾಮಗಳು.

---

[೧] ಪ್ರೋ.ಡಿ. ಶಿವಲಿಂಗಯ್ಯ: ತುಮಕೂರು ಜಿಲ್ಲೆಯ ಸ್ಥಳನಾಮಗಳು, ಪು.ಸಂ-೧.

೩. ಬಳಕೆಯಲ್ಲಿದ್ದು ಯಾವ ದಾಖಲೆಯಲ್ಲೂ ಇರದ ಸ್ಥಳನಾಮಗಳು.

**ಸ್ಥಳನಾಮಗಳು ದೊರೆಯುವ ಬಹು ಮುಖ್ಯ ಆಕರಗಳೆಂದರೆ:–**

೧. ಸರ್ಕಾರಿ ದಾಖಲೆಗಳು:– ಸರ್ವೆ ಇಲಾಖೆ, ತಾಲ್ಲೂಕು ಕಛೇರಿ, ಜಿಲ್ಲಾ ಕಛೇರಿ, ಗ್ರಾಮ ಪಂಚಾಯಿತಿ, ಇತ್ಯಾದಿಗಳು.

೨. ಖಾಸಗಿ ದಾಖಲೆಗಳು:– ೧) ಶಿಲಾಶಾಸನಗಳು ಮತ್ತು ತಾಮ್ರ ಶಾಸನಗಳು.

೨) ದೇವಾಲಯ, ಮಠ, ಮಸೀದಿ, ಚರ್ಚ ಮುಂತಾದ ಧಾರ್ಮಿಕ ಕೇಂದ್ರಗಳಲ್ಲಿ ದೊರೆಯುವ ದಾಖಲೆಗಳು.

೩) ರಾಜರು, ಪಾಳೇಗಾರರು, ಜಮೀದ್ದಾರರುಗಳ ಬಳಿಯಲ್ಲಿ ದೊರೆಯುವ ದಾಖಲೆಗಳು.

೩. ಸಾಹಿತ್ಯ ಹಾಗೂ ಇತರೆ ಮೂಲಗಳು:– ಪ್ರವಾಸ ಕಥನ, ಸ್ಥಳ ಪುರಾಣ, ಜನಪದ ಸಾಹಿತ್ಯ, ಪತ್ರಿಕೆಗಳು, ಚರಿತ್ರೆ, ಕತೆ, ಭೂ ವಿವರಣೆ ಇತ್ಯಾದಿ ಗ್ರಂಥಗಳಿಂದ ದೊರೆಯುವ ದಾಖಲೆಗಳು.

ಸ್ಥಳನಾಮಗಳ ವರ್ಗೀಕರಣ

೧. ನೈಸರ್ಗಿಕ ವರ್ಗೀಕರಣ: ಜಲಸೂಚಿ, ಪ್ರಾಣಿ, ಪರ್ವತ, ಶಿಲೆ ಮುಂತಾದ್ದು'ಗಳು.

೨.ಸಾಮಾಜಿಕ ವರ್ಗಿಕರಣ: ವ್ಯಕ್ತಿನಾಮಗಳು, ಜಾತಿ, ಗೋತ್ರ/ಕುಟುಂಬ ನಾಮ, ದೇವತೆ, ವೃತ್ತಿ ಇತ್ಯಾದಿಗಳು.

೩.ವರ್ಣನಾತ್ಮಕ: ಸ್ಥಳ, ದಿಕ್ಕು, ಗ್ರಾಮನಾಮ, ಸಂಖ್ಯೆಗಳು.

೪.ಐತಿಹಾಸಿಕ ಅಂಶಗಳು: ರಾಜರು, ದಂಡನಾಯಕರಗಳ ಹೆಸರುಗಳನ್ನು ಕೆರೆ, ದೇವಾಲಯ, ಊರುಗಳಿಗೆ ಇಟ್ಟಿರುತ್ತಾರೆ.

೫. ಪುರಾಣಗಳು

೬. ಪುರ್ನನಾಮಕರಣಗಳು

ಸ್ಥಳಗಳಿಗೆ ಹೇಗೆ ಈ ಹೆಸರು ಬಂದಿತು ಮೂಲ ಹೆಸರೇನು, ಯಾರು ಕೊಟ್ಟರು, ಏಕೆ ಕೊಟ್ಟರು ಎಂದೆಲ್ಲಾ ಹುಡುಕುತ್ತಾ ಹೋದರೆ ಹೆಸರು ಕೊಟ್ಟ/ಬಂದ ಉದ್ದೇಶವೇನು? ಅರ್ಥವೇನು ಎಂಬುದು ತಿಳಿಯುತ್ತದೆ. ಹಿಂದಿನ ಕಾಲದಲ್ಲಿ ಪಶುಪಾಲಕರಾಗಿದ್ದ ಅಲೆಮಾರಿ ಅಥವಾ ಅರೆ ಅಲೆಮಾರಿಗಳಾಗಿದ್ದ ಗೊಲ್ಲರು, ಕುರುಬರು, ಲಂಬಾಣಿಗಳು ತಾವು ಗೂಳೆ ಹೋದ ಸಂದರ್ಭದಲ್ಲಿ ಒಂದು ಊರಿನ ಹತ್ತಿರ ಬೀಡು ಬಿಟ್ಟು, ಕೆಲಕಾಲ ತಂಗಿದ್ದು, ಮುಂದೆ ಹೋಗಿ ಬೀಡು ಬಿಡುತ್ತಿದ್ದರು. ಕಾಲಾನುಕ್ರಮದಲ್ಲಿ

ಸಾಂಕ್ರಾಮಿಕ ರೋಗಗಳು, ದರೋಡೆಕೋರರು ಮುಂತಾದ ಸಮಸ್ಯೆಗಳಿಂದ ಅವರು ಕೊನೆಗೆ ಅದೇ ಊರಿನಲ್ಲಿ ನೆಲೆಸಿದಾಗ ಅವರ ನೆಲೆಗಳಿಗೆ ಅದೆ ಹೆಸರು ಬಂದಿರಬಹುದು. ಯಾವುದೇ ಒಂದು ಕಾಲದಲ್ಲಿ ಪ್ಲೇಗು, ಕಾಲರಾ ಮುಂತಾದ ಸಾಂಕ್ರಾಮಿಕ ರೋಗಗಳು, ನೆರೆ, ಬರ, ಅಥವಾ ದುಷ್ಟ ಶಕ್ತಿಯ ಹೆದರಿಕೆಯಿಂದ ಅಲ್ಲಿನ ನಿವಾಸಿಗಳು ತಮ್ಮ ತಮ್ಮ ಊರು ಬಿಟ್ಟು ಎತ್ತರವಾದ, ಸುರಕ್ಷಿತವಾದ ಹೊಸ ತಾಣಕ್ಕೆ ಹೋಗಿ ನೆಲೆಸಿದರೆ ಸಮಸ್ಯೆಯ ನಂತರ ಕೆಲವು ಮನೆತನಗಳು ಹಳೆಯ ಗ್ರಾಮಕ್ಕೆ ಹೋದರೆ ಕೆಲವರು ಅಲ್ಲೇ ಉಳಿದರು ಹೀಗಾಗಿ ೨ ಊರುಗಳು ಹುಟ್ಟಿಕೊಂಡವು, ಹಳೆಯದು, ಹೊಸದು ಎಂದು, ನಂದಗುಡಿಯಲ್ಲಿ ಹಳೇಯೂರು, ಹೊಸಊರು ಎಂದು ಇರೊದನ್ನ ಕಾಣಬಹುದು. ಒಂದು ಗ್ರಾಮ ಬೆಳೆದಂತೆ ವಾಸಕ್ಕೆ ಕೆಲ ಮನೆತನಗಳು ತಮ್ಮ ಹೊಲಗಳಲ್ಲಿ ಅಥವಾ ಹೊಲದ ಹತ್ತಿರ ತೋಟಗಳಲ್ಲಿ ಮನೆ ಕಟ್ಟಿ ಕಾಲ ಕ್ರಮೇಣ ತಮ್ಮ ಊರಿನ ಹೆಸರನ್ನೆ ಇಟ್ಟುಕೊಂಡು, ಒಂದೊಂದು ವೃತ್ತಿಯ ಜನ ಒಂದೊಂದು ಕಡೆ ನೆಲೆಸುತ್ತಿದ್ದರು. ಕಿರು ಗಾತ್ರದ ಹಟ್ಟಿಗಳು ತಮ್ಮವನೇ ಆದ ಗೌಡ. ತಮ್ಮದೇ ಆದ ಒಂದು ಊರು ಹಬ್ಬ ಹಾಗೇಯೇ ಹತ್ತಿರದ ಯಾವುದಾದರೂ ಒಂದು ದೊಡ್ಡ ಗ್ರಾಮಕ್ಕೆ ಹೊಂದಿ ಕೊಂಡಿದ್ದವು. ಮುಂದೆ ಸರಕಾರದ ದಾಖಲೆಗೆಂದು ಅಥವಾ ಜನರ ಅನುಕೂಲಕ್ಕೆ ಪಕ್ಕದ ಗ್ರಾಮದೊಡನೆ ಸೇರಿಸಿ ಒಂದು ಆಡಳಿತ ಘಟಕ ಮಾಡಿ ಅದೇ ಹೆಸರಿನಿಂದ ಕರೆದಿರುವುದು ಹೀಗೆ ಹಲವಾರು ಕಾರಣಗಳಿಂದ ಸ್ಥಳನಾಮಗಳು ರಚನೆಯಾಯಿತ್ತು.

ಜನ ಸಾಮಾನ್ಯರು ಯಾವುದೇ ಒಂದು ಕತೆ ಕಟ್ಟಿ ತಮ್ಮ ಊರಿನ ಹೆಸರಿನ ನಿಷ್ಪತ್ತಿಯನ್ನು ರೂಪಿಸುತ್ತಾರೆ. ಅದಕ್ಕಾಗಿ ಸ್ಥಳನಾಮಗಳಿಗೆ ಪ್ರಾಚೀನವಾದ ನಿಖರವಾದ ಪೂರಕವಾದ ಆಕರವೆಂದರೆ ಅದು ಶಾಸನಗಳಿಂದ ಮಾತ್ರ ಲಭ್ಯವಿದೆ. ನಾನು ಈ ಅಧ್ಯಾಯದಲ್ಲಿ ಶಾಸನಗಳನ್ನು ಬಳಸಿಕೊಂಡು ಶಾಸನಗಳಲ್ಲಿ ಉಲ್ಲೇಖವಾಗಿರುವ ನಾಮಗಳು, ಈಗ ಬದಲಾವಣೆಯಾಗಿರುವುದನ್ನು ಮತ್ತು ಸ್ಥಳೀಯವಾಗಿ ಗ್ರಾಮನಾಮಗಳ ಹುಟ್ಟಿನ ಕಾರಣಗಳನ್ನು ದಾಖಲು ಮಾಡಿದ್ದೇನೆ.

ದೇವರಿಗೆ / ವ್ಯಕ್ತಿಗೆ ದಾನ ಕೊಟ್ಟಾಗ ಆ ಗ್ರಾಮದ ಮೂಲ ಹೆಸರು, ದೇವರ ಹೆಸರಲ್ಲಿ ಅಥವಾ ದಾನ ಪಡೆದವರ ಅಥವಾ ದಾನ ನೀಡಿದವರ ಹೆಸರಲ್ಲಿ ಬದಲಾವಣೆಯಾದ ಹಾಗೂ ರಾಜನು ಒಂದು ನಗರವನ್ನು ಹೊಸದಾಗಿ ನಿರ್ಮಿಸಿದಾಗ, ಅಕ್ರಮಿಕೊಂಡಾಗ ಆ ನಗರದ ಹೆಸರು ನಂತರದಲ್ಲಿ ಬದಲಾವಣೆಯಾದ ಆ ಕೆಲವು ಸಂದರ್ಭಗಳಲ್ಲಿ ಹೊಸದಾಗಿ ಊರನ್ನು ಅಥವಾ ಅಗ್ರಹಾರವನ್ನು ನಿರ್ಮಿಸಿದಾಗ, ಕೆರೆಗಳನ್ನು ಕಟ್ಟಿಸಿ, ಕಾಡು ಕಡೆದು ಊರು ಕಟ್ಟಿ ಅದಕ್ಕೆ ದಾನ ನೀಡುವ ಸಂದರ್ಭದಲ್ಲಿ ಅದಕ್ಕೆ ನಿಮಾತೃವಿನ ಹೆಸರನ್ನು ಸಾಮಾನ್ಯವಾಗಿ ಕೊಡಲಾಗುತ್ತಿತ್ತು. ಕಂಚಿಗಣಹಾಲುಗೆ ಪ್ರತಿನಾಮ

ಸಿಂಗಸಮುದ್ರ[೨], ಓಬಳಹಳ್ಳಿಗೆ ಪ್ರತಿನಾಮ ತಿಪ್ಪಸಮುದ್ರ[೩], ದಾಸರಹಳ್ಳಿಗೆ ಪ್ರತಿನಾಮ ದೇವಾಪುರ[೪], .....ಗೆ ಪ್ರತಿನಾಮ ಇಮ್ಮಡಿ ಬಯಿರಾಪುರ[೫], ಮುಗುಬಾಳುಗೆ ಪ್ರತಿನಾಮ ವೀರಭದ್ರಪುರ[೬], ಗೋಟಗೆರೆಗೆ ಪ್ರತಿನಾಮ ನರಸಿಂಗಪುರ[೭], ಬೇಗೂರುಗೆ ಪ್ರತಿನಾಮ ಗೋಪಾಲಸಾಗರ[೮], ಮಾವಳಪುರಕ್ಕೆ ಪ್ರತಿನಾಮವಾದ ದೊಡ್ಡಭೈರಸಾಗರ[೯], ಉಪಾರಹಳ್ಳಿಗೆ ಪ್ರತಿನಾಮ ಗೋಪಾಲಸಾಗರ[೧೦] ಹೀಗೆ ದಾನ ನೀಡಿದ್ದ ಶಾಸನೋಕ್ತವಾದ ಪ್ರತಿನಾಮಗಳು ಇಂದು ದೊಡ್ಡ ದೊಡ್ಡ ಗ್ರಾಮಗಳಾಗಿರುವುದನ್ನು ಸಹ ಕಾಣಬಹುದು. ಇದಲ್ಲದೆ ಕೊಡಗಿ ತಿರುಮಲಪುರ[೧೧], ಕೊಡಗಿ ಬೊಮ್ಮನಹಳ್ಳಿ[೧೨], ಮಹದೇವ ಕೊಡಗಿ[೧೩], ಬಂಡೆ ಕೊಡಿಗೇನಹಳ್ಳಿ[೧೪], ಕೊಡಿಗೆಹಳ್ಳಿ, ಕೊಡಿಗೆಪಾಳ್ಯ, ಕೊಡಿಗೆಪುರ ಇವೆಲ್ಲವೂ ದಾನದಿಂದ ರಚನೆಯಾದ ಗ್ರಾಮಗಳಾಗಿವೆ. ಸಿರುನಲ್ಲಲನಿಗೆ ರಕ್ತಕೊಡುಗೆಯಾಗಿ ಕೊಟ್ಟ ಪ್ರದೇಶವೇ ಮುಂದೆ ಊರಾಗಿ ಬೆಳೆದು ಅವನ ಹೆಸರನ್ನೆ ಇಟ್ಟು ಕೊಂಡಿದ್ದಾರೆ[೧೫]. ಸಿಂಗಿರಿಗೌಡನಿಗೆ ಪುಣ್ಯವಾಗ ಬೇಕೆಂದು ದಾನ ನೀಡಿದ ಪ್ರದೇಶವೇ ಈಗ ಸಿಂಗರಿಹಳ್ಳಿಯಾಗಿದೆ[೧೬].

ಸ್ಥಳನಾಮಗಳಲ್ಲಿ ಹಳ್ಳಿ, ಪುರ, ಗ್ರಾಮ, ಪಾಳ್ಯ, ಹಟ್ಟಿ, ಕೆರಿ, ಪಳ್ಳಿ, ವಾರ, ಊರು, ಕುಂಟೆ, ಕೆರೆ, ಮಂಗಲ ಮುಂತಾದ ಪ್ರತ್ಯೇಕ ವಾಚಕಗಳನ್ನು ಗ್ರಾಮದ ಹೆಸರ ಕೊನೆಯಲ್ಲಿ ಕಾಣಬಹುದು.

ಕೇರಿ :- ಒಂದೇ ಜಾತಿಗೆ ಸೇರಿದ ೮ ಅಥವಾ ೧೦ ಮನೆಗಳ ತಾಣ.

ಹಟ್ಟಿ :- ಕೇವಲ ಹತ್ತು ಅಥವಾ ಹನ್ನೆರಡು ಮನೆಗಳ ತಾಣ ಇಲ್ಲಿ ಒಂದೇ ಕುಲಕ್ಕೆ ಅಥವಾ ಒಂದೇ ಜಾತಿಗೆ ಸೇರಿದವರು ವಾಸ ಮಾಡುತ್ತಿರುತ್ತಾರೆ. ಗೊಲ್ಲರಹಟ್ಟಿ, ಕುರುಬರಹಟ್ಟಿ, ವಡ್ಡರಹಳ್ಳಿ, ಶೆಟ್ಟಿಹಳ್ಳಿ, ಬಸವನಹಳ್ಳಿ, ಚಿಕ್ಕ ಕರಿಯಪ್ಪನಪಾಳ್ಯ, ಚಿಕ್ಕ ವೀರಯ್ಯನಪಾಳ್ಯ, ಗೊಲ್ಲಹಳ್ಳಿ, ಕುರುಬರಹಳ್ಳಿ ಇತ್ಯಾದಿಗಳು.

---

[೨] ಎ.ಕ-೯, ದೊ.ತಾ.೧೯, ಕ್ರಿ.ಶ.೧೫೧೯, ಕಂಚಿಗನಾಳು.
[೩] ಎ.ಕ-೯, ಹೊ.ತಾ.೩೯, ಕ್ರಿ.ಶ.೧೫೪೯, ವೋಬಳಹಳ್ಳಿ.
[೪] ಎ.ಕ-೯, ಹೊ.ತಾ.೩, ಕ್ರಿ.ಶ.೧೫೬೬, ನೆಲವಾಗಲಹಳ್ಳಿ.
[೫] ಎ.ಕ-೯, ದೊ.ತಾ.೪೯, ಕ್ರಿ.ಶ.೧೬೧೦, ನಾಗೇನಹಳ್ಳಿ.
[೬] ಎ.ಕ-೯, ಹೊ.ತಾ.೯೪, ಕ್ರಿ.ಶ.೧೫೬೪, ಮುಗಬಾಳ.
[೭] ಎ.ಕ-೯, ನೆ.ತಾ.೭೦, ಕ್ರಿ.ಶ.೧೭೨೦, ನರಸಿಂಹಪುರ.
[೮] ಎ.ಕ-೯, ದೊ.ತಾ.೫೧, ಕ್ರಿ.ಶ.೧೪೬೪, ಕನಸವಾಡಿ.
[೯] ಎ.ಕ-೯, ದೊ.ತಾ.೬೩, ಕ್ರಿ.ಶ.೧೭೯೬, ಮಾವಳೀಪುರ.
[೧೦] ಎ.ಕ-೯, ದೇ.ತಾ.೧೫, ಕ್ರಿ.ಶ.೧೭೯೮, ದೇವನಹಳ್ಳಿ.
[೧೧] ಎ.ಕ-೯, ನೆ.ತಾ.೨೨, ಕ್ರಿ.ಶ.೧೭೬೬, ಕೊಡಗಿ ತಿರುಮಲಪುರ.
[೧೨] ಎ.ಕ-೯, ನೆ.ತಾ.೪೮, ಕ್ರಿ.ಶ.೧೫೬೦, ಕೊಡಗಿ ಬೊಮ್ಮನಹಳ್ಳಿ.
[೧೩] ಎ.ಕ-೯, ದೇ.ತಾ.೭೯, ಕ್ರಿ.ಶ.೧೭೫೦, ಮಹದೇವ ಕೊಡಗಿ.
[೧೪] ಎ.ಕ-೯, ದೇ.ತಾ.೭೨, ಕ್ರಿ.ಶ.೧೩೩೮, ಬಂಡೆ ಕೊಡಗಿಹಳ್ಳಿ.
[೧೫] ಎ.ಕ-೯, ಹೊ.ತಾ.೧೦೩, ೧೦೩ಎ, ಕ್ರಿ.ಶ.೧೩೭೯, ಚಿಕ್ಕನಲ್ಲಾಲ.
[೧೬] ಎ.ಕ-೯, ದೊ.ತಾ.೬, ಸಿಂಗರಿಹಳ್ಳಿ.

ಹಳ್ಳಿ :– ಅನೇಕ  ಕುಲ ಮತ್ತು ಜಾತಿಗೆ ಸೇರಿದವರು.

ಊರು:– ಸ್ವಲ್ಪ ದೊಡ್ಡ ಅನೇಕ ಜಾತಿಯವರು, ವೃತ್ತಿಗಳ ಗುಂಪುಗಳು ವಾಸ ಮಾಡುವ ತಾಣ.

ಪುರ/ನಗರಗಳು :– ಬಹು ದೊಡ್ಡ ಗ್ರಾಮಗಳಿದ್ದು, ಆಡಳಿತ ಕಛೇರಿ, ವಾಣಿಜ್ಯ ಸಂಸ್ಥೆಗಳ ತಾಣ. ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ.

ಹಾಳು:– ಕೋಟೆಗಳು, ಬಾವಿಗಳು, ಪಾಳು ಬಿದ್ದ ಗ್ರಾಮಗಳು ಅಂದರೆ ಯಾವುದಾದರೂ ಯುದ್ಧ ಅಥವಾ ಸಾಂಕ್ರಮಿಕ ರೋಗ ಅಥವಾ ಇಂತದ್ದೇ ಮತ್ತಾವುದಾದರೂ ವಿನಾಶಕಾರಿ ಘಟನೆಗೆ ಸಂಬಂಧಿಸಿದ ಗ್ರಾಮಗಳು. ಉದಾಹರಣೆಗೆ ಕೈದಾಳು, ಬೂದಿಹಾಳು.

ಬೇಚಿರಾಖ್ :– ಹಿಂದೆ ಊರುಗಳಾಗಿದ್ದು ಯಾವುದೇ ಕಾರಣಕ್ಕೆ ಊರುಗಳು ಖಾಲಿಯಾಗಿ ಬೇರೊಂದು ಕಡೆ ವಲಸೆ ಹೋಗಿ ಹೊಸದಾಗಿ ಊರುಗಳ ರಚನೆಯಾಗಿದ್ದು, (ಪ್ಲೇಗ್, ಕಾಲರಾ ಖಾಯಿಲೆಗಳು ಬಂದಂತಹ ಸಂದರ್ಭದಲ್ಲಿ ನಡೆದಿರುವ ಘಟನೆಗಳು) ಹಳೆಯಊರು, ಹೊಲ, ಕೆರೆ, ತೋಪುಗಳಾಗಿದ್ದು ಅವುಗಳನ್ನು ಬೇಚಿರಾಖ್ ಹೆಸರಿನಿಂದ ಕರೆಯುತ್ತಾರೆ. ಬೇಚಿರಾಖ್ ಜಕ್ಕಸಂದ್ರ, ಬೇಚಿರಾಖ್ ಮಾರೇನಹಳ್ಳಿ, ಬೇಚಿರಾಖ್ ಎತ್ತಿನವಡೇರಪುರ, ಬೇಚಿರಾಖ್ ತಿಮ್ಮಸಂದ್ರ, ಬೇಚಿರಾಖ್ ರಾಮಪುರ, ಬೇಚಿರಾಖ್ ಬತಗಾನಹಳ್ಳಿ, ಬೇಚಿರಾಖ್ ಗೊಲ್ಲಹಳ್ಳಿ, ಬೇಚಿರಾಖ್ ಸೇಟಿಹಳ್ಳಿ ಮುಂತಾದವುಗಳು.

ಕಟ್ಟೆ:– ನೀರಿನ ತಾಣಗಳಾಗಿ ನಿರ್ಮಿಸಿದ ಕಟ್ಟೆಯಿಂದಾಗಿ ರಚನೆಯಾದ ಊರುಗಳ ಕೊನೆಯಲ್ಲಿ ಕಟ್ಟೆಯನ್ನು ಸೇರಿಸಲಾಗುತ್ತದೆ.

ಕೋಟೆ :– ರಾಜರು/ಅಧಿಕಾರಿಗಳು ತಮ್ಮ ರಕ್ಷಣೆಗಾಗಿ ನಿರ್ಮಿಸಿದ ತಡೆಗೋಡೆಯನ್ನು ಕೋಟೆಗಳೆಂದು ಅದಕ್ಕೆ ಹೊಂದಿ ಕೊಂಡಂತೆ ಅದರ ಒಳಗೆ ರಚನೆಯಾದ ಗ್ರಾಮಗಳಿಗೆ ಹೆಸರಿನ ಕೊನೆಯಲ್ಲಿ ಕೋಟೆಯನ್ನು ಸೇರಿಸಲಾಗುತ್ತದೆ. ಬಿಲ್ಲನಕೋಟೆ, ಮೊದಲಕೋಟೆ, ಗಲಿಬಿಲಿಕೋಟೆ, ಶ್ರೀಕೋಟೆ, ಹಳೇಕೋಟೆ, ಮಲೆಕೋಟೆ, ವೆಂಕಟಗಿರಿಕೋಟೆ ಇತ್ಯಾದಿಗಳು.

ದುರ್ಗ :– ಹತ್ತಲು ತುಂಬಾ ಕಷ್ಟಕರವಾದ ಗುಡ್ಡ, ಗಿರಿ ಪ್ರಾಕೃತಿಕವಾಗಿ ಎತ್ತರವಾದ ಪ್ರದೇಶಗಳಲ್ಲಿರುವ ತಾಣಗಳನ್ನು ಮಾಕಳಿದುರ್ಗ, ಹುಲುಕಡಿಬೆಟ್ಟ, ನಿಜಗಲ್ಲು ದುರ್ಗ, ತೊಡಲುಬಂಡೆ ಮುಂತಾದವುಗಳು.

ಕೆಲವು ಗ್ರಾಮಗಳು ಅಕ್ಕ ಪಕ್ಕದಲ್ಲಿ ಒಂದೇ ಸಾಲಿನಲ್ಲಿದ್ದರೆ ಜೊಡಿ ಪದಗಳಾಗೆ ಜೋಡಿ ಗ್ರಾಮಗಳಿಗೆ ಹೆಸರುಗಳು ರಚನೆಯಾಗಿರುತ್ತದೆ. ಜೋಡಿ ವೂದನಹಳ್ಳಿ, ಜೋಡಿ ಅರವೇಶಹಳ್ಳಿ, ಜೋಡಿ ಕಾಮೇನಹಳ್ಳಿ, ಜೋಡಿ ಗೆದ್ಲಹಳ್ಳಿ, ಜೋಡಿದಳಸಿಗೆರೆ, ಜೋಡಿಚನ್ನಾಪುರ, ಜೋಡಿಲಕೊಂಡಹಳ್ಳಿ ಇತ್ಯಾದಿಗಳು.

ಕೆಲವು ಗ್ರಾಮಗಳು ಪಕ್ಕದಲ್ಲೆ ಇದ್ದು ಅಲ್ಲಿನ ಜನಸಾಂದ್ರತೆಯಾಧಾರದ ಮೇಲೆ ಚಿಕ್ಕ. ದೊಡ್ಡ, ಕುಳ್ಳ, ಎತ್ತರ ಎಂಬ ಗಾತ್ರಗಳನ್ನು ಸೇರಿಸಿ ಊರುಗಳ ಹೆಸರುಗಳು ರಚನೆಯಾಗಿರುತ್ತದೆ. ದೊಡ್ಡಬೆಳವಂಗಲ–ಚಿಕ್ಕಬೆಳವಂಗಲ, ಚಿಕ್ಕಹೆಜ್ಜಾಜಿ–ದೊಡ್ಡಹೆಜ್ಜಾಜಿ, ಚಿಕ್ಕವೋಬನಹಳ್ಳಿ, ದೊಡ್ಡಅರಳಗೆರೆ–ಚಿಕ್ಕಅರಳಗೆರೆ, ದೊಡ್ಡನಲ್ಲೂರು–ಚಿಕ್ಕನಲ್ಲೂರು, ದೊಡ್ಡನಲ್ಲಾಲ–ಚಿಕ್ಕನಲ್ಲಾಲ ಇತ್ಯಾದಿಗಳು.

ಪ್ರಾಕೃತಿಕ ಕಾರಣಗಳು : ಪ್ರಕೃತಿ ದತ್ತವಾದ ಕಾಡು, ಕೆರೆ, ಕುಂಟೆ, ಕೋಟೆಗಳು, ಗಿಡ, ಮರಗಳ ಹಿನ್ನೆಲೆಯೊಂದಿಗೆ ರಚನೆಯಾದ ಸ್ಥಳನಾಮೆಗಳು ಏಳು ಹಟ್ಟಿ, ಸುತ್ತಳ್ಳಿ, ಜಾಲಗೆರೆ, ಬೆಳಕಿನ ಮಡಗು, ದಡಗಟ್ಟಮಡಗು, ಭೈರಗೂಡ್ಲು ಇತ್ಯಾದಿ.

ಪುರಾಣ : ಮಹಾಭಾರತ, ರಾಮಾಯಣದ ಕತೆಗಳು, ಐತಿಹಾಸಿಕ ಮಹಾವ್ಯಕ್ತಿಗಳ ಸಾಧನೆಗಳನ್ನು ಐತಿಹ್ಯಗಳ ಮೂಲಕ ಊರಿನ ಹೆಸರು ರಚನೆಯಾದ ಬಗ್ಗೆ. ಶ್ರೀರಾಮನಹಳ್ಳಿ, ಉಪವಾಸಪುರ, ತಿಪ್ಪೂರು, ಅಲುಪನಹಳ್ಳಿ, ಗರುಡಕಲ್ಲು, ಹಾಲುಚಿಲುಮೆ, ಪಾಂಡವರ ದಿಣ್ಣೆ, ದಾಸರಪಾಳ್ಯ, ಭಕ್ತರಪಾಳ್ಯ, ಗ್ರಾಮಗಳಿಗೆ ಸಂಬಂಧಿಸಿದಂತೆ ಪಾಳೇಯಗಾರರ ಸಾಹಸ ಕತೆಗಳನ್ನು ಒಳಗೊಂಡಿದೆ.

ವೃತ್ತಿಸ್ಥಳನಾಮಗಳು : ತಾವು ಮಾಡುವ ಕಸುಬಿನಿಂದ ಕೆಲವು ಹಳ್ಳಿಗಳಿಗೆ ಹೆಸರು ಬಂದಿದೆ ಎಂಬ ಪ್ರತೀತಿ ಇದೆ. ಬೋವಿಪಾಳ್ಯ, ಒಡ್ಡರಹಟ್ಟಿ, ಸೂಳೆಕುಂಟೆ, ಆಚಾರಹಳ್ಳಿ, ಹರಿಜನಕಾಲೋನಿ, ಲಿಂಗದಬೀರನಹಳ್ಳಿ, ದಾಸರಪಾಳ್ಯ, ಹಾರುಡಿ, ಹಾರ್ವಯ್ಯನಪಾಳ್ಯ, ಕಾಡು ಬ್ಯಾಡರಹಳ್ಳಿ.

ಜನಾಂಗಿಯವಾಗಿ ಗೊಲ್ಲಜನಾಂಗ ಹೆಚ್ಚಾಗಿರುವ ಪ್ರದೇಶದಲ್ಲಿ ಗೊಲ್ಲ ಗೌಡರಹಳ್ಳಿ, ಗೊಲ್ಲರಹಟ್ಟಿ, ಗೊಲ್ಲಹಳ್ಳಿ ಎಂದೆಲ್ಲಾ ರಚನೆಯಾಗಿದೆ. ಇದು ಅಲ್ಲದೆ ಹೆಣ್ಣೆ ಗೌಡನಹಳ್ಳಿ, ಚೆನ್ನವೀರನಹಳ್ಳಿ, ಆಲಪನಹಳ್ಳಿ, ಗಂಗರಂಗಯ್ಯನಹಳ್ಳಿ, ಗೊರವಯ್ಯನಪಾಳ್ಯ, ದೊಡ್ಡವೀರಯ್ಯನಪಾಳ್ಯ, ಗುಂಡಪ್ಪನಾಯಕನಹಳ್ಳಿ, ಬ್ಯಾಡರಹಳ್ಳಿ, ಹೊಸೂರು, ಬೋವಿಪಾಳ್ಯ ಎಂದೆಲ್ಲಾ ಹಲವು ಜಾತಿಯವರು ತಮ್ಮ ಜಾತಿ ಸೂಚಕರಾಗಿ ಹಳ್ಳಿಗಳಿಗೆ ಹೆಸರನ್ನಿಟ್ಟುಕೊಂಡಿದ್ದಾರೆ.

ಕಾಡಿನ ನಡುವೆ ಇರುವ ಹಳ್ಳಿಯನ್ನು ಕಾಡಹಳ್ಳಿ, ಕಾಡುಹಂಪನಹಳ್ಳಿ, ಕಾಡನೂರು, ಕಾಡಗೋಡಿ, ಕಾಡುಆಲಪನಹಳ್ಳಿ ಎಂದು, ದಂಡು ಎಂದರೆ ಬ್ರಿಟೀಷ್ ಸೈನ್ಯ ಬೀಡು ಬಿಟ್ಟಿದ್ದ ಪ್ರದೇಶದ ಹಿನ್ನೆಲೆಯಲ್ಲಿ ದಂಡುಪಾಳ್ಯ ಎಂಬ ಹೆಸರು ಬಂದಿದೆ.

ವ್ಯಕ್ತಿ ಒಂದು ಕೆರೆಯನ್ನು, ಕುಂಟೆಯನ್ನು ಕಟ್ಟಿಸಿದರೆ ಆ ವ್ಯಕ್ತಿಯ ಹೆಸರನ್ನ ಆ ಗ್ರಾಮಕ್ಕೆ ಅಥವಾ ಆ ಕೆರೆಗೆ ಇಟ್ಟಿರುವುದನ್ನ ಕಾಣಬಹುದು. ಸೂಳೆಕುಂಟೆ, ಗೌಡನಕುಂಟೆ, ನಾರಣಕೆರೆ, ಕೊಂಡಹಳ್ಳಿ, ಬೆತ್ತಿಗೆರೆ, ಗುಂಡುಮಗೆರೆ, ಜಾಲಗೆರೆ, ಕಲ್ಕುಂಟೆ, ನಾಸ್ಕುಂಟೆ ಮಂಗಸಂದ್ರ, ದೇವರಾಯಸಂದ್ರ, ಮಾದರಾಚ್ಚಸಂದ್ರ ಇತ್ಯಾದಿ.

ಕೆಲವು ಪ್ರದೇಶಗಳಲ್ಲಿ ಊರಿನ ಹೆಸರಿನಿಂದ ದೇವಾಲಯಕ್ಕೆ ಹೆಸರು ಬಂತ್ತೊ ಅಥವಾ ದೇವರ ಹೆಸರಿನಿಂದ ಊರಿಗೆ ಹೆಸರು ಬಂತ್ತೊ ಅನ್ನೊ ಗೊಂದಲಗಳು ಉಂಟಾಗುತ್ತದೆ. ಹೊಸಕೋಟೆ ತಾಲ್ಲೂಕಿನ ಧರ್ಮೇಶ್ವರ ದೇವಾಲಯ & ಧರ್ಮಪುರ ಊರಿನ ದೇವಾಲಯದ ಹೆಸರು ಒಂದೇ ಇದ್ದು, ಈ ದೇವಾಲಯವನ್ನು ಚೋಳರು ಜೀರ್ಣೋದ್ಧಾರ ಮಾಡಿರುವುದಕ್ಕೆ ಶಾಸನಾಧರಗಳಿವೆ. ಆದರೆ ಧರ್ಮರಾಯನ ಐತಿಹ್ಯದ ಹಿನ್ನೆಲೆಯಲ್ಲಿ ಧರ್ಮೇಶ್ವರ ದೇವಾಲಯವಾಗಿದ್ದು, ಈ ದೇವಾಲಯವು ಕೊಂಡ್ರಹಳ್ಳಿ, ಹೊಸಪಾಳ್ಯದ ಮಧ್ಯಭಾಗದಲ್ಲಿದ್ದು, ಎರಡು ಊರುಗಳ ಹೊರಗಿದ್ದು, ಕೆಲವರು ಕೊಂಡ್ರಹಳ್ಳಿ ಧರ್ಮೇಶ್ವರ ಎಂದರೆ ಮತ್ತೆ ಕೆಲವರು ಹೊಸಪಾಳ್ಯದ ಧರ್ಮೇಶ್ವರ ಎನ್ನುತ್ತಿದ್ದರು. ಈಗ ಧರ್ಮಪುರವಾಗಿ ದೇವಾಲಯದ ಪಶ್ಚಿಮ ಭಾಗದಲ್ಲಿ ಒಂದು ಊರೇ ನಿರ್ಮಾಣವಾಗಿದೆ.

ದೊಡ್ಡಹುಲ್ಲೂರಿನಲ್ಲಿ ಹುಲ್ಲೇಶ್ವರ ದೇವಾಲಯವಿದ್ದು, ದೇವಾಲಯದ ಹೆಸರಿನಿಂದ ಊರಿಗೆ ಹೆಸರು ಬಂದಿದೆ ಎನ್ನುತ್ತಾರೆ. ವಾಸ್ತವವಾಗಿ ದೊಡ್ಡಹುಲ್ಲೂರಿನಿಂದ ೨ ಕಿ.ಮೀ. ದೂರದಲ್ಲಿನ ಉತ್ತರ ಭಾಗದಲ್ಲಿ ಗ್ರಾಮವಿದ್ದು, ಶಾಸನೋಕ್ತ ಸೋಮೇಶ್ವರನೇ ಹುಲ್ಲೂರಿನ ದೇವರಾಗಿದ್ದು, ಹಳೇ ಊರಿನ ಹೊರಗೆ ಇದ್ದಿರಬೇಕು. ಈಗ ಗ್ರಾಮದ ಪಕ್ಕದಲ್ಲಿರುವುದನ್ನ ಗಮನಿಸಿದರೆ ಯಾವುದೋ ಕಾರಣಕ್ಕೆ ಇಲ್ಲಿನ ಜನ ಇಲ್ಲಿಂದ ಒಂದು ಕಿ.ಮೀ ದೂರ ಹೋಗಿ ಚಿಕ್ಕಹುಲ್ಲೂರು, ೨ ಕಿ.ಮೀ ದೂರ ಹೋಗಿ ದೊಡ್ಡಹುಲ್ಲೂರು ಎಂಬ ಗ್ರಾಮಗಳು ರಚನೆಯಾಗಿದೆ. (ಸ್ಥಳೀಯರನ್ನ ಈ ಬಗ್ಗೆ ಕೇಳಿದ್ದರೆ ಅವರ ತಾತ-ಮುತ್ತಾತನ ಕಾಲದಲ್ಲಿ ಪ್ಲೇಗ್, ಕಾಲರ ಅಂತಹ ಕಾಯಿಲೆಗಳು ಬಂದಾಗ ಊರು ಬಿಟ್ಟು ಬಂದ್ದು ಹೊಲದಲ್ಲಿ ಮನೆಗಳನ್ನು ಕಟ್ಟಿಕೊಂಡಿದ್ದರು ಎಂದು ಹೇಳುತ್ತಾರೆ.) ಹಾಗೂ ಸಾಮಾನ್ಯವಾಗಿ ವೀರರ ಗುಡಿಗಳು ಊರಿನ ಹೊರಗೆ ಹೊಲದಲ್ಲಿ, ಕೆರೆಯ ದಂಡೆಯಲ್ಲಿ ಕಂಡುಬಂದರೆ ಹುಲ್ಲೂರಿನಲ್ಲಿ ಊರಿನ

ಮಧ್ಯಭಾಗದಲ್ಲಿ ಇರುವುದನ್ನು ಗಮನಿಸಿದರೆ ಹೊಲದಲ್ಲಿದ್ದ ದೇವಾಲಯದ ಸುತ್ತಲೂ ಮನೆಗಳು ನಿರ್ಮಾಣವಾಗಿ ಊರು ರಚನೆಯಾಗಿರಬೇಕು.

ಐಗಂಡಪುರದಲ್ಲಿನ ಧರ್ಮರಾಯ, ನಕುಲ, ಸಹದೇವ, ಅರ್ಜುನ, ಭೀಮ ದೇವಾಲಯಗಳ ನಿರ್ಮಾಣಕ್ಕೆ ಇರುವ ಐತಿಹ್ಯ ಪ್ರಭಾವದಿಂದ ತಮಿಳು ಶಾಸನದಲ್ಲಿ ಉಲ್ಲೇಖವಾದ ದೇವರ ಹೆಸರೇ ಮುಂದೆ ಊರಿನ ಹೆಸರಾಗಿ ಪ್ರಸ್ತುತ ಚಾಲ್ತಿಯಲ್ಲಿದೆ. ಯಾವುದೇ ಶಾಸನದಲ್ಲಿ ಐವರುಕಂಡಪುರ ಎಂದು ಉಲೇಖವಾಗಿಲ್ಲ. ಕ್ರಿ.ಶ.೧೦೨೯ ರಲ್ಲಿ ಪಿರಿಯಮಲ್ತುಪುರ[೧೭], ಕ್ರಿ.ಶ.೧೦೩೩ ರಲ್ಲಿ ಕೋಳಸಾಂಬೂಚ್ಚಿ[೧೮], ಕ್ರಿ.ಶ.೧೦೫೦ ರಲ್ಲಿ ಕುಕ್ಕನೂರುನಾಡಿನ ಊರು[೧೯] ಎಂದು ಉಲ್ಲೇಖವಾಗಿದ್ದು, ಕ್ರಿ.ಶ.೧೧೧೩ ರಲ್ಲಿ ಕುಲೋತ್ತುಂಗ ಚೋಳನ ಕಾಲದಲ್ಲಿ ಉಲ್ಲೇಖವಾದ ಪೆರಿಯಮುತ್ತಕೂರು[೨೦] ಎಂಬುದು ಐಗಂಡಪುರದ ಹಳೆಯ ಹೆಸರಾಗಿದ್ದು, ಕ್ರಿ.ಶ.೧೨೯೭[೨೧], ಕ್ರಿ.ಶ.೧೩೦೧[೨೨], ಕ್ರಿ.ಶ.೧೫೬೬[೨೩] ರ ಕಾಲದ ಶಾಸನಗಳಲ್ಲಿ ದೇವಾಲಯವನ್ನು ಮಾತ್ರ ಉಲ್ಲೇಖಿಸುತ್ತದೆ ವಿನಃ ಊರಿನ ಹೆಸರನ್ನು ಉಲ್ಲೇಖಿಸುವುದಿಲ್ಲ. ಕರ್ಲಮಂಗಲರವರ ಕೆಂಪೇಗೌಡನ ಜಯ ಪ್ರಶಸ್ತಿಯಲ್ಲಿಯೂ[೨೪] ಮಾಗಡಿ ಕೆಂಪೇಗೌವುಡರಯ್ಯನವರು ಆಯಿವರು ಕಂಡಪುರವನ್ನು ಅಗ್ರಹಾರವನ್ನಾಗಿ ಮಾಡಿದರು. ಎಂದೇ ಉಕ್ತವಾಗಿದೆ.

ಜಿಲ್ಲಾ ಪರಿಸರದಲ್ಲಿ ಗಂಗರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರ, ಆಳ್ವಿಕೆಯ ಹಲವಾರು ಶಾಸನಗಳಲ್ಲಿ ಭೂಮಿ, ಕೆರೆ, ಗ್ರಾಮಗಳನ್ನು ದಾನ ನೀಡಿರುವ ಉಲ್ಲೇಖಗಳನ್ನು ಕಾಣಬಹುದು. ಗ್ರಾಮನಾಮಗಳು ಕ್ರಿ.ಶ.೫೪೮ ರ ಗಂಗರ ಮೊದಲ ಶಾಸನದಿಂದಲೂ ಲಭಿಸುತ್ತದೆ. ಮೊದಲಿನ ಅನೇಕ ಗ್ರಾಮನಾಮಗಳು ಕಾಲಕ್ಕೆ ತಕ್ಕಂತೆ ಹೊಸದಾಗಿ ರೂಪುಗೊಳ್ಳುತ್ತಾ ಹೋಗಿದೆ. ಕ್ರಿ.ಶ.೧೨೦೦ ರಿಂದ ೧೫೦೦ ವರೆಗಿನ ಶಾಸನಗಳಲ್ಲಿ ವ್ಯಕ್ತಿಗಾಗಲಿ ಅಥವಾ ದೇವಾಲಯಗಳಿಗಾಗಲಿ ಊರು ಊರನ್ನೆ ದಾನ ನೀಡುವ ಪ್ರಕ್ರಿಯೆ ಚಾಲ್ತಿಯಲ್ಲಿತ್ತು. ದಾನ ನೀಡುವ ಗ್ರಾಮದ ಜೊತೆಗೆ ಕೆಲವೊಮ್ಮೆ ಅಕ್ಕ-ಪಕ್ಕದ ಗ್ರಾಮಗಳ ಹೆಸರನ್ನು ದಾಖಲಿಸುತ್ತಿದ್ದರು. ಕ್ರಿ.ಶ.೧೫೦೦ ರ ನಂತರ ಗ್ರಾಮನಾಮಗಳ ಪ್ರಸ್ತಾಪವೇ ಕಡಿಮೆ ಆಯಿತು.

---

[೧೭] ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಸೋಲದೇವನಹಳ್ಳಿ.
[೧೮] ಎ.ಕ-೯, ನೆ.ತಾ.೩೭, ಕ್ರಿ.ಶ.೧೦೩೩, ಅಯಿಗಂಡಪುರ.
[೧೯] ಎ.ಕ-೯, ನೆ.ತಾ.೩೮ ಸಿ, ಕ್ರಿ.ಶ.೧೦೫೦, ಅಯಿಗಂಡಪುರ.
[೨೦] ಎ.ಕ-೯, ನೆ.ತಾ.೩೮ ಎ, ಕ್ರಿ.ಶ.೧೧೧೩, ಅಯಿಗಂಡಪುರ.
[೨೧] ಎ.ಕ-೯, ನೆ.ತಾ.೩೮ ಬಿ, ಕ್ರಿ.ಶ.೧೨೯೭, ಅಯಿಗಂಡಪುರ.
[೨೨] ಎ.ಕ-೯, ನೆ.ತಾ.೩೮, ಕ್ರಿ.ಶ.೧೩೦೧, ಅಯಿಗಂಡಪುರ.
[೨೩] ಎ.ಕ-೯, ನೆ.ತಾ.೩೯, ಕ್ರಿ.ಶ.೧೫೬೬, ಅಯಿಗಂಡಪುರ.
[೨೪] ಕರ್ಲಮಂಗಲ : ಕೆಂಪೇಗೌಡನ ಜಯ ಪ್ರಶಸ್ತಿ, ಪು.ಸಂ-೧೮.

ನೆಲಮಂಗಲವನ್ನು ಕಂಚುಗಾರ ಬೈಚನೆಂಬುವನು ಆಳುತ್ತಿದ್ದು, ತನ್ನ ಹೆಂಡತಿಯ ಹೆಸರನ್ನೆ ನೀಲಾವತಿ ಪಟ್ಟಣವೆಂಬ ಹೆಸರಿಟ್ಟು ಬೈಚನ ಅಂತ್ಯವಾದ ಮೇಲೆ ನೊಳಂಬರ ಅಧೀನಕ್ಕೆ ಒಳಪಟ್ಟ ಮೇಲೆ ನೊಳಂಬ ಮಂಗಲವು ನೊಳಮಂಗಲವಾಗಿ ನಂತರ ನೆಲಮಂಗಲವಾಗಿದೆ ಎಂಬ ಅಭಿಪ್ರಾಯವಿದೆ. ನೀಲಾವತಿಪಟ್ಟನ, ನೊಳಂಬಮಂಗಲ ಈ ಕತೆಗಳನ್ನು ಒಪ್ಪಲು ಆಗುವುದಿಲ್ಲ. ಮಂಗಲವೆಂದರೆ ಸಾಮನ್ಯವಾಗಿ ಅಗ್ರಹಾರವಾಗಿರುತ್ತದೆ. ಬಹುಶಃ ನೆಲಮಂಗಲ ಅಗ್ರಹಾರವಾಗಿರಬೇಕು. ಆದರೆ ಶಾಸನದಲ್ಲಿ ನೆಲವಂಗಲ[೨೫] ಎಂದು ಉಲ್ಲೇಖವಾಗಿದೆ. ನೆಲವಂಗಲ ನಂತರ ನೆಲಮಂಗಲವಾಗಿರಬೇಕು. ನೆಲಮಂಗಲ ಸ್ಥಳನಾಮದ ಬಗ್ಗೆ ನಿಖರವಾದ ಪುರಾವೆಗಳು ದೊರೆತಿಲ್ಲ ಕೇವಲ ಐತಿಹ್ಯಗಳು ಮಾತ್ರಯಿದೆ.

**ಬಿನ್ನಮಂಗಲ** : ಬಿನ್ನ ಎಂದರೆ ಇಬ್ಭಾಗ ಮಾಡು, ಬೇರ್ಪಡಿಸು ಎಂದರ್ಥ, ಮಂಗಲ ಎಂದರೆ ಅಗ್ರಹಾರ ಅಥವಾ ಕೋಟೆಯನ್ನು ಬೇರ್ಪಡಿಸುವ ಸ್ಥಳವೇ ಬಿನ್ನಮಂಗಲವಾಗಿದೆ. ಕನ್ನಡ ಶಾಸನದಲ್ಲಿ ಭಿನ್ನಮಂಗಲ[೨೬], ತಮಿಳು ಶಾಸನದಲ್ಲಿ[೨೭] ವಿನ್ನಮಂಗಲ ಎಂದು ಉಲ್ಲೇಕವಾಗಿದೆ. ಚೋಳರು ಮುಕ್ತಿನಾಥೇಶ್ವರ ದೇವಾಲಯ ನಿರ್ಮಾಣ ಮಾಡಿದ ಮೇಲೆ ಬಹುಶಃ ತಮಿಳು ಬ್ರಾಹ್ಮಣರನ್ನು ಕರೆ ತಂದು ದೇವಾಲಯಕ್ಕೆ ಹೊಂದಿಕೊಂಡಂತೆ ಅಗ್ರಹಾರವನ್ನು ನಿರ್ಮಾಣ ಮಾಡಿ ಕೋಟೆಯನ್ನು ವಿಭಾಗ ಮಾಡಿದ್ದರಿಂದಲೇ ಬಿನ್ನಮಂಗಲ ಎಂದು ನಾಮಧೇಯ ಇಟ್ಟಿರಬೇಕು. ಸಾಮಾನ್ಯವಾಗಿ ಚೋಳರು ಶೈವ ದೇವಾಲಯವನ್ನು ನಿರ್ಮಾಣ ಮಾಡಿ ಅಥವಾ ಜೀರ್ಣೋದ್ದಾರ ಮಾಡಿದ ಮೇಲೆ ತಮಿಳು ಬ್ರಾಹ್ಮಣರನ್ನು ನೇಮಿಸಿರುವುದಕ್ಕೆ ಬೇಗೂರಿನ ನಗರೇಶ್ವರ ದೇವಾಲಯ, ಧರ್ಮಪುರದ ಧರ್ಮರಾಯ ದೇವಾಲಯ, ಜ್ಯೋತಿಪುರದ ಜ್ಯೋತಿಲಿಂಗೇಶ್ವರ ದೇವಾಲಯ, ಕಿತಗನೂರಿನ ಗೋಪಾಲಸ್ವಾಮಿ (ಶಾಸನೋಕ್ತ ...ತೇವ ಪೆರುಮಾಳ್) ದೇವಾಲಯಗಳಲ್ಲಿ ಈಗಲೂ ಪೂಜೆಯನ್ನು ಮಾಡುತ್ತಿರುವ ಅರ್ಚಕರ ಆಧಾರದ ಮೇಲೆ ಊಹಿಸಬಹುದು. ಮತ್ತೊಂದು ಅರ್ಥದಲ್ಲಿ (ಕನ್ನಡ ನಿಘಂಟುನಲ್ಲಿ) ಬಿನ್ನ ಎಂದರೆ ಜಂಗಮರನ್ನು ಊಟಕ್ಕೆ ಆಹ್ವಾನಿಸುವುದು, ಮಂಗಲವೆಂದರೆ ಶುಭಕರ ಸಂಕೇತ ಎಂದು. ಬಹುಶಃ ಜಂಗಮರು ಈ ಪ್ರದೇಶದಲ್ಲಿ ಮಠವನ್ನು ನಿರ್ಮಿಸಿಕೊಂಡು ಇದ್ದಿರಬಹುದು. ಇದರಿಂದಾಗಿ ಬಿನ್ನಮಂಗಲ ಅಂತ ಹೆಸರು ಬಂದಿರಬಹುದು ಎಂಬ ಅನುಮಾನವಿದೆ.

[೨೫] ಎ.ಕ-೯, ದೊ.ತಾ.೫೧, ಕ್ರಿ.ಶ.೧೪೬೪, ಕನಸವಾಡಿ. & ನೆ.ತಾ.೧೦೪, ಮಹದೇವಪುರ, ನೆ.ತಾ.೮, ಕ್ರಿ.ಶ.೧೭೬೩, ಸೊಂಡೇಕೊಪ್ಪ.
[೨೬] ಎ.ಕ-೯, ನೆ.ತಾ.೨, ಕ್ರಿ.ಶ.೧೫೩೫, ಬಿನ್ನಮಂಗಲ.
[೨೭] ಎ.ಕ-೯, ನೆ.ತಾ.೩, ಕ್ರಿ.ಶ.೧೧೧೦, ತಮಿಳು, ಬಿನ್ನಮಂಗಲ & ಬೆಂ.೧೧, ಕ್ರಿ.ಶ.೧೨೬೬, ತಮಿಳು, ದೊಮ್ಮಲೂರು.

**ಮಣ್ಣೆ** : ಗಂಗರಾಜರಿಂದ ಮಾನ್ಯತೆ ಪಡೆದ ಶಾಸನೋಕ್ತ ಮಾನ್ಯನಗರ[೨೮]ವನ್ನು ಚೋಳರು ಆಕ್ರಮಿಸಿದ ನಂತರ ಮಣ್ಣೆನಾಟ್ (ನಾಡು) ಯಾವಾಗ, ಯಾಕೆ ಆಯಿತ್ತು ಎಂಬ ಮಾಹಿತಿಗಳಿಲ್ಲ.

**ತ್ಯಾಮಗೊಂಡ್ಲು** : ತ್ಯಾಮ ಎಂಬ ವ್ಯಕ್ತಿಯು ಆಳ್ವಿಕೆ ಮಾಡುತ್ತಿದ್ದರಿಂದಾಗಿ ಈ ಹೆಸರು ಬಂದಿದೆ ಎಂಬುದು ಸ್ಥಳೀಯರ ಅಭಿಪ್ರಾಯ. ತೆಲುಗುನಲ್ಲಿ ತ್ಯಾಮ ಎಂದರೆ ಕನ್ನಡದಲ್ಲಿ ತೇವಾಂಶ ಎಂದರ್ಥ. ಗೊಂಡ್ಲು ಎಂದರೆ ಕಲ್ಲು ಬಂಡೆಗಳಿರುವ ಪ್ರದೇಶವೆಂದು, ಸಾಮನ್ಯವಾಗಿ ಬೆಟ್ಟ-ಗುಡ್ಡದ ತಪ್ಪಲಿನಲ್ಲಿ ತೇವಾಂಶ ಇದ್ದೆ ಇರುತ್ತದೆ. ಆದ್ದರಿಂದ ತೆಲುಗಿನ ಶಬ್ದದಿಂದ ಈ ಗ್ರಾಮನಾಮ ಉತ್ಪತ್ತಿಯಾಗಿರ ಬಹುದು. ಮೊದಲು ಈ ಪ್ರದೇಶದಲ್ಲಿ ತೆಲುಗು ಭಾಷಿಕರು ಹೆಚ್ಚಾಗಿ ಇದ್ದರಂತೆ. ತೆಲುಗುನಲ್ಲಿ ತ್ಯಾಮಗೊಂಡ್ಲು ಎಂದರೆ ಕನ್ನಡದಲ್ಲಿ ಸದಾ ತೇವಾಂಶದಿಂದ ಕೂಡಿದ ಪ್ರದೇಶವೆಂದು. ಶಾಸನದಲ್ಲಿಯೂ ಸಹ ತೇಮಗೊಡ್ಲ[೨೯] ಎಂದು ಉಲ್ಲೇಖವಾಗಿದೆ.

**ನಿಜಗಲ್ಲು** : ಹೊಯ್ಸಳರ ಕಾಲದಲ್ಲಿ ನಿಜಗಲಿಪುರವೆಂದೂ, ವಿಜಯನಗರ ಅರಸರ ಕಾಲದಲ್ಲಿ ಶೂರಗಿರಿ, ಸೂರಗಿರಿ ದುರ್ಗವೆಂದು, ಮೈಸೂರು ಒಡೆಯರ ಕಾಲದಲ್ಲಿ ನಿಜಗಲ್ಲು ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ನಿಜ + ಕಲಿ = ನಿಜಗಲಿಯಾಗಿದ್ದು, ಅಂದರೆ ನಿಜವಾದ ಶೂರರ, ಕಲಿಗಳ (ವೀರರು) ನಾಡಾಗಿದ್ದರಿಂದ ಶೂರಗಿರಿ ಸುತ್ತ ಬೆಟ್ಟಗಳಿಂದ ಆವೃತವಾಗಿರುವುದರಿಂದ ಬಹುಶಃ ನಿಜಗಲ್ಲು ಎಂದಾಗಿರಬಹುದು. ದುರ್ಗವನ್ನು ಒಳಗೊಂಡಂತೆ ಗ್ರಾಮವನ್ನು ಹಳೇ ನಿಜಗಲ್ಲು ಎಂದೇ ಈಗಲೂ ಕರೆಯುವುದುಂಟು.

**ಹ್ಯಾಡಾಳು** : ಮಹಾನಾಡಿನ ಹೆದ್ದಾಳ (ದೊಡ್ಡಸೈನ್ಯ) ನಿಂತ ಸ್ಥಳವೇ ಹೆದ್ದಾಳ (ಹಿರಿದಾದ+ದಳ) ಎಂದು. ದಳ ಎಂದರೆ ಸೈನ್ಯ, ಗುಂಪು, ಒಂದು ಬಗೆಯ ತೆರಿಗೆ ಎಂಬ ನಾನಾ ಅರ್ಥಗಳಿದ್ದು, ಹಿರಿದಾದ ಸೈನ್ಯ ಎಂಬ ಅರ್ಥದಲ್ಲಿ ಈ ಸ್ಥಳನಾಮ ನಿಷ್ಪತ್ತಿಯಾಗಿರಬಹುದು. ಕಾಲ ಹುರುಳಿದಂತೆ ಹೆದ್ದಾಳು > ಹ್ಯಾಡಾಳು ಆಗಿರಬಹುದು.

---

[೨೮] ಎ.ಕ-೯, ನೆ.ತಾ.೬೦, ಕ್ರಿ.ಶ.೭೯೭, ಮಣ್ಣೆ.
[೨೯] ಎ.ಕ-೯, ನೆ.ತಾ.೫೨, ಕ್ರಿ.ಶ.೧೫೬೬, ತ್ಯಾಮಗೊಂಡ್ಲು.

**ಹೆಗ್ಗುಂದ** : ಹೊಯ್ಸಳ ಕಾಲದಲ್ಲಿ ಪೊಕ್ಕುಂದ ಎಂದು ಕರೆಯುತ್ತಿದ್ದು, ಪ ಕಾರಕ್ಕೆ ಹ ಕಾರ ಆದೇಶವಾಗಿ ಪೊಕ್ಕುಂದ > ಹೆಗ್ಗುಂದವಾಗಿರ[೩೦] ಬಹುದು. ಶಾಸನೋಕ್ತವಾದ ಹಯಗುಂದ[೩೧]ವು ಈಗ ಹೆಗ್ಗುಂದವಾಗಿದೆ.

**ಹೆಜ್ಜಾಲ** : ಹಿರಿದಾದ + ಜಾಲ = ಹೆಜ್ಜಾಲ ಎಂದಾಗಿದೆ. ಜಾಲ ಎಂದರೆ ಒಂದು ಬಗೆಯ ಮರ, ಬಲೆ, ಕಿಟಕಿ ಮುಂತಾದ ಅರ್ಥಗಳಿದ್ದು, ಈ ಪ್ರದೇಶವೆಲ್ಲಾ ಅರಣ್ಯದಿಂದ ಕೂಡಿದ್ದಾಗಿದ್ದು, ದೊಡ್ಡ ಜಾಲಿ ಮರಗಳು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಬಹುಶಃ ಸಸ್ಯವಾಚಿಯಿಂದ ಈ ಸ್ಥಳನಾಮ ಹುಟ್ಟಿರಬಹುದು.

**ವಾಣಪುರಮ್** : ವ್ಯಾಪಾರಿವರ್ಗದಲ್ಲಿನ ವಣ, ಬಾಣಜಿಗರೂ ಹೆಚ್ಚಿನ ಪ್ರಾಮಾಣದಲ್ಲಿ ಇಲ್ಲಿ ವ್ಯಾಪಾರ ವಹಿವಾಟುಗಳನ್ನು ನಡೆಸುವ ಅಥವಾ ವಾಸಿಸುವ ಸ್ಥಳವಾಗಿರಬೇಕು. ಇದಕ್ಕೆ ಪೂರಕವೆಂಬಂತೆ ಕ್ರಿ.ಶ.೧೦೩೩ ರ ಮತ್ತು ಕ್ರಿ.ಶ.೧೦೩೮ ರ ತಮಿಳು ಶಾಸನದಲ್ಲಿ ಈಗಿನ ಚಿಕ್ಕಬಾಣಾವರದಲ್ಲಿ ವಣಪ್ಪೂರಮ್ ಎಂದು, ಈ ವಣಪುರದ ಗಾಮುಂಡನಾದ ಮಾಣಿಕ್ಯ ಶೆಟ್ಟಿ ಎಂಬುವನ್ನು ಅಧಿಕಾರ ನಡೆದುತ್ತಿದ್ದರು. ಈ ಹಿನ್ನೆಲೆಯಲ್ಲಿ ಹೆಸರು ಬಂದಿರಬಹುದು.

**ದೊಡ್ಡಬಳ್ಳಾಪುರ ತಾಲ್ಲೂಕಿನ ಚಿಕ್ಕಹೆಜ್ಜಾಜಿ** : ಜಾಜಿ ಎಂದು ಹೆಸರುವಾಸಿಯಾದ ಹೂವು ಈ ಊರಿನಲ್ಲಿ ಹೆಚ್ಚಾಗಿರುವುದರಿಂದ ಹೆಸರು ಬಂತು ಎಂದು ಸ್ಥಳೀಯರು ಹೇಳಿದ್ದಾರೆ. ಹಿರಿದು+ಜಾಜಿ=ಹೆಜ್ಜಾಜಿ ಆಗಿರಬಹುದು. ಕೆರೆಯ ದಂಡೆಯ ಎರಡು ಕಡೆ ಊರು ಇರುವುದರಿಂದ ಚಿಕ್ಕ, ದೊಡ್ಡ ಎನ್ನುವ ಅಳತೆಯ ಸೇರಿ ಗ್ರಾಮ ರಚನೆಯಾಗಿರಬೇಕು. ಒಂದಕ್ಕೆ ಚಿಕ್ಕ ಹೆಜ್ಜಾಜಿ, ಇನ್ನೊಂದು ದೊಡ್ಡ ಹೆಜ್ಜಾಜಿ ಎಂದು.

**ಹುಲುಕುಂಟೆ** : ಈ ನಾಡನ್ನು ಆಳುತ್ತಿದ್ದ ನರಸಿಂಹ ಎಂಬುವನು ಬೇಟೆಯಾಡುವ ಹವ್ಯಾಸ ಇದ್ದುದರಿಂದ ಸದಾ ಬೇಟೆ ಆಡುತ್ತಿದ್ದನು. ಒಂದು ದಿನ ಕಾಡಿನಲ್ಲಿದ್ದ ಒಂದು ಕುಂಟೆಗೆ ಹುಲಿಗಳು ಬರಲು ಆ ಹುಲಿಯನ್ನು ಕೊಂದನೆಂದೂ ಆ ಸ್ಥಳಕ್ಕೆ ಹುಲಿಕುಂಟೆ ಎಂಬ ಹೆಸರು ಬಂತ್ತು ಎಂಬ ಕತೆಯು ಸುತ್ತಮುತ್ತಲಿನ ಗ್ರಾಮಗಳಲ್ಲಿಯೂ ಜಾರಿಯಲ್ಲಿದ್ದು, ಪ್ರತಿ ವರ್ಷ ಯುಗಾದಿ ಕಳೆದ ಮಾಸದಲ್ಲಿ ಬೇಟೆಯಾಡುವ ಪದ್ಧತಿಯನ್ನು ಊರಿನಲ್ಲಿ ಈಗಲೂ ಆಚರಿಸಿಕೊಂಡು ಬಂದಿರುತ್ತಾರೆ. ಊರಿನಲ್ಲಿರುವ ಪಾಳೆಯಗಾರರ ಕಾಲದಿಂದಲೂ ಬೇಟೆಗೆ ಹೋಗೊ ಮೊದಲು ಬೇಟೆಗಾರರು ಈ

---

[೩೦] ಎ.ಕ-೯, ನೆ.ತಾ.೫೧, ಕ್ರಿ.ಶ.೧೭೬೩, ತ್ಯಾಮಗೊಂಡ್ಲು.
[೩೧] ಎ.ಕ-೯, ನೆ.ತಾ.೧೬೪, ಹೆಗ್ಗುಂದ.

ರಂಗನಾಥಸ್ವಾಮಿಯನ್ನು ಪ್ರಾರ್ಥಿಸಿ ಬೇಟೆಗೆ ಹೋಗುವುದು ಹಾಗೂ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಈ ದೇವಾಲಯಕ್ಕೆ ಬೇಟೆ ರಂಗನಾಥಸ್ವಾಮಿ ಎಂದೇ ಹೆಸರು ಈಗಲೂ ಜಾರಿಯಲ್ಲಿದೆ. ಹುಲುಕುಂಟೆ ಪದವನ್ನು ಬಿಡಿಸಿದರೆ ಹುಲ್ಲು + ಕುಂಟೆಯಾಗುತ್ತದೆ. ಬಹುಶಃ ಕುಂಟೆಯ ಅಕ್ಕ-ಪಕ್ಕ ತೇವ ಇರುವುದರಿಂದ ಸದಾ ಹುಲ್ಲು ಬೆಳೆಯುತ್ತಿದ್ದು ಆ ಸಸ್ಯವಾಚಿ ಮೂಲಕ ಸ್ಥಳನಾಮ ನಿಷ್ಪತ್ತಿಯಾಗಿರಬಹುದು.

**ದೇವನಹಳ್ಳಿ ತಾಲ್ಲೂಕಿನ ವಿಜಯಪುರ :-** ವೇದಗಾನಹಳ್ಳಿ, ದೇವಾಲಯಗಳ ನಗರಿ ಎಂದೆಲ್ಲಾ ಕರೆಯುತ್ತಿದ್ದು, ಆಡು ಭಾಷೆಯಲ್ಲಿ ಮತ್ತು ಶಾಸನದಲ್ಲಿ ವಡಿಗೇನಹಳ್ಳಿಯೆಂದು, ವಡಿಗೆಯಹಳ್ಳಿ[೩೨] ಹಾಗೂ ವಡಿಗೇನಹಳ್ಳಿಗೆ ಪ್ರತಿನಾಮಕ್ಕೆ[೩೩]ಯಿದ್ದು, ವಡಿಗೆ ಎಂದರೆ ಇರು, ಹಂಚುಕೊಂಡು ಎಂಬೆಲ್ಲಾ ಅರ್ಥಯಿದ್ದು, ಸುಮಾರು ೩೫ ವರ್ಷಗಳ ಇತ್ತೀಚೆಗೆ ವಿಜಯಪುರವಾಗಿದೆ.

**ಬೂದಿಗೆರೆ :-** ಬೂದಿಗೆರೆಗೆ ಹಿಂದೆ ಭಸ್ಮ ರೇಖಾಪುರಿ ಎಂಬ ಹೆಸರಿತ್ತಂತೆ. ಇಲ್ಲಿನ ಬೃಹತಾದ ಕೆರೆಯಲ್ಲಿ ಹೇರಳವಾಗಿ ಬೂದಿ ಸಿಗುತ್ತಿರುವುದರಿಂದಾಗಿ ಬೂದಿ ಕೆರೆ ಎಂದು ಕರೆಯುತ್ತಿದ್ದು ಕ ಕಾರ ಕ್ಕೆ ಗ ಕಾರ ಆದೇಶವಾಗಿ ಬೂದಿಗೆರೆಯಾಗಿದೆ.

**ಹೊಸಕೋಟೆ ತಾಲ್ಲೂಕಿನ ನಂದಗುಡಿ** : ನಂಜ ಎಂಬುದು ಬೌದ್ಧ ಸನ್ಯಾಸಿಯ ಹೆಸರಾಗಿದ್ದು, ಗುಳ ಎಂದರೆ ಕುಂಟೆ, ನೀರಿನ ತಾಣವಾಗಿದ್ದು, ವಾಸ್ತವವಾಗಿ ಸುತ್ತ ಮುತ್ತೆಲ್ಲ ಔಷಧಗುಣಗಳುಳ್ಳ ಸಸ್ಯ ಬೆಳೆಯುತ್ತಿದ್ದ ಪ್ರದೇಶವಾಗಿದ್ದರಿಂದ ನಂಜಿಗುಳ ಎಂಬ ಹೆಸರು ಬಂದಿದ್ದು, ಕಾಲಾಂತರದಲ್ಲಿ ನಂದಗುಡಿಯಾಗಿ ಬದಲಾಗಿದೆ ಎಂದು ಸ್ಥಳಿಯರು ಹೇಳುತ್ತಿದ್ದಾರೆ. ಶಾಸನದಲ್ಲಿ ಕ್ರಿ.ಶ.೯೦೦, ನಂದಿಗುನ್ದ[೩೪], ಕ್ರಿ.ಶ.೯೫೦ರಲ್ಲಿ ನಂದ್ದಿಗೊಳ[೩೫], ಕ್ರಿ.ಶ.೧೦೬೫ರಲ್ಲಿ ನೊಂದುಕೊಲ್ಲಿ[೩೬], ಕ್ರಿ.ಶ.೧೧೪೫ರಲ್ಲಿ ನೊನ್‌ದನ್‌ಗೊಲಂ[೩೭], ಕ್ರಿ.ಶ.೧೫೩೦ರಲ್ಲಿ ನಂದಗುಳ[೩೮], ಕ್ರಿ.ಶ.೧೫೫೯ರಲ್ಲಿ ನಂಜಿಗುಳ[೩೯], ನಂಗುಳ[೪೦] ಎಂದೆಲ್ಲಾ ಮಾರ್ಪಾಟಾಗಿರುವುದನ್ನು ಕಾಣಬಹುದು. ಈ ಗ್ರಾಮದಲ್ಲಿ ಅಮೃತ ಮಲ್ಲಿಕಾರ್ಜುನ

[೩೨] ಎ.ಕ-೯, ದೇ.ತಾ.೨೯, ೧೬, ೩೭, ೭೦, ೭೧, ಕ್ರಿ.ಶ.೧೬೯೮, ವಡಿಗೇನಹಳ್ಳಿ, ದೇವನಹಳ್ಳಿ, ಸಿಂಗರಹಳ್ಳಿ.
[೩೩] ಎ.ಕ-೯, ದೇ.ತಾ.೩೩, ಕ್ರಿ.ಶ.೧೫೭೪, ಕೊಂಡೇನಹಳ್ಳಿ.
[೩೪] ಎ.ಕ-೯, ದೇ.ತಾ.೪೨, ಕ್ರಿ.ಶ.೯೦೦, ಅರದೇಶನಹಳ್ಳಿ.
[೩೫] ಎ.ಕ-೯, ಹೊ.ತಾ.೩೭, ಕ್ರಿ.ಶ.೯೫೦, ಕೊಂಡಹಳ್ಳಿ.
[೩೬] ಎ.ಕ-೯, ಹೊ.ತಾ.೩೬, ಕ್ರಿ.ಶ.೧೦೬೫, ತಮಿಳು, ಹೊಸಹಳ್ಳಿ.
[೩೭] ಎ.ಕ-೯, ಹೊ.ತಾ.೪೦, ಕ್ರಿ.ಶ.೧೧೪೫, ತಮಿಳು, ವೋಬಳನಹಳ್ಳಿ.
[೩೮] ಎ.ಕ-೯, ಹೊ.ತಾ.೨೮, ಕ್ರಿ.ಶ.೧೫೩೦, ವಡ್ಡರಹಳ್ಳಿ.
[೩೯] ಎ.ಕ-೯, ಹೊ.ತಾ.೧ & ೨, ಕ್ರಿ.ಶ.೧೫೫೯, ನಂದಗುಡಿ.
[೪೦] ಎ.ಕ-೯, ಅನುಬಂಧ, ಹೊ.ತಾ.೧೯೬, ನಂದಗುಡಿ.

ದೇವಾಲಯವಿದ್ದು ನಂಜುಗೆ ವಿರುದ್ಧ ಅಮೃತ ಹೆಸರಲ್ಲೆ ಈಶ್ವರನ ದೇವಾಲಯವಿರುವುದನ್ನು ಗಮನಿಸಿದರೆ ಬಹುಶಃ ಈಶ್ವರನ ಹಿನ್ನೆಲೆಯಲ್ಲಿ ನಂಜಿಗುಳ ಸ್ಥಳನಾಮ ಬಂದಿರಬಹುದು.

**ಕಾಡುಗೋಡಿ** :- ಕಾಡಿನ ಮಧ್ಯ ಈಶ್ವರನ ಗುಡಿ ಇರುವುದರಿಂದಾಗಿ ಕಾಡಿನ ಗುಡಿ ಎಂಬ ಹೆಸರು ಬಂದಿದ್ದು, ಕಾಲಾಂತರದಲ್ಲಿ ಉಚ್ಛಾರಣೆಯ ದೃಷ್ಟಿಯಿಂದಾಗಿ ಕಾಡುಗೋಡಿಯಾಗಿದೆ. ಶಾಸನದಲ್ಲಿ ಕಾಡುಮಂಗಲ, ಕಾಡುಗುಡಿ, ಕಾಡಗೋಡಿ[೪೧], ಕಾಡಾಂಗೋಡಿ[೪೨] ಎಂದು ಉಲ್ಲೇಖವಾಗಿದೆ.

**ವಾಗಟ** : ಚೋಳರ ಕಾಲದಲ್ಲಿ ಉಲ್ಲೇಖವಿರುವ ..ವಾರದೊಳು[೪೩] ಎಂಬುದು ವಾಗಟದ ಮೊದಲ ಹೆಸರು ಆಗಿರಬಹುದು. ಹೊಯ್ಸಳರ ಕ್ರಿ.ಶ.೧೨೯೭ ರಿಂದ ೧೩೪೨ರ ವರೆಗೂ ಇವತ್ತನ್ ಅಥವಾ ವರದರಾಜ ಚರ್ತುವೇದಿ ಮಂಗಲವಾದ[೪೪] ವಾಗಟದಲ್ಲಿ ಇವತ್ತು ಅಗ್ರಹಾರ ಎಂಬ ಒಂದು ಬೀದಿನೇ ಇದೆ. ವಿಜಯನಗರ ಕಾಲಕ್ಕೆ ಭಾಗೀರತಿಪುರ[೪೫], ವೊಗಟ್ಟ, ವಾಗಟ[೪೬] ಎಂದು ಬದಲಾಗಿ ಈಗಲೂ ವಾಗಟ ಅಂತನೇ ಜಾರಿಯಲ್ಲಿದೆ. ಇದು ಬಯಲು ಪ್ರದೇಶವಾಗಿದೆ ಆದರೂ ಗಟ್ಟ ಹೆಸರು ಹೇಗೆ ಬಂತ್ತು ಅನ್ನೊ ಅನುಮಾನಗಳು ಕಾಡುತ್ತಿದೆ.

ಗಂಗವಾರವನ್ನು ಶಾಸನದಲ್ಲಿ ಗಂಗಪುರ[೪೭] ಎಂದು ದೇವನಹಳ್ಳಿಯನ್ನು ಕ್ರಿ.ಶ.೧೫೩೦ರಲ್ಲಿ ದೇವಣಾಪುರ[೪೮], ಕ್ರಿ.ಶ.೧೬೯೮ರಲ್ಲಿ ದೇವನಪುರ[೪೯], ಕ್ರಿ.ಶ.೧೭೫೦ರಲ್ಲಿ ದ್ಯಾವಂಡಹಳ್ಳಿ[೫೦] ಎಂದೆಲ್ಲಾ ಕರೆಯಲಾಗಿದೆ. ಶಾಸನದಲ್ಲಿ ಉಲ್ಲೇಖವಾಗಿದ್ದು ಈಗಲೂ ಅದೇ ಹೆಸರಿನಿಂದ ಮುಂದುವೆಸಿಕೊಂಡಿರುವ ಹಲವಾರು ಗ್ರಾಮನಾಮಗಳನ್ನು ಕಾಣಬಹುದು. ಗಂಗರ ಕಾಲದ ಮಲ್ಲೋಹಳ್ಳಿಯ ತಾಮ್ರಶಾಸನದಲ್ಲಿ ತಿಪ್ಪೂರು, ಮೇಲೂರು[೫೧], ಅತ್ತಿಗುನ್ನೂದುರು, ಹುರುಳಚಿಕ್ಕನಹಳ್ಳಿ, ಸೋಲದೇವನಹಳ್ಳಿ[೫೨], ಆಲೂರು[೫೩], ನೊಳಂಬರ[೫೪] ಮತ್ತು ಚೋಳರ ಕಾಲದಲ್ಲಿ ನೆಲ್ಲಿಗೆರೆ[೫೫], ಕನ್ನಡ ಶಾಸನದಲ್ಲಿ ಪಟ್ಟನ್ನೂದ್ದರು[೫೬], ತಮಿಳು

---

[೪೧] ಎ.ಕ-೯, ಹೊ.ತಾ.೧೪೭, ಕ್ರಿ.ಶ.೧೩೪೨, ಪಟ್ಟಂದೂರು. & ಬೆಂ.೪೧, ಕ್ರಿ.ಶ.೧೩೪೩, ಪಟ್ಟಂದೂರು.
[೪೨] ಎ.ಕ-೯, ಹೊ.ತಾ.೧೫೪, ಕ್ರಿ.ಶ.೧೩೮೨, ಚಿಕ್ಕಬನಹಳ್ಳಿ.
[೪೩] ಎ.ಕ-೯, ಹೊ.ತಾ.೧೭೯, ಕ್ರಿ.ಶ.೧೦೨೮, ವಾಗಟ.
[೪೪] ಎ.ಕ-೯, ಹೊ.ತಾ.೧೩೬,೧೩೮, ಕ್ರಿ.ಶ.೧೨೯೭, ಹೊ.ತಾ.೧೩೪, ೧೩೭, ಕ್ರಿ.ಶ.೧೩೩೬, ಹೊ.ತಾ.೧೩೫, ಕ್ರಿ.ಶ.೧೩೪೨, ವಾಗಟ.
[೪೫] ಎ.ಕ-೯, ಹೊ.ತಾ.೧೨೯, ಕ್ರಿ.ಶ.೧೩೭೮, ಹೊ.ತಾ.೧೨೮, ಕ್ರಿ.ಶ.೧೪೯೧, ವಾಗಟ.
[೪೬] ಎ.ಕ-೯, ಹೊ.ತಾ.೧೩೦, ೧೩೧, ಕ್ರಿ.ಶ.೧೫೦೨.
[೪೭] ಎ.ಕ-೯, ದೇ.ತಾ.೭೯, ಕ್ರಿ.ಶ.೧೨೬೭, ತಮಿಳು, ಗಂಗವಾರ, ದೇ.ತಾ.೭೪, ಕ್ರಿ.ಶ.೭೮೦, ಗಂಗವಾರ, ದೇ.ತಾ.೭೫, ಕ್ರಿ.ಶ.೧೦೪೬, ತಮಿಳು, ಗಂಗವಾರ.
[೪೮] ಎ.ಕ-೯, ದೊ.ತಾ.೬೩, ಕ್ರಿ.ಶ.೧೭೧೬, ಮಾವಳೀಪುರ & ದೊ.ತಾ.೩೦, ಕ್ರಿ.ಶ.೧೫೩೦, ಕೋಣಘಟ್ಟ.
[೪೯] ಎ.ಕ-೯, ದೇ.ತಾ.೧೫, ಕ್ರಿ.ಶ.೧೬೯೮, ದೇವನಹಳ್ಳಿ.
[೫೦] ಎ.ಕ-೯, ದೇ.ತಾ.೬೯, ಕ್ರಿ.ಶ.೧೭೫೦, ಮಹದೇವ ಕೊಡಿಗೇಹಳ್ಳಿ.
[೫೧] ಎ.ಕ-೯, ದೊ.ತಾ.೬೭, ಕ್ರಿ.ಶ.೪೯೯, ಮಲ್ಲೋಹಳ್ಳಿ.
[೫೨] ಎ.ಕ-೯, ನೆ.ತಾ.೩೩, ಕ್ರಿ.ಶ.೭೫೦, ತೋಟಗೆರೆ.
[೫೩] ಎ.ಕ-೯, ದೇ.ತಾ.೬೭, ಕ್ರಿ.ಶ.೭೮೦, ಗಂಗವಾರ.
[೫೪] ಎ.ಕ-೯, ಹೊ.ತಾ.೯, ಕ್ರಿ.ಶ.೮೭೦, ಜೋಡಿದಳಸಿಗೆರೆ.
[೫೫] ಎ.ಕ-೯, ಹೊ.ತಾ.೧೦, ಕ್ರಿ.ಶ.೧೦೨೩, ಜೋಡಿದಳಸಿಗೆರೆ.

ಶಾಸನದಲ್ಲಿ ಪತ್ತಂದೂರು[೫೭], ತಿಪ್ಪೂರು[೫೮], ದೊಮ್ಮಲೂರು[೫೯], ನಲ್ಲೂರು[೬೦], ಅಂಬಲಿಗೆರೆ, ಪುರುಶನಹಳ್ಳಿ[೬೧], ಬಯಿರತ್ತಿ[೬೨], ಬನಹಳ್ಳಿ[೬೩], ಕೊಡಿಗೇಹಳ್ಳಿ[೬೪], ಕನಸವಾಡಿ[೬೫], ದಾಸನಪುರ[೬೬], ಕಾಡನೂರು[೬೭], ಶ್ರೀಪತಿಹಳ್ಳಿ[೬೮], ಸೋಮಪುರ[೬೯], ವೊಡ್ಡರಹಳ್ಳಿ[೭೦], ಗಂಡರಗೊಳ್ಳೀ, ಹೊನ್ನಾವಾರ, ಇಸ್ತೂರು, ಹೆಜ್ಜಾಜಿ, ಶಿವಗಂಗೆ, ಶಾಕಲದೇವನಪುರ[೭೧], ತಾವರೆಕೆರೆ[೭೨], ದೊಡ್ಡನಲ್ಲೂರು[೭೩], ಕರಪನಹಳ್ಳಿ[೭೪], ಕಾಮಾಕ್ಷಿಪುರ[೭೫], ಚೂಡನಹಳ್ಳಿ[೭೬], ಮೇಲೂರು, ಮಳ್ಳೂರು, ಚಿಕೊಹಳ್ಳಿ, ಸಾವಕನಹಳ್ಳಿ, ಹೊಸಕೆರೆ, ಬಯಿಚಾಪುರ, ಬಯಿರಪುರ, ಅವೇರಹಳ್ಳಿ[೭೭], ಅಪರಹಳ್ಳಿ[೭೮], ಉಪರಹಳ್ಳಿ[೭೯], ತೆಪ್ಪದ ಬೇಗೂರು[೮೦], ಕಂಬಾಳು[೮೧]ಎಂದು.

ಶಾಸನದಲ್ಲಿ ಉಲ್ಲೇಖವಾಗಿದ್ದು ಸ್ವಲ್ಪ ಬದಲಾವಣೆಯಿಂದ ಅದೇ ಹೆಸರನ್ನು ಉಳಿಸಿಕೊಂಡಿರುವ ಸ್ಥಳನಾಮಗಳನ್ನು ಕಾಣಬಹುದು. ಪೆರುಬಳಪುರ[೮೨] ತಮಿಳು ಶಾಸನದಲ್ಲಿ ಅತ್ತಿವಲ್ಯೆ (ಅತ್ತಿಬೆಲೆ), ಸೂಲಿವಲ್ಯೆ (ಸೂಲಿಬೆಲೆ)[೮೩], ಕುರುವಗೆರೆ[೮೪] >ಕುರಿವಿಗೆರೆ, ಹಡುವನಹಳ್ಳಿ[೮೫]> ಹಾಡೋನಹಳ್ಳಿ,

---

೫೬ ಎ.ಕ-೯, ನೆ.ತಾ.೧, ಕ್ರಿ.ಶ.೧೦೨೯, ಸೋಲದೇವನಹಳ್ಳಿ.
೫೭ ಎ.ಕ-೯, ಹೊ.ತಾ.೧೪೨, ಕ್ರಿ.ಶ.೧೦೪೩, ಕಾಡಗೋಡಿ.
೫೮ ಎ.ಕ-೯, ದೇ.ತಾ.೧೪, ಕ್ರಿ.ಶ.೧೦೬೭, ತಮಿಳು, ಬ್ಯಾಡರಹಳ್ಳಿ.
೫೯ ಎ.ಕ-೯, ನೆ.ತಾ.೬೨ ಎ, ಕ್ರಿ.ಶ.೧೧೦೦, ಕೋಡಿಪಾಳ್ಯ.
೬೦ ಎ.ಕ-೯, ದೇ.ತಾ.೪೫, ಕ್ರಿ.ಶ.೧೨೯೧, ತಮಿಳು, ಸುರಧೇನುಪುರ.
೬೧ ಎ.ಕ-೯, ನೆ.ತಾ.೫೭, ಕ್ರಿ.ಶ.೧೩೧೯, ಮಣ್ಣೆ.
೬೨ ಎ.ಕ-೯, ಹೊ.ತಾ.೧೨೪, ಕ್ರಿ.ಶ.೧೩೨೮, ಬಯಿರತ್ತಿ.
೬೩ ಎ.ಕ-೯, ಹೊ.ತಾ.೧೫೪, ಕ್ರಿ.ಶ.೧೩೮೨, ಚಿಕ್ಕಬನಹಳ್ಳಿ.
೬೪ ಎ.ಕ-೯, ದೇ.ತಾ.೫೦, ಕ್ರಿ.ಶ.೧೩೫೮, ಕಟಿಗೇನಹಳ್ಳಿ.
೬೫ ಎ.ಕ-೯, ದು. ತಾ. ೫೧, ಕ್ರಿ.ಶ. ೧೪೬೪, ಕನಸವಾಡಿ.
೬೬ ಎ.ಕ-೯, ಅನುಬಂಧ, ನೆ.ತಾ.೧೮೬, ಕ್ರಿ.ಶ.೧೫೨೩, ದಾಸನಪುರ.
೬೭ ಎ.ಕ-೯, ದೊ.ತಾ.೫೦, ಕ್ರಿ.ಶ.೧೫೩೧, ಕಾಡನೂರು.
೬೮ ಎ.ಕ-೯, ನೆ.ತಾ.೮೩, ಕ್ರಿ.ಶ.೧೫೩೨, ಶಿವಗಂಗೆ.
೬೯ ಎ.ಕ-೯, ಹೊ.ತಾ.೭೬, ಕ್ರಿ.ಶ.೧೫೧೯, ಕಾಳಪ್ಪನಹಳ್ಳಿ.
೭೦ ಎ.ಕ-೯, ಹೊ.ತಾ.೭೦, ಕ್ರಿ.ಶ.೧೫೩೦, ಬೇಚಿರಾಖ್.
೭೧ ಎ.ಕ-೯, ದೊ.ತಾ.೪೦, ಕ್ರಿ.ಶ.೧೫೬೬, ಗಂಡ್ರಗೊಳ್ಳೀ.
೭೨ ಎ.ಕ-೯, ಹೊ.ತಾ.೧೧೯, ಕ್ರಿ.ಶ.೧೬೧೦, ಬೊಮ್ಮನಹಳ್ಳಿ.
೭೩ ಎ.ಕ-೯, ಹೊ.ತಾ.೭೯, ಕ್ರಿ.ಶ.೧೬೬೧, ದೊಡ್ಡನಲ್ಲೂರು.
೭೪ ಎ.ಕ-೯, ಹೊ.ತಾ.೭೭, ಕ್ರಿ.ಶ.೧೬೭೯, ಕರಪನಹಳ್ಳಿ.
೭೫ ಎ.ಕ-೯, ದೊ.ತಾ.೫೮, ಕ್ರಿ.ಶ.೧೬೮೮, ಎತ್ತಿನವಡೆಯರಪುರ,
೭೬ ಎ.ಕ-೯, ಹೊ.ತಾ.೧೦೫, ಕ್ರಿ.ಶ.೧೬೯೩, ಹೊಸಕೋಟೆ.
೭೭ ಎ.ಕ-೯, ದೇ.ತಾ.೧೬, ಕ್ರಿ.ಶ.೧೬೯೮, ದೇವನಹಳ್ಳಿ.
೭೮ ಎ.ಕ-೯, ದೇ.ತಾ.೩೭, ಕ್ರಿ.ಶ.೧೬೯೮,, ಸೋಮನಹಳ್ಳಿ.
೭೯ ಎ.ಕ-೯, ದೇ.ತಾ.೭೧, ಕ್ರಿ.ಶ.೧೬೯೮, ಸಿಂಗರಹಳ್ಳಿ.
೮೦ ಎ.ಕ-೯, ನೆ.ತಾ.೪೧, ಕ್ರಿ.ಶ.೧೭೨೦, ತೆಪ್ಪದ ಬೇಗೂರು.
೮೧ ಎ.ಕ-೯, ನೆ.ತಾ.೫೧, ಕ್ರಿ.ಶ.೧೭೬೩, ತ್ಯಾಮಗೊಂಡ್ಲು.
೮೨ ಎ.ಕ-೯, ಹೊ.ತಾ.೧೦೧, ಕ್ರಿ.ಶ.೧೦೭೫, ಬೇಚರಾಖ್ ಮಾರೇನಹಳ್ಳಿ.
೮೩ ಎ.ಕ-೯, ಹೊ.ತಾ.೫೬, ಕ್ರಿ.ಶ.೧೩೩೦, ತಮಿಳು, ಸೂಲಿಬೆಲೆ.
೮೪ ಎ.ಕ-೯, ದೊ.ತಾ.೧೮, ಕ್ರಿ.ಶ.೧೩೨೮, ಕುರಿವಿಗೆರೆ.
೮೫ ಎ.ಕ-೯, ದೊ.ತಾ.೧೪, ಕ್ರಿ.ಶ.೧೩೨೮, ಹಾಡೋನಹಳ್ಳಿ.

ತಿಂಗಳು[೮೬]>ತಿಂಡಲು, ತಮರೈಕಿರೈ (ತಾವರೆಕೆರೆ)[೮೭], ನೆಲವಯ್‌ಪ್ಪಳ್ಳ (ನೆಲವಯಹಳ್ಳಿ)[೮೮], ಪಸಿಗೈಪಲ್ಲಿ, ಹನಸಿಗಾಳ>ಹಸಿಗಾಳ, ಕಿತ್ತೈಯನೂರು[೮೯]>ಕಿತ್ತಗನೂರು, ಸಮ್ಮೈಯಮಂತ್ರಿಪಲ್ಲಿ> ಸಮೇತನಹಳ್ಳಿ, ಧರ್ಮನಪುರ್[೯೦]>ಧರ್ಮಪುರ, ಬೆತ್ತಿಯಗೆರೆ[೯೧]>ಬೆತ್ನಗೆರೆ, ತಾಳೇಕೆರೆ[೯೨]>ತಾಳೇಕೆರೆ, ಬಯಿರಾಪುರ್[೯೩]> ಭೈರಾಪುರ, ಸಿಂಗೊಹಳ್ಳಿ>ಸಿಂಗರಹಳ್ಳಿ, ಕಂಚಿಗಣಹಾಲು[೯೪]>ಕಂಚಿಗನಾಳು, ಚಿಕ್ಕಮಾರಹಳ್ಳಿ> ಚಿಕ್ಕಮಾರನಹಳ್ಳಿ[೯೫], ಹಾರೋಕೇತನಹಳ್ಳಿ[೯೬]> ಹಾರೋಕ್ಯಾತನಹಳ್ಳಿ, ಹಿಂಡಿನಾಳ್[೯೭]>ಹಿಂಡಿಗನಾಳ, ಕೊಡಗಿಯಬೊಮ್ಮರಹಳ್ಳಿ[೯೮]>ಕೊಡಗಿಬೊಮ್ಮನಹಳ್ಳಿ, ಹೊಸಹಳ್ಳಿ[೯೯]>ದೇವರಹೊಸಹಳ್ಳಿ, ಸಾದುಹಳ್ಳಿ[೧೦೦]> ಸಾದೇಹಳ್ಳಿ, ದಂಡಗೇನಹಳ್ಳಿ[೧೦೧]>ದಡಿಗಾನಹಳ್ಳಿ, ಮುಗುಬಾಳು[೧೦೨]>ಮುಗಬಾಳ, ದುಟ್ಟನಹಳ್ಳಿ[೧೦೩] & ಜುಟ್ಟನಹಳ್ಳಿ[೧೦೪]>ಜುಟ್ಟನಹಳ್ಳಿ, ಅಂತರವಳ[೧೦೫]>ಅಂತ್ರಹಳ್ಳಿ, ಕಸವಗಟ[೧೦೬]>ಕಸಾಗಟ, ಹಚಿಪುರ[೧೦೭]> ಹಂಚರಹಳ್ಳಿ, ಸೋಮತ್ತನಹಳ್ಳಿ[೧೦೮]>ಸೊಮನಹಳ್ಳಿ, ನರಸಿಂಗಪುರ[೧೦೯]> ನರಸಿಂಹಪುರ, ಬಲ್ಲಾಳಪುರ[೧೧೦]> ದೊಡ್ಡಬಳ್ಳಾಪುರ, ಸೊಂಡೆಕೊಪ್ಪ>ಸೊಂಡೆಗೊಪ್ಪ, ಮಟ್ಟನಕುರುಚಿ[೧೧೧]> ಮಟ್ಟನಕುರ್ಚಿ, ದೇವಗೊಂಡನಹಳ್ಳಿ[೧೧೨]>ದೇವಗಾನಹಳ್ಳಿ, ಉಯಾಲು[೧೧೩]>ಉಮ್ಮಲು, ಬಿಶಿಲನಹಳ್ಳಿ[೧೧೪]> ಬಿಸನಹಳ್ಳಿ,

---

[೮೬] ಎ.ಕ-೯, ದೇ.ತಾ.೧, ಕ್ರಿ.ಶ.೧೩೨೮, ತಿಂಡಲು.
[೮೭] ಎ.ಕ-೯, ಹೊ.ತಾ.೯೮, ಕ್ರಿ.ಶ.೧೩೩೭, ತಮಿಳು, ಮುಗಬಾಳ,
[೮೮] ಎ.ಕ-೯, ಹೊ.ತಾ.೪೯, ಕ್ರಿ.ಶ.೧೩೪೦, ತಮಿಳು, ನೆಲವಾಗಲು.
[೮೯] ಎ.ಕ-೯, ಹೊ.ತಾ.೧೧೮, ಕ್ರಿ.ತ.೧೪೦೧, ತಮಿಳು, ಕಿತಗನೂರು.
[೯೦] ಎ.ಕ-೯, ದೇ.ತಾ.೩೮, ಕ್ರಿ.ಶ.೧೪೪೭, ಧರ್ಮಪುರ.
[೯೧] ಎ.ಕ-೯, ನೆ.ತಾ.೩೫, ಕ್ರಿ.ಶ.೧೪೪೯, ಬೆತ್ನಿಗೆರೆ.
[೯೨] ಎ.ಕ-೯, ನೆ.ತಾ.೪೭, ಕ್ರಿ.ಶ.೧೪೮೯, ತಾಳೇಕೆರೆ.
[೯೩] ಎ.ಕ-೯, ದೊ.ತಾ.೪೨ & ೪೫, ಕ್ರಿ.ಶ.೧೪೯೯, ಪುಟ್ಟೈಯ್ಯನ ಅಗ್ರಹಾರ.
[೯೪] ಎ.ಕ-೯, ದೊ.ತಾ.೧೯, ಕ್ರಿ.ಶ.೧೫೧೯, ಕಂಚಿಗನಾಳು.
[೯೫] ಎ.ಕ-೯, ಅನುಬಂಧ, ನೆ.ತಾ.೧೦೨, ಕ್ರಿ.ಶ.೧೫೨೪, ಚಿಕ್ಕಮಾರನಹಳ್ಳಿ.
[೯೬] ಎ.ಕ-೯, ನೆ.ತಾ.೧೦, ಕ್ರಿ.ಶ.೧೫೩೩, ಹಾರೋಕ್ಯಾತನಹಳ್ಳಿ.
[೯೭] ಎ.ಕ-೯, ಹೊ.ತಾ.೨, ಕ್ರಿ.ಶ.೧೫೪೯, ನಂದಗುಡೀ.
[೯೮] ಎ.ಕ-೯, ನೆ.ತಾ.೪೮, ಕ್ರಿ.ಶ.೧೫೬೦, ಕೊಡಗಿ ಬೊಮ್ಮನಹಳ್ಳಿ.
[೯೯] ಎ.ಕ-೯, ನೆ.ತಾ.೭೩, ಕ್ರಿ.ಶ.೧೫೬೧, ದೇವರಹೊಸಹಳ್ಳಿ.
[೧೦೦] ಎ.ಕ-೯, ದೇ.ತಾ.೬೪, ಕ್ರಿ.ಶ.೧೫೬೫, ಉತ್ತನಹಳ್ಳಿ.
[೧೦೧] ಎ.ಕ-೯, ದೊ.ತಾ.೩೫, ಕ್ರಿ.ಶ.೧೫೭೫, ಶಿವಪುರ.
[೧೦೨] ಎ.ಕ-೯, ಹೊ.ತಾ.೯೪, ಕ್ರಿ.ಶ.೧೫೬೪, ಮುಗಬಾಳ.
[೧೦೩] ಎ.ಕ-೯, ಅನುಬಂಧ, ನೆ.ತಾ.೧೧೦, ೧೧೨, ಕ್ರಿ.ಶ.೧೫೬೭, ಶಿವಗಂಗೆ.
[೧೦೪] ಎ.ಕ-೯, ಅನುಬಂಧ, ನೆ.ತಾ.೧೧೧, ಶಿವಗಂಗೆ.
[೧೦೫] ಎ.ಕ-೯, ದೊ.ತಾ.೭, ಕ್ರಿ.ಶ.೧೫೯೬, ಅಂತ್ರಹಳ್ಳಿ.
[೧೦೬] ಎ.ಕ-೯, ದೊ.ತಾ.೪೮, ಕ್ರಿ.ಶ.೧೬೦೦, ಕಸಾಗಟ್ಟ.
[೧೦೭] ಎ.ಕ-೯, ದೊ.ತಾ.೨೮, ಕ್ರಿ.ಶ.೧೬೪೭, ಹಂಚರಹಳ್ಳಿ.
[೧೦೮] ಎ.ಕ-೯, ದೇ.ತಾ.೧೬, ೩೭, ಕ್ರಿ.ಶ.೧೬೯೮, ದೇವನಹಳ್ಳಿ, ಸೋಮನಹಳ್ಳಿ.
[೧೦೯] ಎ.ಕ-೯, ನೆ.ತಾ.೭೦, ಕ್ರಿ.ಶ.೧೭೨೦, ನರಸಿಂಹಪುರ.
[೧೧೦] ಎ.ಕ-೯, ದೇ.ತಾ.೬೯, ಕ್ರಿ.ಶ.೧೭೫೦, ಮಹದೇವ ಕೊಡಿಗೆಹಳ್ಳಿ.
[೧೧೧] ಎ.ಕ-೯, ನೆ.ತಾ.೮, ಕ್ರಿ.ಶ.೧೭೬೩, ಸೊಂಡೇಕೊಪ್ಪ.
[೧೧೨] ಎ.ಕ-೯, ಅನುಬಂಧ, ನೆ.ತಾ.೧೫೬,ದೇವಗಾನಹಳ್ಳಿ.
[೧೧೩] ಎ.ಕ-೯, ಹೊ.ತಾ.೯೧, ಉಮ್ಮಲು.
[೧೧೪] ಎ.ಕ-೯, ಅನುಬಂಧ, ಹೊ.ತಾ.೧೮೭, ಬಿಸನಹಳ್ಳಿ.

ಹಾಗೇಯೇ ಶಾಸನದಲ್ಲಿ ಉಲ್ಲೇಖವಾಗಿರುವ ಸಾಕಷ್ಟು ಊರುಗಳು ಇಂದು ಕಣ್ಮರೆಯಾಗಿದೆ. ಬಹುಶಃ ಗ್ರಾಮನಾಮಗಳು ಬದಲಾಗಿರಬೇಕು ಇಲ್ಲವೇ ಬೇಚಿರಾಖ್ ಆಗಿರಬೇಕು. ಗಂಗರ ಕಾಲದಲ್ಲಿನ ಪೆಣ್ಣನ್ನೂದ್ದರು, ಕಾಸರೂರು[೧೧೫], ಕಿರೆವೆಕ್ಕೂರು, ಶಾಲ್ಮಲಿಗ್ರಾಮ, ಅಲತ್ತೂರು, ಪೊರುಳರೆ, ಮುದಕುನ್ನೂದ್ದರು, ರಾಷ್ಟ್ರಕೂಟರ ಕಾಲದಲ್ಲಿ ನಂದಿಗುನ್ದ, ನಂದಿಸ್ಥಾನ[೧೧೬], ಚರುಕ್ಕನೂರು[೧೧೭], ಚೋಳಪುರ, ತಿರುಊರು[೧೧೮], ಹೊಯ್ಸಳರ ಕಾಲದಲ್ಲಿ ಚೋಳಪುರ, ಸಿಂಗತ್ತೂರು, ಉಚ್ಚಂಗಿ, ಗಂಗಪಡಿ, ನುಲಂಪಡಿ[೧೧೯], ದೇವರಪುರ[೧೨೦], ರಾಮಗಉಡಹಳ್ಳಿ, ಕಿಳಹೊಸಹಳ್ಳಿ, ಮಹದೇವ ಕೊಡಿಗೆಹಳ್ಳಿ, ಗೆರೆಪುರ ಇತ್ಯಾದಿಗಳು.

## ೭.೨ ಐತಿಹ್ಯಗಳು

ಐತಿಹ್ಯ ಎಂದರೆ ಒಂದು ಸ್ಥಳ ಅಥವಾ ಘಟನೆ ವ್ಯಕ್ತಿಯ ಸುತ್ತ ಬೇರೆ ಬೇರೆ ವಿಷಯಗಳನ್ನು ಆಧಾರಿಸಿ ಬೆಳೆದು ಬಂದ ಒಂದು ರೀತಿಯ ಕಥನ. ಎಲ್ಲೋ ಯಾವಾಗಲೋ ನಡೆದಿರುವ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆಗಳು ಆ ಪರಿಸರದ ವ್ಯಕ್ತಿಗಳ ಮೇಲೆ ಬೀರುವ ಪ್ರಭಾವದ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಗೆ ವೈಭವೀಕರಣದ ಅಂಶಗಳನ್ನು ಸೇರಿಸಿ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ಒಂದು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ, ಐತಿಹ್ಯಗಳು ಮುಖ್ಯವಾಗಿ ಒಂದು ಜನಪದ ಗದ್ಯ ಪ್ರಕಾರವಾಗಿ ಹೆಚ್ಚಾಗಿ ಹಳ್ಳಿಗಳಲ್ಲಿ ಕಂಡು ಬರುತ್ತವೆ. ಜನರು ತಮ್ಮದೇ ಆದ ಆಚಾರ ವಿಚಾರಗಳು ಘಟನೆಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳನ್ನು ರಚಿಸುತ್ತಿದ್ದರು. ಚರಿತ್ರೆಗೂ, ಐತಿಹ್ಯಕ್ಕೂ ಒಂದಕೊಂದು ಅವಿನೋಭಾವ ಸಂಬಂಧ ಇದೆ. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಕಥನಗಳು ಐತಿಹ್ಯಗಳಾದರೆ ಅದೇ ಆಧಾರವನ್ನು ಆಧರಿಸಿದ ವಸ್ತುನಿಷ್ಠ ವೈಜ್ಞಾನಿಕ ನಿರೂಪಣೆ ಚರಿತ್ರೆಯಾಗ ಬಹುದು.

ಊರಿಗೆಲ್ಲ ದೊಡ್ಡದಾಗಿರುವ ಬೆಟ್ಟ ಅಥವಾ ಕೆರೆ ಸಾಮಾನ್ಯರಿಗಿಂತ ವಿಶೇಷ ಪ್ರತಿಭಾಶಾಲಿ ವ್ಯಕ್ತಿ, ಸಾಮಾನ್ಯ ಜೀವನದಲ್ಲಿ ಸೇರ್ಪಡೆಯಾಗಿರುವ ಕಾಲಕ್ಕಿಂತ ಬೇರೆಯಾದ ಅರ್ಥ, ಪೂರ್ಣವಾದ ಕಾಲ ಇವು ಮೂರು ಐಕ್ಯ ಹೊಂದಿ ಐತಿಹ್ಯದಲ್ಲಿ ಸ್ಥಾನ ಪಡೆಯುತ್ತವೆ. ಪುರಾಣ ವ್ಯಕ್ತಿಗಳೆಲ್ಲರೂ ಸಾಮಾನ್ಯ

---

[೧೧೫] ಎ.ಕ-೯, ದೇ.ತಾ.೭೪, ಕ್ರಿ.ಶ.೭೮೦, ಗಂಗವಾರ.
[೧೧೬] ಎ.ಕ-೯, ದೇ.ತಾ.೪೨, ಕ್ರಿ.ಶ.೯೦೦, ಅರದೇಶನಹಳ್ಳಿ.
[೧೧೭] ಎ.ಕ-೯, ಹೊ.ತಾ.೧೨, ಕ್ರಿ.ಶ.೯೦೦, ಸಿದ್ಧನಹಳ್ಳಿ.
[೧೧೮] ಎ.ಕ-೯, ಹೊ.ತಾ.೩೬, ಕ್ರಿ.ಶ.೧೦೬೫, ಹೊಸಹಳ್ಳಿ.
[೧೧೯] ಎ.ಕ-೯, ಹೊ.ತಾ.೧೮, ಕ್ರಿ.ಶ.೧೧೨೮, ಸಿದ್ಧನಹಳ್ಳಿ.
[೧೨೦] ಎ.ಕ-೯, ನೆ.ತಾ.೮೧, ಕ್ರಿ.ಶ.೧೫೪೫, ಶಿವಗಂಗೆ.

ಮನುಷ್ಯರಿಗಿಂತ ಅಸಾಮಾನ್ಯರಾದುದರಿಂದ ಅವರಿಗೆ ಐತಿಹ್ಯದಲ್ಲಿ ವಿಶೇಷವಾದ ಸ್ಥಾನವಿದೆ. ಅನೇಕ ವೇಳೆ ಪುರಾಣ ಮತ್ತು ಐತಿಹ್ಯ ಇವುಗಳನ್ನು ವಿಭಜಿಸುವುದು ಕಷ್ಟ. ಒಂದೆರಡು ಗೆರೆ ಇದ್ದರೆ ಅದು ಸೀತೆಯ ಸೆರಗಿನ ಗುರುತು, ದೊಡ್ಡ ಕಲ್ಲಿದ್ದರೆ ಭೀಮನ ಕಲ್ಲು, ಬಂಡೆಯ ಮೇಲೆ ದೊಡ್ಡ ಪಾದದ ಗುರುತು ಇದ್ರೆ ಭೀಮನ ಪಾದ, ದೊಡ್ಡ ಕೆರೆಯಿದ್ದರೆ ಜಟಾಯುತೀರ್ಥ, ಗುಹೆಯಿದ್ದರೆ ಪಾಂಡವರ ಮನೆ ಹೀಗೆ ಐತಿಹ್ಯದ ವಸ್ತುಗಳಾದ ಪ್ರಾಣಿವರ್ಗ–ಸಸ್ಯವರ್ಗ–ಮಾನವವರ್ಗ ಮೂರರ ಸಮನ್ವಯ ಪುರಾಣದ ಹುಟ್ಟಿಗೆ ಕಾರಣವಾಗುತ್ತದೆ. ಜನರ ನಂಬಿಕೆ, ಶ್ರದ್ಧೆ, ನಡವಳಿಕೆ, ಮೌಲ್ಯ ವ್ಯವಸ್ಥೆ, ಆದರ್ಶಗಳು ಪುರಾಣವನ್ನು ಸೃಷ್ಟಿಸುತ್ತವೆ.

ಕೆಲವು ಕತೆಗಳು ಬಾಯಿಂದ ಬಾಯಿಗೆ, ತಲೆಮಾರಿನಿಂದ ತಲೆಮಾರಿಗೆ ಬೆಳೆದು ಬಂದು ಜನಪದರ ಬದುಕಿನಲ್ಲಿ ಹಾಸು ಹೊಕ್ಕಾಗಿರುತ್ತವೆ. ಇವುಗಳಿಗೆ ಸಾಕಷ್ಟು ಸಾಕ್ಷಿಗಳು–ಪುರಾವೆಗಳು ಸಿಗುವುದಿಲ್ಲ. ಇವೇ ದಂತಕಥೆಗಳು ಐತಿಹ್ಯಗಳಿಗೆ ಕಾಲ ಸಂಬಂಧಿಯಾದ ಆಯಾಮಯಾಗಿರುತ್ತದೆ. ಹರಿಯುವ ನೀರು, ಸೂರ್ಯ, ಗಿಡ, ಮರ, ಕಲ್ಲುಗಳಲ್ಲಿನ ಚೈತನ್ಯವನ್ನು ಕಂಡು ಅವುಗಳನ್ನು ಆರಾಧಿಸತೊಡಗಿದ್ದರಿಂದ ಗ್ರಾಮದೇವತೆಗಳ ಗರ್ಭಗುಡಿಯಲ್ಲಿರುವ ಉದ್ಭವಮೂರ್ತಿಗಳೆಲ್ಲ ಬಹುಪಾಲು ಶಿಲೆಗಳು, ಹುತ್ತಗಳು, ವೃಕ್ಷಗಳಾಗಿದ್ದು ಅವುಗಳಿಗೆ ಪುರಾಣ ಕಥೆಗಳನ್ನು ಕಟ್ಟಿರುವ ಸಾಧ್ಯತೆಗಳವೆ. ಆದ್ದರಿಂದ ದೇವತೆಗಳ ಸುತ್ತ ಪುರಾಣ ಕಥೆಗಳ ಜಾಲವನ್ನು ಹರಡಿರುವುದನ್ನು ಕಾಣ ಬಹುದು.

ಐತಿಹ್ಯಗಳು ಮೊದ ಮೊದಲು ಸಂಕ್ಷಿಪ್ತವೂ ಸರಳವೂ ಆಗಿದ್ದು ಕ್ರಮೇಣ ಉತ್ಪ್ರೇಕ್ಷಿತ ವಿವರಣೆಗಳ ದೀರ್ಘ ಹಾಗೂ ಕಲ್ಪನಾತ್ಮಕ ಕಥೆಗಳಾಗಿ ಬೆಳವಣಿಗೆ ಹೊಂದಿದವು. ಮೂಲದಲ್ಲಿ ಇವು ಚಾರಿತ್ರಿಕವೆನಿಸಿದರೂ ಅನಂತರದಲ್ಲಿ ಸಾಂಪ್ರದಾಯಕವೆನಿಸುವವು. ಯಾವುದೇ ಒಂದು ಐತಿಹ್ಯಕ್ಕೆ ಹಿನ್ನೆಲೆಯಾಗಿ ಯಾವುದೊ ಒಂದು ಘಟನೆ ಇದ್ದೇ ಇರುತ್ತದೆ. ಘಟನೆಗೆ ವ್ಯಕ್ತಿ ಸಂಬಂಧ ಇದ್ದೇ ಇರುತ್ತದೆ. ಯಾವ ಐತಿಹ್ಯದಲ್ಲಿ ವ್ಯಕ್ತಿಯ ಪಾತ್ರ ಪ್ರಧಾನವಾಗಿರುತ್ತದೆಯೋ ಅಂತಹವರನ್ನು ವ್ಯಕ್ತಿ ಪ್ರಧಾನ ಐತಿಹ್ಯ ಅಥವಾ ವ್ಯಕ್ತಿ ಕೇಂದ್ರಿತ ಐತಿಹ್ಯವೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಕೆಲವೇ ಕೆಲವು ವ್ಯಕ್ತಿಗಳ ಹೆಸರಿನಲ್ಲಿ ಸ್ಥಳನಾಮಗಳು ಹುಟ್ಟಿಕೊಳ್ಳುತ್ತವೆ. ಯಾರು ಅಸಾಮಾನ್ಯ ಸಾಧನೆ ಮಾಡಿರುತ್ತಾರೋ ಅವರ ತ್ಯಾಗ, ಶ್ರಮ, ಜೀವನ ಆರಂಭಿಸಿ ಅವರ ಕಾರ್ಯದ ಸ್ಥಾನಗಳಿಗೆ ಅವರವರ ಹೆಸರು ಇಡಲಾಗಿರುವ ಐತಿಹ್ಯೆಗಳನ್ನು ಸಹ ಕಾಣ ಬಹುದು. ಜಿಲ್ಲೆಯಲ್ಲಿನ ವ್ಯಕ್ತಿ ಪ್ರಧಾನ ಐತಿಹ್ಯಗಳಲ್ಲಿ ಚಿಕ್ಕಹೆಜ್ಜಾಜಿಯ ಮಾಸ್ತಿಯಮ್ಮನ ಐತಿಹ್ಯ, ಸಾಸಲು ಚಿನ್ನಮ್ಮನ ಐತಿಹ್ಯ, ಕೊಯಿರಾದ ಸಾರಂಗದೇವನ ಐತಿಹ್ಯ,

ಅಡ್ಡಗಿಡ್ಡಪ್ಪನ ಐತಿಹ್ಯ, ಸುಗುಟೂರು ಪಾಳೇಗಾರ ತಮ್ಮೇಗೌಡನ ಐತಿಹ್ಯ ಇನ್ನೂ ಮುಂತಾದವರನ್ನು ನೋಡಬಹುದು.

ಐತಿಹ್ಯಗಳನ್ನು ಸಾಮನ್ಯವಾಗಿ ೩ ರೀತಿಯಲ್ಲಿ ವಿಭಾಗಿಸ ಬಹುದು

೧. ಪೌರಾಣಿಕ ಪ್ರಧಾನ ಐತಿಹ್ಯಗಳು

೨. ಸ್ಥಳ ಪ್ರಧಾನ ಐತಿಹ್ಯಗಳು

೩. ವ್ಯಕ್ತಿ ಪ್ರಧಾನ ಐತಿಹ್ಯಗಳು

ವ್ಯಕ್ತಿ ಪ್ರಧಾನ ಐತಿಹ್ಯವನ್ನು ಮತ್ತೆ ಎರಡು ಭಾಗಗಳಾಗಿ ಪೌರಾಣಿಕ ವ್ಯಕ್ತಿಗಳು ಐತಿಹಾಸಿಕ ವ್ಯಕ್ತಿಗಳು ಎಂಬ ಎರಡು ವಿಭಜನೆಯನ್ನು ಕಾಣಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಚರಿತ್ರೆಗೆ ಸಂಬಂಧಿಸಿದಂತೆ ಧಾರ್ಮಿಕ ನಂಬಿಕೆಗಳು ಪುರಾಣ ಮತ್ತು ಸಾಮಾಜಿಕ ನಂಬಿಕೆಗಳನ್ನು ಆಧರಿಸಿ ಹಲವಾರು ಐತಿಹ್ಯಗಳು ಪ್ರಚಲಿತವಾಗಿದೆ. ಅವುಗಳಲ್ಲಿ ಪ್ರಮುಖವಾದ ಐತಿಹ್ಯಗಳೆಂದರೆ :-

**೧.ಪೌರಾಣಿಕ ಪ್ರಧಾನ ಐತಿಹ್ಯ.**

ಒಂದೊಂದು ಹಳ್ಳಿಯ ರಚನೆ ಹಿನ್ನೆಲೆಗೆ ಸಂಬಂಧಿಸಿದಂತೆ ಸಾಲು ಸಾಲು ಕತೆಗಳಿವೆ. ಪುರಾಣ ಮತ್ತು ಐತಿಹ್ಯಗಳು ನಿಜವಾದ ಕಾಲದಲ್ಲಿ ಇರುತ್ತವೆ. ಪುರಾಣಕ್ಕಿಂತ ಮೊದಲು ಕಾಲ ಇರುವುದಿಲ್ಲ. ಪುರಾಣಕಾಲ ಎನ್ನುವುದು ಅತ್ಯಂತ ಪ್ರಾಚೀನ ಕಾಲ್ಪನಿಕ ಕಾಲ. ಐತಿಹ್ಯವು ಮನುಷ್ಯ ಸೃಷ್ಟಿಯ ಬಳಿಕದ ಕಾಲಕ್ಕೆ ಸೇರಿದ್ದು, ಪುರಾಣ ಕಾಲದ ಆರಂಭವು ಪಡೆದುಕೊಂಡಿರುವ ಕೊನೆಯಾದರೆ ಐತಿಹ್ಯ ಕಾಲದ ಕೊನೆಯು ತೆರೆದುಕೊಂಡಿರುವ ಕೊನೆಯಾಗಿದೆ."

**ನೆಲಮಂಗಲ ತಾಲ್ಲೂಕಿನ ಬಸವನಹಳ್ಳಿಯ ಕೌಂಟಿನ್ಯಾ ಮಹರ್ಷಿ ಐತಿಹ್ಯ**

ನೆಲಮಂಗಲದಿಂದ ದೊಡ್ಡಬಳ್ಳಾಪುರದ ರಸ್ತೆಯಲ್ಲಿ, ನೆಲಮಂಗಲ ರೈಲು ನಿಲ್ದಾಣದಿಂದ ೫೦೦ ಮಿ ದೂರದಲ್ಲಿಯೇ, ನೆಲಮಂಗಲದಿಂದ ೩ ಕಿ.ಮೀ. ದೂರದಲ್ಲಿ ಬಸವನಹಳ್ಳಿ ಗ್ರಾಮದಲ್ಲಿ ಶ್ರೀಲಕ್ಷ್ಮಿ ವೆಂಕಟರಮಣ ಸ್ವಾಮಿ ಮತ್ತು ಗರುಡನ ಪುರಾತನ ದೇವಸ್ಥಾನ ಇದೆ. ಕೌಂಟಿನ್ಯಾ ಮಹರ್ಷಿ ತಪ್ಪಸ್ಸು ಮಾಡಿದ್ದರಿಂದ ಬಸವನಹಳ್ಳಿಗೆ ಕೌಂಟಿನ್ಯಾಪುರ ಎಂಬ ಹೆಸರು ಹಾಗೂ ದೇವಾಲಯದ ಮುಂದಿರುವ ಶಂಕಪುಷ್ಕರಣಿ ಎಂಬ ಪವಿತ್ರ ಕೊಳವನ್ನು ಸಹ ಕೌಂಟಿನ್ಯ ಮಹರ್ಷಿಗಳೇ ನಿರ್ಮಿಸಿದ್ದರಂತೆ. ಮತ್ತು ಇಲ್ಲಿ

ವಿಷ್ಣಾಪುರಿ ಎಂಬ ರಾಕ್ಷಸನು ವೃಷಭ(ಗೂಳ) ರೂಪದಲ್ಲಿದ್ದನು. ವಿಷ್ಣುವಿನ ಆರಾಧಕರಾದ ಕೌಂಡಿನ್ಯಾ ಮಹರ್ಷಿರವರಿಂದ ರಾಕ್ಷಸನು ಮಾನವನಾಗಿ ಪರಿವರ್ತನೆಗೊಂಡನು. ಆಗ ಈ ಸ್ಥಳವನ್ನು ಬಸವಪುರಿ ಎಂದು ಕರೆದರು, ಕಾಲಾಂತರದಲ್ಲಿ ಬಸವನಹಳ್ಳ ಆಯಿತು ಎಂಬ ಕತೆಯಿದೆ.

## ಶಿವಗಂಗೆಯ ಹೊನ್ನಾದೇವಿ ಐತಿಹ್ಯ

ನೆಲಮಂಗಲ ತಾಲ್ಲೂಕಿನ ಶಿವಗಂಗೆಯ ಹೊನ್ನಾದೇವಿಗೆ ಸಂಬಂಧಿಸಿದಂತೆ ಶಿವಗಂಗೆಯ ಗಂಗಪ್ಪನು ಹೊನ್ನಾದೇವಿಯನ್ನು ಕದ್ದು ತರುತ್ತಿದ್ದು, ತ್ಯಾಮಗೊಂಡ್ಲು ಬಳಿಯ ಬಿದಲೂರು ತಲುಪಿದಾಗ ಅಲ್ಲಿ ಹೊನ್ನಾದೇವಿಯು ಕಡೆ ಆದಳು. ಆ ಹೊತ್ತಿಗೆ ಕುಮುದ್ವತಿ (ಗುಪ್ತಗಾಮಿನಿ) ಚಿಮ್ಮುವ ನೆಲೆಯನ್ನು ಸಪ್ತ ಕನ್ನಿಕೆಯರು ಅರಸಿ ಬರುತ್ತಿದ್ದರು. ಆ ಕಡೆ ಹೊನ್ನಾದೇವಿಯನ್ನು ಕಂಡು ಅವಳಿಗೆ ಅಣೆ ಕಲ್ಲು ಹಾಕಿ ಚಿಮ್ಮಿದ ಗಂಗೆಯನ್ನು ಆಕೆಯಲ್ಲಿಗೆ ತಂದು ಹರಸಿದರು. ಆಗ ಹೊನ್ನಾದೇವಿಗೆ ಮಡಿಯಾಗಿ ಸಂತೋಷವಾದ ಸಂದರ್ಭದಲ್ಲಿ ಹೊನ್ನಾದೇವಿಯು ಶಿವಗಂಗೆಗೆ ಬನ್ನಿರೆಂದು ಆಹ್ವಾನಿಸಿ ಗಂಗಪ್ಪರೊಡನೆ ಶಿವಗಂಗೆಗೆ ಸಾಗಿದ್ದಳು. ಯುಗಾದಿ ಸಂದರ್ಭದಲ್ಲಿ ಮಡೆ ನಡೆವ ಕಾಲದಲ್ಲಿಯೇ ಬಿದಲೂರು ಗಂಗವ್ವ ಜಾತ್ರೆಯು ನಡೆಯುತ್ತದೆ. ಐತಿಹ್ಯದಲ್ಲಿನ ಗಂಗಪ್ಪನ ಶಿವಗಂಗೆಯಲ್ಲಿನ ಗಂಗಾಧರೇಶ್ವರನಾಗಿದ್ದು, ಸಪ್ತ ಮಾತೃಕೆಯರು ಹೊನ್ನಾದೇವಿಯ ಶಿಲ್ಪ ಸಹಯೋಗಗಳಿಗೆ ಜನಪದರಲ್ಲಿ ಈ ಕತೆಯು ಹುಟ್ಟಿಕೊಂಡಿದೆ.

## ಮಹಿಮರಂಗನಾಥನ ಐತಿಹ್ಯ

ನೆಲಮಂಗಲದಿಂದ ೧೬ ಕಿ.ಮೀ. ದೂರದಲ್ಲಿ ಕೇವಲ ೨೫೦ ಮೆಟ್ಟಿಲುಗಳಿಂದ ಕೂಡಿದ್ದ ಪುಟ್ಟ ಬೆಟ್ಟದ ಮೇಲೆ ಗರುಡ ರಂಗನಾಥಸ್ವಾಮಿಯ ದೇವಾಲಯವಿದ್ದು, ಈ ಸ್ಥಳವನ್ನು ಕುರಿತಂತೆ ಜನಪದರ ಐತಿಹ್ಯ ಹೇಗಿದೆಂದರೆ ಹಿಂದೊಮ್ಮೆ ಗರುಡ ಮಾತೆ ವಿನುತೆಗೆ ಮಕ್ಕಳರದೆ ಸೂರ್ಯದೇವನನ್ನು ಕುರಿತು ತಪಸ್ಸು ಮಾಡುತ್ತಾಳೆ. ಆಕೆಯ ತಪಸ್ಸಿಗೆ ಮೆಚ್ಚಿದ ಸೂರ್ಯನು ಎರಡು ಮೊಟ್ಟೆಗಳನ್ನು ನೀಡಿ ಇದನ್ನು ಸಲಹು ಎಂದು ಹೇಳುತ್ತಾನೆ, ಆದರೆ ವಿನುತೆಗೆ ಕೂತುಹಲ ತಾಳಲಾರದೆ ಒಂದು ಮೊಟ್ಟೆಯನ್ನು ಒಡೆದು ನೋಡುತ್ತಾಳೆ ಇದರಿಂದ ಸರ್ಪವೊಂದು ಹೊರ ಬರುತ್ತದೆ. ಗಾಬರಿಯಾದ ವಿನುತೆ ಮತ್ತೊಂದು ಮೊಟ್ಟೆ ಒಡೆಯುತ್ತಾಳೆ ಆಗ ಎರಡನೇಯ ಮೊಟ್ಟೆಯಲ್ಲಿ ಪಕ್ಷಿಯೊಂದು ಹೊರಬರುತ್ತದೆ. ಆ ಪಕ್ಷಿಯನ್ನು ಸೂರ್ಯನ ಆದೇಶದಂತೆ ಸಾಕುತ್ತಾಳೆ. ಪಕ್ಷಿಯು ಆಹಾರಕ್ಕಾಗಿ ಪರಿತಪಿಸುತ್ತದೆ ಆಗ ವಿನುತೆಯು ಅಲ್ಲಿದ್ದ ಒಬ್ಬ ರಾಕ್ಷಸಿಯನ್ನು ಕೊಂದು ಹೊಟ್ಟೆ ತುಂಬಿಸಿಕೊ ಎಂದು ಅಜ್ಞಾಪಿಸುತ್ತಾಳೆ, ನಂತರ ಗರುಡನು ಹೆಣ್ಣು ರಾಕ್ಷಸಿಯನ್ನು ಕೊಂದು ತಿನ್ನುತ್ತದೆ. ಸ್ತ್ರೀಹತ್ಯೆ ಮಾಡಿದೆ ಎಂಬ ಪ್ರಾಯಶ್ಚಿತ್ತಕ್ಕಾಗಿ ಈ ಸ್ಥಳಕ್ಕೆ ಬಂದು

ವಿಷ್ಣುವನ್ನು ಕುರಿತು ತಪಸ್ಸನ್ನು ಆಚರಿಸುತ್ತಾನೆ. ಅವರ ಭಕ್ತಿಗೆ ಮೆಚ್ಚಿದ ಶ್ರೀನಾರಾಯಣನು ಬೆಲ್ಲದ ಅಚ್ಚಿನ ರೂಪದಲ್ಲಿ ದರ್ಶನ ಕೊಟ್ಟು ಅವನ ಪಾಪವನ್ನು ಪರಿಹರಿಸುತ್ತಾನೆ. ಅಂದಿನಿಂದ ಈ ಕ್ಷೇತ್ರವನ್ನು ಗರುಡ ಕ್ಷೇತ್ರವಾಗಿ ಸಹ ಮತ್ತೊಂದು ಹೆಸರಿಂದ ಕರೆಯುತ್ತಾರೆ. ವಾಸ್ತವವಾಗಿ ಈ ಬೆಟ್ಟದ ಹಿಂಭಾಗ ಪ್ರದೇಶವೆಲ್ಲಾ ಅರಣ್ಯವಾಗಿದ್ದು, ಹಾವುಗಳು ಹೆಚ್ಚಾಗಿ ವಾಸವಿದ್ದರಿಂದಾಗಿ ಗರುಡನ ದೇವಾಲಯ ನಿರ್ಮಾಣವಾಗಿದೆ.

**ದೊಡ್ಡಬಳ್ಳಾಪುರ ತಾಲ್ಲೂಕಿನ ಘಾಟಿ ಸುಬ್ರಮಣ್ಯ ದೇವಸ್ಥಾನ ನಿರ್ಮಾಣದ ಹಿಂದಿನ ಐತಿಹ್ಯೆ.**

ತೂಬಗೆರೆ ಗ್ರಾಮದಲ್ಲಿ ಸರ್ಪದೋಷ ನಿವಾರಣೆಗೆ ಪ್ರಸುದ್ದಿಯಾದ ಕುಕ್ಕೆ ಸುಬ್ರಹ್ಮಣ್ಯದ ನಂತರ ಅತ್ಯಂತ ಹೆಚ್ಚು ಜನಪ್ರಿಯವಾದ, ವಿಜಯನಗರ ಅರಸರ ಆಳ್ವಕೆಯಲ್ಲಿ ನಿರ್ಮಾಣಗೊಂಡಿರುವ ಘಾಟಿ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ಸುಮಾರು ಐನೂರು ವರ್ಷಗಳ ಇತಿಹಾಸವನ್ನು ಇದ್ದು, ಘಾಟಿ ಸುಬ್ರಹ್ಮಣ್ಯ ದೇವಸ್ಥಾನ ಹುಟ್ಟಿನ ಜನಪದರಲ್ಲಿ ರೂಡಿಯಲ್ಲಿರುವ ಪುರಾಣ ಐತಿಹ್ಯವೆಂದರೆ:–

ವಿಳ್ಳೇದೆಲೆ ವ್ಯಾಪಾರಿಯೊಬ್ಬರು ಪ್ರತಿನಿತ್ಯ ವ್ಯಾಪಾರಕ್ಕೆ ಹೋಗಿ ಬರುವಾಗ ಈಗ ಕುಮಾರ ತೀರ್ಥವಿರುವ ಸ್ಥಳದಲ್ಲಿ ಊಟ ಮಾಡಿ, ನೀರು ಕುಡಿದು ನಂತರ ಈಗ ಮೂಲ ವಿಗ್ರಹವಿರುವ ಬಲಭಾಗದಲ್ಲಿ ಏಳು ಹೆಡೆಗಳು ಉದ್ಭವಿಸಿರುವ ಶಿಲೆಯ ಮೇಲೆಯೇ ಮಲಗುತ್ತಿದ್ದರಂತೆ. ಒಮ್ಮೆ ಆತ ಮಲಗಿದ್ದಾಗ' ಮರದಡಿಯ ನೆರಳು ಈ ಶಿಲೆಯ ಮೇಲೆ ಭಾರವಾಗಿ ಏಕೆ ಮಲಗಿರುವೆ ಏಳು ಎದ್ದೇಳು ಎಂಬ ಮಾತುಗಳು ಕೇಳಿತಂತೆ. ಹೀಗೆ ಹಲವು ಬಾರಿ ಪುನರಾವರ್ತನೆಯಾಯಿತು. ಆಗ ವ್ಯಾಪಾರಿಯು ಯಾವುದೋ ದುಷ್ಟ ಶಕ್ತಿಯಿರಬೇಕು ಎಂದುಕೊಂಡು ಸುಮ್ಮನಾದನಂತೆ.

ಒಂದು ಹಬ್ಬದ ದಿನ ಎಂದಿನಂತೆ ಎಲೆ ಮಾರಿ ಆಯಾಸಗೊಂಡು ಅದೇ ಶಿಲೆಯ ಮೇಲೆ ಮಲಗಿದ್ದಾಗ, ವ್ಯಾಪಾರಿಗೆ ಕನಸಿನಲ್ಲಿ ಸುಬ್ರಹ್ಮಣ್ಯ ದೇವರು ತನ್ನ ಸ್ವರೂಪದಲ್ಲಿ ದರ್ಶನ ನೀಡಿ, ತಾನು ಈ ಶಿಲೆಗೆ ಇಪ್ಪತ್ತು ಜಾನ್ಮಾಂತರವರೆಗೂ ಇರುವುದಾಗಿಯೂ ಈ ವಿಷಯವನ್ನು ತನ್ನ ಭಕ್ತನಾದ ಬಳ್ಳಾರಿಯ ಸಂಡೂರಿನ ರಾಜರಿಗೆ ತಿಳಿಸು, ಅವರು ಇಲ್ಲಿ ಗುಡಿ–ಗೋಪುರ ಕಟ್ಟಿಸುತ್ತಾರೆ. ನಿನಗೆ ನಾನು ಜೀವನಾಂತ್ಯದಲ್ಲಿ ಮುಕ್ತಿ ನೀಡುವೆ ಎಂದು ಹೇಳಿ ಅದೃಶ್ಯನಾದ ನಂತರ ಈ ಸ್ವಪ್ನದಿಂದ ಎಚ್ಚೆತ್ತ ವ್ಯಾಪಾರಿಯು ಎದುರು ಬರುತಿದ್ದ ಬ್ರಾಹ್ಮಣನನ್ನು ಕಂಡು, ಕನಸಿನಲ್ಲಿ ನಡೆದ ಘಟನೆಯನ್ನು ತಿಳಿಸಿದ ನಂತರ ಬ್ರಾಹ್ಮಣನು ಆ ಶಿಲೆಯ ಬಳಿ ಬಂದಾಗ, ದೇವರು ಕ್ಷಣ ಮಾತ್ರ ಸರ್ಪ ರೂಪದಲ್ಲಿ ಬ್ರಾಹ್ಮಣನಿಗೂ ದರ್ಶನ ನೀಡಿ ಅದೃಶ್ಯವಾಯಿತಂತೆ.

ಆಗ ಬ್ರಾಹ್ಮಣ ಮತ್ತು ವ್ಯಾಪಾರಿ ಇಬ್ಬರೂ ಸೇರಿ ಸಂಡೂರಿಗೆ ಹೋಗಿ ರಾಜರ ದರ್ಶನ ಮಾಡಿ, ವ್ಯಾಪಾರಿಯು ತಮ್ಮ ಕನಸಿನ ವೃತ್ತಾಂತ ತಿಳಿಸಿದರೂ ರಾಜನು ತನಗೆ ಹಲವು ರಾಜಕಾರ್ಯಗಳಿದ್ದು, ತಕ್ಷಣವೇ ಅಲ್ಲಿಗೆ ಬರಲಾಗುವುದಿಲ್ಲ, ಅಗತ್ಯವಿದ್ದರೆ ಧನ ಸಹಾಯ ಮಾಡುವುದಾಗಿಯೂ, ನೀವೇ ದೇಗುಲ ಕಟ್ಟಿ ಎಂದು ಹೇಳಿದನಂತೆ. ಇದರಿಂದ ಬೇಸರಗೊಂಡ ವ್ಯಾಪಾರಿ ಮತ್ತು ಬ್ರಾಹ್ಮಣನು ಮಹಾಸ್ವಾಮಿ ಆ ಭಗವಂತನ ಅಜ್ಞೆಯನ್ನು ನಿಮಗೆ ತಿಳಿಸಿದ್ದೇವೆ. ನಮಗೆ ನಿಮ್ಮ ಮನೆಯಲ್ಲಿ ಈ ರಾತ್ರಿ ಉಳಿದುಕೊಳ್ಳಲು ಅವಕಾಶ ನೀಡಿ ಎಂದು ಕೇಳಿಕೊಂಡು ಉಳಿದು ಕೊಂಡಿರುವಾಗ,

ಆ ರಾತ್ರಿಯಲ್ಲೆ ರಾಜನ ಸ್ವಪ್ನದಲ್ಲಿ ಸ್ವಾಮಿಯು ಉಗ್ರವಾಗಿ ಕಾಣಿಸಿಕೊಂಡು ತನ್ನ ಆಜ್ಞೆಯನ್ನು ತಿರಸ್ಕರಿಸಿದ ರಾಜನ ಮೇಲೆ ಕೋಪಿತನಾಗಿ ನೀನು ನನ್ನ ಆಜ್ಞೆಯನ್ನು ತಿರಸ್ಕರಿಸಿರುವ ಫಲವಾಗಿ ನಿನ್ನ ಖಜಾನೆ ಬರಿದಾಗಿ, ನಿನ್ನ ಪುತ್ರ, ಪೌತ್ರರಿಗೆ ಕಷ್ಟ ಬರಲಿದೆ ಎಂದು ಎಚ್ಚರಿಸಿದಾಗ ಕೂಡಲೇ ನಿದ್ದೆಯಿಂದೆದ್ದ ರಾಜನು ತನ್ನ ತಪ್ಪಿಗೆ ದೇವರ ಕ್ಷಮೆ ಕೋರಿ, ಆ ವ್ಯಾಪಾರಿ ಮತ್ತು ಬ್ರಾಹ್ಮಣನನ್ನು ಹುಡುಕಿ ಕರೆಸಿ ಅವರೊಂದಿಗೇ ಘಾಟಿಯತ್ತ ಪ್ರಯಾಣ ಬೆಳೆಸಿ, ಕ್ಷೇತ್ರಕ್ಕೆ ಬಂದು ಮೂಲ ದೇವರ ದರ್ಶನ ಪಡೆದು, ದೇವರ ಇಚ್ಛೆಯಂತೆ ಗುಡಿ ಕಟ್ಟಿಸಿ, ಆ ಬ್ರಾಹ್ಮಣನನ್ನೇ ಪೂಜೆಗೆ ನೇಮಿಸಿ ಪೂಜ ಕಾರ್ಯಗಳಿಗೆ ಭೂಮಿಯನ್ನು ದಾನವಾಗಿ ನೀಡಿದರಂತೆ. ಇಂದೂ ಸಹ ಅದೇ ಅರ್ಚಕರ ವಂಶಸ್ಥರೇ ಪೂಜೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

**ಸಾಸಲು ಹೋಬಳಿಯ ಮಚ್ಚೇನಹಳ್ಳಿ ಗ್ರಾಮದ ಮಾರಮ್ಮನ ಐತಿಹ್ಯ**

ಸಾಸಲು ಗ್ರಾಮದ ಮಚ್ಚೇನಹಳ್ಳಿ ಮಾರಮ್ಮಳು ಮೂಲ ಶ್ರೀರಾಮನಹಳ್ಳಿಯವಳು. ಈ ಹಳ್ಳಿಯವರು ಮಾರಮ್ಮನನ್ನು ಕಾಡಿನಲ್ಲಿ ಕೂರಿಸಿದಾಗ ದನ ಕಾಯುವ ಹುಡುಗರು ಕಲ್ಲಿನಿಂದ ಜಜ್ಜಿ ಮಾರಮ್ಮ ದೇವರ ವಿಗ್ರಹವನ್ನು ವಿಕಾರಗೋಳಿಸಿದರಂತೆ ಆಗ ಮುನಿದ ಈ ದೇವತೆ ಆ ಮಚ್ಚೇನಹಳ್ಳಿಯ ದನ ಗಾಡಿಗಳನ್ನು ಹಸುಗಳನ್ನು ಕಾಡಿನಿಂದ ಹಿಡಿದು ಊರ ಬಾಗಿಲ ತನಕ ಸಾಯಿಸಿ ಹಾಕಿದಳಂತೆ. ಈ ಸುದ್ದಿ ತಿಳಿದ ಗ್ರಾಮಸ್ಥರು ಪ್ರತಿ ವರ್ಷ ನಾವು ಜಾತ್ರೆ ಮಾಡುತ್ತೇವೆ ತಪ್ಪಾಯಿತು ಇದೇ ಕಾಡಲ್ಲಿ ಸಾಗಾಕುತ್ತೇವೆಂದು ಕೇಳಿಕೊಂಡಾಗ ಎಲ್ಲರೂ ಬದುಕಿದರಂತೆ ಇದು ಸಾಸಲು ಗ್ರಾಮದ ಮಾರಮ್ಮನಿಗೆ ಸಂಬಂದಪಟ್ಟಂತೆ ಒಂದು ದಂತ ಕತೆ. ಗ್ರಾಮಾಸ್ಥರು ಈ ಜಾತ್ರೆಯನ್ನು ತುಂಬಾ ಭಯ ಭಕ್ತಿಯಿಂದ ದೇವರಿಗೆ ಇಷ್ಟವಾಗುವಂತೆ ಮಾಡುತ್ತಾರೆ. ಮಚ್ಚೇನಹಳ್ಳಿಯವರು ಮಾರಮ್ಮನ ಜಾತ್ರೆ ಮಾಡುವುದನ್ನು ಇಂದಿಗೂ ಸಹ ನೋಡಬಹುದು.

## ದೇವನಹಳ್ಳಿ ತಾಲ್ಲೂಕಿನ ಚೌಡಪ್ಪನಹಳ್ಳಿಯ ತಬ್ಬುಲಿಂಗೇಶ್ವರಸ್ವಾಮಿ ಐತಿಹ್ಯ

ಚನ್ನರಾಯಪಟ್ಟಣ ಹೋಬಳಿಯ ಗಂಗವಾರ ಮತ್ತು ಚೌಡಪ್ಪನಹಳ್ಳಿ ಗ್ರಾಮಗಳ ಮಧ್ಯೆ ನಿರ್ಮಿಸಲಾಗಿರುವ ತಬ್ಬುಲಿಂಗೇಶ್ವರಸ್ವಾಮಿ ದೇವಾಲಯಕ್ಕೆ ಸಂಬಂಧಿಸಿದ ಐತಿಹ್ಯವೇನೆಂದರೆ, ಈ ಗ್ರಾಮದಲ್ಲಿ ಸತ್ಯಶಾಸ್ತ್ರಿ ಮತ್ತು ಪವಿತ್ರದೇವಿ ಎಂಬ ದಂಪತಿಗಳು ವಾಸವಾಗಿದ್ದು, ಪವಿತ್ರದೇವಿಯು ಲಿಂಗೇಶ್ವರನ ಪರಮಭಕ್ತಳಾಗಿ, ಸಂತಾನವಿಲ್ಲದ ಕಾರಣ ಬಹಳ ದುಃಖಿತಳಾಗಿದ್ದಳು. ಒಮ್ಮೆ ಸತ್ಯಶಾಸ್ತ್ರಿಯವರು ಹೆಂಡತಿಯನ್ನು ಮನೆಯಲ್ಲಿ ಬಿಟ್ಟು, ತೀರ್ಥಯಾತ್ರೆಗೆ ಕಾಶಿಯ ರಾಮೇಶ್ವರಕ್ಕೆ ಹೊರಡುತ್ತಾನೆ. ಇತ್ತ ಪವಿತ್ರದೇವಿಗೆ ದೈನಂದಿನ ಜೀವನ ಕಷ್ಟವಾಗಿ ಶೂದ್ರನಾದ ಚೌಡಪ್ಪನ ಮನೆಯಿಂದ ಭಿಕ್ಷೆ ಬೇಡಿ ಜೀವನ ಸಾಗಿಸುತಿರುವುದನ್ನು ದೊಡ್ಡ ದೋಷವೆಂದು ಪರಿಗಣಿಸಿದ ಉಳಿದ ಬ್ರಾಹ್ಮಣ ಕುಟುಂಬಗಳ ಸ್ತ್ರೀಯರು ಅವಳನ್ನು ದೂಷಿಸುವುದರ ಜೊತೆಗೆ ಬಹಿಷ್ಕಾರ ಶಿಕ್ಷೆಗೆ ಒಳಪಡಿಸುತ್ತಾರೆ.

ತೀರ್ಥಯಾತ್ರೆಯಿಂದ ಸತ್ಯಶಾಸ್ತ್ರಿ ಹಿಂದಿರುಗಿದ ಮೇಲೆ ಅವನ ಸತಿಯ ಮೇಲೆ ಇಲ್ಲಸಲ್ಲದ ಅರೋಪಗಳನ್ನು ಹಾಕಿ ಅವಳ ನಡತೆ ಸರಿಯಿಲ್ಲವೆಂದು ದೂರುತ್ತಾರೆ. ಅವರ ನಿಂದನೆಯನ್ನು ನಿಜವೆಂದು ನಂಬಿದ ಸತ್ಯಶಾಸ್ತ್ರಿ ತನ್ನ ಪತ್ನಿಯನ್ನು ಸತ್ಯ ಪರೀಕ್ಷೆಗೆ ಒಡ್ಡುತ್ತಾನೆ. ಆಗ ಪವಿತ್ರದೇವಿ ನಾನು ಪತಿವ್ರತೆಯಾಗಿದ್ದರೆ ನನ್ನ ಮೇಲೆ ಹೊರಿಸಿದವರ ವಂಶ ನಾಶವಾಗಿ ಈ ಗ್ರಾಮವು ಸುಟ್ಟು ಬೂದಿಯಾಗಲಿ ಎಂದು ಶಾಪ ನೀಡುತ್ತಾಳೆ. ಆಗ ಮಧ್ಯಾಹ್ನ ಸುಡು ಬಿಸಿಲಿನಲ್ಲಿ ಅಗ್ರಹಾರವು ಇದ್ದಕ್ಕಿದ್ದಂತೆ ಬೆಂಕಿ ಹತ್ತಿಕೊಂಡು ಊರು ಸುಟ್ಟು ಬೂದಿಯಾಯಿತು, ಮನೆಗಳಲ್ಲಿ ಪ್ರತಿಷ್ಠಾಪಿಸಿದ್ದ ಲಿಂಗಗಳೆಲ್ಲವು ನಿರಾಧಾರವಾಗಿ ನಿಂತಿದ್ದವು, ಉರಿಯುತ್ತಿದ್ದ ಬೆಂಕಿ ಜ್ವಾಲೆಯನ್ನು ಕಂಡ ದಂಪತಿಗಳು ದೇವೇಂದ್ರನನ್ನು ಪ್ರಾರ್ಥಿಸಿಕೊಂಡಾಗ, ಘೋರವಾದ ಮಳೆಯು ಧಾರಕಾರವಾಗಿ ಸುರಿದು, ಊರು ಸುಟ್ಟ ಬೂದಿಯು ದಕ್ಷಿಣ ಪಿನಾಕಿನಿ ನದಿಗೆ ಹರಿದುಕೊಂಡು ಹೋಯಿತು. ಆಗ ಸತ್ಯಶಾಸ್ತ್ರಿ ಮತ್ತು ಪವಿತ್ರದೇವಿ ಪರಮೇಶ್ವರನನ್ನು ಪ್ರಾರ್ಥಿಸಲು ಪ್ರತ್ಯಕ್ಷನಾದ ಈಶ್ವರನು ಸುಟ್ಟು ಹೋದ ಅಗ್ರಹಾರದ ಪೂರ್ವದಲ್ಲಿ ದೇವಾಲಯವನ್ನು ನಿರ್ಮಿಸಿರಿ ಎಂದು ಆಜ್ಞೆ ಮಾಡಿ ಅದೃಶ್ಯನಾದನು. ಆಗ ಸತಿ ಪತಿಗಳಿಬ್ಬರು ಅಲ್ಲಿದ್ದ ಲಿಂಗಗಳನ್ನು ತಬ್ಬಿಕೊಂಡು ತಂದು ದೇವಾಲಯದಲ್ಲಿಟ್ಟರು. ಹೀಗೆ ತಬ್ಬಿಕೊಂಡು ಹೊತ್ತು ತಂದುದರಿಂದ ಈ ಲಿಂಗವು ತಬ್ಬುಲಿಂಗೇಶ್ವರನೆಂದು ಮನೆ ಮಾತಾಯಿತು. ಈ ಲಿಂಗವನ್ನು ಮಕ್ಕಳು ತಬ್ಬಿದರೂ, ದೊಡ್ಡವರು ತಬ್ಬಿದರೂ ಅವರವರ ಕೈ ಅಳತೆಗೆ ತಕ್ಕಾಗಿ ಹೊಂದಿಕೊಳ್ಳುತ್ತೆ. ಸಾಮನ್ಯವಾಗಿ ಚೋಳರು ಪ್ರಮುಖ ಶೈವ ಕೇಂದ್ರಗಳಿಗೆ ಹೊಂದಿಕೊಂಡಂತೆ ಅಗ್ರಹಾರಗಳನ್ನು ನಿರ್ಮಿಸುತ್ತಿದ್ದರು. ಚೌಡಪ್ಪನಹಳ್ಳಿಯ ಪಕ್ಕದಲ್ಲಿನ ಗಂಗವಾರವು ಚೋಳರ ಆಳ್ವಿಕೆಗೆ ಒಳಪಟ್ಟ ಮೇಲೆ ಇಲ್ಲಿ ಅಗ್ರಹಾರ

ನಿರ್ಮಾಣವಾಗಿರ ಬೇಕು. ಯಾವುದೋ ಸಾಂಕ್ರಾಮಿಕ ರೋಗದಿಂದ ಅಗ್ರಹಾರ ಸುಟ್ಟುಹೊಗಿರಬೇಕು. ಸುಟ್ಟುಹೋದ ಅಗ್ರಹಾರಕ್ಕೆ ಈ ತರ ಕತೆಯನ್ನು ಐತಿಹ್ಯವಾಗಿ ಕಟ್ಟಲಾಗಿದೆ.

**ಚಪ್ಪರದಕಲ್ಲು ಏಕಶಿಲಾ ಪಾಂಡವರ ಗುಡಿ ಐತಿಹ್ಯ**

ದೇವನಹಳ್ಳಿಯಿಂದ ದೊಡ್ಡಬಳ್ಳಾಪುರ ಮಾರ್ಗದಲ್ಲಿ ಸಿಗುವ, ದೇವನಹಳ್ಳಿ ತಾಲ್ಲೂಕಿನಿಂದ ಎಂಟು ಕಿ.ಮೀ. ದೂರದಲ್ಲಿರುವ ಐ.ವಿ.ಸಿ ರಸ್ತೆಯಲ್ಲಿರುವ ಅಂಚಿನ ಉಗನವಾಡಿ ಗ್ರಾಮದ ಸಂತೆ ವೃತ್ತದ ಆವರಣದಲ್ಲಿ ಏಕಶಿಲಾ ಚಪ್ಪರದಿಂದ ಕೂಡಿದ್ದು, ಇದರ ಉದ್ದ ಸುಮಾರು ೩೦ ಅಡಿಗಳು, ಅಗಲ ೨೫ ಅಡಿಗಳು. ಬಂಡೆಗ್ಲಲ್ಲಿನ ಮೇಲೆ ಅಧಾರ ರಹಿತ ಕಂಬಗಳ ಮೇಲೆ ನಿಂತಿರುವ ಶಿಲಾ ಚಪ್ಪರವೇ ಪಾಂಡವರ ಗುಡಿ. ಇಲ್ಲಿನ ಸ್ಥಳ ಪುರಾಣದ ಪ್ರಕಾರ ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಈ ಪ್ರದೇಶವು ದಟ್ಟವಾದ ಅರಣ್ಯದಿಂದ ಕೂಡಿದ್ದು, ಇದೇ ಮಾರ್ಗವಾಗಿ ಪಾಂಡವರು ಸಂಚರಿಸುತ್ತಿದ್ದಾಗ ರಾತ್ರಿಯಾಗಿದ್ದು, ಇಲ್ಲಿಯೇ ಉಳಿದುಕೊಳ್ಳುವ ಸಂದರ್ಭದಲ್ಲಿ ಅರಣ್ಯಾ ಮಧ್ಯೆ ಎತ್ತರವಾದ ಹಾಗೂ ವಿಶಾಲವಾದ ಒಂದು ಬಂಡೆಯ ಸಮೀಪ ಬರುತ್ತಾರೆ. ಅದೇ ಸಮಯದಲ್ಲಿ ಧಾರಾಕಾರವಾದ ಮಳೆ ಪ್ರಾರಂಭವಾಗುತ್ತದೆ. ಆಗ ಆಶ್ರಯಕ್ಕಾಗಿ ದ್ರೌಪದಿ ಮತ್ತು ಪಾಂಡವರು ಕಂಗಾಲಾಗುತ್ತಾರೆ. ದ್ರೌಪದಿಯ ಮೊರೆಯನ್ನು ಕೇಳಿದ ಭೀಮಸೇನನು ತನ್ನ ಕಿರು ಬೆರಳಿನಿಂದ ಈ ವಿಶಾಲವಾದ ಶಿಲೆಯನ್ನು ನಾಲ್ಕು ಒರಟು ಕಂಬಗಳ ಮೇಲೆ ಎತ್ತಿ ಇಡುತ್ತಾನೆ. ಇದರಿಂದ ಅವರು ನಿರಾತಂಕವಾಗಿ ಆಶ್ರಯ ಪಡೆಯುತ್ತಾರೆ. ಮರುದಿನ ಏಕಚಕ್ರ ನಗರ ಅಥವಾ ಕೈವಾರದ ಕಡೆಗೆ ಪ್ರ್ರಯಾಣ ಬೆಳಸಿದರು ಎಂಬುದು ಸ್ಥಳೀಯರಲ್ಲಿ ನಂಬಿಕೆ.

**ಹೊಸಕೋಟೆಯ ದ್ರೌಪದಮ್ಮನ ಐತಿಹ್ಯ**

ಹೊಸಕೋಟೆಯ ಗ್ರಾಮದೇವತೆ ದ್ರೌಪದಮ್ಮನ ಬಗೆಗಿನ ಪುರಾಣದ ಹಿನ್ನೆಲೆಯಾದ ಐತಿಹ್ಯವೆಂದರೆ ಒಂದು ದಿನ ಪಾರ್ವತಿ ರೂಪಳಾದ ಆದಿಶಕ್ತಿಯು ಶಿವನಿಗಾಗಿ ಬ್ರಹ್ಮನನ್ನು ಕುರಿತು ತಪಸ್ಸನ್ನಾಚರಿಸುವಾಗ ತಪಸ್ಸಿಗೆ ಮೆಚ್ಚಿ ಬ್ರಹ್ಮ ಪ್ರತ್ಯಕ್ಷನಾಗುತ್ತಾನೆ. ಪಾರ್ವತಿಯು ಬ್ರಹ್ಮದೇವನನ್ನು ಪತಿ ಭಿಕ್ಷಾಂದೇಹಿ ಎಂದು ಕೇಳುತ್ತಾಳೆ. ಆದಿಶಕ್ತಿಯ ದಿವ್ಯ ದರ್ಶನದಿಂದ ಬೆರಗಾಗಿ ಸುಮ್ಮನೆ ನಿಂತಿದ್ದ ಬ್ರಹ್ಮನನ್ನು ಕಂಡು ಮತ್ತೊಮ್ಮೆ ಪತಿಭಿಕ್ಷಾಂದೇಹಿ ಎನ್ನುತ್ತಾಳೆ. ತಪಸ್ಸಿನಿಂದ ಶಕ್ತಿ ಸಂಪನ್ನಳಾಗಿ ಸುವರ್ಣ ಕಿರಣಗಳಂತೆ ಪ್ರಜ್ವಲ್ಯಮಾನಳಾಗಿ ಕಾಣುತ್ತಿದ್ದ ಆದಿ ಶಕ್ತಿಯನ್ನು ನೋಡಿ ಏನು ಹೇಳಬೇಕೆನ್ನುವಷ್ಟರಲ್ಲಿ ಮತ್ತೆ ಮೂರು ಬಾರಿ ಪತಿ ಭಿಕ್ಷಾಂದೇಹಿ ಎಂದು ಬೇಡುತ್ತಾಳೆ. ಅಷ್ಟರಲ್ಲಿ ಬ್ರಹ್ಮನು ಹಿಂದೆ ಮುಂದೆ

ನೋಡದೆ ನಿನ್ನ ಬೇಡಿಕೆಗಳಗೆಲ್ಲ ಅಸ್ತು ಎನ್ನುತ್ತಾನೆ. ಆಗ ಪಾರ್ವತಿಯು ಬ್ರಹ್ಮನನ್ನು ಕುರಿತು ಮಹಾಸ್ವಾಮಿ ನಾನು ಕೇಳಿದ್ದು ಒಂದೇ ವರ ಪತೀಭಿಕ್ಷೆಯನ್ನು, ಆದರೆ ನೀವು ನಿನ್ನ ಎಲ್ಲಾ ಬೇಡಿಕೆಗಳು ಎಂದು ಹೇಳಿದ್ದೀರಲ್ಲ ಎಂದು ಕೇಳಿದಾಗ, ತಾಯಿ ನೀನು ಐದು ಬಾರಿ ಕೇಳಿರುವೆ ಜ್ಞಾಪಿಸಿಕೋ ಎಂದು ಹೇಳುತ್ತಾನೆ. ಈ ಉತ್ತರದಿಂದ ಹೌಹಾರಿದ ಪಾರ್ವತಿ ಬ್ರಹ್ಮನನ್ನೆ ಇದಕ್ಕೆ ಪರಿಹಾರ ಕೇಳುತ್ತಾಳೆ. ಆಗ ಬ್ರಹ್ಮನು ಪತಿ ಪತ್ನಿಯರ ಸಂಬಂಧ ಬದುಕು ಭೂಲೋಕಕ್ಕೆ ಸೀಮಿತವಾದದ್ದು. ನಾನು ವರವನ್ನು ಕೊಟ್ಟಾಯ್ತು ನೀನು ಐದು ಜನ್ಮಗಳನ್ನು ಎತ್ತಿ ಐದು ಜನ ಗಂಡಂದಿರೊಂದಿಗೆ ಹೆಂಡತಿಯಾಗಿ ಬಾಳಿ ದೇವಲೋಕಕ್ಕೆ ಬರುವೆಯಾ ಅಥವಾ ಐದು ಜನರನ್ನು ಪತಿಯರನ್ನಾಗಿ ಪಡೆದು ಒಂದೇ ಜನ್ಮದಲ್ಲಿ ಎಲ್ಲಾ ಕಷ್ಟಗಳನ್ನು ಅನುಭವಿಸಿ ದೇವಲೋಕಕ್ಕೆ ಬರುವೆಯೋ ನೀನೇ ತೀರ್ಮಾನ ಮಾಡಿಕೋ ಎಂದು ಹೇಳುತ್ತಾನೆ. ಆಗ ಪಾರ್ವತಿಯು ಐದು ಜನ್ಮದಲ್ಲಿ ದೈವಾಂಶ ಸಂಭೂತರಾದ ಐವರು ಪತಿಗಳನ್ನು ಪಡೆದು ಧರ್ಮ ಕಾರ್ಯ ಸಾಧಿಸುವುದನ್ನು ಒಂದೇ ಜನ್ಮದಲ್ಲಿ ಅನುಗ್ರಹಿಸು ಎಂದಾಗ ಬ್ರಹ್ಮನು ಅಸ್ತು ಎನ್ನುತ್ತಾನೆ.

ಕಾಲಾನಂತರದಲ್ಲಿ ದ್ರುಪದ ರಾಜನು ಮಾಡಿದ ಯಾಗದ ಅಗ್ನಿಯಿಂದ ಒಂದು ಹೆಣ್ಣು ಮಗುವಾಗಿ ಜನ್ಮ ತಾಳಿ ಕೃಷ್ಣೆಯೆಂದು, ದ್ರೌಪದಿಯೆಂದು ಕರೆಯಲ್ಪಡುತ್ತಾಳೆ. ಹೀಗಾಗಿ ಆದಿಶಕ್ತಿ ಸ್ವರೂಪಳಾದ ದ್ರೌಪದಿಯು ಯಮಧರ್ಮನ ಅಂಶದಿಂದ ಜನಿಸಿದ ಧರ್ಮರಾಯನನ್ನು, ವಾಯುವಿನ ಅಂಶದಿಂದ ಜನಿಸಿದ ಭೀಮಸೇನನನ್ನು, ಇಂದ್ರನ ಅಂಶದಿಂದ ಜನಿಸಿದ ಅರ್ಜುನನನ್ನು, ಅಶ್ವಿನಿ ದೇವತೆಗಳ ಅಂಶದಿಂದ ಜನಿಸಿದ ನಕುಲ ಸಹದೇವರನ್ನು ಹೀಗೆ ಐದು ಜನರನ್ನು ಪತಿಗಳನ್ನಾಗಿ ಪಡೆದು ಮಹಾಭಾರತದ ಸೂತ್ರಧಾರಿಣಿಯಾದ ಸ್ತ್ರೀ ಶಕ್ತಿಯಾಗಿದ್ದಾಳೆ. ಮಹಾಭಾರತದ ಹತ್ತನೆಯ ಪರ್ವದಲ್ಲಿ ಸೂಚಿಸಿರುವಂತೆ ಪಂಚಪಾಂಡವರು ವನವಾಸದಲ್ಲಿರುತ್ತಾರೆ. ಈ ಸಂದರ್ಭದಲ್ಲಿ ಶ್ರೀಕೃಷ್ಣನ ಸಲಹೆಯಂತೆ ಪಂಚಪಾಂಡವರು ತಮ್ಮ ವೃದ್ಧಿಗಾಗಿ ಅಸ್ತ್ರ ಶಸ್ತ್ರಗಳ ಸಾಧನೆಯಲ್ಲಿ ತೊಡಗಿರುತ್ತಾರೆ. ಈ ಸಂದರ್ಭದಲ್ಲಿ ತಿಮಿರಾಸುರನೆಂಬ ರಾಕ್ಷಸನು ದ್ರೌಪದಿಯನ್ನು ಕಾಡತೊಡಗುತ್ತಾನೆ. ಶ್ರೀ ಕೃಷ್ಣನ ಮೊರೆಹೊಕ್ಕರೂ ಆದಿ ಶಕ್ತಿಯ ಅಂಶವೇ ದ್ರೌಪದಿ ಎಂದರಿತ ಭಗವಂತನು ನಿನಗಿರುವ ಶಕ್ತಿಯಲ್ಲಿಯೇ ನಿನ್ನನ್ನು ರಕ್ಷಿಸಿಕೋ ಎಂದು ಛೇಡಿಸುತ್ತಾನೆ. ಆಗ ಕುಪಿತಗೊಂಡು ವಿಶ್ವರೂಪ ತಾಳಿ ಈ ರಕ್ಕಸ ಪಡೆಯ ಧ್ವಂಸಕ್ಕಾಗಿ ತನ್ನ ತಲೆಯಿಂದ ಯಜಮಾನನ್ನು, ಹಣೆಯಿಂದ ಗಣಾಚಾರಿಯನ್ನು, ಕಿವಿಗಳಿಂದ ಗೌಡರುಗಳನ್ನು, ಬಾಯಿಂದ ಘಂಟೆ ಪೂಜಾರಿಯನ್ನು, ತನ್ನ ತೋಳುಗಳಿಂದ ವೀರಕುಮಾರರನ್ನು ಸೃಷ್ಟಿಸಿ, ಸೈನ್ಯವನ್ನು ಸಜ್ಜುಗೊಳಿಸಿ ರಕ್ಕಸರ ಪಡೆಯನ್ನೇ ನಾಶ ಮಾಡುತ್ತಾಳೆ. ಹೀಗೆ ಎಲ್ಲ ರಾಕ್ಷಸರನ್ನು ನಿರ್ನಾಮ ಮಾಡಿದ ನಂತರ ತಾನು ದೇವಲೋಕಕ್ಕೆ ಹಿಂತಿರುಗಲು ಸಜ್ಜಾಗುತ್ತಾಳೆ. ಇದನ್ನರಿತ ಶ್ರೀಕೃಷ್ಣನು ಅಲ್ಲಿಗೆ ಧಾವಿಸಿ

ಗಣಾಚಾರಾದಿಯಾಗಿ ವೀರ ಕುಮಾರರನ್ನು ಕುರಿತು ಈ ನಿಮ್ಮ ತಾಯಿಯನ್ನು ಉಳಿಸಿಕೊಳ್ಳಬೇಕಾದರೆ ನೀವಲ್ಲದೆ ಮತ್ಯಾವರಿಂದಲೂ ಸಾಧ್ಯವಾಗುವುದಿಲ್ಲ ಎಂಬುದಾಗಿ ತಿಳಿಸುತ್ತಾನೆ. ಈ ವಿಚಾರವನ್ನು ಅರಿತ ವೀರಕುಮಾರರು ಅಮ್ಮಾ ನಮಗೆ ದಿಕ್ಕು ತೋರು. ಅಮ್ಮ ದಿಕ್ಕು ತೋರು ಎಂದು ಕೂಗಿ ಕೊಳ್ಳುತ್ತಾ ತಮ್ಮ ವೀರ ಖಡ್ಗದಿಂದ ಎದೆಯ ಮೇಲೆ ಬಡಿದುಕೊಳ್ಳುತ್ತಾ ಆತ್ಮಾಹುತಿಗೆ ಸಿದ್ಧರಾಗತ್ತಾರೆ. ಈ ಬೇಡಿಕೆಯಿಂದ ಮನಃ ಕರಗಿದ ಆದಿಶಕ್ತಿಯು ತನ್ನ ಕುಮಾರರನ್ನು ಸಂತೈಸುತ್ತಾ ನೀವು ಈ ದೇಶದಲ್ಲಿ ಸತ್ಯಧರ್ಮಗಳ ರಕ್ಷಣೆಗಾಗಿ ಬಾಳು ಮುಂದುವರೆಸಿ, ನಾನು ವರ್ಷದಲ್ಲಿ ಮೂರು ದಿನ ನಿಮ್ಮೊಂದಿಗಿರುತ್ತೇನೆ ಎಂದು ತಿಳಿಸಿ ಶಾಂತ ಚಿತ್ತಳಾಗಿ ಮತ್ತೆ ದ್ರೌಪದಿಯ ರೂಪಕ್ಕೆ ಮರಳುತ್ತಾಳೆ. ಇದರ ಆಚರಣೆಯ ಅಂಗವೇ ಕರಗ ಉತ್ಸವ ಪ್ರತಿ ವರ್ಷ ಮೂರು ದಿನಗಳ ಕಾಲ ಬಹಳ ವಿಜೃಂಭಣೆಯಿಂದ ನೆರವೇರುತ್ತದೆ. ಕರಗದ ದಿನ ಊರ ತುಂಬ ವಿವಿಧ ಬಗೆಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೆರವೇರುತ್ತವೆ. ಹರಿಕಥೆ, ಸಂಗೀತ, ಭಜನೆ, ನಾಟಕ, ಮುಂತಾದ ಕಾರ್ಯಕ್ರಮಗಳನ್ನು ಭಕ್ತಾದಿಗಳು ನಡೆಸಿಕೊಡುತ್ತಾರೆ.

ವಾಸ್ತವವಾಗಿ ಸುಗಟೂರು ಪಾಳೇಗಾರರಾದ ತಮ್ಮೇಗೌಡರು ದೊಡ್ಡದಾದ ಕೆರೆಯನ್ನು ಕಟ್ಟಿಸಿದ ಮೇಲೆ, ಕೆರೆಯ ದಡದಲ್ಲಿ ಕ್ರಿ.ಶ.೧೪೨೨ರಲ್ಲಿ ಹೊಸಕೋಟೆಯನ್ನು ಕಟ್ಟಿಸಿದನು. ನಂತರ ವರ್ತಕವೃಂಧ ಸೇರಿ ದೇವಾಲಯವನ್ನು ಕಟ್ಟಿಸಿದಕ್ಕೆ ಶಾಸನಗಳು ಮಾಹಿತಿ ನೀಡುತ್ತದೆ. ದ್ರೌಪದಿಯ ಉಲ್ಲೇಖವಿರುವುದು ದ್ವಾಪರಯುಗದಲ್ಲಿ ಅಂದ ಮೇಲೆ ೧೪೨೨ರಲ್ಲಿ ನಿರ್ಮಾಣ ಹೊಸಕೋಟೆಯಲ್ಲಿ ಹೇಗೆ ದ್ರೌಪದಿ ಜೀವಿಸಲು ಸಾಧ್ಯ? ಇಲ್ಲಿ ಬರುವಂತಹ ಗಣಾಚಾರ, ವೀರ ಕುಮಾರೆಲ್ಲರೂ ಕೋಟೆ ರಚನೆ ಆದ ಮೇಲೆ ಬಂದಂತಹ ವರ್ಗದವರು. ಬೆಂಗಳೂರಿನಲ್ಲಿ ನಡೆಯುವ ಧರ್ಮರಾಯನ ಕರಗಕ್ಕೆ ಪರ್ಯಾಯವಾಗಿ ಹುಟ್ಟು ಕೊಂಡಂತಹ ಕರಹ ಸಂಸ್ಕೃತಿ ಇರಬಹುದು.

**ಧರ್ಮೇಶ್ವರಸ್ವಾಮಿಯ ಐತಿಹ್ಯ.**

ಹೊಸಕೋಟೆ ತಾಲ್ಲೂಕಿನ ನಂದಗುಡಿಯ ಸಮೀಪದ ಶ್ರೀ ಧರ್ಮೇಶ್ವರ ದೇವಾಲಯ ಇದು ಕೊಂಡ್ರಹಳ್ಳಿ, ಹೊಸಹಳ್ಳಿಗಳ ನಡುವಿನ ಧಾರ್ಮಿಕ ಕ್ಷೇತ್ರವಾಗಿದೆ. ದ್ವಾಪರ ಯುಗದಲ್ಲಿ ಪಾಂಡವರನ್ನು ನಾಶ ಮಾಡುವುದಕ್ಕೆ ದುರ್ಯೋಧನ ವಿಷದ ಕೊಳ ನಿರ್ಮಿಸಿದ ಮತ್ತು ಯಕ್ಷ್ ಪ್ರಸಂಗದ ಕಥೆಯನ್ನು ಐತಿಹ್ಯವಾಗಿ ಸ್ಥಳೀಯರು ಹೇಳುತ್ತಾರೆ. ಯಕ್ಷ ಪ್ರಶ್ನೆ ಧರ್ಮಜನ ಪರೀಕ್ಷೆಗಾಗಿ ಸ್ವತಃ ಧರ್ಮ ಸ್ವರೂಪನಾದ ಯಮನು ಜಿಂಕೆಯ ವೇಷದಲ್ಲಿ ಬಂದು ಬ್ರಾಹ್ಮಣನೊಬ್ಬನ ಆರಣಿ ಮಂಥನ ದಂಡ ತೆಗೆದುಕೊಂಡು ಹೋಗುತ್ತಾನೆ. ಅದನ್ನು ಬೆನ್ನಟಿದ್ದ ಪಾಂಡವರಿಗೆ ಆಯಾಸ ಪರಿಹಾರವಾಗಿ ಕಂಡ

ಕೊಳದಲ್ಲಿ ನೀರು ಕುಡಿಯಲು ಹೋದಾಗ ಯಕ್ಷ ರೂಪದಲ್ಲಿ ಕೇಳಿದ ಪ್ರಶ್ನೆಗೆ ಉತ್ತರಿಸಿ ನಂತರ ನೀರು ಕುಡಿಯಲು ಯಮನು ಹೇಳುತ್ತಾನೆ ಇದನ್ನು ಲೆಕ್ಕಿಸದೆ ಭೀಮ, ಅರ್ಜುನ, ನಕುಲ, ಸಹದೇವ ನೀರು ಕುಡಿಯಲು ಹೋಗಿ ಪ್ರಜ್ಞೆ ಕಳೆದು ಕೊಳ್ಳುವ'ರು, ನಂತರ ಧರ್ಮರಾಯನು ಯಕ್ಷನ ಎಲ್ಲಾ ಪ್ರಶ್ನೆಗಳಿಗೆ ತರ್ಕ ಬದ್ಧನಾದ, ವಿವೇಚನಾ ಬದ್ಧ ಉತ್ತರ ನೀಡಿ ಯಕ್ಷನನ್ನು ಒಪ್ಪಿಸುತ್ತಾನೆ. ಮೆಚ್ಚಿದ ಯಕ್ಷನು ಎಲ್ಲಾರನ್ನು ಬದುಕಿಸಿ ಮುಂದೆ ಅಜ್ಞಾತವಾಸಕ್ಕೆ ವಿರಾಟರಾಯನ ನಗರಿಗೆ ಮುನ್ನಡೆಯಲು ಸೂಚಿಸುತ್ತಾನೆ. ನಂತರ ಅಲ್ಲಿ ವಿಷದ ಕೊಳವನ್ನು ಮುಚ್ಚಿ ಅದರ ಮೇಲೆ ಶಿವಲಿಂಗವನ್ನು ಸ್ಥಾಪಿಸಿ ದೇವಾಲಯವನು ಧರ್ಮರಾಯನು ಕಟ್ಟಿಸಿದಕ್ಕೆ ಧರ್ಮರಾಯಸ್ವಾಮಿ ಎಂಬ ಹೆಸರು ಬಂದಿತಂತೆ. ಶಿವಲಿಂಗದ ಕೆಳಗಡೆ ಇರುವ ಕೊಳವನ್ನು ಯಾರು ಪರೀಕ್ಷಿಸಿಲ್ಲವಾದರೂ ಅದರ ಕೆಳಗೆ ವಿಷದ ಕೊಳವಿದೆ ಹಾಗೂ ಲಿಂಗದ ಪಕ್ಕ ಒಂದು ಸಣ್ಣ ರಂಧ್ರವಿದೆ ಅದರಲ್ಲಿ ಬೆರಳಿಟ್ಟರೆ ಕೊಳದ ನೀರು ಕೈಗೆ ತಾಗುತ್ತದೆಂದು ಅರ್ಚಕರು ಹೇಳುತ್ತಾರೆ. ದೇವಾಲಯದ ಆಗ್ನೇಯ ಮತ್ತು ನೈರುತ್ಯದ ದಿಕ್ಕಿನ ಕಂಬಗಳಲ್ಲಿ ಧರ್ಮರಾಜನ ಯಕ್ಷಪ್ರಸಂಗದ ಕಥೆಗೆ ಸಂಬಂಧಿಸಿದ ಶಿಲ್ಪಗಳಿಗೆ ಆಗ್ನೇಯ ದಿಕ್ಕಿನ ಕಂಬದಲ್ಲಿ ಧರ್ಮರಾಜ ಮರದ ಮೇಲೆ ಕುಳಿತುಕೊಂಡು ಯಕ್ಷನ ಪ್ರಶ್ನೆಗಳಿಗೆ ಉತ್ತರಿಸುವ ದೃಶ್ಯವಿದೆ, ಕಂಬದ ಮದ್ಯದಲ್ಲಿ ಭೀಮಾರ್ಜುನರು ಮೇಲ್ಭಾಗದಲ್ಲಿ ಕೆಳಭಾಗದಲ್ಲಿ ನಕುಲ ಸಹದೇವರು ವಿಷದ ನೀರು ಕುಡಿದು ಸತ್ತು ಬಿದ್ದಿದ್ದಾರೆ. ಮತ್ತೊಂದು ದಿಕ್ಕಿನಲ್ಲಿ ಹೆಡೆಯೆತ್ತಿ ನಿಂತಿರುವ ಸರ್ಪದಿಂದ ರಕ್ಷಿತವಾಗಿರುವ ಲಿಂಗದ ಎದುರು ಧರ್ಮರಾಜ ನಿಂತಿದ್ದಾನೆ. ಈ ಉಬ್ಬು ಶಿಲ್ಪಗಳ ಆಧಾರದ ಮೇಲೆ ಧರ್ಮರಾಯ ಐತಿಹ್ಯ ಸೃಷ್ಟಿಯಾಗಿ ಪ್ರಸ್ತುತವು ಚಾಲ್ತಿಯಾಗಿ ಉಳಿದು ಕೊಂಡಿದೆ.

ಆದರೆ ಗಂಗರು ನಿರ್ಮಿಸಿದ ಈ ಧರ್ಮರಾಯನ ದೇವಾಲಯವನ್ನು ಚೋಳರ ಕಾಲದಲ್ಲಿ ಜೀರ್ಣೋದ್ಧಾರ ಮಾಡಿದಕ್ಕೆ ಶಾಸನಾಧರ ದೇವಾಲಯದ ಆವರಣದಲ್ಲಿದೆ ಜೊತೆಗೆ ಚೋಳ ರಾಜೇಂದ್ರ ಮಾಡಿದಕ್ಕೆ ಅವನ ಉಬ್ಬು ಶಿಲ್ಪವು ಸಹ ಶಾಸನದ ಪಕ್ಕದಲ್ಲಿದೆ. ಈ ದೇವಾಲಯವನ್ನು ಚೋಳರ ಕಾಲದಲ್ಲಿ ಸೋಮೇಶ್ವರ ಎಂದು, ವಿಜಯನಗರದ ಅರಸರ ಕಾಲದಲ್ಲಿ ಧರ್ಮೆಶ್ವರ ದೇವಾಲಯ ಎಂದು ಉಲ್ಲೇಕವಾಗಿದೆ. ಈ ಧರ್ಮರಾಯ-ಯಕ್ಷ ಪ್ರಶ್ನೆಗಳು ಉತ್ತರ ಭಾರತ'ದಲ್ಲಿ ನಡೆದಿರುವ ಘಟನೆಯನ್ನು ಸ್ಥಳಿಯ ಧರ್ಮರಾಯನ ಜೊತೆಗೆ ಸೇರಿಸಿ ಇಲ್ಲೇ ನಡೆಯಿತ್ತು ಎಂದು ಕಂಬದಲ್ಲಿನ ಉಬ್ಬು ಶಿಲ್ಪವನ್ನು ತೋರಿಸಿ ಐತಿಹ್ಯವನ್ನು ಸಿದ್ದಪಡಿಸಿದ್ದಾರೆ.

## ೨. ಸ್ಥಳ ಪ್ರಧಾನ ಐತಿಹ್ಯಗಳು

ಪ್ರತಿಯೊಂದು ಸ್ಥಳಕ್ಕೂ ಒಂದೊಂದು ಇತಿಹಾಸವಿರುವುದರ ಜೊತೆಗೆ ಅದಕ್ಕೆ ಅನುಗುಣವಾಗಿ ಐತಿಹ್ಯವೂ ಇರುತ್ತದೆ. ಒಂದೊಂದು ಸ್ಥಳವೂ ಅದರದ್ದೇ ಆದ ಮಹತ್ವವನ್ನು ಪಡೆದುಕೊಂಡಿರುತ್ತದೆ. ಸ್ಥಳ ಪ್ರಧಾನ ಐತಿಹ್ಯಗಳಲ್ಲಿ ವ್ಯಕ್ತಿಗಳಗಿಂತ ಸ್ಥಳಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತದೆ. ಸ್ಥಳದ ವಿಶಿಷ್ಟತೆ ಐತಿಹ್ಯಗಳಗೆ ಮೂಲ ಆಕಾರ. ಒಂದು ಸ್ಥಳಕ್ಕೆ ಇರುವ ಸ್ಥಳನಾಮೆಗಳ ಹುಟ್ಟು ಸಹ ಐತಿಹ್ಯಗಳ ಹಿನ್ನಲೆಯಲ್ಲಿ ಕಾಣಬಹುದು.

**ಶಿವಗಂಗೆ ಹೆಸರು ಬರಲು ಇರುವ ಐತಿಹ್ಯ**

ನೆಲಮಂಗಲ ತಾಲ್ಲೂಕಿನ ಶಿವಗಂಗೆಯು ನಂದಿಯ ಉಗ್ರ ತಪಸ್ಸಿನ ಕ್ಷೇತ್ರವಾಗಿದ್ದರ ಕತೆಯೆಂದರೆ ಮಾಯೆ ಭಾಸುರಾಂಗನೆಯಿಂದ ಮೊಹಕ್ಕೊಳಗಾದ ನಂದಿಯು ಶಾಪ ಕಳೆದು ಕೊಳ್ಳಲು ಬೆನ್ನಿನ ಹಿಳಲೂರಿ (ಕಕುದ) ತಲೆ ಕೆಳಕಾಗಿ ನಿಂತು ತಪಗೈದು ಶಿವನನ್ನೊಲಸಿಕೊಂಡ ಕ್ಷೇತ್ರವಾಗಿದ್ದರಿಂದ ಕಕುದ್ಗಿರಿ ಕ್ಷೇತ್ರ, ವೃಷಭಾದ್ರಿ ಕ್ಷೇತ್ರ ಎಂಬೆಲ್ಲಾ ಹೆಸರು ಬರಲು ಕಾರಣವಾಯಿತು.

ಕಣಾವ ಋಷಿಯು ದಿನನಿತ್ಯ ನೀರಿಗೆ ಬಂದು ಹಾಗೂ ಮಾನಸಿಕವಾಗಿ ಆಹಾರ ಸೇವನೆ ಮಾಡಿ ಪಂಚಾಗ್ನಿ ನಡುವೆ ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ ಗಂಗೆಯನ್ನು ಧರೆಗೆ ಇಳಸಿದನು ಎಂಬುದರ ಬಗ್ಗೆ ರೇವಣಸಿದ್ದರು ಹೇಳದ್ದನ್ನು ಯಷ್ಯ ಶೃಂಗನೆಂಬ ಋಷಿ ಇಲ್ಲಿ ನಿಂತು ಕೇಳದ ಕಾರಣ ಋಷ್ಯಶೃಂಗ ಪರ್ವತ ಎಂದು ಹೆಸರು ಬರಲು ಕಾರಣವಾಯಿತು.

ಕಣಾವ ಮುನಿ ಏಕ ಪಾದದಲ್ಲಿ ನಿಂತು ಉಗ್ರ ತಪಸ್ಸು ಮಾಡುವಲ್ಲಿ ಜ್ವಾಲೆ ಹೊರಟು ಸ್ವರ್ಗತಾಕಿ, ದೇವತೆಗಳು ಶಿವನ ಮೊರೆ ಹೊಕ್ಕಾಗ ಬಾನಿನಲ್ಲಿ ಬಂದು ಮುನಿಯ ನಿಷ್ಠೆ ನೋಡಿ ಅಚ್ಚರಿಯಿಂದ ಶಿವ ತಲೆದೂಗುತ್ತಿದ್ದಾಗ ಶಿವನ ಜಟಾ (ತಲೆ) ಯಿಂದ ಗಂಗೆಯು ಧರೆಗೆ ಇಳಯುತ್ತಿದ್ದನ್ನು ನೋಡಿ ಆನಂದದಿಂದ ಮುನಿಯು ಶಿವಗಂಗಾ ಎಂದು ಉದ್ಗರಿಸುತ್ತಿದ್ದನಂತೆ. ಶಿವನು ಅವನಿಚ್ಚೆಯಂತೆ ಶಿವಗಂಗಾ ಕ್ಷೇತ್ರವಾಗಲಿನೆಂದು ವರವಿಟ್ಟನು.

ಒಮ್ಮೆ ಹಿಮಾಲಯದಲ್ಲಿ ಗಿರಿಜಾ ಕಲ್ಯಾಣ ನೋಡಲು ಕಿಕ್ಕಿರಿದ ಜನಸಂದಣಿಯ ಕಾರಣ ಇಳೆಯ ತೂಕ ಪಲ್ಲಟವಾಯಿತು. ಆಗ ಬ್ರಹ್ಮ ಮತ್ತು ವಿಷ್ಣುಗಳು ಈ ಸ್ಥಿತಿಯನ್ನು ತಪ್ಪಿಸಲು ಅಗಸ್ತ್ಯನನ್ನು ದಕ್ಷಿಣಕ್ಕೆ ಕಳುಹಿಸಿ ಜನರೂ ಜೊತೆಗೆ ಹೋಗಿ ಅಲ್ಲಿಂದಲೇ ಗಿರಿಜಾ ಕಲ್ಯಾಣೋತ್ಸವ ಮಾಡಲು ಉದ್ಭವ ಗಂಗಾಜಲ ಬರಲೆಂದು ಅಗಸ್ತ್ಯ ಪ್ರಾರ್ಥಿಸಿದನು ಆಗ ಸ್ತಂಭದಡಿಯಿಂದ ಬಂದ ಗಂಗೆಯಿಂದ ಅಭಿಷೇಕ ಮಾಡಿ ಕಲ್ಯಾಣೋತ್ಸವ ಮಾಡಿ ಜನರಿಗೆ ತೋರಿಸಿದರು. ಶಿವ ಮತ್ತು ಗಂಗೆ ಕಾಣಿಸಿಕೊಂಡ

ಬೆಟ್ಟವಾದ್ದರಿಂದಾಗಿ ಶಿವಗಂಗೆ ಎಂಬ ಹೆಸರು ಬಂದಿತ್ತು. ಇದು ಅಲ್ಲದೆ ಬೇರೆ ಬೇರೆ ಕತೆಗಳು ಶಿವಗಂಗೆ ನಾಮ ಉಲ್ಲೇಖೆಯ ಹಿನ್ನೆಲೆಯಲ್ಲಿ ಕೂಡಿದೆ.

### ದೊಡ್ಡಬಳ್ಳಾಪುರ ತಾಲ್ಲೂಕಿನ ಶ್ರೀರಾಮನಹಳ್ಳಿ ಮತ್ತು ಉಪವಾಸಪುರ ಗ್ರಾಮಗಳ ಐತಿಹ್ಯ

ಸಾಸಲು ಹೋಬಳಿಯಲ್ಲಿ ಶ್ರೀರಾಮನಹಳ್ಳಿ ಮತ್ತು ಉಪವಾಸಪುರವೆಂಬ ಎರಡು ಗ್ರಾಮಗಳನ್ನು ಒಳಗೊಂಡ ಒಂದು ಐತಿಹ್ಯವೆಂದರೆ ಉಪವಾಸಪುರಕ್ಕೆ ರಾಮನು ವನವಾಸಕ್ಕೆ ಬಂದಾಗ ಈ ಕಾಡಿನಲ್ಲಿ ಒಂದು ದಿನವಿದ್ದಾಗ ರಾಮ, ಲಕ್ಷ್ಮಣ, ಮತ್ತು ಸೀತೆಗೆ ಆ ದಿನವೆಲ್ಲಾ ಆ ಕಾಡಿನಲ್ಲಿ ಊಟಕ್ಕೆ ಏನು ಸಿಗದೆ ಇದ್ದಾಗ ಉಪವಾಸ ವಿರಬೇಕಾದ ಪರಿಸ್ಥಿತಿ ಎದುರಾಗಿ ಆ ಕಾಡಿನಲ್ಲಿಯೇ ಮಲಗಿ ಬೆಳಗ್ಗೆ ಎದ್ದು ಈ ಸ್ಥಳಕ್ಕೆ ಉಪವಾಸಪುರವೆಂದು ಕರೆದು ಅಲ್ಲಿಂದ ಮುಂದೆ ಹೋಗುತ್ತಾರೆ, ಉಪವಾಸಪುರದಿಂದ ಮುಂದೆ ಕಾಡಿನ ಅಂಚಿನಲ್ಲಿ ಇನ್ನೊಂದು ಹಳ್ಳಿ ಇದ್ದು, ಆ ಹಳ್ಳಿಯ ಜನರು ಉಪವಾಸಪುರದಿಂದ ಹಸಿದು ಬಂದ ರಾಮ, ಸೀತೆ, ಲಕ್ಷ್ಮಣರಿಗೆ ಊಟ ಹಾಕಿದರಂತೆ ಅದರಂತೆ ರಾಮ ಸೀತೆ ಲಕ್ಷ್ಮಣರು ಒಂದು ರಾತ್ರಿ ಆ ಹಳ್ಳಿಗರ ನಡುವೆ ಇದ್ದು, ತನ್ನ ಹೆಸರನ್ನು ಆ ಹಳ್ಳಿಗೆ ಇಟ್ಟು ಹೋದರಂತೆ. ಹೀಗೆ ಉಪವಾಸಪುರ ಮತ್ತು ಶ್ರೀರಾಮನಹಳ್ಳಿ ಹೆಸರು ಬರಲು ಕಾರಣವಂತೆ. ಈ ಕಥೆಯು ಸಾಸಲು ಹೋಬಳಿಯ ಹಳ್ಳಿಗಳಲ್ಲಿ ಹೆಚ್ಚು ಜನಪ್ರಿಯವಾಗಿದ್ದು, ಈಗಲೂ ಉಪವಾಸಪುರದವರನ್ನು ದರಿದ್ರದ ಜನ ಎಂತಲೂ ಹಿಯಾಳಿಸುವ ಪರಿಪಾಠವನ್ನು ಸಾಸಲು ಹೋಬಳಿಯ ಸುತ್ತ ಮುತ್ತ ಕಾಣ ಸಿಗುತ್ತದೆ.

### ಪಾರಿವಾಳಗುಟ್ಟ (ಗುಡ್ಡ) ಐತಿಹ್ಯ

ದೇವನಹಳ್ಳಿ ತಾಲ್ಲೂಕಿನ ಚಿಕ್ಕಬಳ್ಳಾಪುರ ರಾಷ್ಟ್ರೀಯ ಹೆದ್ದಾರಿ ಏಳರ ಎಡಭಾಗದಲ್ಲಿ ಒಂದು ಗುಟ್ಟ ಕಾಣಿಸುತ್ತದೆ. ಈ ಗುಟ್ಟವನ್ನು ಪಾರ್ವಾಟಗುಟ್ಟ, ಪರ್ವತಗುಟ್ಟ, ಪಾರಿವಾಳ ಗುಟ್ಟ ಎಂದು ಕರೆಯಲಾಗುತ್ತದೆ. ಸುಮಾರು ೫೦೦ ರಿಂದ ೬೦೦ ವರ್ಷಗಳ ಹಿಂದೆ ಶ್ರೀಶೈಲ ಕ್ಷೇತ್ರದಿಂದ ಗುರುಗಳೊಬ್ಬರು ಆಗಮಿಸಿ ಈ ಗುಟ್ಟದ ಗುಹೆಯಲ್ಲಿ ವಾಸಿಸುತ್ತಿದ್ದು, ಪ್ರತಿನಿತ್ಯ ಕಲ್ಯಾಣಿಯಲ್ಲಿ ಮುಳಗೆದ್ದು ಹುಲಿ ಮೇಲೆ ಗುಟ್ಟದ ಗುಹೆಯೊಳಗೆ ಕುಳಿತು ಶಿವಪೂಜೆ, ತಪಸ್ಸು ಮಾಡಿಕೊಂಡಿದ್ದು, ಪವಾಡ ಪುರುಷರಾಗಿದ್ದರು. ಗುರುಗಳು ಸ್ನಾನ ಮಾಡುತ್ತಿದ್ದ ಕಲ್ಯಾಣಿ, ಧ್ಯಾನ ಮತ್ತು ಶಿವಪೂಜೆ ಮಾಡುತ್ತಿದ್ದ ಸ್ಥಳವನ್ನು ಗುಟ್ಟದ ದಕ್ಷಿಣದ ಕೆಳಭಾಗದಲ್ಲಿ ಕಾಣಬಹುದು. ಗುರುಗಳು ಕಾಲವಾದ ನಂತರ ಮಹಂತರ ಮಠ ಸಮೀಪವೇ ಪರ್ವತ ಗುರುಗಳ ಗದ್ದುಗೆ ಇದ್ದು, ನಂತರ ಪರ್ವತೇಶ್ವರ ದೇವಸ್ಥಾನ ಆಗಿದೆ. ಮಹಂತರ ಮಠ ಹಾಗೂ ಪರ್ವತಪುರದ ಸಾಕಷ್ಟು ಜಮೀನು ಹುಣಸಮಾರನಹಳ್ಳಿ ಮಠಕ್ಕೆ

ಸೇರಿದ್ದಾಗಿದೆ. ಈ ಮಠಕ್ಕೆ ಸೇರಿದ ಜಮೀನಿನಲ್ಲಿ ಅನೇಕ ಮಂದಿ ಮನೆಗಳನ್ನು ಕಟ್ಟಿಕೊಂಡು ಆ ಸ್ಥಳಕ್ಕೆ ಪರ್ವತಪುರ ಎಂದು ಕರೆಯುತ್ತಾರೆ. ಪರ್ವತ ಸ್ವಾಮಿಗಳು ಗುಟ್ಟದಲ್ಲಿ ತಪಸ್ಸು ಮಾಡಿದ್ದರಿಂದ ಈ ಗುಟ್ಟಕ್ಕೆ ಪರ್ವತ ಗುಟ್ಟ ಎಂಬ ಹೆಸರು ಪ್ರಸಿದ್ಧಿಯಾಗಿದೆ.

**ಹೊಸಕೋಟೆ ತಾಲ್ಲೂಕಿನ ನಂದಗುಡೀಯ ಕಾವಲು ಗುಡ್ಡದ ಐತಿಹ್ಯ**

ನಂದಗುಡಿಯ ಸಮೀಪದ ಕಾವಲು ಗುಡ್ಡದ ಮೇಲಿನ ಕೋಟೆ ಶಿಥಿಲವಾಯಿತು ಎನ್ನುವುದಕ್ಕೆ ಸ್ಥಳೀಯರು ಕಥೆಯನ್ನು ಹೇಳುತ್ತಾರೆ. ನವನಂದರು ದೇವನಹಳ್ಳಿ ಸಮೀಪದ ನಲ್ಲೂರು ಕೋಟೆಯಿಂದ ಹೆಣ್ಣನ್ನು ತಂದು ನವನಂದರ ಕೋಟೆಗೆ ಮದುವೆ ಮಾಡಿಕೊಂಡು ಬರುತ್ತಾರೆ. ಕೆಲಕಾಲದ ನಂತರ ನವನಂದರಿಗೂ ನಲ್ಲೂರು ಕೋಟೆಯವರಿಗೂ ಆಂತರಿಕ ಕಲಹಗಳು ಉಂಟಾಗಿ ಶತ್ರುಗಳಾಗಿ ಮಾರ್ಪಡುತ್ತಾರೆ, ಆಗ ನಲ್ಲೂರು ಕೋಟೆಯ ಪಾಳೇಗಾರರರು ನವನಂದರನ್ನು ಸೋಲಿಸಲು ಎಷ್ಟೇ ಪ್ರಯತ್ನ ಪಟ್ಟರು ಆಗುವುದಿಲ್ಲ. ಆ ಕೋಟೆಯ ಒಳ ಪ್ರವೇಶಿಸಲು ಸಾಧ್ಯವಾಗದೇ ಸೋಲನ್ನು ಒಪ್ಪುವ ಭೀತಿಯಲ್ಲಿ ಇರುವಾಗ, ನವನಂದರನ್ನು ಕೋಟೆಯಿಂದ ಹೊರ ಬರುವ ಹಾಗೇ ಮಾಡಬೇಕೆಂದು ಆ ಕೋಟೆಯ ಒಳಗಡೆ ನೀರು ಹೇಗೆ ಹೋಗುತ್ತದೆ ಆ ನೀರನ್ನು ಮುಚ್ಚಿದಾಗ ನೀರಿಲ್ಲದೆ ಕೋಟೆಯಿಂದ ನವನಂದರನ್ನು ಹೊರಗಡೆ ಬರುವ ಹಾಗೇ ಮಾಡಬೇಕೆಂದು ಉಪಾಯ ಹೂಡಿದ್ದರೂ ಅದು ಸಾಧ್ಯವಾಗದಿದ್ದಾಗ, ತನ್ನ ತವರು ಮನೆಯವಾರದ ನಲ್ಲೂರು ಪಾಳೇಗಾರರು ಪಡುವ ಕಷ್ಟವನ್ನು ಸಹಿಸಲಾರದೇ ಆ ಹೆಣ್ಣು ಮಗಳು ನವನಂದರ ಕೋಟೆಯ ರಹಸ್ಯವನ್ನು ಬರೆದು ಅನ್ನದಲ್ಲಿ ಬಚ್ಚಿಟ್ಟು ಅನ್ನವನ್ನು ತವರು ಮನೆಯವರಿಗೆ ಕಳೆಸುತ್ತಾಳೆ. ಕಳಿಸಿದ ರಹಸ್ಯವನ್ನು ಅರಿತ ನಲ್ಲೂರು ಕೋಟೆಯ ಪಾಳೇಗಾರರು ಕೋಟೆಗೆ ಹೋಗುವ ನೀರಿನ ಮಾರ್ಗವನ್ನು ಕಂಡು ಹಿಡಿಯಲು ಕಣಗಲು ಹೂವನ್ನು ಅ ಕೆರೆಗೆ ಬಿಟ್ಟಾಗ ಆ ಹೂಗಳು ಕೆರೆಯಲ್ಲಿ ತೇಲಿ ಹೋಗಿ ಕೋಟೆಗೆ ಹೋಗುವ ಜಲಮಾರ್ಗದಲ್ಲಿ ಸುರಳಿ ಸುತ್ತುತ್ತ ಹೋದ ಹೂವನ್ನು ಕಂಡ ನಲ್ಲೂರು ಪಾಳೇಗಾರರು ಕೋಟೆಗೆ ಹೋಗುವ ನೀರಿನ ಮಾರ್ಗದಲ್ಲಿ ದೊಡ್ಡ ಬಂಡೆಯನ್ನು ಹಾಕುತ್ತಾರೆ. ಆಗ ನವನಂದರ ಕೋಟೆಗೆ ಹೋಗುವ ನೀರು ನಿಂತಾಗ, ನೀರಿಲ್ಲದೆ ಹೊರ ಬಂದಾಗ ಅವರನ್ನು ನಾಶ ಮಾಡುತ್ತಾರೆ. ಈ ರೀತಿಯಾಗಿ ನವನಂದರು ನಾಶವಾದರೆಂದು ಸ್ಥಳೀಯರು ಹೇಳುತ್ತಾರೆ. ನೀರು ಹೋಗದಿರಲು ಹಾಕಿದ ಕಲ್ಲನ್ನು ಗಜ ಗುಂಡ್ಲು ಎನ್ನುವ ಹೆಸರಿನಿಂದ ಈಗಲೂ ಕರೆಯುವುದುಂಟು.

ಕಾವಲು ಗುಡ್ಡಕ್ಕೆ ಸಂಬಂಧಿಸಿದಂತೆ ಇನ್ನೂ ಒಂದು ಕಥೆಯನ್ನು ಸ್ಥಳೀಯರು ಹೇಳುವುದುಂಟು ಅದೇನೆಂದರೆ, ಹೆಚ್ಚಿನ ಪ್ರಮಾಣದ ಚಿನ್ನಾಭರಣಗಳು ಗುಡ್ಡದ ಒಳಗಡೆ ಇದ್ದು, ಆ ಚಿನ್ನಾಭರಣಗಳನ್ನು

ಕಾಯುವುದಕ್ಕೆ ಏಳು ಎಡೆಯ ಸರ್ಪ, ಒಂದು ಕೋಣ, ಒಬ್ಬ ಅಜ್ಜಿ, ಇದ್ದಾರೆ. ನಿಧಿಯನ್ನು ತೆಗೆಯುವುದಕ್ಕೆ ಹೋದಲ್ಲಿ ಸಾವು ಕಟ್ಟಿಟ್ಟ ಬುತ್ತಿ ಎಂದು ಸ್ಥಳಿಯರು ಹೇಳುತ್ತಾರೆ, ಒಮ್ಮೆ ಬ್ರಿಟಿಷರು ಕುದುರೆಗಳಲ್ಲಿ ಈ ಗುಡ್ಡಕ್ಕೆ ಬಂದ್ದು ಚಿನ್ನಾಭರಣಗಳು ಇರುವ ಸ್ಥಳದಲ್ಲಿ ಅಗೆಯಲು ಯತ್ನಿಸಿದಾಗ ಅಲ್ಲಿ ಬ್ರಿಟಿಷರು ಒಂದಿಬ್ಬರು ರಕ್ತವನ್ನು ಕಾರಿಕೊಂಡು ಅಲ್ಲಿಯೇ ಸತ್ತರು ಇನ್ನೂಳಿದವರು ಇದನ್ನು ನೋಡಿ ಕುದುರೆಗಳಲ್ಲಿ ಪಾಲಾಯನಗೊಂಡರು ಎಂದು ಈ ಕಥೆಯನ್ನು ರೋಮಾಂಚನಕಾರಿಯಾಗಿ ಹೇಳುತ್ತಾರೆ, ಇನ್ನೂ ಕೆಲವರು ಈ ಚಿನ್ನಾಭರಣಗಳನ್ನು ತೆಗೆಯಲು ಹೋಗಿ ಅವರ ಸಂಸಾರವೇ ನಾಶವಾಯಿತೆಂದು ಈ ಘಟನೆಯ ಬಗ್ಗೆ ಹೇಳುತ್ತಾರೆ, ಈ ಕಾವಲು ಗುಡ್ಡದಲ್ಲಿ ಅಲ್ಲಲ್ಲಿ ಸುರಂಗ ಮಾರ್ಗಗಳು, ಚಿನ್ನಾಭರಣಗಳಗಾಗಿ ತೋಡಿರುವ ಗುಂಡಿಗಳನ್ನು ಹಾಗೂ ನವನಂದರ ಆಳ್ವಿಕೆಯ ಅವಶೇಷಗಳಾದ ನಂದಗುಡಿಯ ವ್ಯಾಪಾರ ಕೇಂದ್ರದ ಸ್ಥಳ, ಶಿಥಿಲಾವಸ್ಥೆಯಲ್ಲಿರುವ ನಾಲ್ಕು ಕಲ್ಯಾಣಿಗಳನ್ನು ಕಾಣಬಹುದು.

### ನಂದಗುಡೀಯ ರಾಗಿ ಗುಡ್ಡದ ಐತಿಹ್ಯ

ಹೊಸಕೋಟೆ ತಾಲ್ಲೂಕಿನ ನಂದಗುಡಿ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಜಂಬು ಮಣ್ಣಿನ ಗುಡ್ಡದ ಬಗ್ಗೆ ಚಾಲ್ತಿಯಲ್ಲಿರುವ ಐತಿಹ್ಯ ವೆಂದರೆ, ರೈತನೊಬ್ಬ ತನ್ನ ಭೂಮಿಯಲ್ಲಿ ಬೆಳೆದ ರಾಗಿ ಬೆಳೆಯನ್ನು ತೆಗೆದು ಒಂದು ಕಡೆ ರಾಗಿ ಮತ್ತೊಂದು ಕಡೆ ಹುಲ್ಲನ್ನು ಬೃಹತ್ ಪ್ರಮಾಣದಲ್ಲಿ ರಾಶಿ ಮಾಡಿದನು. ಇದನ್ನು ನೋಡಿದ ಅವನ ಹೆಂಡತಿ ಇಂಥ ದೊಡ್ಡ ರಾಶಿಯ ರಾಗಿಯನ್ನು ನಾನು ಬೀಸ ಬೇಕಾಗುತ್ತದೆ ಎಂದು ವ್ಯಥೆ ಪಟ್ಟು. ಆ ರಾಗಿ ರಾಶಿ ಮಣ್ಣಾಗಿ ಹೋಗಲಿ ಎಂದು ಶಪಿಸಿದಾಗ ತಕ್ಷಣ ಆ ರಾಶಿಗಳು ಮಣ್ಣಿನ ಗುಡ್ಡೆಗಳಾಗಿ ಮಾರ್ಪಟ್ಟವಂತೆ ನೋಡಲಿಕ್ಕೆ ರಾಗಿಯ ಬಣ್ಣದಂತೆ ಇದ್ದು, ಈ ಗುಡ್ಡದಲ್ಲಿ ಗಿಡಗಳು, ಹುಲ್ಲು ಯಾವುದು ಸಹ ಬೆಳೆಯುವುದಿಲ್ಲ ಮತ್ತು ಈ ಗುಡ್ಡವನ್ನು ಹತ್ತಲು ಸಹ ಸುಲಭವಲ್ಲ. ಈ ಗುಡ್ಡದಲ್ಲಿ ಹಿಂದಿನ ಕಾಲದಿಂದ ಈ ಕಾಲದವರೆಗೂ ಗಿಡ ಗಂಟೆಗಳೂ ಏನೂ ಸಹ ಬೆಳೆದಿಲ್ಲ ಎಂದು ಹಿರಿಯರು ಹೇಳುತ್ತಾರೆ, ರಾಗಿ ರಾಶಿ ಹಾಕಿದ ನಂತರ ಪೂಜೆ ಮಾಡುವ ಸಂದರ್ಭದಲ್ಲಿ ಆ ರಾಗಿ ಗುಡ್ಡದಲ್ಲಿರುವ ಪರಕೆ, ಮೊರ, ಒನಕೆ, ಎಲ್ಲವೂ ಅದೇ ಆಕಾರದಲ್ಲಿ ಮಣ್ಣಾಗಿರುವುದನ್ನು ಕಾಣಬಹುದು, ಈ ಗುಡ್ಡದ ಸುತ್ತ ಇರುವ ಗುಡ್ಡಗಳು ಹುಲ್ಲಿನ ಮೆದೆಗಳು ಎಂದು ಹಿರಿಯರು ಹೇಳುತ್ತಾರೆ, ಅವೂ ಸಹ ಮಣ್ಣಾಗಿದ್ದು, ಹುಲ್ಲಿನ ಮೆದೆಯ ಆಕಾರದಲ್ಲಿ ಇದರ ಸುತ್ತ ಇರುವ ಆಕಾರವನ್ನು ನಾವೂ ಕಾಣಬಹುದು, ಈ ಗುಡ್ಡ ಈಗಲೂ ತೆಲುಗಿನಲ್ಲಿ ರಾಗಲು ರಾಶಿ ಎಂತಲೇ ಪ್ರಸಿದ್ಧಿಯನ್ನು ಪಡೆದಿದೆ.

### ೩. ವ್ಯಕ್ತಿ ಪ್ರಧಾನ ಐತಿಹ್ಯಗಳು

ವ್ಯಕ್ತಿ ಪ್ರಧಾನ ಐತಿಹ್ಯಗಳಲ್ಲಿ ವಿಶಿಷ್ಟವಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿದ್ದರೂ ಅಲ್ಲಿ ಸ್ಥಳದ ಮಹತ್ವವನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ ಅಲ್ಲದೇ ವ್ಯಕ್ತಿಯಿಂದಾಗಿಯೇ ಸ್ಥಳಕ್ಕೆ ಹೆಸರು ಬಂದಿರಬಹುದು,

**ದೊಡ್ಡಬಳ್ಳಾಪುರ ತಾಲ್ಲೂಕಿನ ಸಾಸಲು ಗ್ರಾಮದ ಚಿನ್ನಮ್ಮನ ಐತಿಹ್ಯ**

ಸಾಸಲು ಗ್ರಾಮದ ಸುತ್ತ ಮುತ್ತಲಿನ ಅನೇಕ ಐತಿಹ್ಯಗಳಲ್ಲಿ ಚಿನ್ನಮ್ಮನ ಐತಿಹ್ಯವು ಪ್ರಮುಖವಾದದ್ದು. ಕೋಲಾರ, ಚಿತ್ತೂರು, ಪುಂಗನೂರು, ಮದನಪಲ್ಲಿ, ಕದರಿ, ಸಾಸಲು ಮುಂತಾದ ಕಡೆ ಸಾಸಲು ಚಿನ್ನಮ್ಮನ ಕಥೆಯನ್ನು ಹರಿಕಥೆ, ನಾಟಕಗಳಲ್ಲಿ ಹೆಚ್ಚು ಪಸಿದ್ಧಯಾಗಿದೆ, ಹಿಂದೆ ಸಾಸಲು ಗ್ರಾಮಕ್ಕೆ ಜನರು ಬೇಸಿಗೆಯಲ್ಲಿ ಬೇಟೆಯನ್ನಾಡಲು ಬಂದಾಗ ಇಲ್ಲಿನ ಜನ ಸಾಸಲು ಚಿನ್ನಮ್ಮನ ಕಥೆಯನ್ನು ಕನ್ನಡ ಮತ್ತು ತೆಲುಗು ಎರಡು ಭಾಷೆಯಲ್ಲು ಮನರಂಜನೆಯ ಮತ್ತಿತ್ತರ ಕಾರಣಗಳಗಾಗಿ ಹೇಳುತ್ತಿರುತ್ತಾರೆ.

ಮೂನ್ನೂರು ವರ್ಷಗಳ ಹಿಂದೆ ಸಾಸಲು ಗ್ರಾಮದ ಗೊಲ್ಲರ ಜನಾಂಗಕ್ಕೆ ಸೇರಿದ ರೆಡ್ಡಿ ಒಮ್ಮೆ ಕದಿರಿ ಪ್ರದೇಶಕ್ಕೆ ಎತ್ತುಗಳನ್ನು ತರಲು ಹೋಗಿದ್ದನಂತೆ. ಆಗ ಎದುರಿನಲ್ಲಿ ಒಂದು ಉತ್ಸವ ಬರುತ್ತಿತ್ತೆಂದು ಭಾಗಿ ನಮಸ್ಕರಿಸಿದ, ಆಗ ಅಲ್ಲಿದ್ದವರು ಚಪ್ಪಾಳೆ ಹಾಕಿ ನಗುತ್ತಾ, ಒಂದು ಹೆಣ್ಣುಮಗಳಿಗೆ ತಲೆ ಬಾಗುತ್ತಾನೆ, ಇವನು ದಡ್ಡ ಎಂದು ಸಾಸಲು ಗೌಡನನ್ನು ಗೇಲಿ ಮಾಡಿದರು, ಆ ಹೆಣ್ಣು ಮಗಳೇ ಚಿನ್ನಮ್ಮ ಎನ್ನುವುದು ತಿಳಿಯುತ್ತೆ, ಚಿನ್ನಮ್ಮನು ರಥದಲ್ಲಿ ಯಾಕೆ ಬರುತ್ತಿದ್ದಾಳೆಂದರೆ ಏಳು ಜನ ಅಣ್ಣಂದಿರಿಗೆ ಚಿನ್ನಮ್ಮ ಒಬ್ಬಳೇ ತಂಗಿ. ಆ ತಂಗಿಯನ್ನು ಏಳು ಜನ ಅಣ್ಣಂದಿರು ಪ್ರೀತಿಯಿಂದ ಸಾಕುತ್ತಿರುತ್ತಾರೆ, ಜೋಳದ ಬೆಂಡುಗಳಿಂದ ಮಾಡಿದ ರಥವನ್ನು ನೋಡಿ ಅದರಲ್ಲಿ ಗಿಳಿಯನ್ನು ಕಟ್ಟಿ ನನ್ನನ್ನು ಅದರಲ್ಲಿ ಕೂರಿಸಿಕೊಂಡು ಕರೆದೊಯ್ಯ ಬೇಕೆಂದು ಹಠ ಮಾಡಿದಾಗ ಅದರಂತೆ ಚಿನ್ನಮ್ಮನನ್ನು ಕೂರಿಸಿ ಕರೆದುಕೊಂಡು ಬರುತ್ತಿದ್ದರು.

ಜನರ ಗೇಲಿ ಕೇಳದ ಸಾಸಲು ರೆಡ್ಡಿಗೆ ಅವಮಾನವಾಗಿ ಒಳ್ಳೆಯ ಮಾತುಗಳನ್ನು ಹಾಡುತ್ತಾ ಚಿನ್ನಮ್ಮನ ತಂದೆ ತಾಯಿಗಳಲ್ಲಿ ಸಂಬಂಧ ಬೆಳಸಿ, ತನ್ನ ಕಿರಿಯ ಮಗನಾದ ಎಂಗಲರೆಡ್ಡಿಗೆ ಮದುವೆ ಮಾಡಿಸಿಕೊಂಡು ಚಿನ್ನಮ್ಮನನ್ನು ಸಾಸಲು ಗ್ರಾಮಕ್ಕೆ ಕರೆದುಕೊಂಡು ಬಂದು, ತನಗಾದ ಅವಮಾನಕ್ಕೆ ಪ್ರತಿಕಾರವಾಗಿ ಆಕೆಗೆ ಕೊಡಬಾರದ ಕಷ್ಟಗಳನ್ನು ಕೊಡುತ್ತಾ ತನ್ನ ಸೇಡನ್ನು ತೀರಿಸಿ ಕೊಳ್ಳುತ್ತಿರುತ್ತಾನೆ. ಸಾಸಲು ಗ್ರಾಮದ ಕಾಡಿನಿಂದ ಗಾಡಿಯಷ್ಟು ಸೌದೆಯನ್ನು ಒಬ್ಬಳೇ ತರಬೇಕು, ದೊಡ್ಡ ರಾಗಿ ಕಲ್ಲಿನಿಂದ

ಒಂದು ವಾಡೆಯಷ್ಟು ರಾಗಿಯನ್ನು ಬೀಸಬೇಕು, ಹತ್ತಾರು ದನ ಕರುಗಳನ್ನು ಕಾಡಿನಲ್ಲಿ ಒಬ್ಬಳೆ ಮೇಯಿಸಬೇಕು, ಮನೆ ಕೆಲಸ, ಹೊಲದ ಕೆಲಸ ದಿನದ ತುಂಬಾ ಕಠಿಣ ಕೆಲಸಗಳನ್ನು ಕೊಡುತ್ತ ರಾತ್ರಿಯ ಊಟದಲ್ಲಿ ತಾವು ತಿಂದು ಮಿಕ್ಕ ಎಂಜಲನ್ನು, ಕೈ ತೊಳೆದ ಸಾರನ್ನು ಆಕೆಗೆ ಹಾಕಿ ದನದ ಕೊಟ್ಟಿಗೆಯಲ್ಲಿ ಒಂದು ಸೀರೆಯನ್ನು ಕೊಡದೆ ಚಿಂದಿ ಬಟ್ಟೆಯಲ್ಲಿ ಅವಳು ಸೀರೆಯನ್ನು ನೇಯ್ದುಕೊಂಡು ತನ್ನ ಮಾನವನ್ನು ಕಾಪಾಡಿಕೊಳ್ಳುತ್ತಿದ್ದಳು ಚಿನ್ನಮ್ಮನನ್ನು ದಾಸಿಯಂತೆ ನಡೆಸಿಕೊಂಡರು.

ನರಳುತ್ತಿದ್ದ ಚಿನ್ನಮ್ಮನಿಗೆ ದೈವ ಪಿಂಡವೆಂದು ಕರೆಯುತ್ತಾರೆ. ಕಾಡಿನಲ್ಲಿ ಒಂದು ಗಾಡಿ ಸೌದೆ ಕಡಿದರೆ ದೇವರಂತಿದ್ದ ಏಳು ಜನ ಅಣ್ಣಂದಿರು ಆವಳ ಸಹಾಯಕ್ಕೆ ಬರುತ್ತಿದ್ದರು, ವಿಷ್ಣುವಿನ ಅವತಾರವಾದ ಉಗ್ರ ನರಸಿಂಹ, ಕದಿರಿನರಸಿಂಹ, ಖಾದ್ರನರಸಿಂಹ, ದಾಳವಾಟ್‌ನರಸಿಂಹ, ಮಥ್ಲೇಟ್‌ನರಸಿಂಹ, ಮಾಕಳನರಸಿಂಹ, ಮಲ್ಲೇಶ್‌ನರಸಿಂಹ ಇವರು ಈಕೆಯ ಎಲ್ಲಾ ಕೆಲಸಗಳನ್ನು ಅದೃಶ್ಯ ರೂಪದಿಂದ ಮಾಡುತ್ತಿದ್ದರು. ಹೀಗಿರಲು ಒಮ್ಮೆ ಕದಿರಿ ಕ್ಷೇತ್ರಕ್ಕೆ ಚಿನ್ನಮ್ಮನ ಮನೆಯವರೆಲ್ಲ ಯಾತ್ರೆಗೆ ಹೊರಟು ಮನೆ ನೋಡಿಕೊಳ್ಳಲು ಚಿನ್ನಮ್ಮನನ್ನು ಬಿಟ್ಟರು. ಮದುವೆಯಾದ ದಿನದಿಂದ ತವರು ಮನೆಗೆ ಹೋಗದ ಚಿನ್ನಮ್ಮ, ಒಂದೇ ಸಮನೇ ಅಳುತ್ತಿದ್ದಳು ಅವಳ ವೇದನೆ ನೋಡದ ಅಣ್ಣಂದಿರು ಯಾತ್ರೆಯ ಮದ್ಯದಲ್ಲಿ ಗಾಡಿಗಳನ್ನು ಭೂಮಿಯಲ್ಲಿ ಹೂತು ಹೋಗುವಂತೆ ಮಾಡಿದರು. ಉಗ್ರನರಸಿಂಹ ಬ್ರಾಹ್ಮಣನ ವೇಷದಲ್ಲಿ ಬಂದು ನಿನ್ನ ಕಿರಿಯ ಸೊಸೆಯ ಕೈಯಲ್ಲಿ ಪೂಜೆ ಮಾಡಿಸಿದರೆ ಗಾಡಿ, ನೀವು ಬದುಕುತ್ತೀರಿ ಎಂದು ಹೇಳಿದಾಗ, ಗೌಡ ಮತ್ತೇ ಮನೆಗೆ ಬಂದು ಚಿನ್ನಮ್ಮನನ್ನು ಕರೆದಾಗ ಚಿನ್ನಮ್ಮ ನಾನು ಬರಬೇಕಾದರೇ ಕೆಲವು ಷರತ್ತುಗಳನ್ನು ಪೂರೈಸಬೇಕೆಂದು ನೀವು ನನಗೆ ಕಷ್ಟ ಕೊಟ್ಟಿದ್ದಕ್ಕಾಗಿ ನನಗೆ ನನ್ನ ಬೆಂಡಿನ ಗಿಣಿಯ ಬಂಡಿಯನ್ನು ತನ್ನ ಅಣ್ಣನಿಂದ ತರಿಸಿದರೆ ಬರುತ್ತೇನೆ ಎಂದಳು. ಅದರಂತೆ ತರಿಸಿದಾಗ ತನ್ನ ಗಂಡನ ಆಸ್ತಿಯನ್ನು ಭಾಗಮಾಡಿ ಆ ಬಂಡಿಯಲ್ಲಿ ಹಾಕಿಕೊಂಡು ಹೋಗಿ ಅವರನ್ನು ಮತ್ತು ಅವರ ಗಾಡಿಯನ್ನು ಬದುಕಿಸಿದಳು. ನಂತರ ತನ್ನ ಅಣ್ಣನ ಜೊತೆ ಸಾಸಲು ಗ್ರಾಮದಿಂದ ಹೊರಟ ಚಿನ್ನಮ್ಮ ತನ್ನ ಗಂಡನ ಆಸ್ತಿಯ ವೆಚ್ಚದಲ್ಲಿ ಆಂದ್ರದ ಕದಿರಿ ಗ್ರಾಮದಲ್ಲಿ ದೇವಾಲಯ, ಕೆಲವು ವಿಶ್ರಾಂತಿ ಗೃಹ ಅರವಂಟಿಕೆ, ಅನ್ನಛತ್ರಗಳಿಗೆ ತನ್ನ ಹೆಸರಿಟ್ಟು, ಕದಿರಿ ಗ್ರಾಮದಲ್ಲಿ ತನ್ನಣ್ಣನ ದೇವಾಲಯದಲ್ಲಿ ಐಕ್ಯವಾದಳು, ಈಗಲೂ ಕದಿರಿಯ ಉಗ್ರನರಸಿಂಹ ದೇವಾಲಯದಲ್ಲಿ ಚಿನ್ನಮ್ಮನ ವಿಗ್ರಹವಿದೆ. ಸಾಸಲು ಗ್ರಾಮದಲ್ಲಿ ಕದಿರಪ್ಪನ ಗುಡ್ಡ, ಮುತ್ತರಾಯಣ ಬೆಟ್ಟ, ಚಿನ್ನಮ್ಮನ ತೋಪು, ಚಿನ್ನಮ್ಮನ ಕೆರೆ, ಚಿನ್ನಮ್ಮನ ಬಾವಿ, ಚೆನ್ನಮ್ಮನ ಹೆಜ್ಜೆ, ಚಿನ್ನಮ್ಮ ಬೀಸುತ್ತಿದ್ದ ರಾಗಿಯ ಕಲ್ಲನ್ನ ಅಣ್ಣ ಉಗ್ರಹನರಸಿಂಹನಿಗೆ ತುಪ್ಪದ ದೀಪವನ್ನು ಹಚ್ಚುತ್ತಿದ್ದ ಕದಿರೀಕಂಬ, ಚಿನ್ನಮ್ಮನ ವಿಗ್ರಹದ

ಏಕಶಿಲಾಸ್ಥಂಬ ಮುಂತಾದ ಆಧಾರಗಳನ್ನು ಚಿನ್ನಮ್ಮ ಸಾಸಲಿನಲ್ಲಿ ಹಿಂದೆ ವಾಸ ಇದ್ದಿದ್ದರ ಪ್ರತೀಕವಾಗಿಟ್ಟುಕೊಂಡು ಐತಿಹ್ಯವನ್ನು ಹೇಳುತಿದ್ದಾರೆ.

**ಚಿಕ್ಕಹೆಜ್ಜಾಜಿ ಮಾಸ್ತಿಗಲ್ಲಿನ ಐತಿಹ್ಯ**

ದೊಡ್ಡಬೆಳವಂಗಲ ಹೋಬಳಿಯ ಕೆರೆಯ ದಂಡೆಯ ಎರಡು ಕಡೆಗಳಲ್ಲಿ ಒಂದು ಕಡೆ ಚಿಕ್ಕ ಹೆಜ್ಜಾಜಿ, ಮತ್ತೊಂದು ಕಡೆ ದೊಡ್ಡ ಹೆಜ್ಜಾಜಿ ಎಂಬ ಗ್ರಾಮಗಳಿವೆ. ಸುಮಾರು ೧೦೦೦ ಎಕರೆ ಜಮೀನಿಗೆ ನೀರಾವರಿ ಒದಗಿಸುವ ಅಮಾನಿಕೆರೆಯು ಒಮ್ಮೆ ಪೂರ್ತಿ ತುಂಬಿದರೆ ೨ ವರ್ಷಗಳ ಕಾಲ ಬೇಸಾಯ ಮಾಡಬಹುದು. ಊರಿನ ಲಿಂಗಾಯಿತರ ಗುಡಾಣ ಗಂಗೇಗೌಡ ಕೆರೆಯನ್ನು ಕಟ್ಟಿಸಿದಕ್ಕೆ ಐತಿಹ್ಯವೆಂದರೆ,

ಗುಡಾಣ ಗಂಗೇಗೌಡನು ಊರಿನ ಸರ್ವಾಧಿಕಾರಿಯೂ, ರಸಿಕನೂ ಆಗಿದ್ದನು. ಒಮ್ಮೆ ವಿವಾಹಿತ, ಒಂದು ಮಗುವಿನ ತಾಯಿಯಾದ ಕೆಂಪಾಜಮ್ಮನ ಮೇಲೆ ಕಣ್ಣು ಬಿತ್ತು. ಅವನು ಅವಳನ್ನು ಏಷ್ಟೆ ಪೀಡಿಸಿದರು ಒಪ್ಪದ ಆಕೆಯು ಒಮ್ಮೆ ಕಾಟ ತಾಳಲಾರದೆ ದನಗಳನ್ನು ಮೆಯಿಸುವ ಹಾಗೆ ಊರಿನ ಹೊರಗೆ ಕೆರೆಯ ಮೂಲೆಯಲ್ಲಿನ ತಾಳೇಗರಿ ಮರದ ಕೆಳಗೆ ಅವಿತಿಕೊಂಡರು. ಗೌಡನ ಕಡೆಯವರು ಅವಳನ್ನು ತಂದು ಗೌಡನಿಗೆ ಒಪ್ಪಿಸುತ್ತಾರೆ. ಆಗ ಗೌಡ ಅವಳನ್ನು ಬಲತ್ಕರಿಸಲು ಎಷ್ಟೇ ಪ್ರಯತ್ನ ಪಟ್ಟರೂ ಪತಿವ್ರತೆಯಾದ ಕೆಂಪಾಜಮ್ಮ ಒಪ್ಪದೆ ಇದ್ದಾಗ ಅವಳನ್ನು, ಮಗುವನ್ನು ತನ್ನ ಮನೆಯ ಕೋಣೆಯೊಂದರಲ್ಲಿ ಕೂಡಿ ಹಾಕಿದಾಗ ಉಪವಾಸದಿಂದ ನರಳುತ್ತಾ ಸಾಯುತ್ತಾಳೆ. ಸ್ವಲ್ಪ ದಿನದ ನಂತರ ಗೌಡನಿಗೆ ಮೈಯ ಉರಿ ಸಂಕಟ ಪ್ರಾರಂಭವಾಗಿ, ಯಾತನೆ ತಾಪ ತಾಳಲಾರದೆ ಗಂಗೇಗೌಡ ಬಾಯಿ ಬಾಯಿ ಬಡಿದುಕೊಳ್ಳುತ್ತಿರುತ್ತಾನೆ. ಎಲ್ಲಾ ರೀತಿಯ ವೈದ್ಯ ಮಾಡಿದರೂ ಆ ಉರಿ ಕೆರೆತ ಕಡಿಮೆಯಾಗುವುದಿಲ್ಲ. ರಾತ್ರಿ ಮಲಗಿದ್ದ ಗೌಡನಿಗೆ ಕನಸಿನಲ್ಲಿ ಕಾಣಿಸಿಕೊಂಡ ಮಹಾಸತಿ ಕೆಂಪಾಜಮ್ಮ ನಿನ್ನ ಈ ಸ್ಥಿತಿಗೆ ನಾನೇ ಕಾರಣವೆನ್ನುತ್ತಾಳೆ. ಗೌಡನಿಗೆ ತನ್ನ ತಪ್ಪನ ಅರಿವಾಗಿ ಪ್ರಾಯಶ್ಚಿತವೇನು ಎನ್ನಲು ಜನೋಪಕಾರಿಯಾಗುವಂತಹ ದೊಡ್ಡಕೆರೆ ಕಟ್ಟು ಎನ್ನುತ್ತಾಳೆ. ಅದರಂತೆ ಗುಡಾಣ ಗಂಗೇಗೌಡನು ಚಿಕ್ಕದು ಮತ್ತು ಶಿಥಿಲವಾಗಿದ್ದ ಕಟ್ಟೆಯನ್ನು ಕೆರೆಯಾಗಿ ನಿರ್ಮಾಣ ಮಾಡಿ ಕೆರೆಯ ಪೂರ್ವ ದಿಕ್ಕಿಗೆ ಮಹಾಸತಿ ಕೆಂಪಾಜಮ್ಮನ ಗುಡಿ ಕಟ್ಟಿಸುತ್ತಾನೆ. ಈಗಲೂ ಮಲ್ಲವೀರಪ್ಪ, ಮರಿ ಹೊನ್ನಮ್ಮನವರ ಮಗ ಗಂಗಪ್ಪನವರ ಹೊಲದಲ್ಲಿ ಗುಡಿಯಿದೆ, ಈಗಲೂ ಹಬ್ಬ ಹರಿದಿನಗಳಲ್ಲಿ, ಮದುವೆಗಳಲ್ಲಿ ಸತಿಯಾದ ಕೆಂಪಾಜಮ್ಮನ ಪೂಜೆ ಮಾಡುತ್ತಾರೆ. ವಾಸ್ತವವಾಗಿ ಇದು ತನ್ನ ಕಂದನೊಂದಿಗೆ ಮಹಾಸತಿಯಾದ ಮಾಸ್ತಿಕಲ್ಲಿನ ಮೇಲಿನ ಐತಿಹ್ಯ.

## ಸೂಳೆಬಂಡೆ ಐತಿಹ್ಯ

ದೊಡ್ಡಬಳ್ಳಾಪುರ ತಾಲ್ಲೂಕಿನ ಘಾಟಿಯಿಂದ ೫೦೦ ಮೀ. ದೂರದಲ್ಲಿ ಸೂಳೆಬಂಡೆ ಎಂಬ ದೊಡ್ಡದಾದ ಕಲ್ಲಿದ್ದು, ಹಿಂದೆ ಯಾರೋ ಒಬ್ಬಳು ಸೂಳೆಯು ಒಬ್ಬ ಗಂಡಸಿನೊಂದಿಗೆ ಸಂಸಾರವನ್ನು ಸಾಗಿಸುತ್ತಿದ್ದು, ಹೀಗೆ ಅನೇಕ ವರ್ಷಗಳ ಕಾಲ ಸುಖ-ಸಂತೋಷದಿಂದ ಜೀವನ ನಡೆಯುತಿದ್ದು, ಒಂದು ದಿನ ಇಬ್ಬರಲ್ಲಿ ವಿರಸ ಉಂಟಾಗಿ ಪರಸ್ಪರ ಒಬ್ಬರನೊಬ್ಬರು ಇರಿದುಕೊಂಡಾಗ ಅವರ ರಕ್ತವು ಕೋಡಿಯಾಗಿ ಹರಿಯಿತು ಎಂದು ಆ ಕಲ್ಲಿನ ಮೇಲೆ ಕೆಂಪು ಬಣ್ಣವನ್ನು ಸ್ಥಳಯರು ತೋರಿಸಿ ಸೂಳೆಬಂಡೆಯ ಕಥೆ ಹೇಳುತ್ತಾರೆ. ಸೂಳೆ ಬಂಡೆಯ ಆಸುಪಾಸಿನಲ್ಲಿ ಜಾತ್ರೆಯು ನಡೆಯುವ ಸಂದರ್ಭದಲ್ಲಿ ಎತ್ತುಗಳನ್ನು ಪಕ್ಕದಲ್ಲಿ ಕಟ್ಟುವ ಪದ್ಧತಿಯಿದ್ದು, ಜಾತ್ರೆಗೆ ಬರುವಂತಹ ಸಮಯದಲ್ಲಿ ಜನರು ಸೂಳೆ ಬಂಡೆ ಇರುವ ಮಾರ್ಗದಲ್ಲಿಯೇ ಹಾದು ಬರಬೇಕಾಗಿದೆ. ಪ್ರತಿಯೊಬ್ಬರು ಸೂಳೆ ಬಂಡೆಗೆ ಕಲ್ಲನ್ನು ಎಸೆದು ಮಂದೆ ಹೋಗುತ್ತಾರೆ. ಕಲ್ಲನ್ನು ಎಸೆಯುವ ಪದ್ದತಿ ಇಂದಿಗೂ ನಡೆಯುವುದರಿಂದ ಕಲ್ಲು ಎಸೆದು ಎಸೆದು ಸೂಳೆಬಂಡೆಯು ಸಣ್ಣ ಕಲ್ಲುಗಳಂದ ತುಂಬಿದ ಗುಡ್ಡೆಯಂತಾಗಿದೆ. ಈ ಕಲ್ಲು ಎಸೆಯುವ ಪದ್ದತಿ ಅತಿ ಹೆಚ್ಚಿನ ಜನರಿಗೆ ತಿಳಯದಿದ್ದರೂ ಪದ್ದತಿಯಂತೆ ಅಲ್ಲಿಗೆ ಬಂದಾಗ ಕಲ್ಲು ಎಸೆಯುವುದು ಸಾಮಾನ್ಯ, ಪದ್ದತಿಯಂತೆ ಕಂಡು ಬರುತ್ತಿದೆಯಾದರೂ ಇಂದಿಗೂ ಅದರ ನಿರ್ದಿಷ್ಟ ಉದ್ದೇಶ ತಿಳದು ಬಂದಿಲ್ಲ. ಈ ಬಂಡೆಯ ಪಕ್ಕದಲ್ಲಿ ಒಂದು ಗುಹೆಯಿದೆ. ಗುಹೆಯ ಪಕ್ಕದಲ್ಲಿನ ವೀರಗಲ್ಲನು ಅವರ ಸಮಾಧಿ ಎಂದು ಹೇಳುತ್ತಾರೆ ಆದರೆ ವೀರಗಲ್ಲನ್ನು ಕೇಂದ್ರವಾಗಿಟ್ಟು ಕೊಂಡು ಸೂಳೆಬಂಡೆಯ ಐತಿಹ್ಯವನ್ನು ಸೃಷ್ಟಿಸಿದ್ದಾರೆ.

## ದೇವನಹಳ್ಳಿ ತಾಲ್ಲೂಕಿನ ಕೊಯಿರಾ ಗ್ರಾಮದ ಸಾರಂಗಧಾರ ರಾಜನ ಐತಿಹ್ಯ

ದೇವನಹಳ್ಳಿ ತಾಲ್ಲೂಕು ಕೊಯಿರಾ ಗ್ರಾಮಕ್ಕೆ ಸಂಬಂಧಿಸಿದ ಸುಮಾರು ೪೦೦-೫೦೦ ವರ್ಷಗಳ ಹಿಂದೆ ನಡೆದಿರುವ ಸ್ಥಳ ಪ್ರಧಾನವಾದ ಐತಿಹ್ಯವೆಂದರೆ: ಕೊಯಿರಾ ಬೆಟ್ಟದಿಂದ ಪಶ್ಚಿಮಕ್ಕೆ ಸುಮಾರು ೮-೧೦ ಮೈಲಿ ದೂರದಲ್ಲಿ ರಾಜಘಟ್ಟ ಎಂಬ ಹಳ್ಳಿಯಲ್ಲಿ ನರೇಂದ್ರ ಎಂಬ ರಾಜ ಆಡಳಿತ ನಡೆಸುತ್ತಿದ್ದ. ನರೇಂದ್ರ ರಾಜನಿಗೆ ರತ್ನಾಂಗಿ ಎಂಬ ಹೆಂಡತಿ ಮತ್ತು ಮದುವೆಯ ವಯಸ್ಸಿಗೆ ಬಂದಿರುವ ಸಕಲ ವಿದ್ಯಾ ಪಾರಂಗತನಾಗಿ, ಸುರಸುಂದರಾಂಗನಾದ ಸಾರಂಗಧಾರ ಎಂಬ ಮಗನಿದ್ದನು. ನರೇಂದ್ರ ರಾಜನು ಮಗನಿಗೆ ಹೆಣ್ಣನ್ನು ಹುಡುಕುತ್ತಾ ದೂರದ ರಾಜ್ಯದಲ್ಲಿ ಒಬ್ಬ ಸುಂದರ ತರುಣಿಯಾದ ಚಿತ್ರಾಂಗದೆ ನೋಡಿ ಆಗಿನ ಸಂಪ್ರದಾಯ ದಂತೆ ಖಡ್ಗವನ್ನೇ ವರನೆಂದು ಭಾವಿಸಿ ಖಡ್ಗದ ಜೊತೆ ಕನ್ಯೆಯನ್ನು ಮೊದಲು ವಿವಾಹ ಮಾಡಿಕೊಂಡು ಬಂದು, ನಂತರ ವಧು-ವರರಿಗೆ ವಿಧಿವತ್ತಾಗಿ ಮದುವೆ ಮಾಡುತ್ತಿದ್ದರು. ಹೀಗೆ

ಖಡ್ಗಕ್ಕೆ ಮದುವೆ ಮಾಡಿಕೊಂಡು ಬಂದ ನರೇಂದ್ರರಾಜನು ಚಿತ್ರಾಂಗದೆಯ ಮೋಹಕ ಚೆಲುವಿಗೆ ಮರುಳಾಗಿ ಆ ಕನ್ಯೆಯನ್ನು ತಾನೇ ವಿವಾಹ ಮಾಡಿಕೊಂಡು ಬಿಟ್ಟನು.

ವಿವಾಹದ ವಿಚಾರವನ್ನು ತನ್ನ ಹೆಂಡತಿ ಮಕ್ಕಳಿಗೂ ತಿಳಿಸಲಿಲ್ಲ. ಹೀಗೆಯೇ ರಾಜ್ಯಭಾರ ಮಾಡಿಕೊಂಡು ನರೇಂದ್ರರಾಜ ಕಾಲಕಳೆಯುತ್ತಿದ್ದ. ರಾಜರು ಬೇಟೆಗೆ ಹೋಗುವುದು ಹಿಂದಿನಿಂದಲೂ ನಡೆದು ಬಂದ ಪದ್ಧತಿಯಾಗಿದ್ದು, ಬೇಟೆಗೆ ಹೋಗಿ ಬರಲು ಅನೇಕ ದಿನಗಳಾಗುತಿತ್ತು. ಅದೇ ರೀತಿಯಲ್ಲಿ ಒಂದು ದಿನ ನರೇಂದ್ರ ರಾಜನೂ ಸಹ ಬೇಟೆಗೆಂದು ಕಾಡಿಗೆ ಹೋಗುವ ಮುನ್ನ ತನ್ನ ಎರಡನೇ ಹೆಂಡತಿಯಾದ ಚಿತ್ರಾಂಗದೆಯನ್ನು ತಂದು ಅರಮನೆಯಲ್ಲಿರಿಸಿ ಹೋದನು. ಇತ್ತ ಅರಮನೆಯಲ್ಲಿ ಚಿತ್ರಾಂಗದೆ ಒಬ್ಬ ಸುಂದರ ಪುರುಷನನ್ನು ನೋಡಿದಳು. ಮನ್ಮಥನ ಪ್ರತಿರೂಪದಂತಿದ್ದ ಯುವಕನನ್ನು ನೋಡಿ ಚಿತ್ರಾಂಗದೆ ಮೋಹಿತಳಾದಳು. ಈತನೇ ನನ್ನನ್ನು ಮದುವೆಯಾಗ ಬೇಕಾಗಿದ್ದ ರಾಜಕುಮಾರ ಇಂಥಹ ಸುಂದರಾಂಗನನ್ನು ಪತಿಯಾಗಿ ಪಡೆಯುವ ಭಾಗ್ಯ ನನ್ನದಾಗಲಿಲ್ಲ. ಆದರೂ ಚಿಂತೆಯಿಲ್ಲ ಈತನನ್ನು ಹೇಗಾದರೂ ಒಲಿಸಿಕೊಂಡು ನನ್ನ ಕಾಮದಾಹವನ್ನು ತೀರಿಸಿಕೊಳ್ಳುತ್ತೇನೆ ಎಂದು ಪಣತೊಟ್ಟು ಸಾರಂಗಧಾರನು ಏಕಾಂತನಾಗಿದ್ದ ಸಮಯದಲ್ಲಿ ಚಿತ್ರಾಂಗದೆ ಸಾರಂಗಧಾರನ ಬಳಿ ಹೋಗಿ ಸ್ವಾಮಿ, ನಿಮ್ಮ ತಂದೆ ನಿಮ್ಮ ಜೊತೆ ಮದುವೆ ಮಾಡಿಕೊಡಬೇಕಾಗಿದ್ದ ನನ್ನ ಸೌಂದರ್ಯಕ್ಕೆ ಮನಸೋತು ಬಲವಂತವಾಗಿ ನನ್ನನ್ನು ಅವರೇ ಮದುವೆ ಮಾಡಿಕೊಂಡರು. ರಾಜಾಜ್ಞೆಯನ್ನು ಮೀರಲಾರದ ನನ್ನ ತಂದೆ ತಾಯಿಗಳು ಜೀವ ಭಯದಿಂದ ಈ ಮದುವೆಗೆ ಅಡ್ಡಿಪಡಿಸದೆ ಸುಮ್ಮನಾದರು. ಸ್ವಾಮಿ ನಿಜವಾಗಿಯೂ ನಾನು ನಿಮಗೆ ಸೇರ ಬೇಕಾದವಳಾಗಿದ್ದೆನೆ. ನನ್ನ ವಿರಹ ಬಾಧೆಯನ್ನು ನೀವು ತೀರಿಸಬೇಕು. ಎಂದು ಕಾಮೋದ್ರೇಕದಿಂದ ಅವನನ್ನು ಬಿಗಿದಪ್ಪಿದಳು. ಈ ಸನ್ನಿವೇಶವನ್ನು ಕಂಡು ದಿಗ್ಭ್ರಾಂತನಾದ ಸಾರಂಗಧಾರನು ಕ್ಷಣಕಾಲ ವಿಚಲಿತನಾದನು. ನಂತರ ಎಲ್ಲವನ್ನು ಸಮಾಧಾನ ಚಿತ್ತದಿಂದ ಆಲೋಚಿಸಿ ತಾಯಿ ತಪ್ಪು ತಿಳಿಯಬೇಡಿ. ನೀವು ನನ್ನ ತಾಯಿಯಾದ ರತ್ನಾಂಗಿಯ ಸಮಾನರು. ನನ್ನ ತಂದೆ ಕೈಹಿಡಿದ ಧರ್ಮಪತ್ನಿ. ನಾನು ನಿಮ್ಮ ಮಗನೇ ಆದೆನು. ನೀವು ಈ ರೀತಿ ಮಗನನ್ನು ಮೋಹಿಸುವುದು ಸರಿಯಲ್ಲ. ಮಹಾಪಾಪ ಎಂದು ಬುದ್ಧಿವಾದ ಹೇಳಿ ಆಕೆಯನ್ನು ತಿರಸ್ಕರಿಸಿದನು.

ಯಾವಾಗ ಸಾರಂಗಧಾರ ತನ್ನ ಮನೋಭಿಲಾಷೆಯನ್ನು ಈಡೇರಿಸಲು ನಿರಾಕರಿಸಿದನೋ ಆಗ ಚಿತ್ರಾಂಗದೆ ಹತಾಶಳಾದಳು. ಸಾರಂಗಧಾರನ ಮೇಲಿನ ವಿರಹ ಬಾಧೆಯನ್ನು ತಾಳಲಾರದೆ ಹುಚ್ಚಿಯಂತೆ ಆರ್ಭಟಿಸಿದಳು. ಅವಳ ಪ್ರೇಮ–ಕಾಮಗಳು, ಸಾರಂಗಧಾರನ ಮೇಲೆ ಸೇಡಿನ ಭಾವನೆ ಬೆಳೆಸಿಕೊಂಡಳು.

ಬೇಟೆಗೆ ಹೋಗಿದ್ದ ನರೇಂದ್ರ ರಾಜನು ಬರುವವರೆಗೂ ಕಾದಿದ್ದು, ತಲೆಕೂದಲನ್ನು ಕೆದರಿಕೊಂಡು, ಕೈಯಲ್ಲಿದ್ದ ಬಳೆಗಳನ್ನು ಒಡೆದುಕೊಂಡು, ಹಣೆಯಲ್ಲಿದ್ದ ಕುಂಕುಮವನ್ನು ಅಳಸಿಕೊಂಡು, ರಾಜನ ಬರುವಿಕೆಗಾಗಿ ಕಾದು ಕುಳತ್ತಿದ್ದಳು. ನರೇಂದ್ರ ರಾಜನು ಅರಮನೆಗೆ ಹಿಂತಿರುಗಿ ಬಂದು ತನ್ನ ಪತ್ನಿಯ ದುರವಾಸ್ಥೆಯನ್ನು ಕಂಡು ದಿಗ್ಭ್ರಾಂತನಾಗಿ ಪ್ರಿಯೆ ಏಕೆ ಚಿಂತಾಕ್ರಾಂತಳಾಗಿರುವೆ? ನಿನ್ನ ಈ ದುಃಸ್ಥಿತಿಗೆ ಕಾರಣವಾದ್ರೂ ಏನು? ನನ್ನೊಡನೆ ಹೇಳಬಾರದೆ?"ಎಂದು ಕೇಳದನು. ಆಗ ಚಿತ್ರಾಂಗದೆ ಜೋರಾಗಿ ಅಳುತ್ತಾ ಸ್ವಾಮಿ, ನಾನು ಅಂತಃಪುರದಲ್ಲಿ ಏಕಾಂತವಾಗಿರುವುದನ್ನು ಗಮನಿಸಿದ ನಿಮ್ಮ ಪುತ್ರನಾದ ಸಾರಂಗಧಾರನು ನನ್ನ ಅನುಮತಿಯಿಲ್ಲದೆ ಅಂತಃಪುರವನ್ನು ಪ್ರವೇಶಿಸಿ, ತನ್ನನ್ನು ಮೋಹಿಸುವಂತೆ ಪೀಡಿಸಿದನು, ನಾನು ನಿನ್ನ ತಾಯಿಯ ಸಮಾನ. ತಾಯಿಯನ್ನು ಮಗನು ಮೋಹಿಸುವುದು ಮಹಾಪಾಪ ಎಂದು ಪರಿಪರಿಯಾಗಿ ಬೇಡಿಕೊಂಡು ಅವನನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದೆ ನನ್ನ ಮಾತುಗಳನ್ನು ಕೇಳದೆ ಬಲವಂತವಾಗಿ ನನ್ನನ್ನು ಎಳೆದಾಡಿ ನಾನಾರೀತಿ ಹಿಂಶಿಸಿದನು ಎಂದು ಸಾರಂಗಧಾರನ ಮೇಲೆ ಇಲ್ಲದ ಅಪವಾದವನ್ನು ಹೊರಿಸಿದಳು. ಚಿತ್ರಾಂಗದೆ ಹೇಳದ ಮಾತುಗಳನ್ನು ಕೂಲಂಕುಶವಾಗಿ ವಿಚಾರಮಾಡಿ ಪರಿಶೀಲಿಸದ ನರೇಂದ್ರ ರಾಜನು ಅದನ್ನು ನಿಜವೆಂದೇ ನಂಬಿದನು. ಮಗನ ಮೇಲೆ ಕೋಪೋದ್ರಿಕ್ತನಾದನು. ಆತುರಗಾರನಿಗೆ ಬುದ್ಧಿಮಟ್ಟ'ಎಂಬಂತೆ ರೋಷಾದಿಂದ ರಾಜಭಟರನ್ನು ಕರೆಸಿ ನನ್ನ ಮಗನಾದ ಸಾರಂಗಧಾರನು ರಾಜದ್ರೋಹಿ, ಅವನನ್ನು ಎಲ್ಲಿಗಾದರೂ ಕರೆದುಕೊಂಡು ಹೋಗಿ ಅವನ ರುಂಡ-ಮುಂಡಗಳು ಬೇರೆ ಬೇರೆಯಾಗುವಂತೆ ಶಿರಚ್ಛೇದನ ಮಾಡಿ ಎಂದು ರಾಜಾಜ್ಞೆಯನ್ನಿತ್ತನು.

ರಾಜಾಜ್ಞೆಯಂತೆ ರಾಜಭಟರು ಸಾರಂಗಧಾರನನ್ನು ಬಂಧಿಸಿ ರಥದಲ್ಲಿ ಹಾಕಿಕೊಂಡು ಪೂರ್ವಾಭಿಮುಖವಾಗಿ ಹೊರಟರು. ೮-೧೦ ಮೈಲಿಗಳ ದೂರ ಕ್ರಮಿಸಿದ ನಂತರ ಒಂದು ಹಳ್ಳಿ ದೊರೆಯಿತು. ಆ ಹಳ್ಳಿಯಲ್ಲಿ ಸಾರಂಗಧಾರನನ್ನು ಕತ್ತರಿಸಿ ಹಾಕಲು ಸಂಚು ರೂಪಿಸಿದರು. ಆದರೆ ಅಲ್ಲಿ ಸಂಚು ಫಲಿಸಲಿಲ್ಲ. ಆದ್ದರಿಂದ ಆ ಊರಿಗೆ ಗುಡಿಶೆಟಿಹಳ್ಳಿ ಎಂದು ಹೆಸರಿಟ್ಟರು. ಅಲ್ಲಿಂದ ಪ್ರಯಾಣ ಬೆಳೆಸಿ ಮತ್ತೊಂದು ಹಳ್ಳಿಗೆ ಸೇರಿದರು.

ಆ ಗ್ರಾಮದಲ್ಲಿ ಮತ್ತೆ ಮಾತುಕತೆಯನ್ನು ಮುಂದುವರೆಸಿದರು. ಆ ಹಳ್ಳಿಯಲ್ಲಿಯೂ ಸರಿಯಾದ ತೀರ್ಮಾನ ತೆಗೆದುಕೊಳ್ಳಲಾಗಲಿಲ್ಲ. ಅರ್ಧಮಾತೂಕತೆ, ಅರೆ ತೀರ್ಮಾನವಾಯಿತು. ಆದ್ದರಿಂದ ಆ ಹಳ್ಳಿಗೆ ಅರುವನಹಳ್ಳಿ ಎಂದು ನಾಮಕರಣ ಮಾಡಿ ಮುಂದಿನ ಹಳ್ಳಿಗೆ ಪ್ರಯಾಣ ಬೆಳೆಸಿದರು. ಆ ಹಳ್ಳಿಯಲ್ಲಿ ಉಳಿದ ಅರ್ಧ ಮಾತುಕತೆಯನ್ನು ಮುಂದುವರೆಸಿ ಸಾರಂಗಧಾರನ ಕೈಕಾಲುಗಳನ್ನು

ಕತ್ತರಿಸಲು ಮನನೊಂದು ತೀರ್ಮಾನ ತೆಗೆದುಕೊಂಡರು. ಆದುದರಿಂದ ಆ ಹಳ್ಳಿಗೆ ಮನಗೊಂಡನಹಳ್ಳಿ ಎಂದು ನಾಮಕರಣ ಮಾಡಿ ಮುಂದಿನ ಪ್ರಯಾಣ ಬೆಳೆಸಿದರು.

ಅಲ್ಲಿಂದ ಸ್ವಲ್ಪ ದೂರದಲ್ಲೆ ಒಂದು ಹಳ್ಳಿ, ಆ ಹಳ್ಳಿಯ ಪಕ್ಕದಲ್ಲೆ ಒಂದು ಬೆಟ್ಟ ಎದುರಾಯಿತು. ಅ ಬೆಟ್ಟದಲ್ಲಿ ಸಾರಂಗಧಾರನ ಕೈಕಾಲುಗಳನ್ನು ಮತ್ತು ತಲೆಯನ್ನು ಕೊಯ್ದು ಕತ್ತರಿಸಲಾಯಿತು. ಆ ಬೆಟ್ಟದಲ್ಲಿ ಸಾರಂಗಧಾರನನ್ನು ಕೊಯ್ದಿದ್ದರಿಂದ ಆ ಬೆಟ್ಟದ ಪಕ್ಕದಲ್ಲೆ ಇದ್ದ ಹಳ್ಳಿಗೆ ಕೊಯಿರಾ'ಎಂದು ನಾಮಕರಣ ಮಾಡಿದರು. ರಾಜಾಜ್ಞೆಯನ್ನು ಪಾಲಿಸಿದ ನಂತರ ರಾಜಭಟರು ತಮ್ಮ ರಾಜಧಾನಿಗೆ ಹಿಂತಿರುಗಿ ರಾಜನಿಗೆ ಸುದ್ದಿ ಮುಟ್ಟಿಸಿದರು.

ಮಹಾಭಾರತದ ಅರ್ಜುನ-ಊರ್ವಶಿಯರ ಕಥೆ ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ನಂಜುಡ ಕವಿ ರಚಿಸಿದ ಸಾಂಗತ್ಯ ಕಾವ್ಯವಾದ ಕುಮಾರ ರಾಮ ಚರಿತೆಯಲ್ಲಿನಕುಮಾರ ರಾಮನ ಕಥೆಯು ಸಹ ತಂದೆ, ಮಲತಾಯಿ, ಮಗನ ನಡುವಿನ ಕಥೆಯಾದ ಕಂಪಿಲರಾಯನಿಗೆ ಇಬ್ಬರು ಮಡದಿಯರು ಹಿರಿಯವಳು ಹರಿಹರದೇವಿ, ಕಿರಿಯವಳು ರತ್ನಾಜಿ. ಕುಮಾರರಾಮ ಹರಿಹರ ದೇವಿಯ ಮಗ ಕುಮಾರರಾಮ ಸ್ಪುರದ್ರೂಪಿ, ಪರಾಕ್ರಮಿ, ಚೆಲುವನನ್ನು ರತ್ನಾಜಿ ಮೋಹಿಸುತ್ತಾಳೆ. ಕಾಮದಾಹಕ್ಕೆ ಎಳೆಯಲು ಪ್ರಯತ್ನಿಸುತ್ತಾಳೆ. ಕುಮಾರ ರಾಮನ ವಿರೋಧದಿಂದ ಕೋಪಿತಳಾಗಿ ಕುಮಾರ ರಾಮನ ಮೇಲೆ ಸುಳ್ಳಿನ ಆರೋಪ ಮಾಡುತ್ತಾಳೆ.

ಕೊಯಿರ ಗ್ರಾಮದ ಸತೇನಹಳ್ಳಿ ಬಂಡೆಯ ಮೇಲಿನ ಕ್ರಿ.ಶ.೯೪೮ ರ ಕಾಲದ ಅಯ್ಯಪ ದೇವ ಮಗನ ವೀರಗಲ್ಲುಶಾಸನದ ಶಿಲ್ಪದಲ್ಲಿ ಯುದ್ಧದ ಸುಂದರವಾದ ಚಿತ್ರಣವನ್ನು ಕಾಣಬಹುದು. ಯುದ್ಧದಲ್ಲಿನ ಹೋರಾಟ, ಶತ್ರುಗಳು ಸತ್ತು ಬಿದ್ದಿರುವುದು, ವೀರರು ಕೈ,ಕಾಲು ಕಳೆದು ಕೊಂಡಿರುವುದನ್ನು ಸಾರಂಗದೇವನ ಕೊಂದು ಕೈಕಾಲುಗಳನ್ನು ಕತ್ತರಿಸಿ ಹಾಕಿದ್ದಾರೆ ಎಂದು ವೀರಗಲ್ಲನು ಸ್ಥಳಿಯರು ತೋರಿಸುತ್ತಾ ಕುಮಾರರಾಮ-ರತ್ನಾಜಿ, ಮಹಾಭಾರತದ ಅರ್ಜುನ-ಊರ್ವಶಿಯ ಕಥೆಯನ್ನು ಸಾರಂಗಧಾರನ ಕತೆಯಾಗಿ ಕೊಯಿರ ಮತ್ತು ಸುತ್ತ-ಮುತ್ತಲಿನ ಗುಡಿಶೆಟಿಹಳ್ಳಿ, ಅರುವನಹಳ್ಳಿ, ಮನಗೊಂಡನಹಳ್ಳಿ ಗ್ರಾಮಗಳಾದ ಹೆಸರು ಬರಲು ಕಾರಣವನ್ನು ದಂತ ಕಥೆಯಾಗಿ ಜಾರಿಯಲ್ಲಿದೆ. ಹಾಗೂ ಕೊಯಿರ ಗ್ರಾಮದಲ್ಲಿ ಇನ್ನೊಂದು ಕಥೆಯಿದೆ. ಬೇರೆ ಊರುಗಳಿಂದ ಕೊಯಿರ ಗ್ರಾಮಕ್ಕೆ ಬರುವ ಹೆಣ್ಣು ಮಕ್ಕಳು (ಸೊಸೆಯರು) ಸುಖ, ಸಂತೋಷದಿಂದ ನೆಮ್ಮದಿಯಾಗಿ ಮುತ್ತೈದೆಯಾಗಿ ಇರುತ್ತಾರೆ ಆದರೆ ಕೊಯಿರದಲ್ಲಿ ಹುಟ್ಟಿ ಬೆಳೆದ ಹೆಣ್ಣು ಮಕ್ಕಳು ಬೇರೆ ಬೇರೆ ಊರಿಗೆ ಸೊಸೆಯಾಗಿ ಸಂತೋಷದಿಂದ ಇರುವುದೇ ಕಡಿಮೆ, ಗಂಡ ಸತ್ತು ಅಥವಾ ಅತ್ತೆ ಮನೆಯವರ ಕಿರುಕುಳ,

ನಾನಾ ಕಾರಣಗಳಿಂದಾಗಿ ಹೊರ ಹೋಗಿರುವ ಹೆಣ್ಣು ಮಕ್ಕಳು ವಾಪಸ್ಸು ಬಂದು ತವರು ಮನೆಯಲ್ಲಿ ಕೊರಗುತ್ತಾ ಜೀವನ ಸಾಗಿಸುತ್ತಿದ್ದೆವೆ ಎಂದು ನೊಂದ ಅಜ್ಜಿಯ ಹೇಳಿಕೆ. ಈ ಕತೆಗೆ ಸಂಬಂಧಿಸಿದಂತೆ ನನ್ನ ಹುಟ್ಟುರಾದ ಮಾಗಡಿ ರಸ್ತೆ ತಾವರೆಕೆರೆಯಲ್ಲಿಯೂ ಇದೇ ರೀತಿಯ ಐತಿಹ್ಯೆ ಇದೆ. ಹೊರಗಿನಿಂದ ಬಂದಂತ ಸೊಸೆಯರು ಖುಶಿಯಾಗಿ ಇರುವುದನ್ನು ಹಾಗೂ ಬೇರೆ ಊರಿಗೆ ಮದುವೆ ಮಾಡಿ ಕೊಟ್ಟರುವ ಹೆಣ್ಣು ಮಕ್ಕಳು ಗಂಡ ಸತ್ತಿರುವುದು, ಗಂಡನ ಮನೆಯ ಕಿರುಕುಳ, ಮಕ್ಕಳಾಗದೆ ಇರುವುದು, ವರದಕ್ಷಿಣೆಗೆ ಕಿರುಕುಳ, ಗಂಡ ತವರು ಮನೆಗೆ ವಾಪಸ್ಸು ಕಳಿಸಿ ಬೆರೊಂದು ಮದುವೆಯಾಗಿರುವ ನಿರ್ದಾರ್ಶನಗಳನ್ನ ಕಣ್ಣು ಮುಂದೆ ನೋಡಿದ್ದೆನೆ ಮತ್ತು ಕೇಳಿದ್ದೆನೆ. ಇದನ್ನು ಯಾವ ರೀತಿಯಲ್ಲಿ ಅಥೈಸಿಕೊಳ್ಳುವುದು, ದಂತ ಕಥೆನೋ, ಸತ್ಯ ಕಥೆನೋ ಎಂಬುವುದೇ ಪ್ರಶ್ನೆಯಾಗಿದೆ.

**ದೇವನಹಳ್ಳಿ ತಾಲ್ಲೂಕಿನ ಹಾವತ್ತಿ–ಆವತಿಯ ಆಗಿರುವ ಐತಿಹ್ಯ**

ಸುಮಾರು ಹದಿನಾಲ್ಕನೇಯ ಶತಮಾನದಲ್ಲಿ ತಮಿಳುನಾಡಿನ ಅರ್ಕಾಟ್ ಪ್ರದೇಶಕ್ಕೆ ಸೇರಿದ ಕಂಚಿಯ ಸಮೀಪದ ಯಣಮಂಜಿ ಪುತ್ತೂರು ಎಂಬ ಊರಿನ ರಣಭೈರೇಗೌಡನು ಕಾಂಚೀಪುರಂನ ಪ್ರದೇಶಾಧೀಪತಿ ಶಂಭೂಗರಾಯ ವಹ್ನಿಗೌಂದರ್‌ನ ಸೇನಾನಿಯಾಗಿದ್ದು, ತಮ್ಮ ಕುಲ ಕಸುಬಾದ ಕೃಷಿಯಲ್ಲಿ ತೊಡಗಿದ್ದರು. ವಹ್ನಿಗೌಂಡರ್ ಯುದ್ಧವೊಂದರಲ್ಲಿ ಹತನಾದ ನಂತರ ಅವನ ಪ್ರದೇಶದಲ್ಲಿ ಅರಾಜಕತೆ ತಲೆದೂರಿ ಎಲ್ಲೆಲ್ಲೂ ದೊಂಬಿ, ಹಿಂಸೆ, ದೌರ್ಜನ್ಯಗಳೊಂದಿಗೆ ಶತ್ರುಗಳ ಉಪಟಳ ಅಧಿಕವಾಗಿ, ಎಲ್ಲಕ್ಕೂ ಹೆಚ್ಚಾಗಿ ರಣಭೈರೇಗೌಡನ ಏಕಮಾತ್ರ ಪುತ್ರಿ ದೊಡ್ಡಮ್ಮಳ ಮೇಲೆ ಸ್ಥಳೀಯ ಅಲೆಮಾರಿ ಪಂಗಡದ ಮುಖಂಡನ ದೃಷ್ಟಿ ಬಿದ್ದಿತು. ಅವನಿಗೆ ವಿವಾಹ ಮಾಡಿ ಕೊಡಲಿಚ್ಚಿಸದೆ ರಾತ್ರೋ ರಾತ್ರಿ ಅಲ್ಲಿಂದ ಸಹೋದರರಾದ ಮಲ್ಲಿಭೈರೇಗೌಡ, ಸಣ್ಣಭೈರೇಗೌಡ, ಹಾವಳಿಭೈರೇಗೌಡ, ಮಲ್ಲಭೈರೇಗೌಡ, ದೊಡ್ಡಮ್ಮನ ಸೇರಿ ಹೆಂಡತಿ ಸಮೇತ ಪಾಲಾರು ನದಿಯನ್ನು ದಾಟಿ ಮೈಸೂರು ಪ್ರಾಂತದ ಪೂರ್ವಭಾಗವಾದ ನಂದಿದುರ್ಗದ ರಾಮಸ್ವಾಮಿ ಬೆಟ್ಟದ ಬಳಿ ಬಂದು ಆವತಿ ಗ್ರಾಮವನ್ನು ಕಟ್ಟುತ್ತಾರೆ. ಪಾಲಾರ್ ನದಿಯ ಬಳಿ ಬರುವಾಗ ನದಿ ತುಂಬಿ ಹರಿಯುತ್ತಿದ್ದು ದೊಡ್ಡಮ್ಮ ಗಂಗೆಯನ್ನು ಪ್ರಾರ್ಥಿಸಲು ನದಿಯು ಇಬ್ಭಾಗವಾಗಿ ದಾರಿ ನೀಡಿತು ಮತ್ತು ಬಂಡಿಗಾಡಿಯಲ್ಲಿ ಬರುವಾಗ ಗಾಡಿಯ ಕಡೆಗೀಲು ಕಳಚಿ ಎಲ್ಲರೂ ಜೀವ ಬಿಡುವ ಪರಿಸ್ಥಿತಿಯನ್ನು ಅರಿತ ದೊಡ್ಡಮ್ಮ ತನ್ನ ಕಿರಿಬೆರಳನ್ನಿಟ್ಟು ರಕ್ಷಿಸಿದಳಂತೆ. ಆದ್ದರಿಂದಲೇ ಈ ಒಕ್ಕಲಿಗರು ತಮ್ಮ ಹೆಣ್ಣುಮಗಳ ವಿವಾಹ ಸಂದರ್ಭದಲ್ಲಿ ಕಿರು ಬೆರಳನ್ನು

ಕತ್ತರಿಸುತ್ತಿದ್ದಳು. ಆದ್ದರಿಂದ ಇವರಿಗೆ ಬೆರಳು ಕೊಡುವ ಒಕ್ಕಲಿಗರು ಎಂದು ಕರೆಯಲಾಗುತ್ತದೆ. ಈಗ ಇವರು ಕಿರು ಬೆರಳ ಬದಲಾಗಿ ಆ ಬೆರಳಿಗೆ ಹೂವನ್ನು ಸುತ್ತಿ ಅಥವಾ ಬಾಳೇಹಣ್ಣನ್ನು ಕತ್ತರಿಸುತ್ತಾರೆ[೧೨೧].

ಆವತಿಗೆ ಬಂದ ಮೇಲೆ ಒಮ್ಮೆ ರಣಭೈರೇಗೌಡನು ದೇವರಿಗೆ ತನ್ನ ದು:ಖವನ್ನು ತೋಡಿಕೊಳ್ಳುತ್ತಾ ಚಿಂತಾಕ್ರಾಂತನಾಗಿ ಮಲಗಿರುವಾಗ ವಿಶಿಷ್ಟವಾದ ಕನಸು ಬಿದ್ದು. ಬೆಳಗ್ಗೆ ಕನಸಿನಲ್ಲಿ ಕಂಡಂತೆಯೇ ಅವರ ಮನೆ ಮುಂದೆ ಸ್ವಲ್ಪ ದೂರದಲ್ಲಿ ಪೊರಕೆಯೊಂದು ಮಣ್ಣಿನಲ್ಲಿ ಹೂತು ನೆಟ್ಟಗೆ ನಿಂತಿರುವುದು ಕಂಡು ಆ ಸ್ಥಳವನ್ನು ಅಗೆದಾಗ ಅಲ್ಲಿ ಏಳು ಕೊಪ್ಪರಿಗೆಯ ಧನಕನಕಗಳು, ಅದರ ಮಧ್ಯದಲ್ಲಿ ಶ್ರೀದೇವಿ, ಭೂದೇವಿ ಸಮೇತರಾದ ದೊರೆತ ಶ್ರೀಚೆನ್ನಕೇಶವನ ಶಿಲಾಪ್ರತಿಮೆಗಳಿಗೆ ಸುಂದರವಾದ ದೇವಾಲಯವನ್ನು ಆವತಿಯಲ್ಲಿ ನಿರ್ಮಿಸಿ ದೊರೆತ ಅಪಾರವಾದ ನಿಧಿಯಿಂದ ಕೋಟೆ ಕೊತ್ತಲಗಳನ್ನು ನಿರ್ಮಿಸಿ ಪ್ರಭುತ್ವವನ್ನು ಪ್ರಾರಂಭಿಸಿ, ಸುತ್ತಮುತ್ತಲಿನ ಪ್ರದೇಶಗಳನ್ನು ತಮ್ಮ ಅಧೀನದಲ್ಲಟ್ಟು ರಾಜ್ಯಭಾರ ಮಾಡಿದನು. ಹೀಗೆ ಆವತಿನಾಡಪ್ರಭುಗಳ ಮೂಲದ ಬಗ್ಗೆ ಐತಿಹ್ಯಗಳಿವೆ.

ಕಂಚಿಯ ಯಣಮಂಜಿ ಪುತ್ತೂರಿನಲ್ಲಿ ನೆಲೆಸಿದ್ದ ರಣಭೈರೇಗೌಡ ಮತ್ತವನ ಸಹೋದರರು ಪರಿವಾರ ಸಮೇತ ನಂದಿಗಿರಿಯಲ್ಲಿ ಉಗಮಿಸುವ ಪಾಲರ್ ನದಿಯ ವಿರುದ್ಧ ದಿಕ್ಕಿನಲ್ಲಿ ಪಶ್ಚಿಮದ ನಾಡಿಗೆ ವಲಸೆ ಹೊರಡುತ್ತಾರೆ. ತಮ್ಮ ವಂಶದ ಕುಡಿ ಏಕಮಾತ್ರ ಪುತ್ರಿ ದೊಡ್ಡಮ್ಮನನ್ನು ಆ ಪ್ರಾಂತ್ಯದ ಪಾಳೆಯಗಾರ ಸೆಲ್ವಾನಾಯಕನು ಬಯಸಿದಾಗ ಆ ಆಘಾತದಿಂದ ತುರ್ತಾಗಿ ಪಾರಾಗಲು ರಾತ್ರೋರಾತ್ರಿ ಬಂಧುಬಳಗವನ್ನೆಲ್ಲ ಬೆನ್ನಿಗೆ ಕಟ್ಟಿಕೊಂಡು ಎತ್ತಿನ ಬಂಡಿಗಳಲ್ಲಿ ಪುತ್ತೂರನ್ನು ತೊರೆಯುತ್ತಾರೆ. ಭೋರ್ಗರೆವ ಕ್ಷೀರನದಿ ದಾರಿಗೆ ಅಡ್ಡಬಂದಾಗ ದೊಡ್ಡಮ್ಮನ ಆತ್ಮಭಕ್ತಿಯ ಮುಂದೆ ಅದು ಕೂಡ ಕೆಲಕಾಲ ಶಾಂತಗೊಂಡು ಬಂಡಿಗಳಿಗೆ ದಾರಿ ಮಾಡಿಕೊಡುತ್ತದೆ. ಆನಂತರ ಹಲವಾರು ದಿನಗಳ ದಾರಿ ಸವೆಸಿ ನಂದಿ ಬೆಟ್ಟದ ಸಮೀಪವೇ ಇರುವ ಯಂಬ್ರಹಳ್ಳಿ ಗುಡ್ಡದ ಬಳಿಗೆ ಬಂದಾಗ ತಮ್ಮ ಕಷ್ಟದ ಪಯಣಕ್ಕೆ ವಿರಾಮ ಕೊಟ್ಟು, ಅಲ್ಲೇ ನೆಲೆಸಲು ನಿರ್ಧರಿಸಿದರು. ಈ ಗುಡ್ಡದ ತಪ್ಪಲಲ್ಲಿಯೇ ಏಳು ಗುಡಿಸಿಲುಗಳನ್ನು ಕಟ್ಟಿಕೊಂಡು ವಾಸಿಸತೊಡಗಿದರು. ನಂದೀಶ್ವರನು ಕನಸಿನಲ್ಲಿ ಬಂದು ಇಲ್ಲಿಯೇ ನೆಲೆ ನಿಲ್ಲಲು ಆದೇಶಿಸಿದ್ದರಿಂದಲೇ ರಣಭೈರೇಗೌಡ ಈ ಭೂ ಭಾಗದಲ್ಲಿಯೇ ತಳ ಊರಲು ನಿಮಿತ್ತವಾಯಿತು ಎಂಬ ಪ್ರತೀತಿ.

ಈ ಜಾಗಕ್ಕೆ ಆವತಿ ಎಂಬ ಹೆಸರು ಬರಲು ಮೂಲವಾದ ರೋಚಕ ಘಟನೆಯು ಕೂಡ ಒಂದು ವಿಸ್ಮಯವೇ! ಈ ಪ್ರದೇಶದಲ್ಲಿ ವಾಸಿಸುತ್ತಿರುವಾಗ ಒಂದು ದಿನ ರಣಭೈರೇಗೌಡನ ಗಂಡು ಮಗುವನ್ನು

[೧೨೧] ಡಾ.ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ:-ಕರ್ನಾಟಕ ಇತಿಹಾಸ ದರ್ಶನ, ಪು.ಸಂ-೪೬೦.

ಅತ್ತಿ ಮರಕ್ಕೆ ಜೋತು ಹಾಕಿದ್ದ ತೊಟ್ಟಿಲಲ್ಲಿ ಮಲಗಿಸಿದ್ದು, ಮಗುವಿನ ಮೇಲೆ ತೀಕ್ಷಣವಾದ ಬಿಸಿಲು ಬಿದ್ದಿತ್ತು. ಆಗ ಅತ್ತಿ ಮರದಲ್ಲಿ ಸರ್ಪ ಹೆಡೆ ಬಿಚ್ಚಿ ಮಗುವಿಗೆ ನೆರಳು ಮಾಡಿದ್ದತಂತೆ. ಹೀಗೆ ಹಾವು ಅತ್ತಿ ಮರದಿಂದ ನೆರಳು ನೀಡಿದ್ದರಿಂದ ಈ ಊರಿಗೆ ಹಾವು ಅತ್ತಿ ಎಂದು ರೂಢಿಯಾಗಿ ಕ್ರಮೇಣ ಜನರ ಬಾಯಲ್ಲಿ ಆವತಿ ಎಂದು ಬದಲಾಯಿತು ಹಾಗೂ ಒಂದು ದಿನ ತಾವು ನೆಲೆಸಿದ್ದ ಪ್ರದೇಶದಲ್ಲೆ ದೊಡ್ಡ ತಾಮ್ರದ ಕೊಡದ ತುಂಬ ಚಿನ್ನದ ನಾಣ್ಯಗಳು ಮತ್ತು ಶ್ರೀದೇವಿ ಸಹಿತ ಚನ್ನಕೇಶವನ ಎರಡು ಅಡಿ ಎತ್ತರದ ವಿಗ್ರಹಗಳು ಭೂಮಿಯಲ್ಲಿ ಲಭಿಸುತ್ತವೆ. ಪುನಃ ಅದೇ ಜಾಗದಲ್ಲಿ ಚಿನ್ನದ ನಾಣ್ಯಗಳು ತುಂಬಿದ ಏಳು ಕೊಪ್ಪರಿಗೆಗಳು ಹಾಗೂ ವೇಣುಗೋಪಾಲ ಸ್ವಾಮಿಯ ವಿಗ್ರಹವೂ ಕೂಡ ದೊರಕುತ್ತದೆ. ಹೀಗೆ ದೊರೆತ ನಿಧಿಯನ್ನು ಈ ಗೌಡರುಗಳು ಆ ಪ್ರದೇಶದ ಜನತೆಯ ಪೂರೋಭಿವೃದ್ಧಿಗಾಗಿ ಮೀಸಲಿಡುತ್ತಾರೆ. ಜೊತೆಗೆ ದೇವಿಯ ಸಮೇತ ಚೆನ್ನಕೇಶವ ಸ್ವಾಮಿಯನ್ನು ಆವತಿಯಲ್ಲಿ ಗುಡಿ ಕಟ್ಟಿಸಿ ಪ್ರತಿಷ್ಠಾಪಿಸಿದರೆ, ವೇಣು ಗೋಪಾಲನನ್ನು ಹತ್ತಿರದ ದೇವನಹಳ್ಳಿಯಲ್ಲಿ ಸುಂದರ ದೇವಾಲಯದಲ್ಲಿ ನೆಲೆಗೊಳಿಸುತ್ತಾರೆ.

### ಸುಗುಟೂರು ಪಾಳೇಗಾರನಾದ ತಮ್ಮೇಗೌಡನ ಐತಿಹ್ಯ

ಹೊಸಕೋಟೆಯನ್ನಾಳಿದ ಸುಗುಟೂರು ಪಾಳೆಗಾರನಾದ ತಮ್ಮೇಗೌಡನ ಬಗ್ಗೆ ಮೂರು ಐತಿಹ್ಯವಿದೆ. ತಮ್ಮೇಗೌಡ ಮೊದಲು ಒಬ್ಬ ಸಾಮಾನ್ಯ ಜೀತಗಾರನಾಗಿದ್ದು, ಒಂದು ದಿನ ಕೆಲಸಕ್ಕೆಂದು ಹೊಲಕ್ಕೆ ಹೋದನು ಮಧ್ಯಾಹ್ನದ ಊಟಕ್ಕೂ ಬಾರದಿರುವಾಗ ಅವನ ಒಡೆಯ ಜೀತಗಾರನನ್ನು ವಿಚಾರಿಸಲು ಹೊಲದ ಬಳಿ ಹೋಗುತ್ತಾನೆ. ಅಲ್ಲಿ ಜೀತದಾಳು ಕೆಲಸ ಮಾಡಿ ಬಿಸಿಲಿನ ಬೇಗೆಯಲ್ಲಿ ಆಯಾಸಗೊಂಡು ಮರದ ಕೆಳಗೆ ಮಲಗಿ ನಿದ್ರೆ ಮಾಡಿದ್ದಾನೆ. ಸಮಯ ಕಳೆದಂತೆ ಮರದ ನೆರಳು ದೂರ ಸರಿದು ಬಿಸಿಲು ಅವನ ಮುಖದ ಮೇಲೆ ಬೀಳುತ್ತಿರುವುದನ್ನು ನೋಡಿದ ನಾಗರಹಾವು ಹೆಡೆಬಿಚ್ಚಿ ಬಿಸಿಲು ಬೀಳದಂತೆ ನೆರಳನ್ನೊಡ್ಡುತ್ತಿರುತ್ತದೆ. ಇದನ್ನು ಗಮನಿಸಿದ ಯಜಮಾನ, ಇವನು ಅಸಾಮಾನ್ಯನೆಂದು ತಿಳಿದು ನಿದ್ರೆಯಿಂದ ಎಚ್ಚೆತ್ತ ಮೇಲೆ ಮನೆಗೆ ಕರೆದುಕೊಂಡು ಹೋಗಿ ಸತ್ಕರಿಸುತ್ತಾನೆ. ಜ್ಯೋತಿಷಿಗಳ ಬಳಿ ಭವಿಷ್ಯ ಕೇಳಲಾಗಿ ಮುಂದೊಮ್ಮೆ ಇವನು ಶ್ರೇಷ್ಠ ರಾಜನಾಗುತ್ತಾನೆಂದು ಭವಿಷ್ಯ ನುಡಿಯುತ್ತಾನೆ, ಜ್ಯೋತಿಷಿಯ ಭವಿಷ್ಯದಂತೆ ತಮ್ಮೇಗೌಡ ಕೋಟೆ ಕಟ್ಟಿ ರಾಜ್ಯಭಾರ ಮಾಡಿದ ಎನ್ನುವುದು ದಂತಕಥೆ. ಹೊಸಕೋಟೆ ಅವಿಮುಕ್ತೇಶ್ವರ ದೇವಾಲಯದ ನವರಂಗ ಮತ್ತು ಕಲ್ಯಾಣ ಮಂಟಪದಲ್ಲಿನ ಕಂಭಗಳಲ್ಲಿ ಗೊರಬನ್ನು ತಲೆಯ ಮೇಲೆ ಹಾಕಿಕೊಂಡು ಕೈಯಲ್ಲಿ ಕೋಲನ್ನು ಹಿಡಿದು ನಿಂತಿರುವ ಶಿಲ್ಪಗಳನ್ನು

ತಮ್ಮೇಗೌಡನ ಶಿಲ್ಪವೆಂದು ಈಗಲೂ ಜನ ನಂಬಿದ್ದಾರೆ ಹಾಗು ಈ ಶಿಲ್ಪಕ್ಕೆ ದಂತಕತೆಯಾಗಿ ಮೇಲಿನ ಕಥೆಯನ್ನು ಹೇಳುತ್ತಾರೆ.

ಆದರೆ ಆವತಿಯ ರಣಭೈರೇಗೌಡ ಮತ್ತು ತಮ್ಮೇಗೌಡರ ಈ ಕಥೆಯನ್ನು ಮಾಗಡಿ ಮತ್ತು ಮಾಗಡಿ ಸುತ್ತ ಮುತ್ತ ಕೆಂಪೇಗೌಡನ ಐತಿಹ್ಯವಾಗಿ ಹೇಳುತ್ತಿರುತ್ತಾರೆ. ಆವತಿಯ ರಣಭೈರೇಗೌಡ, ತಮ್ಮೇಗೌಡರ ಮತ್ತು ಮಾಗಡಿ ಕೆಂಪೆಗೌಡರ ಆಯ ಪ್ರದೇಶಕ್ಕೆ ಅನುಗುಣವಾಗಿ ಐತಿಹ್ಯೆ ರಚನೆಯಾಗಿದ್ದು ಇದು ಕೇವಲ ದಂತ ಕಥೆನೆ ಹೊರತು ಸತ್ಯ ಕಥೆಯಲ್ಲ.

ತಮ್ಮೇಗೌಡರ ಮತ್ತೊಂದು ಐತಿಹ್ಯೆಯಿದೆ. ಹೊಸಕೋಟೆಯಲ್ಲಿನ ದೊಡ್ಡಕರೆಯನ್ನು ಕಟ್ಟುವಾಗ ನೀರು ಅಪಾರ ಪ್ರಮಾಣದಲ್ಲಿ ಹರಿದು ಬಂದು ಕಟ್ಟೆ ಕಿತ್ತು ಹೋಗುತ್ತಿತ್ತು. ತಮ್ಮೇಗೌಡನಿಗೆ ಇದೊಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತಿತ್ತು. ಒಮ್ಮೆ ಕನಸಿನಲ್ಲಿ ತಮ್ಮೇಗೌಡನಿಗೆ ತನ್ನ ಹಿರಿ ಸೊಸೆಯನ್ನು ಹಾರವಾಗಿ ಬಲಿಕೊಟ್ಟರೆ ನಿಲ್ಲುತ್ತೇನೆ ಎಂದು ಗಂಗಾದೇವಿ ತಿಳಿಸಿದಳು. ಅದರಂತೆ ತಮ್ಮೇಗೌಡ ತನ್ನ ಹಿರಿ ಸೊಸೆಯನ್ನು ಬಲಿಕೊಟ್ಟು ಕೆರೆ ಕಟ್ಟಿದ ಬಳಿಕ ಅದು ಕಿತ್ತು ಹೋಗಲಿಲ್ಲ ಎಂಬ ಕತೆ ಪ್ರಚಲಿತವಾಗಿದೆ.

ಆದರೆ ಈ ಕತೆಯು ಕೆರೆಗೆ ಹಾರದಲ್ಲಿ ಹಿರಿ ಸೊಸೆಯನ್ನು ಹಾರವಾಗಿ ಅರ್ಪಿಸಲು ಒಲ್ಲದ ಮಲ್ಲನಗೌಡ ಕಿರು ಸೊಸೆಯನ್ನು ಕೊಡಲು ಒಪ್ಪುತ್ತಾನೆ. ಕಟ್ಟೆ ನಿಲ್ಲದೆ ಹೋದಾಗ ಮಲ್ಲನಗೌಡ ಹೊತ್ತಿಗೆ ತೆಗೆಸುತ್ತಾನೆ. ಆದರೆ ತಮ್ಮೇಗೌಡನಿಗೆ ಸ್ವತಃ ಗಂಗರಯೇ ಬಂದು ಕನಸಿನಲ್ಲಿ ಹೇಳುತ್ತಾಳೆ. ಭಾಗೀರಥಗಂಡದಂಡಿಗೆ ಸೇರಿರುತ್ತಾನೆ. ಜಾನಪದ ಗೀತೆಯೊಂದಿಗೆ ಕೆರೆಗೆ ಹಾರದಲ್ಲಿ ಕಾವ್ಯಾತ್ಮಕವಾದ, ವರ್ಣನೆ ಭಾವ ಸಂವೇದನೆ, ನಂಬಿಕೆ, ಮಾನವೀಯತೆ, ತ್ಯಾಗ ಬಲಿದಾನ ಮುಂತಾದ ಸಂಕೀರ್ಣ ಸ್ವಾಭಾವಗಳು ಸೇರಿ ಕಥನ ಗೀತೆಯಾಗಿ ಹರಿಯುತ್ತಿದೆ. ಇಲ್ಲಿನ ಕತೆ ನೇರವಾದ ಉದ್ದೇಶ ಸಾಧನೆಗೆ ಅರ್ಪಿಸಿದ ಬಲಿಯಾದರೂ ಅದರಲ್ಲೂ ಸಮಷ್ಟಿಯ ಹಿತ ಅಡಗಿದೆ ಎಂಬುದು ಸಮಾನ ಅಂಶವಾಗಿರುತ್ತದೆ. ಹೀಗೆ ಕೆರೆಗೆ ಹಾರ, ತಮ್ಮೇಗೌಡನ ಕತೆಯ ಎರಡರ ಉದ್ದೇಶವೂ ಒಂದೇ ಆಗಿದೆ. ಅಂತ್ಯದಲ್ಲಿ ಕೆರೆಗೆ ಹಾರದಲ್ಲಿ ಗಂಡ ಮಾದೇವರಾಯ ದಂಡಿನಿಂದ ಬಂದು ಹೆಂಡತಿಗಾದ ಸ್ಥಿತಿಯಿಂದಾಗಿ ದುಃಖಿತನಾಗಿ ತಾನೂ ಪ್ರಾಣತ್ಯಾಗ ಮಾಡಿಕೊಳ್ಳುತ್ತಾನೆ. ತಂದೆ ತೀರ್ಮಾನವನ್ನು ಪ್ರಶ್ನಿಸುವುದಿಲ್ಲ. ತಮ್ಮೇಗೌಡನ ಕತೆಯಲ್ಲೂ ಗಂಡನಾದವನು ಪ್ರಶ್ನಿಸುತ್ತಾನೆ. ಆದರೆ ಪ್ರಾಣತ್ಯಾಗ ಮಾಡಿಕೊಳ್ಳುವ ಪ್ರಸಂಗವಿಲ್ಲ. ಈ ರೀತಿಯ ಕೆರೆಗೆ ಸಂಬಂಧಿಸಿದ ಐತಿಹ್ಯ, ಹಾಡು ಕಥೆಗಳು ಜಾನಪದದಲ್ಲಿ ಸಾಮಾನ್ಯವಾಗಿ ಕಂಡಬರುತ್ತವೆ. ಇದೇ ಕತೆಯನ್ನು ಕೆರೆ ಕಟ್ಟುವ ಬದಲು ಕೋಟೆಯ ಹೆಬ್ಬಾಗಿಲಿಗೆ ಬದಲಾಯಿಸಿರುವುದನ್ನು ಕೆಂಪೇಗೌಡನು ಬೆಂಗಳೂರು ಕೋಟೆ ಕಟ್ಟಿಸುವಾಗ ಗೋಡೆ ಬಿದ್ದು

ಹೋಗುತ್ತಿದ್ದು ಹಿರಿ ಸೊಸೆಯ ಬಲಿದಾನದಿಂದ ನಿಂತಿತ್ತು ಎಂಬ ಕತೆಯು ಬೆಂಗಳೂರುನಲ್ಲಿ ಚಾಲ್ತಿಯಲ್ಲಿದೆ. ಇವೆಲ್ಲ ಕೇವಲ ಕಲ್ಪಿತ ಕತೆಗಳಾಗಿದೆ. ಆದರೆ ಈ ಜಾನಪದದಲ್ಲಿ ಕೆರೆಗಳಿಗೆ ಬಲಿಯಾಗುವವರು, ಹಾರವಾಗುವವರು, ಬಲಿದಾನಕ್ಕೆ ಒಳಗಾಗುವವರು ಹೆಂಗಸರೇ ಆಗಿರುತ್ತಾರೆ. ಅದರಲ್ಲೂ ಸೊಸೆಯಂದಿರಾಗಿರುತ್ತಾರೆ ಎಂಬುದು ಕುತೂಹಲಕರವಾದುದು, ಪುರುಷ ಪ್ರಧಾನದ ಸಮಾಜದ ಜಾನಪದದಲ್ಲೂ ಸಹ ತನ್ನ ಸ್ವಾರ್ಥಕ್ಕಾಗಿ, ಸಮುದಾಯದ ದೃಷ್ಟಿಯಲ್ಲಿ ಪ್ರತಿಷ್ಠಿತನಾಗುವುದಕ್ಕಾಗಿ, ತನ್ನ ಮನೆಗೆ ತವರಿನ ಸಂಬಂಧ ಕಳೆದುಕೊಂಡು ಬರುವ ಸೊಸೆಯಂದಿರನ್ನು ನಿರ್ದಾಕ್ಷಿಣ್ಯವಾಗಿ ಬಲಿಗರ್ಪಿಸಿ ಕೀರ್ತಿವಂತರಾಗಿರುವುದನ್ನು ಗಮನಿಸಬಹುದಾಗಿದೆ.

ಆವತಿನಾಡ ಪ್ರಭು ರಣಭೈರೇಗೌಡನ ಐತಿಹ್ಯವನ್ನು ಮುಂದುವರೆಸುತ್ತಾ ಆವತಿಗೆ ಬಂದು ಅಭಿವೃದ್ಧಿ ಪಡಿಸಿದ ನಂತರ ಕಾಲಾಂತರದಲ್ಲಿ ಒಬ್ಬೊಬ್ಬ ಸೋದರರನ್ನು ಕ್ರಮವಾಗಿ ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಯಲಹಂಕ ಮುಂತಾದ ಕಡೆಗಳಲ್ಲಿ ನೆಲೆಸಿ ರಾಜ್ಯ ಕಟ್ಟಿದರು. ತಮ್ಮೇಗೌಡ ಎಂಬುವನು ಜಂಗಮಕೋಟೆ ಸಮೀಪದ ಸುಗಟೂರಿಗೆ ತೆರಳಿ ಹೊಸಕೋಟೆಯನ್ನು ನಿರ್ಮಿಸಿದನು.

ತಮ್ಮೇಗೌಡನ ಮತ್ತೊಂದು ಐತಿಹ್ಯವೆಂದರೆ ಪಾಲಾರ್ ನದಿಯ ಪೂರ್ವ ದಿಕ್ಕಿನಲ್ಲಿನ ಆಲತೂರು ವಡೇರಹಳ್ಳಿ ಎಂಬ ಗ್ರಾಮದಲ್ಲಿ ದೇವಪ್ಪಗೌಡನೆಂಬ ರೈತ ಮುಖಂಡನಿಗೆ ತಮ್ಮಪ್ಪಗೌಡನೆಂಬ ಮಗ ಮತ್ತು ಬೈಯ್ಯಮ್ಮ ಎಂಬ ಚೆಲುವಾದ ಮಗಳು ಇದ್ದು, ಆಕೆಯ ಚೆಲುವಿಗೆ ಮನಸೋತ ಕಂಚಿಯ ರಾಜ ಮದುವೆಯಾಗ ಬಯಸಿದನು. ಆದರೆ ಅದಕ್ಕೆ ಸಮ್ಮತಿಸದ ದೇವಗೌಡನು ತನ್ನ ಸೋದರರು ಮತ್ತು ಬಂಧುಗಳೂಡನೆ ಚರ್ಚಿಸಿ, ದೊರೆಗೆ ತಮ್ಮ ಹೆಣ್ಣು ಮಗಳನ್ನು ಕೊಡಲು ಇಚ್ಚಿಸದೆ ಪಶ್ಚಿಮ ದಿಕ್ಕಿನೆಡೆಗೆ ಪ್ರಯಾಣಿಸಿದಾಗ ಪಾಲಾರ್ ನದಿಯು ತುಂಬಿ ಹರಿಯುತ್ತಿದ್ದು, ಆಗ ಬಯ್ಯಮ್ಮಳು ಗಂಗಾದೇವಿಯನ್ನು ಪ್ರಾರ್ಥಿಸಲು ನದಿ ಇಬ್ಬಾಗವಾಗಿ ಇನ್ನೊಂದು ದಡಕ್ಕೆ ಹೋಗಲು ಅನುವು ಮಾಡಿಕೊಟ್ಟಿತು. ದೇವಪ್ಪ ಮತ್ತು ಅವನ ಬಂಧು ಬಳಗದವರು ಹಾಗೆ ಮುಂದೆ ಪ್ರಯಾಣ ಮಾಡಿ ಶಿಡ್ಲಘಟ್ಟ ತಾಲ್ಲೂಕಿನ ಜಂಗಮ ಕೋಟೆ ಸಮೀಪದ ಆಯಾ ಕಟ್ಟಿನ ಸ್ಥಳದಲ್ಲಿದ್ದ ಮರಗಳನ್ನು ಕಡಿದು ಕಟ್ಟಿದ ಊರಿಗೆ ಸುಗಟೂರು ಎಂದು ಹೆಸರು ಬಂದು, ಒಮ್ಮೆ ತಮ್ಮೇಗೌಡನು ಆಲದ ಮರದ ಕೆಳಗೆ ಮಲಗಿರುವಾಗ ಸರ್ಪವೊಂದು ಅವನ ತಲೆಯ ಮೇಲೆ ನೆರಳಾಗಿ ಹೆಡೆ ಎತ್ತಿಕೊಂಡಿದ್ದನ್ನು ಕಂಡ ದೇವಪ್ಪ ಮತ್ತು ಹೆಂಡತಿಯು ಕೈಮುಗಿದು ಪ್ರಾರ್ಥಿಸಲು ಸರ್ಪವು ಹೋಯಿತು ದೇವಪ್ಪಗೌಡನು ಭೂಮಿಯನ್ನು ಊಳುತ್ತಿರುವಾಗ ನೇಗಿಲ ಕೊನೆಗೆ ಏಳು ಕೊಪ್ಪರಿಗೆ ನಿಧಿ ಸಿಕ್ಕಿತು ಇದರಿಂದ ಕೋಟೆ ಕೊತ್ತಲಗಳನ್ನು ನಿರ್ಮಿಸಿ ನಾಲ್ಕು ದಿಕ್ಕುಗಳಲ್ಲಿ

ರಾಜ್ಯವನ್ನು ವಿಸ್ತರಿಸಿದನು. ಕೋಟೆಯೊಳಗೆ ಅವಿಮುಕ್ತೇಶ್ವರ ದೇವಸ್ಥಾನವನ್ನು ತಮ್ಮಾಂಬುದಿ ದೊಡ್ಡ ಕೆರೆಯನ್ನು, ಮುತ್ತುಕೂರು ಎಂಬ ಅಗ್ರಹಾರ ಈ ಮೂರನ್ನು ಒಂದೇ ವರ್ಷದಲ್ಲಿ ನಿರ್ಮಿಸಿದನಂತೆ.

ಈ ವಿಷಯಕ್ಕೆ ಸಮಬಂಧಿಸಿದಂತೆ ಇಲ್ಲಿಯವರೆಗೆ ಸಾಕಷ್ಟು ವಾದ–ವಿವಾದಗಳಿದ್ದರೂ ಕೂಡ ಇಲ್ಲಿಯವರೆಗೆ ಯಾರು ಕೂಡ ಯಾವುದೇ ರೀತಿಯ ಸತ್ಯ ಸಂಗತಿಗಳನ್ನಾಗಲಿ ಅಥವಾ ಐತಿಹಾಸಿಕವಾದ ಆಧಾರಗಳನ್ನು ಒದಗಿಸಿರುವುದಿಲ್ಲ. ಏಳುಬಂಡಿ, ಏಳುಜನ, ಏಳು ಕೊಪ್ಪರಿಕೆ ಎಂದು ಪಾರಂಪರಿತವಾದ ಐತಿಹ್ಯಗಳನ್ನೇ ಉಪಯೋಗಿಸುತ್ತಿರುವವರು ಹೆಚ್ಚು. ರಣಭೈರೇಗೌಡನ ಅಣ್ಣ–ತಮ್ಮಂದಿರುಗಳು ಯಾವುದೇ ಐತಿಹಾಸಿಕ ಆಧಾರಗಳು ಇರುವುದಿಲ್ಲ. ಆದ್ದರಿಂದ ಈ ಮೇಲಿನ ಐತಿಹ್ಯಗಳು ಒಂದು ಕಟ್ಟು ಕಥೆಯಾಗಿರುವುದರಲ್ಲಿ ಯಾವುದೇ ಅನುಮಾನವಿಲ್ಲ.

### ಅಡ್ಡಗಿಡ್ಡಪ್ಪನ ಐತಿಹ್ಯ

ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ ಗ್ರಾಮದಲ್ಲಿ ಇರುವಂತಹ ಐತಿಹ್ಯಗಳಲ್ಲಿ ಅಡ್ಡಗಿಡ್ಡಪ್ಪನ ಐತಿಹ್ಯವು ಒಂದು. ದಲಿತನಾಯಕನಾದ ಅಡ್ಡಗಿಡ್ಡಪ್ಪನಿಗೆ ಸಂಬಂಧಪಟ್ಟಂತಹ ಒಂದು ದಂತ ಕಥೆಯನ್ನು ಐತಿಹ್ಯವಾಗಿ ಹೇಳುತ್ತಾರೆ. ಅಡ್ಡಗಿಡ್ಡಪ್ಪನವರ ಅಣ್ಣ–ತಮ್ಮಂದಿರು ಏಳು ಜನ, ಇವರ ಮೂಲ ವೃತ್ತಿ ಬಟ್ಟೆ ನೇಯುವುದು, ಅಟ್ಟಗಿಡ್ಡಪ್ಪನವರು ನೇಯ್ಗೆ ಮಾಡಿದಂತಹ ಬಟ್ಟೆಯನ್ನು ಚೀಮಂಡಹಳ್ಳಿಯ ಸಂತೆಗೆ ಬಟ್ಟೆಯನ್ನು ಹಸುಗಳ ಮೇಲೆ ಹಾಕಿಕೊಂಡು ಹೋಗಿ ಮಾರಿಕೊಂಡು ಬರುವುದು ಕೆಲಸ, ಅದೇ ಸಂತೆಯಲ್ಲಿ ಅಡ್ಡಗಿಡ್ಡಪನಿಗೆ ದವಳದ ಮನೆಯಲ್ಲಿದ್ದ ದಂಪತಿಗಳು ಪರಿಚಯವಾಗಿ ತಮಗೆ ಸಂತಾನ ಭಾಗ್ಯವಿಲ್ಲದ ಕೊರಗು ಕಾಡುತಿದೆ ಎಂದಾಗ ಅಡ್ಡಗಿಡ್ಡಪನು ಅವರ ಮನೆ ಪ್ರವೇಶಿಸಿದ ಕಾಲ್ಗುಣದಿಂದ ದಂಪತಿಗಳಿಗೆ ಸಂತಾನ ಭಾಗ್ಯವು ದೊರೆತಾಗ ದಂಪತಿಗಳು ತಮಗೆ ಹೆಣ್ಣು ಜನಿಸಿದರೆ ನಿನಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುತ್ತೇನೆ ಎಂದು ಮಾತು ಕೊಡುತ್ತಾರೆ. ಅದರಂತೆ ತನ್ನ ಮಗಳಿಗೆ ೧೨ ವರ್ಷವಾದಾಗ ಅಡ್ಡಗಿಡ್ಡಪ್ಪನ ಜೊತೆ ವಿವಾಹವನ್ನು ಮಾಡಿ ಕಳುಹಿಸುತ್ತಾರೆ. ಜಡಿಗೇನಹಳ್ಳಿಗೆ ವಾಪಸ್ಸು ಬರಬೇಕೆನ್ನುವ ಸಮಯದಲ್ಲಿ ಊರಿನವರು ಅಡ್ಡಗಿಡ್ಡಪ್ಪನವರ ಆರು ಜನ ಅಣ್ಣಂದಿರಿಗೆ ಅಡ್ಡಗಿಡ್ಡಪ್ಪನ ಮೇಲೆ ಇಲ್ಲ ಸಲ್ಲದ ಆರೋಪಗಳನ್ನು ಮಾಡಿದಾಗ, ಆರು ಜನ ಊರಿನವರ ಮಾತು ಕೇಳಿಕೊಂಡು, ಕೈಯಲ್ಲಿ ದೊಣ್ಣೆ, ಪೊರಕೆ, ಚಪ್ಪಲಿ, ಎತ್ತಿಕೊಂಡು ಹೊಡೆಯಲು ಹೋದಾಗ, ಅಡ್ಡಗಿಡ್ಡಪ್ಪ ಊರಿಗೆ ಹೋಗದೆ ಊರಿನ ಹೊರಗಡೆಯೇ ಗುಡಿಸಲು ಹಾಕಿಕೊಂಡು ಜೀವನ ಸಾಗಿಸುತ್ತಿದ್ದಾಗ, ಊರ ಹೊರಗಿನ ಗವಿಯಲ್ಲಿ ವಾಸವಿದ್ದ ಹುಲಿಗಳು ಊರಿನ ಮೇಲೆ ದಾಳಿ ಮಾಡಿ ಕುರಿ, ಹಸು, ಮನುಷ್ಯರನ್ನು ಕೊಂದು ಹಾಕುತ್ತಿದ್ದಾಗ, ಊರಿನವರೆಲ್ಲ ಸೇರಿ ಒಂದು ಸಭೆಯನ್ನು ನಡಸಿ ಹುಲಿಯನ್ನು ಕೊಂದು

ಹಾಕಿದವರಿಗೆ ಅರ್ಧ ಊರನ್ನು ಬಿಟ್ಟು ಕೊಡುವುದಾಗಿ ಡಂಗೂರ ಹೊಡೆಸಿದಾಗ, ಅಡ್ಡಗಿಡ್ಡಪ್ಪ ಮತ್ತು ಫಳಫಳನೇ ಹೊಳೆಯುವ ಹೆಂಡತಿ ಜೊತೆ ಸೇರಿ ಹುಲಿಗಳನ್ನು ಬೇಟೆಯಾಡಲು ಗುಹೆ ಹತ್ತಿರ ಹೋದಾಗ ಹುಲಿಗಳಿಗೆ ಫಳಫಳನೇ ಹೊಳೆಯುವ ಹುಡುಗಿ ಬೆಂಕಿ ಚೆಂಡಿನಂತೆ ಕಂಗೊಳಿಸಿದಾಗ, ಹುಲಿಗಳು ಹುಡುಗಿಯನ್ನು ಬಿಟ್ಟು, ಅಡ್ಡಗಿಡ್ಡಪ್ಪನನ್ನು ತಿನ್ನಲು ಪ್ರಯತ್ನಿಸಿದಾಗ ಹುಡುಗಿಯು ಅಡ್ಡಗಿಡ್ಡಪ್ಪನಿಗೆ ತನ್ನ ಕೈಯಲ್ಲಿ ಇರುವ ಪೊರಕೆ ಕಡ್ಡಿಯನ್ನು ಎರಡು ಹೋಳು ಮಾಡುವಂತೆ ತಿಳಿಸಿದಳು. ಅವಳ ಅಪ್ಪಣೆಯಂತೆ ಹಾಗೆ ಮಾಡಿದಾಗ ಹುಲಿಗಳ ಶಕ್ತಿ ಕುಂದು ಹೋಗಿ, ಅಡ್ಡಗಿಡ್ಡಪ್ಪನ ಧೈರ್ಯವನ್ನು ಮೆಚ್ಚಿ ಊರಿನ ಮುಖಂಡರು ಏನು ಬೇಕು ಕೇಳಿದಾಗ ಜಡಿಗೇನಹಳ್ಳಿ ಪಕ್ಕ ಇರುವ ಬೆಳಮಂಗಲ ಎಂಬ ಜಾಗವನ್ನು ನೀಡಿ ಎಂದಾಗ, ಜಾಗವನ್ನು ಕೊಡ್ಡು ಅಡ್ಡಗಿಡ್ಡಪ್ಪನ ಸಾಧನೆಯನ್ನು ಅ ವೀರಗಲ್ಲಿನ ಮೇಲೆ ಕೆತ್ತಿಸಿದರು,

ವಾಸ್ತವಾಗಿ ಅಡ್ಡಗಿಡ್ಡಪ್ಪನಕಲ್ಲು ಎಂದು ಹೇಳುವ ವೀರಗಲ್ಲು ಯುದ್ಧವೀರಗಲ್ಲಾಗಿದೆ. ಊರಿನ ರಕ್ಷಣೆಗಾಗಿ ಹೋರಾಡಿ ಮಡಿದ ವೀರನನ್ನು ಐತಿಹ್ಯಯ ವಸ್ತುವಾಗಿಸಿ ಕೊಂಡಿದ್ದಾರೆ.

**ಮಾಸ್ತಿಕಲ್ಲಿನ ಮೇಲಿನ ಐತಿಹ್ಯ**

ಖಾಜಿಹೊಸಹಳ್ಳಿಯಲ್ಲಿ ೩ ಅಡಿ ಎತ್ತರದ ಕೈಗಳನ್ನು ಮುಗಿದು ನಿಂತ ಭಂಗಿಯಲ್ಲಿ ಮತ್ತು ಎಡಭಾಗದಲ್ಲಿ ಪಾದಗಳ ಬಳಿ ಒಂದು ಚಿಕ್ಕ ಮಗುವಿನ ಚಿತ್ರವನ್ನು ಕೆತ್ತಲಾದ ಮಾಸ್ತಿ ಕಲ್ಲಿನ ಮೇಲಿರುವ ಪ್ರಮುಖ ಐತಿಹ್ಯವೆಂದರೆ, ಸುಮಾರು ೧೦೦ ವರ್ಷಗಳ ಹಿಂದೆ ಅದೇ ಗ್ರಾಮದ ನಾರಾಯಣಪ್ಪನವರ ಹೆಂಡತಿಯಾದ ಸೊಣಮ್ಮ ತುಂಬು ಗರ್ಭಿಣಿಯಾಗಿದ್ದು ಪ್ರಸವದ ವೇಳೆ ಗಂಡು ಮಗುವನ್ನು ಹೊತ್ತು ಅವಳ ಜೊತೆಗೆ ಆ ಮಗುವು ತೀರಿಕೊಂಡಿದ್ದನ್ನು ಕೆರೆಯ ಸಮೀಪದಲ್ಲಿ ಸುಟ್ಟು ಹಾಕಲಾಯಿತು. ಗೌಡ ಜನಾಂಗದಲ್ಲಿ ಸಾಮಾನ್ಯವಾಗಿ ಸತ್ತರೆ ಮಣ್ಣಿನಲ್ಲಿ ಹೂಳಲಾಗುವುದು. ಆದರೆ ಆಕೆಯನ್ನು ಸುಟ್ಟು ಹಾಕಿದ ಕಾರಣ ಆಕೆಯ ಆತ್ಮವು ಪ್ರತಿದಿನ ರಾತ್ರಿ ಮನೆಯ ಬಾಗಿಲ ಬಳಿ ನಿಂತಂತೆ, ಹಾಗೂ ಪತಿ ನಾರಾಯಣಪ್ಪನವರ ಕನಸಿನಲ್ಲಿ ಬಂದು ತನ್ನ ನೆನಪಿಗಾಗಿ ಸ್ಮಾರಕವನ್ನು ನಿರ್ಮಿಸಲು ಆದೇಶ ನೀಡಿದರು. ಇದರಿಂದ ಭಯಗೊಂಡ ನಾರಾಯಣಪ್ಪನವರು ತಮ್ಮ ಜಮೀನಿನಲ್ಲಿ ಸ್ಮಾರಕ ಶಿಲೆಯಲ್ಲಿ ಮಾಡಿಸಿ ಹಾಕಿದ ನಂತರ ಪ್ರತಿ ಮಂಗಳವಾರ, ಶುಕ್ರವಾರ ಆಕೆಯ ವಂಶಸ್ಥರು ಇಂದಿನವರೆಗೂ ಪೂಜೆಯನ್ನು ಸಲ್ಲಿಸುತ್ತಿದ್ದಾರೆ.

**ದೇವನಹಳ್ಳಿ ತಾಲ್ಲೂಕಿನ ವಿಜಯಪುರದ ಚಿಕ್ಕನಹಳ್ಳಿಯ ಕಲ್ಯಾಣಿ ಐತಿಹ್ಯ**

ವಿಜಯಪುರದಿಂದ ಎರಡು ಕಿ.ಮೀ ದೂರದ ಚಿಕ್ಕನಹಳ್ಳಿ ಗ್ರಾಮದ ದೊಡ್ಡ ಆಲದ ಮರದ ಪಕ್ಕದಲ್ಲೇ ಅತಿ ಪುರಾತನ ಕಾಲದ ವಿಶಾಲವಾದ ಒಂದು ಕಲ್ಯಾಣಿ ಇದೆ. ಕಲ್ಯಾಣಿ ನಿರ್ಮಾಣದ ಬಗ್ಗೆ ಜನರ ಮಧ್ಯೆ ಒಂದು ದಂತ ಕಥೆ ಪ್ರಚಲಿತದಲ್ಲಿರುತ್ತದೆ. ಕಲ್ಯಾಣಿಯನ್ನು ಕಟ್ಟುವಾಗ ನೂರಾರು ಹೆಣ್ಣಾಳು–ಗಂಡಾಳುಗಳಬ್ಬರು ಕೂಲಿ ಕಾರ್ಮಿಕರು ಕೆಲಸ ಮಾಡಿ ಕಲ್ಯಾಣಿಯ ನಿರ್ಮಾಣ ಮುಕ್ತಾಯ ಹಂತದಲ್ಲಿದ್ದಾಗ ಕೆಲಸ ಮಾಡಿದ ಆಳುಗಳಿಗೆಲ್ಲಾ ಹಣದ ರೂಪದಲ್ಲಿ ಕೂಲಿ ಕೊಡುತ್ತಿದ್ದರು. ಅವರಲ್ಲಿ ಒಬ್ಬಳು ಗರ್ಭಿಣಿ ಸ್ತ್ರೀ ಕೂಡ ಇದ್ದಳು. ತನ್ನ ಗಂಡ ಮಕ್ಕಳ ತುತ್ತಿನ ಚೀಲ ತುಂಬಿಸುವುದಕ್ಕಾಗಿ ಹಗಲಿರುಳು ಲೆಕ್ಕಿಸದೆ ಕೆಲಸ ಮಾಡಿದ್ದಳು ಆದರೆ ಕೂಲಿ ನೀಡುವ ಧಣಿ ನೀನು ತುಂಬು ಗರ್ಭಿಣಿ, ನೀನೇನು ಕೆಲಸ ಮಾಡಿದೆ. ನಡೆದಾಡಲು ಸಾಧ್ಯವಾಗದ ನೀನು ಎಷ್ಟು ಕೆಲಸ ಮಾಡಿದ್ದಿಯ, ದಿನಗೂಲಿ ತೆಗೆದುಕೊಳ್ಳಲು ಯೋಗ್ಯಳಲ್ಲ. ಕಾಸಿಗಾಗಿ ಕಾಡದೆ ಇಲ್ಲಿಂದ ತೊಲಗಿ ಹೋಗು ಎಂದು ಹೇಳಿ ಕೂಲಿ ಹಣ ನೀಡಲು ನಿರಾಕರಿಸಿದ. ಧಣಿಗಳ ಮಾತಿನಿಂದ ಹೆಣ್ಣು ಮಗಳು ನೊಂದು ನೀರಾದಳು, ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯಲಿಲ್ಲ. ಇತ್ತ ಕಡು ಬಡತನ, ಆತ್ತ ಏನೂ ಮಾಡಲಾಗದ ಅಸಹಾಯಕ ಪರಿಸ್ಥಿತಿ. ಕಾಕತಾಳಿಯವೆಂಬಂತೆ ಧಾರಕಾರ ಮಳೆ ಸುರಿದು ಕಲ್ಯಾಣಿ ಭರ್ತಿಯಾಯಿತು. ಮನಸ್ಸು ರೋಸಿ ಹೋಯಿತು. ಮನೆಗೆ ಹಿಂದಿರುಗಲಾಗದೇ ತುಂಬಿ ತುಳುಕುತ್ತಿರುವ ಕಲ್ಯಾಣಿ ದಂಡೆಯ ಮೇಲೆ ನಿಂತು ಇನ್ನು ಮುಂದೆ ಎಷ್ಟೇ ಮಳೆ ಸುರಿದರೂ ಕಲ್ಯಾಣಿಗೆ ನೀರು ಹರಿಯದಿರಲಿ, ಒಂದು ವೇಳೆ ಬಂದ ನೀರು ಮೂರೇ ದಿನದಲ್ಲಿ ಇಂಗಿ ಹೋಗಲಿ ಎಂದು ಶಾಪ ಹಾಕಿ, ತಾನೂ ಆ ಕಲ್ಯಾಣಿಗೆ ಹಾರಿ ಪ್ರಾಣ ಬಿಟ್ಟಳು. ಈಗಲೂ ಸಹ ಕಲ್ಯಾಣಿಯಲ್ಲಿ ನೀರು ಇರುವುದಿಲ್ಲ ಎಷ್ಟೇ ಮಳೆ ಬಿದ್ದರೂ ಮೂರೇ ದಿನದಲ್ಲಿ ನೀರು ಹಿಂಗಿ ಹೋಗುತ್ತದೆ ಎಂದು ಕಲ್ಯಾಣಿಯ ಕಥೆಯನ್ನು ಐತಿಹ್ಯವಾಗಿ ಹೇಳುತ್ತಾರೆ.

ಈ ದೃಷ್ಟಿಯಿಂದ ಪುರಾಣ, ಐತಿಹ್ಯ ಹಾಗೂ ದಂತಕಥೆಗಳು ಪರಸ್ಪರ ಸಂಬಂಧವಿದ್ದು. ಇತಿಹಾಸದ ಘಟನೆ ಎಂಬಂತೆ ಐತಿಹ್ಯ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡಿದೆ.

## ಅಧ್ಯಾಯ – ೮

# ಉಪಸಂಹಾರ

ಜಿಲ್ಲೆಯಲ್ಲಿ ದೊರೆತಿರುವ ಶಾಸನಗಳ ಸ್ಥೂಲ ಅಧ್ಯಯನದ ಫಲವಾದ ಈ ಪ್ರಬಂಧದಲ್ಲಿ ಒಟ್ಟಾರೆಯಾಗಿ ಜಿಲ್ಲೆಯ ಸಾಧ್ಯವಾದಷ್ಟು ಸಮಗ್ರ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ನೀಡುವ ಪ್ರಯತ್ನ ಮಾಡಿರುತ್ತೇನೆ. ಜಿಲ್ಲೆಯು ಪ್ರಾಚೀನ ಕಾಲದಿಂದ ಜನವಸತಿಯ ನೆಲೆಯಾಗಿತ್ತು ಎಂಬುದಕ್ಕೆ ಬೃಹತ್ ಶಿಲಾಯುಗದ ಹಲವಾರು ನೆಲೆಗಳಾದ ನಿಲುವುಗಲ್ಲುಗಳು, ಕಲ್ಮನೆಗಳು, ಕಲ್ಗುಪ್ಪೆಗಳು ದೊರೆತಿದೆ. ಸೂಲುಕುಂಟೆ ಸಮೀಪದ ಪಾಂಡವರ ದಿಣ್ಣೆಯಲ್ಲಿ ನಿಧಿಚೋರರಿಂದ ನೂರಕ್ಕೂ ಹೆಚ್ಚು ಶಿಲಾಯುಗದ ಸಮಾಧಿಗಳನ್ನು ಹಾಳು ಮಾಡಿದ್ದಾರೆ. ಜಡಿಗೇನಹಳ್ಳಿಯಲ್ಲಿ ರಸ್ತೆ ಅಗಲೀಕರಣದ ಸಮಯದಲ್ಲಿ ನೆಲೆಗಳನ್ನು ತೆಗೆದುಹಾಕಿ ಆ ಸ್ಥಳದಲ್ಲಿ ರಸ್ತೆ ಮಾಡಲಾಗಿದೆ. ಸಾಸಲು ಗ್ರಾಮದ ಬಳಿಯಲ್ಲಿನ ನಿಲುವುಗಲ್ಲುಗಳನ್ನು ಒಡೆದು ಹಾಕಲಾಗಿದೆ. ಕ್ರಿ.ಶ.೫ನೇ ಶತಮಾನದಿಂದ ೧೮ ನೇ ಶತಮಾನದ ವರೆಗೆ ಜಿಲ್ಲೆಯೂ ಒಂದು ಘಟಕವಾಗಿರದೆ ಹಲವಾರು ಉಪ ಘಟಕಗಳಾಗಿ ಜಿಲ್ಲೆಯಲ್ಲಿ ಗಂಗ–೬೦೦೦, ಸಳ್ಳೆ–೩೦೦, ಮಣ್ಣೆ–೩೦೦, ಕೆರೆಕುಂದ–೩೦೦, ಪುನ್ನಾಡು–೭೦ ಹಾಗೂ ಇನ್ನು ಹಲವಾರು ನಾಡುಗಳೆಲ್ಲಾ ಜಿಲ್ಲೆಯ ಪ್ರಾದೇಶಿಕ ವಿಭಾಗದ ವ್ಯಾಪ್ತಿಗೆ ಒಳಪಟ್ಟಿತ್ತು. ರಾಜಕೀಯ ವ್ಯವಸ್ಥೆಗೆ ಸಂಬಂಧಿಸಿದಂತೆ ಕರ್ನಾಟಕದ ಬಹುತೇಕ ಎಲ್ಲಾ ರಾಜವಂಶಗಳು ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ್ದಾರೆ. ಗಂಗರು, ಚೋಳ, ನೊಳಂಬ, ಹೊಯ್ಸಳ, ವಿಜಯನಗರ, ಮೈಸೂರು ಒಡೆಯರ್, ಕುಕ್ಕಲನಾಡಪ್ರಭು, ಹುಲುಕಡಿನಾಡು, ಆವತಿನಾಡು, ಯಲಹಂಕನಾಡು, ಸುಗಟೂರುಪ್ರಭುಗಳ ವಂಶಾವಳಿಯನ್ನು ಜಿಲ್ಲೆಗೆ ಅವರ ಕೊಡುಗೆಗಳ ವಿವರಗಳನ್ನು ಕಾಣಬಹುದು. ಅದು ಅಲ್ಲದೆ ಇತಿಹಾಸದ ಕಾಲದ ಉದ್ದಕ್ಕೂ ರಾಜಕೀಯ ಶಕ್ತಿಗಳ ಹೋರಾಟವನ್ನು ಮಾಡಿರುವ ಉದಾಹರಣೆಗಳಿವೆ. ಗಂಗ–ರಾಷ್ಟ್ರಕೂಟ, ಗಂಗ–ನೊಳಂಬರಿಗೆ ಕದನಗಳು ಇಲ್ಲೆ ಘಟಿಸಿದೆ. ಹೊಯ್ಸಳರು, ವಿಜಯನಗರ, ಮೈಸೂರು ಒಡೆಯರ ಸಾಮ್ರಾಜ್ಯಗಳ ಒಂದು ಭಾಗವೇ ಆಗಿದ ಜಿಲ್ಲೆಯನ್ನು ಬಿಜಾಪುರದ ಸುಲ್ತಾನರು, ಮರಾಠರು ತಮ್ಮ ತಮ್ಮ ರಾಜ್ಯಗಳ ವಿಸ್ತರಣೆಗಾಗಿ ದಾಳಿಯನ್ನು ಮಾಡಿದ್ದಾರೆ. ಆಳರಸರ ಜೊತೆಗೆ ಅಧಿಕ ಸಂಖ್ಯೆಯಲ್ಲಿ ಸಣ್ಣ – ಪುಟ್ಟ ಅರಸರು, ನಾಡಪ್ರಭುಗಳು ಜಿಲ್ಲೆಗೆ ಸಂಬಂಧಿಸಿದಂತೆ ತಮ್ಮ ತಮ್ಮ ವ್ಯಾಪ್ತಿಯಲ್ಲಿ ಸಾಕಷ್ಟು ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಕೊಡುಗೆಗಳನ್ನು ನೀಡಿದ್ದಾರೆ, ಹೊಯ್ಸಳರ ಪರವಾಗಿ ದಣ್ಣಾಯಕರು ಪ್ರಧಾನಿಗಳು, ವಿಜಯನಗರ ಕಾಲದಲ್ಲಿ ಅಮರನಾಯಕ, ನಾಯಕರು, ಸಾಮಂತರು, ನಾಡಪ್ರಭುಗಳು, ಸ್ಥಳೀಯವಾಗಿ ಆಡಳಿತಗಳನ್ನು ನಿರ್ವಹಿಸಿದ್ದಾರೆ. ಗಂಗರ ಉಪರಾಜಧಾನಿ ಈ ಭಾಗದಲ್ಲಿ ಇದ್ದರೂ ಭವ್ಯವಾದ ಸ್ಮಾರಕಗಳ ಸಾಧ್ಯವಾಗದೆ ಇರುವುದಕ್ಕೆ ನಿರಂತರ ಯುದ್ಧಗಳಿಂದಾಗಿ

ರಾಜಧಾನಿಯು ಯುದ್ಧಕೇಂದ್ರವಾಗಿರ ಬಹುದು. ಈ ಯುದ್ಧಗಳಂದಾಗಿ ಆರ್ಥಿಕವಾಗಿ ಸದೃಢರಾಗದೇ ಇರುವ ಕಾರಣದಿಂದ ಚಿಕ್ಕ ಚಿಕ್ಕ ಗುಡಿ-ದೇವಾಲಯಗಳನ್ನು ನಿರ್ಮಿಸಿರ ಬಹುದು. ಅಕ್ಕ-ತಂಗಿಯರ ಗುಡಿಯ ಮುಂಭಾಗದ ರಚನೆ ಅಪೂರ್ಣವಾಗಿದೆ.

ಜಿಲ್ಲೆಯಲ್ಲಿ ಕೆಲವೊಂದು ಕಡೆ ಶಾಸನಗಳಿದ್ದು, ದೇವಾಲಯಗಳು ಶಿಥಿಲ ಅಥವಾ ಇಲ್ಲದಂತಾಗಿದೆ. ದಡಿಗನು ನಿರ್ಮಿಸಿದ ದಡಿಗೇಶ್ವರ ದೇವಾಲಯವು ಈಗ ಉಳಿದು ಬಂದಿಲ್ಲ, ಮಣ್ಣೆಯಲ್ಲಿ ಶ್ರೀವಿಜಯನು ನಿರ್ಮಿಸಿದ ಜಿನಾಲಯ ಪಾಳುಬಿದ್ದು ದನ-ಕರುಗಳ ವಾಸಸ್ಥಾನವಾಗಿದೆ. ದೊಡ್ಡಹುಲ್ಲೂರಿನ ಸೋಮೇಶ್ವರ ಇತ್ಯಾದಿಯಾದ, ಒಂದು ಕಾಲದಲ್ಲಿ ತುಂಬಾ ಪೂಜೆ ಪುನಸ್ಕಾರಗಳು ನಡೆಯುತ್ತಿದ್ದ ದೇವಾಲಯಗಳು ಇಂದು ಶಿಥಿಲ ವ್ಯವಸ್ಥೆಯಲ್ಲಿದೆ. ಇದ್ದಕ್ಕೆ ಯಾರು ಹೊಣೆ ಎಂಬುದೆ ಯಕ್ಷ ಪ್ರಶ್ನೆ ಕಾಡುತ್ತಿದೆ.

ಮತ್ತೆ ಕೆಲವೊಂದು ಕಡೆ ದೇವಾಲಯಗಳಿದ್ದು ಶಾಸನಗಳಿರುವುದಿಲ್ಲ. ಇದರಿಂದಾಗಿ ದೇವಾಲಯದ ಕಾಲವನ್ನು ನಿಖರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಬಿಲ್ಲನಕೋಟೆಯಲ್ಲಿನ ಅಂಗಪ್ಪನ ಗುಡಿ, ಬಾಣವಾಡಿಯ ಮುಕ್ಕಣ್ಣೇಶ್ವರ, ಕಿತ್ತನಹಳ್ಳಿಯ ಸೋಮೇಶ್ವರ, ವೆಂಕಟೇಶ್ವರ (ಊರು ಬೇಚಿರಾಖ್ ಆಗಿದೆ), ಇಸ್ತೂರಿನ ನಿಲಕಂಠೇಶ್ವರ, ದೊಡ್ಡಬಳ್ಳಾಪುರದ ಆದಿನಾಥಸ್ವಾಮಿ, ಅಣ್ಣೇಶ್ವರದ ವೇಣುಗೋಪಾಲ, ನಲ್ಲೂರಿನ ವೇಣುಗೋಪಾಲ ದೇವಾಲಯಗಳು ಹೀಗೆ ಪಾಳುಬಿದ್ದ ದೇವಾಲಯಕ್ಕೆ ಸಂಬಂಧಿಸಿದಂತೆ ಚೋಳರು ಒಂದು ರಾತ್ರಿಯಲ್ಲಿ ದೇವಾಲಯವನ್ನು ನಿರ್ಮಾಣ ಮಾಡಬೇಕಾಗಿತ್ತು ಅದು ಸಾಧ್ಯವಾಗದೇ ಇರುವುದರಿಂದ ಅರ್ಧಕ್ಕೆ ನಿಂತು ಹೋಗಿ ಪಾಳುಬಿದ್ದಿದೆ ಎಂಬ ಕಥೆಗಳು ಜಾರಿಯಲ್ಲಿದೆ. ಗಂಗರ ಹಲವು ದೇವಾಲಯಗಳಲ್ಲಿ ಭೈರವ, ಸೂರ್ಯ, ಚಾಮುಂಡೇಶ್ವರಿ, ಸಪ್ತಮಾತೃಕೆಯರ ಶಿಲ್ಪಗಳನ್ನು ಕಾಣಬಹುದು. ಹಾಗೆಯೇ ಹಲವು ಕಡೆ ದೇವಾಲಯಗಳು ಜೀರ್ಣೋದ್ಧಾರವಾಗಿದ್ದು ಮೂಲ ಮೂರ್ತಿ ಶಿಲ್ಪಗಳನ್ನು ಉಳಿಸಿಕೊಂಡಿರುವುಇದನ್ನ ಐಗಂಡಪುರ, ತೋಟಗೆರೆ, ಚಿಕ್ಕಜಾಲ, ಕೊಂಡ್ರಹಳ್ಳಿ, ಜ್ಯೋತಿಶ್ವರ ದೇವಾಲಯಗಳಲ್ಲಿ ಕಾಣಬಹುದು.

ನಗರೀಕರಣದಿಂದ ಪ್ರಾಚೀನವಾದ ಸ್ಮಾರಕಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲಾಗದ ಸ್ಥಿತಿಯನ್ನು ತಲುಪಿದೆ. ಹಳೆ ನೀರು ಹೋಗಿ ಹೊಸ ನೀರು ಬರುವ ಹಾಗೆ ಗಂಡರಾಜಪುರ, ಗಂಗವಾರಗಳಲ್ಲಿ ತಮಗೆ ಅನುಕೂಲವಾಗುವ ರೀತಿಯಲ್ಲಿ ಮೂಲ ಸ್ವರೂಪಕ್ಕೆ ಹಾನಿಯಾಗದಂತೆ ನವೀಕರಣ ಮಾಡಲಾಗಿದೆ. ಈ ರೀತಿಯಲ್ಲಿ ನವೀಕರಣ ಮಾಡಿದರೆ ನಮ್ಮ ಹಳೆಯ ದೇವಾಲಯಗಳನ್ನು ಮತ್ತೊಮ್ಮೆ ಕಾಣಬಹುದು. ಆದರೆ ವಾಸ್ತವವಾಗಿ ಹೊಸ ಶೈಲಿಯ ದೇವಾಲಯಗಳನ್ನು ನಿರ್ಮಾಣ

ಮಾಡುತ್ತಿದ್ದಾರೆ. ಪಂಚನಾರಾಯಣ ಕ್ಷೇತ್ರಗಳಲ್ಲಿ ಜಿಲ್ಲೆಯ ಒಂದು ನಾರಾಯಣ ದಾವಾಲಯವು ಸೇರಿದೆ. ಗದುಗಿನ ವೀರನಾರಾಯಣ, ಕೈವಾರದ ಅಮರನಾರಾಯಣ, ಯಲ್ಲೋಡಿಯ ಆದಿನಾರಾಯಣ, ಸತ್ಯಪುರ ಲಕ್ಷ್ಮಿನಾರಾಯಣ ಮತ್ತು ಹೊಸಕೋಟೆ ತಾಲ್ಲೂಕಿನ ಬೂದಿಗೆರೆ ದೇಶನಾರಾಯಣ ಎಂಬುದಾಗಿ, ಈ ನಾರಾಯಣ ದೇವಾಲಯಗಳನ್ನು ಸಪ್ತ ಋಷಿಗಳಿಂದ ಸ್ಥಾಪಿಸಲ್ಪಟ್ಟಿದೆಯೆಂಬ ಪ್ರತೀತಿಯಿರುವ ಪುರಾತನವಾದ ದೇಶನಾರಾಯಣ ದೇವಾಲಯದಲ್ಲಿ ನಿತ್ಯಪೂಜೆ, ವಿಶೇಷ ಪೂಜೆಗಳೋಂದಿಗೆ, ಫಾಲ್ಗುಣ ಶುದ್ಧ ಹುಣ್ಣಿಮೆಯಂದು, ಬ್ರಹ್ಮ ರಥೋತ್ಸವ ನಡೆಯುತ್ತದೆ. ಅದೇ ಸಂದರ್ಭದಲ್ಲಿ ಕರಗ ನಡೆಯುತ್ತದೆ.

ಕ್ರಿ.ಶ.೧೧೪೦ ರಲ್ಲಿ ಪುರುಷರಂತೆ ವೀರ ಮಹಿಳೆಯೊಬ್ಬಳು ಕಳ್ಳರೊಡನೆ ಹೋರಾಡಿ ಪಶುಗಳನ್ನು ರಕ್ಷಿಸಿ ಪ್ರಾಣಬಿಟ್ಟ ಅಪರೂಪದ ವೀರಗಲ್ಲು ಹೊಸಕೋಟೆ ತಾಲ್ಲೂಕಿನಲ್ಲಿ ದೊರೆತಿದೆ. ಇದು ಒಂದು ರೀತಿಯಲ್ಲಿ ರೈತರ ನಿತ್ಯವಲಂಭಿಯಾದ ಪಶುಗಳನ್ನು ರಕ್ಷಿಸಿದ ಲಕ್ಷ್ಮಮ ಗಾವುಂಡಿಯ ಧೈರ್ಯ ಸಾಹಸವೂ ಹನ್ನೊಂದನೇ ಶತಮಾನದ ಸ್ತ್ರೀಯರ ಸ್ಥಾನಮಾನವನ್ನು ನೆನಪಿಸುವಂತೆ ಮಾಡುತ್ತದೆ.

ಸಮಾಜದ ಸಂಪೂರ್ಣ ಚಿತ್ರಣ ದೊರೆಯುವುದು ಆ ಸಮಾಜದ ಆಚಾರ ವಿಚಾರ ಧಾರ್ಮಿಕ ನಂಬಿಕೆಗಳಿಂದ, ಬೌದ್ಧ, ಜೈನ, ಶೈವ, ವೈಷ್ಣವ, ವೀರಶೈವ ಧರ್ಮಗಳನ್ನು ಆಯಾ ಕಾಲದಲ್ಲಿ ಆಳರಸರು ಪೋಷಿಸುತ್ತಾ ಹಲವಾರು ಧಾರ್ಮಿಕ ಕಾರ್ಯಗಳನ್ನು ಮಾಡಿದ್ದಾರೆ, ಸೂರ್ಯದೇವಾಲಯವೆಂದರೆ ಒರಿಸ್ಸಾದ ಕೋನಾರ್ಕ್ ನೆನಪಿಗೆ ಬರುತ್ತದೆ. ಆದರೆ ನಮ್ಮ ಜಿಲ್ಲೆಯಲ್ಲಿ ೯ನೇ ಶತಮಾನದ ಕಾಲಕ್ಕೆ ಮಣ್ಣೆಯಲ್ಲಿ ಮಾರಸಿಂಹನ ಆಳ್ವಿಕೆಯ ಸಮಯದಲ್ಲಿ ನಿರ್ಮಾಣ ಮಾಡಲಾಗಿರುವುದರ ಬಗ್ಗೆ ಶಾಸನವಿದೆ. ಗಂಗರು ಕಾತ್ಯಾಯನಿ ಭಕ್ತರೆಂದು ಹೇಳಿಕೊಂಡಿದ್ದಾರೆ. ವಿಜಯನಗರ ಕಾಲದಲ್ಲಿ ಅರಸರು ಮತ್ತು ಅವರ ಅಧಿಕಾರಿಗಳು ವೈಷ್ಣವ ದೇವಾಲಯಗಳ ನಿರ್ಮಾಣ, ದೇವಾಲಯದ ಮುಂದೆ ದೀಪದ / ಗರುಡದ ಕಂಬಗಳನ್ನು ನಿರ್ಮಿಸುತ್ತಿದ್ದರು.

ಜಿಲ್ಲೆಯಲ್ಲಿ ಹಲವಾರು ರೀತಿಯ ಸ್ಮಾರಕಶಿಲೆಗಳಾದ ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಆತ್ಮಬಲಿದಾನಗಳು ದೊರೆತಿದ್ದು, ಕೆಲವು ಗ್ರಾಮಗಳಲ್ಲಿ ವೀರಗಲ್ಲು, ಮಾಸ್ತಿಕಲ್ಲು, ಶಾಸನಗಳಿಗೆ ಗುಡಿಗಳನ್ನು ಕಟ್ಟಿ ಅಥವಾ ಹಾಗೆ ಪೂಜೆ ಮಾಡುತ್ತಿರುವುದನ್ನು ಸಹ ಕಾಣಬಹುದು. ದೊಡ್ಡಬಳ್ಳಾಪುರ ತಾಲ್ಲೂಕಿನ ಲಿಂಗಾಪುರ ಗ್ರಾಮದ ತೋಪಿನಲ್ಲಿ ಲಕ್ಷ್ಮಿ ದೇವಸ್ಥಾನ ಎಂದು ಕರೆಯುವ ದೇವಸ್ಥಾನದಲ್ಲಿ ದೇವತಾ ಮೂರ್ತಿ ಎಂದು ಬುಕ್ಕರಾಯನ ಕಾಲದ ಶಾಸನವನ್ನು ಪೂಜೆಯನ್ನು ಮಾಡುತ್ತಿದ್ದರೆ ಇದಕ್ಕೆ ಗರ್ಭಗುಡಿ ಮತ್ತು ಅಂಕಣವನ್ನು ನಿರ್ಮಿಸಿದ್ದಾರೆ.

ನನ್ನ ಸಂಶೋಧನೆಯಿಂದ ಹೊಸದಾಗಿ ಕಂಡು ಕೊಡಂತಹ ಅಂಶಗಳೆಂದರೆ ಮಣ್ಣೆಯಲ್ಲಿನ ಕಪಿಲೇಶ್ವರ ದೇವಾಲಯದ ಮುಂಭಾಗದಲ್ಲಿನ ದ್ವಾರಪಾಲಕರು ಸುಮಾರು ೫ ಅಡಿ ಎತ್ತರವನ್ನು ಹೊಂದಿರುವುದನ್ನು ಕಾಣಬಹುದು. ಹಾಗೆಯೇ ಸೂಳೆಯರ ಗುಡಿಯ ಕಂಬಗಳ ಅಡಿಪಾಯಕ್ಕೆ ಸುಮಾರು ೪ ಅಡಿ ಎತ್ತರದ ಕಲ್ಲನ್ನು ಬಳಸಿರುವುದನ್ನು ಕಾಣಬಹುದು. ಮನೆ ಅಥವಾ ಕಟ್ಟಡವು ಸದೃಡವಾಗಿ ನಿಲ್ಲಲು ಹೇಗೆ ಅಡಿಪಾಯವನ್ನು ನಿರ್ಮಾಣ ಮಾಡುವ ಹಾಗೆ ದೇವಾಲಯದ ಕಂಬಗಳನ್ನು ಸದೃಡವಾಗಿ ನಿಲ್ಲಲು ೪ ಅಡಿಯ ಅಡಿಪಾಯವನ್ನು ಮಾಡಿರುವುದರಿಂದಲೇ ಇಂದು ಈ ದೇವಾಲಯದ ಗೋಡೆಗಳು ಬಿದ್ದಿದ್ದರು, ಸಹ ಕಂಬದ ಸಹಾಯದಿಂದ ಮೇಲ್ಛಾವಣಿ ಇನ್ನು ಸುಸ್ಥಿಯಲ್ಲಿರುವುದು ಆ ಕಾಲದ ತಾಂತ್ರಿಕತೆಯನ್ನು ತೋರಿಸುತ್ತದೆ.

ಅದು ಅಲ್ಲದೇ ಕ್ರಿ.ಶ.೯–೧೦ನೇ ಶತಮಾನದಲ್ಲಿ ಸ್ತ್ರೀಯರು ಬಳಸುತ್ತಿದ್ದ ಆಭರಣಗಳು ಮತ್ತು ವಸ್ತ್ರಗಳನ್ನು ಮಣ್ಣೆಯ ಕಪಿಲೇಶ್ವರ ದೇವಾಲಯದ ಗರ್ಭಗುಡಿಯ ಎಡಭಾಗದ ಗೋಡೆಗೆ ಹೊಂದಿಕೊಂಡಂತೆ ಇರುವ ಸ್ತ್ರೀ ಶಿಲ್ಪದಲ್ಲಿ ಮೊಲೆಕಟ್ಟು, ಕಂಚುಕವನ್ನು ಕಾಣಬಹುದು. ಅಕ್ಕತಂಗಿಯ ಗುಡಿಯು ಪಾಳು ಬಿದ್ದಿದ್ದು, ಗರ್ಭಗುಡಿ ಹೊರತು ಪಡಿಸಿದರೆ ಬೇರೆ ಭಾಗಗಳೂ ಉಳಿದಿಲ್ಲ, ಭಿತ್ತಿಯು ೮.೫ ಅಡಿ ಇರುವುದರಿಂದ ಬಹುಶಃ ಗರ್ಭಗುಡಿಯ ಮೇಲ್ಭಾದಲ್ಲಿ ಎತ್ತರವಾದ ಶಿಖರವನ್ನು ನಿರ್ಮಿಸಲು ಈ ಭಿತ್ತಿಯ ಗಾತ್ರವನ್ನು ಹೆಚ್ಚಿಸಿದ್ದಾರೆ.

ಒಟ್ಟಾರೆಯಾಗಿ ಜಿಲ್ಲೆಗೆ ತನ್ನದೇ ಆದ ವೈಶಿಷ್ಟ್ಯ, ಸ್ವತಂತ್ರ ಇತಿಹಾಸ ಸಂಸ್ಕ್ರತಿಯನ್ನು ಹೊಂದಿದೆ. ಜಿಲ್ಲೆಗೆ ಸಂಬಂಧಿಸಿದಂತೆ ಹಲವಾರು ದೃಷ್ಟಿಗಳಲ್ಲಿ ಅಧ್ಯಯನ ಮಾಡಬಹುದು. ರಾಜರು ನೀಡುವ ಆಜ್ಞೆಗಳನ್ನು, ದಾನ ಧರ್ಮಗಳನ್ನು ಜನ ಸಾಮಾನ್ಯರಿಗೆ ತಿಳಿಸಲು ಸುಲಭವಾಗಿದ್ದ ಮಾಧ್ಯಮವೆಂದರೆ ಶಾಸನಗಳು ಇದನ್ನು ಜನರಿಗೆ ತಿಳಿಸಲು ಊರಿನ ಮುಂದೆ, ಮಧ್ಯಭಾಗದಲ್ಲಿ ದೇವಸ್ಥಾನದ ಬಳಿ, ಕೆರೆಯ ಕೋಡಿ, ತೂಬುಗಳ ಬಳಿ ನೆಡುತ್ತಿದ್ದರಿಂದ ಎಲ್ಲರಿಗೂ ತಿಳಿಯುತ್ತಿತ್ತು. ಕೆಲವು ಸಂದರ್ಭದಲ್ಲಿ ಡಂಗೂರ ಹೊಡೆಸುತ್ತಿದ್ದರೂ ಅದು ಜಾಸ್ತಿ ಹೊತ್ತು ಇರುತ್ತಿರಲಿಲ್ಲ. ಶಾಸನಗಳು ಹಲವಾರು ಶತಮಾನಗಳ ಕಾಲದವರೆಗೂ ಇರುತ್ತಿತ್ತು. ಆದರೆ ಪೋರ್ಚುಗೀಸರು ಕಾಗದವನ್ನು ಪರಿಚಯಿಸಿದ ಮೇಲೆ ಶಿಲಾಶಾಸನಗಳ ಜಾಗದಲ್ಲಿ ಕೋರಿ ಕಾಗದ, ಬಟ್ಟೆ, ಚರ್ಮಗಳ ಬಳಕೆಗಳು ಪ್ರಾರಂಭವಾಯಿತು. ಹಾಗೂ ಬರೆಯಲು ಇನ್ನೊಬ್ಬರಿಗೆ ನೀಡಲು ಸಹಾಯವಾಗುತಿತ್ತು. ಸಂಗ್ರಹಿಸಲು ಸುಲಭವಾದ್ದರಿಂದ ಕಾಲಕ್ರಮೇಣ ಕಾಗದದ ಬಳಕೆಯು ಹೆಚ್ಚಾಗಿ ಶಾಸನಗಳ ಬಳಕೆ ನಿಂತು ಹೋಯಿತು ಎನ್ನಬಹುದು.

## ಅನುಬಂಧ – ೧

## ಕ್ಷೇತ್ರ ಕಾರ್ಯದಲ್ಲಿ ಪತ್ತೆಹಚ್ಚಲಾಗಿರುವ ಶಾಸನಗಳು

ಕ್ಷೇತ್ರ ಕಾರ್ಯಕ್ಕಾಗಿ ಗ್ರಾಮಗಳಿಗೆ ಬೇಟಿ ನೀಡಿದ್ದಾಗ ಕೆಲವು ಗ್ರಾಮಗಳಲ್ಲಿನ ಜನರು ಪ್ರೀತಿಯಿಂದ ಸಹಕರಿಸಿದರೆ ಮತ್ತೆ ಕೆಲವರು ಹೊಡೆಯುವ ಹಂತಕ್ಕೆ ಬಂದಿದ್ದಾರೆ. ಜೊತೆಗೆ ಬೈಗುಳಗಳನ್ನು ಕೇಳಿರೊ ಅನುಭವ ಆಗಿದೆ. ಯಾಕೆ ಇಂತಹ ವೈರುಧ್ಯಗಳನ್ನು ಕಾಣುತ್ತೇವೆ ಎಂದರೆ ಜಿಲ್ಲೆಯಲ್ಲಿ ಬಹುಪಾಲು ನಿಧಿಗಳ ಮತ್ತು ಸಂಪತ್ತಿನ ಆಸೆಗಾಗಿ ಪ್ರಾಚೀನವಾದ ಶಿಲಾ ಸ್ಮಾರಕಗಳನ್ನು ಕಳ್ಳರು ನಾಶ ಪಡಿಸುತ್ತಿರುವುದು ಹೆಚ್ಚಾಗಿ ನಡೆಯುತ್ತಿದೆ.

ಪ್ರಾಚೀನ ಪರಂಪರೆಯನ್ನು ಉಳಿಸುವ ಜವಾಬ್ದಾರಿ ಹೊತ್ತಿರುವ ಸ್ಥಳೀಯರಿಂದ ಹಿಡಿದು ಇಲಾಖೆಯವರೆಗಿನ ಬೇಜವಾಬ್ದಾರಿತನದಿಂದ ಇಂದು ನಾವು ಅಮೂಲ್ಯವಾದ ಪ್ರಾಚೀನ ಶಿಲ್ಪ, ಶಾಸನ, ಸ್ಮಾರಕಗಳನ್ನು ಕಳೆದುಕೊಳ್ಳುತ್ತಿದ್ದೇವೆ. ಸ್ಮಾರಕಕಲ್ಲುಗಳನ್ನು ಮನೆ ಕಟ್ಟುವ ಸಂದರ್ಭದಲ್ಲಿ ತಳಪಾದಿ ಕಲ್ಲುಗಳಾಗಿ, ಬಟ್ಟೆ ಹೊಗೆಯುವ ಕಲ್ಲುಗಳಾಗಿ, ದನದ ಕೊಟ್ಟಿಗೆಗೆ, ಮನೆಯ ಹೋಡೆಗಳಿಗೆ ಅಥವಾ ಬೇರಾವುದಾದರೂ ಕೆಲಸಕ್ಕೆ ಕಲ್ಲುಗಳು ಬೇಕಿದ್ದರೆ ಇವುಗಳನ್ನೇ ಹೊಡೆದು ಹಾಕಿಕೊಳ್ಳುವುದು ಒಂದು ಕಡೆಯಾದರೆ ಜೀರ್ಣೋದ್ಧಾರದ ಹೆಸರಿನಲ್ಲಿ ಪ್ರಾಚೀನವಾದ ದೇವಾಲಯಗಳ ಕಲ್ಲುಗಳನ್ನು ತಿಪ್ಪೆಗೆ ಎಸೆದು ಹೊಸ ಕಲ್ಲುಗಳಲ್ಲಿ ಜೀರ್ಣೋದ್ಧಾರ ಮಾಡುವುದೂ ಸಹ ನಡೆಯುತ್ತಿದೆ. ಹೀಗೆ ಹತ್ತು ಹಲವು ಕಾರಣಗಳಿಂದಾಗಿ ಪ್ರಾಚೀನ ಸಂಪತ್ತನ್ನು ಇಂದು ನಾವು ಕಳೆದುಕೊಳ್ಳುತ್ತೇವೆ. ಕೆಲವೊಂದು ಕಡೆ ಮೂಢನಂಬಿಗಳಿಂದ ಶಾಸನಗಳು ಸುರಕ್ಷಿತವಾಗಿದೆ ಎನ್ನಬಹುದು.

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೦೯ ಮತ್ತು ಅನುಬಂಧ ಹಾಗೂ ಮೈಸೂರು ಆರ್ಕಿಯಾಲಜಿ ವಾರ್ಷಿಕ ವರದಿಗಳಲ್ಲಿ ಅಥವಾ ಬೇರೆ ಯಾವುದೇ ಸಂಶೋಧನಾ ಕೃತಿಗಳಲ್ಲಿ ಅಥವಾ ಪತ್ರಿಕೆಗಳಲ್ಲಿ ಪ್ರಕಟವಾಗಿರದ ಹೊಸ ಶಾಸನಗಳಲ್ಲಿ ಸುಮಾರು ೧೭ ವೀರಗಲ್ಲು ಶಾಸನಗಳು ಮತ್ತು ೧೯ ಶಿಲಾಶಾಸನಗಳನ್ನು, ಸುಮಾರು ೩೦೦ಕ್ಕೂ ಹೆಚ್ಚು ಹೊಸ ಶಿಲ್ಪ ವೀರಗಲ್ಲುಗಳು, ವೀರಮಾಸ್ತಿಕಲ್ಲುಗಳು, ಆತ್ಮಬಲಿದಾನ, ಬೇಟೆವೀರಗಲ್ಲುಗಳನ್ನು ಪತ್ತೆ ಹಚ್ಚಲಾಗಿದೆ.

ದುಗ್ಗಮಾರನ ಆಳ್ವಿಕೆಯಲ್ಲಿ ಅಜ್ಜವರ್ಮ್ಮನು ಕಾಸರೂರಿಗೆ ಮುತ್ತಿ ಅದನ್ನು ನಾಶ ಮಾಡಿದನು ಎಂದು ಕ್ರಿ.ಶ.೭೮೦ ರ ಗಂಗವಾರದ ಶಾಸನದಲ್ಲಿ ಕಾಣಬಹುದು. ಈ ಗಂಗವಾರದಿಂದ ೩೮ ಕಿ.ಮೀ.

ದೂರದಲ್ಲಿ ಅಜ್ಜವಾರ ಎಂಬ ಗ್ರಾಮವಿದ್ದು ಈ ಗ್ರಾಮದ ಸುತ್ತಮುತ್ತ ಸುಮಾರು ೧೦–೧೫ ದೂರದಲ್ಲಿ ಅಜ್ಜವರ್ಮನ ಯಾವ ಶಾಸನಗಳು ದೊರೆತಿರಲಿಲ್ಲ ಆದರೆ ಈ ಗ್ರಾಮದ ಹೆಸರನ್ನ ಗಮನಿಸಿದಾಗೆಲ್ಲಾ ಗಂಗವಾರ ಶಾಸನದಲ್ಲಿ ಉಲ್ಲೇಖವಾಗಿರುವ ಅಜ್ಜವರ್ಮನ ಹೆಸರಲ್ಲಿ ನಿರ್ಮಾಣವಾಗಿ ಬಹುದಾ? ಎಂಬ ಅನುಮಾನ ಕಾಡುತ್ತಿತ್ತು. ಇದಕ್ಕೆ ಅಜ್ಜವರ್ಮ ಗ್ರಾಮದಿಂದ ೩ ಕಿ.ಮೀ. ದೂರದಲ್ಲಿನ ಮನ್ನಾರ್‌ಪುರ ಎಂಬ ಗ್ರಾಮದಲ್ಲಿ ಹುಣಸೆಮರಗಳ ಕೆಳಗೆ ಅಜ್ಜವರ್ಮ ಎಂಬುವನ ಆಡಳಿತಕ್ಕೆ ಒಳಪಟ್ಟ ಮಾಹಿತಿ ಸಿಕ್ಕಿರುವ ವೀರಗಲ್ಲನ್ನು ಶೋಧಿಸಲಾಯಿತ್ತು ಇದರಿಂದಾಗಿ ನನ್ನ ಅನುಮಾನ ನಿಜವಾಯಿತ್ತು. 'ಅಜ್ಜವರ್ಮ'ನ ನೆನಪಿಗಾಗಿ ಅಥವಾ 'ಅಜ್ಜವರ್ಮ'ನೇ ಈ ಗ್ರಾಮವನ್ನು ಸ್ಥಾಪಿಸಿರಬಹುದು ಎಂದು ತಿಳಿಯಬಹುದಾಗಿದೆ. ಜೊತೆಗೆ ದುಗ್ಗಮಾರನ ಅಧಿನದಲ್ಲಿದ್ದ ಅಜ್ಜವರ್ಮನನ್ನು ಈ ಶಾಸನದಲ್ಲಿ 'ಅಜ್ಜವರ್ಮ್ಮರಸ' ಎಂದು ಉಲ್ಲೇಖಿಸುತ್ತದೆ. ಬಹುಶಃ ಈ ವೇಳೇಗಾಗಲೆ ದುಗ್ಗಮಾರ ಮರಣಿಸಿರಬಹುದು ಇದರಿಂದಾಗಿ ದುಗ್ಗಮಾರನ ಪ್ರದೇಶಗಳಿಗೆಲ್ಲ ಅಜ್ಜವರ್ಮನು ಅರಸನಾಗಿರಬೇಕು? ಈ ಶಾಸನದ (**ಚಿತ್ರ ಸಂಖ್ಯೆ–೮೫**) ಇದರ ಪಾಠವೆಂದರೆ

೧. ಸ್ವಸ್ತಿಶ್ರೀ ಅಜ್ಜವರ್ಮರಸ ಊರಾ[ಳೆ] ಮ
೨. ರಕುರ ಮಡಾಪಮ್
೩. ವಿಣ್ದು ಮಜ್ಜಲ
೪. ಸತ್ತೊ ಗಜ್ಗ[ವ]ಟಿಕ
೫. ಕಣ್ದುಕ ವೆದೆ ಕಟನಿ
೬. ನೆತ್ತಪಟ್ಟಿ ಕೊಟಾ[ಂ]? ?
೭. ಅದನಟಿವೊನ್
೮. ಪಞ್ಚ ಮಹಾ
೯. ಪಾತಕನಕ್ಕುಮ್.

ಸಾರಾಂಶ :– ಅಜ್ಜವರ್ಮರಸ ಊರಳಿವಿನಲ್ಲಿ ಮರಕುರ ಮಡಪ ಎನ್ನುವವನು ವಿಣ್ದುಮಂಗಲದಲ್ಲಿ ಸತ್ತ. ಅವನಿಗೆ ಗಂಗವಟಿಕದಲ್ಲಿ ಕಣ್ದುಗ ಗದ್ದೆ ಕಳನಿ ನೆತ್ತರಕೊಡಿಗೆ ಕೊಟ್ಟರು. ಇದನ್ನಳಿಯುವವನು ಪಂಚ ಮಹಾ ಪಾತಕಕ್ಕೆ ಗುರಿಯಾಗುವನು. ಈ ಶಾಸನದ ಭಾಷೆ ಹಾಗೂ ಲಿಪಿಯ ಆಧಾರದ ಮೇಲೆ ಬಹುಶಃ ಸುಮಾರು ಎಂಟು–ಒಂಭತ್ತನೇ ಶತಮಾನಕ್ಕೆ ಸೇರಿಸಬಹುದೆಂದು ಊಹಿಸಬಹುದು.

ಶಾಸನದ ವೀರನಿಗೆ ಹೊಟ್ಟೆ ಭಾಗಕ್ಕೆ ಮತ್ತು ಎದೆ ಭಾಗಕ್ಕೆ ಎರಡು ಬಾಣ ಚುಚ್ಚಿದ್ದು ಒಂದು ಕೈಯಲ್ಲಿ ಬಿಲ್ಲನ್ನು ಮತ್ತೊಂದು ಕೈಯಲ್ಲಿ ಚಿಕ್ಕ ಕತ್ತಿಯನ್ನು ಹಿಡಿದಿದ್ದಾನೆ. ಈ ಶಾಸನ ಶಿಲ್ಪವನ್ನು ಕೆತ್ತಿರುವ ಶಿಲ್ಪಿ ಬಹುಶಃ ನುರಿತ ಶಿಲ್ಪಿ ಅಲ್ಲ ಆದರೆ ಉತ್ತಮ ರಚನೆಕಾರ ಎಂಬುದು ಶಾಸನದ ಶಿಲ್ಪ ಮತ್ತು ಲಿಪಿಯಿಂದ ಗೊತ್ತಾಗುತ್ತದೆ. (ಈ ಶಾಸನವನ್ನು ನಾನು, ವಿಜಯಕುಮಾರ್.ಎಸ್. ರವರೊಂದಿಗೆ ಸೇರಿ ಶೋಧಿಸಲಾಯಿತ್ತು. ಶಾಸನ ಪಾಠವನ್ನ ಪ್ರೋ.ಕೆ.ಆರ್.ನರಸಿಂಹನ್ ಸಾರ್ ರವರು ಸಿದ್ಧ ಮಾಡಿ ಕೊಟ್ಟಿದ್ದಾರೆ.)

ಈ ಶಾಸನದ ಪಕ್ಕದಲ್ಲಿರುವ ಇನ್ನೊಂದು ಶಿಲಾಶಾಸನ ನೊಳಂಬರ ಮತ್ತು ಚೋಳರ ಸಂಮ್ಮಿಲನಕ್ಕೆ ಸಾಕ್ಷಿಯಾದ ಈ ಶಾಸನದಲ್ಲಿ ಒಟ್ಟು ೧೪ ಸಾಲುಗಳಿದ್ದು ಶಾಸನದ ಮುಂದೆ ಹುಣಸೆಮರ ಬೆಳೆದಿರುವುದರಿಂದ **(ಚಿತ್ರ ಸಂಖ್ಯೆ–೮೬)** ಶಾಸನ ಓದಲು ಸ್ವಲ್ಪ ಕಷ್ಟಕರವಾಗಿದೆ. ಆದರೂ ಶಾಸನದ ಕೆಲವು ಸಾಲುಗಳು :–

೧. ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಪ

೨. ಲ್ಲವಾನ್ವಯ ಶ್ರೀ ಪೃಥ್ವೀ ರಾಜ್ಯ . . ಪಲ್ಲ

೩. ವ ಕೊಲ ತಿಲಕ [ಮೇ]ಕ ವಾಕ್ಯ ಕಂ . [ಚಿ]?

೪. ಪುರವರಾಧೀಶ್ವರ ಶ್ರೀಮನ್ ನೊಟಿಂಬಾಧಿರಾಜ . .

೫. ಳನ ಮಗ ದಾಟಿ . . ಪುಲಿನಾಡೊಳಗಣ

೬. ಸರಯ ಬೀಡಿನಲಿ ಕ ಸಕ ವರಿಷ ೯[೨] ೯ನೆಯ

೭. ಪ್ಲವಂಗ ಸಂವತ್ಸರದ ಕಾತ್ರಿಕ ಮಾಸದ ಬಹುಳ ನ

೮. ವಮಿ ಬುದವಾರ ದೊಟಿನ . ಖು ...

೯. . ತ .... ನಾಯಕ ಮಾನವಮಾ (ಮುಂದೆ ಅಸ್ಪಷ್ಟವಾಗಿದೆ)

ಸಾರಾಂಶ :– ಈ ಶಾಸನ ಸಕ ವರುಷ ೯[೨]೯ ಅಥವಾ ೯[೭]೯ ಎಂಬುದು ಸ್ಪಷ್ಟವಾಗಿ ತಿಳಿಯದಾಗಿದೆ. ಭಾಷೆ ಹಳಗನ್ನಡ ಭಾಷೆಯಾಗಿದ್ದು ಲಿಪಿಯೂ ಹಳಗನ್ನಡ ಲಿಪಿಯಾಗಿದೆ. ಪಲ್ಲವರಸರ ಬಿರುದುಗಳನ್ನು ಕಾಣಬಹುದು. ನೊಳಂಬಾಧಿರಾಜನ ಮಗನ ಆಳ್ವಿಕೆಯಲ್ಲಿ ದಾನ ನೀಡಿರುವ ಉಲ್ಲೇಖವಿದೆ.

ಮುತ್ತೂರು ಎಂಬ ಗ್ರಾಮದಲ್ಲಿಯೂ ನೊಳಂಬನ ಕಾಲದ ವೀರಗಲ್ಲು ಒಂದು ಸಿಕ್ಕಿದ್ದು ಕೇವಲ ಮೇಲ್ಭಾಗದಲ್ಲಿ ಶಾಸನದ ನಾಲ್ಕು ಸಾಲುಗಳು (**ಚಿತ್ರ ಸಂಖ್ಯೆ-೮೭**) ಕಾಣುತ್ತಿದ್ದು ಉಳಿದ ವೀರಗಲ್ಲು ಪೂರ್ತಿಯಾಗಿ ಮಣ್ಣಲ್ಲಿ ಮುಚ್ಚಿಹೋಗಿದೆ. ಈ ನಾಲ್ಕು ಸಾಲಿನ ಶಾಸನದ ಪಾಠವೂ ಅಸ್ಪಷ್ಟವಾಗಿದ್ದು ಅದು ಹೀಗಿದೆ.

೧. ಸ್ವಸ್ತಿ ಸಮಧಿಗಥ

೨. ಪಞ್ಚ ಮಹಾ ಶಬ್ದ ಪಲ್ಲವಾನ್ವ

೩. ಯ ಶ್ರೀಮತ್... ಲ್ಲವ ನೊಟಂ

೪. ಬಾಧಿರಾಜ ಪೃಥವಿರಾಜ್ಯಂಗೆಯ ಸಿ .. (ಮುಂದೆ ಕಾಣಿಸುತ್ತಿಲ್ಲ)

ನೊಳಂಬರ ಕಾಲದ ಈ ಶಾಸನದಲ್ಲಿ ಹಳಗನ್ನಡ ಅಕ್ಷರಗಳ ಬಳಕೆಯಾಗಿದ್ದು, ಶಾಸನ ತೃಟಿತವಾಗಿರುವುದರಿಂದ ಕಾಲವನ್ನು ನಿರ್ಧರಿಸುವುದು ಕಷ್ಟಸಾಧ್ಯವಾಗಿದೆ. (ಈ ಶಾಸನವನ್ನ ನಾನು ಮತ್ತು ವಿಜಯಕುಮಾರ್.ಎಸ್.ರವರೊಂದಿಗೆ ಶೋಧಿಸಲಾಗಿದೆ.)

ಮಲ್ಲಿಶೆಟ್ಟಿಪುರದಲ್ಲಿ ವಿಜಯನಗರ ಕಾಲದ ಸುಮಾರು ೩ ಅಡಿ ಎತ್ತರವಿರುವ ವಿಜಯನಗರ ಕಾಲದ ಶಾಸನ ೮ ಸಾಲನ್ನು ಹೊಂದಿದ್ದು, ಕ್ರಿ.ಶ.೧೫೮೪ಕ್ಕೆ ಸರಿಹೊಂದುತ್ತದೆ. ಶಾಸನದ ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಮಧ್ಯದಲ್ಲಿ ಶಂಖ ಚಕ್ರವನ್ನು ಬಿಡಿಸಲಾಗಿದೆ. ಕನ್ನಡ ಲಿಪಿಯಾದರೂ ತೆಲುಗು ಭಾಷೆಯನ್ನು (**ಚಿತ್ರ ಸಂಖ್ಯೆ-೮೮**) ಈ ಶಾಸನ ಒಳಗೊಂಡಿದೆ. ಶಾಸನದ ಪಾಠ

೧. ಸ್ವಸ್ತಿಶ್ರೀ ವಿಜಯಾದ್ಬು

೨. ದಯ ಶಾಲಿವಾಹನ ಶ

೩. ಕ ವರ್ಷಂಬುಲು ೧೫೦೬ ಆಗು ನೇಟಿ ಸ್ವಭಾನು ಸ

೪. ಂವತ್ಸರ ಪಾಲ್ಗುಣ ಬ ೨ ಲು ಶ್ರೀಮತು ಸ್ವಸ್ತಿ ಚೆನ್ನಪ ನಾ

೫. ಯನಿ ಕ್ರಿಷ್ಣಪಗಾರು ತಿನಲ ರೆಂಟಿ ತಿರುಮಲ

೬. ಯಕು ಆಲಂಬಗಿರಿ ವೆಂಕಟಾದ್ರಿಕಿ ಪುಣ್ಯ

೭. ಂಗಾನೋ ರಾ[ಗಿ] ಚೆನು ಭಾಗವತ ಮಾನ್ಯ ದಾರ

೮. ಡಿಸ್ತಿಮಿ.

ಸಾರಂಶ :– ಶಾಲಿವಾಹನ ಶಕ ೧೫೦೬ (೧೫೮೪) ರ ಸ್ವಭಾನು ಸಂವತ್ಸರದ ಫಾಲ್ಗುಣ ಬಹುಳ ದ್ವಿತೀಯದಲ್ಲಿ ಚಿನ್ನಪ್ಪನಾಯಕನ [ಮಗ] ಕೃಷ್ಣಪ್ಪನು ತಿನಲರೆಂಟಿ ತಿರುಮಲಯ್ಯನವರಿಗೆ ಆಲಂಬಗಿರಿ ವೆಂಕಟಾದ್ರಿಗೆ (ವೆಂಕಟೇಶ್ವರಸ್ವಾಮಿ – ತಿರುವೆಂಗಳನಾಥ) ಪುಣ್ಯವಾಗಲೆಂದು ರಾಗಿ ಹೊಲವನ್ನು ಭಾಗವತ ಮಾನ್ಯವಾಗಿ ನೀಡುತ್ತಿದ್ದೇವೆ ಎಂಬುದಾಗಿದೆ. ಈ ಶಾಸನದಲ್ಲಿ ಹೇಳಲಾಗಿರುವ ಆಲಂಬಗಿರಿಯು ಸಮೀಪದಲ್ಲಿನ ಐತಿಹಾಸಿಕ ಪುಣ್ಯಕ್ಷೇತ್ರವಾಗಿದ್ದು, ಈ ಕ್ಷೇತ್ರದ ದೇವರಿಗೆ ಕೃಷ್ಣದೇವರಾಯ, ಅಚ್ಯುತರಾಯ, ಮರಾಠವಂಶದ ಸಾಂಭಾಜಿಯ ಆಡಳಿತದಲ್ಲೂ ದೇವರ ಸೇವೆಗಳಿಗೆ ದಾನ ದತ್ತಿಗಳನ್ನು ನೀಡಿದ್ದಾರೆ. ಶಾಸನದಲ್ಲಿ ಉಲ್ಲೇಖವಾಗಿರುವ ಚಿನ್ನಪ್ಪನಾಯಕನು ಆಲಂಬಗಿರಿಯ ತಿರುವೆಂಗಳನಾಥನ ಪರಮ ಭಕ್ತನಾಗಿದ್ದಾನೆ.

ಬೆಂಗಳೂರು ಉತ್ತರ ತಾಲ್ಲೂಕಿನ ಕಾಳತಮ್ಮನಹಳ್ಳಿಯಲ್ಲಿ ದಿನಾಂಕ ೦೫/೦೬/೨೦೨೦ ರಂದು ಅಶ್ವತ್ಥಕಟ್ಟೆಯಲ್ಲಿ ಅರ್ಧಭಾಗ ಮುಚ್ಚುಹೋಗಿದ್ದ ಪೂರ್ಣ ಶಿಲಾಶಾಸನವನ್ನು ಹೊರ ತೆಗೆದು ಅದರ ಪಾಠವನ್ನು ಸಿದ್ಧಪಡಿಸಲಾಗಿತ್ತು. ೭ ಅಡಿ ಎತ್ತರದ, ೨ ಅಡಿ ಅಗಲದ ಶಿಲಾಶಾಸನದ ಮೇಲ್ಭಾಗದಲ್ಲಿ ಶಿರಸ್ತ್ರಾಣಧಾರಿಯಾಗಿ, ಶಸ್ತ್ರಾಸ್ತ್ರ ಹಿಡಿದು ವೀರನು ಕುದುರೆಯ ಮೇಲೆ ಕುಳಿತಿರುವ ರೇಖಾಚಿತ್ರವನ್ನು ಬಿಡಿಸಲಾಗಿದೆ. ಮುಂಭಾಗದಲ್ಲಿ ಛತ್ರಿಯನ್ನು ಹಿಡಿಯಲಾಗಿದೆ. ಅದರ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು (**ಚಿತ್ರ ಸಂಖ್ಯೆ–೮೯**) ಕೆತ್ತಲಾಗಿದೆ. ಈ ಶಾಸನದ ಪಾಠ :–

೧. ವಿರೋದಿಕೃತ

೨. ಸಂವತ್ಸರದ ಚೈ

೩. ಯಿತ ಬ (ಬು) ೧೦ ದಿವ

೪. ಸ ಬೆಂಗಳೂರು ಕೊ

೫. ಟೆ ವಳಗೆ ಕಂಡದ

೬. ಡಿದಕೆ ಬಹದರ ಖಾ

೭. ನ (ಹ) ವರಿಗೆ ಕಳತಮ

೮. ನಹಳಿ ರತಕೊಡಗೆ.

ಶಾಸನದ ಸಾರಾಂಶ :– ವಿರೋಧಿಕೃತ ಸಂವತ್ಸರದ ಚೈತ್ರ ಬ ೧೦ ದಿವಸದಲ್ಲಿ ಅಂದರೆ ೨೭/೦೪/೧೭೯೧ ಕ್ಕೆ ಸರಿಹೊಂದುವ ದಿನಾಂಕ ದಿನ ಬಹದೂರ ಖಾನನವರಿಗೆ ರಕ್ತಕೊಡುಗೆಯಾಗಿ

ಕಳತಮನಹಳಿಯನ್ನು ಕೊಡುಗೆಯಾಗಿ ಕೊಟ್ಟ ವಿವರದ ಈ ಶಾಸನದಲ್ಲಿ ಉಲ್ಲೇಕವಾಗಿರುವ ಕಳತಮನಹಳಿಯು ಇಂದು ಕಾಳತಮ್ಮನಹಳ್ಳಿಯಾಗಿದೆ. ಬಹು ಮುಖ್ಯವಾಗಿ ಶಾಸನದಲ್ಲಿನ ವೀರನಾದ ಬಹುದೂರ ಖಾನ ಯಾರೆಂದು ಹುಡುಕಿದಾಗ ಮೂರನೇ ಆಂಗ್ಲೊ–ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಬೆಂಗಳೂರು ಕೋಟೆಯ ಕಿಲ್ಲೆದಾರನಾಗಿ ಬಹುದ್ದೂರ್ ಖಾನನನ್ನು ನೇಮಿಸಿದನು. ೧೭೯೧ ರಲ್ಲಿ ಮಾರ್ಚ್‌ನಲ್ಲಿ ಬ್ರಿಟಿಷರು ಬೆಂಗಳೂರಿನ ಕೋಟೆ ಮೇಲೆ ಆಕ್ರಮಣ ಮಾಡಿದಾಗ ೨೦ ದಿನಗಳ ಕಾಲ ಕೋಟೆಯನ್ನು ರಕ್ಷಿಸಿ, ೨೧ನೇ ದಿನ ಅಂದರೆ ಮಾರ್ಚ್ ೨೦, ೧೭೯೧ರಲ್ಲಿ ಹುತಾತ್ಮನಾದ ಬಹುದ್ದೂರ್ ಖಾನನಿಗೆ ಮಡಿದ ೩೭ ದಿವಸಗಳ ನಂತರ ರಕ್ತಕೊಡುಗೆಯಾಗಿ ಈ ಕಾಳತಮ್ಮನಹಳ್ಳಿಯನ್ನು ನೀಡಿದ್ದಾರೆ. ಬಹುಶಃ ಟಿಪ್ಪು ಸುಲ್ತಾನನೇ ನೀಡಿರಬಹುದು. ಮತ್ತು ಈ ಯುದ್ಧದಲ್ಲಿ ಮೊದಲ ಬಾರಿಗೆ ರಾಕೆಟ್ ಮದ್ದಿನ ಅಸ್ತ್ರಗಳ ಪ್ರಯೋಗವನ್ನು ಬೆಂಗಳೂರುನಲ್ಲೆ ಮಾಡಲಾಯಿತ್ತು. (ಈ ಶಾಸನವನ್ನು ನಾನು ಮತ್ತು ಕೆ.ಧನಪಾಲ್‌ರವರು ಜೊತೆಯಾಗಿ ಶೋಧಿಸಲಾಯಿತ್ತು. ಹಾಗೂ ಪಿ.ವಿ.ಕೃಷ್ಣಮೂರ್ತಿ, ಪ್ರೋ.ಕೆ.ಆರ್.ನರಸಿಂಹನ್ ಸಾರ್ ಕರೆ ಮುಖಾಂತರ ಕೆಲವು ಸಾಲುಗಳ ಲಿಪಿಯನ್ನು ತಿಳಿಸಿದ್ದರು.)

ತುಮಕೂರು ಜಿಲ್ಲೆಯ ಹೊನ್ನೇನಹಳ್ಳಿಯಲ್ಲಿ ದಿನಾಂಕ ೨೪/೦೨/೨೦೨೦ ರಂದು ಸುಮಾರು ೬ ಅಡಿ ಎತ್ತರ ಮತ್ತು ೩ ೧/೨ ಅಡಿ ಅಗಲದ ೧೩ ಸಾಲುಗಳ ಕೃಷ್ಣದೇವರಾಯನ ಉಲ್ಲೇಖವಿರುವ ಶಾಸನವನ್ನು ಶೋಧಿಸಲಾಯಿತ್ತು. **(ಚಿತ್ರ ಸಂಖ್ಯೆ–೯೦)** ಈ ಶಾಸನದ ಪಾಠ :–

೧. ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭುದಯ ಸಾಲಿ

೨. ವಾಹನ ಶಕ ವರುಷ ೧೪೫೨ ವಿರೋಧಿ ಸಂವತ್ಸರ

೩. ಕಾರ್ತಿಕ ಬ ೧೫ ಲು .. ಮಹಾರಾಜ ಮಥವಿರಾ

೪. ಜಧಿರಾಜ ರಾಜ ಪರಮೇಶ್ವರ .......

೫. ವೀರ ಕೃಷ್ಣರಾಯ ಮಹಾರಾಯರೂ ....

೬. ಯ.. ಸಮಯ .............

೭. ಜದ ಚನ್ದ ............

೮. .............................ಹೊಂನೆನಹಳಿ

೯. ಗ್ರಾಮವನ್ನು ತುಮಕೂರ ಸೀಮೆಯ ಗ್ರಾಮ ಪ್ರಜೆಗಳು..

೧೦. ...........ಅವರ ಕಾರ್ಯಕ್ಕೆ ಕರ್ಥರಾದ.

೧೧. .......ಪ್ರಮುಖರ ...

೧೨. ............................................

೧೩. ಹಾ. ಸ್ವಾಮಿಯ ಪುಜಾ ಪು....

ಈ ಶಾಸನದ ಮೇಲ್ಭಾಗದಲ್ಲಿ ಅಂಜನೇಯನ ಉಬ್ಬು ಶಿಲ್ಪವಿರುವುದಿಂದ ಕೆಳಭಾಗವನ್ನು ಸಿಮೆಂಟ್ ಕಟ್ಟೆ ಕಟ್ಟಿ ಗ್ರಾನೈಟ್ ಕಲ್ಲುನ್ನ ಹಾಕಲಾಗಿದೆ. ಇದರಿಂದಾಗಿ ಪೂರ್ಣ ಪಾಠ ಸಿಗಲಿಲ್ಲ. ಈ ಶಾಸನದ ಕಾಲದ ಕಾಲವನ್ನು ನೋಡಿದ್ದರೆ ೧೫೨೯-೩೦ ಬರುತ್ತಿದ್ದು ಕೃಷ್ಣದೇವರಾಯ ಬದುಕಿದ್ದಾಗ ಹಾಕಿಸಿದ ಶಾಸನವೇ ಇಲ್ಲ ಮರಣಿಸಿದ ಮೇಲೆ ಹಾಕಲಾಯಿತಿ ಅನ್ನೊ ಅನುಮಾನಗಳಿವೆ. ಇದರ ಬಗ್ಗೆ ಇನ್ನಷ್ಟು ಸಂಶೋಧನೆ ಮಾಡಿ ನಿಖರವಾದ ಮಾಹಿತಿಯನ್ನು ತಿಳಿಸುತ್ತೇನೆ. (ಈ ಶಾಸನದ ಬಗ್ಗೆ ಕಮಲನಾಯಕನ ತಾಂಡದ ಶಶಿಕುಮಾರ ನಾಯಕರವರು ಮಾಹಿತಿ ನೀಡಿದ್ದರು. ಕೆ.ಧನಪಾಲ್, ಸ್ಥಳಿಯರಾದ ಹಿರಿಯೂರಿನ ಯೋಗೇಶ ದೇಗುಲದ ಪೂಜಾರಿ, ಸಿನಿಮ ನಟಿ ಮಂಜುಳರವರ ಸಂಬಂಧಿಯಾದ ಪರಮೇಶ್ವರರವರು ಸಂಪೂರ್ಣ ಸಹಕಾರ ನೀಡಿದ್ದರು. ಈ ಶಾಸನದ ಎದುರಿಗೆ ೮೦ ಮೀಟರ್ ಹಂತರದಲ್ಲಿ ಮಂಜುಳರವರು ನಿರ್ಮಿಸಿದ ಈಶ್ವರನ ಗುಡಿ ಇದೆ. ಕರೆ ಮುಖಾಂತರ ಲಿಪಿ ಬಗ್ಗೆ ಇದ್ದ ಅನುಮಾನಗಳನ್ನು ದೂರವಾಗಿಸಲು ಪ್ರೋ.ಕೆ.ಆರ್.ನರಸಿಂಹನ್ ಸಾರ್‌ರವರು ಸಹಾಯ ಮಾಡಿದ್ದರು.)

ದಾಬಸ್‌ಪೇಟೆಯಿಂದ ಮಧುಗಿರಿ ಹೋಗುವ ರಸ್ತೆಯಲ್ಲಿ ೪ ಕಿ.ಮೀ. ದೂರದಲ್ಲಿ ನರಸಪುರದ ತೋಪಿನ ದೇವಾಲಯದ ರಥದ ಗಾಲಿ ಮೇಲೆ **(ಚಿತ್ರ ಸಂಖ್ಯೆ-೯೧)** **"**ಶಿವಗಂಗೆ ಗಂಗಾಧರೇಶ್ವರ ಸ್ವಾಮಿಗೆ ಶಿವಗಂಗೆಯ ಸಿದ್ಧಲಿಂಗಪ್ಪನ ಮಗ ಲಿಂಣನ ಸೇವೆ ೧೮೯೭ ಇಸವಿ**"** ಎಂಬ ಶಾಸನವಿದೆ.

ಬೇಗೂರಿನ ಯುದ್ಧ ವೀರಗಲ್ಲಿಗೆ ಸರಿ ಸಮನಾದ ೫ ಅಡಿ ಎತ್ತರ ಮತ್ತು ಅಗಲವಿರುವ ರಣಸಂಗ್ರಾಮದ ಶಿಲೆಯನ್ನು ವೆಂಕಟಗಿರಿಕೋಟೆಯಲ್ಲಿ **(ಚಿತ್ರ ಸಂಖ್ಯೆ-೯೨)** ಶೋಧಿಸಲಾಯಿತ್ತು. ಈ ಶಾಸನದ ಪಾಠ :-

೧. ಅಣೂಮನಗಣ್ಣ ಸಾತನೆಣೆಪಿರ್ವೆರಡೆ...ಸಿಮೆ(?).....

೨. ದೊಂಗಲೆ ಕಾದಾಡೆ ದೊ...ದು.ದಯ(?)

೩. ಣೆಗಟ್ಟಿಜಿಲ್ವಡೆ ಪಡ.ಡೆ.ರಣ

೪. ಗೋಟಕಂಗಳಂ(?) .....ಡೆ..ದೆ.

೫. ನ್ದನಱದಂ ತಱ ಸನ್ದೆ..ಮೆಚ್ಚೆ...

ಸಾರಂಶ :- ಅಣುಮಗಂಡ ಬಿರುದಾಂಕಿತನಾದ ಸಾತ ಎಂಬುವ ವೀರನು ಕುದುರೆಯ ಕಾಳಗದಲ್ಲಿ ಮರಣಿಸಿದ ಉಲ್ಲೇಖವನ್ನು ಕಾಣಬಹುದು. ಶಿಲ್ಪದ ವಿವರಣೆಯನ್ನು ಹೇಳುವುದಾದರೆ ಬೇಗೂರಿನ ಶಾಸನ ವೀರಗಲ್ಲು, ಕೋಲಾರದ ದೇವಾಲಯದ ಶಿಲ್ಪ ವೀರಗಲ್ಲು, ನಂಬಿಹಳ್ಳಿಯ ಶಿಲ್ಪ ವೀರಗಲ್ಲು ಈ ನಾಲ್ಕು ವೀರಗಲ್ಲುಗಳನ್ನು ತೌಲನಿಕವಾಗಿ ನೋಡಬಹುದು. ಯುದ್ಧದ ಸನ್ನಿವೇಶವನ್ನು ವಿವರಿಸುವ ಅದ್ಭುತ ಕೊಡುಗೆ ಎಂದು ಹೇಳಬಹುದು. ಶಿಲ್ಪದಲ್ಲಿ ಶಿಲ್ಪಿಯು ಯುದ್ಧದಲ್ಲಿನ ವಾಸ್ತವ ಅಂಶಗಳ ಜೊತೆಗೆ ಯುದ್ಧ ನಂತರ ನೆಡೆಯುವ ಕೆಲವೊಂದು ಕಲ್ಪನೆಯ ಚಿತ್ರವನ್ನು ಮೂಡಿಸಿದ್ದಾನೆ. ಮನುಷ್ಯರು, ಪ್ರಾಣಿ ಪಕ್ಷಿಗಳು, ಎರಡು ಪ್ರೇತಗಳಿರುವುದನ್ನು ಕಾಣಬಹುದು. ಎಡಭಾಗದಲ್ಲಿ ಸದೃಢವಾಗಿರುವ ಕುದುರೆಯ ಮೇಲೆ ಎಡಗೈಯಲ್ಲಿ ಕುದುರೆಯ ಲಗಾಮು ಹಾಗೂ ಬಲಗೈಯಲ್ಲಿ ಖಡ್ಗವನ್ನು ಹಿಡಿದು ಕುಳಿತಿರುವ ಎರಡು ಕುದುರೆಗಳ ವೀರನ ಚಿತ್ರಣವಿದೆ. ಇವನ ಮುಂದೆ ಐದು ಜನ ವೀರರು ಬಲಗೈಯಲ್ಲಿ ಕತ್ತಿ ರೀತಿಯ ಆಯುಧವನ್ನು, ಎಡಗೈಯಲ್ಲಿ ಆಯತಾಕಾರದ ಗುರಾಣಿಯನ್ನು ಹಿಡಿದಿದು ಹೋರಾಡುತ್ತಿರುವ ಚಿತ್ರಣವನ್ನು ಕಾಣಬಹುದು. ಇಲ್ಲಿನ ಎದುರಾಳಿ ಶತ್ರುಗಳ ಭಾಗದಲ್ಲಿ ಆನೆಯ ಮೇಲೆ ಮಾವುತ ಮತ್ತು ಅರಸನು ಕುಳಿತಿದ್ದು, ಆನೆಯ ಹಿಂದೆ ಒಬ್ಬ ವ್ಯಕ್ತಿಯು ರಾಜಛತ್ರಿಯನ್ನ ಹಿಡಿದಿರುತ್ತಾನೆ. ಹಲವಾರು ವೀರರು ಕತ್ತಿ ಮತ್ತು ಗುರಾಣಿಯನ್ನು ಹಿಡಿದು ಹೋರಾಡುತ್ತಿದ್ದರೆ ಹಲವರ ರುಂಡ ಮುಂಡಗಳು ಕತ್ತರಿಸಿ ಬಿದ್ದಿವೆ. ಇಲ್ಲಿ ನಾಯಿಯು ಹೆಣವನ್ನು ಬಾಯಿಯಿಂದ ಕಚ್ಚಿಕೊಳ್ಳುತ್ತಿರುವುದು. ಯುದ್ಧರಂಗದ ಭೀಭತ್ಸಕ್ಕೆ ಈ ದೃಶ್ಯ ಕನ್ನಡಿಯಂತಿದೆ. ಎಡಭಾಗದಲ್ಲಿ ಬೇತಾಳಗಳು ಬಹುಶಃ ರಕ್ತ ಕುಡಿಯುತ್ತಿರುವಂತೆ ತೋರಿಸಲಾಗಿದೆ. ಆ ಈ ಅಂಶಗಳು ಶಿಲ್ಪಿಯ ಕಲ್ಪನೆಯ ವಿಷಯವಾಗಿದ್ದು ರಣರಂಗದ ಭೀಕರತೆಯನ್ನು ಮತ್ತಷ್ಟು ಹೆಚ್ಚಿಸಲು ಈ ರೀತಿಯ ಶಿಲ್ಪಗಳನ್ನು ಕೆತ್ತಿದ್ದಾನೆ. ಶಿಲ್ಪವು ಸವೆದಿರುವುದರಿಂದ ಕೆಳಭಾಗದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ವೀರನು ಯುದ್ಧದಲ್ಲಿ ವೀರಮರಣವನ್ನಪ್ಪಿರುವುದನ್ನು ತೋರಿಸಲು ಅವನು ಸ್ವರ್ಗದಲ್ಲಿ ಪೀಠದ ಮೇಲೆ ಸರ್ವಾಭರಣ ಭೂಷಿತನಾಗಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಇವನು ತನ್ನ ಎಡಗೈಯನ್ನು ಮಂಡಿಯ ಮೇಲೆ ಇಳಿಬಿಟ್ಟಿದ್ದು, ಬಲಗೈಯಲ್ಲಿ ಗಿಣಿಯಿದ್ದು ಅದರೊಂದಿಗೆ ಸಂಭಾಷಣೆಯನ್ನು ನಡೆಸುತ್ತಿರುವಂತಿದೆ ಅಪ್ಸರೆಯರು ಇವನಿಗೆ ಚಾಮರ ಸೇವೆಯನ್ನು ಮಾಡುತ್ತಿದ್ದಾರೆ.

ದೇವರಕೊಂಡ ರೆಡ್ಡಿ ಮತ್ತು ಪಿ.ವಿಕೃಷ್ಣಮೂರ್ತಿ, ಶೇಷಶಾಸ್ತ್ರಿರವರು ಬೇಗೂರಿನ ಮತ್ತು ವೆಂಕಟಗಿರಿಕೋಟೆಯ ಈ ಎರಡು ವೀರಗಲ್ಲುಗಳನ್ನು ಒಬ್ಬನೇ ಶಿಲ್ಪಿ ಕೆತ್ತಿರಬೇಕು ಎಂದು ಲಿಪಿ ಮತ್ತು ಶಿಲ್ಪದ ಆಧಾರವಾಗಿ ಹೇಳಿದ್ದಾರೆ. (ಈ ಕಲ್ಲಿನ ಬಗ್ಗೆ ಗುರುಸಿದ್ದಯ್ಯರವರು ಮಾಹಿತಿ ನೀಡಿದ್ದರು. ಲಿಪಿ ಅಧ್ಯನಯಕ್ಕೆ ಪ್ರೋ.ಕೆ.ಆರ್.ನರಸಿಂಹನ್, ದೇವರಕೊಂಡರೆಡ್ಡಿ ಸಾರ್‌ರವರು ಸಹಾಯ ಮಾಡಿದ್ದರು. ನನ್ನ ಜೊತೆಗೆ ಕೆ.ಧನಪಾಲ್, ಗೋಪಾಲಗೌಡ ಕಲ್ವಮಂಜರಿರವರು ಇದ್ದರು.)

ಈ ವೀರಗಲ್ಲಿನ ಕೆಳಗೆ ಬಿದ್ದಿರುವ ತುಂಡಾಗಿರುವ ತುರುಗೋಳ್ ಶಾಸನ

೧. ರೇದ (ರ/ವ) ಕರ..ಯೋನುಟಿರ

೨. ಗರಾತೊಱುಗಾಳ್ ಬಿಟ್ಟಿನ್

೩. ಗಾರದೊ ಕಂಡುಗಂ ಕಟಿ(ನಿ)

೪. ವೆದ ಳ್ಗೊ ಕಟಣ

ಸಾರಂಶ :– ತುರುಗಾಳದಲ್ಲಿ ಮರಣಹೊಂದಿದ ವೀರನಿಗೆ ಖಂಡುಗ ಕಳನಿಯನ್ನು ಕೊಟ್ಟ ವಿವರವಿದೆ.

ದೇವನಹಳ್ಳಿ ತಾಲ್ಲೂಕಿನ ಬೊಮ್ಮವಾರದಲ್ಲಿ ೫ ಅಡಿ ಎತ್ತರ, ೩ ಅಡಿ ಅಗಲದ ವಿಜಯನಗರ ಕಾಲದ ಶಾಸನವನ್ನು ಶೋಧಿಸಲಾಯಿತ್ತು. **(ಚಿತ್ರ ಸಂಖ್ಯೆ–೯೩)** ಈ ಶಾಸನದ ಪಾಠ :–

೧. ಈ ಮತು ಸಕವರುಷ ೧೨೬೭

೨. ಸಂವತ್ಸರದ ಜಯ ಶ್ರೀಮನು

೩. ಮಹಾಮಂಡಳೇಶ್ವರಂ ಅರಿರಾಯ ವಿಭಾಡ

೪. ಭಾಷೆಗೆ ತಪ್ಪುವರಾಯ ಗಂಡ ಚತುಸಮು

೫. ದ್ರಾದಿಪತಿ ಶ್ರೀವೀರಹ

೬. ರಿಯಪ್ಪ ಒಡೆಯರು ಪುತ

೭. ವಿ ರಾಜ್ಯವಂ ಶ್ರೀಮನು ಮಹಾ

೮. ಎಲಹಕ್ಕನಾಡ

೯. ......................

೧೦. ....................

೧೧. ................

೧೨. ......................ಶ್ರೀಮನುಮಹಾ

೧೩. ಸಾವಂತದಿಪತಿ ನರಲೋಕ ಗಂಡ ಮಯಿಲೆ

೧೪. ಯ ನಾಯಕನ ತಮ್ಮ ಚನ್ನಯನಾಯಕ

೧೫. ರಿಗೆ ಬೊಮ್ಮವರದ ಚತುಸೀಮೆನು

೧೬. ಕೊಡಗಿಯಾಗಿ ಕೊಟ್ಟೆಉ ಚಂದ್ರಾದಿತ್ಯ

೧೭. ಮಹಾಶ್ರೀಶ್ರೀ.

ಈ ಶಾಸನದ ಪೂರ್ಣಪಾಠ ಇನ್ನು ಸಿದ್ದವಾಗಿಲ್ಲ, ಈಗ ಇರೊ ಪಾಠದಲ್ಲಿ ವಿಜಯನಗರದ ವೀರ ಹರಿಯಪ್ಪ ಒಡೆಯರ್ ಆಳ್ವಿಕೆಯಲ್ಲಿ ಮಹಾ ಸಾವಂತಾಧಿಪತಿಯಾದ ನರಲೋಕ ಗಂಡ ಮಯಿಲೆಯನಾಯಕನ ತಮ್ಮ ಚನ್ನಯನಾಯಕರಿಗೆ ಬೊಮ್ಮವಾರದ ಚತುಸೀಮೆಯನ್ನು ಕೊಡುಗೆಯಾಗಿ ಕೊಟ್ಟ ವಿವರವಿದೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ಚೆನ್ನಯನಾಯಕನು ಹೊಯ್ಸಳರ ಕಾಲದಲ್ಲಿ ಸಾವಂಧಿಪತಿಯಾಗಿದ್ದು ಕುಕ್ಕಲನಾಡಿನಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದು, ಹೊಯ್ಸಳ ಮನೆತನದ ಅವನತಿಯ ನಂತರ ವಿಜಯನಗರ ಸಾಮ್ರಜ್ಯದ ಹರಿಯಪ್ಪ ಒಡೆಯರ್ ನ ಅಧೀನಕ್ಕೆ ವರ್ಗಾವಣೆಯಾದನೆನ್ನ ಬಹುದು.

ದಿನಾಂಕ ೧೯/೧೦/೨೦೨೦ ರಂದು ಕಡತನಮಲೆ ಗ್ರಾಮದಲ್ಲಿ **(ಚಿತ್ರ ಸಂಖ್ಯೆ-೯೪)** ಹೊಯ್ಸಳ ವೀರ ಬಲ್ಲಾಳನ ೫ ಅಡಿ ಎತ್ತರ, ೨ ಅಡಿ ೩ ಇಂಚು ಅಗಲದ ೧೮ ಸಾಲುಗಳಿರುವ ಶಾಸನದ ಪಾಠ :-

೧. ಸ್ವಸ್ತಿ ಶ್ರೀ ಸಕ ವರುಷಂಗಳ್ ೧೨೩೨

೨. ಸಧರಣ ಸಂತ್ಸರದ (ಭಾದ್ರಪದ ಮಾಸ)

೩. ಪ್ರತಾಪ ಚಕ್ರವರ್ತಿ ಭುಜಬಲ

೪. ..................................ವೀರ

೫. ಬಲ್ಲಾಳ ದೇವರು ಉಣ

೬. ಮಲೆ ಪಟ್ಟಣದಲು ಸು

೭. ಖ ಸಂಗಾತ ವಿನೋದ..

೮. ರಾಜ್ಯಂಗೈಯ್ಯುತ್ತಿರ(ಲು)

೯. ಶ್ರೀಮತು ಪ್ರದಾನಂ ಪೊಂನಣ

೧೦. ನವರ ಮಕ್ಕಳು ಕಾಮಯ ದಣಾ

೧೧. ಯಕರು . ಎಲಹಕನಾಡ ಸಮಸ್ತ ಪ್ರ

೧೨. ಜೆ ಹೂಡಗಳ್ ಚಿಯ್ಯಮುಲ್

೧೩. ಪ್ರಜೆಯರಿ...ಶಿಲಾಶಾಸನದ

೧೪. ಕ್ರಮವೆಂ.... ಎಲಹಕನಾ

೧೫. ಡೊಳಗಣ ಕಡತಜುಮಲೆಯ ಚ

೧೬. ರುಸೀಮೆ..ಗಾದ ಗದ್ದೆಬೆದ್ದಲ..

೧೭. ಕೊಡುಗೆ ಆಗಿ ಚಂದ್ರಸೂರ್ಯ...

೧೮. ಕೊಡುಗೆ ಮಂಗಳ ಮಹಾಶ್ರೀ ಶ್ರೀ.

ಸಾರಾಂಶ :- ಹೊಯ್ಸಳ ಪ್ರತಾಪ ಚಕ್ರವರ್ತಿ ವೀರ ಬಲ್ಲಾಳನು ಉಣಮಲೆಯಲ್ಲಿ ಸುಖದಿಂದ ರಾಜ್ಯವನ್ನಾಳುತ್ತಿರುವಾಗ ಮಹಾ ಪ್ರಧಾನ ಪೊಂನಣನವರ ಮಕ್ಕಳಾದ ಕಾಮಯ ದಣಾಯಕರು ಎಲಹಂಕನಾಡನ್ನು ಆಳ್ವಿಕೆ ಮಾಡುವಾಗ ಎಲಹಂಕನಾಡಿನ ಕಡತಜುಮಲೆ ಗ್ರಾಮದಲ್ಲಿನ ಚತುಸೀಮೆಯೊಳಗಿನ ಗದ್ದೆ-ಬೆದ್ದಲನ್ನು ಕೊಡುಗೆಯಾಗಿ ನೀಡಿದ ವಿವರವನ್ನು ಕಾಣಬಹುದು. ಶಾಸನ ಕಾಲವನ್ನು ಕ್ರಿ.ಶ.೧೩೧೦ ಕ್ಕೆ ಸೇರಿಸಬಹುದು. ಹಾಗೇಯೇ ಶಾಸನದಲ್ಲಿ ಉಲ್ಲೇಖವಾಗಿರುವ ಕಾಮಯ ದಣಾಯಕನ ಕ್ರಿ.ಶ.೧೩೨೮ರ ಕಾಲದ ಮೂರು ಶಾಸನಗಳು ದೊಡ್ಡಬಳ್ಳಾಪುರ ತಾಲ್ಲೂಕಿನ ಕುರುವಿಗೆರೆ, ದೇವನಹಳ್ಳಿ ತಾಲ್ಲೂಕಿನ ತಿಂಡಲು, ಹೊಸಕೋಟೆ ತಾಲ್ಲೂಕಿನ ಬಯಿರತ್ತಿಯಲ್ಲಿ ದೊರೆತ್ತಿದೆ. ಶಾಪಶಯವನ್ನು ಬಳಸಿಲ್ಲ ಬದಲಿಗೆ ಮಂಗಳ ಮಹಾ ಶ್ರೀ ಶ್ರೀ ಎಂದು ಮಾತ್ರ ಬಳಸಿದ್ದಾರೆ.

ಹೊಸಕೋಟೆ ತಾಲ್ಲೂಕಿನ ಲಾಲ್ಬಾಗ್ ದಾಸರಹಳ್ಳಿಯಲ್ಲಿ ಸರ್ಕಾರಿ ನೀಲಗಿರಿ ತೋಪಿನ ಮಧ್ಯದಲ್ಲಿ ಬಿದ್ದಿರುವ ಸುಮಾರು ೬ ಅಡಿ ಎತ್ತರ, ೧ ೧/೨ ಅಡಿ ಅಗಲ ಅಳತೆಯ ೧೬ ಸಾಲುಗಳ ಕನ್ನಡ ಶಾಸನ, ಹಾಗೂ ೫ ಅಡಿ ಎತ್ತರ, ೨ ೧/೨ ಅಡಿ ಅಗಲವಾದ ೧೮ ಸಾಲುಗಳ ೩ನೇ ವೀರ ಬಲ್ಲಾಳನ ತಮಿಳು ಶಾಸನಗಳನ್ನು, ದೊಡ್ಡಹುಲ್ಲೂರಿನ ಸೋಮೇಶ್ವರ ದೇವಾಲಯದ ಪಶ್ಚಿಮ, ಉತ್ತರದ ಅಧಿಸ್ಟಾನದ ಮೇಲೆ ಮೂರನೇ ಬಲ್ಲಾಳನ ತಮಿಳು ಶಾಸನವನ್ನು, ಪರಮನಹಳ್ಳಿಯ ಕೆರೆ

ಸಮೀಪದ ನೀಲಗಿರಿ ತೋಪಿನಲ್ಲಿನ ತಮಿಳು ಶಾಸನವನ್ನು, ವಾಗಟದಲ್ಲಿ ವರದರಾಜ ದೇವಾಲಯದ ಗುಡಿ ಮುಂದಿನ ಮೂರನೇ ಬಲ್ಲಾಳನ ತಮಿಳು ಶಾಸನವನ್ನು,

ತಾವರೆಕೆರೆಯಲ್ಲಿ ೨ ತುರುಗೋಳ್ ಮತ್ತು ೩ ಹೋರಾಟದ ಒಟ್ಟು ೫ ವೀರಗಲ್ಲುಗಳಲ್ಲಿ ಒಂದು ವೀರಗಲ್ಲುವಿನಲ್ಲಿ ವೀರನು ಕುದುರೆಯ ಮೇಲಿರುವ ಶತ್ರುವನ್ನು ಕೊಂದು ಕೆಳಗೆ ಬೀಳಿಸಿ ಅವನ ಕುದುರೆಯನ್ನು ಸೇರೆಹಿಡಿದಿದ್ದಾನೆ. ಇವನ ಹಿಂದೆ ತುರುಗಳ ಚಿತ್ರವಿದೆ. ಶತ್ರುವಿನ ಕುದುರೆಯನ್ನು ಮತ್ತು ತುರುಗಳನ್ನು ಊರಿಗೆ ಮರಳಿಸಿದ ವಿಷಯವನ್ನು ಈ ಶಿಲ್ಪವು ತಿಳಿಸುತ್ತದೆ.

ಉಗನವಾಡಿಯಲ್ಲಿ ನೊಳಂಬ ಮಹೇಂದ್ರನ ಕಾಲದ ಯುದ್ಧ ವೀರಗಲ್ಲನ್ನು, ಸಣ್ಣೆನಾಡು ಉಲ್ಲೇವಿರುವ ವೀರಗಲ್ಲನ್ನು ಒಟ್ಟು ಮೂರು ವೀರಗಲ್ಲನ್ನು, ಸೊಲೂರಿನಲ್ಲಿ ವಿಜಯನಗರ ಕಾಲದ ಎರಡು ಕನ್ನಡ ಶಿಲಾ ಶಾಸನವನ್ನು, ಮಾರನಾಯಕನಹಳ್ಳಿಯಲ್ಲಿ ನೊಳಂಬರ ಕಾಲದ ಒಂದು ವೀರಗಲ್ಲನ್ನು, ದೊಡ್ಡಸಣ್ಣೆಯಲ್ಲಿ ಬಸವನ ದೇವಾಲಯದ ಎದುರು ವೀರಗಲ್ಲಿನ ತುಂಡು ಶಾಸನವನ್ನ, ಕಾಮರಸನಹಳ್ಳಿಯ ಪಾಳುಬಿದ್ದ ದೇವಾಲಯದ ಭಿತ್ತಿಯ ಮೇಲೆ ಶಾಸನವನ್ನು ಶೋಧನೆ ಮಾಡಿರುತ್ತೇನೆ.

ದೇವನಹಳ್ಳಿ ತಾಲ್ಲೂಕಿನ ರಾಯಸಂದ್ರದಲ್ಲಿ ೪ ಅಡಿ ಎತ್ತರ, ೨ ೧/೨ ಅಡಿ ಅಗಲದ ಮುಂದೆ ೧೦ ಸಾಲುಗಳು, ಹಿಂದೆ ೩ ಸಾಲುಗಳ ಕ್ರಿ.ಶ.೧೫೧೫ ರ ವಿಜಯನಗರ ಕೃಷ್ಣದೇವರಾಯನ ಕಾಲದ ಶಾಸನವನ್ನು, ಮುಗಬಾಳ ಗ್ರಾಮದಲ್ಲಿ ೬ ಅಡಿ ಎತ್ತರ, ೫ ಅಡಿ ಅಗಲದ ನೊಳಂಬರ ಕಾಲದ ಇಬ್ಬರು ವೀರರ ತುರುಗೋಳ್ ಶಾಸನವನ್ನು ಶೋಧಿಸಲಾಯಿತ್ತು.

ಯಂಬ್ರಹಳ್ಳಿ ಗ್ರಾಮದಲ್ಲಿ ೧೬ ಜುಲೈ ೨೦೧೬ರಲ್ಲಿ ಭೇಟಿ ನೀಡಿದಾಗ ದೇವಾಲಯದ ಹಿಂದೆ ಅಂಚಿನಲ್ಲಿ ತಿರುಚಿ ಬಿಸಾಡಿದ್ದನ್ನು ವೀರಗಲ್ಲುಗಳನ್ನು ಗ್ರಾಮಸ್ಥರ ಮನಒಲಿಸಿದ ಮೇಲೆ ಅದೇ ವೀರಗಲ್ಲುಗಳನ್ನು ಸುರಕ್ಷಿತ ಸ್ಥಳಕ್ಕೆ ವರ್ಗಾವಣೆ ಮಾಡಲಾಯಿತ್ತು. ನೊಳಂಬರ ಕಾಲದ ಈ ೫ ವೀರಗಲ್ಲುಗಳಲ್ಲಿ ೩ ವೀರಗಲ್ಲುಗಳ ಮೇಲೆ ಶಾಸನವಿದೆ. ಜೊತೆಗೆ ೩ನೇ ಬಲ್ಲಾಳನ ಕ್ರಿ.ಶ.೧೨೮೮ರ ಕಾಲದ ಗಂಡ್ರಗೊಳ್ಳಿ ಉಲ್ಲೇಖವಿರುವ ಎರಡು ಬದಿಯಲ್ಲಿ ಸಾಲುಗಳಿರುವ ಶಾಸನವನ್ನು ಪತ್ತೆ ಹಚ್ಚಲಾಗಿದೆ. ಈ ಶಾಸನಗಳ ಪಾಠವನ್ನು ಸಿದ್ಧಪಡಿಸುತ್ತಿದ್ದೇನೆ.

ಹಿಂದೆ ಹೊಸಕೋಟೆ ತಾಲ್ಲೂಕಿನಲ್ಲಿದ್ದು ಈಗ ಬೆಂಗಳೂರು ಪೂರ್ವ ತಾಲ್ಲೂಕಿನಲ್ಲಿರುವ ಕಿತಗನೂರ ಗ್ರಾಮದಲ್ಲಿ ಬಹಳ ವರ್ಷದಿಂದ ಬಿದ್ದಿದ್ದ ೩ ತುರುಗೋಳ್ ವೀರಗಲ್ಲುಗಳ ಬಗ್ಗೆ ಸ್ಥಳಿಯರಿಗೆ ಮಾಹಿತಿ ನೀಡಿದ ಮೇಲೆ ಕರಗ ಪೂಜೆ ಮಾಡುವ ಒಕ್ಕಲಿಗರು ನಮ್ಮ ಸಮುದಾಯದ ಪೂರ್ವಿಕರು ಎಂದು ಕೆರೆಯ ಆವರಣದಲ್ಲಿ ಪ್ರತಿಸ್ಥಾಪಿಸಿದ್ದಾರೆ. ಹಾಗೇಯೇ ಎ.ಕ–೯ ನಲ್ಲಿ ದಾಖಲಾಗಿರುವ ಕನ್ನಡ ಶಾಸನ ಸುರಕ್ಷಿತವಾಗಿದ್ದು, ತಮಿಳು ಶಾಸನವನ್ನು ತುಂಡು ತಂಡುಗಳಾಗಿ ಮಾಡಿ ಕೆಲವು ತುಂಡನ್ನು ಗೋಪಾಲಸ್ವಾಮಿ ದೇವಾಲಯದ ಪಾಯಕ್ಕೆ ಬಳಸಿದ್ದು, ಉಳಿದ ಭಾಗವನ್ನು ದೇವಾಲಯದಲ್ಲಿ ಸಂರಕ್ಷಿ ಇಡುತ್ತೇವೆ ಎಂದು ಆಡಳಿತ ಮಂಡಳಿ ತಿಳಿಸಿದೆ.

ಗಂಗವಾರಕ್ಕೆ ೨೦೧೪ರಲ್ಲಿ ಭೇಟಿ ನೀಡಿದಾಗ ಸೋಮೇಶ್ವರ ದೇವಾಲಯದ ಒಳ ಆವರಣವು ಗಿಡ ಪೊದೆಗಳಿಂದ ಆವೃತವಾಗಿದ್ದು, ಒಳಗೆ ಹೋಗಲು ದಾರಿಯಿಲ್ಲದಂತಾಗಿತ್ತು. ೨೦೧೬ರಲ್ಲಿ ಮತ್ತೊಮ್ಮೆ ಭೇಟಿ ನೀಡಿದಾಗ ಹಳೇ ದೇವಾಲಯದ ಎತ್ತರವನ್ನು ಹೆಚ್ಚಿಸಿ ಜೀರ್ಣೋದ್ಧಾರ ಮಾಡಲಾಗಿತ್ತು. ಸ್ಯಾಂಡ್‌ಬ್ಲಾಸ್ಟ್ ಗೋಡೆಯ ಮೇಲಿನ ಶಾಸನಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ.

ಅರದೇಶನಹಳ್ಳಿಯಲ್ಲಿ ಎ.ಕ–೯ ಸಂಪುಟದಲ್ಲಿ ಉಲ್ಲೇಖವಾಗಿರುವ ೩ ಶಾಸನಗಳನ್ನು ಪುರಾತತ್ವ ಇಲಾಖೆಯು ಸಂರಕ್ಷನಾ ದೃಷ್ಟಿಯಿಂದ ಚೌಕಾಕರಾದ ಗೋಡೆಯ ಸ್ಥಾಪಿಸಿದ್ದು. ಇತ್ತೀಚೆಗೆ ಸೂಕ್ತ ನಿರ್ವಾಹಣೆ ಇಲ್ಲದೆ ಕಸ, ಕಲ್ಲುಗಳಿಂದ ಆವೃತವಾಗಿದೆ. ಊರಿನ ಪೂರ್ವದ ನೀಲಗಿರಿ ತೋಪಿನ ಅಂಚಿನಲ್ಲಿ ವೀರರ ಗುಡಿಗೆ ನಾನು ೨೦೧೬ರಲ್ಲಿ ಭೇಟಿ ನೀಡಿದಾಗ ೭ ವೀರಗಲ್ಲುಗಳಿದ್ದವು ಆದರೆ ಈಗ ಪ್ರಸ್ತುತ ೫ ವೀರಗಲ್ಲುಗಳು ಇದ್ದು, ೨ ವೀರಗಲ್ಲುಗಳು ನಿಧಿ ಶೋಧಕರಿಂದ ಮಣ್ಣಲ್ಲಿ ಮುಚ್ಚೋಗಿದೆ ಎಂದು ಸ್ಥಳೀಯರು ಹೇಳುತ್ತಿದ್ದಾರೆ.

ಹೊಸಕೋಟೆ ತಾಲ್ಲೂಕಿನ ಜ್ಯೋತಿಪುರದಲ್ಲಿ ವಿಜಯನಗರ ಕಾಲದ ಸಾಳುವ ಇಮ್ಮಡಿ ನರಸಿಂಹರಾಯನ ಶಾಸನವನ್ನು ದೇವಾಲಯವನ್ನು ಜೀರ್ಣೋದ್ಧರ ಮಾಡುವಾಗ ತುಂಡುಗಳಾಗಿ ಮಾಡಿ ದೇವಾಲಯದ ಗೋಡೆಗೆ ಸೇರಿದ್ದಾರೆ ಎಂದು ಅರ್ಚಕರಾದ ಜ್ಯೋತಿಶ್ವರರವರು ತಿಳಿಸಿದ್ದರು. ನಂತರ ದೇವಾಲಯದ ಎದುರಿಗೆ ಮನೆ ಕಟ್ಟುವವರು ತಮ್ಮ ಮನೆ ಬಳಿ ಇದ್ದ ಶಾಸನ ಕಲ್ಲನ್ನು ದೇವಾಲಯದ ಆವರಣದಲ್ಲಿ ಇರಿಸಿದ್ದಾರೆ. ಈ ಶಾಸನವು ಎ.ಕ–೯ ರಲ್ಲಿ ಪ್ರಕಟಣೆಗೊಂಡಿದ್ದು, ಶಾಸನದ ಹಿಂಭಾಗದ ಕೊನೆಯ ೩ ಸಾಲುಗಳು ಮಾತ್ರ ದಾಖಲಾಗಿತ್ತು. ಕಲ್ಲಿನ ಮುಂದಿನ ೧೬

ಸಾಲುಗಳು ಮತ್ತು ಹಿಂದಿನ ೯ ಸಾಲುಗಳು ದಾಖಲಾಗಬೇಕಿರುವುದನ್ನ ದಾಖಲು ಕಾರ್ಯವನ್ನು ಮಾಡುತ್ತಿದ್ದೇನೆ.

ಕಾಡಿಗನಹಳ್ಳಿಯ ಅಲೋಬ್ಲಾಕ್ ಇಟ್ಟಿಗೆ ಕಾರ್ಖಾನೆಯ ಆವರಣದಲ್ಲಿ ಮಣ್ಣು ಗುಡ್ಡೆಯ ಬಳಿ ಬಿದ್ದಿರುವ ಶಾಸನವನ್ನು ಊರಿನ ಒಳಗೆ ಇತ್ತಿಚೆಗೆ ಸುಮಾರು ೫೦೦ ವರ್ಷಗಳ ಹಳೆಯಾದಾದ ಅಂಜನೇಯ ವಿಗ್ರಹಕ್ಕೆ ಹೊಸದಾಗಿ ದೇವಾಲಯವನ್ನು ನೀರ್ಮಾಣ ಮಾಡಿದ ಕೆಂಪಣ್ಣನವರು ದೇವಾಲಯದ ಆವರಣದಲ್ಲಿ ಪ್ರತಿಷ್ಠಾಪಿಸುತ್ತೇನೆ ಎಂದು ದೇವಾಲಯದ ಆವರಣದಲ್ಲಿಟ್ಟಿದ್ದಾರೆ ಕೊರೊನಾದಿಂದಾಗಿ ಇನ್ನು ನಿಲ್ಲಿಸಿಲ್ಲ. ಹಾಗೇಯೇ ಆವತಿ ನಾಡಪ್ರಭುಗಳ ತೆಲುಗು ಶಾಸನವನ್ನು ೧೯೯೫ರಲ್ಲಿ ಬಡಾವಣೆ ಮಾಡುವಾಗ ತುಂಡು ತುಂಡುಗಳಾಗಿ ಒಡೆದು ಮೋರಿ ಹಾಕಿದಾರೆ. ಆದರೆ ಈಗ ಅದರ ಅವಶೇಷಗಳು ಉಳಿದಿಲ್ಲ. ಮಣ್ಣಲ್ಲಿ ಹೂತು ಹೋಗಿರುವ ಸ್ಮಾರಕಶಿಲೆಗಳನ್ನು ಹೊರ ತೆಗೆಯುವ ಹಾಗೂ ಸಂರಕ್ಷಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ಮುತ್ತೂರಿನಲ್ಲಿ ಸುಮಾರು ೮ ಅಡಿ ಅತ್ತರ ಮತ್ತು ೬ ಅಡಿ ಅಗಲದ ವೀರಗಲ್ಲು ಸುಮಾರು ೨೦ ವರ್ಷಗಳ ಹಿಂದೆ ಮಳೆಯಿಂದಾಗಿ ಕೆರೆಗೆ ಕುಸಿದ್ದು ಬಿದ್ದು ೩ ಅಂಡಾಗಿ ಮಣ್ಣಲ್ಲಿ ಮುಚ್ಚುಹೋಗಿರುವುದನ್ನು ಹೊರ ತೆಗೆಯಲಾಯಿತ್ತು. (ಈ ಕಾರ್ಯದಲ್ಲಿ ಪ್ರೋ.ಕೆ.ಆರ್.ನರಸಿಂಹನ್ ಸಾರ್, ವಿಜಯಕುಮಾರ್.ಎಸ್ ಜೊತೆಗೆ ಗ್ರಾಮಸ್ಥರ ಸಹಕಾರ ತುಂಬಾ ಇತ್ತು)

ಆವತಿ ಗ್ರಾಮದಲ್ಲಿ ರಸ್ತೆಯ ಪಕ್ಕದಲ್ಲಿ ಬಿದ್ದಿರುವುದನ್ನು ೩ ವೀರಗಲ್ಲುಗಳನ್ನು ಪುರಾತತ್ವ ಇಲಾಖೆಯ ಮುಖಾಂತರ ಅದೇ ಗ್ರಾಮದ ದೇವಾಲಯದ ಮುಂದೆ ಸಂರಕ್ಷಿಸಲಾಯಿತ್ತು. ಸಾದೇನಹಳ್ಳಿಯಲ್ಲಿ ಬಿದ್ದಿರುವ ಹಂದಿಬೇಟೆ, ವೀರಗಲ್ಲಗಳನ್ನು ಅದೇ ಗ್ರಾಮದ ಊರಿನ ಮದ್ಯ ನಿಲ್ಲಿಸಲಾಯಿತ್ತು.

ನೆಲಮಂಗಲ ತಾಲ್ಲೂಕಿನ ನಿಜಗಲ್ಲು ವೀರಭದ್ರ ದೇವಾಲಯದ ಬಳಿ ಬಂಡೆಯ ಮೇಲಿನ ಶಾಸನವನ್ನು ಒಡೆದು ಹಾಕಲಾಗಿದೆ. ಮಣ್ಣೆಯಲ್ಲಿ ಸುಮಾರು ೪ ಶಾಸನಗಳನ್ನು (ಸೆಪ್ಟೆಂಬರ್ ೨೬ ರಂದು ರಸ್ತೆ ಅಗಲೀಕರಣಕ್ಕೆ ಕಪಿಲೇಶ್ವರ ದೇವಾಲಯದ ಹಿಂದಿನ ಶಾಸನವನ್ನು ಒಡೆದು ಚೂರು ಚೂರು ಮಾಡಲಾಗಿದೆ. ತಾವರೆಕೆರೆಯ ವೀರ ಬಲ್ಲಾಳನ ಶಾಸನವನ್ನು ವೀರಗಲ್ಲು ಶನಿಮಾಹತ್ಮ ದೇವಾಲಯದ ಗರ್ಭಗುಡಿಯ ಗೋಡೆಗೆ ಸೇರಿಸಿ ಮುಚ್ಚಲಾಗಿದೆ. ಕೆರೆ ಕಟ್ಟಿಸಿದ ಉಲ್ಲೇಖವಿರುವ

ಸೂಲಿಬೆಲೆಯ ಶಾಸನ ಮತ್ತು ದೊಡ್ಡ ಹುಲ್ಲೂರಿನ ಶಾಸನಗಳು ಕಣ್ಮರೆಯಾಗಿದೆ. ಮುಗಬಾಳದಲ್ಲಿನ ಎರಡು ವೀರಗಲ್ಲುಗಳನ್ನು ಒಡೆದು ಹಾಕಲಾಗಿದೆ. ಮಂಡಿಗೆರೆಯಲ್ಲಿ ಇದ್ದಂತಹ ಎರಡು ಶಾಸನಗಳು ಇವತ್ತು ಕಾಣದಂತಾಗಿದೆ. ಹೊಸಕೋಟೆ ತಾಲ್ಲೂಕಿನ ಲಕ್ಷ್ಮಮಗಾವುಂಡಿಯ ವೀರಗಲ್ಲು ಶಾಸನವನ್ನ ಎಷ್ಟು ಹುಡುಕಾಡಿದರು ಕಾಣಿಸುತ್ತಿಲ್ಲ, ಕಟ್ಟಿಗೇನಹಳ್ಳಿಯಲ್ಲಿನ ವೀರಗಲ್ಲಿನ ಮೇಲೆ ಸರ್ಕಾರಿ ಶಾಲೆಯನ್ನು ಕಟ್ಟಲಾಗಿದೆ. ಇದು ಅಲ್ಲದೇ ಹಲವು ಕಡೆಯಲ್ಲಿ ನಿಧಿಕಳ್ಳರ ಹಾವಳಿಯಿಂದಾಗಿ ಸಾಕಷ್ಟು ಸ್ಮಾರಕ ಶಿಲೆಗಳು ನೆಲದ ಬಿದ್ದಿರೆ ಮತ್ತೆ ಕೆಲವೊಂದು ಮಣ್ಣಲ್ಲಿ ಮುಚ್ಚು ಹೋಗಿದೆ.

ಹೀಗೆ ಜಿಲ್ಲೆಯಾದ್ಯಂತ ಗಂಗರ ಕಾಲದಿಂದ ಹಿಡಿದು ವಿಜಯನಗರ ಕಾಲದವರೆಗಿನ ವೀರಗಲ್ಲುಗಳ ಸಹಿತ ಒಟ್ಟು ೩೬ ಶಾಸನಗಳು ದೊರೆತಿದ್ದು. ಶಾಸನ ರಹಿತ ದಾಖಲಾಗದ ವೀರಗಲ್ಲುಗಳು, ಯಂತ್ರಕಲ್ಲುಗಳನ್ನು ಬಹಳಷ್ಟು ಶೋಧಿಸಲಾಗಿದೆ.

## ಅನುಬಂಧ – ೨

## ಬೇರುಂಡಪಡೆ

ಗಂಡ ಭೇರುಂಡ ಅಥವಾ ಭೇರುಂಡ ಎಂದರೆ ನೆನಪಾಗುವುದು ಕರ್ನಾಟಕ ರಾಜ್ಯ ಸಾರಿಗೆಯ ಲಾಂಛನ, ಈ ಲಾಂಛನವು ಮೈಸೂರು ಒಡೆಯರ ಲಾಂಛನವಾಗಿದ್ದು, ಸ್ವಾತಂತ್ರ್ಯದ ನಂತರ ಈ ಗಂಡ ಭೇರುಂಡವನ್ನೆ ಲಾಂಛನವಾಗಿ ಕರ್ನಾಟಕ ರಾಜ್ಯ ಸರ್ಕಾರ ಮುಂದುವರೆಸಿತ್ತು. ಆದರೆ ಈ ಗಂಡಭೇರುಂಡ ಎಂಬ ಕಲ್ಪನೆಯು ಹೊಯ್ಸಳರ ಕಾಲದಲ್ಲಿ ೧೧, ೧೨ನೇಯ ಶತಮಾನದಲ್ಲೆ ಹೆಚ್ಚು ಪ್ರಸಿದ್ದಿಯನ್ನು ಪಡೆದಿತ್ತು. ಭೇರುಂಡ ಎಂಬುದು ಒಂದು ಪಕ್ಷಿಯ ಹೆಸರಾಗಿದ್ದು, ಕೆಲವರು ಕಾಲ್ಪನಿಕ ಪಕ್ಷಿ ಎಂದು ಸಹ ಕರೆಯಲಾಗಿದೆ. ಆದರೆ ಭೇರುಂಡಪಕ್ಷಿಯ ಒಂದು ದೇಹ ಎರಡು ತಲೆಯನ್ನು ಹೊಂದಿದ್ದು, ಒಂದು ತಲೆಯು ನಿದ್ದೆ ಮಾಡುತ್ತಿದ್ದರೆ, ಮತ್ತೊಂದು ತಲೆಯು ಎಚ್ಚರವಾಗಿರುವುದೇ ಈ ಪಕ್ಷಿಯ ವಿಶೇಷ ಒಂದು ರೀತಿಯಲ್ಲಿ ಎಚ್ಚರ ಹಾಗೂ ಜಾಗರೂಕತೆಯ ವಿಶಿಷ್ಟವಾದ ಲಕ್ಷಣವನ್ನು ಹೊಂದಿರುವುದರಿಂದಲೇ ಹೊಯ್ಸಳರು ವೀರ ಪಡೆಗೆ ಈ ಹೆಸರು ಇಟ್ಟಿರಬಹುದು. ವ್ಯಾಲೆಂಟೀನ ಸ್ಟಾಚೆ ರೊಸೆನ್ ಎಂಬುವರು “Veneable Mahavira was always watchful like the fabulous bird Bharunda” “Though other sleep be though awake, be always on the alert, be always watchfull like a Bharunda bind” ಎಂದು ವಿವರಿಸಿದ್ದಾರೆ. ಬೇರುಂಡ ಪಡೆಯು ಹೊಯ್ಸಳ ಅರಸರಲ್ಲಿ ವಿಶಿಷ್ಟವಾದ, ಶಕ್ತಿಶಾಲಿಯುತ, ಸ್ವಾಮಿ ನಿಷ್ಠೆಯನ್ನು ಜೀವನವೆಂದು ತಿಳಿದ ವೀರ ಪಡೆಯಾಗಿತ್ತು. ಸ್ವಾಮಿ ನಿಷ್ಠಾವಂತರಾದ ಲೆಂಕರು, ವೇಳೆವಾಳಿಗಳಂತೆ ಬೇರುಂಡ ಪಡೆಯು ಸ್ವಾಮಿ ನಿಷ್ಠಾವಂತ ಸೇವಕನಾಗಿದ್ದು, ತಾಯಿಯ ಸಮೀಪದಲ್ಲಿ ಕೂಸು ಅಡಗಿಕೊಂಡಿರುವಂತೆ ಕೂಸರು ಅರಸರ ಸಾಮೀಪ್ಯದಲ್ಲೇ ಇರುತ್ತಿದ್ದರಿಂದ ಕೂಸರು ಎಂಬ ಆತ್ಮೀಯತೆಯನ್ನು ಪಡೆದುಕೊಂಡಿರಬೆಕು. ವಿಷ್ಣುವಿನ ಭಕ್ತ ಗರುಡನಂತೆ, ರಾಮನ ಬಂಟ ಹನುಮನಂತೆ ಧರ್ಮ, ಶೌರ್ಯ, ಸತ್ಯ, ತ್ಯಾಗಗಳು ವಿಶೇಷ ಗುಣಗಳಿಂದ ಕುಡಿದ ಭೇರುಂಡ ಪಡೆಯು ಅರಸರ ಜೊತೆಯಲ್ಲೆ ಇರುತ್ತಿದ್ದು ಅರಸನ ಇಷ್ಟಾರ್ಥಗಳನ್ನು ಇಡೇರಿಸುತ್ತಿದ್ದರು. ಮೂರನೇಯ ಬಲ್ಲಾಳನ ಕಾಲದಲ್ಲಂತು ಬಲ್ಲಾಳ ವಿಜಯಗಳಲ್ಲಿ ಪ್ರಮುಖ ಪಾತ್ರ ವಹಿಸಿದ ಭೇರುಂಡ ಪಡೆಯು ಅನೇಕ ವಿಜಯಗಳನ್ನು ತಂದುಕೊಡುವಲ್ಲಿ ಯಶಸ್ವಿಯಾಯಿತು.

ಒಂದೇ ಮನುಷ್ಯನ ದೇಹಕ್ಕೆ ಎರಡು ಪಕ್ಷಿ ತಲೆಯ ಗಂಡಭೇರುಂಡದ ಉಬ್ಬು ಶಿಲ್ಪಗಳು ದಾನ ಮತ್ತು ಸ್ಮಾರಕ ಶಾಸನಗಳಲ್ಲಿ ಹಾಗೇ ಶಾಸನ ಬರಹವಿಲ್ಲದ ಸ್ಮಾರಕಗಳಲ್ಲೂ ಕಂಡು ಬಂದಿದೆ. ಕೇವಲ ಭೇರುಂಡ ಪಕ್ಷಿಯ ಉಬ್ಬು ಶಿಲ್ಪಗಳು ಮತ್ತು ಇತರೆಲ್ಲ ಪ್ರಾಣಿಗಳನ್ನು ಮೆಟ್ಟಿ ತನ್ನ ಹಿಡಿತದಲ್ಲಿಟ್ಟುಕೊಂಡಿರುವ

ಭೇರುಂಡ ಪಕ್ಷಿಯ ಶಕ್ತಿಯ ಸಾಂಕೇತಿಕ ಶಿಲ್ಪಗಳು ಹೊಯ್ಸಳ ದೇವಾಲಯ ಭಿತ್ತಿಗಳಲ್ಲಿ ಕಾಣಿಸಿಕೊಂಡಿದೆ. ಸತ್ಯವಾರ ಶಾಸನದಲ್ಲಿ ಸುಮಾರು ಎರಡು ಅಡಿ ಎತ್ತರದ ಶಿಲ್ಪವನ್ನು, ಬ್ಯಾಡರಹಳ್ಳಿ, ರಾಮಸಮುದ್ರ ವಾಗಟ, ಮಣ್ಣೆ, ಯಂಬ್ರಹಳ್ಳಿ, ತೇಕಲ್‌ನ ಈಶ್ವರ ದೇವಾಲಯದ ಕಂಬದ ಮೇಲೆ, ಬಳ್ಳಿಗಾವೆಯಲ್ಲಿ ಭೈರುಂಡೇಶ್ವರ ಎಂಬ ಹೆಸರಿನ ೯.೧೫ ಮೀ. ಎತ್ತರದ ವಿಜಯಸ್ತಂಭ ರೂಪದ ಗುಡಿಯನ್ನು ಕಟ್ಟಿರುವುದನ್ನು ಕಾಣಬಹುದು.

## ಅನುಬಂಧ – ೩

## ಸಾಂಸ್ಕೃತಿಕ ಪದಕೋಶ

| ಕ್ರ.ಸಂ. | ಶಾಸನದ ಪದ | ಅರ್ಥ |
|---|---|---|
| ೧ | ನೆತ್ರಕೊಡಿಗೆ, ನೆತ್ತರಕೊಡಿಗೆ, ರಕ್ತಕೊಡಿಗೆ, | ಇದು ಯುದ್ಧದಲ್ಲಿ ಗೆದ್ದು ಬಂದವರಿಗೆ ನೀಡಿರುವ ಒಂದು ಗೌರವ ಸಮರ್ಪಣೆಯ ಕೊಡುಗೆ(ಬಹುಮಾನ)ಯಾಗಿದೆ. |
| ೨ | ಸೂರ್ಯ ಚಂದ್ರಾದ್ರಿಗಳು ಯಿಹ ಪರ್ಯಂತ, ಚಂದ್ರಾರ್ಕಸ್ತಾಹಿಯಗಿ, ಚಂದ್ರಸೂರ್ಯರು ಉಳ್ಳಂನ, ಸೂರ್ಯಚೆಂದ್ರಾಚಿಲುಗಲ ಆತ್ತ ಕಾಲಂ(ತೆ) | ಇದು ಸಂಸ್ಕೃತದ 'ಆಚಂದ್ರಾರ್ಕಸ್ಥಾಯಿಯಾಗಿ' ಎಂಬ ಪದದ ಕನ್ನಡಾನುವಾದ. ಸೂರ್ಯ ಚಂದ್ರರ/ ಬೆಳಕಿರುವವರೆಗೂ ಇರುವವರೆಗೂ ಕೊಟ್ಟಿರುವ ದಾನ ಇರಲಿ ಎಂಬುದೇ ಇದರ ಅರ್ಥ. |
| ೩ | ವೂಡಿದ ಕಲ್ಲು, ನೆಟ್ಟಕಲ್ಲು | ಒಂದು ಜಮೀನಿನ ಅಥವಾ ದಾನಧರ್ಮವಾಗಿ ಕೊಟ್ಟ ಗ್ರಾಮದ ಎಲ್ಲೆಯನ್ನು ಗುರ್ತಿಸಲು ನಿಲ್ಲಿಸಿರುವ ಕಲ್ಲುಗಳು. |
| ೪ | ಅಮೃತಪಡಿಗೆ | ದೇವಾಲಯಗಳಲ್ಲಿ ಪೂಜೆ ಪುನಸ್ಕಾರ, ನೈವೇದ್ಯಗಳಿಗೆ ನೀಡಿರುವ ದಾನ. |
| ೫ | ಅಂಗರಂಗಭೋಗ | ದೇವರಿಗೆ ಅಭಿಷೇಕ ಮತ್ತು ನಾಟ್ಯ ಸೇವೆ. |
| ೬ | ಕೊಡಗೆ(ಗಿ)ಮಾನ್ಯ | ತೆರಿಗೆ ರಹಿತವಾದ ಭೂಮಿ |
| ೭ | ಕಪಿಲೆ, ಕಊಲೆ, ಕವಿಲೆ, ಆಕುಳ | ಹಸು |
| ೮ | ದಾನಮಾನ್ಯ | ದಾನವಾಗಿ ನೀಡಿದ ಕಂದಾಯವಿಲ್ಲದ ಭೂಮಿ. |
| ೯ | ಯಿನಾಮುಗಳು | ಉಡುಗೊರೆಗಳು |
| ೧೦ | ಸಂನುದು | ಸನ್ನದ್ದು, ಆಜ್ಞಾಪತ್ರ. |
| ೧೧ | ಕವಿಲೆಯುಮಜಿಸಿದವರು | ಹಸುವನ್ನು ಕೊಂದವರು |
| ೧೨ | ದಸವಂದ, ಪತ್ತೊಂದಿ | ಹತ್ತನೇ ಒಂದು(ತೆರಿಗೆಯ ಭಾಗ) |
| ೧೩ | ಸುಂಕನಾಡಿಗೆ | ಸುಂಕ ವಸೂಲಿ ಮಾಡುವ ನಾಡು/ಪ್ರದೇಶ. |
| ೧೪ | ಸರ್ವಪರಿಬೇ(ಬಾ)ದ ಪರಿಹಾರ | ಉಂಬಳಿ ಮೇಲಿನ ಎಲ್ಲ ತೆರಿಗೆಗಳು ರದ್ದುಗೊಳಿಸುವ ಕ್ರಮ. |
| ೧೫ | ದೀಪಮಾಲೆಯ ಕಂಭ | ದೇವಾಲಯದ ದ್ವಾರಬಾಗಿಲ ಮುಂದೆ ದೀಪವನ್ನಿಡಲು ನಿಲ್ಲಿಸುವ ಕಂಭ |
| ೧೬ | ಕಲ್ನಡುಗೊಟ್ಟಂ, ಕಲ್ನಾಟು | ಕಲ್ಲನ್ನು ನೆಟ್ಟು ಕೊಟ್ಟಂತಹ ದಾನ. |
| ೧೭ | ಖಂಡುಗ | ಅಳತೆ ಮಾಪನ. |
| ೧೮ | ದೊಣೆ | ಕೊಳ |
| ೧೯ | ಕಟನಿ ಕಣ್ಡುಗ | ಭತ್ತದ ಗದ್ದೆಯ ಭಾಗ |
| ೨೦ | ದೇವಭೋಗಂ | ದೇವರ ಸೇವೆ |
| ೨೧ | ಕೀಳೇರಿ | ಕೆರೆಯ ಕೆಳಗಿನ ಭಾಗ |
| ೨೨ | ಬೀರಲೋಕ | ವೀರಲೋಕ |
| ೨೩ | ಭಾಷೆಗೆ ತಪ್ಪುವ ರಾಯರ ಗಂಡ | ಕೊಟ್ಟ ಮಾತಿಗೆ ತಪ್ಪುವ ರಾಜರಿಗೆ ಯಜಮಾನ(ಬಿರುದು) |
| ೨೪ | ಗದ್ದೆ–ಬೆದ್ದ, ತೋಟ–ತುಡಿಕೆ, ಅಯಲು–ಗಯಲು | ಜೋಡಿ ಪದಗಳು |

| | | |
|---|---|---|
| ೨೫ | ಪುತ್ರಪೌತ್ರ | ಮಕ್ಕಳು ಮೊಮ್ಮಕ್ಕಳು/ಗಂಡುಹೆಣ್ಣುಮಕ್ಕಳಿಗೆ |
| ೨೬ | ಬಾಳಗಟ್ಟು, ಬಾಳ್ಗರ್ಚ್ಚು, ವಾಳ್ಗಟ್ಟು, ಬಳ್ಕಟ್ಟು. | ಕತ್ತಿಯನ್ನು ತೊಳೆ. |
| ೨೭ | ಬತ್ಯಕೊಡಗೆ | ಬತ್ತದ ಕೊಡುಗೆ. |
| ೨೮ | ಕಟುಕೊ(ಗೊ)ಡಿಗಿ | ಕೆರೆಯ ನಿರ್ಮಾಣಕ್ಕಾಗಿ ಕೊಟ್ಟ ದತ್ತಿ. |
| ೨೯ | ಮಾನಸ್ತಂಭ | ಜೈನ ಧರ್ಮದ ಪ್ರಕಾರ ಸಲ್ಲೇಖನ ವ್ರತ ಆಚರಿಸಿ ಮರಣ ಹೊಂದಿದವರಿಗೆ ಜ್ಞಾಪಕಾರ್ಥವಾಗಿ ನಿಲ್ಲಿಸುವ ಕಂಭ. |
| ೩೦ | ಅರವಕ್ಷರ | ಅರ್ಧಾಕ್ಷರ/ತಮಿಳು ಅಕ್ಷರ. |
| ೩೧ | ಕಟಿನಿ ಕಲ್ನಾಡು | ದಾನ ಕೊಡುವ ಭತ್ತದ ಗದ್ದೆಯಲ್ಲಿಯೇ ಕಲ್ಲನ್ನು ನೆಟ್ಟು ದಾನ ನೀಡುವಾಗ ಬಳಸುವ ಪರಿಭಾಷೆ. |
| ೩೨ | ತಿರುನಾಳು ಮಹೋತ್ಸವ | ಜಾತ್ರೆ ರಥೋತ್ಸವ |
| ೩೩ | ಸಸಿರಾಕವಿಲೆ | ಸಾವಿರ ಹಸುಗಳು |
| ೩೪ | ಚತುಶ್ಶೀ(ಸ್ಸೀ)ಮೆ | ನಾಲ್ಕು ದಿಕ್ಕಿನ ಗ್ರಾಮ/ಎಲ್ಲೆ |
| ೩೫ | ಪಞ್ಚಮಹಾಪಾತಕ | ಬ್ರಹ್ಮಹತ್ಯೆ, ಮಧ್ಯಪಾನ, ಕಳ್ಳತನ, ಗುರುಪತ್ನೀಗಮನ, ಶಿಶುಹತ್ಯೆ. |
| ೩೬ | ಭಟಮಾನ್ಯ | ವಿದ್ವಾಂಸನಿಗೆ ಕೊಟ್ಟ ಉಂಬಳಿ |
| ೩೭ | ಬಿತ್ತುಕಟ್ಟು | ಬೀಜಕ್ಕೆ ಯೋಗ್ಯವಾದ ಭೂಮಿ |

